ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ

ಸಂಖ್ಯೆ ೫೦

# ಶ್ರೀ ಬ್ರಹ್ಮವೈವರ್ತ ಮಹಾಪುರಾಣಂ

## ಶ್ರೀಕೃಷ್ಣ ಜನ್ಮಖಂಡಂ, ಉತ್ತರಾರ್ಧಂ

ಕನ್ನಡ ಅನುವಾದ ಸಹಿತ

ಸಂಚಿಕೆ ೧೦ (ಅ)



ಅನುವಾದಕ:

ಸಾಹಿತ್ಯ ಮತ್ತು ಕನ್ನಡ ವಿದ್ವಾನ್

ಬಿಟ್ಟಿದಪುರದ ಸುಬ್ರಾಯರ ಮಗ ಕೃಷ್ಣಪ್ಪ,

ಸಂಸ್ಕೃತ ಪಂಡಿತ, ಗಾ|| ಮರಿಮಲ್ಲಪ್ಪ ಪ್ರೌಢಶಾಲಾ, ಮೈಸೂರು.

ಶಾರದಾ ಪ್ರೆಸ್, ಮೈಸೂರು

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ

ಸಂಖ್ಯೆ ೫೦

# ಶ್ರೀ ಬ್ರಹ್ಮವೈವರ್ತ ಮಹಾಪುರಾಣಂ

## ಶ್ರೀಕೃಷ್ಣ ಜನ್ಮಖಂಡಂ, ಉತ್ತರಾರ್ಧಂ

ಕನ್ನಡ ಅನುವಾದ ಸಹಿತ

ಸಂಚಿಕೆ ೧೦ (ಅ)



ಅನುವಾದಕ :

ಸಾಹಿತ್ಯ ಮತ್ತು ಕನ್ನಡ ವಿದ್ವಾನ್

ಬಿಟ್ಟಿದಪುರದ ಸುಬ್ರಾಯರ ಮಗ ಕೃಷ್ಣಪ್ಪ,

ಸಂಸ್ಕೃತ ಪಂಡಿತ, ಗೌ॥ ಮರಿಮಲ್ಲಪ್ಪ ಪ್ರೌಢಶಾಲಾ, ಮೈಸೂರು.

ಶ್ರೀ ಶಾರದಾ ಪ್ರೆಸ್, ಮೈಸೂರು.

೧೯೬೩

# ಮುನ್ನುಡಿ.

ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡ ಉತ್ತರಾರ್ಧದ ಕನ್ನಡಾನುವಾದದ ಕೊನೆಯ ಸಂಪುಟವು ಈಗತಾನೇ ವಾಚಕರ ಕೈಸೇರುತ್ತಿದೆ. "ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಎಂಬ ಸಂಸ್ಕೃತದ ಲೋಕೋಕ್ತಿಯಂತೆ, ವ್ಯಾಸ ಮಹರ್ಷಿಗಳು ವೇದಗಳ ಸಾರವನ್ನು ಸುಲಭ ಶೈಲಿಯಲ್ಲಿ ಜನಸಾಮಾನ್ಯಕ್ಕೆ ತಿಳಿಸಲು ಪುರಾಣಗಳನ್ನು ರಚಿಸಿದ್ದಾರೆ. ಈ ಪುರಾಣಗಳು ಜನತೆಯ ಬುದ್ಧಿಮಟ್ಟಕ್ಕೆ ಅನುಗುಣವಾಗಿ ಭಿನ್ನಭಿನ್ನವಾಗಿವೆ. ಪ್ರತಿಪಾದನೆಯ ಕ್ರಮದಲ್ಲಿ ಇವು ಎಷ್ಟೇ ಭಿನ್ನವಾಗಿದ್ದರೂ ಇವುಗಳೆಲ್ಲದರ ಗುರಿಯೊಂದೇ! ಸ್ವಕಪೋಲ ಕಲ್ಪಿತವಾದ ಅನೇಕ ಕಥೆಗಳು ಇಲ್ಲಿ ಬಂದರೂ ಆಳವಾಗಿ ಚಿಂತನೆ ಮಾಡುವವರಿಗೆ ಅವುಗಳ ತತ್ವವು ತಿಳಿಯದಿರದು.

ಈ ಸಂಪುಟದಲ್ಲಿ ಶ್ರೀ ಕೃಷ್ಣನು ನಂದಗೋಪನಿಗೆ ಆಧ್ಯಾತ್ಮಿಕ ಜ್ಞಾನವನ್ನು ಉಪದೇಶಿಸುವ ನೆಪದಲ್ಲಿ ಚಾತುರ್ವರ್ಣ್ಯದ ಕರ್ತವ್ಯಾಕರ್ತವ್ಯಗಳನ್ನೂ ಭಕ್ಷ್ಯಾಭಕ್ಷ್ಯಗಳನ್ನೂ ನಿರೂಪಿಸಿ ಲೋಕೋದ್ಧಾರಕ್ಕೆ ಮಾರ್ಗದರ್ಶನ ಮಾಡಿದ್ದಾನೆ. ಶ್ರೀಕೃಷ್ಣನ ಚರಿತ್ರೆಯಲ್ಲಿ ಬಾಲಲೀಲೆಗೆ ಹೆಚ್ಚು ಪ್ರಾಶಸ್ತ್ಯವಿದ್ದರೂ, ಅವನು ಸಾಂದೀಪನಿ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿ ಗುರುದಕ್ಷಿಣೆ ಸಲ್ಲಿಸಿದುದು, ಅಷ್ಟಮಹಿಷಿಯರಲ್ಲಿ ಮೊದಲನೆಯವಳಾದ ರುಕ್ಮಿಣಿಯನ್ನು ವಿವಾಹವಾದದ್ದು ಬೋಧಪ್ರದವಾಗಿದೆ. ಇದೇ ರೀತಿ ಮುಂದಿನ ಕಥೆಗಳೂ ತತ್ವಬೋಧಕವಾಗಿವೆ. ಕೊನೆಯಲ್ಲಿ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಬರುವ ಎಲ್ಲ ಕಥೆಗಳೂ ನೀತಿಗಳೂ ಸಂಕ್ಷೇಪವಾಗಿ ನಿರೂಪಿತವಾಗಿವೆ.

ಸಂಸ್ಕೃತ ಭಾಷೆಯಲ್ಲಿರುವ ಈ ಮಹಾಪುರಾಣವನ್ನು ಕರ್ಣಾಟಕ ಭಾಷೆಗೆ ಅನುವಾದ ಮಾಡಿಸಿ ಪ್ರಚಾರಗೊಳಿಸಿದ ಪರಮೋದಾರಿಗಳೂ ವಿದ್ವದಭಿಮಾನಿಗಳೂ ಕರ್ಣಾಟಕ ಸಿಂಹಾಸನಾಧೀಶ್ವರರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರು ಬಂಧುಮಿತ್ರಕಳತ್ರಾದಿಗಳೊಡನೆ ಚಿರಕಾಲ ಸುಖವಾಗಿ ಬಾಳಲೆಂದು ಶ್ರೀಕೃಷ್ಣ ಪರಮಾತ್ಮನನ್ನು ಪ್ರಾರ್ಥಿಸುವ,

**ಶುಭಕೃತ್ ಸಂವತ್ಸರದ ಭಾದ್ರಪದ ಶುಕ್ಲ ದಶಮೀ ಭಾನುವಾರ**

ಅನುವಾದಕ :
**ಬಿ. ಎಸ್. ಕೃಷ್ಣಪ್ಪ,**

# ವಿಷಯಾನುಕ್ರಮಣಿಕೆ

|| ಓಂ ||

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

### || ತ್ರ್ಯಶೀತಿತಮೋಽಧ್ಯಾಯಃ ||

|| ನಂದ ಉವಾಚ ||

ವೇದಾನಾಂ ಕಾರಣಂ ತ್ವಂ ಚ ಬ್ರಹ್ಮಾದೀನಾಂ ಚ ಪುತ್ರಕ ।
ಸರ್ವಂ ಕಥಯ ಭದ್ರಂ ತೇ ಕಂ ಪೃಚ್ಛಾಮಿ ತ್ವಯಾ ವಿನಾ || ೧ ||

ವಿಪ್ರಾಣಾಂ ಯೋ ಹಿ ಧರ್ಮಶ್ಚ ಕ್ಷತ್ರವಿಟ್‌ಶೂದ್ರಕರ್ಮಣಾಂ ।
ಸಂನ್ಯಾಸಿನಾಂ ಚ ಯೋ ಧರ್ಮೋ ಯತೀನಾಂ ಬ್ರಹ್ಮಚಾರಿಣಾಂ || ೨ ||

ವಿಪ್ರಾಣಾಂ ವಿಧವಾಸ್ತ್ರೀಣಾಂ ವೈಷ್ಣವಾನಾಂ ಸತಾಮಪಿ ।
ಪತಿವ್ರತಾನಾಂ ಸ್ತ್ರೀಣಾಂ ಚ ತತ್ಸರ್ವಂ ವಕ್ತುಮರ್ಹಸಿ || ೩ ||

---

### ಎಂಭತ್ತಮೂರನೆಯ ಅಧ್ಯಾಯ

೧. ನಂದಗೋಪ :— ಪ್ರಿಯಪುತ್ರನಾದ ಎಲೈ ಕೃಷ್ಣನೇ, ನೀನು ವೇದಗಳಿಗೂ ಬ್ರಹ್ಮಾದಿ ದೇವತೆಗಳಿಗೂ ಕಾರಣನಾಗಿರುವೆ. ವೇದೋಕ್ತವಾದ ಸಕಲ ಧರ್ಮಗಳನ್ನೂ ನನಗೆ ತಿಳಿಸು. ನಿನ್ನನ್ನು ಬಿಟ್ಟು ನಾನು ಮತ್ತಾರನ್ನು ಕೇಳಲಿ?

೨. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರರಿಗೆ ವೇದವಿಹಿತವಾದ ಧರ್ಮವಾವುದು? ಸಂನ್ಯಾಸಿಗಳಿಗೂ ಯತಿಗಳಿಗೂ ಬ್ರಹ್ಮಚಾರಿಗಳಿಗೂ ವಿಹಿತವಾದ ಧರ್ಮವಾವುದು?

೩. ಬ್ರಾಹ್ಮಣ ವಿಧವೆಯರ ಧರ್ಮವಾವುದು? ಸಂತರ ಮತ್ತು ವಿಷ್ಣುಭಕ್ತರ ಧರ್ಮವನ್ನೂ ಪತಿವ್ರತಾಸ್ತ್ರೀಯರ ಧರ್ಮವನ್ನೂ ನನಗೆ ಶಾಸ್ತ್ರೋಕ್ತವಾಗಿ ವಿವರಿಸಿ ಹೇಳು.

ಗೃಹಿಣಾಂ ಗೃಹಿಣೀನಾಂ ಚ ಶಿಷ್ಯಾಣಾಂ ಚ ವಿಶೇಷತಃ ।
ಪುತ್ರಾಣಾಂ ಚಾಪಿ ಕನ್ಯಾನಾಂ ಪಿತರಂ ಮಾತರಂ ಪ್ರತಿ ॥ ೪ ॥

ಸ್ತ್ರೀಜಾತಿಶ್ಚ ಕತಿವಿಧಾ ಭಕ್ತಃ ಕತಿವಿಧಃ ಪ್ರಭೋ ।
ಬ್ರಹ್ಮಾಂಡಂ ಚ ಕತಿವಿಧಂ ವದನಂ ಚ ಕಿಮಾತ್ಮಕಂ ॥ ೫ ॥

ಕಿಂ ನಿತ್ಯಂ ಕೃತ್ರಿಮಂ ಕಿಂ ಚ ಬ್ರೂಹಿ ಸರ್ವಂ ಕ್ರಮೇಣ ಚ ।

॥ ಶ್ರೀ ಭಗವಾನುವಾಚ ॥

ಸಂಧ್ಯಾಪೂತಃ ಸದಾ ವಿಪ್ರಃ ಕುರುತೇ ಮಮ ಸೇವನಂ ॥ ೬ ॥

ನಿತ್ಯಂ ಭುಂಕ್ತೇ ಮತ್ಪ್ರಸಾದಮನಿವೇದ್ಯ ಕದಾಚನ ।
ಅನ್ನಂ ವಿಷ್ಠಾ ಜಲಂ ಮೂತ್ರಂ ಯದ್ವಿಷ್ಣೋರನಿವೇದಿತಂ ॥ ೭ ॥

---

೪. ಗೃಹಸ್ಥರು ಗೃಹಿಣಿಯರು ವಿಶೇಷತಃ ಶಿಷ್ಯರು ಆಚರಿಸಬೇಕಾದ ಧರ್ಮವಾವುದು? ಗಂಡು ಮತ್ತು ಹೆಣ್ಣುಮಕ್ಕಳು ತಮ್ಮ ತಂದೆತಾಯಿಗಳ ವಿಷಯದಲ್ಲಿ ಆಚರಿಸಬೇಕಾದ ಧರ್ಮವಾವುದು?

೫. ಎಲೈ ಪ್ರಭುವೇ, ಸ್ತ್ರೀ ಜಾತಿಯು ಎಷ್ಟು ವಿಧವಾಗಿರುವುದು? ಭಕ್ತರು ಎಷ್ಟು ತರಹ ಇದ್ದಾರೆ? ಬ್ರಹ್ಮಾಂಡವು ಎಷ್ಟು ವಿಧವಾಗಿರುವುದು? ಆದರ ಮುಖವು ಯಾವ ರೀತಿಯಾಗಿರುವುದು?

೬. ಈ ಪ್ರಪಂಚದಲ್ಲಿ ನಿತ್ಯವಾವುದು? ಕೃತ್ರಿಮವಾವುದು? ಈ ವಿಷಯಗಳೆಲ್ಲವನ್ನೂ ಕ್ರಮವಾಗಿ ತಿಳಿಸು. ಶ್ರೀ ಭಗವಂತ:— ಎಲೈ ನಂದನೇ, ಬ್ರಾಹ್ಮಣನಾದವನು ಪ್ರತಿದಿನವೂ ಸಂಧ್ಯಾವಂದನೆಮಾಡಿ ಪರಿಪೂತನಾಗಿ ನನ್ನ ಸೇವೆಯನ್ನು ಮಾಡಬೇಕು.

೭. ಪ್ರತಿದಿನವೂ ನನಗೆ ನಿವೇದನಮಾಡಿದ ಪ್ರಸಾದವನ್ನು ಭುಜಿಸಿಬೇಕು. ನನಗೆ ನಿವೇದಿಸದಿರುವುದನ್ನು ಯಾವಾಗಲೂ ತಿನ್ನಬಾರದು. ವಿಷ್ಣುವಿಗೆ ನಿವೇದಿಸದಿರುವ ಅನ್ನವು ಮಲಕ್ಕೆ ಸಮಾನವೂ, ಜಲವು ಮೂತ್ರಕ್ಕೆ ಸಮಾನವೂ ಎನಿಸುವುದು.

ವಿಷ್ಣುಪ್ರಸಾದಭೋಜೀ ಚ ಜೀವನ್ಮುಕ್ತಶ್ಚ ಬ್ರಾಹ್ಮಣಃ ।
ನಿತ್ಯಂ ತಪಸ್ಯಾನಿರತಃ ಶುಚಿಃ ಶಾಂತಶ್ಚ ಶಾಸ್ತ್ರವಿತ್ ॥ ೮ ॥

ವ್ರತತೀರ್ಥಾಶ್ರಿತೋ ಧರ್ಮೀ ನಾನಾಧ್ಯಾಪನಸಂಯುತಃ ।
ವಿಷ್ಣುಮಂತ್ರಂ ಗೃಹೀತ್ವಾ ಚ ಕೃತ್ವಾ ಚ ಗುರುಸೇವನಂ ॥ ೯ ॥

ಗೃಹೀತ್ವಾ ತದನುಜ್ಞಾಂ ಚ ಪಶ್ಚಾದ್ಭವತಿ ಸಂಗೃಹೀ ।
ದಕ್ಷಿಣಾಂ ನಿತ್ಯಪೂಜಾನಾಂ ಗುರವೇ ಚ ನಿವೇದಯೇತ್ ॥ ೧೦ ॥

ಗುರೂಣಾಂ ಪೋಷಣಂ ನಿತ್ಯಂ ಕರ್ತವ್ಯಂ ನಾತ್ರ ಸಂಶಯಃ ।
ಸರ್ವೇಷಾಮಪಿ ವಂದ್ಯಾನಾಂ ಪಿತಾ ಚೈವ ಮಹಾನ್ ಗುರುಃ ॥ ೧೧ ॥

ಪಿತುಃ ಶತಗುಣೈರ್ಮಾತಾ ಮಾತುಃ ಶತಗುಣೈಃ ಸುರಃ ।
ಮಂತ್ರದಸ್ತಂತ್ರದಶ್ಚೈವ ಸುರಾಣಾಂ ಚ ಚತುರ್ಗುಣಃ ॥ ೧೨ ॥

---

೮. ಯಾವಾಗಲೂ ವಿಷ್ಣುವಿನ ಪ್ರಸಾದವನ್ನು ಭುಜಿಸುವ ಬ್ರಾಹ್ಮಣನು ಜೀವನ್ಮುಕ್ತನಾಗುವನು. ಶಾಸ್ತ್ರಜ್ಞನಾದ ಬ್ರಾಹ್ಮಣನು ಶುಚಿಯಾಗಿದ್ದುಕೊಂಡು ಶಾಂತನಾಗಿಯೂ ಸರ್ವದಾ ತಪೋನಿರತನಾಗಿಯೂ ಇರುವನು.

೯-೧೦. ಧರ್ಮಪರಾಯಣನು ತೀರ್ಥಯಾತ್ರೆ ವ್ರತ ಮುಂತಾದವುಗಳನು ಮಾಡುತ್ತ ವೇದಾಧ್ಯಯನ ಸಂಪನ್ನನಾಗಿ, ವಿಷ್ಣುಮಂತ್ರೋಪದೇಶವನ್ನು ಪಡೆದು ಗುರುಗಳು ಮೆಚ್ಚುವಂತೆ ಸೇವೆಮಾಡಿ ಅನಂತರ ಗುರುವಿನ ಅನುಜ್ಞೆಯನ್ನು ಪಡೆದು ಗೃಹಸ್ಥಧರ್ಮವನ್ನಾಶ್ರಯಿಸುವನು. ಅವನು ನಿತ್ಯವೂ ಮಾಡುವ ಪೂಜೆಯ ದಕ್ಷಣೆಯನ್ನು ಗುರುವಿಗೆ ಅರ್ಪಿಸಬೇಕು.

೧೧. ಗೃಹಸ್ಥರು ಸರ್ವದಾ ತಮ್ಮ ತಾಯಿ ತಂದೆ ಮತ್ತು ಗುರುಗಳನ್ನು ಪೋಷಿಸುವುದು ಕರ್ತವ್ಯವಾಗಿರುತ್ತದೆ. ಪೂಜ್ಯರಲ್ಲೆಲ್ಲ ತಂದೆಯೇ ಪರಮ ಪೂಜ್ಯನೂ ಮಹಾಗುರುವೂ ಆಗಿರುವನು.

೧೨. ತಂದೆಗಿಂತ ತಾಯಿಯು ನೂರರಷ್ಟು ಪೂಜ್ಯಳು. ತಾಯಿಗಿಂತಲೂ ದೇವರು ನೂರರಷ್ಟು ಪೂಜಾರ್ಹರು. ಮಂತ್ರತಂತ್ರಗಳನ್ನು ಉಪದೇಶಮಾಡಿದ ಗುರುವು ದೇವತೆಗಳಿಗಿಂತ ನಾಲ್ಕರಷ್ಟು ಪೂಜ್ಯನು.

ನಾರಾಯಣಶ್ಚ ಭಗವಾನ್ಗುರುಃ ಪ್ರತ್ಯಕ್ಷ ಈಶ್ವರಃ ।
ಉದ್ದೇಶೇ ದೀಯತೇ ತಸ್ಮೈ ಸುರಾಯೇತಿ ಶ್ರುತೌ ಶ್ರುತಂ ॥ ೧೩ ॥

ಪ್ರತ್ಯಕ್ಷಭೋಕ್ತಾ ಸ ಗುರುಃ ಸ್ವಯಂ ದೇಹೀ ಜನಾರ್ದನಃ ।
ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರೇವ ಸ್ವಯಂ ಶಿವಃ ॥ ೧೪ ॥

ಗುರೌ ಚ ಸರ್ವದೇವಾಶ್ಚ ತಿಷ್ಠಂತಿ ಸತತಂ ಮುದಾ ।
ಗು ೌ ತುಷ್ಟೇ ಹರಿಸ್ತುಷ್ಟೋ ಯಸ್ಮಿಂಸ್ತುಷ್ಟೇ ಚ ದೇವತಾಃ ॥ ೧೫ ॥

ಗುರುಃ ಪುತ್ರಸಮಂ ಸ್ನೇಹಂ ಶಿಷ್ಯೇಷು ನ ಕರಿಷ್ಯತಿ ।
ಲಭತೇ ಬ್ರಹ್ಮಹತ್ಯಾಂ ಚ ಭುಂಕ್ತೇ ಕೃತ್ವಾ ಚ ನಾಶಿಷಂ ॥ ೧೬ ॥

ಸ್ವಧರ್ಮನಿರತೋ ವಿಪ್ರೋ ಬ್ರಾಹ್ಮಣಶ್ಚ ಸದಾ ಶುಚಿಃ ।
ವಿಷ್ಣುಸೇವೀ ಸದಾ ವಿಪ್ರಸ್ತದನ್ಯೋಽಪ್ಯಶುಚಿಃ ಸದಾ ॥ ೧೭ ॥

---

೧೩. ಗುರುವೇ ಸಾಕ್ಷಾನ್ನಾರಾಯಣನು. ಪ್ರತ್ಯಕ್ಷನಾದ ಈಶ್ವರನು. ಶ್ರದ್ಧಾಪೂರ್ವಕವಾಗಿ ಗುರುವಿಗೆ ದಾನ ಮಾಡಿದುದು ದೇವತೆಗಳಿಗೆ ದಾನ ಮಾಡಿದಂತಾಗುವುದೆಂದು ಶ್ರುತ್ಯುಕ್ತವಾಗಿದೆ.

೧೪ ಪ್ರತ್ಯಕ್ಷವಾಗಿ ಫಲೋಪಭೋಗ ಮಾಡುವ ಗುರುವು ದೇಹಧಾರಿಯಾದ ಸ್ವಯಂ ಜನಾರ್ದನನಾಗಿರುವನು. ಗುರುವೇ ಬ್ರಹ್ಮನು. ಗುರುವೇ ವಿಷ್ಣುವು. ಗುರುವೇ ಸಾಕ್ಷಾತ್ ಸದಾಶಿವನು.

೧೫. ಗುರುವು ಸಂತುಷ್ಟನಾದರೆ ಸಕಲ ದೇವತೆಗಳೂ ಸಂತುಷ್ಟರಾಗುವರು. ಅದು ಹೇಗೆಂದರೆ—ಗುರುವು ಸಂತುಷ್ಟನಾದರೆ ಶ್ರೀ ಹರಿಯು ಸಂತುಷ್ಟನಾಗುವನು. ಶ್ರೀಹರಿಯು ತೃಪ್ತನಾದರೆ ಸಕಲ ದೇವತೆಗಳೂ ತೃಪ್ತರಾಗುವರು.

೧೬. ಗುರುವೆನಿಸಿಕೊಂಡವನು ಶಿಷ್ಯನಲ್ಲಿ ಪುತ್ರ ಸದೃಶವಾದ ಸ್ನೇಹವನ್ನಿಡದಿದ್ದರೆ ಮತ್ತು ಶಿಷ್ಯನಿಗೆ ಮನಃಪೂರ್ವಕವಾಗಿ ಆಶೀರ್ವಾದ ಮಾಡದಿದ್ದರೆ ಬ್ರಹ್ಮಹತ್ಯಾದೋಷಕ್ಕೆ ಗುರಿಯಾಗುವುದರಲ್ಲಿ ಸಂಶಯವಿಲ್ಲ.

೧೭. ಸ್ವಧರ್ಮಾಚರಣೆಯಲ್ಲಿ ನಿರತನಾದ ಬ್ರಾಹ್ಮಣನು ಸರ್ವದಾ ಶುಚಿ ಎನಿಸಿಕೊಳ್ಳುವನು. ವಿಷ್ಣುಸೇವಾನಿರತನಾದ ಬ್ರಾಹ್ಮಣನು ಶುಚಿಯಾಗಿಯೂ ವಿಷ್ಣುಸೇವೆ ಮಾಡದವನು ಅಶುಚಿಯಾಗಿಯೂ ಇರುವನು.

ಬ್ರಾಹ್ಮಣೋ ವೃಷವಾಹಶ್ಚ ಶೂದ್ರಾಣಾಂ ಸೂಪಕಾರಕಃ ।
ಬ್ರಾಹ್ಮಣೋ ದೇವಲಶ್ಚೈವ ಸಂಧ್ಯಾಹೀನಶ್ಚ ದುರ್ಬಲಃ ॥ ೧೮ ॥

ಬ್ರಾಹ್ಮಣಶ್ಚ ದಿವಾ ಶಾಯೀ ಶೂದ್ರಶಾದ್ಧಾನ್ನಭೋಜನಃ ।
ಶೂದ್ರಾಣಾಂ ಶವದಾಹೀ ಚ ತೇ ಚ ಶೂದ್ರಸಮಾ ದ್ವಿಜಾಃ ॥ ೧೯ ॥

ಶಾಲಗ್ರಾಮಮುಹಾಮಂತ್ರಂ ಕೃತ್ವಾ ಪೂಜಾಂ ವಿಧಾನತಃ ।
ಭುಂಕ್ತೇ ನೈವೇದ್ಯಶೇಷಂ ಚ ತತ್ಪಾದೋದಕಮೇವ ಚ ॥ ೨೦ ॥

ಹರೇಃ ಪಾದೋದಕಂ ಪೀತ್ವಾ ತೀರ್ಥಸ್ನಾಯೀ ಭವೇನ್ನರಃ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಚ ಗಚ್ಛತಿ ॥ ೨೧ ॥

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಶಾಲಗ್ರಾಮಶಿಲಾತೋಯೈರ್ಯೋಽಭಿಷೇಕಂ ಸಮಾಚರೇತ್ ॥ ೨೨ ॥

---

೧೮. ಎತ್ತುಗಳಿಂದ ಜೀವಿಸುವ ಬ್ರಾಹ್ಮಣನೂ, ಶೂದ್ರರ ಮನೆಯಲ್ಲಿ ಅಡಿಗೆಮಾಡಿ ಜೀವಿಸುವ ಬ್ರಾಹ್ಮಣನೂ, ಗ್ರಾಮದೇವತೆಯನ್ನು ಪೂಜಿಸಿ ಜೀವಿಸುವ ಬ್ರಾಹ್ಮಣನೂ, ಸಂಧ್ಯಾವಂದನೆ ಮಾಡದಿರುವ ಬ್ರಾಹ್ಮಣನೂ ತೇಜೋಹೀನನಾಗುವನು.

೧೯. ಬ್ರಾಹ್ಮಣನಾಗಿ ಹಗಲಿನಲ್ಲಿ ನಿದ್ರೆಮಾಡುವವನೂ, ಶೂದ್ರರ ಶ್ರಾದ್ಧಾನ್ನವನ್ನು ತಿನ್ನುವವನೂ, ಶೂದ್ರರ ಶವವನ್ನು ದಾಹಮಾಡುವವನೂ ಬ್ರಾಹ್ಮಣನಾಗಿದ್ದರೂ ಶೂದ್ರಸಮನೆನಿಸಿಕೊಳ್ಳುವನು.

೨೦–೨೧. ಯಾವ ಬ್ರಾಹ್ಮಣನು ವಿಧ್ಯುಕ್ತವಾಗಿ ಸಾಲಿಗ್ರಾಮ ಶಿಲೆಯನ್ನು ಪೂಜಿಸಿ ಅದಕ್ಕೆ ನಿವೇದನಮಾಡಿದ ಶೇಷವನ್ನು ಭುಜಿಸುವನೋ ಮತ್ತು ಅದಕ್ಕೆ ಅಭಿಷೇಕಮಾಡಿದ ತೀರ್ಥವನ್ನು ಪಾನಮಾಡುವನೋ, ಹರಿಯ ತೀರ್ಥಪ್ರಸಾದಗಳನ್ನು ಸೇವಿಸುವ ಆ ಬ್ರಾಹ್ಮಣನು ಸಕಲ ಪಾಪಗಳಿಂದಲೂ ದೂರನಾಗಿ ವಿಷ್ಣುಲೋಕವನ್ನು ಸೇರುವನು.

೨೨. ಯಾವನು ಸಾಲಿಗ್ರಾಮಶಿಲೆಗೆ ಅಭಿಷೇಕಮಾಡಿದ ನೀರಿನಿಂದ ಸ್ನಾನಮಾಡುವನೋ ಅವನು ಸಕಲ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯಕ್ಕೂ, ಸಕಲ ಯಜ್ಞಗಳಲ್ಲಿ ದೀಕ್ಷೆಯನ್ನು ಕೈಕೊಂಡ ಪುಣ್ಯಕ್ಕೂ ಭಾಗಿಯಾಗುವನು.

ಗಂಗಾಜಲಾದ್ದಶಗುಣಂ ಶಾಲಗ್ರಾಮಜಲಂ ವ್ರಜ ।
ನಿತ್ಯಂ ಭುಂಕ್ತೇ ಚ ಯೋ ವಿಪ್ರೋ ಜೀವನ್ಮುಕ್ತಃ ಸುರೈಃ ಸಮಃ ॥ ೨೩ ॥

ವಿಪ್ರಾಣಾಂ ನಿತ್ಯಕೃತ್ಯಂ ಚ ವಿಷ್ಣೋರ್ನೈವೇದ್ಯಭೋಜನಂ ।
ಯತ್ನೇನ ಪೂಜನಂ ತಸ್ಯ ತತ್ಪಾದೋದಕಸೇವನಂ ॥ ೨೪ ॥

ನಿತ್ಯಂ ತ್ರಿಸಂಧ್ಯಂ ಕುರುತೇ ಭಕ್ತ್ಯಾ ಚ ಮಮ ಪೂಜನಂ ।
ಏಕಾದಶ್ಯಾಂ ನ ಭುಂಕ್ತೇ ಚ ಮಮ ವೈ ಜನ್ಮವಾಸರೇ ॥ ೨೫ ॥

ಶಿವರಾತ್ರೌ ಚ ಹೇ ತಾತ ಶ್ರೀರಾಮನವಮೀದಿನೇ ।
ನ ಚ ಭುಂಕ್ತೇ ವ್ರತೀ ಯೋ ಹಿ ಜೀವನ್ಮುಕ್ತೋ ಹಿ ಸ ದ್ವಿಜಃ ॥ ೨೬ ॥

ಪೃಥಿವ್ಯಾಂ ಯಾನಿ ತೀರ್ಥಾನಿ ತಸ್ಯ ಪಾದೇ ಚ ತಾನಿ ಚ ।
ವಿಪ್ರಪಾದೋದಕಂ ಪೀತ್ವಾ ತೀರ್ಥಸ್ನಾಯೀ ಭವೇನ್ನರಃ ॥ ೨೭ ॥

---

೨೩. ಎಲೈ ವ್ರಜೋತ್ತಮನೇ, ಸಾಲಿಗ್ರಾಮ ಶಿಲೆಯ ನೀರು ಗಂಗೆಯ ನೀರಿಗಿಂತ ಹತ್ತರಷ್ಟು ಉತ್ತಮವಾದುದು. ಸಾಲಿಗ್ರಾಮ ಶಿಲೋದಕವನ್ನು ನಿತ್ಯವೂ ಸೇವಿಸುವ ಮನುಷ್ಯನು ಜೀವನ್ಮುಕ್ತನಾಗಿ ದೇವತೆಗಳಿಗೆ ಸಮನೆನಿಸುವನು.

೨೪. ಬ್ರಾಹ್ಮಣನಾದವನು ತನ್ನ ನಿತ್ಯ ಕರ್ಮವನ್ನು ಮಾಡಿ ವಿಷ್ಣುವಿಗೆ ನಿವೇದಿಸಿದ ಅನ್ನವನ್ನು ತಿಂದುಕೊಂಡಿರಬೇಕು. ಪ್ರಯತ್ನ ಪೂರ್ವಕವಾಗಿ ವಿಷ್ಣುವನ್ನು ತಪ್ಪದೆ ಪೂಜೆಮಾಡಿ ಅವನ ಪಾದೋದಕವನ್ನು ಸೇವಿಸಬೇಕು.

೨೫. ವಿಷ್ಣುಭಕ್ತನಾದವನು ಪ್ರತಿದಿನವೂ ಮೂರು ಸಂಧ್ಯಾಕಾಲದಲ್ಲಿಯೂ ನನ್ನ ಪೂಜೆಮಾಡುವನು. ಏಕಾದಶಿಯ ದಿವಸವೂ ಜನ್ಮಾಷ್ಟಮಿಯ ದಿವಸವೂ ವಿಷ್ಣುಭಕ್ತನು ಊಟಮಾಡುವುದಿಲ್ಲ.

೨೬. ಎಲೈ ತಾತನೇ, ಶಿವರಾತ್ರಿಯ ದಿವಸವೂ ಶ್ರೀರಾಮನವಮಿಯ ದಿವಸವೂ ಊಟಮಾಡದಿರುವ ವಿಷ್ಣುವ್ರತಪರನಾದ ಬ್ರಾಹ್ಮಣನು ಜೀವನ್ಮುಕ್ತನಾಗುವುದರಲ್ಲಿ ಸಂಶಯವಿಲ್ಲ.

೨೭. ಪ್ರಪಂಚದಲ್ಲಿರುವ ಪುಣ್ಯ ತೀರ್ಥಗಳೆಲ್ಲವೂ ವಿಷ್ಣು ಭಕ್ತನಾದ ಬ್ರಾಹ್ಮಣನ ಪಾದದಲ್ಲಿರುವುವು. ಅಂಥ ಬ್ರಾಹ್ಮಣನ ಪಾದೋದಕವನ್ನು ಕುಡಿಯುವ ಮನುಷ್ಯನು ತೀರ್ಥಸ್ನಾನ ಮಾಡಿದ ಫಲಕ್ಕೆ ಭಾಗಿಯಾಗುವನು.

ವಿಪ್ರಪಾದೋದಕಕ್ಲಿನ್ನಾ ಯಾವತ್ತಿಷ್ಠತಿ ಮೇದಿನೀ ।
ತಾವತ್ಪುಷ್ಕರಪತ್ರೇಷು ಪಿಬಂತಿ ಪಿತರೋ ಜಲಂ || ೨೮ ||

ವಿಷ್ಣುಪ್ರಸಾದಭೋಜೀ ಚ ಪವಿತ್ರಾಂ ಕುರುತೇ ಮಹೀಂ ।
ತೀರ್ಥಾನಿ ಚ ನರಾಂಶ್ಚೈವ ಜೀವನ್ಮುಕ್ತೋ ಹಿ ಸ ದ್ವಿಜಃ || ೨೯ ||

ಸರ್ವತೀರ್ಥೇಷು ಸ ಸ್ನಾತೋ ವ್ರತಾನಾಂ ಚ ಫಲಂ ಲಭೇತ್ ।
ಪದೇಪದೇಽಶ್ವಮೇಧಸ್ಯ ಲಭತೇ ನಿಶ್ಚಿತಂ ಫಲಂ || ೩೦ ||

ವಹ್ನಿವಾಯುಸಮಃ ಪೂತಸ್ತೇಜಸಾ ಭಾಸ್ಕರೋಪಮಃ ।
ಯಮದೂತಂ ಯಮಂ ಚೈವ ಸ ಚ ಸ್ವಪ್ನೇ ನ ಪಶ್ಯತಿ || ೩೧ ||

ವೈಕುಂಠೇ ಮೋದತೇ ಸೋಽಪಿ ಪಾರ್ಷದೋ ಹರಿಣಾ ಸಹ ।
ನ ಭವೇತ್ತಸ್ಯ ಪಾತೋ ಹಿ ವಿಪ್ರಸ್ಯ ಹರಿಸೇವಿನಃ || ೩೨ ||

---

೨೮. ಎಂದಿನವರೆಗೆ ಭೂಮಿಯು ವಿಪ್ರನ ಪಾದೋದಕದಿಂದ ನೆನೆಯುತ್ತಿರುವುದೋ ಅಂದಿನವರೆಗೆ ಪಿತೃದೇವತೆಗಳು ತಾವರೆ ಎಲೆಯ ದೊನ್ನೆಗಳಲ್ಲಿ ಜಲಪಾನ ಮಾಡುತ್ತಿರುವರು.

೨೯. ವಿಷ್ಣುವಿನ ಪ್ರಸಾದವನ್ನು ಭುಜಿಸುವ ಬ್ರಾಹ್ಮಣನು ಭೂಮಂಡಲವನ್ನು ಪವಿತ್ರಗೊಳಿಸುವನಲ್ಲದೆ ತೀರ್ಥಗಳನ್ನೂ ಮನುಜರನ್ನೂ ಶುದ್ಧಗೊಳಿಸಿ ತಾನು ಜೀವನ್ಮುಕ್ತನಾಗುವನು.

೩೦. ಅಂಥ ಬ್ರಾಹ್ಮಣನು ಸಕಲ ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನೂ ಸಕಲ ವ್ರತಾಚರಣೆಯ ಫಲವನ್ನೂ ಆಗಾಗ್ಗೆ ಅಶ್ವಮೇಧಯಾಗಮಾಡಿದ ಫಲವನ್ನೂ ನಿಶ್ಚಯವಾಗಿಯೂ ಪಡೆಯುವನು.

೩೧. ಅಗ್ನಿ ಮತ್ತು ವಾಯುವಿನಂತೆ ಪವಿತ್ರನೂ, ಸೂರ್ಯನಂತೆ ತೇಜಸ್ವಿಯೂ ಆದ ಆ ವಿಷ್ಣುಭಕ್ತನು ಯಮದೂತರನ್ನೂ ಯಮನನ್ನೂ ಸಹ ಕನಸಿನಲ್ಲಿಯೂ ನೋಡುವುದಿಲ್ಲ.

೩೨. ಅವನು ವೈಕುಂಠದಲ್ಲಿ ಶ್ರೀಹರಿಯ ಪಾರ್ಷದನಾಗಿ ಆನಂದದಿಂದಿರುವನು. ಶ್ರೀಹರಿಯ ಸೇವೆಮಾಡಿಕೊಂಡಿರುವ ವಿಪ್ರನಿಗೆ ಎಂದೆಂದಿಗೂ ವೈಕುಂಠದಿಂದ ಪತನವುಂಟಾಗುವುದಿಲ್ಲ.

ವಿಷ್ಣುಮಂತ್ರೋಪಾಸಕಶ್ಚ ಸ ಏವ ವೈಷ್ಣವೋ ದ್ವಿಜಃ ।
ಬ್ರಾಹ್ಮಣೋ ವೈಷ್ಣವಃ ಪ್ರಾಜ್ಞೋ ನ ಹಿ ತಸ್ಮಾತ್ಪರಃ ಪುಮಾನ್ ॥ ೩೩ ॥

ವೇದೋಕ್ತೋ ವಾ ಪುರಾಣೋಽಕ್ತಸ್ತಂತ್ರೋಕ್ತೋ ವಾ ಮನುಃ ಶುಚಿಃ।
ವಿಚಾರತೋ ಗೃಹೀತ್ವಾ ತಂ ಶೈವಃ ಶಾಕ್ತಶ್ಚ ವೈಷ್ಣವಃ ॥ ೩೪ ॥

ಗುರುವಕ್ತ್ರಾದ್ವಿಷ್ಣುಮಂತ್ರೋ ಯಸ್ಯ ಕರ್ಣೇ ವಿಶತ್ಯಯಂ ।
ತಂ ವೈಷ್ಣವಂ ಮಹಾಪೂತಂ ಪ್ರವದಂತಿ ಮನೀಷಿಣಃ ॥ ೩೫ ॥

ಮಂತ್ರಗ್ರಹಣಮಾತ್ರೇಣ ಜೀವನ್ಮುಕ್ತೋ ಭವೇನ್ನರಃ ।
ಭಿತ್ವಾ ಬ್ರಹ್ಮಾಂಡಮಖಿಲಂ ಯಾಸ್ಯತ್ಯೇವ ಹರೇಃ ಪದಂ ॥ ೩೬ ॥

ಪೂರ್ವಾನ್ಸಪ್ತ ಪರಾನ್ಸಪ್ತ ಸಪ್ತ ಮಾತಾಮಹಾದಿಕಾನ್ ।
ಸೋದರಾನುದ್ಧರೇದ್ಭಕ್ತಸ್ತತ್ಪ್ರಸೂಂ ತತ್ಪ್ರಸೂಂ ತಥಾ ॥ ೩೭ ॥

---

೩೩. ವಿಷ್ಣುಮಂತ್ರವನ್ನು ಉಪಾಸನೆಮಾಡುವ ದ್ವಿಜನೇ ನಿಜವಾದ ವಿಷ್ಣುಭಕ್ತನು. ಪ್ರಾಜ್ಞನಾದ ಬ್ರಾಹ್ಮಣನು ವಿಷ್ಣುಭಕ್ತನಾಗಿದ್ದರೆ ಅವನಿಗಿಂತ ಶ್ರೇಷ್ಠನಾದ ಮನುಜನು ಮತ್ತಾರೂ ಇಲ್ಲ.

೩೪. ವೇದೋಕ್ತವಾದ, ಪುರಾಣೋಕ್ತವಾದ ಅಥವಾ ತಂತ್ರೋಕ್ತವಾದ (ಮನುಃ) ಮಂತ್ರವು ಪರಿಶುದ್ಧವಾದುದು. ವಿಚಾರಪೂರ್ವಕವಾಗಿ ಆ ಮಂತ್ರೋಪದೇಶವನ್ನು ಸ್ವೀಕರಿಸುವವನು ಶೈವ, ಶಾಕ್ತ, ಅಥವಾ ವೈಷ್ಣವನೆನಿಸಿಕೊಳ್ಳುವನು.

೩೫. ಗುರುವಿನ ಮುಖದಿಂದ ಯಾವನ ಕಿವಿಗೆ ವಿಷ್ಣುಮಂತ್ರವು ಪ್ರವೇಶಮಾಡುವುದೋ ಅವನನ್ನು ಮಹಾಪವಿತ್ರನಾದ ವೈಷ್ಣವನೆಂದು ಜ್ಞಾನಿಗಳು ಕರೆಯುತ್ತಾರೆ.

೩೬. ವಿಷ್ಣುಮಂತ್ರವನ್ನು ಸ್ವೀಕರಿಸಿದ ಮಾತ್ರದಿಂದಲೇ ಮನುಜನು ಜೀವನ್ಮುಕ್ತನಾಗುವನು. ನಿಖಿಲ ಬ್ರಹ್ಮಾಂಡದ ಬಂಧನವನ್ನು ಭೇದಿಸಿಕೊಂಡು ಶ್ರೀಹರಿಯ ಸ್ಥಾನವಾದ ವೈಕುಂಠಕ್ಕೆ ಹೋಗುವನು.

೩೭. ವಿಷ್ಣುಭಕ್ತನಾದವನು ತನ್ನ ಹಿಂದಿನ ಏಳು ತಲೆಯವರನ್ನೂ ಮುಂದಿನ ಏಳು ತಲೆಯವರನ್ನೂ, ಮಾತಾಮಹಾದಿ ಸಪ್ತಪುರುಷರನ್ನೂ, ತನ್ನ ಸಹೋದರರನ್ನೂ, ತಾಯಿ, ತಾಯಿಯ ತಾಯಿ ಮುಂತಾದವರನ್ನೂ ಉದ್ಧರಿಸುವನು.

ಜಪೇನ್ನಾರಾಯಣಕ್ಷೇತ್ರೇ ಪುರಶ್ಚರಣಪೂರ್ವಕಂ ।
ಪುರುಷಾಣಾಂ ಸಹಸ್ರಂ ಚ ಲೀಲಯಾತ್ಮಾನಮುದ್ಧರೇತ್ || ೩೮ ||

ಮಂತ್ರಗ್ರಹಣಮಾತ್ರೇಣ ಫಲಮೇತದ್ವ್ರಜೇಶ್ವರ ।
ಪುರಶ್ಚರಣಸಂಪರ್ಕಾತ್ಪುರುಷಾಣಾಂ ಶತಂ ಶತಂ || ೩೯ ||

ಏಕಾಂತಿಕೋ ವೈಷ್ಣವಶ್ಚ ಪುಂಸಾಂ ಲಕ್ಷಂ ಸಮುದ್ಧರೇತ್ ।
ಕ್ರಿಯಾ ವಿಷ್ಣುಪದೇ ಯಸ್ಯ ಸಂಕಲ್ಪಾಶ್ಚ ಬಹಿಷ್ಕೃತಾಃ || ೪೦ ||

ದ್ವಿಜಾಃ ಸುರಾ ಮಮ ಪ್ರಾಣಾ ಭಕ್ತಃ ಪ್ರಾಣಾತ್ಪರಃ ಪ್ರಿಯಃ ।
ವಿಶ್ವೇಷು ಪ್ರಿಯಪಾತ್ರೇಷು ನ ಮೇ ಭಕ್ತಾತ್ಪರಃ ಪ್ರಿಯಃ || ೪೧ ||

ತೇಜೀಯಾಂಸಂ ಗುರುಂ ದೃಷ್ಟ್ವಾ ಸರ್ವತ್ರ ರಕ್ಷಿತುಂ ಕ್ಷಮಂ ।
ಕರೋತಿ ಮಂತ್ರಗ್ರಹಣಂ ತಸ್ಮಾದ್ಭೂಯಾದ್ವಿಚಕ್ಷಣಃ || ೪೨ ||

---

೩೮. ಪುಣ್ಯಕ್ಷೇತ್ರದಲ್ಲಿ ನಾರಾಯಣಮಂತ್ರವನ್ನು ಪುರಶ್ಚರಣ ಪೂರ್ವಕವಾಗಿ ಜಪಿಸುವವನು ತನ್ನನ್ನೂ ತನ್ನ ವಂಶದ ಸಾವಿರ ಪುರುಷರನ್ನೂ ಲೀಲಾಮಾತ್ರದಿಂದ ಉದ್ಧರಿಸುವನು.

೩೯. ಎಲೈ ವ್ರಜೇಶ್ವರನಾದ ನಂದನೇ, ಮಂತ್ರಗ್ರಹಣ ಮಾತ್ರದಿಂದಲೇ ಈ ಫಲವು ದೊರಕುವುದು. ಈ ಮಂತ್ರವನ್ನು ಪುರಶ್ಚರಣ ಮಾಡುವುದರಿಂದ ನೂರಾರು ಪುರುಷರನ್ನು ಉದ್ಧರಿಸಬಹುದು.

೪೦. ಯಾವನು ಸಂಕಲ್ಪಾದಿಗಳನ್ನು ತೊರೆದು ನಿಷ್ಕಾಮನಾಗಿ ವಿಷ್ಣುವನ್ನು ಜಪಿಸುವನೋ ಅಂಥ ಪರಮೈಕಾಂತಿಯಾದ ವಿಷ್ಣುಭಕ್ತನು ತನ್ನ ವಂಶದ ಲಕ್ಷ ಪುರುಷರನ್ನು ಉದ್ಧರಿಸುವನು.

೪೧. ಬ್ರಾಹ್ಮಣರು ಮತ್ತು ದೇವತೆಗಳು ನನಗೆ ಪ್ರಾಣಸಮಾನರು. ಭಕ್ತನಾದವನು ನನ್ನ ಪ್ರಾಣಕ್ಕಿಂತಲೂ ಪ್ರೀತಿಪಾತ್ರನು. ಪ್ರಪಂಚದಲ್ಲಿ ನನಗೆ ಪ್ರಿಯರಾದವರಲ್ಲಿ ಭಕ್ತರಿಗಿಂತ ಪ್ರಿಯರಾದವರು ಮತ್ತಾರೂ ಇಲ್ಲ.

೪೨. ಎಲ್ಲ ಕಷ್ಟಗಳಿಂದಲೂ ಪಾರುಗಾಣಿಸಲು ಸಮರ್ಥನಾದ ತೇಜಸ್ವಿಯಾದ ಗುರುವನ್ನು ನೋಡಿ ಯಾವನು ಅವನಿಂದ ಮಂತ್ರಗ್ರಹಣ ಮಾಡುವನೋ ಅವನು ಕುಶಲಿಯಾಗುವುದರಲ್ಲಿ ಸಂಶಯವಿಲ್ಲ.

ವಯೋಹೀನಾಜ್ಜ್ಞಾನಹೀನಾದ್ವಿದ್ಯಾಹೀನಾತ್ತಥೈವ ಚ ।
ಜಾತಿಹೀನಾದ್ಗುರೋರ್ಮಂತ್ರಂ ಗೃಹ್ಣೀಯಾನ್ನ ಕದಾಚನ ॥ ೪೩ ॥

ಶಾಸ್ತ್ರಾರ್ಥಂ ಚಾಕ್ಷತಂ ಮಂತ್ರಂ ನ ಗೃಹ್ಣೀಯಾತ್ಕದಾಚನ ।
ಮೂರ್ಖಾದಾಶ್ರಮಹೀನಾಚ್ಚ ಪಿತುಃ ಸಂನ್ಯಾಸಿನಸ್ತಥಾ ॥ ೪೪ ॥

ರೋಗಿಣೋ ವಂಶಹೀನಾಚ್ಚ ಭಾರ್ಯಾಹೀನಾತ್ತಥೈವ ಚ ।
ಮಂತ್ರಕ್ಷಿಪ್ತಾತ್ತಥಾ ಮಂತ್ರಂ ನ ಗೃಹ್ಣೀಯಾತ್ಕದಾಚನ ॥ ೪೫ ॥

ವಿಷ್ಣುಮಂತ್ರಂ ನ ಗೃಹ್ಣೀಯಾದ್ವಿಷ್ಣುಭಕ್ತಿವಿಹೀನತಃ ।
ನ ಚ ಶೈವಾನ್ನ ಶಾಕ್ತಾಚ್ಚ ಗೃಹ್ಣೀಯಾದ್ವೈಷ್ಣವಾದ್ದ್ವಿಜಾತ್ ॥ ೪೬ ॥

ವಯೋಹೀನಾತ್ತಥಾಲ್ಪಾಯುರ್ಜ್ಞಾನಹೀನಾದಪಂಡಿತಃ ।
ವಿದ್ಯಾಹೀನಾದ್ಭವೇನ್ಮೂಢೋ ಜಾತಿಹೀನಾತ್ಕ್ಷಯೋ ಭವೇತ್ ॥ ೪೭ ॥

---

೪೩. ವಯಸ್ಸಿನಲ್ಲಿ ಹೀನನಾದ ಗುರುವಿನಿಂದಲೂ, ಜ್ಞಾನಹೀನ ಮತ್ತು ವಿದ್ಯಾಹೀನನಾದ ಗುರುವಿನಿಂದಲೂ, ಜಾತಿಹೀನನಾದ ಗುರುವಿನಿಂದಲೂ ಯಾವಾಗಲೂ ಮಂತ್ರೋಪದೇಶವನ್ನು ಪಡೆಯಬಾರದು.

೪೪. ಮೂರ್ಖನಿಂದಲೂ, ಆಶ್ರಮರಹಿತನಿಂದಲೂ ಸನ್ಯಾಸಿಯಿಂದಲೂ, ತಂದೆಯಿಂದಲೂ, ಶಾಸ್ತ್ರಾರ್ಥವನ್ನೂ ಅಕ್ಷತವಾದ ಮಂತ್ರೋಪದೇಶವನ್ನೂ ಯಾವಾಗಲೂ ಸ್ವೀಕರಿಸಬಾರದು.

೪೫. ರೋಗಿಯಿಂದಲೂ, ವಂಶಹೀನನಿಂದಲೂ, ಪತ್ನಿರಹಿತನಿಂದಲೂ, ಮಂತ್ರಸಿದ್ಧಿಯಾಗದವನಿಂದಲೂ, ಯಾವಾಗಲೂ ಮಂತ್ರೋಪದೇಶವನ್ನು ಸ್ವೀಕರಿಸಬಾರದು.

೪೬. ವಿಷ್ಣುಭಕ್ತಿವಿಹೀನನಿಂದಲೂ, ಶಿವೋಪಾಸಕನಿಂದಲೂ, ಶಕ್ತ್ಯುಪಾಸಕನಿಂದಲೂ ವಿಷ್ಣುಮಂತ್ರೋಪದೇಶವನ್ನು ಸ್ವೀಕರಿಸಬಾರದು. ವಿಷ್ಣುಭಕ್ತನಾದ ಬ್ರಾಹ್ಮಣನಿಂದ ಮಾತ್ರ ಆ ಮಂತ್ರವನ್ನು ಸ್ವೀಕರಿಸಬಹುದು.

೪೭. ವಯೋಹೀನನಿಂದ ಮಂತ್ರೋಪದೇಶ ಪಡೆಯುವವನು ಅಲ್ಪಾಯುವಾಗಿಯೂ, ಜ್ಞಾನಹೀನನಿಂದ ಪಡೆಯುವವನು ಅಪಂಡಿತನಾಗಿಯೂ, ವಿದ್ಯಾಹೀನನಿಂದ ಪಡೆಯುವವನು ಮೂಢನಾಗಿಯೂ, ಜಾತಿಹೀನನಿಂದ ಪಡೆಯುವವನು ಕ್ಷೀಣನಾಗಿಯೂ ದುಃಖಕ್ಕೊಳಗಾಗುವನು.

ಮೂರ್ಖಾನ್ಮೂರ್ಖೋ ಭವೇಚ್ಛಿಷ್ಯೋ ದುಃಖೀ ಸ್ಯಾದಾಶ್ರಮಹೀನತಃ ।
ಯಶೋಹಾನಿಃ ಪಿತುಶ್ಚೈವ ಮೃತ್ಯುಃ ಸಂನ್ಯಾಸಿನಸ್ತಥಾ || ೪೮ ||

ರೋಗಿಣೋ ವ್ಯಾಧಿಯುಕ್ತಶ್ಚ ನಿರ್ವಂಶೋ ವಂಶಹೀನತಃ ।
ಭಾರ್ಯಾಹೀನೋऽಪಿ ಸ್ತ್ರೀಹೀನಾನ್ಮಂತ್ರಕ್ಷಿಪ್ತಾತ್ತು ತತ್ಸಮಃ || ೪೯ ||

ವಿಷ್ಣುಭಕ್ತಿವಿಹೀನಾಚ್ಚ ಭಕ್ತಿಹೀನೋ ಭವೇನ್ನರಃ ।
ಶೈವಾಚ್ಛಾಕ್ತಾದ್ಗೃಹೀತ್ವಾ ಚ ಹರೌ ಭಕ್ತಿರ್ನ ವರ್ಧತೇ || ೫೦ ||

ಬ್ರಾಹ್ಮಣೋ ವೈಷ್ಣವಃ ಶುದ್ಧಃ ಪಕ್ವಾನ್ನಂ ದಾತುಮೀಶ್ವರಃ ।
ಪಕ್ವಾನ್ನಂ ಹರಯೇ ದಾತುಮಕ್ಷಮಶ್ಚೇತರೋ ಜನಃ || ೫೧ ||

---

೪೮. ಮೂರ್ಖನಿಂದ ಮಂತ್ರೋಪದೇಶ ಪಡೆಯುವವನಿಗೆ ಕೂಡಲೇ ಮೃತ್ಯುವುಂಟಾಗುವುದು. ಆಶ್ರಮಹೀನನಿಂದ ಉಪದೇಶ ಪಡೆಯುವವನು ದುಃಖಿಯಾಗುವನು. ತಂದೆಯಿಂದ ಮಂತ್ರೋಪದೇಶ ಪಡೆಯುವವನಿಗೆ ಯಶೋಹಾನಿಯೂ ಸನ್ಯಾಸಿಯಿಂದ ಸ್ವೀಕರಿಸುವವನಿಗೆ ಮೃತ್ಯುವೂ ಉಂಟಾಗುವುದು.

೪೯. ರೋಗಿಯಿಂದ ಮಂತ್ರೋಪದೇಶ ಪಡೆಯುವವನು ವ್ಯಾಧಿಗ್ರಸ್ತನಾಗಿಯೂ, ವಂಶಹೀನನಿಂದ ಸ್ವೀಕರಿಸುವವನು ವಂಶರಹಿತನಾಗಿಯೂ, ಪತ್ನೀರಹಿತನಿಂದ ಪಡೆಯುವವನು ಪತ್ನೀರಹಿತನಾಗಿಯೂ, ಮಂತ್ರಸಿದ್ಧಿ ಇಲ್ಲದವನಿಂದ ಮಂತ್ರಪಡೆದವನು ಸಿದ್ಧಿರಹಿತನಾಗಿಯೂ ವ್ಯಥೆಪಡುವನು.

೫೦. ವಿಷ್ಣುಭಕ್ತಿಯಿಲ್ಲದ ಮನುಷ್ಯನಿಂದ ಮಂತ್ರೋಪದೇಶವನ್ನು ಪಡೆಯುವವನು ಭಕ್ತಿಹೀನನಾಗುತ್ತಾನೆ. ಶೈವ ಮತ್ತು ಶಾಕ್ತರಿಂದ ಮಂತ್ರೋಪದೇಶವನ್ನು ಸ್ವೀಕರಿಸಿದರ ಹರಿಯಲ್ಲಿ ಭಕ್ತಿಯುಂಟಾಗುವುದಿಲ್ಲ.

೫೧. ಶುದ್ಧಾಚಾರ ಸಂಪನ್ನನೂ, ವಿಷ್ಣುಭಕ್ತನೂ ಆದ ಬ್ರಾಹ್ಮಣನು ಮಾತ್ರ ಶ್ರೀ ಹರಿಗೆ ಪಕ್ವಾನ್ನವನ್ನು ನಿವೇದಿಸಲು ಅರ್ಹನು. ಇತರರಾರೂ ಶ್ರೀ ಹರಿಗೆ ಪಕ್ವಾನ್ನವನ್ನು ನಿವೇದಿಸಲರ್ಹರಲ್ಲ.

ಓಂಕಾರೋಚ್ಚಾರಣಾದ್ಧೋಮಾಚ್ಛಾಲಗ್ರಾಮಶಿಲಾರ್ಚನಾತ್ ।
ಮಹ್ಯಂ ಪಕ್ವಾನ್ನದಾನಾಚ್ಚ ವಿಪ್ರಾದನ್ಯೋ ವ್ರಜೇದಧಃ ॥ ೫೨ ॥

ಉದಾಸೀನಾದ್ದುರಾಚಾರಾನ್ನ ಗೃಹ್ಣೀಯಾನ್ಮನುಂ ಸುಧೀಃ ।
ದೈವಾದ್ಯದಿ ಚ ಗೃಹ್ಣೀಯಾದ್ಧನಹೀನೋ ಭವೇದ್ಧ್ರುವಂ ॥ ೫೩ ॥

ಬ್ರಾಹ್ಮಣಾನಾಂ ಸದಾ ಭಕ್ಷ್ಯಂ ಹವಿಷ್ಯಂ ಚ ನಿರಾಮಿಷಂ ।
ಆಮಿಷಸ್ಯ ಪರಿತ್ಯಾಗಾತ್ಸೂರ್ಯವತ್ತೇಜಸಾ ಭವೇತ್ ॥ ೫೪ ॥

ನಿತ್ಯಂ ನೂತನಭಾಂಡೇನ ಕರ್ತವ್ಯಃ ಪಾಕ ಏವ ಚ ।
ಅಥವಾ ಪಕ್ಷಪರ್ಯಂತಂ ತತಸ್ತ್ಯಾಜ್ಯಂ ಮನೀಷಿಭಿಃ ॥ ೫೫ ॥

ಸ್ಥಾನಂ ಸುಸಂಸ್ಕೃತಂ ಕೃತ್ವಾ ಪಾಕಂ ನಿರ್ವರ್ತ್ಯ ಪೂಜಕಃ ।
ಸ್ಥಾನೇ ಪರಿಷ್ಕೃತೇ ವಿಪ್ರೋ ದತ್ವಾ ಮಹ್ಯಂ ಚ ಭಕ್ತಿತಃ ॥ ೫೬ ॥

---

೫೨. ವಿಪ್ರನನ್ನು ಬಿಟ್ಟು ಇತರ ವರ್ಣದವರು ಓಂಕಾರೋಚ್ಚಾರಣೆ ಮಾಡಿದರಾಗಲೀ, ಹೋಮ ಮಾಡಿದರಾಗಲೀ, ಸಾಲಿಗ್ರಾಮ ಶಿಲೆಯನ್ನು ಪೂಜೆ ಮಾಡಿದರಾಗಲೀ, ಶ್ರೀಹರಿಗೆ ಪಕ್ವಾನ್ನವನ್ನು ನಿವೇದಿಸಿದರಾಗಲೀ ನರಕಕ್ಕೆ ಬೀಳುವರು.

೫೩. ಬುದ್ಧಿವಂತನಾದವನು ಉದಾಸೀನನಿಂದಾಗಲೀ ದುರಾಚಾರಿಯಿಂದಾಗಲೀ ಮಂತ್ರೋಪದೇಶವನ್ನು ಸ್ವೀಕರಿಸಬಾರದು. ಒಂದುವೇಳೆ ದುರ್ದೈವದಿಂದ ಸ್ವೀಕರಿಸಿದರೆ ಅವನು ಧನಹೀನನಾಗುವುದರಲ್ಲಿ ಸಂಶಯವಿಲ್ಲ.

೫೪. ಬ್ರಾಹ್ಮಣರು ಸರ್ವದಾ ಮಾಂಸ ರಹಿತವಾದ ಹವಿಷ್ಯಾನ್ನವನ್ನು ತಿನ್ನಬೇಕು. ಆ ಮಾಂಸವನ್ನು ತ್ಯಾಗಮಾಡಿದ ಬ್ರಾಹ್ಮಣನು ಸೂರ್ಯನಂತೆ ತೇಜಸ್ವಿಯಾಗುವನು.

೫೫. ಬ್ರಾಹ್ಮಣನು ಪ್ರತಿ ದಿನವೂ ಹೊಸ ಹೊಸ ಭಾಂಡದಲ್ಲಿ ಪಾಕಮಾಡಬೇಕು. ಹಾಗೆ ಸಾಧ್ಯವಿಲ್ಲದಿದ್ದರೆ ಒಂದುಪಕ್ಷ ಪರ್ಯಂತವಾಗಿ ಒಂದು ಭಾಂಡದಲ್ಲಿ ಅಡಿಗೆ ಮಾಡಬಹುದು. ಬುದ್ಧಿವಂತನಾದವನು ಹದಿನೈದು ದಿವಸಗಳು ಕಳೆದನಂತರನಾದರೂ ಆ ಭಾಂಡವನ್ನು ತ್ಯಜಿಸಬೇಕು.

೫೬–೫೭. ಆಚಾರವಂತನಾದ ಬ್ರಾಹ್ಮಣನು ಪಾಕಮಾಡುವ ಸ್ಥಳವನ್ನು ಶುದ್ಧಿಗೊಳಿಸಿ ಪಾಕಮಾಡಿ ಅದನ್ನು ಭಕ್ತಿಪೂರ್ವಕವಾಗಿ ವಿಷ್ಣುವಿಗೆ ನಿವೇದಿಸಿ

ತದಾ ನಿವೇದ್ಯ ಭುಕ್ತ್ವಾ ಚ ದತ್ವಾ ವಿಪ್ರಾಯ ಸಾದರಂ ।
ಅನಿವೇದ್ಯ ಚ ಭುಕ್ತ್ವಾ ಚ ಸುರಾಪೀತಿರ್ಭವೇದ್ದ್ವಿಜಃ　　॥ ೫೭ ॥

ಚಂದ್ರಸೂರ್ಯೋಪರಾಗೇ ವೈ ನಾಶೌಚೇ ಮೃತಜಾತಯೋಃ ।
ಸ್ಪೃಷ್ಟೇನಾಶುಚಿನಾ ಸದ್ಯಃ ಪಾಕಭಾಂಡಂ ಪರಿತ್ಯಜೇತ್　　॥ ೫೮ ॥

ಭ್ರಷ್ಟಂ ದ್ರವ್ಯಂ ತಥಾನ್ನಂ ಚ ಧೃತ್ವಾ ಧೌತೇ ಚ ವಾಸಸೀ ।
ಪಾದಪ್ರಕ್ಷಾಲನಂ ಕೃತ್ವಾ ಭುಕ್ತ್ವಾ ಸ್ಥಾನೇ ಪರಿಷ್ಕೃತೇ　　॥ ೫೯ ॥

ದ್ವಿರ್ಭೋಜನಂ ನ ಕರ್ತವ್ಯಂ ಸ್ಥಿತೇ ಸೂರ್ಯೇ ದ್ವಿಜಾತಿಭಿಃ ।
ನಿಷ್ಫಲಂ ತದ್ಭವೇತ್ಕರ್ಮ ಭುಕ್ತ್ವಾ ಚ ನರಕಂ ವ್ರಜೇತ್　　॥ ೬೦ ॥

ಯಾತ್ರಾಂ ಯುದ್ಧಂ ನದೀತೀರಂ ಪುನರ್ಭೋಜನಮೈಥುನೇ ।
ವರ್ಜಯೇಚ್ಛ್ರಾದ್ಧದಿವಸೇ ಹವಿಷ್ಯಾಶೀ ಚ ಸಂಯಮೀ　　॥ ೬೧ ॥

---

ಅನಂತರ ಒಂದು ಭಾಗವನ್ನು ಬ್ರಾಹ್ಮಣನಿಗೆ ದಾನಮಾಡಿ ಉಳಿದುದನ್ನು ತಾನು ಭುಜಿಸಬೇಕು. ವಿಷ್ಣುವಿಗೆ ನಿವೇದನ ಮಾಡದೆ ಅನ್ನವನ್ನು ತಿನ್ನುವ ಮನುಜನು ಮಧ್ಯಪಾಯಿಗೆ ಸಮಾನನೆನಿಸುವನು.

೫೮ ಚಂದ್ರಸೂರ್ಯರ ಗ್ರಹಣಕಾಲದಲ್ಲಾಗಲೀ ಜಾತಾಶೌಚ ಮೃತಾಶೌಚ ಗಳಲ್ಲಾಗಲೀ ಮುಟ್ಟಿದ ಪಾಕಭಾಂಡವು ಅಶುಚಿಯಾಗುವುದರಿಂದ ಅದನ್ನು ಮುಂದೆ ಉಪಯೋಗಿಸಬಾರದು. ಆ ಭಾಂಡವೂ ಅದರಲ್ಲಿರುವ ಅನ್ನವೂ ಅಶುಚಿಯಾದುದು.

೫೯. ಬ್ರಾಹ್ಮಣನಾದವನು ಶುಭ್ರವಾದ ಎರಡು ಬಟ್ಟೆಗಳನ್ನುಟ್ಟು ಕೈಕಾಲು ಗಳನ್ನು ತೊಳೆದುಕೊಂಡು ಪರಿಷ್ಕೃತವಾದ ಸ್ಥಾನದಲ್ಲಿ ಪರಿಕರಯುತವಾದ ಶುದ್ಧಾನ್ನವನ್ನು ಭುಜಿಸಬೇಕು.

೬೦. ಸೂರ್ಯನು ಪ್ರಕಾಶಿಸುವ ಹಗಲು ಹೊತ್ತಿನಲ್ಲಿ ಬ್ರಾಹ್ಮಣನು ಎರಡು ಸಾರಿ ಊಟಮಾಡಬಾರದು. ಹಾಗೆ ಮಾಡಿದರೆ ಅವನು ಮಾಡಿದ ಕರ್ಮವೆಲ್ಲವೂ ಫಲಹೀನವಾಗುವವಲ್ಲದೆ ಅವನು ನರಕಕ್ಕೆ ಹೋಗುವನು.

೬೧. ಪಿತ್ರಾದಿಗಳ ಶ್ರಾದ್ಧದ ದಿವಸ ಸಂಚಾರವನ್ನೂ, ಯುದ್ಧವನ್ನೂ, ನದೀತೀರಗಮನವನ್ನು, ಭೋಜನ ಮತ್ತು ಸ್ತ್ರೀ ಸಂಗವನ್ನೂ ತ್ಯಜಿಸಿ ಹವಿಷ್ಯಾನ್ನ ತಿಂದು ಸಂಯಮಿಯಾಗಿರಬೇಕು.

ದ್ವಿಜಾಯ ವಿಷ್ಣುಭಕ್ತಾಯ ಪಾತ್ರಂ ದದ್ಯಾದ್ ಬುಧಾಯ ಚ ।
ವೃಷಲೀಪತಯೇ ಚೈವ ನ ದದ್ಯಾಚ್ಛೂದ್ರಯಾಜಿನೇ ॥ ೬೨ ॥

ಸಂಧ್ಯಾಹೀನಾಯ ದುಷ್ಟಾಯ ವೃಷವಾಹಾಯ ಯತ್ನತಃ ।
ಶುಕವಿಕ್ರಯಿಣೇ ಚೈವ ದೇವಲಾಯ ಕದಾಚನ ॥ ೬೩ ॥

ಪ್ರದತ್ತಂ ಪಾತ್ರಮೇತೇಭ್ಯೋ ಬ್ರಾಹ್ಮಣಂ ನರಕಂ ನಯೇತ್ ।
ಪಾತ್ರಂ ಭುಕ್ತ್ವಾ ತದ್ದಿವಸೇ ಮೈಥುನಾನ್ನರಕಂ ವ್ರಜೇತ್ ॥ ೬೪ ॥

ಸರ್ವೇಭ್ಯಃ ಪಾತಕೀ ತಾತ ಕನ್ಯಾವಿಕ್ರಯಕಾರಕಃ ।
ಮೂಲ್ಯಂ ಗೃಹೀತ್ವಾ ಯೋ ದದ್ಯಾತ್ಸ ಮಹಾರೌರವಂ ವ್ರಜೇತ್ ॥ ೬೫ ॥

ಕನ್ಯಾಲೋಮ ಪ್ರಮಾಣಾಂತಂ ವರ್ಷಂ ಚ ಪಿತೃಭಿಃ ಸಹ ।
ಕುಂಭೀಪಾಕೇ ಪಚ್ಯತೇ ಚ ಪುತ್ರಶ್ಚಾಪಿ ಪುರೋಹಿತಃ ॥ ೬೬ ॥

---

೬೨. ವಿಷ್ಣುಭಕ್ತನೂ ಪಂಡಿತನೂ ಆದ ಬ್ರಾಹ್ಮಣನಿಗೆ ಮಾತ್ರ ಶ್ರಾದ್ಧ ಭೋಜನ ಮಾಡಿಸಬೇಕು. ಶೂದ್ರ ಸ್ತ್ರೀಸಂಗಮಾಡುವ ಮತ್ತು ಶೂದ್ರಯಾಜಿಯಾದ ಬ್ರಾಹ್ಮಣನನ್ನು ನಿಮಂತ್ರಣ ಮಾಡಬಾರದು.

೬೩. ಸಂಧ್ಯಾಹೀನನೂ, ದುಷ್ಟಾಚಾರಪರನೂ, ವೃಷವಾಹಕನೂ ಗಿಣಿ ಮುಂತಾದ ಪಕ್ಷಿಗಳನ್ನು ಮಾರುವವನೂ, ಗ್ರಾಮದೇವತೆಯ ಪೂಜಕನೂ ಆದ ಬ್ರಾಹ್ಮಣನಿಗೆ ಶ್ರಾದ್ಧ ಭೋಜನ ಮಾಡಿಸಬಾರದು.

೬೪. ಮೇಲೆ ಹೇಳಿದವರಿಗೆ ಶ್ರಾದ್ಧಪಾತ್ರವನ್ನು ದಾನಮಾಡುವ ಬ್ರಾಹ್ಮಣನು ನರಕಕ್ಕೆ ಹೋಗುವನು. ಶ್ರಾದ್ಧ ಭೋಜನ ಮಾಡಿ ಸ್ತ್ರೀಸಂಗ ಮಾಡುವ ಮನುಜನೂ ನರಕಕ್ಕೆ ಹೋಗುವನು.

೬೫. ಎಲೈ ತಂದೆಯೇ, ಇವರೆಲ್ಲರಿಗಿಂತಲೂ ಕನ್ಯಾವಿಕ್ರಯ ಮಾಡುವವನು ಮಹಾಪಾತಕಿ ಎನಿಸುವನು. ಕನ್ಯಾ ಶುಲ್ಕವನ್ನು ತೆಗೆದುಕೊಂಡು ಕನ್ಯಾ ದಾನ ಮಾಡುವವನು ಮಹಾ ರೌರವ ನರಕಕ್ಕೆ ಹೋಗುವನು.

೬೬. ಆ ರೀತಿ ಕನ್ಯಾದಾನ ಮಾಡಿದವನು ಕನ್ಯೆಯ ರೋಮಸಂಖ್ಯೆಗಳಷ್ಟು ವರ್ಷ ತನ್ನ ಪಿತೃಗಳೊಡನೆ ಕುಂಭೀಪಾಕದಲ್ಲಿ ನರಳುವನು. ಅವನ ಪುತ್ರನೂ ಕನ್ಯಾದಾನ ಮಾಡಿಸಿದ ಪುರೋಹಿತನೂ ಸಹ ನರಕಕ್ಕೆ ಹೋಗುವರು.

ತಸ್ಮಾತ್ಕನ್ಯಾಂ ಸುಪುತ್ರಾಯ ದಾನಂ ಕುರ್ಯಾದ್ವಿಚಕ್ಷಣಃ ।
ಶೂದ್ರವದ್ಬ್ರಾಹ್ಮಣೇಭ್ಯಶ್ಚ ನೈವ ತದ್ವಂಶಜಾಯ ಚ ॥ ೬೭ ॥

ವಿಪ್ರವೈಷ್ಣವಯೋರ್ಧರ್ಮಃ ಕಥಿತಶ್ಚ ವ್ರಜೇಶ್ವರ ।
ಯದುಕ್ತಂ ಚ ಪುರಾಣೈಶ್ಚ ಚತುರ್ಭಿಃ ಶ್ರುತಿಭಿಸ್ತಥಾ ॥ ೬೮ ॥

ದ್ವಿಜಾರ್ಚನಂ ಕ್ಷತ್ರಿಯಾಣಾಂ ತಥಾ ನಾರಾಯಣಾರ್ಚನಂ ।
ರಾಜ್ಯಾನಾಂ ಪಾಲನಂ ಚೈವ ರಣೇ ನಿರ್ಭಯತಾ ತಥಾ ॥ ೬೯ ॥

ನಿತ್ಯಂ ದಾನಂ ಬ್ರಾಹ್ಮಣೇಭ್ಯಃ ಶರಣಾಗತರಕ್ಷಣಂ ।
ಪುತ್ರತುಲ್ಯಂ ಪ್ರಜಾನಾಂ ಚ ದುಃಖಿನಾಂ ಪರಿಪಾಲನಂ ॥ ೭೦ ॥

ಶಸ್ತ್ರಾಸ್ತ್ರಾಣಾಂ ಚ ನೈಪುಣ್ಯಂ ರಣೇ ಶೌಂಡೀರ್ಯಮೇವ ಚ ।
ತಪಶ್ಚ ಧರ್ಮಕೃತ್ಯಂ ಚ ಯತ್ನತಃ ಕುರುತೇ ಸದಾ ॥ ೭೧ ॥

---

೬೭. ಆದುದರಿಂದ ಕುಶಲಿಯಾದವನು ಯೋಗ್ಯನಾದ ವರನನ್ನು ನೋಡಿ ಕನ್ಯಾದಾನ ಮಾಡಬೇಕು. ಶೂದ್ರನಂತೆ ಆಚಾರಹೀನನಾದ ಬ್ರಾಹ್ಮಣನಿಗಾಗಲೀ ಅವನ ವಂಶಜರಿಗಾಗಲೀ ಕನ್ಯೆಯನ್ನು ಕೊಡಬಾರದು.

೬೮. ಎಲೈ ವ್ರಜೇಶ್ವರನೇ. ಬ್ರಾಹ್ಮಣರಿಗೆ ಮತ್ತು ವಿಷ್ಣುಭಕ್ತರಿಗೆ ಉಚಿತವೆಂದು ಪುರಾಣಗಳಲ್ಲಿಯೂ ಚತುರ್ವೇದಗಳಲ್ಲಿಯೂ ಸ್ಪಷ್ಟವಾಗಿ ಹೇಳಿರುವ ಧರ್ಮವನ್ನು ನಿನಗೆ ತಿಳಿಸಿರುವೆನು.

೬೯ ಕ್ಷತ್ರಿಯನಾದವನು ನಾರಾಯಣನನ್ನೂ ಬ್ರಾಹ್ಮಣನನ್ನೂ ಭಕ್ತಿಯಿಂದ ಪೂಜಿಸುತ್ತ ರಾಜ್ಯಪರಿಪಾಲನೆ ಮಾಡುವುದಲ್ಲದೆ ಯುದ್ಧದಲ್ಲಿ ನಿರ್ಭೀತನಾಗಿರಬೇಕು.

೭೦. ಪ್ರತಿ ದಿನವೂ ಬ್ರಾಹ್ಮಣರಿಗೆ ದಾನಮಾಡುತ್ತ ಶರಣಾಗತರನ್ನು ರಕ್ಷಿಸುವುದಲ್ಲದೆ ಪ್ರಜೆಗಳನ್ನೆಲ್ಲ ಸ್ವಂತ ಮಕ್ಕಳಂತೆ ಪೋಷಿಸಿ ದೀನದಳಿತರನ್ನು ಪರಿಪಾಲಿಸಬೇಕು.

೭೧. ಕ್ಷತ್ರಿಯನು ಶಸ್ತ್ರಾಸ್ತ್ರಗಳಲ್ಲಿ ನಿಪುಣನಾಗುವುದಲ್ಲದೆ ಯುದ್ಧದಲ್ಲಿ ಪರಾಕ್ರಮಿಯಾಗಿರಬೇಕು. ಅಲ್ಲದೆ ತಪಸ್ಸನ್ನೂ ಧರ್ಮಕಾರ್ಯಗಳನ್ನೂ ಪ್ರಯತ್ನಪೂರ್ವಕವಾಗಿ ಮಾಡುತ್ತಿರಬೇಕು.

ಪಂಡಿತಂ ನೀತಿಶಾಸ್ತ್ರಜ್ಞಂ ನಿತ್ಯಂ ಚ ಪರಿಪಾಲಯೇತ್ ।
ನಿಯೋಜಯೇತ್ಸಭಾಮಧ್ಯೇ ನಿತ್ಯಂ ಸದ್ಭಿಶ್ಚ ಸಂಯುತೇ ॥ ೭೨ ॥

ಹಸ್ತ್ಯಶ್ವರಥಪಾದಾತಂ ಸೇನಾಂಗಂ ಚ ಚತುಷ್ಟಯಂ ।
ಪಾಲಯೇದ್ಯತ್ನತೋ ನಿತ್ಯಂ ಯಶಸ್ವೀ ಚ ಪ್ರತಾಪವಾನ್ ॥ ೭೩ ॥

ರಣೇ ನಿಮಂತ್ರಿತಶ್ಚೈವ ದಾನೇ ನ ವಿಮುಖೋ ಭವೇತ್ ।
ರಣೇ ವಾ ಯಸ್ತ್ಯಜೇತ್ಪ್ರಾಣಾಂಸ್ತಸ್ಯ ಸ್ವರ್ಗೋ ಯಶಸ್ಕರಃ ॥ ೭೪ ॥

ವೈಶ್ಯಾನಾಮಪಿ ವಾಣಿಜ್ಯವಿಃೀಶ್ವರಃ ಕೃಷಿಪಾಲನೇ ।
ವಿಪ್ರದೇವಾರ್ಚನಂ ದಾನಂ ತಪಸ್ಯಾ ವ್ರತಸೇವನಂ ॥ ೭೫ ॥

ವಿಪ್ರಾಣಾಮರ್ಚನಂ ನಿತ್ಯಂ ಶೂದ್ರಧರ್ಮೋ ವಿಧೀಯತೇ ।
ತತ್ಕೃಷೀ ತದ್ಧನಗ್ರಾಹೀ ಶೂದ್ರಶ್ಚಾಂಡಾಲತಾಂ ವ್ರಜೇತ್ ॥ ೭೬ ॥

---

೭೨. ರಾಜನು ಪಂಡಿತನನ್ನೂ ನೀತಿ ಶಾಸ್ತ್ರಜ್ಞನನ್ನೂ ಸರ್ವದಾ ಪರಿಪಾಲಿಸುತ್ತ, ಯೋಗ್ಯರಿಂದ ಪರಿಪೂರ್ಣವಾದ ತನ್ನ ಆಸ್ಥಾನದಲ್ಲಿ ಪಂಡಿತರನ್ನು ನಿಯಮಿಸಿಕೊಳ್ಳಬೇಕು.

೭೩. ಪ್ರತಾಪಯುತನಾದ ರಾಜನು ಆನೆ, ಕುದುರೆ, ರಥ ಕಾಲಾಳು ಎಂಬ ಚತುರಂಗ ಬಲವನ್ನು ನಿತ್ಯವೂ ಯತ್ನಪೂರ್ವಕವಾಗಿ ಕಾಪಾಡಿಕೊಂಡು ಕೀರ್ತಿವಂತನಾಗಿ ಬಾಳಬೇಕು.

೭೪. ಕ್ಷತ್ರಿಯನು ಯುದ್ಧಕ್ಕೆ ಆಹ್ವಾನಿತನಾದಾಗಲೂ ದಾನಮಾಡುವಾಗಲೂ ವಿಮುಖನಾಗಬಾರದು. ಯುದ್ಧದಲ್ಲಿ ಪ್ರಾಣತ್ಯಾಗ ಮಾಡುವ ಕ್ಷತ್ರಿಯ ವೀರನಿಗೆ ವೀರಸ್ವರ್ಗವೂ ಕೀರ್ತಿಯೂ ಸಹ ಬರುವುದು.

೭೫. ವೈಶ್ಯರು ವ್ಯಾಪಾರವನ್ನೂ ವ್ಯವಸಾಯ ಮತ್ತು ಗೋರಕ್ಷಣೆಯನ್ನೂ ಮಾಡಿಕೊಂಡಿರಬೇಕಲ್ಲದೆ ದೇವತೆಗಳನ್ನು ಮತ್ತು ಬ್ರಾಹ್ಮಣರನ್ನು ಪೂಜಿಸಿ ದಾನ ತಪಸ್ಸು ವ್ರತ ಮುಂತಾದವುಗಳಲ್ಲಿ ನಿರತರಾಗಿರಬೇಕು.

೭೬. ಪ್ರತಿದಿನವೂ ಬ್ರಾಹ್ಮಣರ ಸೇವೆ ಮಾಡಿಕೊಂಡಿರುವುದೇ ಶೂದ್ರಧರ್ಮವೆನಿಸುವುದು. ಬ್ರಾಹ್ಮಣರಿಂದ ಕೃಷಿಮಾಡಿಸಿಕೊಳ್ಳುವ ಮತ್ತು ಬ್ರಾಹ್ಮಣರ ಧನವನ್ನು ಗ್ರಹಿಸುವ ಶೂದ್ರನು ಚಂಡಾಲನಾಗುವನು.

ಗೃಧ್ರಃ ಕೋಟಿಸಹಸ್ರಾಣಿ ಶತಜನ್ಮಾನಿ ಸೂಕರಃ ||
ಶ್ವಾಪದಃ ಶತಜನ್ಮಾನಿ ಶೂದ್ರೋ ವಿಪ್ರಧನಾಪಹಃ || ೭೭ ||

ಯಃ ಶೂದ್ರೋ ಬ್ರಾಹ್ಮಣೀಗಾಮೀ ಮಾತೃಗಾಮೀ ಸ ಪಾತಕೀ ||
ಕುಂಭೀಪಾಕೇ ಪಚ್ಯತೇ ಸ ಯಾವದ್ವೈ ಬ್ರಹ್ಮಣಃ ಶತಂ || ೭೮ ||

ಕುಂಭೀಪಾಕೇ ತಪ್ತತೈಲೇ ಭುಕ್ತಃ ಸರ್ಪೈರಹರ್ನಿಶಂ ||
ಶಬ್ದಂ ಚ ವಿಕೃತಾಕಾರಂ ಕುರುತೇ ಯಮತಾಡನಾತ್ || ೭೯ ||

ತತಶ್ಚಾಂಡಾಲಯೋನಿಃ ಸ್ಯಾತ್ಸಪ್ತಜನ್ಮಸು ಪಾತಕೀ ||
ಸಪ್ತಜನ್ಮಸು ಸರ್ಪಶ್ಚ ಜಲೌಕಾಃ ಸಪ್ತಜನ್ಮಸು || ೮೦ ||

ಜನ್ಮಕೋಟಿಸಹಸ್ರಂ ಚ ವಿಷ್ಠಾಯಾಂ ಜಾಯತೇ ಕೃಮಿಃ ||
ಪುಂಶ್ಚಲೀನಾಂ ಯೋನಿಕೃಮಿಃ ಸ ಭವೇತ್ಸಪ್ತಜನ್ಮಸು || ೮೧ ||

---

೭೭. ವಿಪ್ರರ ಧನವನ್ನು ಗ್ರಹಿಸುವ ಶೂದ್ರನು ಕೋಟಿ ಸಹಸ್ರ ಜನ್ಮಗಳು ಗೃಧ್ರನಾಗಿಯೂ, ನೂರು ಜನ್ಮಗಳು ಹಂದಿಯಾಗಿಯೂ, ನೂರು ಜನ್ಮಗಳು ಕ್ರೂರ ಮೃಗವಾಗಿಯೂ ಜನಿಸಿ ನರಳುವನು.

೭೮. ಬ್ರಾಹ್ಮಣ ಸ್ತ್ರೀ ಸಂಗಮಾಡುವ ಶೂದ್ರನು ಮಾತೃಗಮನ ಮಾಡಿದ ದೋಷಕ್ಕೆ ಗುರಿಯಾಗುವನು. ಆ ಪಾಪಿಯು ಬ್ರಹ್ಮನ ಆಯುಃ ಪರಿಮಿತಿ ಕಾಲದ ವರೆಗೆ ಕುಂಭೀಪಾಕವೆಂಬ ನರಕದಲ್ಲಿ ನರಳುವನು.

೭೯. ಕುದಿಯುವ ಎಣ್ಣೆಯಿಂದ ತುಂಬಿದ ಕುಂಭೀಪಾಕದಲ್ಲಿ ಬಿದ್ದು ಹಗಲೂ ರಾತ್ರಿ ಸರ್ಪಗಳಿಂದ ಭಕ್ಷಿತನಾಗಿ ಯಮಭೃತ್ಯರ ತಾಡನದಿಂದ ವಿಕಾರ ವಾಗಿ ಕೂಗಿಕೊಳ್ಳುವನು.

೮೦. ಅನಂತರ ಆ ಪಾಪಿಯು ಏಳು ಜನ್ಮಗಳಲ್ಲಿ ಚಂಡಾಲನಾಗಿ ಜನಿಸು ವನು. ಮುಂದೆ ಏಳು ಜನ್ಮಗಳಲ್ಲಿ ದುಷ್ಟ ಸರ್ಪವಾಗಿಯೂ, ಏಳು ಜನ್ಮಗಳಲ್ಲಿ ನೀರಿನ ದುಷ್ಟ ಜಂತುವಾಗಿಯೂ ಜನಿಸುವನು.

೮೧. ಮುಂದೆ ಕೋಟಿಸಹಸ್ರ ಜನ್ಮಗಳಲ್ಲಿ ಮಲಕ್ರಿಮಿಯಾಗಿ ಹುಟ್ಟುವನು. ಅಲ್ಲದೆ ಮುಂದಿನ ಏಳು ಜನ್ಮಗಳಲ್ಲಿ ವೇಶ್ಯೆಯರ ಯೋನಿಕ್ರಿಮಿಯಾಗಿ ಹುಟ್ಟಿ ನರಳುವನು.

ಗವಾಂ ವ್ರಣಕೃಮಿಃ ಸ್ಯಾಚ್ಚ ಪಾತಕೀ ಸಪ್ತಜನ್ಮಸು ||
ಯೋನೌ ಯೋನೌ ಭ್ರಮತ್ಯೇವಂ ನ ಪುನರ್ಜಾಯತೇ ನರಃ || ೮೨ ||

ಸಂನ್ಯಾಸಿನಾಂ ಚ ಯೋ ಧರ್ಮೋ ಮನ್ಮುಖಾಚ್ಚ ನಿಶಾಮಯ ||
ದಂಡಗ್ರಹಣಮಾತ್ರೇಣ ನರೋ ನಾರಾಯಣೋ ಭವೇತ್ || ೮೩ ||

ಪೂರ್ವಕರ್ಮಾಣಿ ದಗ್ಧ್ವಾ ಚ ಪರಕರ್ಮನಿಕೃಂತನಂ ||
ಕುರುತೇ ಚಿಂತಯೇನ್ಮಾಂಚ ಹ್ಯಾಯಾತಿ ಮಮ ಮಂದಿರಂ || ೮೪ ||

ಸಂನ್ಯಾಸಿನಃ ಪಾದಸ್ಪರ್ಶಾತ್ಸದ್ಯಃ ಪೂತಾ ವಸುಂಧರಾ ||
ಸದ್ಯಃ ಪುನಂತಿ ತೀರ್ಥಾನಿ ವೈಷ್ಣವಸ್ಯ ಯಥಾ ವ್ರಜ || ೮೫ ||

ಸಂನ್ಯಾಸಿನಶ್ಚ ಸ್ಪರ್ಶೇನ ನಿಷ್ಪಾಪೋ ಜಾಯತೇ ನರಃ |
ಸಂನ್ಯಾಸಿನಂ ಭೋಜಯಿತ್ವಾ ಚಾಶ್ವಮೇಧಫಲಂ ಲಭೇತ್ || ೮೬ ||

---

೮೨. ಆ ಪಾಪಿಯು ಏಳು ಜನ್ಮಗಳಲ್ಲಿ ಗೋವುಗಳ ವ್ರಣಕ್ರಿಮಿಯಾಗಿ ಜನಿಸಿ ವ್ಯಥೆಪಡುವನು. ಹೀಗೆ ಪ್ರತಿಯೊಂದು ನೀಚಯೋನಿಯಲ್ಲಿಯೂ ನರಳುವುದೇ ಹೊರತು ಪುನಃ ಅವನು ಮನುಷ್ಯ ಜನ್ಮವನ್ನು ಪಡೆಯುವಂತಿಲ್ಲ.

೮೩. ಈಗ ಸಂನ್ಯಾಸಿಗಳ ಧರ್ಮವನ್ನು ನಾನು ಹೇಳುವೆನು. ಕೇಳುವವನಾಗು. ಮನುಜನು ಸಂನ್ಯಾಸವನ್ನು ಸ್ವೀಕರಿಸಿ ದಂಡಗ್ರಹಣ ಮಾಡಿದ ಮಾತ್ರದಿಂದಲೇ ನಾರಾಯಣ ಸಮನೆನಿಸುವನು.

೮೪. ಸಂನ್ಯಾಸಿಯು ಪೂರ್ವಾಶ್ರಮದ ಕರ್ಮಬಂಧನವನ್ನೂ ಮುಂದಿನ ಕರ್ಮಗಳ ಬಂಧನವನ್ನೂ ಕಳೆದುಕೊಂಡು ಸರ್ವದಾ ನನ್ನ ಧ್ಯಾನದಲ್ಲೇ ನಿರತನಾಗಿ ನನ್ನ ಮಂದಿರಕ್ಕೆ ಬರುವನು.

೮೫. ಸಂನ್ಯಾಸಿಯ ಪಾದಸ್ಪರ್ಶ ಮಾತ್ರದಿಂದಲೇ ಭೂಮಿಯು ಪವಿತ್ರವಾಗುವುದು. ಎಲೈ ನಂದಗೋಪನೇ, ವಿಷ್ಣುಭಕ್ತನಂತೆಯೇ ಸಂನ್ಯಾಸಿಯ ಸ್ಪರ್ಶದಿಂದಲೂ ತೀರ್ಥಗಳು ಪವಿತ್ರವಾಗುವುವು.

೮೬. ಮನುಜನು ಸಂನ್ಯಾಸಿಯ ಸ್ಪರ್ಶಮಾತ್ರದಿಂದ ಪಾಪರಹಿತನಾಗುವನು. ಸಂನ್ಯಾಸಿಗಳಿಗೆ ಊಟಮಾಡಿಸುವುದರಿಂದ ಅಶ್ವಮೇಧಯಾಗ ಮಾಡಿದ ಫಲವನ್ನು ಪಡೆಯಬಹುದು.

ನತ್ವಾ ಚ ಕಾಮತೋ ದೃಷ್ಟ್ವಾ ರಾಜಸೂಯಫಲಂ ಲಭೇತ್ ।
ಫಲಂ ಸಂನ್ಯಾಸಿನಾಂ ತುಲ್ಯಂ ಯತೀನಾಂ ಬ್ರಹ್ಮಚಾರಿಣಾಂ ॥ ೮೭ ॥

ಸಂನ್ಯಾಸೀ ಯಾತಿ ಸಾಯಾಹ್ನೇ ಕ್ಷುಧಿತೋ ಗೃಹಿಣಾಂ ಗೃಹಂ ।
ಸದನ್ನಂ ವಾ ಕದನ್ನಂ ವಾ ತದ್ದತ್ತಂ ನೈವ ವರ್ಜಯೇತ್ ॥ ೮೮ ॥

ನ ಯಾಚತೇ ಚ ಮಿಷ್ಟಾನ್ನಂ ನ ಕುರ್ಯಾತ್ಕೋಪಮೇವ ಚ ।
ನ ಧನಗ್ರಹಣಂ ಕುರ್ಯಾದೇಕವಾಸಾ ನಿರೀಹಿತಃ ॥ ೮೯ ॥

ಶೀತಗ್ರೀಷ್ಮಸಮಾನಶ್ಚ ಲೋಭಮೋಹವಿವರ್ಜಿತಃ ।
ತತ್ರ ಸ್ಥಿತ್ವೈಕರಾತ್ರಂ ಚ ಪ್ರಾತರನ್ಯತ್ ಸ್ಥಲಂ ವ್ರಜೇತ್ ॥ ೯೦ ॥

ಯಾನಮಾರೋಹಣಂ ಕೃತ್ವಾ ಗೃಹೀತ್ವಾ ಗೃಹಿಣೋ ಧನಂ ।
ಗೃಹಂ ಕೃತ್ವಾ ಗೃಹೀ ರಮ್ಯಾತ್ ಸ್ವಧರ್ಮಾತ್ಪತಿತೋ ಭವೇತ್ ॥ ೯೧ ॥

---

೮೭. ಸಂನ್ಯಾಸಿಯನ್ನು ಶ್ರದ್ಧಾಪೂರ್ವಕವಾಗಿ ಕಂಡು ನಮಸ್ಕರಿಸಿದವನು ರಾಜಸೂಯಯಾಗ ಮಾಡಿದ ಫಲವನ್ನು ಪಡೆಯುವನು. ಸಂನ್ಯಾಸಿಗಳ ದರ್ಶನದಿಂದ ಲಭಿಸುವ ಫಲವೇ ಯತಿಗಳ ಮತ್ತು ಬ್ರಹ್ಮಚಾರಿಗಳ ದರ್ಶನದಿಂದ ಲಭಿಸುವುದು.

೮೮. ಸಂನ್ಯಾಸಿಯಾದವನು ಹಸಿವಿನಿಂದ ಪೀಡಿತನಾಗಿ ಸಾಯಂಕಾಲದಲ್ಲಿ ಗೃಹಸ್ಥರಮನೆಗೆ ಹೋಗಬೇಕು. ಆ ಗೃಹಸ್ಥನು ಕೊಡುವ ಮಿಷ್ಟಾನ್ನವನ್ನೋ ಕದನ್ನವನ್ನೋ ಉದಾಸೀನದಿಂದ ತ್ಯಜಿಸದೆ ಭುಜಿಸಬೇಕು.

೮೯. ಸಂನ್ಯಾಸಿಯು ಮಿಷ್ಟಾನ್ನವನ್ನು ಬೇಡಕೂಡದು. ಗೃಹಸ್ಥರಮೇಲೆ ಕೋಪಮಾಡಿಕೊಳ್ಳಬಾರದು. ಅವರಿಂದ ಹಣವನ್ನು ಪರಿಗ್ರಹಿಸಕೂಡದು. ಏಕ ವಸ್ತ್ರಧಾರಿಯಾಗಿ ಆಶಾರಹಿತನಾಗಿ ಬಾಳಬೇಕು.

೯೦. ಛಳಿ ಮತ್ತು ಬಿಸಿಲುಗಳನ್ನು ಸಮಾನವಾಗೆಣಿಸಿ ಲೋಭ ಮೋಹ ಗಳನ್ನು ತ್ಯಜಿಸಿ ಆ ಗೃಹಸ್ಥನ ಮನೆಯಲ್ಲಿ ಒಂದುರಾತ್ರಿ ಇದ್ದು ಬೆಳಗ್ಗೆ ಎದ್ದು ಬೇರೆ ಕಡೆಗೆ ಹೋಗಬೇಕು.

೯೧. ಸಂನ್ಯಾಸಿಯು ಯಾನಾರೋಹಣ ಮಾಡಿದರಾಗಲೀ, ಗೃಹಸ್ಥನಿಂದ ಧನಗ್ರಹಣ ಮಾಡಿದರಾಗಲೀ, ಗೃಹಸ್ಥನಂತೆ ಮನೆಮಾಡಿಕೊಂಡು ರಮಿಸಿದರಾಗಲೀ ಸ್ವಧರ್ಮದಿಂದ ಪತಿತನಾಗುವನು.

ಕೃತ್ವಾ ಚ ಕೃಷಿವಾಣಿಜ್ಯಂ ಕುವೃತ್ತಿಂ ಕುರುತೇ ಚ ಯಃ ।
ಸ ಸಂನ್ಯಾಸೀ ಹತಾಚಾರಃ ಸ್ವಧರ್ಮಾತ್ಪತಿತೋ ಭವೇತ್ ॥ ೯೨ ॥

ಅಶುಭಂ ಚ ಶುಭಂ ವಾಪಿ ಸ್ವಕರ್ಮ ಕುರುತೇ ಯದಿ ।
ಬಹಿಷ್ಕೃತಃ ಸ್ವಧರ್ಮಾ ವ್ಯಾಪ್ಯುಪಹಾಸ್ಯಶ್ಚ ವೈ ಭವೇತ್ ॥ ೯೩ ॥

ಬ್ರಾಹ್ಮಣೀ ಪತಿಹೀನಾ ಯಾ ಭವೇನ್ನಿಷ್ಕಾಮಿನೀ ಸದಾ ।
ಏಕಭುಕ್ತಾ ದಿನಾಂತೇ ಸಾ ಹವಿಷ್ಯಾನ್ನರತಾ ಸದಾ ॥ ೯೪ ॥

ನ ಧತ್ತೇ ದಿವ್ಯವಸ್ತ್ರಂ ಚ ಗಂಧದ್ರವ್ಯಂ ಸುತೈಲಕಂ ।
ಸ್ರಜಂ ಚ ಚಂದನಂ ಚೈವ ಶಂಖಸಿಂದೂರಭೂಷಣಂ ॥ ೯೫ ॥

ತ್ಯಕ್ತ್ವಾ ಮಲಿನವಸ್ತ್ರಾ ಸ್ಯಾನ್ನಿತ್ಯಂ ನಾರಾಯಣಂ ಸ್ಮರೇತ್ ।
ನಾರಾಯಣಸ್ಯ ಸೇವಾಂ ಚ ಕುರುತೇ ನಿತ್ಯಮೇವ ಚ ॥ ೯೬ ॥

---

೯೨. ಯಾವ ಸಂನ್ಯಾಸಿಯು ವ್ಯವಸಾಯ ವ್ಯಾಪಾರ ಮುಂತಾದ ನೀಚ ವೃತ್ತಿಯಿಂದ ಜೀವಿಸುತ್ತ ಆಚಾರ ರಹಿತನಾಗಿರುವನೋ ಅವನು ಸ್ವಧರ್ಮದಿಂದ ಪತಿತನಾಗುವುದರಲ್ಲಿ ಸಂಶಯವಿಲ್ಲ.

೯೩. ಅಶುಭವಾಗಲೀ ಶುಭವಾಗಲೀ ಸ್ವಧರ್ಮವನ್ನು ಆಚರಿಸಿಕೊಂಡಿರುವವನು ಇತರರಿಂದ ಬಹಿಷ್ಕೃತನಾದರೂ, ಅಥವಾ ಹಾಸ್ಯಕ್ಕೊಳಗಾದರೂ ನಷ್ಟವಿಲ್ಲ.

೯೪. ಪತಿವಿಹೀನಳಾದ ಬ್ರಾಹ್ಮಣಸ್ತ್ರೀಯು ಸರ್ವದಾ ಕಾಮರಹಿತಳಾಗಿ ಸಾಯಂಕಾಲದ ಸಮಯದಲ್ಲಿ ಹವಿಷ್ಯಾನ್ನವನ್ನು ತಿಂದುಕೊಂಡು ಒಂದು ಊಟದಿಂದಲೇ ತೃಪ್ತಿಗೊಂಡಿರಬೇಕು.

೯೫. ದಿವ್ಯವಸ್ತ್ರವನ್ನಾಗಲೀ, ಗಂಧ ದ್ರವ್ಯಗಳನ್ನಾಗಲೀ, ಸುಗಂಧಯುತವಾದ ತೈಲವನ್ನಾಗಲೀ, ಹೂಮಾಲೆಯನ್ನಾಗಲೀ, ದಿವ್ಯಚಂದನವನ್ನಾಗಲೀ ಶಂಖ ಸಿಂದೂರ ಮುಂತಾದ ಭೂಷಣಗಳನ್ನಾಗಲೀ ಬಯಸದಿರಬೇಕು.

೯೬. ಮೇಲ್ಕಂಡ ಭೋಗದ್ರವ್ಯಗಳನ್ನು ತ್ಯಜಿಸಿ, ಮಲಿನವಸ್ತ್ರಧಾರಿಣಿಯಾಗಿದ್ದುಕೊಂಡು ನಾರಾಯಣನನ್ನು ಸ್ಮರಿಸುತ್ತಿರಬೇಕು. ಪ್ರತಿನಿತ್ಯವೂ ನಾರಾಯಣನ ಸೇವೆಯಲ್ಲಿ ನಿರತಳಾಗಿರಬೇಕು.

ತನ್ನಾಮೋಚ್ಚಾರಣಂ ಶಶ್ವತ್ಕುರುತೇ ನಾನ್ಯಭಕ್ತಿತಃ ।
ಪುತ್ರತುಲ್ಯಂ ಚ ಪುರುಷಂ ಸದಾ ಪಶ್ಯತಿ ಧರ್ಮತಃ ॥ ೯೭ ॥

ಮಿಷ್ಟಾನ್ನಂ ನ ಚ ಭುಂಕ್ತೇ ಸಾ ನ ಕುರ್ಯಾದ್ವಿಭವಂ ವ್ರಜ ।
ಏಕಾದಶ್ಯಾಂ ನ ಭೋಕ್ತವ್ಯಂ ಕೃಷ್ಣಜನ್ಮಾಷ್ಟಮೀದಿನೇ ॥ ೯೮ ॥

ಶ್ರೀರಾಮಸ್ಯ ನವಮ್ಯಾಂ ತು ಶಿವರಾತ್ರೌ ಪವಿತ್ರಯಾ ।
ಅಘೋರಾಯಾಂ ಚ ಪ್ರೇತಾಯಾಂ ಚಂದ್ರಸೂರ್ಯೋರ್ಪರಾಗಯೋಃ ॥

ಭ್ರಷ್ಟಂ ದ್ರವ್ಯಂ ಪರಿತ್ಯಜ್ಯ ಭುಜ್ಯತೇ ಪರಮೇವ ಚ ।
ತಾಂಬೂಲಂ ವಿಧವಾಸ್ತ್ರೀಣಾಂ ಯತೀನಾಂ ಬ್ರಹ್ಮಚಾರಿಣಾಂ ॥ ೧೦೦ ॥

ಸಂನ್ಯಾಸಿನಾಂ ಚ ಗೋಮಾಂಸಸುರಾತುಲ್ಯಂ ಶ್ರುತೌ ಶ್ರುತಂ ।
ರಕ್ತಶಾಕಂ ಮಸೂರಂ ಚ ಜಂಬೀರಂ ಪರ್ಣಮೇವ ಚ ॥ ೧೦೧ ॥

---

೯೭. ಅನನ್ಯಭಕ್ತಿಯಿಂದ ಪದೇ ಪದೇ ಶ್ರೀಮನ್ನಾರಾಯಣನ ನಾಮಸ್ಮರಣೆ ಮಾಡುತ್ತಿರಬೇಕು. ಧರ್ಮನಿರತಳಾಗಿ ಸರ್ವದಾ ಪರಪುರುಷನನ್ನು ಪುತ್ರನಂತೆ ಭಾವಿಸಿಕೊಂಡಿರಬೇಕು.

೯೮. ಎಲೈ ವ್ರಜೇಶ್ವರನೇ, ಬ್ರಾಹ್ಮಣ ವಿಧವೆಯು ಮಿಷ್ಟಾನ್ನವನ್ನು ತಿನ್ನ ಕೂಡದು. ವೈಭವಪೂರ್ಣವಾದ ವೇಷಭೂಷಣಗಳನ್ನು ಮಾಡಿಕೊಳ್ಳಬಾರದು. ಏಕಾದಶಿಯ ದಿವಸವೂ, ಕೃಷ್ಣ ಜನ್ಮಾಷ್ಟಮಿಯ ದಿವಸವೂ ಊಟಬಾರದು.

೯೯. ಶ್ರೀರಾಮನವಮಿಯ ದಿವಸವೂ, ಶಿವರಾತ್ರಿಯ ದಿವಸವೂ, ಅಘೋರಾಷ್ಟಮಿಯ ದಿವಸವೂ, ಚಂದ್ರ ಸೂರ್ಯಗ್ರಹಣಗಳ ದಿವಸವೂ ಪವಿತ್ರಳಾಗಿದ್ದು ಕೊಂಡು ಉಪವಾಸ ಮಾಡಬೇಕು.

೧೦ –೧೦೧. ಆ ದಿನಗಳಲ್ಲಿ ನಿಷಿದ್ಧವಾದ ಆಹಾರವನ್ನು ಬಿಟ್ಟು ಸಾತ್ವಿಕ ವಾದ ಫಲಾಹಾರಗಳನ್ನು ತೆಗೆದುಕೊಳ್ಳಬೇಕು. ವಿಧವಾ ಸ್ತ್ರೀಯರು, ಯತಿಗಳು, ಬ್ರಹ್ಮಚಾರಿಗಳು, ಮತ್ತು ಸಂನ್ಯಾಸಿಗಳು ತಾಂಬೂಲಸೇವನೆ ಮಾಡಿದರೆ ಗೋಮಾಂಸ ವನ್ನು ತಿಂದು ಸುರಾಪಾನ ಮಾಡಿದಂತಾಗುವುದೆಂದು ಶ್ರುತ್ಯುಕ್ತವಾಗಿದೆ. ಕೆಂಪು ತರಕಾರಿಯನ್ನೂ, ಕಾಡು ಕಡಲೆಯನ್ನೂ, ಜಂಬೀರ ಪರ್ಣವನ್ನೂ ದುಂಡಾಡ

ಅಲಾಬುರ್ವರ್ತುಲಾಕಾರಾ ವರ್ಜನೀಯಾ ಚ ತೈರಪಿ ।
ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ಪತಿಂ ॥ ೧೦೨ ॥

ಯಾನಮಾರೋಹಣಂ ಕೃತ್ವಾ ವಿಧವಾ ನರಕಂ ವ್ರಜೇತ್ ।
ನ ಕುರ್ಯಾತ್ಕೇಶಸಂಸ್ಕಾರಂ ಗಾತ್ರಸಂಸ್ಕಾರಮೇವ ಚ ॥ ೧೦೩ ॥

ಕೇಶವೇಣೀ ಜಟಾರೂಪಂ ತತ್ಸಂಸ್ಕಾರಂ ತೀರ್ಥಕಂ ವಿನಾ ।
ತೈಲಾಭ್ಯಂಗಂ ನ ಕುರ್ವೀತ ನಹಿ ಪಶ್ಯತಿ ದರ್ಪಣಂ ॥ ೧೦೪ ॥

ಮುಖಂ ಚ ಪರಪುಂಸಾಂ ಚ ಯಾತ್ರಾಂ ನೃತ್ಯಂ ಮಹೋತ್ಸವಂ ।
ನರ್ತನಂ ಗಾಯನಂ ಚೈವ ಸುವೇಷಂ ಪುರುಷಂ ಶುಭಂ ॥ ೧೦೫ ॥

ಶೃಣುಯಾಚ್ಚ ಸತಾಂ ಧರ್ಮಂ ಸಾಮವೇದ ನಿರೂಪಿತಂ ।
ಪರಮಾರ್ಥಂ ಪರಂ ಚೈವ ನಿಬೋಧ ಕಥಯಾಮಿ ತೇ ॥ ೧೦೬ ॥

---

ಸೋರೆಯ ಕಾಯನ್ನೂ ವಿಧವೆಯರು ತಿನ್ನಬಾರದು. ವಿಧವೆಯು ಮಂಚದ ಮೇಲೆ ಮಲಗಿಕೊಂಡರೆ ತನ್ನ ಪತಿಯನ್ನು ನರಕಕ್ಕೆ ನೂಕುವಳು.

೧೦೩. ಯಾನಾರೋಹಣ ಮಾಡುವ ವಿಧವೆಯು ನರಕಗಾಮಿನಿಯಾಗುವಳು. ವಿಧವೆಯು ಕೇಶಸಂಸ್ಕಾರವನ್ನಾಗಲೀ ಶರೀರ ಸಂಸ್ಕಾರವನ್ನಾಗಲೀ ಮಾಡಿಕೊಳ್ಳಬಾರದು.

೧೦೪. ತಲೆಗೂದಲನ್ನು ಜಟೆಯಂತೆ ಬೆಳೆಸಿಗೊಂಡು ಕೇಶ ಸಂಸ್ಕಾರವನ್ನು ಮಾಡಿಕೊಳ್ಳದೆ ಇರಬೇಕು. ತೈಲಾಭ್ಯಂಗ ಮಾಡಬಾರದು. ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳಬಾರದು.

೧೦೫. ಪರಪುರುಷರ ಮುಖವನ್ನೂ, ಯಾತ್ರಾದಿ ಮಹೋತ್ಸವವನ್ನೂ, ನೃತ್ಯವನ್ನೂ ನೋಡಬಾರದು. ಮನೋಹರವಾದ ಗೀತವನ್ನು ಕೇಳಬಾರದು. ಸುವೇಷ ಭೂಷಿತನಾದ ಪುರುಷನನ್ನು ನೋಡಬಾರದು.

೧೦೬. ಸಾಮವೇದದಲ್ಲಿ ನಿರೂಪಿತವಾಗಿರುವ ಪರಮಾರ್ಥತತ್ವ ಬೋಧಕವಾದ ಸದ್ಧರ್ಮವನ್ನು ಬೋಧಿಸುವೆನು ಕೇಳು. ವಿಧವೆಯರು ಸರ್ವದಾ ಈ ಧರ್ಮೋಪದೇಶವನ್ನು ಕೇಳುತ್ತಿರಬೇಕು.

ಅಧ್ಯಾಪನಮಧ್ಯಯನಂ ಶಿಷ್ಯಾಣಾಂ ಪರಿಪಾಲನಂ ।
ಗುರೂಣಾಂ ಸೇವನಂ ನಿತ್ಯಂ ದ್ವಿಜದೇವಾರ್ಚನಂ ತಥಾ ॥ ೧೦೭ ॥

ಸಿದ್ಧಾಂತಶಾಸ್ತ್ರನೈಪುಣ್ಯಂ ಭಾವನಂ ಸ್ವಾತ್ಮತೋಷಣಂ ।
ವ್ಯಾಖ್ಯಾನಂ ಪರಿಶುದ್ಧಂ ಚ ಗ್ರಂಥಾಭ್ಯಸ್ತಂ ಚ ಸಂತತಂ ॥ ೧೦೮ ॥

ವ್ಯವಸ್ಥಾಪರಿಶುದ್ಧ್ಯರ್ಥಂ ವಿಚಾರೋ ವೇದಸಂಮತಃ ।
ಶಾಸ್ತ್ರಾರ್ಥಾಚರಣಂ ಚೈವ ಕರ್ತವ್ಯಂ ಸ್ವಯಮೇವ ಚ ॥ ೧೦೯ ॥

ದೇವಾಹ್ನಿಕೇಷು ನೈಪುಣ್ಯಂ ವೇದಾಚರಣಮೀಪ್ಸಿತಂ ।
ವೇದೋಕ್ತಭಕ್ಷಣಂ ಚೈವ ಪವಿತ್ರಾಚರಣಂ ಸದಾ ॥ ೧೧೦ ॥

ಪತಿವ್ರತಾನಾಂ ಯಂ ಧರ್ಮಂ ತಂ ನಿಬೋಧ ವ್ರಜೇಶ್ವರ ।
ನಿತ್ಯಂ ತು ಭರ್ತುರ್ಯಾತ್ಸುಕ್ಯಾತ್ತತ್ಪಾದೋದಕಮೀಪ್ಸಿತಂ ॥ ೧೧೧ ॥

---

೧೦೭. ಅಧ್ಯಯನ ಮಾಡುವುದು, ಶಿಷ್ಯರಿಗೆ ಅಧ್ಯಾಪನೆಮಾಡಿ ಅವರನ್ನು ಪರಿಪಾಲಿಸುವುದು, ಗುರುಸೇವೆ ಮಾಡುವುದು ನಿತ್ಯವೂ ದ್ವಿಜ ಮತ್ತು ದೇವರ ಅರ್ಚನೆ ಮಾಡುವುದು ಸದ್ಧರ್ಮವೆನಿಸುವುದು.

೧೦೮. ಸಿದ್ಧಾಂತ ಶಾಸ್ತ್ರಗಳಲ್ಲಿ ನೈಪುಣ್ಯಹೊಂದುವುದು, ಪರಮಾತ್ಮ ಧ್ಯಾನ ದಿಂದ ಆತ್ಮತೃಪ್ತಿ ಹೊಂದುವುದು, ಚೆನ್ನಾಗಿ ಗ್ರಂಥಾಧ್ಯಯನ ಮಾಡಿ ವ್ಯಾಖ್ಯಾನ ಮಾಡುವುದು, ಸದ್ಧರ್ಮವೆನಿಸುವುದು.

೧೦೯. ಸಮಾಜ ವ್ಯವಸ್ಥೆಯ ಪರಿಶುದ್ಧತೆಗಾಗಿ ವೇದ ಸಂಮತವಾದ ಚರ್ಚೆ ಮಾಡುವುದು, ಸ್ವತಃ ತಾನು ಓದಿ ತಿಳಿದಿರುವ ಶಾಸ್ತ್ರಾರ್ಥಗಳನ್ನು ಆಚರಣೆಗೆ ತರುವುದು, ಸದ್ಧರ್ಮವೆನಿಸುವುದು.

೧೧೦. ದೇವತಾಕಾರ್ಯ ಮತ್ತು ದೈನಂದಿನ ಕಾರ್ಯದಲ್ಲಿ ನಿಪುಣನಾಗಿ ವೇದೋಕ್ತವಾದ ಕರ್ಮಗಳನ್ನು ಆಚರಿಸುತ್ತ, ವೇದೋಕ್ತವಾದ ಭಕ್ಷ್ಯಭೋಜ್ಯ ಗಳನ್ನು ಮಾತ್ರ ತಿನ್ನುವುದು ಪವಿತ್ರವಾದ ಆಚಾರವೆನಿಸುವುದು.

೧೧೧–೧೧೩. ಎಲೈ ಪ್ರಜಾಧಿಪತಿಯಾದ ನಂದಗೋಪನೇ, ಪತಿವ್ರತಾ ಸ್ತ್ರೀಯರ ಧರ್ಮವನ್ನು ವಿವರಿಸುವೆನು. ಅವಧರಿಸು, ಪತಿವ್ರತೆ ಎನಿಸಿಕೊಳ್ಳಬೇಕಾದ ಹೆಂಗಸು ಪತಿದೇವನಲ್ಲಿ ಪೂಜ್ಯಭಾವನೆಯನ್ನು ಇಟ್ಟು ಅವನ ಅನುಜ್ಞೆಯನ್ನು

ಭಕ್ತಿಭಾವೇನ ಸತತಂ ಭೋಕ್ತವ್ಯಂ ತದನುಜ್ಞಯಾ ।
ವ್ರತಂ ತಪಸ್ಯಾಂ ದೇವಾರ್ಚಾಂ ಪರಿತ್ಯಜ್ಯ ಪ್ರಯತ್ನತಃ ॥ ೧೧೨ ॥

ಕುರ್ಯಾಚ್ಚರಣಸೇವಾಂ ಚ ಸ್ತವನಂ ಪರಿತೋಷಣಂ ।
ತದಾಜ್ಞಾರಹಿತಂ ಕರ್ಮ ನ ಕುರ್ಯಾದ್ವೈರತಃ ಸತೀ ॥ ೧೧೩ ॥

ನಾರಾಯಣಾತ್ಪರಂ ಕಾಂತಂ ಧ್ಯಾಯತೇ ಸತತಂ ಸತೀ ।
ಪರಪುಂಸಾಂ ಮುಖಂ ಚೈವ ಸುವೇಷಪುರುಷಂ ವರಂ ॥ ೧೧೪ ॥

ಯಾತ್ರಾಮಹೋತ್ಸವಂ ನೃತ್ಯಂ ನರ್ತನಂ ಗಾಯನಂ ವ್ರಜ ।
ಪರಕ್ರೀಡಾಂ ಚ ಸತತಂ ನ ಹಿ ಪಶ್ಯತಿ ಸುವ್ರತಾ ॥ ೧೧೫ ॥

ಯದ್ಭಕ್ಷ್ಯಂ ಸ್ವಾಮಿನೋ ನಿತ್ಯಂ ತದೇವಮಪಿ ಯೋಷಿತಾಂ ।
ನ ಹಿ ತ್ಯಜೇತ್ತು ತತ್ಸಂಗಂ ಕ್ಷಣಮೇವ ಚ ಸುವ್ರತಾ ॥ ೧೧೬ ॥

---

ಪಡೆದು ಪ್ರತಿ ದಿನವೂ ಅವನ ಪಾದೋದಕವನ್ನು ಪಾನಮಾಡಬೇಕು. ಹೆಂಗಸು ವ್ರತ, ತಪಸ್ಸು, ದೇವತಾಪೂಜೆ ಮುಂತಾದುವುಗಳನ್ನು ಬಿಟ್ಟರೂ ದೋಷವಿಲ್ಲ. ಯಾವಾಗಲೂ ಪತಿದೇವನ ಚರಣ ಸೇವೆಯಲ್ಲಿ ನಿರತಳಾಗಿ ಅವನಿಗೆ ಅನುಕೂಲವಾಗಿದ್ದುಕೊಂಡು ಅವನನ್ನು ತೃಪ್ತಿಪಡಿಸಬೇಕು. ಪತಿವ್ರತೆಯಾದವಳು ಪತಿಯ ಆಜ್ಞೆಯಿಲ್ಲದೆ ಯಾವ ಕೆಲಸವನ್ನೂ ಸ್ವತಂತ್ರಳಾಗಿ ಅಥವಾ ದ್ವೇಷ ಭಾವದಿಂದ ಮಾಡಕೂಡದು.

೧೧೪–೧೧೫. ಸತಿಯು ತನ್ನ ಪತಿದೇವನನ್ನು ನಾರಾಯಣನಿಗಿಂತ ಶ್ರೇಷ್ಠನೆಂದು ಭಾವಿಸಿ ಸರ್ವದಾ ಅವನ ಧ್ಯಾನದಲ್ಲೇ ನಿರತಳಾಗಿರುವಳು. ಸುಂದರವಾದ ವೇಷಭೂಷಣಗಳಿಂದ ಭೂಷಿತನಾದ ಪುರುಷನ ಮುಖವನ್ನು ಪತಿವ್ರತೆಯು ನೋಡುವುದಿಲ್ಲ. ಪತಿವ್ರತೆಯಾದವಳು ಜಾತ್ರೆ, ಮಹೋತ್ಸವ, ನೃತ್ಯ, ಗೀತ ಮುಂತಾದ ಗೋಷ್ಠಿಗಳಿಗೆ ಹೋಗಲು ಬಯಸುವುದಿಲ್ಲ. ಇತರ ಕ್ರೀಡೆಗಳನ್ನು ಸಹ ಅವಳು ನೋಡುವುದಿಲ್ಲ.

೧೧೬. ತನ್ನ ಪತಿಯು ಪ್ರತಿದಿನವೂ ಏನು ಆಹಾರ ತೆಗೆದುಕೊಳ್ಳುವನೋ ಅದನ್ನೇ ಪತಿವ್ರತೆಯಾದವಳು ಸೇವಿಸುವಳು. ಆ ವ್ರತಪಾರಾಯಣೆಯು ಕ್ಷಣ ಕಾಲವಾದರೂ ಪತಿ ಸೇವೆಯನ್ನು ಬಿಟ್ಟು ಇರಲಾರಳು.

ಉತ್ತರೇ ನೋತ್ತರಂ ದದ್ಯಾತ್ಸ್ವಾಮಿನಶ್ಚ ಪತಿವ್ರತಾ ।
ನ ಕೋಪಂ ಕುರುತೇ ಶುದ್ಧಾ ತಾಡಿತಾ ಚಾಪಿ ಕೋಪತಃ ॥ ೧೧೭ ॥

ಕ್ಷುಧಿತಂ ಭೋಜಯೇತ್ಕಾಂತಂ ದದ್ಯಾತ್ಪಾನಂ ಚ ಭೋಜನಂ ।
ನ ಬೋಧಯೇತ್ತಂ ನಿದ್ರಾಲುಂ ಪ್ರೇರಯನ್ನೈವ ಕರ್ಮಸು ॥ ೧೧೮ ॥

ಪುತ್ರಾಣಾಂ ಚ ಶತಗುಣಂ ಸ್ನೇಹಂ ಕುರ್ಯಾತ್ಪತಿಂ ಸತೀ ।
ಪತಿರ್ಬಂಧುರ್ಗತಿರ್ಭರ್ತಾ ದೈವತಂ ಕುಲಯೋಷಿತಃ ॥ ೧೧೯ ॥

ಪ್ರಿಯಂ ದೃಷ್ಟ್ವಾ ಸುಧಾತುಲ್ಯಂ ಕಾಂತಂ ಪಶ್ಯತಿ ಸುಂದರೀ ।
ಸಸ್ಮಿತಂ ವದನಂ ಕೃತ್ವಾ ಭಕ್ತಿಭಾವೇನ ಯತ್ನತಃ ॥ ೧೨೦ ॥

ಪುರುಷಾಣಾಂ ಸಹಸ್ರಂ ಚ ಸತೀ ಸ್ತ್ರೀ ಚ ಸಮುದ್ಧರೇತ್ ।
ಪತಿಃ ಪತಿವ್ರತಾನಾಂ ಚ ಮುಚ್ಯತೇ ಸರ್ವಪಾತಕಾತ್ ॥ ೧೨೧ ॥

---

೧೧೭. ಪತಿವ್ರತೆಯು ತನ್ನ ಪತಿದೇವನ ಮಾತಿಗೆ ಪ್ರತ್ಯುತ್ತರವನ್ನು ಯಾವಾಗಲೂ ಕೊಡುವುದಿಲ್ಲ. ಒಂದು ವೇಳೆ ಪತಿಯು ಕೋಪಗೊಂಡು ತನ್ನನ್ನು ಹೊಡೆದರೂ ಸಹ ತಾನು ಕೋಪಗೊಳ್ಳುವುದಿಲ್ಲ.

೧೧೮. ಪತಿಯು ಹಸಿದಿರುವುದನ್ನು ತಿಳಿದು ಅವನಿಗೆ ಊಟಮಾಡಿಸುವುದು ನೀರಡಿಸಿರುವುದನ್ನು ತಿಳಿದು ಪಾನೀಯವನ್ನು ಕೊಡುವುದು, ನಿದ್ರೆ ಮಾಡುತ್ತಿರುವಾಗ ಅವನನ್ನು ಎಚ್ಚರಿಸದಿರುವುದು, ಯಾವ ಕೆಲಸ ಕಾರ್ಯಗಳಿಗೂ ಅವನನ್ನು ಪ್ರೇರೇಪಿಸದಿರುವುದೂ ಪತಿವ್ರತೆಯ ಧರ್ಮ.

೧೧೯. ಸಾಧ್ವೀಮಣಿಯು ಮಕ್ಕಳಲ್ಲಿಡುವುದಕ್ಕಿಂತ ನೂರು ಪಾಲು ಹೆಚ್ಚು ಪ್ರೇಮವನ್ನು ಪತಿಯಲ್ಲಿಡಬೇಕು. ಸತ್ಕುಲ ಪ್ರಸೂತಳಾದ ಹೆಂಗಸಿಗೆ ಪತಿಯೇ ಬಂಧು, ಬಳಗ, ದಿಕ್ಕು, ದೇವರು ಎಲ್ಲವೂ.

೧೨೦. ಪತಿವ್ರತೆಯು ತನ್ನ ಪತಿಯನ್ನು ನೋಡಿದಾಗಲೆಲ್ಲ ಅಮೃತಪಾನ ಮಾಡಿದಷ್ಟು ತೃಪ್ತಳಾಗಿ ಮುಗುಳುನಗೆ ಬೀರುತ್ತ ಭಕ್ತಿಭಾವದಿಂದ ಅವನ ಸೇವೆಯಲ್ಲಿ ನಿರತಳಾಗುವಳು.

೧೨೧. ಪತಿವ್ರತೆಯಾದ ಸ್ತ್ರೀಯು ಸಾವಿರಾರು ಪುರುಷರನ್ನು ಉದ್ಧಾರ ಮಾಡುವಳು. ಸಾಧ್ವೀಮಣಿಯರ ಪತಿದೇವನು ತನ್ನ ಸಕಲ ಪಾಪದಿಂದಲೂ ಮುಕ್ತನಾಗುವನು.

ನಾಸ್ತಿ ತೇಷಾಂ ಕರ್ಮಭೋಗಃ ಸತೀನಾಂ ವ್ರತತೇಜಸಾಂ।
ತಯಾ ಸಾರ್ಧಂ ಚ ನಿಷ್ಕರ್ಮಾ ಮೋದತೇ ಹರಿಮಂದಿರೇ ॥ ೧೨೨ ॥

ಪೃಥಿವ್ಯಾಂ ಯಾನಿ ತೀರ್ಥಾನಿ ಸತೀಪಾದೇಷು ತಾನ್ಯಪಿ।
ತೇಜಶ್ಚ ಸರ್ವದೇವಾನಾಂ ಮುನೀನಾಂ ಚ ಸತೀಷು ಚ ॥ ೧೨೩ ॥

ತಪಸ್ವಿನಾಂ ತಪಃ ಸರ್ವಂ ವ್ರತಿನಾಂ ಯತ್ಫಲಂ ವ್ರಜ।
ದಾನೇ ಯತ್ಫಲಂ ಯದ್ದಾತ್ರೃಣಾಂ ತತ್ಸರ್ವಂ ತಾಸು ಸಂತತಂ ॥ ೧೨೪ ॥

ಸ್ವಯಂ ನಾರಾಯಣಃ ಶಂಭುರ್ವಿಧಾತಾ ಜಗತಾಮಪಿ।
ಸುರಾಃ ಸರ್ವೇ ಚ ಮುನಯೋ ಭೀತಾಸ್ತಾಭ್ಯಾಂ ಚ ಸಂತತಂ ॥ ೧೨೫ ॥

ಸತೀನಾಂ ಪಾದರಜಸಾ ಸದ್ಯಃ ಪೂತಾ ವಸುಂಧರಾ।
ಪತಿವ್ರತಾಂ ನಮಸ್ಕೃತ್ಯ ಮುಚ್ಯತೇ ಪಾತಕಾನ್ನರಃ ॥ ೧೨೬ ॥

---

೧೨೨. ಪತಿಸೇವೆ ಮಾಡಿ ದಿವ್ಯತೇಜಸ್ಸನ್ನು ಹೊಂದುವ ಪತಿವ್ರತೆಯರಿಗೆ ಕರ್ಮಫಲದ ಭೋಗವಿರುವುದಿಲ್ಲ. ಆ ಸಾಧ್ವೀಮಣಿಯೊಡನೆ ಅವಳ ಪತಿದೇವನು ನಿಷ್ಕರ್ಮಿಯಾಗಿ ವೈಕುಂಠದಲ್ಲಿ ಸುಖಸಂತೋಷದಿಂದಿರುವನು.

೧೨೩. ಭೂ ಮಂಡಲದಲ್ಲಿರುವ ಸಕಲ ಪುಣ್ಯತೀರ್ಥಗಳೂ ಸತಿಯ ಪಾದಗಳಲ್ಲಿರುತ್ತವೆ. ಸಕಲ ದೇವತೆಗಳ ಮತ್ತು ಮುನಿಗಳ ತೇಜಸ್ಸೂ ಕೂಡ ಪತಿವ್ರತೆಯರ ಮುಖದಲ್ಲಿರುತ್ತದೆ.

೧೨೪. ಎಲೈ ನಂದಗೋಪನೇ, ತಪಸ್ವಿಗಳ ತಪಸ್ಸಂಪತ್ತು, ವ್ರತನಿರತರ ವ್ರತಾಚರಣೆಯ ಫಲವೂ, ದಾನಿಗಳ ದಾನದ ಫಲವೂ ಪತಿವ್ರತೆಯರಲ್ಲಿ ಬಂದು ನೆಲೆಸಿರುತ್ತದೆ.

೧೨೫. ಜಗತ್ಸೃಷ್ಟಿಕರ್ತನಾದ ಬ್ರಹ್ಮ, ರಕ್ಷಕನಾದ ನಾರಾಯಣ ಮತ್ತು ಸಂಹಾರಕನಾದ ರುದ್ರ ಮತ್ತಿತರ ದೇವತೆಗಳು, ಮುನಿಗಳು ಎಲ್ಲರೂ ಪತಿವ್ರತಾ ಸ್ತ್ರೀಗೂ ಮತ್ತು ಅವನ ಪತಿ ದೇವನಿಗೂ ಅಧೀನರಾಗಿರುತ್ತಾರೆ.

೧೨೬. ಸಾಧ್ವೀಮಣಿಯ ಪಾದ ಧೂಳಿಯಿಂದ ಭೂ ದೇವಿಯು ಕೂಡಲೇ ಪಾವನವಾಗುವಳು. ಮನುಜನು ಪತಿವ್ರತೆಯರಿಗೆ ನಮಸ್ಕರಿಸಿದರೆ ಸಕಲ ಪಾಪಗಳಿಂದ ವಿಮುಕ್ತನಾಗುವನು.

ತ್ರೈಲೋಕ್ಯಂ ಭಸ್ಮಸಾತ್ಕರ್ತುಂ ಕ್ಷಣೇನೈವ ಪತಿವ್ರತಾ ।
ಸ್ವತೇಜಸಾ ಸಮರ್ಥಾ ಸಾ ಮಹಾಪುಣ್ಯವತೀ ಸದಾ ॥ ೧೨೭ ॥

ಸತೀನಾಂ ಚ ಪತಿಃ ಸಾಧುಃ ಪುತ್ರೋ ನಿಃಶಂಕ ಏವ ಚ ।
ನಹಿ ತಸ್ಯ ಭಯಂ ಕಿಂಚಿದ್ದೇವೇಭ್ಯಶ್ಚ ಯಮಾದಪಿ ॥ ೧೨೮ ॥

ಶತಜನ್ಮಪುಣ್ಯವತಾಂ ಗೇಹೇ ಜಾತಾ ಪತಿವ್ರತಾ ।
ಪತಿವ್ರತಾಪ್ರಸೂಃ ಪೂತಾ ಜೀವನ್ಮುಕ್ತಃ ಪಿತಾ ತಥಾ ॥ ೧೨೯ ॥

ಸತೀ ಸ್ತ್ರೀ ಪ್ರಾತರುತ್ಥಾಯ ತ್ಯಕ್ತ್ವಾ ಚ ರಾತ್ರಿವಾಸಸಂ ।
ಭರ್ತಾರಂ ಚ ನಮಸ್ಕೃತ್ಯ ಕರೋತಿ ಸ್ತವನಂ ಮುದಾ ॥ ೧೩೦ ॥

ಗೃಹಕಾರ್ಯಂ ತತಃ ಕೃತ್ವಾ ಸ್ನಾತ್ವಾ ಧೌತೇ ಚ ವಾಸಸೀ ।
ಗೃಹೀತ್ವಾ ಶುಕ್ಲಪುಷ್ಪಂ ಚ ಭಕ್ತಿತಃ ಪೂಜಯೇತ್ಪತಿಂ ॥ ೧೩೧ ॥

---

೧೨೭. ಮಹಾಭಾಗ್ಯಶಾಲಿಯಾದ ಪತಿವ್ರತೆಯು ತನ್ನ ದಿವ್ಯತೇಜಸ್ಸಿನಿಂದ ಮೂರು ಲೋಕವನ್ನೂ ಕ್ಷಣಮಾತ್ರದಲ್ಲಿ ಬೂದಿ ಮಾಡಲು ಸರ್ವದಾ ಸಮರ್ಥಳಾಗುವುದರಲ್ಲಿ ಸಂಶಯವಿಲ್ಲ.

೧೨೮. ಸತೀಮಣಿಯರ ಪತಿಪುತ್ರರು ಸಾಧುಗಳಾಗಿದ್ದರೆ ಅವರು ನಿರ್ಭೀತರಾಗಿ ಬಾಳಬಹುದು. ಅವರಿಗೆ ದೇವತೆಗಳಿಂದಾಗಲೀ, ಯಮನಿಂದಾಗಲೀ ಭಯವಿರುವುದಿಲ್ಲ.

೧೨೯. ನೂರು ಜನ್ಮಗಳಲ್ಲಿ ಪುಣ್ಯಕರ್ಮಗಳನ್ನು ಮಾಡಿದವರ ಮನೆಯಲ್ಲಿ ಮಾತ್ರ ಪತಿವ್ರತೆಯು ಜನ್ಮವೆತ್ತುವಳು. ಪತಿವ್ರತೆಯನ್ನು ಹೆತ್ತ ತಾಯಿಯು ಪವಿತ್ರಳಾಗುವಳು. ತಂದೆಯು ಜೀವನ್ಮುಕ್ತನಾಗುವನು.

೧೩೦. ಸಾಧ್ವೀಮಣಿಯು ಬೆಳಗ್ಗೆ ಎದ್ದಕೂಡಲೇ ರಾತ್ರಿಯುಟ್ಟ ಬಟ್ಟೆಯನ್ನು ಬಿಚ್ಚಿಟ್ಟು ಶುದ್ಧವಸ್ತ್ರವನ್ನು ಧರಿಸಿ, ತನ್ನ ಪತಿ ದೇವನಿಗೆ ಭಕ್ತಿಯಿಂದ ನಮಸ್ಕಾರ ಮಾಡಿ ಅವನನ್ನು ಸಂತೋಷದಿಂದ ಸುತ್ತಿಸಬೇಕು.

೧೩೧. ಅನಂತರ ಮನೆಯ ಕೆಲಸಗಳನ್ನು ಮಾಡಿಕೊಂಡು, ಸ್ನಾನಮಾಡಿ ಒಗೆದ ಎರಡು ವಸ್ತ್ರಗಳನ್ನು ಧರಿಸಿ, ಬಿಳುಪಾದ ಹೂವನ್ನು ಮುಡಿದು ಪತಿದೇವನನ್ನು ಭಕ್ತಿಯಿಂದ ಪೂಜಿಸಬೇಕು.

ಸ್ನಾಪಯಿತ್ವಾ ಸುಪೂತೇನ ಜಲೇನ ನಿರ್ಮಲೇನ ಚ ।
ತಸ್ಮೈ ದತ್ವಾ ಧೌತವಸ್ತ್ರಂ ತತ್ಪಾದೌ ಕ್ಷಾಲಯೇನ್ಮುದಾ ॥ ೧೩೨ ॥

ಆಸನೇ ವಾಸಯಿತ್ವಾ ಚ ದತ್ವಾ ಭಾಲೇ ಚ ಚಂದನಂ ।
ಸರ್ವಾಂಗಲೇಪನಂ ಕೃತ್ವಾ ದತ್ವಾ ಮಾಲ್ಯಂ ಗಲೇಽಪಿ ಚ ॥ ೧೩೩ ॥

ಸಾಮವೇದೋಕ್ತಮಂತ್ರೇಣ ಭೋಗದ್ರವ್ಯೈಃ ಸುಧೋಪಮೈಃ ।
ಸಂಪೂಜ್ಯ ಭಕ್ತಿತಃ ಕಾಂತಂ ಸ್ತುತ್ವಾ ಚ ಪ್ರಣಮೇನ್ಮುದಾ ॥ ೧೩೪ ॥

ಓಂ ನಮಃ ಕಾಂತಾಯ ಶಾಂತಾಯ ಸರ್ವದೇವಾಶ್ರಯಾಯ ಸ್ವಾಹಾ ।
ಇತ್ಯನೇನೈವ ಮಂತ್ರೇಣ ದತ್ವಾ ಪುಷ್ಪಂ ಚ ಚಂದನಂ ॥ ೧೩೫ ॥

ಪಾದ್ಯಾರ್ಘ್ಯಂ ಧೂಪದೀಪೌ ಚ ವಸ್ತ್ರಂ ನೈವೇದ್ಯಮುತ್ತಮಂ ।
ಜಲಂ ಸುವಾಸಿತಂ ಶುದ್ಧಂ ತಾಂಬೂಲಂ ಚ ಸುವಾಸಿತಂ ॥ ೧೩೬ ॥

---

೧೩೨. ಪವಿತ್ರವೂ, ನಿರ್ಮಲವೂ ಆದ ನೀರಿನಿಂದ ಪತಿಗೆ ಸ್ನಾನ ಮಾಡಿಸಿ, ಅವನ ಪಾದಗಳನ್ನು ತೊಳೆದು, ಅವನಿಗೆ ಶುಭ್ರವಾದ ಎರಡು ವಸ್ತ್ರಗಳನ್ನು ಧರಿಸಲು ಕೊಡಬೇಕು.

೧೩೩. ಪವಿತ್ರವಾದ ಪೀಠದಲ್ಲಿ ಕುಳ್ಳಿರಿಸಿ, ಹಣೆಗೆ ಚಂದನ ಗಂಧನವನ್ನಿಟ್ಟು ಸರ್ವಾಂಗಗಳಿಗೂ ಚಂದನವನ್ನು ಲೇಪನ ಮಾಡಿ ಕಂಠದಲ್ಲಿ ಪುಷ್ಪಮಾಲೆಯನ್ನು ಹಾಕಿ ಪೂಜಿಸಬೇಕು.

೧೩೪. ಸಾಮವೇದದಲ್ಲಿ ಹೇಳಿರುವ ಮಂತ್ರಪೂರ್ವಕವಾಗಿ ಶ್ರೇಷ್ಠವಾದ ಭೋಗದ್ರವ್ಯಗಳಿಂದ ಪತಿದೇವನನ್ನು ಪೂಜಿಸಿ ಭಕ್ತಿಯಿಂದ ಸ್ತೋತ್ರಮಾಡಿ ನಮಸ್ಕರಿಸಬೇಕು.

೧೩೫. " ಶಾಂತನೂ ಸಕಲದೇವತಾಸ್ವರೂಪನೂ ಆದ ಪತಿದೇವನಿಗೆ ಸರ್ವಸ್ವವನ್ನು ಸಮರ್ಪಿಸುವೆನು " ಎಂಬರ್ಥವನ್ನು ಕೊಡುವ ಮೇಲಿನ ಮಂತ್ರದಿಂದ ಪತಿಯನ್ನು ಪೂಜಿಸಿ ಪುಷ್ಪಚಂದನಗಳನ್ನು ಸಮರ್ಪಿಸಬೇಕು.

೧೩೬. ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿ, ಧೂಪದೀಪಗಳನ್ನು ಬೆಳಗಿ, ನೈವೇದ್ಯವನ್ನೂ ವಸ್ತ್ರತಾಂಬೂಲಾದಿಗಳನ್ನೂ ಭಕ್ತಿಯಿಂದ ಕೊಟ್ಟು ಸುವಾಸಿತವಾದ ಪಾನೀಯವನ್ನು ನೀಡಬೇಕು.

ಪಶ್ಚಾತ್ ಸ್ತೋತ್ರಂ ಪಠೇದ್ಭಕ್ತ್ಯಾ ಭಕ್ತ್ಯಾ ಕೃತಂ ನೈ ಪಾಠ್ಯಮೇವ ಚ ।
ಓಂ ನಮಃ ಕಾಂತಾಯ ಭರ್ತ್ರೇ ಚ ಶರಚ್ಚಂದ್ರಸ್ವರೂಪಿಣೇ ॥ ೧೩೭ ॥

ನಮಃ ಶಾಂತಾಯ ದಾಂತಾಯ ಸರ್ವದೇವಾಶ್ರಯಾಯ ಚ ।
ನಮೋ ಬ್ರಹ್ಮಸ್ವರೂಪಾಯ ಸತೀಪ್ರಾಣಪರಾಯ ಚ ॥ ೧೩೮ ॥

ನಮಸ್ಯಾಯ ಚ ಪೂಜ್ಯಾಯ ಹೃದಾಧಾರಾಯ ತೇ ನಮಃ ।
ಪಂಚಪ್ರಾಣಾಧಿದೇವಾಯ ಚಕ್ಷುಷಸ್ತಾರಕಾಯ ಚ ।
ಜ್ಞಾನಾಧಾರಾಯ ಪತ್ನೀನಾಂ ಪರಮಾನಂದರೂಪಿಣೇ ॥ ೧೩೯ ॥

ಪತಿರ್ಬ್ರಹ್ಮಾ ಪತಿರ್ವಿಷ್ಣುಃ ಪತಿರೇವ ಮಹೇಶ್ವರಃ ।
ಪತಿಶ್ಚ ನಿರ್ಗುಣಾಧಾರೋ ಬ್ರಹ್ಮರೂಪ ನಮೋಽಸ್ತು ತೇ ॥ ೧೪೦ ॥

---

೧೩೭. ಅನಂತರ ಭಕ್ತಿಯಿಂದ ಪತಿದೇವನನ್ನು ಸ್ತುತಿಸಿ ಅವನ ನೈಜಗುಣಗಳನ್ನು ಬಣ್ಣಿಸಬೇಕು. 'ಶರಚ್ಚಂದ್ರನಂತೆ ಆಹ್ಲಾದಕನೂ, ಮನೋಹರನೂ ಆದ ಪತಿದೇವನಿಗೆ ನಮಸ್ಕಾರ' ಎಂದು ಹೇಳಿ ನಮಸ್ಕರಿಸಬೇಕು.

೧೩೮. "ಶಾಂತರೂಪನೂ, ಜಿತೇಂದ್ರಿಯನೂ, ಸರ್ವದೇವತಾ ಸ್ವರೂಪನೂ, ಬ್ರಹ್ಮಸ್ವರೂಪನೂ, ಪತಿವ್ರತೆಯ ಪ್ರಾಣಾಧಾರನೂ ಆದಪತಿದೇವನಿಗೆ ನಮಸ್ಕರಿಸುವೆನು.

೧೩೯. ನಮಸ್ಕಾರಕ್ಕೆ ಅರ್ಹನೂ, ಪೂಜ್ಯನೂ, ಸತಿಯ ಹೃದಯಕ್ಕೆ ಆಧಾರನೂ, ಸತಿಯ ಪಂಚಪ್ರಾಣಗಳಿಗೆ ಅಧಿದೇವನೂ, ಜ್ಞಾನದೃಷ್ಟಿಯನ್ನು ಕೊಟ್ಟು ಉದ್ಧರಿಸುವವನೂ ಆದ ಪತಿದೇವನಿಗೆ ನಮಸ್ಕರಿಸುವೆನು. ಪತ್ನಿಯರ ಜ್ಞಾನಕ್ಕೆ ಆಧಾರಭೂತನೂ, ಪರಮಾನಂದಸ್ವರೂಪನೂ ಆದ ಪತಿದೇವನಿಗೆ ವಂದಿಸುವೆನು.

೧೪೦. ಪತಿದೇವನೇ ಬ್ರಹ್ಮ, ಪತಿದೇವನೇ ವಿಷ್ಣು, ಪತಿದೇವನೇ ಮಹೇಶ್ವರ. ನಿರ್ಗುಣ ಬ್ರಹ್ಮಸ್ವರೂಪನೂ ಅವನೇ. ಅಂಥ ಪತಿದೇವನಿಗೆ ನಮಸ್ಕರಿಸುವೆನು.

ಕ್ಷಮಸ್ವ ಭಗವನ್ದೋಷಂ ಜ್ಞಾನಾಜ್ಞಾನಕೃತಂ ಚ ಯತ್ ।
ಪತ್ನೀಬಂಧೋ ದಯಾಸಿಂಧೋ ದಾಸೀದೋಷಂ ಕ್ಷಮಸ್ವ ಮೇ ॥ ೧೪೧ ॥

ಇದಂ ಸ್ತೋತ್ರಂ ಮಹಾಪುಣ್ಯಂ ಸೃಷ್ಟ್ಯಾದೌ ಪದ್ಮಯಾ ಕೃತಂ ।
ಸರಸ್ವತ್ಯಾ ಚ ಧರಯಾ ಗಂಗಯಾ ಚ ಪುರಾ ವ್ರಜ ॥ ೧೪೨ ॥

ಸಾವಿತ್ರ್ಯಾ ಚ ಕೃತಂ ಪೂರ್ವಂ ಬ್ರಹ್ಮಣೇ ಚಾಪಿ ನಿತ್ಯಶಃ ।
ಪಾರ್ವತ್ಯಾ ಚ ಕೃತಂ ಭಕ್ತ್ಯಾ ಕೈಲಾಸೇ ಶಂಕರಾಯ ಚ ॥ ೧೪೩ ॥

ಮುನೀನಾಂ ಚ ಸುರಾಣಾಂ ಚ ಪತ್ನೀಭಿಶ್ಚ ಕೃತಂ ಪುರಾ ।
ಪತಿವ್ರತಾನಾಂ ಸರ್ವಾಸಾಂ ಸ್ತೋತ್ರಮೇತಚ್ಛುಭಾವಹಂ ॥ ೧೪೪ ॥

ಇದಂ ಸ್ತೋತ್ರಂ ಮಹಾಪುಣ್ಯಂ ಯಾ ಶೃಣೋತಿ ಪತಿವ್ರತಾ ।
ನರೋಽನ್ಯೋ ವಾಽಪಿ ನಾರೀ ವಾ ಲಭತೇ ಸರ್ವವಾಂಛಿತಂ ॥ ೧೪೫ ॥

---

೧೪೧. ಪರಮಪೂಜ್ಯನಾದ ಪತಿದೇವನೇ ಜ್ಞಾನಪೂರ್ವಕವಾಗಲೀ, ಅಜ್ಞಾನದಿಂದಾಗಲೀ ಮಾಡಿರುವ ನನ್ನ ತಪ್ಪನ್ನು ಕ್ಷಮಿಸು. ಪತ್ನಿಗೆ ಪರಮಬಂಧುವೂ. ದಯಾಸಿಂಧುವೂ ಆದ ನೀನು ದಾಸಿಯಾದ ನನ್ನ ದೋಷವನ್ನು ಕ್ಷಮಿಸು " ಎಂದು ಬೇಡಿಕೊಳ್ಳಬೇಕು.

೧೪೨. ಸೃಷ್ಟಿಯ ಆದಿಯಲ್ಲಿ ಲಕ್ಷ್ಮೀದೇವಿಯು ಮಹಾ ಪುಣ್ಯಕರವಾದ ಈ ಸ್ತೋತ್ರದಿಂದ ಶ್ರೀಮನ್ನಾರಾಯಣನನ್ನು ಸ್ತುತಿಸಿದಳು. ಸರಸ್ವತಿ, ಭೂದೇವಿ, ಗಂಗೆ ಮುಂತಾದ ದೇವಿಯರೂ ಕೂಡ ತಮ್ಮ ತಮ್ಮ ಪತಿಯನ್ನು ಈ ದಿವ್ಯ ಸ್ತೋತ್ರದಿಂದಲೇ ವಶಪಡಿಸಿಕೊಂಡರು.

೧೪೩. ಸಾವಿತ್ರೀದೇವಿಯೂ ಕೂಡ ಬ್ರಹ್ಮನನ್ನು ಪ್ರತಿದಿನವೂ ಈ ಸ್ತೋತ್ರದಿಂದಲೇ ಸ್ತುತಿಸುವಳು. ಪಾರ್ವತೀದೇವಿಯು ಕೈಲಾಸದಲ್ಲಿ ಭಕ್ತಿಪೂರ್ವಕವಾಗಿ ಈ ಸ್ತೋತ್ರದಿಂದಲೇ ಶಂಕರನನ್ನು ಸ್ತುತಿಸಿ ಮೆಚ್ಚಿಸಿದಳು.

೧೪೪. ದೇವತೆಗಳ ಪತ್ನಿಯರೂ, ಮುನಿಗಳ ಪತ್ನಿಯರೂ ಈ ಸ್ತೋತ್ರದಿಂದಲೇ ತಮ್ಮ ತಮ್ಮ ಪತಿದೇವರನ್ನು ಸ್ತುತಿಸುವರು. ಎಲ್ಲ ಪತಿವ್ರತಾಸ್ತ್ರೀಯರಿಗೂ ಈ ಸ್ತೋತ್ರವು ಶುಭಪ್ರದವಾದುದು.

೧೪೫. ಮಹಾಪುಣ್ಯಕರವಾದ ಈ ಸ್ತೋತ್ರವನ್ನು ಕೇಳುವ ಪತಿವ್ರತೆಯೇ ಆಗಲಿ, ಮನುಷ್ಯಸಾಮಾನ್ಯನೇ ಆಗಲಿ, ಇತರ ಸ್ತ್ರೀಯೇ ಆಗಲಿ, ತನ್ನ ಇಷ್ಟಾರ್ಥವನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

ಅಪುತ್ರೋ ಲಭತೇ ಪುತ್ರಂ ನಿರ್ಧನೋ ಲಭತೇ ಧನಂ ।
ರೋಗೀ ಚ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ॥೧೪೬॥

ಪತಿವ್ರತಾ ಚ ಸ್ತುತ್ವಾ ಚ ತೀರ್ಥಸ್ನಾನಫಲಂ ಲಭೇತ್ ।
ಫಲಂ ಚ ಸರ್ವತಪಸಾಂ ವ್ರತಾನಾಂ ಚ ವ್ರಜೇಶ್ವರ ॥ ೧೪೭ ॥

ಇದಂ ಸ್ತುತ್ವಾ ನಮಸ್ಕೃತ್ಯ ಭುಂಕ್ತೇ ಸಾ ತದನುಜ್ಞಯಾ ।
ಉಕ್ತಃ ಪತಿವ್ರತಾ ಧರ್ಮೋ ಗೃಹಿಣಾಂ ಶ್ರೂಯತಾಂ ವ್ರಜ ॥ ೧೪೮ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ಭಗವನ್ನಂದಸಂವಾದೇ
ತ್ರ್ಯಶೀತಿತಮೋಽಧ್ಯಾಯಃ

---

೧೪೬. ಮಕ್ಕಳಿಲ್ಲದವನಿಗೆ ಯೋಗ್ಯನಾದ ಮಗನು ಜನಿಸುವನು. ದರಿದ್ರನು ಧನವಂತನಾಗುವನು. ರೋಗಿಯು ರೋಗದಿಂದ ಮುಕ್ತನಾಗುವನು. ಬಂಧನಕ್ಕೊಳಗಾದವನು ಬಂಧನದಿಂದ ಬಿಡುಗಡೆ ಹೊಂದುವನು.

೧೪೭. ಪತಿವ್ರತೆಯು ಸ್ತೋತ್ರಮಾಡಿದರೆ ತೀರ್ಥಸ್ನಾನದ ಫಲವನ್ನು ಪಡೆಯುವಳು. ಎಲೈ ನಂದಗೋಪನೇ, ಸಕಲ ತಪಸ್ಸುಗಳ ಮತ್ತು ಪುಣ್ಯವ್ರತಗಳ ಫಲವನ್ನು ಆ ಪತಿವ್ರತೆಯು ಪಡೆಯುವುದರಲ್ಲಿ ಸಂಶಯವಿಲ್ಲ.

೧೪೮. ಈ ರೀತಿ ಸ್ತೋತ್ರಮಾಡಿ ಪತಿಗೆ ನಮಸ್ಕರಿಸಿ ಅವನ ಅನುಜ್ಞೆಪಡೆದು ಪತಿವ್ರತೆಯು ಊಟಮಾಡಬೇಕು. ಈ ರೀತಿಯಾಗಿ ಪತಿವ್ರತೆಯರ ಧರ್ಮವನ್ನು ವಿವರಿಸಿದ್ದಾಯಿತು. ಎಲೈ ನಂದಗೋಪನೇ, ಮುಂದೆ ಗೃಹಸ್ಥರ ಧರ್ಮವನ್ನು ವಿವರಿಸುವೆನು ಕೇಳು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ಶ್ರೀ ಕೃಷ್ಣ ಮತ್ತು ನಂದಗೋಪನ
ಸಂವಾದದಲ್ಲಿ ಎಂಭತ್ತಮೂರನೆಯ
ಅಧ್ಯಾಯವು ಮುಗಿದುದು.

## ಎಂಭತ್ತಮೂರನೆಯ ಅಧ್ಯಾಯದ ಸಾರಾಂಶ.



ನಂದಗೋಪನು ತನ್ನ ಪ್ರಿಯಪುತ್ರನಾದ ಕೃಷ್ಣನನ್ನು ಕುರಿತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗೆ ವೇದ ವಿಹಿತವಾದ ಧರ್ಮವಾವುದೆಂಬುದನ್ನೂ, ಯತಿ, ಬ್ರಹ್ಮಚಾರಿ, ವಿಧವೆ, ಪತಿವ್ರತೆ ಮತ್ತು ವಿಷ್ಣುಭಕ್ತರ ಧರ್ಮವಾವುದೆಂಬುದನ್ನೂ ವಿಶದಗೊಳಿಸಬೇಕೆಂದು ಕೇಳುವನು. ಆಗ ಶ್ರೀ ಕೃಷ್ಣಭಗವಂತನು ಈ ರೀತಿ ವಿವರಿಸುವನು. ಬ್ರಾಹ್ಮಣನಾದವನು ವೇದೋಕ್ತವಾದ ನಿತ್ಯಕರ್ಮಗಳನ್ನು ತಪ್ಪದೆ ಆಚರಿಸಿಕೊಂಡು ಶುದ್ಧವಾದ ಆಹಾರವನ್ನು ಸೇವಿಸಿಕೊಂಡು ವಿಷ್ಣುಭಕ್ತಿಯಲ್ಲಿ ನಿರತನಾಗಿರಬೇಕು. ಎಷ್ಟೇ ಕಷ್ಟಬಂದರೂ ಸಹ ಅವನು ಸ್ವಧರ್ಮವನ್ನು ಬಿಡಬಾರದು. ಅನನ್ಯಭಕ್ತಿಯಿಂದ ವಿಷ್ಣುವನ್ನು ತಪ್ಪದೆ ಪೂಜಿಸಿಕೊಂಡು ವಿಷ್ಣುವಿಗೆ ನಿವೇದಿಸಿದ ಅನ್ನವನ್ನು ತಿಂದುಕೊಂಡು ಸದಾಚಾರಪರನಾಗಿರುವ ಬ್ರಾಹ್ಮಣನು ಜೀವನ್ಮುಕ್ತನಾಗುವನು. ಕ್ಷತ್ರಿಯನಾದವನು ದೈವಭಕ್ತನೂ ಬ್ರಾಹ್ಮಣ ಭಕ್ತನೂ ಆಗಿರಬೇಕಲ್ಲದೆ ಪ್ರಜೆಗಳನ್ನು ಪುತ್ರವಾತ್ಸಲ್ಯದಿಂದ ಪೋಷಿಸುತ್ತಿರಬೇಕು. ವ್ಯಾಪಾರ, ವ್ಯವಸಾಯ ಮತ್ತು ಗೋರಕ್ಷಣೆ ವೈಶ್ಯರ ಧರ್ಮವಾಗಿರುವುದು. ಅವರು ಆ ಧರ್ಮವನ್ನು ನ್ಯಾಯವಿರೋಧವಿಲ್ಲದಂತೆ ಆಚರಿಸುತ್ತಿರಬೇಕು. ಶೂದ್ರರು ಬ್ರಾಹ್ಮಣರ ಸೇವೆಯಲ್ಲಿ ನಿರತರಾಗಿರಬೇಕು. ಬ್ರಾಹ್ಮಣರ ಧನವನ್ನು ಬಯಸುವ, ಮತ್ತು ಬ್ರಾಹ್ಮಣ ಸ್ತ್ರೀಯನ್ನು ಇಚ್ಛಿಸುವ ಶೂದ್ರನು ಮಹಾ ಪಾಪಕ್ಕೆ ಗುರಿಯಾಗಿ ಕುಂಭೀಪಾಕ ನರಕದಲ್ಲಿ ನರಳುವನು. ಸಂನ್ಯಾಸಿಯಾದವನು ಕಾಮಕ್ರೋಧಾದಿಗಳನ್ನು ತ್ಯಜಿಸಿ ಯದೃಚ್ಛಾಲಾಭಸಂತೃಪ್ತನಾಗಿ ನಿಷ್ಕಾಮನಾಗಿ ಧರ್ಮೋಪದೇಶ ಮಾಡಿಕೊಂಡು ಜೀವಿಸಬೇಕು. ಪತಿ ವಿಹೀನಳಾದ ಹೆಂಗಸು ಹವಿಷ್ಯಾನ್ನವನ್ನು ಮಾತ್ರ ಒಂದು ಹೊತ್ತು ಊಟಮಾಡಿಕೊಂಡು ಕಾಮರಹಿತಳಾಗಿ ಅಲಂಕಾರಗಳನ್ನು ತ್ಯಜಿಸಿ ದೈವಭಕ್ತಿಯನ್ನು ಪಡೆದು ಬಾಳಬೇಕು. ಪತಿವ್ರತೆಯಾದ ಹೆಂಗಸು ಪತಿಯನ್ನು ಛಾಯೆಯಂತೆ ಅನುಸರಿಸಿಕೊಂಡು ಪತಿಯೇ ಪರದೈವವೆಂದು ಭಾವಿಸಿ ಅವನ ಸೇವಾನಿರತಳಾಗಿರಬೇಕು. ಪತಿಸೇವಾ ಪರಾಯಣೆಯರಾದ ಪತಿವ್ರತೆಯರ ನಾಮಸ್ಮರಣೆಯೇ ಪುಣ್ಯಕರವಾದುದು. ವಿಷ್ಣುಭಕ್ತರು ಸಾಮವೇದೋಕ್ತರೀತಿಯಲ್ಲಿ ವಿಷ್ಣುವನ್ನು ಪೂಜಿಸಿ, ವಿಷ್ಣುವಿಗೆ ನಿವೇದಿಸಿದ ಅನ್ನವನ್ನು ಭುಜಿಸಿಕೊಂಡು ಸದ್ಧರ್ಮನಿರತರಾಗಿ ಬಾಳುವರು.



|| ಓಂ ||

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ
## ಶ್ರೀಕೃಷ್ಣಜನ್ಮಖಂಡೇ

---

### || ಚತುರಶೀತಿತಮೋಽಧ್ಯಾಯಃ ||

|| ಶ್ರೀ ಭಗವಾನುವಾಚ ||

ದ್ವಿಜದೇವಾರ್ಚನಂ ಚೈವ ಕರೋತಿ ಸತತಂ ಗೃಹೀ ।
ಸ್ವಧರ್ಮಾಚರಣಂ ಚೈವ ಚಾತುರ್ವರ್ಣ್ಯಂ ಚ ನಿತ್ಯಶಃ || ೧ ||

ಕುರ್ವಂತಿ ಗೃಹಿಣಾಮಾಶಾಂ ಸರ್ವೇ ದೇವಾದಯಸ್ತಥಾ ।
ಅಕೃತ್ವಾಽತಿಥಿಪೂಜಾಂ ಚ ಗೃಹಸ್ಥಶ್ಚ ಸದಾಽಶುಚಿಃ || ೨ ||

ಪಿತರಃ ಕರ್ಮಕಾಲೇ ಚಾತಿಥಿಕಾಲೇ ಚ ದೇವತಾಃ ।
ಸರ್ವೇ ಗೃಹಸ್ಥಮಾಯಾಂತಿ ನಿಪಾನಮಿವ ಧೇನವಃ || ೩ ||

---

### ಎಂಭತ್ತನಾಲ್ಕನೆಯ ಅಧ್ಯಾಯ.

೧. ಶ್ರೀ ಕೃಷ್ಣ:—ಗೃಹಸ್ಥನಾದವನು ಸರ್ವದಾ ಬ್ರಾಹ್ಮಣರ ಮತ್ತು ದೇವತೆಗಳ ಪೂಜೆಯಲ್ಲಿ ನಿರತನಾಗಿರಬೇಕು. ಇದು ಗ್ರಹಸ್ಥನ ಧರ್ಮವಾದುದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಲ್ಲರೂ ಈ ದ್ವಿಜದೇವಾರ್ಚನೆಯಲ್ಲಿ ಶ್ರದ್ಧಾವಂತರಾಗಿರಬೇಕು.

೨. ಸಕಲ ದೇವತೆಗಳೂ ಕೂಡ ಗೃಹಸ್ಥರಿಂದ ಪೂಜೆಯನ್ನು ನಿರೀಕ್ಷಿಸಿ ಕೊಂಡಿರುತ್ತಾರೆ. ಗೃಹಸ್ಥನಾದವನು ಅತಿಥಿಯನ್ನು ಪೂಜಿಸದಿದ್ದರೆ ಸರ್ವದಾ ಅಶುಚಿ ಎನಿಸುತ್ತಾನೆ.

೩. ಶ್ರಾದ್ಧಾದಿ ಕರ್ಮಕಾಲದಲ್ಲಿ ಪಿತೃಗಳೂ, ಅತಿಥಿ ಸತ್ಕಾರ ಸಮಯದಲ್ಲಿ ದೇವತೆಗಳೂ, ಗೃಹಸ್ಥನ ಮನೆಗೆ, ಹಸುಗಳು ನೀರು ತುಂಬಿರುವ ಕಟ್ಟೆಗೆ ಬರುವಂತೆ ಬರುತ್ತಾರೆ.

ಸಮಾಯಾತಿ ಪ್ರಯತ್ನೇನ ಸಾಯಾಽಹ್ನೇ ಕ್ಷುಧಿತೋಽತಿಥಿಃ ।
ಪೂಜಾಂ ಲಬ್ಧ್ವಾಽಶಿಷಂ ಕೃತ್ವಾ ಪ್ರಯಾತಿ ಗೃಹಿಣೋ ಗೃಹಾತ್ ॥ ೪ ॥

ಅಕೃತ್ವಾಽತಿಥಿಪೂಜಾಂ ಚ ಗೃಹೀ ಭವತಿ ಪಾತಕೀ ।
ತ್ರೈಲೋಕ್ಯಜನಿತಂ ಪಾಪಂ ಲಭತೇ ನಾತ್ರ ಸಂಶಯಃ ॥ ೫ ॥

ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ ।
ಪಿತರಸ್ತಸ್ಯ ದೇವಾಶ್ಚ ವಹ್ನಯಶ್ಚ ತಥೈವ ಚ ॥ ೬ ॥

ನಿರಾಶಾಃ ಪ್ರತಿಗಚ್ಛಂತಿ ಗೃಹಿಣೋಽತಿಥಯೋ ಗೃಹಾತ್ ।
ಸ್ತ್ರೀಘ್ನೈರ್ಗೋಘ್ನೈಃ ಕೃತಘ್ನೈಶ್ಚ ಬ್ರಾಹ್ಮಣೈರ್ಗುರುತಲ್ಪಗೈಃ ॥ ೭ ॥

ತುಲ್ಯದೋಷೋ ಭವತ್ಯೇವ ಯೇನಾತಿಥಿರನರ್ಚಿತಃ ।
ಸ್ವಾತ್ಮನಃ ಪಾತಕಂ ದತ್ವಾ ಪುಣ್ಯಮಾದಾಯ ಗಚ್ಛತಿ ॥ ೮ ॥

---

೪. ಸಾಯಂಕಾಲದ ಸಮಯದಲ್ಲಿ ಅತಿಥಿಯು ಹಸಿವಿನಿಂದ ಬಳಲಿ ಗೃಹಸ್ಥನ ಮನೆಗೆ ಬಂದಾಗ, ಅವನಿಗೆ ಯೋಗ್ಯ ಸತ್ಕಾರವು ಲಭಿಸಿದರೆ ಅವನು ಗೃಹಸ್ಥನನ್ನು ಮನಃಪೂರ್ವಕವಾಗಿ ಹರಸಿ ಅವನ ಮನೆಯಿಂದ ತೆರಳುವನು.

೫. ಗೃಹಸ್ಥನಾದವನು ಅತಿಥಿಯನ್ನು ಪೂಜಿಸದಿದ್ದರೆ ಮಹಾಪಾತಕಿಯಾಗುವನು. ಅವನಿಗೆ ಮೂರುಲೋಕದ ಮಹಾ ಪಾಪಗಳೂ ಸಂಘಟಿಸುವುದರಲ್ಲಿ ಸಂಶಯವಿಲ್ಲ.

೬–೮. ಯಾವ ಗೃಹಸ್ಥನ ಮನೆಯಿಂದ ನಿರಾಶನಾಗಿ ಅತಿಥಿಯು ಹಿಂತಿರುಗುವನೋ ಆ ಗೃಹಸ್ಥನ ಪಿತೃಗಳೂ, ದೇವತೆಗಳೂ, ತ್ರೇತಾಗ್ನಿಗಳೂ ನಿರಾಶರಾಗಿ ಅವನ ಮನೆಯಿಂದ ದೂರ ಹೋಗುವರು. ಅಷ್ಟೇ ಅಲ್ಲದೆ ಅವನ ಮನೆಗೆ ಪುನಃ ಅತಿಥಿಗಳೇ ಬರುವುದಿಲ್ಲ. ಅತಿಥಿಯನ್ನು ಪೂಜಿಸದ ಬ್ರಾಹ್ಮಣನು ಸ್ತ್ರೀಹತ್ಯೆ, ಗೋಹತ್ಯೆ, ಗುರುತಲ್ಪಗಮನ ಮುಂತಾದ ಮಹಾಪಾಪವನ್ನು ಮಾಡಿದವರ ಮತ್ತು ಕೃತಘ್ನರ ಪಾಪಕ್ಕೆ ಗುರಿಯಾಗುವುದರಲ್ಲಿ ಸಂಶಯವಿಲ್ಲ. ಆ ಅತಿಥಿಯು ತಾನು ಮಾಡಿದ ಪಾಪಗಳೆಲ್ಲವನ್ನೂ ಆ ಗೃಹಸ್ಥನಿಗೆ ಕೊಟ್ಟು ಪುಣ್ಯವನ್ನು ತೆಗೆದುಕೊಂಡು ಹೋಗುವನು.

ತಸ್ಮಾತ್ಕೃತ್ವಾ ಸರ್ವಸೇವಾಂ ದೇವಾದೀಂಶ್ಚ ಶುಭಾಶಯಃ ।
ಪೋಷ್ಯಾಣಾಂ ಭರಣಂ ಕೃತ್ವಾ ಪಶ್ಚಾದ್ಭುಂಕ್ತೇ ಸ ಧರ್ಮವಿತ್ ॥ ೯ ॥

ಯಸ್ಯ ಮಾತಾ ಗೃಹೇ ನಾಸ್ತಿ ಭಾರ್ಯಾ ಚ ಪುಂಶ್ಚಲೀ ತಥಾ ।
ಅರಣ್ಯಂ ತೇನ ಗಂತವ್ಯಮರಣ್ಯಾದ್ದುಃಖದಂ ಗೃಹಂ ॥ ೧೦ ॥

ಪತಿಂ ದ್ವೇಷ್ಟಿ ಸದಾ ದುಷ್ಟಾ ವಿಷತುಲ್ಯಂ ಚ ಪಶ್ಯತಿ ।
ದದಾತಿ ತಸ್ಮೈ ನಾಹಾರಂ ಭರ್ತ್ಸನಂ ಕುರುತೇ ಸದಾ ॥ ೧೧ ॥

ಪೂಜಿತಂ ಮುನಿತುಲ್ಯಂ ಚ ಸಾ ಚ ಪಾಪೀಯಸೀ ಪರಂ ।
ಸತತಂ ತೃಣವನ್ಮತ್ವಾ ನ್ಯಕ್ಕಾರಂ ಕುರುತೇ ಸದಾ ॥ ೧೨ ॥

ದುರ್ವಾಕ್ಯವಹ್ನಿನಾ ದಗ್ಧೋ ಮೃತತುಲ್ಯಶ್ಚ ಜೀವತಿ ।
ಯಾವಜ್ಜೀವನಪರ್ಯಂತಂ ಸಂಪ್ರಾಪ್ಯ ದುಷ್ಟವಂಶಜಾಂ ॥ ೧೩ ॥

---

೯. ಆದುದರಿಂದ ಶ್ರೇಯಸ್ಸನ್ನು ಬಯಸುವ ಗೃಹಸ್ಥನು ಅತಿಥಿಗಳ ಮತ್ತು ದೇವತೆಗಳ ಸೇವೆ ಮಾಡಿ, ತನ್ನ ಕುಟುಂಬ ವರ್ಗದವರ ಯೋಗಕ್ಷೇಮವನ್ನು ನೋಡಿ ಅನಂತರ ತಾನು ಊಟಮಾಡುವನು. ಇದೇ ಗೃಹಸ್ಥನ ಧರ್ಮ.

೧೦. ಯಾರಿಗೆ ಮನೆಯಲ್ಲಿ ತಾಯಿ ಇಲ್ಲವೋ, ಯಾವನ ಹೆಂಡತಿಯು ಸ್ವೇಚ್ಛಾವಿಹಾರಿಣಿಯಾಗಿರುವಳೋ ಅವನು ಅರಣ್ಯಕ್ಕೆ ಹೋಗುವುದು ಮೇಲು. ಅವನಿಗೆ ಕಾಡಿಗಿಂತ ಮನೆಯಲ್ಲಿಯೇ ದುಃಖ ಹೆಚ್ಚು.

೧೧–೧೨. ಯಾವ ಹೆಂಗಸು ದುಷ್ಟಳಾಗಿ ತನ್ನ ಪತಿಯನ್ನು ದ್ವೇಷಿಸುತ್ತ ಅವನನ್ನು ವಿಷಕ್ಕೆ ಸಮವಾಗಿ ಭಾವಿಸುವಳೋ, ಕಾಲಕ್ಕೆ ಸರಿಯಾಗಿ ಅವನಿಗೆ ಆಹಾರ ಕೊಡದೆ ಅವನನ್ನು ಬಯ್ಯುತ್ತಿರುವಳೋ, ಅವನನ್ನು ಹುಲ್ಲಿನಂತೆ ಕಡೆಗಣಿಸಿ ತಿರಸ್ಕರಿಸುತ್ತಿರುವಳೋ ಅವಳು ಮುನಿಸದೃಶನಾದ ತನ್ನ ಪತಿಗೆ ಸತ್ಕಾರ ಮಾಡದೆ ದ್ವೇಷಿಸಿದ ಪರಿಣಾಮವಾಗಿ ಮಹಾ ಪಾಪಕ್ಕೆ ಗುರಿಯಾಗುವಳು.

೧೩. ದುಷ್ಟವಂಶದಲ್ಲಿ ಹುಟ್ಟಿದ ಹೆಂಗಸನ್ನು ಮದುವೆಮಾಡಿಕೊಂಡ ಗಂಡಸು ಅವಳ ಕಟು ನುಡಿಗಳೆಂಬ ಬೆಂಕಿಯ ದಾಪಕ್ಕೆ ಸಿಲುಕಿ, ತಾನು ಬದುಕಿರುವವರೆಗೂ ತೇಜೋಹೀನನಾಗಿ ಬಾಳಬೇಕಾಗುವುದು.

ಗೃಹಿಣೀನಾಂ ಸದಾಚಾರಂ ಶ್ರೂಯತಾಂ ತಚ್ಛ್ರುತೌ ಶ್ರುತಂ ।
ಗೃಹಿಣೀ ಪತಿಭಕ್ತಾ ಚ ದೇವಬ್ರಾಹ್ಮಣಪೂಜಿತಾ ॥ ೧೪ ॥

ಸಾ ಶುದ್ಧಾ ಪ್ರಾತರುತ್ಥಾಯ ನಮಸ್ಕೃತ್ಯ ಪತಿಂ ಸುರಂ ।
ಪ್ರಾಂಗಣೇ ಮಂಗಲಂ ದದ್ಯಾದ್ಗೋಮಯೇನ ಜಲೇನ ಚ ॥ ೧೫ ॥

ಗೃಹಕೃತ್ಯಂ ಚ ಕೃತ್ವಾ ಚ ಸ್ನಾತ್ವಾऽऽಗತ್ಯ ಗೃಹಂ ಸತೀ ।
ಸುರಂ ವಿಪ್ರಂ ಪತಿಂ ನತ್ವಾ ಪೂಜಯೇತ್ ಗೃಹದೇವತಾಂ ॥ ೧೬ ॥

ಗೃಹಕೃತ್ಯಂ ಸುನಿರ್ವರ್ತ್ಯ ಭೋಜಯಿತ್ವಾ ಪತಿಂ ಸತೀ ।
ಅತಿಥಿಂ ಪೂಜಯಿತ್ವಾ ಚ ಸ್ವಯಂ ಭುಂಕ್ತೇ ಸುಖಂ ಸತೀ ॥ ೧೭ ॥

ಪುತ್ರೈಶ್ಚ ಪೂಜಿತಸ್ತಾತಃ ಶಿಷ್ಯೈಶ್ಚ ಪೂಜಿತೋ ಗುರುಃ ॥
ಆಜ್ಞಯಾ ಕುರುತೇ ಕರ್ಮ ಪುತ್ರಃ ಶಿಷ್ಯಶ್ಚ ಭೃತ್ಯವತ್ ॥ ೧೮ ॥

---

೧೪. ಈಗ ವೇದೋಕ್ತವಾದ, ಗೃಹಿಣಿಯರ ಸದಾಚಾರವನ್ನು ವಿವರಿಸುವೆನು ಯೋಗ್ಯಳಾದ ಗೃಹಿಣಿಯು ತನ್ನ ಪತಿಯಲ್ಲಿ ವಿಶೇಷವಾದ ಭಕ್ತಿಯನ್ನು ಇಟ್ಟಿರುವಳಲ್ಲದೆ ದೇವ ಬ್ರಾಹ್ಮಣರ ಪೂಜಕಳಾಗಿರುತ್ತಾಳೆ.

೧೫. ಗೃಹಿಣಿಯಾದವಳು ಬೆಳಗ್ಗೆ ಎದ್ದು ಪರಿಶುದ್ಧಳಾಗಿ ದೇವತಾಸ್ವರೂಪನಾದ ತನ್ನ ಪತಿಗೆ ನಮಸ್ಕರಿಸಿ, ಮನೆಯ ಅಂಗಳದಲ್ಲಿ ಸಗಣಿ ಮತ್ತು ನೀರಿನಿಂದ ಮಂಗಳಕರವಾದ ಗೋಮಯವನ್ನು ಹಚ್ಚಬೇಕು.

೧೬. ಮನೆಯ ಕೆಲಸಗಳನ್ನೆಲ್ಲ ಮಾಡಿಕೊಂಡು ಸ್ನಾನಮಾಡಿ ಪರಿಶುದ್ಧಳಾಗಿ ಮನೆಯೊಳಕ್ಕೆ ಬಂದು ದೇವತೆಗಳಿಗೂ, ಬ್ರಾಹ್ಮಣರಿಗೂ ಮತ್ತು ತನ್ನ ಪತಿಗೂ ನಮಸ್ಕರಿಸಿ ಗೃಹದೇವತೆಯನ್ನು ಪೂಜಿಸಬೇಕು.

೧೭. ಮನೆಯ ಕೆಲಸವನ್ನೆಲ್ಲ ಚೆನ್ನಾಗಿ ನಿರ್ವಹಿಸಿ, ತನ್ನ ಪತಿಗೆ ಊಟಮಾಡಿಸಿದವಳಾಗಿ, ಅತಿಥಿ ಸತ್ಕಾರ ಮಾಡಿ ಅನಂತರ ಪತಿವ್ರತೆಯು ತಾನು ಊಟಮಾಡತಕ್ಕದ್ದು.

೧೮. ತಂದೆಯು ಮಕ್ಕಳಿಂದ ಪೂಜಿತನಾಗುವನು. ಗುರುವು ಶಿಷ್ಯರಿಂದ ಪೂಜಿತನಾಗುವನು. ಮಗನು ತಂದೆಯ ಆಜ್ಞೆಯಂತೆಯೂ ಶಿಷ್ಯನು ಗುರುವಿನ ಆಜ್ಞೆಯಂತೆಯೂ ವರ್ತಿಸಿ ಅವರ ಸೇವೆಯಲ್ಲಿ ನಿರತನಾಗುವರು.

ನ ಪ್ರೇರಯೇದ್ಗುರುಂ ತಾತಂ ಪುತ್ರಃ ಶಿಷ್ಯಶ್ಚ ಕರ್ಮಸು ||
ಪಿತ್ರೇ ಚ ಗುರುವೇ ನಿತ್ಯಂ ಸರ್ವಸ್ವಂ ಚ ಸಮರ್ಪಯೇತ್ || ೧೯ ||

ನ ಕುರ್ಯಾನ್ನರಬುದ್ಧಿಂ ಚ ಗುರೌ ಪಿತರಿ ಸಂತತಂ ||
ಕೃತ್ವಾ ಚ ನರಬುದ್ಧಿಂ ಚ ಬ್ರಹ್ಮಹತ್ಯಾಂ ಲಭೇದ್ಧ್ರುವಂ || ೨೦ ||

ಮಾತರಂ ಪೂಜಯೇದ್ಭಕ್ತ್ಯಾ ಪಿತುಶ್ಚಾಪ್ಯಧಿಕಾಂ ತಥಾ ||
ಮಾತುಃ ಪರಂ ಗುರುಂ ಚೈವ ಪೂಜಯೇದ್ಭಕ್ತಿಯೋಗತಃ || ೨೧ ||

ಪಿತಾ ಮಾತಾ ಗುರುರ್ಭಾರ್ಯಾ ಶಿಷ್ಯಃ ಪುತ್ರಃ ಸದಾಽಕ್ಷಮಃ ||
ಅನಾಥಾ ಭಗಿನೀ ಕನ್ಯಾ ನಿತ್ಯಂ ಪೋಷ್ಯಾ ಗುರುಪ್ರಿಯಾ || ೨೨ ||

ಏವಂ ಚ ಕಥಿತಂ ತಾತ ಸರ್ವೇಷಾಂ ಧರ್ಮಮುತ್ತಮಂ ||
ಸ್ತ್ರೀಜಾತಿರ್ವಾಸ್ತವೀ ಶುದ್ಧಾ ತಾಶ್ಚ ಸರ್ವಾಃ ಪತಿವ್ರತಾಃ || ೨೩ ||

---

೧೯. ಮಗನು ತಂದೆಯನ್ನೂ ಶಿಷ್ಯನು ಗುರುವನ್ನೂ ಸಹ ಕೆಲಸ ಮಾಡಲು ಪ್ರೇರೇಪಿಸಬಾರದು. ಮಗನು ತಂದೆಗೂ, ಶಿಷ್ಯನು ಗುರುವಿಗೂ ಪ್ರತಿದಿನವೂ ತನ್ನ ಸರ್ವಸ್ವವನ್ನು ಸಮರ್ಪಿಸಬೇಕು.

೨೦. ಗುರು ಮತ್ತು ತಂದೆ ಇವರುಗಳನ್ನು ಸಾಮಾನ್ಯ ಮನುಷ್ಯರೆಂದು ಯಾವಾಗಲೂ ಭಾವಿಸಬಾರದು. ಹಾಗೆ ಒಂದು ವೇಳೆ ಅವರನ್ನು ಮನುಷ್ಯ ಸಾಮಾನ್ಯರೆಂದು ತಿಳಿದರೆ ಬ್ರಹ್ಮಹತ್ಯೆಮಾಡಿದ ಪಾಪಕ್ಕೆ ಗುರಿಯಾಗುವರು.

೨೧. ತಂದೆಗಿಂತಲೂ ಮೇಲೆನಿಸಿದ ತಾಯಿಯನ್ನು ಪೂಜಿಸಿ ಗೌರವಿಸಬೇಕು. ತಾಯಿಯನ್ನು ಪೂಜಿಸಿದನಂತರ ಗುರುವನ್ನು ಸಹ ಭಕ್ತಿಯಿಂದ ಪೂಜಿಸಬೇಕು.

೨೨. ತಂದೆ, ತಾಯಿ, ಗುರು, ಹೆಂಡತಿ, ಶಿಷ್ಯ, ಮಗ, ಅನಾಥಳಾದ ಸಹೋದರಿ, ಮಗಳು ಮತ್ತು ಗುರುಪತ್ನಿ ಇವರೆಲ್ಲರೂ ಪೋಷ್ಯವರ್ಗಕ್ಕೆ ಸೇರಿದವರು.

೨೩. ಎಲೈ ಪೂಜ್ಯನಾದ ತಂದೆಯೇ, ಈ ರೀತಿಯಾದ ಎಲ್ಲರ ಶ್ರೇಷ್ಠ ಧರ್ಮಗಳನ್ನು ವಿವರಿಸಿದ್ದೇನೆ. ಹೆಂಗಸು ಜಾತಿಯಲ್ಲಿ ವಾಸ್ತವವಾಗಿ ಶುದ್ಧಳಾಗಿ ಪತಿವ್ರತೆಯೆನಿಸಿಕೊಂಡಿದ್ದಳು.

ಸರ್ವಾ ಜಾತಿರೇಕವಿಧಾ ಚಾದೌ ಸೃಷ್ಟ್ವಾ ಚ ಬ್ರಹ್ಮಣಾ ॥
ತಾಃ ಸರ್ವಾಃ ಪ್ರಕೃತೇರಂಶಾಃ ಪವಿತ್ರಾಃ ಪಂಡಿತಾಧಿಕಾಃ ॥ ೨೪ ॥

ಕೇದಾರಕನ್ಯಾಶಾಪೇನ ಸ ಹಿ ಧರ್ಮಃ ಕ್ಷಯಂ ಗತಃ ॥
ತದಾ ಕೋಪೇನ ಧಾತ್ರಾ ಚ ಕೃತ್ಯಾಸ್ತ್ರೀ ಚ ವಿನಿರ್ಮಿತಾ ॥ ೨೫ ॥

ಕೃತ್ಯಾಸ್ತ್ರೀ ತ್ರಿವಿಧಾ ಜಾತಿರ್ಬ್ರಹ್ಮಣಾ ನಿರ್ಮಿತಾ ಪುರಾ ॥
ಉತ್ತಮಾ ಪ್ರಥಮಾ ಸಾ ಚ ಮಧ್ಯಮಾ ಚಾಧಮಾ ವ್ರಜ ॥ ೨೬ ॥

ಉತ್ತಮಾ ಪತಿಭಕ್ತಾ ಸಾ ಕಿಂಚಿದ್ಧರ್ಮಸಮನ್ವಿತಾ ॥
ಪ್ರಾಣಾಂತೇऽಪಿ ನ ಕುರುತೇ ತಂ ಜಾರಮಯಶಸ್ಕರಂ ॥ ೨೭ ॥

ಪೂಜಯೇತ್ಸಾ ಯಥಾಕಾಂತಂ ತಥಾ ದೇವದ್ವಿಜಾತಿಥೀನ್ ॥
ವ್ರತಾನಿ ಚೋಪವಾಸಾಂಶ್ಚ ಕುರುತೇ ಸರ್ವಪೂಜನಂ ॥ ೨೮ ॥

---

೨೪. ಆದಿಯಲ್ಲಿ ಬ್ರಹ್ಮದೇವನಿಂದ ಎಲ್ಲ ಸ್ತ್ರೀ ಜಾತಿಯೂ ಒಂದೇ ವಿಧವಾಗಿ ಸೃಷ್ಟಿಮಾಡಲ್ಪಟ್ಟಿತು. ಆದುದರಿಂದ ಸ್ತ್ರೀಯರಲ್ಲಿ ಪರಸ್ಪರ ಭೇದವಿರಲಿಲ್ಲ. ಸ್ತ್ರೀಯರೆಲ್ಲರೂ ಪ್ರಕೃತಿಯ ಅಂಶ ಸಂಭೂತರೂ ಪವಿತ್ರರೂ ಪಂಡಿತೆಯರೂ ಆಗಿದ್ದರು.

೨೫. ಕೇದಾರ ಕನ್ಯೆಯ ಶಾಪದಿಂದ ಸ್ತ್ರೀಯರ ಆ ಧರ್ಮವು ಕ್ಷೀಣ ಹೊಂದಿತು. ಆಗ ಕೋಪಗೊಂಡ ಬ್ರಹ್ಮನು 'ಕೃತ್ಯಾಸ್ತ್ರೀ' ಯನ್ನು ಸೃಷ್ಟಿಮಾಡಿದನು. ಆದ್ದರಿಂದ ಸ್ತ್ರೀಯರ ಜಾತಿಯಲ್ಲಿ ಗುಣದೋಷಗಳ ಅಂತರ ಉಂಟಾಯಿತು.

೨೬. 'ಕೃತ್ಯಾಸ್ತ್ರೀ' ಯರನ್ನು ಬ್ರಹ್ಮನು ಪೂರ್ವದಲ್ಲಿ ಮೂರು ವಿಧವಾಗಿ ಸೃಷ್ಟಿಮಾಡಿದನು. ಎಲೈ ನಂದಗೋಪನೇ, ಅವರಲ್ಲಿ ಮೊದಲನೆಯವರು ಉತ್ತಮರು. ಎರಡನೆಯವರು ಮಧ್ಯಮರು ಮತ್ತು ಮೂರನೆಯವರು ಅಧಮರೆನಿಸಿಕೊಳ್ಳುವರು.

೨೭. ಅವರಲ್ಲಿ ಉತ್ತಮ ಸ್ತ್ರೀಯು ಪತಿಯಲ್ಲಿ ಭಕ್ತಿಯನ್ನಿಟ್ಟವಳಾಗಿ ಧರ್ಮಾಚರಣೆಯಲ್ಲಿ ನಿರತಳಾಗಿರುತ್ತಾಳೆ. ತನ್ನ ಪ್ರಾಣ ಹೋಗುವಂತಾದರೂ ತನ್ನ ಪತಿಯು ಜಾರನಾಗುವುದಕ್ಕಾಗಲೀ, ದುಷ್ಕೀರ್ತಿಯುತನಾಗುವುದಕ್ಕಾಗಲೀ ಎಡೆ ಕೊಡುವುದಿಲ್ಲ.

೨೮. ಆ ಪತಿವ್ರತೆಯು ತನ್ನ ಪತಿಯನ್ನು ಪೂಜಿಸುವಂತೆಯೇ ದೇವತೆಗಳನ್ನೂ ಬ್ರಾಹ್ಮಣರನ್ನೂ ಮತ್ತು ಅತಿಥಿಗಳನ್ನೂ ಪೂಜಿಸುವಳು. ವ್ರತಗಳನ್ನೂ ಉಪವಾಸಗಳನ್ನೂ ಆಚರಿಸುವಳಲ್ಲದೆ ಗುರುಹಿರಿಯರನ್ನು ಗೌರವಿಸುವಳು.

ಗುರುಣಾ ರಕ್ಷಿತಾ ಯತ್ನಾತ್ ಜಾರಂ ಚ ನ ಭಜೇದ್ಭಯಾತ್ ||
ಸಾ ಕೃತ್ರಿಮಾ ಮಧ್ಯಮಾ ಚ ಯಥಾ ಕಿಂಚತ್ಪತಿಂ ಭಜೇತ್ || ೨೯ ||

ಸ್ಥಾನಂ ನಾಸ್ತಿ ಕ್ಷಣಂ ನಾಸ್ತಿ ನಾಸ್ತಿ ಪ್ರಾರ್ಥಯಿತಾ ನರಃ ||
ತೇನ ಹೇ ನಂದ ತಾಸಾಂ ಚ ಸತೀತ್ವಮುಪಜಾಯತೇ || ೩೦ ||

ಅಧಮಾ ಪರಮಾ ದುಷ್ಟಾ್ಯತ್ಯಂತಾ್ಯಸದ್ವಂಶಜಾ ತಥಾ ||
ಅಧರ್ಮಶೀಲಾ ದುಃಶೀಲಾ ದುರ್ಮುಖಾ ಕಲಹಾನ್ವಿತಾ || ೩೧ ||

ಪತಿಂ ಭರ್ತ್ಸಯತೇ ನಿತ್ಯಂ ಜಾರಂ ಚ ಸೇವತೇ ಸದಾ ||
ದುಃಖಂ ದದಾತಿ ಕಾಂತಾಯ ವಿಷತುಲ್ಯಂ ಚ ಪಶ್ಯತಿ || ೩೨ ||

ಜಾರದ್ವಾರಮುಪಾಯೇನ ಹಂತಿ ಕಾಂತಂ ಮನೋಹರಂ ||
ಧರ್ಮಿಷ್ಠಂ ಚ ವರಿಷ್ಠಂ ಚ ಗರಿಷ್ಠಂ ಚ ಮಹೀತಲೇ || ೩೩ ||

---

೨೯. ತಂದೆ ಅಥವಾ ಪತಿಯಿಂದ ಪ್ರಯತ್ನಪೂರ್ವಕವಾಗಿ ರಕ್ಷಿಸಲ್ಪಟ್ಟ ಅವರ ಭಯದಿಂದ ಯಾವಳು ಜಾರಪುರುಷನನ್ನು ಸೇರುವುದಿಲ್ಲವೋ ತನ್ನ ಪತಿಯನ್ನು ಮಾತ್ರ ಅರ್ಧ ಮನಸ್ಸಿನಿಂದ ಸೇವಿಸುವಳೋ ಅವಳು ಮಧ್ಯಮ ಜಾತಿಯ ಸ್ತ್ರೀ ಎನಿಸುವಳು.

೩೦. ಎಲೈ ನಂದಗೋಪನೇ, ಅಂಥ ಸ್ತ್ರೀಯರಿಗೆ ಏಕಾಂತವಾಸ ಮಾಡಲು ಅವಕಾಶ ಸಿಗದಿರುವುದರಿಂದಲೂ, ಕ್ಷಣಕಾಲ ಬಿಡುವು ಸಿಗದಿರುವುದರಿಂದಲೂ, ಕಾಮಿಸುವ ಪುರುಷನಿಲ್ಲದಿರುವುದರಿಂದಲೂ ಅವರ ಪಾತಿವ್ರತ್ಯವು ಉಳಿದುಕೊಂಡಿರುವುದು.

೩೧. ಅಧಮಸ್ತ್ರೀಯಾದರೋ ಕೆಟ್ಟವಂಶದಲ್ಲಿ ಹುಟ್ಟಿದವಳಾಗಿ, ಕೇವಲ ದುಷ್ಟಳಾಗಿರುತ್ತಾಳೆ. ಅಧರ್ಮ ಶೀಲಳೂ, ದುಷ್ಟಸ್ವಭಾವವುಳ್ಳವಳೂ ಆಗಿರುವಳಲ್ಲದೆ ಯಾವಾಗಲೂ ಕೆಟ್ಟಮಾತುಗಳನ್ನಾಡುತ್ತ ಜಗಳದಲ್ಲಿ ನಿರತಳಾಗಿರುವಳು.

೩೨. ಪ್ರತಿದಿನವೂ ತನ್ನ ಪತಿಯನ್ನು ಬಯ್ಯುತ್ತಾ ಜಾರನನ್ನು ಸೇವಿಸುತ್ತಿರುವಳು. ತನ್ನ ಪತಿಗೆ ದುಃಖವನ್ನುಂಟುಮಾಡುತ್ತಾ ಅವನನ್ನು ವಿಷದಂತೆ ಕಡೆಗಾಣಿಸುವಳು.

೩೩. ಅಷ್ಟೇ ಅಲ್ಲ. ತನ್ನ ಪತಿಯು ಎಷ್ಟೇ ಮನೋಹರನಾಗಿರಲಿ ಧರ್ಮಿಷ್ಠನಾಗಿರಲಿ, ಭೂಮಂಡಲದಲ್ಲಿ ಕೀರ್ತಿಯನ್ನು ಗಳಿಸಿರಲಿ ತನ್ನ ಉಪಪತಿಯ ಮೂಲಕ ಅವನನ್ನು ಕೊಲ್ಲಿಸುವಳು.

ಕಾಮದೇವಸಮಂ ಚಾಪಿ ಜಾರಂ ಪಶ್ಯತಿ ಕಾಮತಃ ॥
ಶುಭದೃಷ್ಟ್ಯಾ ಕಟಾಕ್ಷೇಣ ಶಶ್ವತ್ಪಾಪೀಯಸೀ ಮುದಾ ॥ ೩೪ ॥

ಸುವೇಷಂ ಪುರುಷಂ ದೃಷ್ಟ್ವಾ ಯುವಾನಂ ರತಿಶೂರಕಂ ॥
ಯೋನಿಃ ಕ್ಲಿದ್ಯತಿ ನಾರೀಣಾಂ ಕಾಮಿನೀನಾಂ ನಿರಂತರಂ ॥ ೩೫ ॥

ದದಾತಿ ಭರ್ತ್ರೇ ನಾಹಾರಂ ವಿಷೋಕ್ತಿಂ ವಕ್ತಿ ಸಂತತಂ ॥
ಅಧರ್ಮಂ ಚಿಂತಯೇಚ್ಛಶ್ವಜ್ಜಾರಂ ಚ ಪರಮಂ ಮುದಾ ॥ ೩೬ ॥

ಗುರುಭಿರ್ಭರ್ತ್ಸಿತಾ ಸಾ ಚ ರಕ್ಷಿತಾ ಚ ಶತೇನ ಚ ॥
ತಥಾಽಪಿ ಜಾರಂ ಕುರುತೇ ನಾಪಿ ಸಾಧ್ಯಾ ನೃಪೈರಪಿ ॥ ೩೭ ॥

ನಾಸ್ತಿ ತಸ್ಯಾಃ ಪ್ರಿಯಂ ಕಿಂಚಿತ್ಸರ್ವಂ ಕಾರ್ಯವಶೇನ ಚ ॥
ಗಾವಸ್ತೃಣಮಿವಾರಣ್ಯೇ ಪ್ರಾರ್ಥಯಂತಿ ನವಂ ನವಂ ॥ ೩೮ ॥

---

೩೪. ತನ್ನ ಪತಿಯು ಮನ್ಮಥನಂತಿದ್ದರೂ ಅವನನ್ನು ಕಡೆಗಣಿಸಿ ಪಾಪಿಯಾದ ಆ ಹೆಂಗಸು ಜಾರಪುರುಷನನ್ನು ಸರ್ವದಾ ಕಾಮಾಸಕ್ತಳಾಗಿ ನೋಡುತ್ತಿರುತ್ತಾಳೆ.

೩೫. ಕಾಮುಕಿಯರಾದ ಹೆಂಗಸರಿಗೆ ಸುವೇಷಭೂಷಿತನೂ, ಯುವಕನೂ, ರತಿಕ್ರೀಡಾನಿಪುಣನೂ ಆದ ಪುರುಷನನ್ನು ಕಂಡಾಗ ರತ್ಯಾಸಕ್ತಿ ಉಂಟಾಗುತ್ತದೆ.

೩೬. ಅವಳು ತನ್ನ ಪತಿಗೆ ಆಹಾರವನ್ನು ಕೊಡದೆ ಯಾವಾಗಲೂ ಕಟು ನುಡಿಯಾಡುತ್ತಿರುತ್ತಾಳೆ. ಅಧರ್ಮದಲ್ಲಿ ನಿರತನಾದ ಜಾರನನ್ನು ಪರಮ ಸಂತೋಷ ದಿಂದ ಸರ್ವದಾ ಭಜಿಸುವಳು.

೩೭. ಅವಳನ್ನು ಗುರುಹಿರಿಯರು ಬಯ್ಯುತ್ತಿದ್ದರೂ, ನೂರಾರು ಜನರು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದರೂ ಹೇಗೋ ಜಾರಪುರುಷನೊಡನೆ ಕೂಡುತ್ತಾಳೆ. ರಾಜರುಗಳು ಕೂಡ ಅವಳನ್ನು ದಾರಿಗೆ ತರಲಾಗುವುದಿಲ್ಲ.

೩೮. ಅವಳಿಗೆ ಸ್ವಾಭಾವಿಕವಾಗಿ ಪ್ರಿಯವಾದುದು ಯಾವುದೂ ಇಲ್ಲ. ಸಮಯ ಮತ್ತು ಕಾರ್ಯಾನುಗುಣವಾಗಿ ಎಲ್ಲವೂ ಪ್ರಿಯವಾಗುವುದು. ಹಸುಗಳು ಅರಣ್ಯದಲ್ಲಿ ಹೊಸ ಹೊಸ ಹುಲ್ಲನ್ನು ಬಯಸುವಂತೆ ಅವಳು ಬೇರೆ ಬೇರೆ ಪುರುಷ ನನ್ನು ಬಯಸುವಳು.

ವಿದ್ಯುದಾಭಾ ಜಲೇ ರೇಖಾ ತಸ್ಯಾಃ ಪ್ರೀತಿಸ್ತಥೈವ ಚ ।
ಅಧರ್ಮಯುಕ್ತಾ ಸತತಂ ಕಪಟಂ ವಕ್ತಿ ನಿಶ್ಚಿತಂ ॥ ೩೯ ॥

ವ್ರತೇ ತಪಸಿ ಧರ್ಮೇ ಚ ನ ಮನೋ ಗೃಹಕರ್ಮಣಿ ।
ನ ಗುರೌ ನ ಚ ದೇವೇಷು ಜಾರೇ ಸ್ನಿಗ್ಧಂ ಚ ಚಂಚಲಂ ॥ ೪೦ ॥

ಸ್ತ್ರೀಜಾತಿತ್ರಿವಿಧಾನಾಂ ಚ ಕಥಾ ಚ ಕಥಿತಾ ಮಯಾ ।
ಭಕ್ತಾನಾಂ ತ್ರಿವಿಧಾನಾಂ ಚ ಲಕ್ಷಣಂ ಶ್ರೂಯತಾಮಿತಿ ॥ ೪೧ ॥

ತೃಣಶಯ್ಯಾರತೋ ಭಕ್ತೋ ಮನ್ನಾಮಗುಣಕೀರ್ತಿಷು ।
ಮನೋ ನಿವೇಶಯೇತ್ತ್ಯಕ್ತ್ವಾ ಸಂಸಾರಸುಖಕಾರಣಂ ॥ ೪೨ ॥

ಧ್ಯಾಯತೇ ಮತ್ಪದಾಬ್ಜಂ ಚ ಪೂಜಯೇದ್ಭಕ್ತಿಭಾವತಃ ।
ಅಹೈತುಕೀಂ ತಸ್ಯ ದೇವಾಃ ಸಂಕಲ್ಪರಹಿತಸ್ಯ ಚ ॥ ೪೩ ॥

---

೩೯. ಮಿಂಚಿನ ಬಳ್ಳಿಯಂತೆ ಮತ್ತು ನೀರಮೇಲಿನ ಗೆರೆಯಂತೆ ಅವಳ ಪ್ರೀತಿಯು ಕ್ಷಣಿಕವಾದುದು. ಸರ್ವದಾ ಅಧರ್ಮನಿರತಳಾಗಿ ಕಪಟವಾದ ಮಾತುಗಳನ್ನೇ ಆಡುತ್ತಿರುತ್ತಾಳೆ.

೪೦. ವ್ರತ, ತಪಸ್ಸು, ಧರ್ಮ, ಇವುಗಳಲ್ಲಾಗಲೀ ಮನೆಗೆಲಸಗಳಲ್ಲಾಗಲೀ ಅವಳಿಗೆ ಮನಸ್ಸಿರುವುದಿಲ್ಲ. ಗುರುವಿನಲ್ಲಾಗಲೀ ದೇವರಲ್ಲಾಗಲೀ ಅವಳಿಗೆ ಭಕ್ತಿ ಇರುವುದಿಲ್ಲ. ಚಂಚಲವಾದ ಅವಳ ಮನಸ್ಸು ಜಾರಪುರುಷನಲ್ಲಿ ಸ್ನೇಹಯುತವಾಗಿರುವುದು.

೪೧. ಇದುವರೆವಿಗೆ ಮೂರುವಿಧ ಸ್ತ್ರೀಯರ ವಿಷಯವನ್ನು ತಿಳಿಸಿದುದಾಯಿತು. ಈಗ ಮೂರು ವಿಧ ಭಕ್ತರ ಲಕ್ಷಣವನ್ನು ವಿವರಿಸುವೆನು-ಸಾವಧಾನದಿಂದ ಕೇಳು.

೪೨. ಭಕ್ತನಾದವನು ಹುಲ್ಲನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗುವನು. ಸಂಸಾರದ ಸುಖಾಭಿಲಾಷೆಗಳನ್ನು ಬಿಟ್ಟು ನನ್ನ ದಿವ್ಯನಾಮ ಸಂಕೀರ್ತನದಲ್ಲೂ, ಗುಣಕೀರ್ತಿಗಳ ಗಾನದಲ್ಲೂ ಮನಸ್ಸನ್ನು ನೆಟ್ಟಿರುವನು.

೪೩. ಸಂಕಲ್ಪರಹಿತನಾಗಿ ನಿಷ್ಕಾರಣವಾದ ಭಕ್ತಿಯಿಂದ ನನ್ನ ಪಾದಕಮಲಗಳನ್ನು ಧ್ಯಾನಿಸುತ್ತಿರುವ ಭಕ್ತನನ್ನು ಕಂಡ ದೇವತೆಗಳೆಲ್ಲರೂ ಅಚ್ಚರಿಗೊಳ್ಳುವರು.

ಸರ್ವಸಿದ್ಧಿಂ ನ ವಾಂಛಂತಿ ತೇಽಣಿಮಾದಿಕಮೀಪ್ಸಿತಂ ।
ಬ್ರಹ್ಮತ್ವಮಮರತ್ವಂ ವಾ ಸುರತ್ವಂ ಸುಖಕಾರಣಂ ॥ ೪೪ ॥

ದಾಸ್ಯಂ ವಿನಾ ನಹೀಚ್ಛಂತಿ ಸಾಲೋಕ್ಯಾದಿ ಚತುಷ್ಟಯಂ ।
ನೈವ ನಿರ್ವಾಣಮುಕ್ತಿಂ ಚ ಸುಧಾಪಾನಮಭೀಪ್ಸಿತಂ ॥ ೪೫ ॥

ವಾಂಛಂತಿ ನಿಶ್ಚಲಾಂ ಭಕ್ತಿಂ ಮದೀಯಾಮತುಲಾಮಪಿ ।
ಸ್ತ್ರೀಪುಂವಿಭೇದೋ ನಾಸ್ತ್ಯೇವ ಸರ್ವಜೀವೇಷು ಭಿನ್ನತಾ ॥ ೪೬ ॥

ತೇಷಾಂ ಸಿದ್ಧೇಶ್ವರಾಣಾಂ ಚ ಪ್ರವರಾಣಾಂ ವ್ರಜೇಶ್ವರ ।
ಕ್ಷುತ್ಪಿಪಾಸಾದಿಕಂ ನಿದ್ರಾಲೋಭಮೋಹಾದಿಕಂ ರಿಪುಂ ॥ ೪೭ ॥

ತ್ಯಕ್ತ್ವಾ ದಿವಾನಿಶಂ ಮಾಂ ಚ ಧ್ಯಾಯಂತೇ ಚ ದಿಗಂಬರಾಃ ।
ಸ ಮದ್ಭಕ್ತತಮೋ ನಂದ ಶ್ರೂಯತಾಂ ಮಧ್ಯಮಾದಿಕಂ ॥ ೪೮ ॥

---

೪೪. ಆ ಭಕ್ತರು ಸಕಲ ಸಿದ್ಧಿಗಳನ್ನಾಗಲೀ, ಅಣಿಮಾದಿ ಅಷ್ಟಸಿದ್ಧಿಗಳನ್ನಾಗಲೀ ಅಥವಾ ಬ್ರಹ್ಮಸ್ವರೂಪವನ್ನಾಗಲೀ ಜರಾಮರಣವರ್ಜಿತವೂ, ಸುಖಕಾರಣವೂ ಆದ ದೇವತ್ವವನ್ನಾಗಲೀ ಬಯಸುವುದಿಲ್ಲ.

೪೫. ವಿಷ್ಣುವಿನ ದಾಸ್ಯವೊಂದನ್ನು ಬಿಟ್ಟು ಸಾಲೋಕ್ಯವೇ ಮುಂತಾದ ಮುಕ್ತಿಚತುಷ್ಟಯವನ್ನಾಗಲೀ, ನಿರ್ವಾಣ ಮುಕ್ತಿಯನ್ನೇ ಆಗಲೀ, ಎಲ್ಲರಿಗೂ ಅಭಿಮತವಾದ ಅಮೃತಪಾನವನ್ನೇ ಆಗಲೀ ಆ ಭಕ್ತರು ಬಯಸವುದಿಲ್ಲ.

೪೬. ನಿಶ್ಚಲವೂ ಅಸಮಾನವೂ ಆದ ನನ್ನಮೇಲಿನ ಭಕ್ತಿಯನ್ನು ಮಾತ್ರ ಭಕ್ತರು ಬಯಸುತ್ತಾರೆ.- ಎಲ್ಲ ಜೀವಿಗಳಲ್ಲಿ ಭಿನ್ನತೆ ಇದ್ದರೂ ಸಹ ಭಕ್ತರು ಸ್ತ್ರೀ ಪುರುಷ ದೇವತೆಗಳಲ್ಲಿ ಭೇದವೆಣಿಸುವುದಿಲ್ಲ.

೪೭–೪೮. ಎಲೈ ನಂದಗೋಪನೆ, ಸಿದ್ಧ ಪುರುಷರಾದ ಆ ಭಕ್ತಾಗ್ರೇಸರರು ಸ್ತ್ರೀದೇವತೆಯನ್ನಾಗಲೀ, ಪುರುಷದೇವತೆಯನ್ನಾಗಲೀ ಭಜಿಸುವರು. ಹಸಿವು, ಬಾಯಾರಿಕೆ ನಿದ್ದೆ. ಮೋಹ ಲೋಭ ಮುಂತಾದ ಶತ್ರುಗಳನ್ನು ತೊರೆದು ದಿಗಂಬರರಾಗಿ ಯಾರು ಹಗಲುರಾತ್ರಿ ನನ್ನನ್ನು ಧ್ಯಾನ ಮಾಡುತ್ತಿರುವರೋ ಅವರು ನನ್ನಭಕ್ತಾಗ್ರೇಸರರು. ಎಲೈ ನಂದಗೋಪನೇ ಭಕ್ತರಲ್ಲಿ ಮಧ್ಯಮನಾದವನ ಲಕ್ಷಣವನ್ನು ಹೇಳುವೆನು-ಕೇಳು.

ನಾಸಕ್ತಃ ಕರ್ಮಸು ಗೃಹೀ ಪೂರ್ವಪ್ರಾಕ್ತನತಃ ಶುಚಿಃ ।
ಕರೋತಿ ಸತತಂ ಕರ್ಮ ಪೂರ್ವಕರ್ಮನಿಕೃಂತನಂ ॥ ೪೯ ॥

ನ ಕರೋತ್ಯಪರಂ ಯತ್ನಾತ್ಸಂಕಲ್ಪರಹಿತಃ ಸ ಚ ।
ಸರ್ವಂ ಕೃಷ್ಣಸ್ಯ ಯತ್ಕಿಂಚಿನ್ನಾಹಂ ಕರ್ತಾ ಚ ಕರ್ಮಣಃ ॥ ೫೦ ॥

ಕರ್ಮಣಾ ಮನಸಾ ವಾಚಾ ಸತತಂ ಚಿಂತಯೇದಿತಿ ।
ನ್ಯೂನಭಕ್ತಶ್ಚ ತನ್ನ್ಯೂನಃ ಸ ಚ ಪ್ರಾಕೃತಿಕಃ ಶ್ರುತಾ ॥ ೫೧ ॥

ಯಮಂ ವಾ ಯಮದೂತಂ ವಾ ಸ್ವಪ್ನೇಽಪಿ ನ ಚ ಪಶ್ಯತಿ ।
ಪುರುಷಾಣಾಂ ಸಹಸ್ರಂ ಚ ಪೂರ್ವಭಕ್ತಃ ಸಮುದ್ಧರೇತ್ ॥ ೫೨ ॥

ಪುಂಸಾಂ ಶತಂ ಮಧ್ಯಮಶ್ಚ ತಚ್ಚತುರ್ಥಂ ಚ ಪ್ರಾಕೃತಃ ।
ಭಕ್ತಶ್ಚ ತ್ರಿವಿಧಸ್ತಾತ ಕಥಿತಶ್ಚ ತವಾಜ್ಞಯಾ ॥ ೫೩ ॥

---

೪೯-೫೧. ಗೃಹಸ್ಥನಾದ ಮಧ್ಯಮ ಭಕ್ತನು ಕರ್ಮದಲ್ಲಿ ವಿಶೇಷ ಆಸಕ್ತಿ ಇಲ್ಲದಿದ್ದರೂ ಜನ್ಮಾಂತರ ಸಂಸ್ಕಾರದಿಂದ ಪ್ರೇರಿತನಾಗಿ ಶುಚಿರ್ಭೂತನಾಗಿ ಯಾವಾಗಲೂ ಕರ್ಮನಿರತನಾಗಿರುವನು. ಸಂಕಲ್ಪರಹಿತನಾಗಿ " ಮಾಡಿದ ಕರ್ಮವೆಲ್ಲವೂ ಶ್ರೀ ಕೃಷ್ಣನಿಗೆ ಅರ್ಪಿತವಾಗಲಿ, ನಾನು ಕರ್ತೃವೂ ಅಲ್ಲ , ಭೋಕ್ತೃವೂ ಅಲ್ಲ " ಎಂಬ ಬುದ್ಧಿಯಿಂದ ಮಾಡದೆ ಕಾಯಾ, ವಾಚಾ, ಮನಸಾ, ಫಲವನ್ನು ಬಯಸುತ್ತಾ ಕರ್ಮದಲ್ಲಿ ತೊಡಗುವನು. ಆದುದರಿಂದಲೇ ಅವನು ಕರ್ಮಫಲ ಭೋಗದಿಂದ ಮುಕ್ತನಾಗುವುದಿಲ್ಲ. ಹೀನ ಭಕ್ತನು ಕರ್ಮವನ್ನು ತ್ಯಜಿಸಿ ಕೇವಲ ಬಾಹ್ಯಾಡಂಬರವುಳ್ಳವನಾಗಿ ಪ್ರಾಕೃತಿಕನೆನಿಸುವನು.

೫೨. ಉತ್ತಮನಾದ ಭಕ್ತನು ಯಮನನ್ನಾಗಲೀ ಯಮದೂತರನ್ನಾಗಲೀ ಕನಸಿನಲ್ಲಿಯೂ ಕಾಣುವುದಿಲ್ಲ. ಅವನು ಅಚಲವಾದ ತನ್ನ ಭಕ್ತಿಯ ಪ್ರಭಾವದಿಂದ ತನ್ನ ವಂಶದ ಸಾವಿರಾರು ಪುರುಷರನ್ನು ಉದ್ಧಾರ ಮಾಡುವನು.

೫೩. ಮಧ್ಯಮನಾದ ಭಕ್ತನು ತನ್ನ ವಂಶದ ನೂರು ಪುರುಷರನ್ನೂ, ಪ್ರಾಕೃತ ಭಕ್ತನು ಅದರಲ್ಲಿ ನಾಲ್ಕನೆಯ ಒಂದು ಪಾಲು ಪುರುಷರನ್ನೂ ಉದ್ಧರಿಸುವನು. ಎಲೈ ತಂದೆಯೇ, ನಿನ್ನ ಆಜ್ಞೆಯಂತೆ ಮೂರು ವಿಧ ಭಕ್ತರ ಲಕ್ಷಣವನ್ನು ತಿಳಿಸಿದುದಾಯಿತು.

ಬ್ರಹ್ಮಾಂಡರಚನಾಖ್ಯಾನಂ ಶ್ರೂಯತಾಂ ಸಾವಧಾನತಃ ।
ಬ್ರಹ್ಮಾಂಡರಚನಾರ್ಥಂ ಚ ಭಕ್ತಾ ಜಾನಂತಿ ಯತ್ನತಃ ॥ ೫೪ ॥

ಮುನಯಶ್ಚ ಸುರಾಃ ಸಂತಃ ಕಿಂಚಿಜ್ಜಾನಂತಿ ದುಃಖತಃ ।
ಜಾನಾಮಿ ವಿಶ್ವಂ ಸರ್ವಾರ್ಥಂ ಬ್ರಹ್ಮಾಽನಂತೋ ಮಹೇಶ್ವರಃ ॥ ೫೫ ॥

ಧರ್ಮಃ ಸನತ್ಕುಮಾರಶ್ಚ ನರನಾರಾಯಣಾವೃಷೀ ।
ಕಪಿಲಶ್ಚ ಗಣೇಶಶ್ಚ ದುರ್ಗಾ ಲಕ್ಷ್ಮೀಃ ಸರಸ್ವತೀ ॥ ೫೬ ॥

ವೇದಾಶ್ಚ ವೇದಮಾತಾ ಚ ಸರ್ವಜ್ಞಾ ರಾಧಿಕಾ ಸ್ವಯಂ ।
ಏತೇ ಜಾನಂತಿ ವಿಶ್ವಾರ್ಥಂ ನಾನ್ಯೋ ಜಾನಾತಿ ಕಶ್ಚನ ॥ ೫೭ ॥

ವೈಶಮ್ಯಾರ್ಥಂ ಚ ಸುಧಿಯಃ ಸರ್ವೇ ವಿಜ್ಞಾತುಮುಕ್ಷಮಾಃ ।
ನಿತ್ಯಾಕಾಶೋ ಯಥಾಽಽತ್ಮಾ ಚ ತಥಾ ನಿತ್ಯಾ ದಿಶೋ ದಶ ॥ ೫೮ ॥

---

೫೪. ಬ್ರಹ್ಮಾಂಡ ಸೃಷ್ಟಿಯ ಕಥೆಯನ್ನು ಈಗ ಸಾವಧಾನದಿಂದ ಕೇಳು. ಬ್ರಹ್ಮಾಂಡ ಸೃಷ್ಟಿಯ ಉದ್ದೇಶವನ್ನು ಭಕ್ತರು ಪ್ರಯತ್ನ ಪೂರ್ವಕವಾಗಿ ಅರಿತುಕೊಳ್ಳುತ್ತಾರೆ.

೫೫–೫೬. ಮುನಿಗಳು, ದೇವತೆಗಳು. ಸಾಧುಗಳು ಕಷ್ಟಪಟ್ಟು ಸೃಷ್ಟಿಯ ಉದ್ದೇಶಗಳಲ್ಲಿ ಕೆಲವನ್ನು ತಿಳಿದು ಕೊಳ್ಳುತ್ತಾರೆ. ನಾನು ವಿಶ್ವ ಸೃಷ್ಟಿಯ ಪೂರ್ಣ ಉದ್ದೇಶವನ್ನು ಅರಿತಿದ್ದೇನೆ. ಬ್ರಹ್ಮ. ವಿಷ್ಣು, ಮಹೇಶ್ವರರೂ, ಧರ್ಮದೇವ, ಸನತ್ಕುಮಾರರೂ ನರನಾರಾಯಣ ಋಷಿಗಳೂ. ಕಪಿಲನೂ, ಗಣೇಶನೂ, ದುರ್ಗಿ. ಲಕ್ಷ್ಮಿ ಮತ್ತು ಸರಸ್ವತಿದೇವಿಯರೂ ಸೃಷ್ಟಿಯ ರಹಸ್ಯವನ್ನು ಅರಿತಿದ್ದಾರೆ.

೫೭. ವೇದವೂ. ವೇದಮಾತೆಯೂ ಸರ್ವಜ್ಞಳೂ ಆದ ರಾಧಿಕಾದೇವಿಯೂ ಮೇಲೆ ಹೇಳಿದವರೆಲ್ಲರೂ ವಿಶ್ವಸೃಷ್ಟಿಯ ಉದ್ದೇಶವನ್ನು ತಿಳಿದಿದ್ದಾರೆ. ಮತ್ತಾರಿಗೂ ಇದರ ರಹಸ್ಯವು ತಿಳಿದಿಲ್ಲ.

೫೮. ಎಲ್ಲ ವಿದ್ವಾಂಸರೂ ಸೃಷ್ಟಿಯ ವೈಷಮ್ಯದ ತಿರುಳನ್ನು ತಿಳಿಯಲು ಸಮರ್ಥರಾಗಿದ್ದಾರೆ. ಆತ್ಮವು ನಿತ್ಯವಾಗಿರುವಂತೆ ಆಕಾಶ ಮತ್ತು ದಶದಿಕ್ಕುಗಳೂ ನಿತ್ಯವಾದುವು.

ಯಥಾ ನಿತ್ಯಾ ಚ ಪ್ರಕೃತಿಸ್ತಥೈವ ವಿಶ್ವಗೋಲಕಃ ।
ಗೋಲೋಕಶ್ಚ ಯಥಾ ನಿತ್ಯಸ್ತಥಾ ವೈಕುಂಠ ಏವ ಚ　　॥ ೫೯ ॥

ಏಕದಾ ಮಯಿ ಗೋಲೋಕೇ ರಾಸೇ ನಿತ್ಯಂ ಪ್ರಕುರ್ವತಿ ।
ಆವಿರ್ಭೂತಾ ಚ ವಾಮಾಂಗಾದ್ಬಾಲಾ ಷೋಡಶವಾರ್ಷಿಕೀ　　॥ ೬೦ ॥

ಶ್ವೇತಚಂಪಕವರ್ಣಾಭಾ ಶರಚ್ಚಂದ್ರಸಮಪ್ರಭಾ ।
ಅತೀವ ಸುಂದರೀ ರಾಮಾ ರಮಣೀನಾಂ ಪರಾವರಾ　　॥ ೬೧ ॥

ಈಷದ್ಧಾಸ್ಯಪ್ರಸನ್ನಾಸ್ಯಾ ಕೋಮಲಾಂಗೀ ಮನೋಹರಾ ।
ವಹ್ನಿಶುದ್ಧಾಂಶುಕಾಧಾನಾ ರತ್ನಾಭರಣಭೂಷಿತಾ　　॥ ೬೨ ॥

ಯಥಾ ಜಲದಪಂಕ್ತಿಶ್ಚ ಬಲಾಕಾಭಿರ್ವಿಭೂಷಿತಾ ।
ಸಿಂದೂರಬಿಂದುನಾ ಚಾರುಚಂದ್ರಚಂದನಬಿಂದುಭಿಃ　　॥ ೬೩ ॥

---

೫೯. ಪ್ರಕೃತಿಯು ನಿತ್ಯವಾಗಿರುವಂತೆ ಬ್ರಹ್ಮಾಂಡ ಗೋಳವೂ ನಿತ್ಯವಾದುದು. ವಿಶ್ವಗೋಳಕವು ನಿತ್ಯವಾಗಿರುವಂತೆ ವೈಕುಂಠವೂ ಸಹ ನಿತ್ಯವಾದುದು.

೬೦. ಒಮ್ಮೆ ನಾನು ಗೋಲೋಕದಲ್ಲಿ ರಾಸಕ್ರೀಡೆಯಲ್ಲಿ ನಿರತನಾಗಿದ್ದಾಗ ನನ್ನ ಶರೀರದ ಎಡಭಾಗದಿಂದ ಹದಿನಾರು ವರ್ಷದ ಪ್ರಾಯವುಳ್ಳ ಬಾಲಿಕೆಯೊಬ್ಬಳು ಅವತರಿಸಿದಳು.

೬೧. ಬಿಳುಪಾದ ಸಂಪಿಗೆಯ ವರ್ಣದವಳೂ, ಶರದೃತುವಿನ ಚಂದ್ರನಂತೆ ಕಾಂತಿಯುತಳೂ ಆದ ಆ ಬಾಲೆಯು ಅತ್ಯಂತ ಸುಂದರಿಯಾಗಿದ್ದು ಸ್ತ್ರೀಯರಲ್ಲೆಲ್ಲಾ ಶ್ರೇಷ್ಠಳೆನಿಸಿದ್ದಳು.

೬೨. ಮಂದಸ್ಮಿತವದನಳೂ, ಕೋಮಲಾಂಗಿಯೂ, ಮನೋಹರಳೂ ಆದ ಆ ಕುಮಾರಿಯು ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನು ಧರಿಸಿ ರತ್ನಾಭರಣಗಳಿಂದ ಅಲಂಕೃತಳಾಗಿದ್ದಳು.

೬೩. ಹಾಲು ಹಕ್ಕಿಗಳಿಂದ ಪರಿವೃತವಾದ ಮೇಘ ಪಂಕ್ತಿಯಂತೆ ಶೋಭಿತಳಾದ ಆಕೆಯು ಸಿಂದೂರದ ಬೊಟ್ಟನ್ನು ಹಣೆಯಲ್ಲಿಟ್ಟು ಅದರ ಸುತ್ತ ಮನೋಹರವಾದ ಚಂದನ ಗಂಧದ ಬೊಟ್ಟುಗಳಿಂದ ಅಲಂಕೃತಳಾಗಿದ್ದಳು.

ಕಸ್ತೂರೀ ಬಿಂದುಭಿಃ ಸಾರ್ಧಂ ಸೀಮಂತಾಧಃಸ್ಥಲೋಜ್ಜ್ವಲಾ ।
ಅಮೂಲ್ಯರತ್ನನಿರ್ಮಾಣಸುಸ್ನಿಗ್ಧಕಿರಣೋಜ್ಜ್ವಲಾ ॥ ೬೪ ॥

ರತ್ನಕುಂಡಲಯುಗ್ಮೇನ ಗಂಡಸ್ಥಲಸಮುಜ್ಜ್ವಲಾ ।
ಕುಂಕುಮಾಲಕ್ತಕಸ್ತೂರೀ ಚಾರುಚಂದನಪತ್ರಕೈಃ ॥ ೬೫ ॥

ವಿಚಿತ್ರೈಶ್ಚ ಸುಚಿತ್ರೈಶ್ಚ ಸುಕಪೋಲಸ್ಥಲೋಜ್ಜ್ವಲಾ ।
ಖಗೇಂದ್ರಚಂಚುವಿಜಿತನಾಸಾಮೌಕ್ತಿಕಶೋಭಿತಾ ॥ ೬೬ ॥

ಗಜೇಂದ್ರಗಂಡನಿರ್ಮುಕ್ತ ಮುಕ್ತಾಭೂಷಣಭೂಷಿತಾ ।
ಶುಕ್ತ್ಯಾ ವಿಮುಕ್ತಮುಕ್ತಾಭದಂತಪಂಕ್ತಿಮನೋಹರಾ ॥ ೬೭ ॥

ವಲಿತಾಕಲಿತಾಽತೀವ ಪಕ್ವಬಿಂಬಾಧರಾ ವರಾ ।
ಶಶ್ವತ್ಪೂರ್ಣೇಂದುನಿಂದಾಸ್ಯಾ ಪದ್ಮನಿಂದಿತಲೋಚನಾ ॥ ೬೮ ॥

---

೬೪. ಬೈತಲೆಯ ಕೆಳಭಾಗದಲ್ಲಿ ಶೋಭಾಯಮಾನವಾದ ಕಸ್ತೂರೀತಿಲಕವನ್ನು ಧರಿಸಿ ಅಮೂಲ್ಯರತ್ನಗಳಿಂದ ನಿರ್ಮಿತವಾದ ಸೀಮಂತ ಮಣಿಗಳನ್ನು ಧರಿಸಿದ್ದಳು.

೬೫. ಕಪೋಲಗಳಿಗೆ ಹೊಳಪನ್ನು ಕೊಡುವ ಎರಡು ರತ್ನಕುಂಡಲಗಳನ್ನು ಧರಿಸಿ ಕುಂಕುಮ, ಅರಗು. ಕಸ್ತೂರಿ ಮತ್ತು ಚಂದನಗಳಿಂದ ಪತ್ರರೇಖೆಗಳನ್ನು ರಚಿಸಿಕೊಂಡಿದ್ದಳು.

೬೬. ಕಪೋಲಗಳಲ್ಲಿ ಶೋಭಿಸುತ್ತಿದ್ದ ಆ ರೇಖಾಚಿತ್ರಗಳು ಅತಿ ವಿಚಿತ್ರವಾಗಿದ್ದವು. ಪಕ್ಷಿರಾಜನಾದ ಗರುಡನ ಕೊಕ್ಕನ್ನು ತಿರಸ್ಕರಿಸುವ ಮೂಗಿನಲ್ಲಿ ಉಜ್ಜ್ವಲವಾದ ಮುತ್ತಿನ ಬುಲಾಕೊಂದನ್ನು ಧರಿಸಿದ್ದಳು.

೬೭. ಆನೆಯ ಕುಂಭಸ್ಥಳದಿಂದ ಹೊರಬಂದ ಮುತ್ತಿನ ಆಭರಣಗಳಿಂದ ಅಲಂಕೃತಳಾಗಿ, ಕಪ್ಪೆಚಿಪ್ಪಿನಿಂದ ಹೊರಬಂದ ಮುತ್ತಿನ ಸಾಲಿನಂತೆ ಮನೋಹರವಾದ ದಂತ ಪಂಕ್ತಿಗಳಿಂದ ಶೋಭಿಸುತ್ತಿದ್ದಳು.

೬೮. ಪಕ್ವವಾದ ತೊಂಡೆಹಣ್ಣಿನಂತೆ ಶೋಭಿಸುತ್ತಿದ್ದ ಕೆಳತುಟಿಯುಳ್ಳ ಆ ದೇವಿಯು ಶರದೃತುವಿನ ಪೂರ್ಣಿಮಾಚಂದ್ರನನ್ನು ನಿಂದಿಸುವ ಮುಖದಿಂದಲೂ. ತಾವರೆಯನ್ನು ಅಲ್ಲಗಳೆಯುವ ಕಣ್ಣುಗಳಿಂದಲೂ ಮನೋಹರಳಾಗಿದ್ದಳು.

ಕೃಷ್ಣಸಾರನಿಭೋದ್ಭಿನ್ನಸುಚಾರುಕಜ್ಜಲೋಜ್ಜ್ವಲಾ ।
ಅಮೂಲ್ಯರತ್ನನಿರ್ಮಾಣಕೇಯೂರಕಂಕಣೋಜ್ಜ್ವಲಾ ॥ ೬೯ ॥

ಮಣೀಂದ್ರರಾಜಿರಾಜೀಭಿಃ ಶಂಖಯುಗ್ಮಕರೋಜ್ಜ್ವಲಾ ।
ರತ್ನಾಂಗುಲೀಯಕೈರೇಭಿರವ್ಯಾಪ್ತಾಂಗುಲಿಭೂಷಿತಾ ॥ ೭೦ ॥

ರತ್ನೇಂದ್ರರಾಜರಾಜೇನ ಕ್ವಣನ್ಮಂಜೀರರಂಜಿತಾ ।
ರತ್ನಪಾಶಕರಾಜೀಭಿಃ ಪಾದಾಂಗುಲಿವಿರಾಜಿತಾ ॥ ೭೧ ॥

ಸುಂದರಾಲಕ್ತರಾಗೇಣ ಚರಣಾಧಃಸ್ಥಲೋಜ್ಜ್ವಲಾ ।
ಗಜೇಂದ್ರಗಾಮಿನೀ ರಾಮಾ ಕಾಮಿನೀ ವಾಮಲೋಚನಾ ॥ ೭೨ ॥

ಮಾಂ ದದರ್ಶ ಕಟಾಕ್ಷೇಣ ರಮಣೀ ರಮಣೋತ್ಸುಕಾ ।
ರಾಸೇ ಸಂಭೂಯ ರಾಮಾ ಸಾ ದಧಾರ ಪುರತೋ ಮಮ ॥ ೭೩ ॥

---

೬೯. ಜಿಂಕೆಯ ಕಪ್ಪು ಚರ್ಮದಂತಿರುವ ಕಾಡಿಗೆಯನ್ನು ಕಣ್ಣಿಗೆ ಹಚ್ಚಿಕೊಂಡು ಅಮೂಲ್ಯ ರತ್ನಗಳನ್ನು ಮೆಟ್ಟಿರುವ ಭುಜಕೀರ್ತಿ ಮತ್ತು ಬಳೆಗಳಿಂದ ಶೋಭಿಸುತ್ತಿದ್ದಳು.

೭೦. ಕೈಯಲ್ಲಿ ಶ್ರೇಷ್ಠಮಣಿಗಳಿಂದ ನಿರ್ಮಿತವಾದ ಆಭರಣಗಳನ್ನೂ ಶಂಖಾಭರಣಗಳನ್ನೂ ಧರಿಸಿ ಬೆರಳುಗಳಿಗೆ ರತ್ನದ ಉಂಗುರಗಳನ್ನಿಟ್ಟು ಶೋಭಿಸುತ್ತಿದ್ದಳು.

೭೧. ಶ್ರೇಷ್ಠವಾದ ರತ್ನಗಳಿಂದ ಕೂಡಿ ಧ್ವನಿಗೈಯ್ಯುತ್ತಿದ್ದ ಕಾಲ್ಗೊಲಸುಗಳಿಂದಲೂ ಕಾಲ್ಬೆರಳುಗಳಿಗೆ ಅಲಂಕರಿಸಲ್ಪಟ್ಟ ರತ್ನನಿರ್ಮಿತವಾದ ಜೋಡುಂಗುರಗಳಿಂದಲೂ ಆ ದೇವಿಯು ಮನೋಹರಳಾಗಿದ್ದಳು.

೭೨. ಅಂಗಾಲುಗಳಿಗೆ ಸುಂದರವಾದ ಅರಗಿನ ರಸವನ್ನು ಲೇಪಿಸಿಕೊಂಡಿದ್ದ ಆ ಸುಂದರಿಯು ಆನೆಯಂತೆ ಮಂದಗಮನೆಯಾಗಿದ್ದಳು. ಆ ಕಾಮಿನಿಯ ದೃಷ್ಟಿಯು ಮನೋಹರವಾಗಿತ್ತು.

೭೩. ಆ ರಮಣಿಯು ರತಿಕ್ರೀಡೆಯಲ್ಲಿ ಉತ್ಸುಕಳಾಗಿ ನನ್ನನ್ನು ತನ್ನ ಕಟಾಕ್ಷದಿಂದ ನೋಡುತ್ತಿದ್ದಳು. ರಾಸಮಂಡಲದಲ್ಲಿ ಆವಿರ್ಭವಿಸಿದ ಆ ಸುಂದರಿಯು ನನ್ನ ಮುಂದೆ ಧಾವಿಸಿ ಬಂದು ನಿಂತಳು.

ತೇನ ರಾಧಾ ಸಮಾಖ್ಯಾತಾ ಪುರಾವಿದ್ಭಿಃ ಪ್ರಪೂಜಿತಾ ।
ಪ್ರಹೃಷ್ಟಾ ಪ್ರಕೃತಿಶ್ಚಾಸ್ಯಾಸ್ತೇನ ಪ್ರಕೃತಿರೀಶ್ವರೀ ॥ ೭೪ ॥

ಶಕ್ತಾ ಸ್ಯಾತ್ಸರ್ವಕಾರ್ಯೇಷು ತೇನ ಶಕ್ತಿಃ ಪ್ರಕೀರ್ತಿತಾ ।
ಸರ್ವಾಧಾರಾ ಸರ್ವರೂಪಾ ಮಂಗಲಾರ್ಹಾ ಚ ಸರ್ವತಃ ॥ ೭೫ ॥

ಸರ್ವಮಂಗಲದಕ್ಷಾ ಸಾ ತೇನ ಸ್ಯಾತ್ಸರ್ವಮಂಗಲಾ ।
ವೈಕುಂಠೇ ಸಾ ಮಹಾಲಕ್ಷ್ಮೀರ್ಮೂರ್ತಿಭೇದೇ ಸರಸ್ವತೀ ॥ ೭೬ ॥

ಪ್ರಸೂಯ ವೇದಾನ್ವಿದಿತಾ ವೇದಮಾತಾ ಚ ಸಾ ಸದಾ ।
ಸಾವಿತ್ರೀ ಸಾ ಚ ಗಾಯತ್ರೀ ಧಾತ್ರೀ ತ್ರಿಜಗತಾಮಪಿ ॥ ೭೭ ॥

ಪುರಾ ಸಂಹೃತ್ಯ ದುರ್ಗಂ ಚ ಸಾ ದುರ್ಗಾ ಚ ಪ್ರಕೀರ್ತಿತಾ ।
ತೇಜಸಃ ಸರ್ವದೇವಾನಾಮಾವಿರ್ಭೂತಾ ಪುರಾ ಸತೀ ॥ ೭೮ ॥

---

೭೪. ಆದುದರಿಂದ ಪುರಾತನ ಪಂಡಿತರು ಅವಳನ್ನು ರಾಧಾ ಎಂದು ಕರೆದರು. ಆ ದೇವಿಯ ಪ್ರಕೃತಿಯು ಸರ್ವದಾ ಸಂತಸಗೊಂಡಿದ್ದರಿಂದ ಅವಳನ್ನೇ ಸರ್ವೇಶ್ವರಿಯಾದ ಪ್ರಕೃತಿ ಎನ್ನುವರು.

೭೫. ಆ ದೇವಿಯು ಸೃಷ್ಟಿಸ್ಥಿತಿಲಯ ಕಾರ್ಯಗಳಲ್ಲಿ ಶಕ್ತಳಾದುದರಿಂದ 'ಶಕ್ತಿ' ಎನಿಸಿಕೊಳ್ಳುವಳು. ಸಕಲಕ್ಕೂ ಆಧಾರ ಭೂತಳೂ, ಸರ್ವಸ್ವರೂಪಳೂ ಆದ ಆ ದೇವಿಯು ಸಕಲ ಮಂಗಳ ಕಾರ್ಯಗಳಿಗೂ ಅರ್ಹಳು.

೭೬. ಸರ್ವರಿಗೂ ಮಂಗಳವನ್ನುಂಟುಮಾಡಲು ಶಕ್ತಳಾದುದರಿಂದ ಅವಳನ್ನು 'ಸರ್ವಮಂಗಳಾ' ಎನ್ನುವರು. ವೈಕುಂಠದಲ್ಲಿ ಮಹಾಲಕ್ಷ್ಮಿ ಎನಿಸುವ ಆ ದೇವಿಯೇ ಮೂರ್ತಿಭೇದದಿಂದ ಸರಸ್ವತಿ ಎನಿಸುವಳು.

೭೭. ಸರ್ವಜ್ಞಳಾದ ಆ ದೇವಿಯು ವೇದಗಳನ್ನು ಪ್ರಸುವಿಸಿ ವೇದಮಾತೆ ಎನಿಸಿರುವಳು. ಆ ದೇವಿಯೇ ಸಾವಿತ್ರೀ, ಗಾಯತ್ರೀ ಎಂದೂ ಮೂರುಲೋಕದ ಮಾತೆಯೆಂದೂ ಹೆಸರು ಪಡೆದಿರುವಳು.

೭೮–೭೯. ಪೂರ್ವದಲ್ಲಿ ದುರ್ಗನೆಂಬ ದುಷ್ಟರಾಕ್ಷಸನನ್ನು ಸಂಹರಿಸಿ ಆ ದೇವಿಯು 'ದುರ್ಗಾ' ಎನಿಸಿಕೊಂಡಳು. ಸೃಷ್ಟಿಯ ಆದಿಯಲ್ಲಿ ಎಲ್ಲ ದೇವತೆಗಳ ತೇಜಸ್ಸಿನಿಂದ ಆ ದೇವಿಯು ಆವಿರ್ಭವಿಸಿ 'ಮೂಲಪ್ರಕೃತಿ' ಎನಿಸಿಕೊಂಡಳು.

ತೇನಾದ್ಯಾ ಪ್ರಕೃತಿರ್ಜ್ಞೇಯಾ ಸರ್ವಾಸುರವಿಮರ್ದಿನೀ ।
ಸರ್ವಾನಂದಾ ಚ ಸಾ ನಂದಾ ದುಃಖದಾರಿದ್ರ್ಯನಾಶಿನೀ　　॥ ೭೯ ॥

ಶತ್ರೂಣಾಂ ಭಯದಾತ್ರೀ ಚ ಭಕ್ತಾನಾಂ ಭಯಹಾರಿಣೀ ।
ದಕ್ಷಕನ್ಯಾ ಸತೀ ಸಾ ಚ ಶೈಲಜಾತೇತಿ ಪಾರ್ವತೀ　　॥ ೮೦ ॥

ಸರ್ವಾಧಾರಸ್ವರೂಪಾ ಸಾ ಕಲಯಾ ಸಾ ವಸುಂಧರಾ ।
ಕಲಯಾ ತುಲಸೀ ಗಂಗಾ ಕಲಯಾ ಸರ್ವಯೋಷಿತಃ　　॥ ೮೧ ॥

ಸೃಷ್ಟಿಂ ಕರೋಮಿ ಚ ಯಯಾ ತಾತ ಶಕ್ತ್ಯಾ ಪುನಃ ಪುನಃ ।
ಪೃಷ್ಟ್ವಾ ತಾಂ ರಾಸಮಧ್ಯಸ್ಥಾಂ ಮಮ ಕ್ರೀಡಾ ತಯಾ ಸಹ　　॥ ೮೨ ॥

ಬಭೂವ ಸುಚಿರಂ ತಾತ ಯಾವದ್ವೈ ಬ್ರಹ್ಮಣಃ ಶತಂ ।
ಅತ್ಯದ್ಭುತಂ ಕೌತುಕಂ ಚ ಮಹಾಶೃಂಗಾರಮೀಪ್ಸಿತಂ　　॥ ೮೩ ॥

---

ಸಕಲ ರಾಕ್ಷಸರ ಮರ್ದನಕ್ಕೂ ಈಕೆಯೇ ಕಾರಣಳು. ಎಲ್ಲರ ದುಃಖದಾರಿದ್ರ್ಯಗಳನ್ನು ನಾಶಗೊಳಿಸಿ ಎಲ್ಲರಿಗೂ ಆನಂದವನ್ನು ಕೊಡುವುದರಿಂದ ಆ ದೇವಿಯು 'ನಂದಾ' ಎನಿಸಿಕೊಳ್ಳುವಳು.

೮೦. ಶತ್ರುಗಳಿಗೆ ಭಯವನ್ನು ಕೊಡುವವಳೂ, ಭಕ್ತರ ಭಯನಾಶಕಳೂ ಆದ ಆ ದೇವಿಯು ದಕ್ಷಬ್ರಹ್ಮನ ಮಗಳಾಗಿ 'ಸತೀ' ಎಂದೂ, ಪರ್ವತರಾಜನ ಪುತ್ರಿಯಾಗಿ 'ಪಾರ್ವತೀ' ಎಂದೂ ಖ್ಯಾತಿ ಪಡೆದಳು.

೮೧. ಸರ್ವಾಧಾರ ಸ್ವರೂಪಳಾದ ಆ ದೇವಿಯು ತನ್ನ ಒಂದು ಕಲೆಯಿಂದ 'ವಸುಂಧರೆ' ಎನಿಸಿಕೊಂಡಿರುವಳು. ಒಂದು ಕಲೆಯಿಂದ 'ತುಲಸೀ' ದೇವಿಯಾಗಿಯೂ, ಮತ್ತೊಂದು ಕಲೆಯಿಂದ 'ಗಂಗೆ' ಯಾಗಿಯೂ ಇರುವ ಆ ದೇವಿಯ ಕಲಾಂಶದಿಂದಲೇ ಎಲ್ಲ ಸ್ತ್ರೀಯರೂ ಜನಿಸಿರುವರು.

೮೨–೮೩. ಎಲೈ ತಂದೆಯೇ, ಆ ದೇವಿಯ ಶಕ್ತಿಯಿಂದ ನಾನು ಪುನಃ ಪುನಃ ಸೃಷ್ಟಿಮಾಡಲು ಶಕ್ತನಾಗುವೆನು. ರಾಸಮಂಡಲದ ಮಧ್ಯದಲ್ಲಿದ್ದ ಆ ದೇವಿಗೂ ನನಗೂ ಬ್ರಹ್ಮನ ಆಯುಃಪರಿಮಿತಿಯಷ್ಟು ದೀರ್ಘಕಾಲ ರತಿಕ್ರೀಡೆಯುಂಟಾಯಿತು. ಆ ಮಹಾಶೃಂಗಾರವು ಅತ್ಯದ್ಭುತವೂ ಕುತೂಹಲ ಜನಕವೂ ಆಗಿದ್ದಿತು.

ತಯೋರ್ದ್ವಯೋರ್ಘರ್ಮರಾಶಿಃ ಸುಸ್ರಾವ ರಾಸಮಂಡಲೇ ।
ತಸ್ಮಾನ್ಮನೋಹರಂ ಜಜ್ಞೇ ನಾಮ್ನಾSಕಾರಸರೋವರಂ ॥ ೮೪ ॥

ಸಪಾತ ಘರ್ಮಧಾರಾSಧೋ ವೇಗೇನ ವಿಶ್ವಗೋಲಕೇ ।
ಬಭೂವ ಜಲಪೂರ್ಣಂ ಚ ಬ್ರಹ್ಮಾಂಡಾನಾಂ ಚ ಗೋಲಕಂ ॥ ೮೫ ॥

ಜಲಪೂರ್ಣಂ ಪುರಾ ಸರ್ವಂ ಸೃಷ್ಟಿಶೂನ್ಯಂ ವ್ರಜೇಶ್ವರ ।
ಶೃಂಗಾರಾಂತೇ ಚ ತಸ್ಯಾಂ ಚ ವೀರ್ಯಾಧಾನಂ ಮಯಾ ಕೃತಂ ॥ ೮೬ ॥

ದಧಾರ ಗರ್ಭಂ ಸಾ ರಾಧಾ ಯಾವದ್ವೈ ಬ್ರಹ್ಮಣಃ ಶತಂ ।
ಸುಷುವೇ ಸಾ ತದಂತೇ ಚ ಡಿಂಭಂ ಚ ಪರಮಾದ್ಭುತಂ ॥ ೮೭ ॥

ಚುಕೋಪ ದೇವೀ ತಂ ದೃಷ್ಟ್ವಾ ರುರೋದ ವಿಷಸಾದ ಸಾ ।
ಪಾದೇನ ಪ್ರೇರಯಾಮಾಸ ತಮಧೋ ವಿಶ್ವಗೋಲಕೇ ॥ ೮೮ ॥

---

೮೪. ನಮ್ಮಿಬ್ಬರ ಶರೀರದಿಂದ ಹೊರಬಂದ ಬೆವರಿನ ರಾಶಿಯು ರಾಸ ಮಂಡಲದಲ್ಲಿ ತುಂಬಿ ಮನೋಹರವಾದ ಸರೋವರವೊಂದರ ಸೃಷ್ಟಿಯಾಯಿತು.

೮೫. ಅನಂತರ ಆ ಬೆವರಿನ ಪ್ರವಾಹವು ಕೆಳಗೆ ಹರಿದು ಬ್ರಹ್ಮಾಂಡಗೋಳ ದಲ್ಲಿ ತುಂಬಿಕೊಂಡಿತು. ವಿಶ್ವಗೋಳಕವೆಲ್ಲ ಜಲಪೂರ್ಣವಾಯಿತು.

೮೬. ಎಲೈ ಪ್ರಜಪತಿಯಾದ ನಂದನೇ, ಪೂರ್ವದಲ್ಲಿ ಬ್ರಹ್ಮಾಂಡವೆಲ್ಲವೂ ನೀರಿನಿಂದ ತುಂಬಿ ಸೃಷ್ಟಿಶೂನ್ಯವಾಗಿತ್ತು. ಈ ರೀತಿ ರತ್ಯುತ್ಸವವು ಮುಗಿದನಂತರ ನಾನು ಆ ರಾಧೆಯಲ್ಲಿ ವೀರ್ಯಾಧಾನ ಮಾಡಿದೆನು.

೮೭. ಆ ರಾಧೆಯು ನೂರು ಬ್ರಹ್ಮರ ಆಯುಃಪರಿಮಿತಿಯವರೆಗೆ ಗರ್ಭ ಧಾರಣೆ ಮಾಡಿಕೊಂಡಿದ್ದಳು. ಕೊನೆಯಲ್ಲಿ ಆಕೆಯು ಅತ್ಯದ್ಭುತಕರವಾದ ಒಂದು 'ಅಂಡ' ವನ್ನು ಪ್ರಸುವಿಸಿದಳು.

೮೮. ಆ ಮೊಟ್ಟೆಯನ್ನು ನೋಡಿ ದೇವಿಯು ಕೋಪಗೊಂಡುದಲ್ಲದೆ ತನ್ನ ಶ್ರಮವೆಲ್ಲ ವ್ಯರ್ಥವಾಯಿತೆಂದು ದುಃಖಿತಳಾದಳು. ಆ ಮೊಟ್ಟೆಯನ್ನು ತನ್ನ ಕಾಲಿನಿಂದ ಕೆಳಗಿನ ವಿಶ್ವಗೋಲಕಕ್ಕೆ ನೂಕಿಬಿಟ್ಟಳು.

ಸ ಪಪಾತ ಜಲೇ ತಾತ ಸರ್ವಾಧಾರೋ ಮಹಾನ್ವಿರಾಟ್ ।
ದೃಷ್ಟ್ವಾಽಪತ್ಯಂ ಜಲಸ್ಥಂ ಚ ಮಯಾ ಶಪ್ತಾ ಚ ಸಾ ಪುರಾ ॥ ೮೯ ॥

ಅನಪತ್ಯಾ ಚ ಸಾ ರಾಧಾ ಮಚ್ಛಾಪೇನ ಪುರಾ ವಿಭೋ ।
ತೇನ ಪ್ರಭೂತಾಃ ಕ್ರಮತೋ ದುರ್ಗಾ ಲಕ್ಷ್ಮೀಃ ಸರಸ್ವತೀ ॥ ೯೦ ॥

ಚತಸ್ರಃ ಪರಿಪೂರ್ಣಾಸ್ತಾಃ ಪ್ರಸೂತಾಶ್ಚ ಸುನಿಶ್ಚಿತಂ ।
ದೇವ್ಯೋಽನ್ಯಾಶ್ಚಾಪಿ ಕಾಮಿನ್ಯಸ್ತಾಃ ಪ್ರಸೂತಾ ವ್ರಜೇಶ್ವರ ॥ ೯೧ ॥

ಕಲಯಾ ಪ್ರಭವೋ ಯಾಸಾಂ ಕಲಾಂಶಾಂಶೇನ ವಾ ವ್ರಜ ।
ಜಜ್ಞೇ ಮಹಾನ್ವಿರಾಡ್ಯೇನ ಡಿಂಭೇನ ಕಲಯಾಽಶ್ರಯಃ ॥ ೯೨ ॥

ಅಮೃತಾಂಗುಷ್ಠಪೀಯೂಷಂ ಮಯಾ ದತ್ತಂ ಪಪೌ ಚ ಸಃ ।
ಜಲೇ ಸ್ಥಾವರರೂಪಶ್ಚ ಶೇತೇ ಚ ನಿಜಕರ್ಮಣಃ ॥ ೯೩ ॥

---

೮೯. ಎಲೈ ತಂದೆಯೇ, ಆ ಮೊಟ್ಟೆಯು ನೀರಿನಲ್ಲಿ ಬಿದ್ದು ಸಕಲಕ್ಕೂ ಆಧಾರವಾದ ಮಹಾವಿರಾಟ್ಪುರುಷನಾಯಿತು. ಈ ರೀತಿ ಆ ಶಿಶುವು ನೀರಿಗೆ ಬಿದ್ದುದನ್ನು ನೋಡಿ ನಾನು ರಾಧೆಗೆ ಶಾಪ ಕೊಟ್ಟೆನು.

೯೦. ಅಂದಿನಿಂದ ರಾಧೆಯು ಮಕ್ಕಳಿಲ್ಲದವಳಾಗಿ ವ್ಯಥಿತಳಾಗಿರುವಳು. ಆ ಮಹಾವಿರಾಟನಿಂದ ಕ್ರಮವಾಗಿ ದುರ್ಗಾ, ಲಕ್ಷ್ಮೀ ಮತ್ತು ಸರಸ್ವತಿಯರು ಆವಿರ್ಭವಿಸಿದರು.

೯೧-೯೨. ರಾಧೆ, ದುರ್ಗಾ ಲಕ್ಷ್ಮಿ ಮತ್ತು ಸರಸ್ವತಿ ಈ ನಾಲ್ವರು ದೇವೀಯರು ಪರಮಾತ್ಮನ ಪರಿಪೂರ್ಣಾಂಶದಿಂದ ಕೂಡಿರುವವರು. ಎಲೈ ವ್ರಜೇಶ್ವರನೇ. ಇತರ ದೇವಿಯರು ಮತ್ತು ಸ್ತ್ರೀಯರೆಲ್ಲರೂ ಮೇಲೆ ಹೇಳಿದ ದೇವಿಯರ ಕಲೆಯಿಂದಲೂ, ಕಲಾಂಶದಿಂದಲೂ ಜನಿಸಿದರು. ತನ್ನ ಒಂದು ಕಲೆಯಿಂದ ಇವುಗಳಿಗೆ ಆಶ್ರಯನಾದ ಮಹಾವಿರಾಟನು ಮೊಟ್ಟೆಯಿಂದ ಅವತರಿಸಿದನೆಂದು ಹಿಂದೆಯೇ ತಿಳಿಸಿದೆ.

೯೩. ಅವತರಿಸಿದ ಕೂಡಲೇ ಅವನು ನನ್ನಿಂದ ಕೊಡಲ್ಪಟ್ಟ ಹೆಬ್ಬೆರಳಿನ ಅಮೃತವನ್ನು ಪಾನ ಮಾಡಿದನು. ಅದರಿಂದ ಮೃತ್ಯುರಹಿತನಾಗಿ ನೀರಿನಲ್ಲಿ ಸ್ಥಾವರ ರೂಪದಿಂದ ಮಲಗಿದನು.

ಉಪಧಾನಂ ಜಲಂ ತಲ್ಪಂ ತಸ್ಯ ಯೋಗಬಲೇನ ಚ ।
ತಸ್ಯ ಲೋಮ್ನಾಂ ಚ ಕೂಪಾನಿ ಜಲಪೂರ್ಣಾನಿ ಸಂತತಂ ॥ ೯೪ ॥

ಪ್ರತ್ಯೇಕಂ ಕ್ರಮತಸ್ತೇಷು ಶೇತೇ ಕ್ಷುದ್ರವಿರಾಟ್ ಪುನಃ ।
ಸಹಸ್ರಪತ್ರಂ ಕಮಲಂ ಜಜ್ಞೇ ಕ್ಷುದ್ರಸ್ಯ ನಾಭಿತಃ ॥ ೯೫ ॥

ತತ್ರ ಜಜ್ಞೇ ವರೋ ಬ್ರಹ್ಮಾ ತೇನಾಯಂ ಕಮಲೋದ್ಭವಃ ।
ತತ್ರಾವಿರ್ಭೂಯ ಸ ವಿಧಿಶ್ಚಿಂತಾಗ್ರಸ್ತೋ ಬಭೂವ ಸಃ ॥ ೯೬ ॥

ಕಸ್ಮಾದ್ದೇಹಃ ಕ್ವ ಮಾತಾ ಮೇ ಪಿತಾ ವಾ ಕ್ವ ಚ ಬಾಂಧವಃ ।
ದಿವ್ಯಂ ತ್ರಿಲಕ್ಷವರ್ಷಂ ಚ ಬಭ್ರಾಮ ಕಮಲಾಂತರೇ ॥ ೯೭ ॥

ತತೋ ದಿವ್ಯಂ ಪಂಚಲಕ್ಷಂ ಸಸ್ಮಾರ ತಪಸಾ ಚ ಮಾಂ ।
ತದಾ ಮಯಾ ದತ್ತಮಂತ್ರಂ ಜಜಾಪ ಕಮಲಾಂತರೇ ॥ ೯೮ ॥

---

೯೪. ಯೋಗಬಲವುಳ್ಳ ಆ ವಿರಾಟನಿಗೆ ನೀರೇ ದಿಂಬು ಮತ್ತು ಹಾಸಿಗೆಯಾಯಿತು. ಅವನ ರೋಮಕೂಪಗಳೆಲ್ಲವೂ ಯಾವಾಗಲೂ ಜಲ ಪೂರ್ಣವಾಗಿರುವುವು.

೯೫. ಅವನ ಪ್ರತಿರೋಮ ಕೂಪಗಳಲ್ಲೂ ಕ್ಷುದ್ರವಿರಾಟರು ನೆಲಸಿರುವರು. ಆ ಕ್ಷುದ್ರವಿರಾಟನ ನಾಭಿಯಿಂದ ಸಹಸ್ರದಳವುಳ್ಳ ಕಮಲವೊಂದು ಆವಿರ್ಭವಿಸಿತು.

೯೬. ಅದರಲ್ಲಿ ಚತುರ್ಮುಖ ಬ್ರಹ್ಮನು ಅವತರಿಸಿದುದರಿಂದ ಅವನು ಕಮಲೋದ್ಭವನೆನಿಸಿದನು. ಆ ವಿಧಿಯು ಅಲ್ಲಿ ಅವತರಿಸಿ ಚಿಂತಾಗ್ರಸ್ತನಾಗಿ ಕುಳಿತನು

೯೭. ನನಗೆ ಈ ದೇಹವು ಯಾರಿಂದ ಬಂತು ? ನನ್ನ ತಾಯಿ ಎಲ್ಲಿ ? ನನ ತಂದೆಯಾರು ? ನನ್ನ ಬಂಧುಗಳಾರು ? ' ಈ ರೀತಿಯಾಗಿ ಚಿಂತಿಸುತ್ತ ಮೂರು ದಿವ್ಯಲಕ್ಷ ವರ್ಷಗಳಕಾಲ ಆ ತಾವರೆ ಹೂವಿನಲ್ಲಿಯೇ ಕುಳಿತು ಭ್ರಮಿಸುತ್ತಿದ್ದನು.

೯೮. ಹೀಗೆ ದಿವ್ಯ ಪಂಚಲಕ್ಷ ವರ್ಷಗಳ ಕಾಲ ತಪಸ್ಸು ಮಾಡುತ್ತಾ ನನ್ನನ್ನು ಸ್ಮರಿಸಿದನು. ಆಗ ನಾನು ಉಪದೇಶಿಸಿದ ಮಂತ್ರವನ್ನು ಆ ಕಮಲದ ಮಧ್ಯದಲ್ಲಿಯೇ ಕುಳಿತು ಜಪಿಸಿದನು.

ದಿವ್ಯಸಪ್ತವರ್ಷಲಕ್ಷಂ ನಿಯತಂ ಸಂಯತಃ ಶುಚಿಃ ।
ತದಾ ಮತ್ತೋ ವರಂ ಲಬ್ಧ್ವಾ ಸ್ರಷ್ಟಾ ಸೃಷ್ಟಿಂ ಚಕಾರ ಸಃ ॥ ೯೯ ॥

ಮಾಯಯಾ ಪ್ರತಿ ಬ್ರಹ್ಮಾಂಡೇ ಬ್ರಹ್ಮವಿಷ್ಣುಶಿವಾತ್ಮಕಾಃ ।
ದಿಕ್ಪಾಲಾ ದ್ವಾದಶಾದಿತ್ಯಾ ರುದ್ರಾಶ್ಚೈಕಾದಶಾಪಿ ಚ ॥ ೧೦೦ ॥

ನವಗ್ರಹಾಷ್ಟೌ ವಸವೋ ದೇವಾಃ ಕೋಟಿತ್ರಯಂ ತಥಾ ।
ಬ್ರಾಹ್ಮಣಕ್ಷತ್ರವಿಟ್‌ಶೂದ್ರಾ ಯಕ್ಷಗಂಧರ್ವಕಿನ್ನರಾಃ ॥ ೧೦೧ ॥

ಭೂತಾದಯೋ ರಾಕ್ಷಸಾಶ್ಚಾಪ್ಯೇವಂ ಸರ್ವಂ ಚರಾಚರಂ ।
ವಿಶ್ವೇವಿಶ್ವೇ ವಿನಿರ್ಮಾಣಾಃ ಸ್ವರ್ಗಾಃ ಸಪ್ತ ಕ್ರಮೇಣ ಚ ॥ ೧೦೨ ॥

ಸಪ್ತಸಾಗರಸಂಯುಕ್ತಾ ಸಪ್ತದ್ವೀಪಾ ವಸುಂಧರಾ ।
ಕಾಂಚನೀಭೂಮಿಸಂಯುಕ್ತಾ ತಮೋಯುಕ್ತಂ ಸ್ಥಲಂ ತಥಾ ॥ ೧೦೩ ॥

---

೯೯. ಜಿತೇಂದ್ರಿಯನೂ, ಶುಚಿರ್ಭೂತನೂ ಆಗಿ ದಿವ್ಯವಾದ ಏಳು ಲಕ್ಷ ವರ್ಷಗಳು ನಿಯಮದಲ್ಲಿದ್ದ ನಂತರ ನನ್ನಿಂದ ವರವನ್ನು ಪಡೆದವನಾಗಿ ಆ ಚತುರ್ಮುಖನು ಸೃಷ್ಟಿಮಾಡಲು ತೊಡಗಿದನು.

೧೦೦. ಮಾಯಾ ಶಕ್ತಿಯಿಂದ ಪ್ರತಿ ಬ್ರಹ್ಮಾಂಡದಲ್ಲಿಯೂ ಬ್ರಹ್ಮ, ವಿಷ್ಣು ಶಿವ ಮುಂತಾದ ದೇವತೆಗಳೂ, ಅಷ್ಟದಿಕ್ಪಾಲಕರೂ, ದ್ವಾದಶಾದಿತ್ಯರೂ, ಏಕಾದಶ ರುದ್ರರೂ ಅವತರಿಸಿದರು.

೧೦೧. ನವಗ್ರಹಗಳೂ, ಅಷ್ಟವಸುಗಳೂ, ಮೂರು ಕೋಟಿ ದೇವತೆಗಳೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮತ್ತು ಶೂದ್ರರೂ, ಯಕ್ಷಗಂಧರ್ವಕಿನ್ನರರೂ ಸಹ ಆ ಚತುರ್ಮುಖನ ಸೃಷ್ಟಿಗೊಳಗಾದರು.

೧೦೨. ಭೂತಗಳು, ರಾಕ್ಷಸರು, ಚರಾಚರವಾದ ಸಕಲ ಪ್ರಾಣಿಗಳೂ ಪ್ರತಿ ವಿಶ್ವದಲ್ಲೂ ಸೃಷ್ಟವಾದವು. ಸ್ವರ್ಗ ಮೊದಲಾದ ಏಳು ಲೋಕಗಳು ಕ್ರಮವಾಗಿ ಸೃಜಿಸಲ್ಪಟ್ಟವು.

೧೦೩. ಏಳು ಸಮುದ್ರಗಳಿಂದಲೂ, ಏಳು ದ್ವೀಪಗಳಿಂದಲೂ ಕೂಡಿದ ವಸುಂಧರೆಯೂ, ಕಾಂಚನವರ್ಣವುಳ್ಳ ಭೂ ಭಾಗವೂ, ಅಂಧಕಾರಯುತವಾದ ಸ್ಥಳಗಳೂ ಬ್ರಹ್ಮನಿಂದ ಸೃಷ್ಟವಾದವು.

ಪಾತಾಲಾಶ್ಚ ತಥಾ ಸಪ್ತ ಬ್ರಹ್ಮಾಂಡಮೇಭಿರೇವ ಚ ।
ವಿಶ್ವೇವಿಶ್ವೇ ಚಂದ್ರಸೂರ್ಯೌ ಪುಣ್ಯಕ್ಷೇತ್ರಂ ಚ ಭಾರತಂ ॥ ೧೦೪ ॥

ತೀರ್ಥಾನ್ಯೇತಾನಿ ಸರ್ವತ್ರ ಗಂಗಾದೀನಿ ವ್ರಜೇಶ್ವರ ।
ಯಾವಂತಿ ಲೋಮಕೂಪಾನಿ ಮಹಾವಿಷ್ಣೋಃ ಕ್ರಮೇಣ ಚ ॥ ೧೦೫ ॥

ವಿಶ್ವಾನ್ಯೇವ ಹಿ ತಾವಂತಿ ಹ್ಯಸಂಖ್ಯಾತಾನಿ ಚ ಧ್ರುವಂ ।
ವಿಶ್ವೇಷಾಮೂರ್ಧ್ವಭಾಗೇ ಚ ವೈಕುಂಠಶ್ಚ ನಿರಾಶ್ರಯಃ ॥ ೧೦೬ ॥

ಮದಿಚ್ಛಯಾ ವಿನಿರ್ಮಾಣಾ ವೇದಾಃ ಕಥಿತುಮಕ್ಷಮಾಃ ।
ಕುಯೋಗಿನಾಮದೃಷ್ಟಶ್ಚಾಭಕ್ತಾನಾಂ ಚ ವಿನಿಶ್ಚಿತಂ ॥ ೧೦೭ ॥

ತಸ್ಮಾದುಪರಿ ಗೋಲೋಕಃ ಪಂಚಾಶತ್ಕೋಟಿಯೋಜನಃ ।
ವಾಯುನಾ ಧಾರ್ಯಮಾಣಶ್ಚ ವಿಚಿತ್ರಃ ಪರಮಾಶ್ರಯಃ ॥ ೧೦೮ ॥

---

೧೦೪. ಪಾತಾಳದವರೆಗಿರುವ ಏಳು ಲೋಕಗಳೂ, ಸೃಷ್ಟವಾಗಿ ಇವೆಲ್ಲವೂ ಸೇರಿ ಬ್ರಹ್ಮಾಂಡವೆನಿಸಿತು. ಪ್ರತಿ ವಿಶ್ವದಲ್ಲೂ ಚಂದ್ರ ಸೂರ್ಯರೂ ಪುಣ್ಯಕ್ಷೇತ್ರವಾದ ಭಾರತವೂ ಸೃಷ್ಟವಾದವು.

೧೦೫–೧೦೬. ಎಲೈ ನಂದಗೋಪನೆ, ಗಂಗಾ ಯಮುನಾ ಮುಂತಾದ ಪುಣ್ಯ ತೀರ್ಥಗಳು ಸಕಲ ವಿಶ್ವಗಳಲ್ಲೂ ವ್ಯಕ್ತವಾದವು. ಮಹಾ ವಿಷ್ಣುವಿಗೆ ಅಸಂಖ್ಯಾತ ವಾದ ಲೋಮಕೂಪಗಳಿರುವಂತೆ ವಿಶ್ವಗಳೂ ಸಹ ಅಸಂಖ್ಯಾತವಾದವು. ಈ ಸಮಸ್ತ ವಿಶ್ವಗಳ ಮೇಲು ಭಾಗದಲ್ಲಿ ಆಶ್ರಯರಹಿತವಾದ ವೈಕುಂಠ ಲೋಕವಿದೆ.

೧೦೭. ನನ್ನ ಇಚ್ಛಾಮಾತ್ರದಿಂದ ಸೃಷ್ಟವಾದ ವೇದಗಳೂ ಸಹ ಆ ವೈಕುಂಠ ಲೋಕವನ್ನು ವರ್ಣಿಸಲಾರವು. ಯೋಗಿಗಳಲ್ಲದವರಿಗೂ, ಭಕ್ತರಲ್ಲದವರಿಗೂ ಆ ವೈಕುಂಠವು ಕಣ್ಣಿಗೆ ಕಾಣಿಸುವುದಿಲ್ಲ.

೧೦೮. ಅದರ ಮೇಲುಭಾಗದಲ್ಲಿ ಐವತ್ತುಕೋಟಿ ಯೋಜನ ವಿಸ್ತೀರ್ಣ ವುಳ್ಳ ಗೋಲೋಕವೊಂದಿದೆ. ವಿಚಿತ್ರವೂ ಪರಮಾತ್ಮನಿಗೆ ಆಶ್ರಯವೂ ಆದ ಆ ಲೋಕವು ವಾಯುವಿನಿಂದ ಧೃತವಾಗಿದೆ.

ಅತೀವ ರಮ್ಯನಿರ್ಮಾಣೋ ನಿತ್ಯರೂಪೋ ಮದಿಚ್ಛಯಾ ।
ಶತಶೃಂಗೇಣ ಶೈಲೇನ ಪುಣ್ಯವೃಂದಾವನೇನ ಚ ॥ ೧೦೯ ॥

ಸುರಾಸಮಂಡಲೇನಾಪಿ ನದ್ಯಾ ವಿರಜಯಾ ಯುತಃ ।
ಕೋಟಿಯೋಜನವಿಸ್ತೀರ್ಣಾ ಪ್ರಸ್ಥೇನ ವಿರಜಾ ವ್ರಜ ॥ ೧೧೦ ॥

ದೈರ್ಘ್ಯಂ ತಸ್ಯಾಃ ಶತಗುಣಂ ಪರಿತಃ ಪರಮಾ ಶುಭಾ ।
ಅಮೂಲ್ಯರತ್ನನಿಕರೈರ್ಹೀರಮಾಣಿಕ್ಯಯೋಸ್ತಥಾ ॥ ೧೧೧ ॥

ಮಣೀನಾಂ ಕೌಸ್ತುಭಾದೀನಾಮಸಂಖ್ಯಾನಾಂ ಮನೋಹರಾ ।
ಅಮೂಲ್ಯರತ್ನನಿರ್ಮಾಣಂ ತತ್ರಾಪಿ ಪ್ರತಿಮಂದಿರಂ ॥ ೧೧೨ ॥

ಮನೋಹರಂ ಚ ಪ್ರಾಕಾರಮದೃಷ್ಟಂ ವಿಶ್ವಕರ್ಮಣಾ ।
ಗೋಪೀಭಿರ್ಗೋಪನಿಕರೈರ್ವೇಷ್ಟಿತಂ ಕಾಮಧೇನುಭಿಃ ॥ ೧೧೩ ॥

---

೧೦೯. ನನ್ನ ಇಚ್ಛಾಮಾತ್ರದಿಂದ ರಮ್ಯವಾಗಿ ನಿರ್ಮಿಸಲ್ಪಟ್ಟ ಆ ಗೋಲೋಕದಲ್ಲಿ ಶತಶೃಂಗವೆಂಬ ಪರ್ವತವೂ, ಪುಣ್ಯಕರವಾದ ವೃಂದಾವನವೂ ಇರುವುದಲ್ಲದೆ ಆ ಗೋಲೋಕವು ನಿತ್ಯವಾದುದಾಗಿದೆ.

೧೧೦. ಅಲ್ಲಿ ಸುಂದರವಾದ ರಾಸಮಂಡಲವೂ ವಿರಜಾನದಿಯೂ ಕಂಗೊಳಿಸುತ್ತಿವೆ. ಎಲೈ ನಂದಗೋಪನೇ, ಆ ವಿರಜಾನದಿಯು ಪರಿಮಿತಿಯಲ್ಲಿ ಕೋಟಿಯೋಜನ ವಿಸ್ತೀರ್ಣವುಳ್ಳದ್ದಾಗಿದೆ.

೧೧೧. ಅದಕ್ಕಿಂತ ನೂರರಷ್ಟು ಉದ್ದವಾಗಿರುವ ಆ ನದಿಯ ಸುತ್ತಲೂ ಅಮೂಲ್ಯವಾದ ರತ್ನ, ವಜ್ರ, ಮಾಣಿಕ್ಯ ಮುಂತಾದವುಗಳು ರಾಶಿ ರಾಶಿಯಾಗಿದ್ದು ಶೋಭಿಸುತ್ತಿವೆ.

೧೧೨. ಅಸಂಖ್ಯವಾದ ಕೌಸ್ತುಭಾದಿ ಮಣಿಗಳಿಂದ ಆ ವಿರಜಾನದಿಯು ಮನೋಹರವಾಗಿದೆ. ಅಲ್ಲಿರುವ ಪ್ರತಿಯೊಂದು ಮಂದಿರವೂ ಕೂಡ ಅಮೂಲ್ಯವಾದ ರತ್ನಗಳಿಂದ ನಿರ್ಮಿತವಾಗಿವೆ.

೧೧೩. ವಿಶ್ವಕರ್ಮನು ಎಂದೂ ನೋಡದಿರುವ ಮನೋಹರವಾದ ಪ್ರಾಕಾರವು ಅಲ್ಲಿ ಶೋಭಿಸುತ್ತಿದೆ. ಗೋಪಿಯರೂ ಗೋಪಾಲಕರೂ ಮತ್ತು ಕಾಮಧೇನುಗಳೂ ಅಲ್ಲಿ ಅಸಂಖ್ಯಾತವಾಗಿವೆ.

ಕಲ್ಪವೃಕ್ಷೈಃ ಪಾರಿಜಾತೈರಸಂಖ್ಯೈಶ್ಚ ಸರೋವರೈಃ ।
ಪುಷ್ಪೋದ್ಯಾನೈಃ ಕೋಟಿಭಿಶ್ಚ ಸಂವೃತಂ ರಾಸಮಂಡಲಂ ॥ ೧೧೪ ॥

ವೇಷ್ಟಿತಂ ವೇಷ್ಟಿತೈರ್ಗೋಪೈರ್ಮಂದಿರೈಃ ಶತಕೋಟಿಭಿಃ ।
ರತ್ನಪ್ರದೀಪಯುಕ್ತೈಶ್ಚ ಪುಷ್ಪತಲ್ಪಸಮನ್ವಿತೈಃ ॥ ೧೧೫ ॥

ಸುಗಂಧಿಚಂದನಾಮೋದೈಃ ಕಸ್ತೂರೀಕುಂಕುಮಾನ್ವಿತೈಃ ।
ಕ್ರೀಡೋಪಯುಕ್ತೈರ್ಭೋಗೈಶ್ಚ ತಾಂಬೂಲೈರ್ವಾಸಿತೈರ್ಜಲೈಃ ॥ ೧೧೬ ॥

ಧೂಪೈಃ ಸುರಭಿರಮ್ಯೈಶ್ಚ ಮಾಲ್ಯೈಶ್ಚ ರತ್ನದರ್ಪಣೈಃ ।
ರಕ್ಷಕೈಃ ರಕ್ಷಿತಂ ಶಶ್ವದ್ರಾಧಾಸೀತ್ರಿಕೋಟಿಭಿಃ ॥ ೧೧೭ ॥

ಅಮೂಲ್ಯರತ್ನಾಭರಣೈರ್ವಹ್ನಿ ಶುದ್ಧಾಂಶುಕೈರಪಿ ।
ಲಕ್ಷಮತ್ತಗಜೇಂದ್ರಾಣಾಂ ವೇಷ್ಟಿತಂ ಚ ಬಲೈಃ ಕ್ರಮಾತ್ ॥ ೧೧೮ ॥

---

೧೧೪. ಆ ರಾಸಮಂಡಲವು ಅಸಂಖ್ಯವಾದ ಕಲ್ಪವೃಕ್ಷಗಳಿಂದಲೂ ಪಾರಿಜಾತ ತರುಗಳಿಂದಲೂ, ರಮ್ಯವಾದ ಸರೋವರಗಳಿಂದಲೂ, ಕೋಟಿ ಸಂಖ್ಯವಾದ ಪುಷ್ಪೋದ್ಯಾನಗಳಿಂದಲೂ ಪರಿವೃತವಾಗಿದೆ.

೧೧೫. ಗೋಪರಿಂದ ಪರಿಪೂರ್ಣವಾದ ಶತಕೋಟಿ ಮಂದಿರಗಳಿಂದ ಆ ರಾಸಮಂಡಲವು ಪರಿವೃತವಾಗಿದೆ. ಪ್ರತಿ ಮಂದಿರದಲ್ಲೂ ರತ್ನಪ್ರದೀಪಗಳೂ ಹೂವಿನ ಹಾಸಿಗೆಗಳೂ ಶೋಭಿಸುತ್ತಿವೆ.

೧೧೬. ಸುವಾಸನೆಯಾದ ಚಂದನ ಗಂಧದಿಂದಲೂ, ಕಸ್ತೂರಿ ಮತ್ತು ಕುಂಕುಮ ಕೇಸರಿಗಳಿಂದಲೂ, ಕ್ರೀಡೋಪಯುಕ್ತವಾದ ಭೋಗಸಾಮಗ್ರಿಗಳಿಂದಲೂ ತಾಂಬೂಲಲತೆಗಳಿಂದಲೂ ಸುವಾಸಿತವಾದ ನೀರಿನಿಂದಲೂ ಆ ರಾಸಮಂಡಲವು ಶೋಭಿಸುತ್ತಿದೆ.

೧೧೭. ಸುಂಗಧ ಧೂಪಗಳಿಂದಲೂ ರಮ್ಯವಾದ ಪುಷ್ಪಮಾಲೆಗಳಿಂದಲೂ, ರತ್ನಗನ್ನಡಿಗಳಿಂದಲೂ ಶೋಭಿಸುತ್ತಿರುವ ಆ ರಾಸಮಂಡಲವನ್ನು ರಾಧೆಯ ಮೂರು ಕೋಟಿ ದಾಸಿಯರು ರಕ್ಷಣೆ ಮಾಡುತ್ತಿರುವರು.

೧೧೮. ಅಮೂಲ್ಯವಾದ ರತ್ನಾಭರಣಗಳಿಂದಲೂ, ಅಗ್ನಿಯಂತೆ ಪರಿಶುದ್ಧವಾದ ಮನೋಹರ ವಸ್ತ್ರಗಳಿಂದಲೂ, ಶೋಭಿಸುತ್ತಿರುವ ಆ ರಾಸಮಂಡಲವನ್ನು ಶ್ರೇಷ್ಠವಾದ ಲಕ್ಷಮದಗಜಗಳೂ ಕೂಡ ರಕ್ಷಿಸುತ್ತಿವೆ.

ನವಯೌವನಸಂಪನ್ನೈ ರೂಪೈರ್ನಿರುಪಮೈರಪಿ ।
ರಮ್ಯಂ ಚ ವರ್ತುಲಾಕಾರಂ ಚಂದ್ರಬಿಂಬಂ ಯಥಾ ವ್ರಜ ॥ ೧೧೯ ॥

ಅಮೂಲ್ಯರತ್ನರಚಿತಂ ದಶಯೋಜನವಿಸ್ತೃತಂ ।
ಕಸ್ತೂರೀಕುಂಕುಮೈ ರಮ್ಯೈಃ ಸುಗಂಧಿಚಂದನಾರ್ಚಿತಂ ॥ ೧೨೦ ॥

ಆವೃತಂ ಮಂಗಲಘಟೈಃ ಫಲಪಲ್ಲವಸಂಯುತೈಃ ।
ದಧಿ ಲಾಜೈಶ್ಚ ಪರ್ಣೈಶ್ಚಸ್ನಿಗ್ಧದೂರ್ವಾಂಕುರೈಃ ಫಲೈಃ ॥ ೧೨೧ ॥

ಶ್ರೀರಾಮಕದಲೀಸ್ತಂಭೈರಸಂಖ್ಯೈಶ್ಚ ಮನೋಹರೈಃ ।
ಪಟ್ಟಸೂತ್ರನಿಬದ್ಧೈಶ್ಚ ಸ್ನಿಗ್ಧೈಶ್ಚಂದನಪಲ್ಲವೈಃ ॥ ೧೨೨ ॥

ಚಂದನಾಸಕ್ತಮಾಲ್ಯೈಶ್ಚ ಭೂಷಣೈಶ್ಚ ವಿಭೂಷಿತಂ ।
ಅಮೂಲ್ಯರತ್ನರಚಿತಂ ಶತಶೃಂಗಮನೋಹರಂ ॥ ೧೨೩ ॥

---

೧೧೯. ಎಲೈ ನಂದಗೋಪನೇ, ಆ ಮದಗಜಗಳು ನವಯೌವನದಿಂದಲೂ ನಿರುಪಮವಾದ ಸೌಂದರ್ಯದಿಂದಲೂ ಶೋಭಿಸುತ್ತಿವೆ. ಆ ರಾಸಮಂಡಲವು ಚಂದ್ರ ಬಿಂಬದಂತೆ ರಮ್ಯವೂ ಮಂಡಲಾಕಾರವಾಗಿಯೂ ಇದೆ.

೧೨೦. ಹತ್ತುಯೋಜನ ವಿಸ್ತೀರ್ಣವುಳ್ಳದ್ದಾಗಿ ಅಮೂಲ್ಯ ರತ್ನಗಳಿಂದ ಖಚಿತವಾಗಿದೆ. ರಮ್ಯವಾದ ಕಸ್ತೂರಿ ಮತ್ತು ಕುಂಕುಮ ಕೇಸರಿಗಳಿಂದಲೂ, ವಾಸನೆಯುಳ್ಳ ದಿವ್ಯಚಂದನದಿಂದಲೂ ಶೋಭಿಸುತ್ತಿದೆ.

೧೨೧. ಹಣ್ಣು ಚಿಗುರುಗಳಿಂದ ಕೂಡಿದ ಮಂಗಳ ಕಲಶಗಳು ಆ ರಾಸ ಮಂಡಲದಲ್ಲಿವೆ. ಮಂಗಳಾರ್ಥವಾಗಿ ಇಟ್ಟಿರುವ ಮೊಸರು, ಅರಳು, ಮಾವಿನ ಎಲೆ ಗರಿಕೆಹುಲ್ಲು ಫಲ ಮುಂತಾದವುಗಳು ಅಲ್ಲಿ ಶೋಭಿಸುತ್ತಿವೆ.

೧೨೨. ಅಸಂಖ್ಯವೂ ಮನೋಹರವೂ ಆದ ಬಾಳೆಯ ಕಂಭಗಳಿಂದಲೂ, ರೇಷ್ಮೆಯ ದಾರದಿಂದ ಪೋಣಿಸಿರುವ ಮನೋಹರವಾದ ಚಂದನದ ಚಿಗುರಿನ ತೋರಣಗಳಿಂದಲೂ ಆ ರಾಸಮಂಡಲವು ವಿರಾಜಿಸುತ್ತಲಿದೆ.

೧೨೩. ಚಂದನ ಗಂಧವನ್ನು ಲೇಪಿಸಿರುವ ಪುಷ್ಪಮಾಲೆಗಳಿಂದಲೂ, ದಿವ್ಯ ವಾದ ವಿಭೂಷಣಗಳಿಂದಲೂ, ಭೂಷಿತವಾದ ಮತ್ತು ಅಮೂಲ್ಯ ರತ್ನಗಳಿಂದ ಖಚಿತವಾದ ಶತಶೃಂಗ ಪರ್ವತವು ಅಲ್ಲಿ ಮನೋಹರವಾಗಿ ಶೋಭಿಸುತ್ತದೆ.

ಕೋಟಿಯೋಜನಮೂರ್ಧ್ವಂ ಚ ದೈರ್ಘ್ಯಂ ದಶಗುಣೋತ್ತರಂ ।
ಶೈಲಪ್ರಸ್ಥಪರಿಮಿತಂ ಪಂಚಾಶತ್ಕೋಟಿಯೋಜನಂ ॥ ೧೨೪ ॥

ಅತೀವ ಕಮನೀಯಂ ಚ ವೇದಾನಿರ್ವಚನೀಯಕಂ ।
ಪ್ರಾಕಾರಮಿವ ತಸ್ಯಾಪಿ ಗೋಲೋಕಸ್ಯ ಮನೋಹರಂ ॥ ೧೨೫ ॥

ಪರಿತೋ ವೇಷ್ಟಿತಂ ರಮ್ಯಂ ಹೀರಹಾರಸಮನ್ವಿತಂ ।
ತತ್ರ ವೃಂದಾವನಂ ರಮ್ಯಂ ಯುಕ್ತಂ ಚಂದನಪಾದಪೈಃ ॥ ೧೨೬ ॥

ಕಲ್ಪವೃಕ್ಷೈಶ್ಚ ರಮ್ಯೈಶ್ಚ ಮಂದಾರೈಃ ಕಾಮಧೇನುಭಿಃ ॥
ಶೋಭಿತಂ ಶೋಭನಾಢ್ಯೈಶ್ಚ ಪುಷ್ಪೋದ್ಯಾನೈರ್ಮನೋಹರೈಃ ॥ ೧೨೭ ॥

ಕ್ರೀಡಾಸರೋವರೈ ರಮ್ಯೈಃ ಸುರಮ್ಯೈ ರತಿಮಂದಿರೈಃ ।
ಅತೀವ ರಮ್ಯಂ ರಹಸಿ ರಾಸಯೋಗ್ಯಸ್ಥಲಾನ್ವಿತಂ ॥ ೧೨೮ ॥

---

೧೨೪. ಕೋಟಿಯೋಜನ ಎತ್ತರವೂ, ಅದಕ್ಕೆ ನೂರರಷ್ಟು ದೀರ್ಘವೂ ಆದ ಆ ಪರ್ವತದ ತಪ್ಪಲು ಪ್ರದೇಶವು ಐವತ್ತು ಕೋಟಿ ಯೋಜನ ವಿಸ್ತೀರ್ಣವುಳದ್ದಾಗಿದೆ

೧೨೫. ವೇದಗಳಿಂದಲೂ ವರ್ಣಿಸಲದಳವಾದ, ಅತ್ಯಂತ ಮನೋಹರವಾದ ಆ ಶತಶೃಂಗಪರ್ವತದ ಪ್ರಾಕಾರವು ಗೋಲೋಕದ ಪ್ರಾಕಾರದಂತೆ ಅತ್ಯಂತ ಮನೋಹರವಾಗಿದೆ.

೧೨೬. ಅಲ್ಲಿ ಸುತ್ತಲೂ ವಜ್ರಹಾರಗಳಿಂದ ಅಲಂಕೃತವಾಗಿ ಮನೋಹರವಾಗಿರುವ ವೃಂದಾವನವಿದೆ. ರಮ್ಯವಾದ ಆ ವೃಂದಾವನದಲ್ಲಿ ಚಂದನ ವೃಕ್ಷಗಳು ಅಸಂಖ್ಯಾತವಾಗಿವೆ.

೧೨೭. ಅಷ್ಟೇ ಅಲ್ಲದೆ ರಮ್ಯವಾದ ಕಲ್ಪವೃಕ್ಷಗಳಿಂದಲೂ, ಪಾರಿಜಾತತರುಗಳಿಂದಲೂ, ಕಾಮಧೇನುಗಳಿಂದಲೂ ಶೋಭಿಸುವ ಆ ವೃಂದಾವನದಲ್ಲಿ ಮನೋಹರವಾದ ಪುಷ್ಪೋದ್ಯಾನಗಳು ಚಿತ್ತಾಕರ್ಷಕವಾಗಿವೆ.

೧೨೮. ರಮ್ಯವಾದ ಕ್ರೀಡಾಸರೋವರಗಳೂ, ಮನೋಹರವಾದ ರತಿಕ್ರೀಡಾಮಂದಿರಗಳೂ, ರಾಸಕ್ರೀಡೆಗೆ ಯೋಗ್ಯವೂ ಅತ್ಯಂತ ರಮ್ಯವೂ ಆದ ಏಕಾಂತ ಪ್ರದೇಶಗಳೂ ಅಲ್ಲಿವೆ.

ರಕ್ಷಿತಂ ರಕ್ಷಕೈ ರಮ್ಯೈರಸಂಖ್ಯೈರ್ಗೋಪಿಕಾಗಣೈಃ ।
ಪರಿತೋ ವರ್ತುಲಾಕಾರಂ ತ್ರಿಲಕ್ಷಯೋಜನಂ ವರಂ　　॥ ೧೨೯ ॥

ಷಟ್ಪದಧ್ವನಿಸಂಯುಕ್ತಂ ಪುಂಸ್ಕೋಕಿಲರುತಾನ್ವಿತಂ ।
ತತ್ರಾಕ್ಷಯೋ ವಟೋ ರಮ್ಯೋ ರಹಸ್ಯೇ ಬಹುವಿಸ್ತೃತಃ　　॥ ೧೩೦ ॥

ಸಹಸ್ರಯೋಜನೋರ್ಧ್ವಶ್ಚ ಪರಿತಶ್ಚ ಚತುರ್ಗುಣಃ ।
ಗೋಪೀನಾಂ ಕಲ್ಪವೃಕ್ಷಶ್ಚ ಸರ್ವವಾಂಛಾಫಲಪ್ರದಃ　　॥ ೧೩೧ ॥

ಕ್ರೀಡಾನ್ವಿತೈರಾವೃತಶ್ಚ ರಾಧಾದಾಸೀತ್ರಿಲಕ್ಷಕೈಃ ।
ವಿರಜಾತೀರನೀರಾಣಾಂ ವಾಯುನಾ ಶೀತಲೇನ ಚ　　॥ ೧೩೨ ॥

ಪುಷ್ಪಾನ್ವಿತೇನ ಮಂದೇನ ಪವಿತ್ರಶ್ಚ ಸುಗಂಧಿನಾ ।
ದಾಸೀಗಣೈರಸಂಖ್ಯೈಶ್ಚ ವೃಂದಾವನವಿನೋದಿನೀ　　॥ ೧೩೩ ॥

---

೧೨೯. ಸುಂದರಿಯರಾದ ಅಸಂಖ್ಯ ಗೋಪಿಕಾಸ್ತ್ರೀಯರು ಆ ವೃಂದಾವನವನ್ನು ರಕ್ಷಿಸುತ್ತಾರೆ. ಮೂರುಲಕ್ಷಯೋಜನ ವಿಸ್ತೀರ್ಣವುಳ್ಳ ಆ ಬೃಂದಾವನವು ಸುತ್ತಲೂ ಮಂಡಲಾಕಾರವಾಗಿದೆ.

೧೩೦. ದುಂಬಿಗಳ ಝೇಂಕಾರದಿಂದಲೂ, ಗಂಡುಕೋಗಿಲೆಗಳ ಇಂಚರದಿಂದಲೂ, ಮಂಜುಳವಾದ ಆ ವೃಂದಾವನದ ರಹಸ್ಯಪ್ರದೇಶಗಳಲ್ಲಿ ಅತಿರಮ್ಯವೂ ವಿಶಾಲವೂ ಆದ ಅಕ್ಷಯ ವಟವೃಕ್ಷವೊಂದಿದೆ.

೧೩೧. ಆ ವಟವೃಕ್ಷವು ಸಾವಿರಯೋಜನ ಎತ್ತರವೂ, ಅದರ ನಾಲ್ಕರಷ್ಟು ವಿಶಾಲವೂ ಆಗಿದೆ. ಗೋಪಿಯರಿಗೆ ಅಲ್ಲಿರುವ ಕಲ್ಪವೃಕ್ಷವು ಸಕಲವಾದ ಇಷ್ಟಾರ್ಥಗಳನ್ನು ಕೈಗೂಡಿಸಿಕೊಡುತ್ತದೆ.

೧೩೨–೧೩೩. ಮೂರು ಲಕ್ಷ ಸಂಖ್ಯೆಯುಳ್ಳ ರಾಧೆಯ ದಾಸಿಯರು ಕ್ರೀಡಾನಿರತರಾಗಿ ಅಲ್ಲಿ ನೆಲಸಿರುವರು. ವಿರಜಾನದಿಯ ನೀರಿನ ಮೇಲೆ ಬೀಸುವುದರಿಂದ ಶೀತವಾಗಿಯೂ, ಪುಷ್ಪವೃಕ್ಷಗಳ ಮೇಲೆ ಬೀಸುವುದರಿಂದ ಮಾಂದ್ಯ ಮತ್ತು ಸೌರಭ್ಯಗಳಿಂದ ಕೂಡಿಯೂ ಇರುವ ಗಾಳಿಯನ್ನು ಸೇವಿಸುತ್ತ ವೃಂದಾವನ ವಿನೋದಿನಿಯಾದ ರಾಧೆಯೂ ಅಸಂಖ್ಯವಾದ ಆ ದಾಸಿಯರಿಂದ ಅಲ್ಲಿ ಸೇವಿಸಲ್ಪಡುತ್ತಿರುವಳು.

ತತ್ರ ಕ್ರೀಡತಿ ರಾಧಾ ಸಾ ಮಮ ಪ್ರಾಣಾಧಿದೇವತಾ ।
ಸೇಯಂ ಶ್ರೀದಾಮಶಾಪೇನ ವೃಷಭಾನಸುತಾಽಧುನಾ ॥ ೧೩೪ ॥

ಬ್ರಹ್ಮಾದಿದೇವೈಃ ಸಿದ್ಧೇಂದ್ರೈರ್ಮುನೀಂದ್ರೈಃ ಪೂಜಿತಾ ವ್ರಜ ।
ಸಿದ್ಧೈರ್ಗುಣೈರ್ಬಲೈರ್ಬುದ್ಧ್ಯಾ ಜ್ಞಾನಯೋಗೈಶ್ಚ ವಿದ್ಯಯಾ ॥ ೧೩೫ ॥

ತಾತ ಸರ್ವಪ್ರಕಾರೇಣ ವಂದ್ಯಾ ಮತ್ಸದೃಶೀ ಪ್ರಿಯಾ ।
ಇತ್ಯೇವಂ ಕಥಿತಂ ನಂದ ಬ್ರಹ್ಮಾಂಡಾನಾಂ ಚ ವರ್ಣನಂ ।
ಯಥೋಚಿತಂ ಪರಿಮಿತಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೩೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ಭಗವನ್ನಂದಸಂವಾದೇ
ಚತುರಶೀತಿತಮೋಽಧ್ಯಾಯಃ

---

೧೩೪. ನನ್ನ ಪ್ರಾಣಗಳಿಗೆ ಅಧಿದೇವತೆಯಾದ ಆ ರಾಧೆಯು ಅಲ್ಲಿ ವಿಹರಿಸಿತ್ತಿರುವಳು. ಅಂಥಾ ರಾಧಾದೇವಿಯು ಈಗ ಶ್ರೀದಾಮನ ಶಾಪಕ್ಕೊಳಗಾಗಿ ವೃಷಭಾನುವಿನ ಮಗಳಾಗಿ ಜನಿಸಿರುವಳು.

೧೩೫. ಎಲೈ ನಂದಗೋಪನೆ, ಸಿದ್ಧವಾದ ಗುಣಗಳಿಂದಲೂ, ಬಲದಿಂದಲೂ, ಬುದ್ಧಿಯಿಂದಲೂ, ಜ್ಞಾನಯೋಗದಿಂದಲೂ ಮತ್ತು ವಿದ್ಯೆಯಿಂದಲೂ ಅಧಿಕಳಾದ ಆ ರಾಧೆಯು ಬ್ರಹ್ಮಾದಿ ದೇವತೆಗಳಿಂದಲೂ, ಸಿದ್ಧ ಮುನಿಶ್ರೇಷ್ಠರುಗಳಿಂದಲೂ ಪೂಜಿತಳಾಗಿದ್ದಾಳೆ.

೧೩೬. ಎಲೈ ತಂದೆಯೇ, ನನಗೆ ಸಮಾನಳಾದ ನನ್ನ ಪ್ರಿಯೆಯಾದ ರಾಧೆಯು ಎಲ್ಲಾ ವಿಧದಿಂದಲೂ ವಂದನೆಗೆ ಅರ್ಹಳಾಗಿದ್ದಾಳೆ. ಈ ರೀತಿ ಬ್ರಹ್ಮಾಂಡಗಳ ವರ್ಣನೆಯನ್ನೆಲ್ಲ ತಿಳಿಸಿದುದಾಯಿತು. ಈ ವರ್ಣನೆಯು ಯಥೋಚಿತವೂ ಪರಿಮಿತವೂ ಆಗಿದೆ. ಮತ್ತೇನನ್ನು ಕೇಳಬೇಕೆಂದು ನಿನಗೆ ಆಶೆಯಿದೆ ತಿಳಿಸು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರದ ನಾರಾಯಣ ಸಂವಾದಾಂತರ್ಗತವಾದ
ಭಗವನ್ನಂದ ಸಂವಾದದಲ್ಲಿ ಎಂಭತ್ತನಾಲ್ಕನೆಯಅಧ್ಯಾಯ
ಮುಗಿದುದು ॥ ೮೪ ॥

## ಎಂಭತ್ತನಾಲ್ಕನೆಯ ಅಧ್ಯಾಯದ ಸಾರಂಶ.

ಅತಿಥಿಸತ್ಕಾರವೇ ಗೃಹಸ್ಥನ ಮುಖ್ಯಧರ್ಮ. ಯತಿಗಳು, ಬ್ರಹ್ಮಚಾರಿಗಳು ಮತ್ತು ಅತಿಥಿಗಳು ಗೃಹಸ್ಥನ ಆಶ್ರಯದಿಂದಲೇ ಜೀವಿಸಬೇಕಾಗಿರುವುದರಿಂದ ಗೃಹಸ್ಥನು ಉದಾರಿಯಾಗಿ ಇವರುಗಳಿಗೆಲ್ಲ ಆಶ್ರಯದಾತನಾಗಬೇಕು. ದೇವ ದ್ವಿಜಾತಿಥಿಸತ್ಕಾರಗಳನ್ನು ಬಿಟ್ಟು ಸ್ವಾರ್ಥಪರನಾಗಿ ಜೀವಿಸುವ ಗೃಹಸ್ಥನು ಮಹಾಪಾಪಿಯಾಗುವನು. ಪತಿವ್ರತೆಯಾದ ಹೆಂಗಸು ತನ್ನ ಪತಿಯ ಗಾರ್ಹಸ್ಥ್ಯ ಧರ್ಮಕ್ಕೆ ಸಹಕಾರಿಣಿಯಾಗಿದ್ದು ಪತಿಸೇವಾಪರಾಯಣೆಯಾಗಿರುವಳು. ಈ ರೀತಿ ಯಾದ ಸ್ತ್ರೀಯು ಉತ್ತಮವರ್ಗಕ್ಕೆ ಸೇರುವಳು. ಮಧ್ಯಮವರ್ಗದ ಹೆಂಗಸು ಗುರುಹಿರಿಯರ ಭಯದಿಂದ ತನಗಿಷ್ಟವಿಲ್ಲದಿದ್ದರೂ ಪತಿಯನ್ನು ಅನುಸರಿಸಿ ಕೊಂಡಿರುವಳು. ಅಧಮಳಾದ ಸ್ತ್ರೀಯು ಗುರುಹಿರಿಯರನ್ನು ಅಲಕ್ಷ್ಯಮಾಡಿ ತನ್ನ ಪತಿಗೆ ವಿರೋಧವಾಗಿ ವರ್ತಿಸುತ್ತ ಜಾರನೊಡನೆ ಸೇರುವಳು. ಇಂಥ ಸ್ತ್ರೀಯರಿಗೆ ಎಂದೆಂದಿಗೂ ಸದ್ಗತಿ ಇರುವುದಿಲ್ಲ. ವಿಷ್ಣುಭಕ್ತರೂ ಕೂಡ ಉತ್ತಮ ಮಧ್ಯಮ ಮತ್ತು ಅಧಮರೆಂದು ಮೂರು ವಿಧವಾಗಿರುವರು. ಅವರಲ್ಲಿ ಉತ್ತಮರು ಯಾವ ಫಲಾಪೇಕ್ಷೆಯೂ ಇಲ್ಲದೆ ಪರಮಾತ್ಮನ ಸೇವೆಯಲ್ಲಿ ನಿರತರಾಗಿರುವರು. ಮಧ್ಯಮ ರಾದ ಭಕ್ತರು ಕಾಯಾ ವಾಚಾ ಮನಸಾ ಫಲವನ್ನು ಬಯಸುತ್ತ ಪರಮಾತ್ಮನನು ಸೇವಿಸುವರು. ಅಧಮರು ಕೇವಲ ಡಂಭಾಚಾರಕ್ಕಾಗಿ ವಿಷ್ಣುಭಕ್ತಿ ಇರುವಂತೆ ನಟನೆಮಾಡುವರು.

ಈ ಅಧ್ಯಾಯದಲ್ಲಿ ಬಂದಿರುವ ಸೃಷ್ಟಿನಿರೂಪಣೆಯು ಈ ಗ್ರಂಥದ ಆರಂಭದಲ್ಲೇ ಬಂದಿರುವುದರಿಂದ ಅದರ ಸಾರಾಂಶವನ್ನು ಇಲ್ಲಿ ಬರೆಯುವುದು ಪುನರುಕ್ತಿಯಾಗುವು ದೆಂದು ಭಾವಿಸಲಾಗಿದೆ.



|| ಓಂ ||

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

|| ಪಂಚಾಶೀತಿತಮೋಽಧ್ಯಾಯಃ ||

|| ನಂದ ಉವಾಚ ||

**ವರ್ಣಾನಾಂ ಚ ಚತುರ್ಣಾಂ ಚ ಭಕ್ಷ್ಯಾಭಕ್ಷ್ಯಂ ಚ ಸಾಂಪ್ರತಂ ।**
**ವಿಪಾಕಂ ಕರ್ಮಣಾಂ ಚೈವ ಸರ್ವೇಷಾಂ ಪ್ರಾಣಿನಾಮಪಿ || ೧ ||**

**ಕಥಯಸ್ವ ಮಹಾಭಾಗ ಕಾರಣಾನಾಂ ಚ ಕಾರಣಂ ।**
**ತ್ವತ್ತೋಽನ್ಯಂ ಕಂ ಚ ಪೃಚ್ಛಾಮಿ ನಿತಾಂತಂ ಸಂಶಯೇಶ್ವರಂ || ೨ ||**

|| ಶ್ರೀ ಭಗವಾನುವಾಚ ||

**ಭಕ್ಷ್ಯಾಭಕ್ಷ್ಯಂ ಚತುರ್ಣಾಂ ಚ ವರ್ಣಾನಾಂ ಚ ಯಥೋಚಿತಂ ।**
**ವೇದೋಕ್ತಂ ಶ್ರೂಯತಾಂ ತಾತ ಸಾವಧಾನಂ ನಿಶಾಮಯ || ೩ ||**

---

### ಎಂಭತ್ತೈದನೆಯ ಅಧ್ಯಾಯವು

೧-೨. ನಂದನು ಹೇಳುತ್ತಾನೆ:—ಎಲೈ ಮಹಾತ್ಮನೇ! ನಾಲ್ಕುವರ್ಣದವರಿಗೂ ತಿನ್ನಲು ಯೋಗ್ಯವಾದ, ಅಯೋಗ್ಯವಾದ ವಸ್ತುಗಳನ್ನೂ ಮತ್ತು ಸಮಸ್ತ ಜಂತುಗಳ ಕರ್ಮಗಳ ಪ್ರಾಬಲ್ಯವನ್ನೂ ಈಗ ನನಗೆ ತಿಳಿಸುವವನಾಗು. ಸಮಸ್ತ ಕಾರಣಗಳಿಗೂ ಕಾರಣನೂ ಮಹಾತ್ಮನೂ ಈಶ್ವರನೂ ಆದ ನಿನ್ನನ್ನು ಬಿಟ್ಟು ಮತ್ತಾರನ್ನು ಕುರಿತು ಕೇಳಲಿ?

೩. ಭಗವಂತನು ಹೇಳುತ್ತಾನೆ:—ಎಲೈ ತಾತನೇ! ನಾಲ್ಕು ವರ್ಣಗಳವರಿಗೂ ಅವರವರಿಗೆ ತಕ್ಕಂತೆ ತಿನ್ನಬಹುದಾದ ಮತ್ತು ತಿನ್ನಬಾರದವುಗಳನ್ನು ವೇದದಲ್ಲಿ ಹೇಳಿರುವ ಪ್ರಕಾರವಾಗಿ ಹೇಳುತ್ತೇನೆ. ಸಾವಧಾನ ಮನಸ್ಕನಾಗಿ ಕೇಳುವವನಾಗು.

ಅಯಃಪಾತ್ರೇ ಪಯಃಪಾನಂ ಗವ್ಯಂ ಸಿದ್ಧಾನ್ನಮೇವ ಚ ।
ಭ್ರಷ್ಟಾದಿಕಂ ಮಧು ಗುಡಂ ನಾಲಿಕೇರೋದಕಂ ತಥಾ ॥ ೪ ॥

ಫಲಂ ಮೂಲಂ ಚ ಯತ್ಕಿಂಚಿದಭಕ್ಷ್ಯಂ ಮನುರಬ್ರವೀತ್ ।
ದಗ್ಧಾನ್ನಂ ತಪ್ತಸೌವೀರಮಭಕ್ಷ್ಯಂ ಬ್ರಹ್ಮನಿರ್ಮಿತಂ ॥ ೫ ॥

ನಾಲಿಕೇರೋದಕಂ ಕಾಂಸ್ಯೇ ತಾಮ್ರಪಾತ್ರೇ ಸ್ಥಿತಂ ಮಧು ।
ಗವ್ಯಂ ಚ ತಾಮ್ರಪಾತ್ರಸ್ಥಂ ಸರ್ವಂ ಮದ್ಯಂ ಘೃತಂ ವಿನಾ ॥ ೬ ॥

ತಾಮ್ರಪಾತ್ರೇ ಪಯಃಪಾನಮುಚ್ಛಿಷ್ಟಂ ಘೃತಭೋಜನಂ ।
ದುಗ್ಧಂ ಸಲವಣಂ ಚೈವ ಸದ್ಯೋ ಗೋಮಾಂಸಭಕ್ಷಣಂ ॥ ೭ ॥

ಅಭಕ್ಷ್ಯಂ ಮಧುಮಿಶ್ರಂ ಚ ಘೃತಂ ತೈಲಂ ಗುಡಂ ತಥಾ ।
ಆರ್ದ್ರಕಂ ಗುಡಸಂಯುಕ್ತಮಭಕ್ಷ್ಯಂ ಶ್ರುತಿಸಂಮತಂ ॥ ೮ ॥

---

೪–೫. ಕಬ್ಬಿಣದ ಪಾತ್ರೆಯಲ್ಲಿ ನೀರನ್ನು ಕುಡಿಯುವುದು, ಗೋವಿನ ಹಾಲು, ಮೊಸರು, ತುಪ್ಪ, ಗಂಜಳ ಮುಂತಾದುವನ್ನು ಕುಡಿಯುವುದು, ಕಬ್ಬಿಣದ ಪಾತ್ರೆಯಲ್ಲಿ ಮಾಡಿದ ಅನ್ನವನ್ನು ತಿನ್ನುವುದು ಮತ್ತು ಕೈಯಿಂದ ಜಾರಿಬಿದ್ದ ಅನ್ನವನ್ನು ತಿನ್ನುವುದು, ಕಬ್ಬಿಣದ ಪಾತ್ರೆಯಲ್ಲಿರುವ ಜೇನುತುಪ್ಪ, ಬೆಲ್ಲ ಮತ್ತು ತೆಂಗಿನಕಾಯಿ ನೀರು ಇವುಗಳನ್ನು ಸೇವಿಸುವುದೂ ಅಯುಕ್ತವಾದುದು. ಈ ಪಾತ್ರೆಯಲ್ಲಿ ಹಣ್ಣು ಗೆಡ್ಡೆ ಮುಂತಾದ ಯಾವ ಪದಾರ್ಥಗಳ ಸೇವನೆಯೂ ಅಭಕ್ಷ್ಯ. (ನಿಷಿದ್ಧವಾದುದೆಂದು, ಮನುವು ಹೇಳಿರುವನು.) ಮತ್ತು ಸೀದುಹೋದ ಅನ್ನವೂ ಕಾಯಿಸಿದ ಗಂಜಿಯೂ ಭಕ್ಷಣ ಯೋಗ್ಯವಲ್ಲವೆಂದು ಬ್ರಹ್ಮನು ಹೇಳಿರುವನು.

೬. ಕಂಚಿನ ಪಾತ್ರೆಯಲ್ಲಿಟ್ಟ ತೆಂಗಿನಕಾಯಿ ನೀರೂ. ತಾಮ್ರ ಪಾತ್ರೆಯಲ್ಲಿಟ್ಟ ಜೇನುತುಪ್ಪವೂ ಮತ್ತು ತಾಮ್ರಪಾತ್ರೆಯಲ್ಲಿಟ್ಟ ಹಸುವಿನ ಹಾಲು ಮುಂತಾದುವೂ ತುಪ್ಪವನ್ನು ಬಿಟ್ಟಿಲ್ಲವೂ ಮದ್ಯಕ್ಕೆ ಸಮನಾದುವುಗಳು.

೭. ತಾಮ್ರದ ಪಾತ್ರೆಯಲ್ಲಿ ಹಾಲನ್ನು ಕುಡಿಯುವುದು, ಎಂಜಲಾದ ಪಾತ್ರೆಯಲ್ಲಿ ತುಪ್ಪವನ್ನು ಇಟ್ಟುಕೊಂಡು ತಿನ್ನುವುದು ಮತ್ತು ಉಪ್ಪು ಹಾಕಿದ ಹಾಲನ್ನು ಸೇವಿಸುವುದು ಇವುಗಳು ಆ ಕ್ಷಣವೇ ಹಸುವಿನ ಮಾಂಸವನ್ನು ತಿಂದ ಪಾಪಫಲವನ್ನುಂಟುಮಾಡುತ್ತವೆ.

೮. ಮದ್ಯದಿಂದ ಕೂಡಿದ ತುಪ್ಪ ಎಣ್ಣೆ ಮತ್ತು ಬೆಲ್ಲ ಇವುಗಳನ್ನು ತಿನ್ನಬಾರದು. (ಬೆಲ್ಲವನ್ನು ಹಾಕಿದ ಹಸೀಶುಂಠಿಯನ್ನು ತಿನ್ನಬಾರದು) ಇದು ವೇದಸಂಮತವಾದುದು.

ಶೀತಶೇಷಜಲಂ ಚೈವ ಮಾಘೇ ಚ ಮೂಲಕಂ ತಥಾ ।
ಜಪಾದಿಕಂ ಚ ಶಯನೇ ಸದಾ ಪ್ರಾಜ್ಞಃ ಪರಿತ್ಯಜೇತ್ ॥ ೯ ॥

ಪಾನೀಯಂ ಪಾಯಸಂ ಚೂರ್ಣಂ ಘೃತಂ ಲವಣಮೇವ ಚ ।
ಭಕ್ಷ್ಯಂ ಚ ರಾತ್ರಿಶೇಷೇ ಚ ಧ್ರುವಂ ಪ್ರಾಜ್ಞಃ ಪರಿತ್ಯಜೇತ್ ॥ ೧೦ ॥

ದ್ವಿರ್ಭೋಜನಂ ಚ ದಿವಸೇ ಸಂಧ್ಯಯೋರ್ಭೋಜನಂ ತಥಾ ।
ಸ್ವಸ್ತಿಕಂ ಗುಡಕಂ ಚೈವ ಕ್ಷೀರಂ ತಕ್ರಂ ತಥಾ ಮಧು ॥ ೧೧ ॥

ಹಸ್ತಾದ್ಧಸ್ತಗೃಹೀತಂ ಚ ಸದ್ಯೋ ಗೋಮಾಂಸಮೇವ ಚ ।
ಕರ್ಪೂರಂ ರೌಪ್ಯಪಾತ್ರಸ್ಥಮಭಕ್ಷ್ಯಂ ಶ್ರುತಿಸಂಮತಂ ॥ ೧೨ ॥

ಪರಿವೇಷಣಕಾರೀ ಚೇದ್ಭೋಕ್ತಾರಂ ಸ್ಪೃಶತೇ ಯದಿ ।
ಅಭಕ್ಷ್ಯಂ ಚ ತದನ್ನಂ ಚ ಸರ್ವೇಷಾಮೇವ ಸಂಮತಂ ॥ ೧೩ ॥

---

೯. ಜ್ಞಾನಿಯಾದವನು ಅರ್ಧ ಕುಡಿದುಳಿದ ನೀರನ್ನೂ ಮಾಘಮಾಸದಲ್ಲಿ ಮೂಲಂಗಿಯನ್ನೂ ಸೇವಿಸಬಾರದು. ಮತ್ತು ಹಾಸಿಗೆಯಮೇಲೆ ಜಪ ಮುಂತಾದವುಗಳನ್ನು ಯಾವಾಗಲೂ ಬಿಡಬೇಕು.

೧೦. ಬುದ್ಧಿವಂತನಾದವನು ಹಗಲಿನಲ್ಲಿ ಎರಡು ಸಾರಿ ಊಟಮಾಡುವುದನ್ನೂ ಮತ್ತು ಪ್ರಾತಸಂಧ್ಯೆ, ಸಾಯಂಸಂಧ್ಯೆಗಳಲ್ಲಿ ಊಟ ಮಾಡುವುದನ್ನೂ ಬೆಳಗಿನ ಜಾವದಲ್ಲಿ ತಿನ್ನುವುದನ್ನೂ ಖಂಡಿತವಾಗಿಯೂ ಬಿಡಬೇಕು.

೧೧-೧೨. ಕೈಯಿಂದ ಕೈಗೆ ಕೊಡಲ್ಪಟ್ಟ ನೀರು. ಪಾಯಸ, ಸುಣ್ಣ, ತುಪ್ಪ, ಉಪ್ಪು, ಬೆಲ್ಲ, ಹಾಲು, ಮಜ್ಜಿಗೆ, ಮತ್ತು ಜೇನುತುಪ್ಪ ಇವುಗಳೆಲ್ಲವೂ ಆಕ್ಷಣವೆ ಗೋ ಮಾಂಸ ಸಮನಾಗುತ್ತವೆ. ಮತ್ತು ಬೆಳ್ಳಿಯ ಪಾತ್ರೆಯಲ್ಲಿಟ್ಟ ಪಚ್ಚಕರ್ಪೂರವನ್ನು ಸೇವಿಸಬಾರದು. ಇವು ವೇದಸಂಮತಗಳು.

೧೩. ಊಟದ ಸಮಯದಲ್ಲಿ ಬಡಿಸುತ್ತಿರುವವನು ಊಟಮಾಡುವವನನ್ನು ಮುಟ್ಟಿದುದೇ ಆದರೆ ಇತರರಾರೂ ಆ ಅನ್ನವನ್ನು ತಿನ್ನಬಾರದು.

ನಕುಲಾನಾಂ ಗಂಡಕಾನಾಂ ಮಹಿಷಾಣಾಂ ಚ ಪಕ್ಷಿಣಾಂ ।
ಸರ್ಪಾಣಾಂ ಸೂಕರಾಣಾಂ ಚ ಗರ್ದಭಾನಾಂ ವಿಶೇಷತಃ ॥ ೧೪ ॥

ಮಾರ್ಜಾರಾಣಾಂ ಸೃಗಾಲಾನಾಂ ಕುಕ್ಕುಟಾನಾಂ ವ್ರಜೇಶ್ವರ ।
ವ್ಯಾಘ್ರಾಣಾಮಪಿ ಸಿಂಹಾನಾಂ ತ್ಯಾಜ್ಯಂ ಮಾಂಸಂ ನೃಣಾಂ ಸದಾ ॥ ೧೫ ॥

ಜಲೌಕಸಾಂ ಚ ನಕ್ರಾಣಾಂ ಗೋಧಿಕಾನಾಂ ತಥೈವ ಚ ।
ಮಂಡೂಕಾನಾಂ ಕರ್ಕಟೀನಾಂ ಚುಂಚುಕಾನಾಂ ಚ ನಿಶ್ಚಿತಂ ॥ ೧೬ ॥

ಗವಾಂ ಚ ಚಮರೀಣಾಂ ಚ ನ ಕಲೌ ಮಾಂಸಭಕ್ಷಣಂ ।
ಹಸ್ತಿನಾಂ ಘೋಟಕಾನಾಂ ಚ ನೃಣಾಮೇವ ಚ ರಕ್ಷಸಾಂ ॥ ೧೭ ॥

ದಂಶಶ್ಚ ಮಶಕಶ್ಚೈವ ಮಕ್ಷಿಕಾ ಚ ಪಿಪೀಲಿಕಾ ।
ಅನ್ಯೇಷಾಂ ಚ ನಿಷಿದ್ಧಾನಾಂ ಲೋಕೇ ವೇದೇ ವ್ರಜೇಶ್ವರ ॥ ೧೮ ॥

ವಾನರಾಣಾಂ ಭಲ್ಲುಕಾನಾಂ ಶರಭಾಣಾಂ ತಥೈವ ಚ ।
ನಿಷಿದ್ಧಂ ಮೃಗನಾಭೀನಾಂ ಗರ್ದಭಾನಾಂ ಚ ಮಾಂಸಕಂ ॥ ೧೯ ॥

---

೧೪–೧೫. ಎಲೈ ನಂದಗೋಕುಲದ ಯಜಮಾನನೇ, ಮಾನವನು ಮುಂಗುಸಿ, ಖಡ್ಗಮೃಗ, ಕೋಣ, ಹಕ್ಕಿ, ಹಾವು, ಹಂದಿ, ಕತ್ತೆ, ಬೆಕ್ಕು, ನರಿ, ಕೋಳಿ, ಹುಲಿ, ಸಿಂಹ ಇವೇ ಮುಂತಾದ ಪ್ರಾಣಿಗಳ ಮಾಂಸವನ್ನು ಯಾವತ್ತೂ ಬಿಡುವವನಾಗಬೇಕು.

೧೬–೧೭. ನೀರಿನಲ್ಲಿ ವಾಸಿಸುವ ಪ್ರಾಣಿಗಳಾದ ಮೊಸಳೆ, ನೀರುಡುವು ಮತ್ತು ಕಪ್ಪೆ, ಏಡಿ, ಚಿಟ್ಟೆಲಿ ಇವುಗಳನ್ನು ತಿನ್ನಬಾರದು ; ಮತ್ತು ಗೋವುಗಳ, ಚಮರೀಮೃಗಗಳ, ಆನೆಗಳ, ಕುದುರೆಗಳ, ಮನುಷ್ಯರ ಮತ್ತು ರಾಕ್ಷಸರ ಮಾಂಸವನ್ನು ಕಲಿಯುಗದಲ್ಲಿ ತಿನ್ನಬಾರದು.

೧೮. ಎಲೈ ಗೋಕುಲದ ಯಜಮಾನನೇ! ನೊಣ, ಸೊಳ್ಳೆ, ದೊಡ್ಡನೊಣ ಇರುವೆ ಮತ್ತು ಲೋಕದಲ್ಲಿಯೂ ವೇದದಲ್ಲಿಯೂ ನಿಷೇಧ ಮಾಡಲ್ಪಟ್ಟ ಪ್ರಾಣಿಗಳು ಇವುಗಳನ್ನು ತಿನ್ನಬಾರದು.

೧೯. ಕಪಿಗಳ, ಕರಡಿಗಳ, ಶರಭ ಮೃಗಗಳ, ಕಸ್ತೂರೀ ಮೃಗಗಳ ಮತ್ತು ಕತ್ತೆಗಳ ಮಾಂಸವನ್ನೂ ತಿನ್ನಬಾರದು.

ಅಭಕ್ಷ್ಯಂ ಮಹಿಷೀಣಾಂ ಚ ದುಗ್ಧಂ ದಧಿ ಘೃತಂ ತಥಾ ।
ಸ್ವಸ್ತಿಕಂ ಚ ತಥಾ ತತ್ರ ವಿಪ್ರಾಣಾಂ ನವನೀತಕಂ ॥ ೨೦ ॥

ಮಾಂಸಮುಚ್ಚೈಃಶ್ರವಸಕಂ ತಸ್ಯ ದುಗ್ಧಾದಿಕಂ ತಥಾ ।
ವರ್ಣಾನಾಂ ಚ ಚತುರ್ಣಾಂ ಚಾಪ್ಯಭಕ್ಷ್ಯಂ ಚ ಶ್ರುತೌ ಶ್ರುತಂ ॥ ೨೧ ॥

ಅಭಕ್ಷ್ಯಮಾರ್ದ್ರಕಂ ಚೈವ ಸರ್ವೇಷಾಂ ಚ ರವೇರ್ದಿನೇ ।
ಪರ್ಯುಷಿತಂ ಜಲಂ ಚಾನ್ನಂ ವಿಪ್ರಾಣಾಂ ದುಗ್ಧಮೇವ ಚ ॥ ೨೨ ॥

ವರ್ಣಾನಾಂ ಚ ಚತುರ್ಣಾಂ ಚಾಪ್ಯವೀರಾನ್ನಸ್ಯ ಭಕ್ಷಣಂ ।
ತದನ್ನಂ ಚ ಸುರಾತುಲ್ಯಂ ಗೋಮಾಂಸಾಧಿಕಮೇವ ಚ ॥ ೨೩ ॥

ಅವೀರಾನ್ನಂ ಚ ಯೋ ಭುಂಕ್ತೇ ಬ್ರಾಹ್ಮಣೋ ಜ್ಞಾನದುರ್ಬಲಃ ।
ಪಿತೃದೇವಾರ್ಚನಂ ತಸ್ಯ ನಿಷ್ಫಲಂ ಮನುರಬ್ರವೀತ್ ॥ ೨೪ ॥

---

೨೦. ಎಮ್ಮೆಯಹಾಲು, ಮೊಸರು ಮತ್ತು ತುಪ್ಪ ಇವುಗಳನ್ನು ತಿನ್ನಬಾರದು. ಬ್ರಾಹ್ಮಣರು ಆದರ ಬೆಣ್ಣೆಯನ್ನೂ ಅದರಲ್ಲಿ ಮಾಡಿದ ಭಕ್ಷ್ಯವನ್ನೂ ತಿನ್ನಬಾರದು.

೨೧. ಉಚ್ಚೈಃಶ್ರವಸ್ಸಿನ ಮಾಂಸವನ್ನೂ ಮತ್ತು ಆದರ ಹಾಲು ಮುಂತಾದವುಗಳನ್ನೂ ನಾಲ್ಕು ವರ್ಣದವರೂ ತಿನ್ನಬಾರದೆಂದು ವೇದದಲ್ಲಿ ಹೇಳಲ್ಪಟ್ಟಿರುವುದು.

೨೨. ಭಾನುವಾರದ ದಿನ ಯಾರೂ ಹಸೀ ಶುಂಠಿಯನ್ನು ತಿನ್ನಬಾರದು. ಬ್ರಾಹ್ಮಣನು ತಂಗಳನ್ನವನ್ನೂ ಹಳೆಯ ಹಾಲನ್ನೂ ಸೇವನೆ ಮಾಡಬಾರದು.

೨೩. ನಾಲ್ಕು ವರ್ಣದವರೂ ಕೂಡ ಗಂಡನೂ ಮಕ್ಕಳೂ ಇಲ್ಲದವರ ಅನ್ನವನ್ನು ತಿನ್ನಬಾರದು. ಆ ಅನ್ನವು ಹೆಂಡಕ್ಕೆ ಸಮಾನವಾದುದಲ್ಲದೆ ಗೋಮಾಂಸಕ್ಕಿಂತಲೂ ಹೆಚ್ಚಿನದಾಗಿರುತ್ತದೆ.

೨೪. ಯಾವ ಬ್ರಾಹ್ಮಣನು ಬುದ್ಧಿಯಿಲ್ಲದವನಾಗಿ ಗಂಡನೂ ಮಕ್ಕಳೂ ಇಲ್ಲದ ಸ್ತ್ರೀಯು ಮಾಡಿದ ಅನ್ನವನ್ನು ತಿನ್ನುತ್ತಾನೋ ಅವನು ಮಾಡಿದ ದೇವರ ಪೂಜೆ, ಪಿತೃಪೂಜೆ ಇವುಗಳೆಲ್ಲವೂ ವ್ಯರ್ಥವಾದುವುಗಳೆಂದು ಮನುವು ಹೇಳಿರುತ್ತಾನೆ.

ಬ್ರಾಹ್ಮಣಾನಾಂ ವೈಷ್ಣವಾನಾಮಭಕ್ಷ್ಯಂ ಮಾತ್ಸ್ಯಮೇವ ಚ ।
ಇತರೇಷಾಮಭಕ್ಷ್ಯಂ ಚ ಪಂಚಪರ್ವಸು ನಿಶ್ಚಿತಂ ॥ ೨೫ ॥

ಪಿತೃದೇವಾವಶೇಷೇ ಚ ಭಕ್ಷ್ಯಂ ಮಾಂಸಂ ನ ದೂಷಿತಂ ।
ಪಂಚಪರ್ವಸು ತ್ಯಾಜ್ಯಂ ಚ ಸರ್ವೇಷಾಂ ಮನುರಬ್ರವೀತ್ ॥ ೨೬ ॥

ಅಸಂಸ್ಕೃತಂ ಚ ಲವಣಂ ತೈಲಂ ಚಾಭಕ್ಷ್ಯಮೇವ ಚ ।
ಭಕ್ಷ್ಯಂ ಪವಿತ್ರಂ ಸರ್ವೇಷಾಂ ವ್ಯಂಜನಂ ವಹ್ನಿಸಂಸ್ಕೃತಂ ॥ ೨೭ ॥

ಏಕಹಸ್ತೇ ಘೃತಂ ತೋಯಮಭಕ್ಷ್ಯಂ ಸರ್ವಸಂಮತಂ ।
ಆವಿಲಂ ಕೃಮಿಯುಕ್ತಂ ವಾ ಪರಿಶುದ್ಧಂ ಚ ನಿರ್ಮಲಂ ॥ ೨೮ ॥

ಅಭಕ್ಷ್ಯಂ ಬ್ರಾಹ್ಮಣಾನಾಂ ಚ ವೈಷ್ಣವಾನಾಂ ವಿಶೇಷತಃ ।
ಅನಿವೇದ್ಯಂ ಹರೇರೇವ ಯತೀನಾಂ ಬ್ರಹ್ಮಚಾರಿಣಾಂ ॥ ೨೯ ॥

---

೨೫. ವಿಷ್ಣು ಭಕ್ತರಾದ ಬ್ರಾಹ್ಮಣರು ಮೀನಿನ ಮಾಂಸವನ್ನು ತಿನ್ನಬಾರದು; ಇತರರು ಪಂಚ ಪರ್ವಗಳಲ್ಲಿ ಇದನ್ನು ತಿನ್ನಬಾರದು.

೨೬. ಪಿತೃಗಳಿಗೂ ದೇವರಿಗೂ ನಿವೇದನಮಾಡಿ ಉಳಿದ ಮಾಂಸವನ್ನು ತಿನ್ನಬಹುದು. ಪಂಚಪರ್ವಗಳಲ್ಲಿ ಯಾರೂ ಮಾಂಸವನ್ನು ತಿನ್ನಬಾರದೆಂದು ಮನು ವು ಹೇಳಿರುವನು.

೨೭. ಶುದ್ಧಿ ಮಾಡದಿರುವ ಉಪ್ಪು ಮತ್ತು ಎಣ್ಣೆ ಇವುಗಳನ್ನು ತಿನ್ನಲೇ ಬಾರದು. ಬೆಂಕಿಯಿಂದ ಸಂಸ್ಕಾರ ಹೊಂದಿದ (ಬೆಂದ) ತರಕಾರಿಯು ಎಲ್ಲರಿಗೂ ತಿನ್ನಲು ಯೋಗ್ಯವಾಗಿರುತ್ತದೆ.

೨೮-೨೯. ಒಂದು ಕೈಯಲ್ಲಿ ತುಪ್ಪ ಮತ್ತು ನೀರನ್ನು ಯಾರೂ ಸೇವಿಸಬಾರದೆಂಬುದು ಸರ್ವರಿಗೂ ಸಂಮತವಾಗಿರುತ್ತದೆ. ಕದಡಿಹೋದ, ಕ್ರಿಮಿಗಳಿಂದ ಕೂಡಿದ, ಪರಿಶುದ್ಧವಲ್ಲದ ಮತ್ತು ಕೊಳೆಯಾದ ವಸ್ತುಗಳನ್ನು ಸೇವಿಸಬಾರದು; ಮತ್ತು ಬ್ರಾಹ್ಮಣರಿಗೂ ಹರಿಭಕ್ತರಿಗೂ ಪರಮಾತ್ಮನಿಗೂ ಸನ್ಯಾಸಿಗಳಿಗೂ ಬ್ರಹ್ಮಚಾರಿಗಳಿಗೂ ಸಮರ್ಪಿಸದ ಅನ್ನವನ್ನು ತಿನ್ನಬಾರದು.

ಪಿಪೀಲಿಕಾಮಿಶ್ರಿತಂ ಚ ಮಧು ಗವ್ಯಂ ಗುಡಂ ತಥಾ ।
ಯತ್ಕಿಂಚಿದ್ವಸ್ತು ವಾ ತಾತ ನ ಭಕ್ಷ್ಯಂ ಚ ಶ್ರುತೌ ಶ್ರುತಂ ॥ ೩೦ ॥

ಪಕ್ಷಿಭಕ್ಷ್ಯಂ ಕೀಟಭಕ್ಷ್ಯಂ ಶುದ್ಧಂ ಪಕ್ವಫಲಂ ತಥಾ ।
ಕಾಕಭಕ್ಷ್ಯಮಭಕ್ಷ್ಯಂ ಚ ಸರ್ವೇಷಾಂ ದ್ರವ್ಯಮೇವ ಚ ॥ ೩೧ ॥

ಘೃತಪಕ್ವಂ ತೈಲಪಕ್ವಂ ಮಿಷ್ಟಾನ್ನಂ ಶೂದ್ರಸಂಸ್ಕೃತಂ ।
ಅಭಕ್ಷ್ಯಂ ಬ್ರಾಹ್ಮಣಾನಾಂ ಚ ಶೂದ್ರಭಕ್ಷ್ಯಂ ಚ ಪೀಠಕಂ ॥ ೩೨ ॥

ಸರ್ವೇಷಾಮಶುಚೀನಾಂ ಚ ಜಲಮನ್ನಂ ಪರಿತ್ಯಜೇತ್ ।
ಅಶೌಚಾಂತಾತ್ಪರದಿನೇ ಶುದ್ಧಮೇವ ನ ಸಂಶಯಃ ॥ ೩೩ ॥

ವಿಪಾಕಂ ಕರ್ಮಣಾಮೇವ ದುಷ್ಕರಂ ಶ್ರುತಿಸಂಮತಂ ।
ಭಕ್ಷ್ಯಾಭಕ್ಷ್ಯಂ ಚ ಕಥಿತಂ ಯಥಾಜ್ಞಾನಂ ವ್ರಜೇಶ್ವರ ॥ ೩೪ ॥

---

೩೦. ಎಲೈ ತಂದೆಯೇ ! ಇರುವೆಗಳಿಂದ ಕೂಡಿದ ಜೇನುತುಪ್ಪ, ಹಾಲು, ಮೊಸರು, ತುಪ್ಪ ಮೊದಲಾದ ಯಾವ ವಸ್ತುವೇ ಆಗಲಿ ಅದನ್ನು ತಿನ್ನಬಾರದೆಂದು ವೇದದಲ್ಲಿ ಹೇಳಿದೆ.

೩೧. ಹಕ್ಕಿಗಳು ಹುಳುಗಳು ತಿಂದ ಗಳಿತ ಹಣ್ಣುಗಳು ಶುದ್ಧವಾದವುಗಳಾಗಿರುತ್ತವೆ. ಕಾಗೆಯು ತಿಂದ ಯಾವ ಪದಾರ್ಥವನ್ನೂ ತಿನ್ನಬಾರದು.

೩೨. ಶೂದ್ರರಿಂದ ಮಾಡಲ್ಪಟ್ಟ ತುಪ್ಪ ಎಣ್ಣೆ ಇವುಗಳಲ್ಲಿ ಬೇಯಿಸಿದ ಪದಾರ್ಥಗಳನ್ನೂ ಮೃಷ್ಟಾನ್ನಗಳನ್ನೂ ಶೂದ್ರರು ತಿನ್ನುವ ಹಿಟ್ಟನ್ನೂ ಸಹ ಬ್ರಾಹ್ಮಣರು ತಿನ್ನಬಾರದು.

೩೩. ಅಶುದ್ಧರಾದವರು ಯಾರೇ ಆಗಲಿ ಅವರು ಮುಟ್ಟಿದ ಅನ್ನ ನೀರು ಮುಂತಾದುವುಗಳನ್ನು ಸೇವಿಸಬಾರದು. ಅವರ ಅಶುದ್ಧಿಯು ಕಳೆದ ಮಾರನೆಯ ದಿನ ಇವೆಲ್ಲವೂ ಶುದ್ಧಗಳೇ ಆಗುತ್ತವೆ. ಸಂದೇಹವಿಲ್ಲ.

೩೪. ಎಲೈ ಗೋಕುಲಾಧಿಪತಿಯೇ ! ಕರ್ಮಗಳ ಪಾಪ ಫಲಗಳನ್ನು ವೇದದಲ್ಲಿ ಹೇಳಿರುವ ಪ್ರಕಾರವಾಗಿ ನನ್ನ ಬುದ್ಧಿಗೆ ತಿಳಿದಮಟ್ಟಿಗೆ ಹೇಳಿರುವೆನು : ಮತ್ತು ತಿನ್ನಬಹುದಾದ, ತಿನ್ನಬಾರದ ಪದಾರ್ಥಗಳನ್ನೂ ತಿಳಿಸಿರುವೆನು.

ಕ್ರಮಾಚ್ಚತುರ್ಷು ವೇದೇಷು ಚೋಕ್ತಂ ಮತಚತುಷ್ಟಯಂ ।
ಸರ್ವೇಷಾಂ ಸಾರಭೂತಂ ಚ ಕಥಯಾಮಿ ಪಿತಃ ಶೃಣು　　|| ೩೫ ||

ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ　　|| ೩೬ ||

ತೀರ್ಥಾನಾಂ ಚ ಸುರಾಣಾಂ ಚ ಸಹಾಯೇನ ನೃಣಾಮಪಿ ।
ಕಿಂಚಿದ್ಭವತಿ ಸಾಹಾಯ್ಯಂ ಕಾಯವ್ಯೂಹೇನ ಸರ್ವತಃ　　|| ೩೭ ||

ಪ್ರಾಯಶ್ಚಿತ್ತಾನಿ ಚೀರ್ಣಾನಿ ನಿಶ್ಚಿತಂ ಮತ್ಪರಾಙ್ಮುಖಂ ।
ನ ನಿಷ್ಪುನಂತಿ ಹೇ ತಾತ ಸುರಾಕುಂಭಮಿವಾಪಗಾಃ　　|| ೩೮ ||

ಪ್ರಾಯಶ್ಚಿತ್ತೇನ ಪುಣ್ಯೇನ ನ ಹಿ ಶುದ್ಧ್ಯಂತಿ ಮಾನವಾಃ ।
ಸರ್ವಾರಂಭೇಣ ವೈಶ್ಯೇಂದ್ರ ದಾನೇನ ಯೋಗತೋಽಪಿ ವಾ　　|| ೩೯ ||

---

೩೫. ಎಲೈ ತಂದೆಯೇ! ಕೇಳುವವನಾಗು, ಕ್ರಮವಾಗಿ ನಾಲ್ಕುವೇದಗಳಲ್ಲಿಯೂ ನಾಲ್ಕು ಮತಗಳು ಹೇಳಲ್ಪಟ್ಟಿರುವುವು; ಅವುಗಳ ಸಾರಾಂಶವನ್ನು ಹೇಳುತ್ತೇನೆ.

೩೬. ಪ್ರಾಣಿಯು ಮಾಡಿದ ಪಾಪ ಪುಣ್ಯಕರ್ಮವು ನೂರು ಕೋಟಿ ಕಲ್ಪಗಳಾದರೂ ಅನುಭವಿಸದೇ ನಾಶವಾಗುವುದಿಲ್ಲ, ತಾನು ಮಾಡಿದ ಒಳ್ಳೆಯದೋ ಕೆಟ್ಟುದೋ ಕರ್ಮವನ್ನು ಯತ್ನವಿಲ್ಲದೆ ಅನುಭವಿಸಲೇಬೇಕು.

೩೭. ತೀರ್ಥಗಳ ಸಹಾಯದಿಂದಲೂ ದೇವತೆಗಳ ಸಹಾಯದಿಂದಲೂ ಮನುಷ್ಯರಿಗೆ ಸ್ವಲ್ಪ ಉಪಕಾರವಾಗುತ್ತದೆ. ಆದರೆ ದೇಹದಂಡನೆಯಿಂದ ಮಾನವನಿಗೆ ಎಲ್ಲೆಡೆಯಲ್ಲಿಯೂ ಉಪಕಾರವಾಗುತ್ತದೆ.

೩೮. ಎಲೈ ತಂದೆಯೇ! ನನ್ನಲ್ಲಿ ಭಕ್ತಿಯಿಲ್ಲದವನು ಯಾವ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೂ ಕೂಡ ಹೆಂಡದ ಗಡಿಗೆಯನ್ನು ಮಹಾನದಿಗಳು ಹೇಗೆ ಶುದ್ಧಿಮಾಡಲಾರವೋ ಹಾಗೆ ಅವುಗಳು ಮಾನವನನ್ನು ಶುದ್ಧಿಮಾಡಲಾರವು; ನಿಶ್ಚಯವು.

೩೯. ಎಲೈ ವೈಶ್ಯಶ್ರೇಷ್ಠನೇ! ಮನುಷ್ಯರು ಪ್ರಾಯಶ್ಚಿತ್ತದಿಂದಲಾಗಲೀ ಪುಣ್ಯದಿಂದಲಾಗಲೀ ಸಕಲ ಕರ್ಮಗಳನ್ನು ಮಾಡುವುದರಿಂದಲಾಗಲೀ ದಾನದಿಂದಲಾಗಲೀ ಯೋಗದಿಂದಲಾಗಲೀ ಶುದ್ಧರಾಗುವುದಿಲ್ಲ.

ಶುಭಾಶುಭಂ ಚ ಯತ್ಕರ್ಮ ವಿನಾ ಭೋಗಾನ್ನ ಚ ಕ್ಷಯಃ ।
ಭೋಗೇನ ಶುದ್ಧಿಮಾಪ್ನೋತಿ ತತೋ ಮುಕ್ತಿರ್ಭವೇನ್ನೃಣಾಂ ॥ ೪೦ ॥

ನ ನಷ್ಟಂ ದುಷ್ಕೃತಂ ಕರ್ಮ ಸುಕೃತೇನ ಚ ಕರ್ಮಣಾ ।
ನ ನಷ್ಟಂ ಸುಕೃತಂ ಕರ್ಮ ಕೃತೇನ ದುಷ್ಕೃತೇನ ಚ ॥ ೪೧ ॥

ಯಜ್ಞೇನ ತಪಸಾ ವಾಪಿ ವ್ರತೇನಾನಶನೇನ ಚ ।
ತೀರ್ಥಸ್ನಾನೇನ ದಾನೇನ ಜಪೇನ ನಿಯಮೇನ ಚ ॥ ೪೨ ॥

ಭುವಃ ಪ್ರದಕ್ಷಿಣೇನೈವ ಪುರಾಣಶ್ರವಣೇನ ಚ ।
ಉಪದೇಶೇನ ಪುಣ್ಯೇನ ಪೂಜಯಾ ಗುರುದೇವಯೋಃ ॥ ೪೩ ॥

ಸ್ವಧರ್ಮಾಚರಣೇನೈವಾತಿಥೀನಾಂ ಪೂಜನೇನ ಚ ।
ಬ್ರಹ್ಮಣಾಂ ಪೂಜನೇನೈವ ಭೋಜನೇನ ವಿಶೇಷತಃ ॥ ೪೪ ॥

---

೪೦. ಒಳ್ಳೆಯದಾಗಲೀ ಕೆಟ್ಟದಾಗಲೀ ಯಾವಕರ್ಮವೂ ಅನುಭವಿಸದೇ ನಾಶವಾಗುವುದಿಲ್ಲ. ಅನುಭವಿಸಿದನಂತರ ಶುದ್ಧಿಯನ್ನು ಪಡೆಯುತ್ತಾನೆ. ಆ ಮೇಲೆ ಮಾನವರಿಗೆ ಮೋಕ್ಷವು ದೊರೆಯುತ್ತದೆ.

೪೧. ಮಾನವನ ಪಾಪಕರ್ಮವು ಪುಣ್ಯಕರ್ಮದಿಂದ ನಾಶವಾಗುವುದಿಲ್ಲ. ಹಾಗೆಯೇ ಪಾಪಕರ್ಮವನ್ನು ಮಾಡುವುದರಿಂದ ಪುಣ್ಯಕರ್ಮವೂ ಕೂಡ ನಾಶವಾಗುವುದಿಲ್ಲ.

೪೨–೪೪. ಯಾಗದಿಂದಾಗಲೀ ತಪಸ್ಸಿನಿಂದಾಗಲೀ ಉಪವಾಸ ವ್ರತದಿಂದಲಾಗಲೀ ತೀರ್ಥಗಳಲ್ಲಿ ಸ್ನಾನಮಾಡುವುದರಿಂದಲಾಗಲೀ ದಾನಗಳನ್ನು ಮಾಡುವುದರಿಂದಲಾಗಲೀ ಜಪ ಮಾಡುವುದರಿಂದಲಾಗಲೀ ನಿಯಮಗಳನ್ನು ಆಚರಿಸುವುದರಿಂದಲಾಗಲೀ ಭೂಮಿಯನ್ನು ಪ್ರದಕ್ಷಿಣೆ ಮಾಡುವುದರಿಂದಲಾಗಲೀ ಪುರಾಣಗಳನ್ನು ಕೇಳುವುದರಿಂದಲಾಗಲೀ ಪುಣ್ಯಕರವಾದ ಉಪದೇಶದಿಂದಲಾಗಲೀ ಗುರುಗಳು ಮತ್ತು ದೇವರು ಇವರುಗಳನ್ನು ಪೂಜೆಮಾಡುವುದರಿಂದಲಾಗಲೀ ತನ್ನ ಧರ್ಮವನ್ನು ನಡೆಸುವುದರಿಂದಲಾಗಲೀ ಅತಿಥಿಗಳನ್ನು ಪೂಜಿಸುವುದರಿಂದಲಾಗಲೀ ಬ್ರಾಹ್ಮಣರನ್ನು ವಿಶೇಷವಾಗಿ ಪೂಜಿಸಿ ಭೋಜನ ಮಾಡಿಸುವುದರಿಂದಲಾಗಲೀ ಪಾಪ ಕರ್ಮವು ನಾಶವಾಗುವುದಿಲ್ಲ.

ಯದ್ದತ್ತಮಪಿ ವಿಪ್ರಾಯ ತತ್ಪ್ರಾಪ್ತಂ ಪೂರ್ಣರೂಪತಃ ।
ಬೀಜರೂಪಂ ಚ ತದ್ದಾನಂ ಕ್ಷೇತ್ರರೂಪಂ ಚ ಬ್ರಾಹ್ಮಣಃ ॥ ೪೫ ॥

ಏಕೇನ ಕರ್ಮಣಾ ತಾತ ಸ್ವರ್ಗಂ ಪ್ರಾಪ್ನೋತಿ ಮಾನವಃ ।
ಕರ್ಮಣಾ ನ ಹಿ ಮೋಕ್ಷಂ ಚ ತದೇವ ಮಮ ಸೇವಯಾ ॥ ೪೬ ॥

ಸ್ವರ್ಗಂ ಚ ಸುಕೃತೇನೈವ ನರಕಂ ದುಷ್ಕೃತೇನ ಚ ।
ವ್ಯಾಧಿರ್ಜನ್ಮ ಚ ಯೋನೌ ಚ ಕುತ್ಸಿತೇನ ತತಃ ಶುಚಿಃ ॥ ೪೭ ॥

ಗೋಘ್ನೋ ಯೋ ಬ್ರಾಹ್ಮಣಾನಾಂ ಚ ಕಾಮತಶ್ಚೋಪಪಾತಕೀ ।
ಪಂದಶೂಕತ್ವಮಾಪ್ನೋತಿ ಗೋಲೋಮಸಮವರ್ಷಕಂ ॥ ೪೮ ॥

ಸರ್ಪೇಣ ಭಕ್ಷಿತಸ್ತೇನ ಜ್ವಾಲಯಾ ಗರಲಸ್ಯ ಚ ।
ತೃಷಿತೋ ವ್ಯಥಿತಶ್ಚೈವ ನಿರಾಹಾರಃ ಕೃಶೋದರಃ ॥ ೪೯ ॥

---

೪೫. ಯಾವುದನ್ನು ಬ್ರಾಹ್ಮಣನಿಗೆ ದಾನಮಾಡಿರುತ್ತಾನೋ ಅದನ್ನು ಅದೇರೂಪದಿಂದ ಸಂಪೂರ್ಣವಾಗಿ ಪಡೆಯುತ್ತಾನೆ. ಆ ದಾನವು ಬೀಜಸ್ವರೂಪವಾದುದು. ಬ್ರಾಹ್ಮಣನು ಆ ಬೀಜಕ್ಕೆ ಭೂಮಿಯರೂಪನಾಗಿರುವನು.

೪೬. ಎಲೈ ತಂದೆಯೇ! ಮೇಲೆ ಹೇಳಿರುವ ಕರ್ಮಗಳಿಂದ ಮಾನವನು ಸ್ವರ್ಗವನ್ನು ಪಡೆಯುತ್ತಾನೆ. ಕರ್ಮದಿಂದ ಮೋಕ್ಷವನ್ನು ಹೊಂದುವುದಿಲ್ಲ. ಆ ಮೋಕ್ಷವು ನನ್ನನ್ನು ಸೇವಿಸುವುದರಿಂದ ದೊರೆಯುತ್ತದೆ.

೪೭. ಪುಣ್ಯಕರ್ಮಗಳಿಂದ ಮಾತ್ರ ಸ್ವರ್ಗವು ಲಭಿಸುತ್ತದೆ. ಪಾಪಕರ್ಮದಿಂದ ನರಕವಾಸವೂ ವ್ಯಾಧಿಯೂ ಹೀನ ಜನ್ಮದಲ್ಲಿ ಹುಟ್ಟುವಿಕೆಯೂ ಉಂಟಾಗಿ ಅನಂತರ ಪರಿಶುದ್ಧನಾಗುತ್ತಾನೆ.

೪೮. ಯಾವ ಬ್ರಾಹ್ಮಣನು ಬುದ್ಧಿಪೂರ್ವಕವಾಗಿ ಗೋವುಗಳನ್ನು ಕೊಲ್ಲುತ್ತಾನೊ ಅವನು ಮಹಾ ಪಾಪಿಯಾಗಿ ಗೋವಿನ ರೋಮಗಳಷ್ಟು ವರುಷಗಳವರೆಗೆ ಹಾವಿನ ಜನ್ಮವನ್ನು ಹೊಂದುತ್ತಾನೆ.

೪೯. ಆ ಪಾಪದಿಂದ ನರಕದಲ್ಲಿ ಹಾವಿನಿಂದ ತಿನ್ನಲ್ಪಡುವವನಾಗಿಯೂ, ವಿಷಜ್ವಾಲೆಯಿಂದಲೂ ಬಾಯಾರಿಕೆಯಿಂದಲೂ ಪೀಡಿತನಾಗಿಯೂ ಆಹಾರವಿಲ್ಲದೆ ಕೃಶವಾದ ಹೊಟ್ಟೆಯುಳ್ಳವನಾಗಿರುತ್ತಾನೆ.

ತತಃ ಕುಂಡಾತ್ಸಮುತ್ಥಾಯ ಗೌರ್ಭವೇಲ್ಲೋಮವರ್ಷಕಂ ।
ತತಃ ಕುಷ್ಠೀ ಚ ಚಾಂಡಾಲೋ ವರ್ಷಲಕ್ಷಂ ತತೋ ನರಃ ॥ ೫೦ ॥

ತದಾ ಭವೇದ್ಬ್ರಾಹ್ಮಣಶ್ಚ ಕುಷ್ಠಯುಕ್ತೋ ಹಿ ಕರ್ಮಣಾ ।
ಭೋಜಯಿತ್ವಾ ವಿಪ್ರಲಕ್ಷಂ ನಿರ್ವ್ಯಾಧಿಶ್ಚ ಭವೇಚ್ಛುಚಿಃ ॥ ೫೧ ॥

ಅಕಾಮತಸ್ತದರ್ಧಂ ಚ ಕ್ಷತ್ರಿಯಸ್ಯಾಪಿ ಕಾಮತಃ ।
ಅಕಾಮತಸ್ತದರ್ಧಂ ಚ ಚತುರ್ಥಂ ಚ ವಿಶಸ್ತಥಾ ॥ ೫೨ ॥

ತದರ್ಧಂ ಶೂದ್ರಗೋಘ್ನಶ್ಚ ಭುಂಕ್ತೇ ಪಾಪಂ ನ ಸಂಶಯಃ ।
ಪ್ರಾಯಶ್ಚಿತ್ತೇನ ಶುದ್ಧಶ್ಚ ಭುಂಕ್ತೇ ಶೇಷಂ ಚ ಕರ್ಮಣಃ ॥ ೫೩ ॥

ಅನುಕಲ್ಪೇ ಚತುರ್ಥಂ ಚ ಪಾಪಂ ಭುಂಕ್ತೇ ನ ಸಂಶಯಃ ।
ಚತುರ್ಗುಣಂ ಚ ಗೋಘ್ನಾನಾಂ ಬ್ರಾಹ್ಮಣಾನಾಂ ಚ ಪಾತಕಂ ॥ ೫೪ ॥

---

೫೦. ಅನಂತರ ಆ ನರಕಕುಂಡದಿಂದೆದ್ದು ಗೋವಿನ ಕೂದಲುಗಳ ಸಂಖ್ಯೆಯಷ್ಟು ವರ್ಷಗಳವರೆಗೆ ಗೋವಾಗಿರುವನು. ಆ ಮೇಲೆ ಒಂದು ಲಕ್ಷವರುಷದವರೆಗೆ ಕುಷ್ಠರೋಗವುಳ್ಳವನೂ ಅನಂತರ ಚಂಡಾಲನೂ ಆಗುತ್ತಾನೆ.

೫೧. ಆನಂತರ ಕುಷ್ಠರೋಗದಿಂದ ಕೂಡಿದ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಒಂದು ಲಕ್ಷ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿದನಂತರ ಕುಷ್ಠರೋಗವನ್ನು ಕಳೆದುಕೊಂಡು ಪರಿಶುದ್ಧನಾಗುತ್ತಾನೆ.

೫೨. ಮೇಲೆ ಹೇಳಿದ ಪಾಪವನ್ನು ತಿಳಿಯದೆ ಮಾಡಿದರೆ ಅರ್ಧ ಫಲವನ್ನನುಭವಿಸುತ್ತಾನೆ. ಕ್ಷತ್ರಿಯನು ಬುದ್ಧಿ ಪೂರ್ವಕವಾಗಿ ಮಾಡಿದರೆ ಬ್ರಾಹ್ಮಣನಿಗೆ ಹೇಳಿದ ಅರ್ಧ ಫಲವನ್ನು ಅನುಭವಿಸುತ್ತಾನೆ; ತಿಳಿಯದೇ ಮಾಡಿದರೆ ಅದರಲ್ಲಿ ಅರ್ಧಭಾಗವನ್ನನುಭವಿಸುತ್ತಾನೆ. ವೈಶ್ಯನಾದರೋ ನಾಲ್ಕನೇ ಒಂದು ಭಾಗವನ್ನನುಭವಿಸುತ್ತಾನೆ.

೫೩. ಶೂದ್ರನಾದವನು ಗೋಹತ್ಯೆಯನ್ನು ಮಾಡಿದರೆ ವೈಶ್ಯನಿಗೆ ಹೇಳಿದ ಪಾಪದ ಅರ್ಧಫಲವನ್ನನುಭವಿಸುತ್ತಾನೆ. ಪ್ರಾಯಶ್ಚಿತ್ತದಿಂದ ಶುದ್ಧನಾಗಿ ಕರ್ಮಶೇಷವನ್ನನುಭವಿಸುತ್ತಾನೆ.

೫೪-೫೬. ಪಾಪಕರ್ಮವು ಇನ್ನೂ ಕಡಿಮೆಯಾಗಿದ್ದರೆ ಮೇಲೆ ಹೇಳಿದುದರ ನಾಲ್ಕನೆ ಒಂದು ಭಾಗವನ್ನನುಭವಿಸುತ್ತಾನೆ. ಸಂದೇಹವಿಲ್ಲ. ಬ್ರಾಹ್ಮಣನಾಗಲೀ

ಭುಂಕ್ತೇ ಪಾಪಂ ಚ ಬ್ರಹ್ಮಘ್ನೋ ಬ್ರಾಹ್ಮಣಶ್ಚೇತರೋಽಪಿ ವಾ ।
ಕ್ರಮೇಣಾನೇನ ಬೋಧ್ಯಂ ಚ ಕಾಮತೋಽಕಾಮತೋಽಪಿ ವಾ ॥ ೫೫ ॥

ಪ್ರಾಯಶ್ಚಿತ್ತಂ ಜನ್ಮಕರ್ಮ ವ್ಯಾಧಿರೇವ ನ ಸಂಶಯಃ ।
ಗೋಘ್ನೋ ಭವತಿ ಗೌಶ್ಚಾಪಿ ಯಾವದ್ವರ್ಷಂ ಚ ನಿಶ್ಚಿತಂ ॥ ೫೬ ॥

ಚತುರ್ಗುಣಂ ಚ ತೇಷಾಂ ಚ ಬ್ರಹ್ಮಘ್ನೋ ವಿಟ್‌ಕೃಮಿರ್ಭವೇತ್ ।
ತತೋ ಭವತಿ ಮ್ಲೇಚ್ಛಶ್ಚ ತಾವದ್ವರ್ಷಚತುರ್ಗುಣಂ ॥ ೫೭ ॥

ಇತಶ್ಚಾಂಧೋ ಭವೇದ್ವಿಪ್ರಃ ಪೂರ್ವೇಷಾಂ ಚ ಚತುರ್ಗುಣಂ ।
ಬ್ರಾಹ್ಮಣಾನಾಂ ಚತುರ್ಲಕ್ಷಂ ಭೋಜಯಿತ್ವಾ ಶುಚಿರ್ಭವೇತ್ ॥ ೫೮ ॥

ಚಕ್ಷುಷ್ಮಾಂಶ್ಚ ಯಶಸ್ವೀ ಚ ಭವೇತ್ಸೋಽಪ್ಯತಿಪಾತಕಾತ್ ।
ಸ್ತ್ರೀಘ್ನಶ್ಚತುರ್ಣಾಂ ವರ್ಣಾನಾಂ ವೇದೇ ಸೋಽಪ್ಯತಿಪಾತಕೀ ॥ ೫೯ ॥

---

ಇತರ ವರ್ಣದವನಾಗಲೀ ಯಾರಾದರೂ ಬ್ರಾಹ್ಮಣನನ್ನು ಕೊಂದ ಪಕ್ಷದಲ್ಲಿ ಗೋ ಹತ್ಯೆಯನ್ನು ಮಾಡಿದ ಬ್ರಾಹ್ಮಣನಿಗುಂಟಾಗುವ ಪಾತಕದ ನಾಲ್ಕರಷ್ಟು ಪಾಪಫಲ ವನ್ನನುಭವಿಸುತ್ತಾನೆ. ಈ ಕ್ರಮದಿಂದ ತಿಳಿದಾಗಲೀ ತಿಳಿಯದೆಯಾಗಲೀ ಮಾಡಿದ ಪಾಪಕರ್ಮಗಳ ಪ್ರಾಯಶ್ಚಿತ್ತವನ್ನೂ ಜನ್ಮ ಮತ್ತು ಕರ್ಮವನ್ನೂ ವ್ಯಾಧಿಯನ್ನೂ ತಿಳಿದುಕೊಳ್ಳಬೇಕು. ಗೋ ಹತ್ಯೆಯನ್ನು ಮಾಡಿದವನು ಗೋವಿನ ರೋಮಗಳಷ್ಟು ವರುಷಗಳು ಗೋವಾಗಿರುತ್ತಾನೆ.

೫೭. ಬ್ರಹ್ಮಹತ್ಯೆಯ್ನು ಮಾಡಿದವನು ಗೋಹತ್ಯೆಯ ನಾಲ್ಕರಷ್ಟು ಫಲವನ್ನ ನುಭವಿಸುತ್ತಾನೆ. ಅನಂತರ ಮಲದಲ್ಲಿ ಹುಳುವಾಗಿ ಹುಟ್ಟುತ್ತಾನೆ. ಆಮೇಲೆ ಮೇಲೆ ಹೇಳಿದ ನಾಲ್ಕರಷ್ಟು ವರುಷಗಳವರೆಗೆ ಮ್ಲೇಚ್ಛನಾಗಿರುತ್ತಾನೆ.

೫೮. ಅನಂತರ ಕುರುಡ ಬ್ರಾಹ್ಮಣನಾಗಿ ಮೇಲೆ ಹೇಳಿದ ನಾಲ್ಕರಷ್ಟು ವರುಷಗಳವರೆಗೆ ಇದ್ದು ನಾಲ್ಕು ಲಕ್ಷ ಬ್ರಾಹ್ಮಣ ಭೋಜನವನ್ನು ಮಾಡಿಸಿದನಂತರ ಶುದ್ಧನಾಗುತ್ತಾನೆ.

೫೯. ಪಾಪವನ್ನು ಕಳೆದುಕೊಂಡವನಾಗಿ ಕಣ್ಣುಳ್ಳವನೂ ಕೀರ್ತಿವಂತನೂ ಆಗುತ್ತಾನೆ. ನಾಲ್ಕುವರ್ಣದವರಲ್ಲಿ ಯಾರೇ ಆಗಲೀ ಸ್ತ್ರೀಹತ್ಯೆಯನ್ನು ಮಾಡಿದವ ರಾದರೆ ಅಂತಹವರು ಮಹಾಪಾಪಿಗಳೆಂದು ವೇದದಲ್ಲಿ ಹೇಳಲ್ಪಟ್ಟಿರುವುದು.

ಕಾಲಸೂತ್ರಂ ಚ ಪ್ರಾಪ್ನೋತಿ ಸ್ತ್ರೀಲೋಮಸಮವರ್ಷಕಂ ।
ಭಕ್ಷಿತಃ ಕೃಮಿಣಾ ತತ್ರ ನಿರಾಹಾರೋ ವ್ಯಥಾಯುತಃ ॥ ೬೦ ॥

ತತೋ ಭವತಿ ಲೋಕೇ ಚ ತಾವದ್ವರ್ಷಂ ಚ ಪಾತಕೀ ।
ತತಃ ಪಾಪೀ ಭವೇತ್ಸೋಽಪಿ ಯಕ್ಷ್ಮಗ್ರಸ್ತಶ್ಚ ಕರ್ಮಣಾ ॥ ೬೧ ॥

ವರ್ಷಾಣಾಂ ಶತಕಂ ಚೈವ ವಿಪ್ರಲಕ್ಷಂ ಚ ಭೋಜಯೇತ್ ।
ತತಃ ಶುದ್ಧೋ ಬ್ರಾಹ್ಮಣಶ್ಚ ವಿದ್ವಾಂಸ್ತಪಸಿ ಸಂಯುತಃ ॥ ೬೨ ॥

ಕಿಂಚಿದ್ಭುಂಕ್ತೇ ಪಾಪಶೇಷಂ ಸ್ವರ್ಣದಾನಾಚ್ಛುಚಿರ್ಭವೇತ್ ।
ಗರ್ಭಘ್ನಶ್ಚ ಮಹಾಪಾಪೀ ಸಂಪ್ರಾಪ್ನೋತಿ ಶುನೀಮುಖಂ ॥ ೬೩ ॥

ವರ್ಷಾಣಾಂ ಶತಕಂ ಚೈವ ಘೋಟಕಶ್ಚ ಭವೇದ್ಧ್ರುವಂ ।
ವರ್ಷಾಣಾಂ ಶತಕಂ ಚೈವ ಸೂಕ್ಷ್ಮಶಸ್ತ್ರೇಣ ಪೀಡಿತಃ ॥ ೬೪ ॥

---

೬೦. ಹಾಗೆ ಸ್ತ್ರೀಹತ್ಯೆಯನ್ನು ಮಾಡಿದವನು ಆ ಸ್ತ್ರೀಯ ಶರೀರದ ರೋಮುಗಳ ಸಂಖ್ಯೆಯಷ್ಟು ವರುಷಗಳವರೆಗೆ ಕಾಲಸೂತ್ರವೆಂಬ ನರಕವನ್ನು ಹೊಂದುತ್ತಾನೆ. ಆ ನರಕದಲ್ಲಿ ಕ್ರಿಮಿಗಳಿಂದ ತಿನ್ನಲ್ಪಡುವವನಾಗಿ ಆಹಾರವಿಲ್ಲದೆ ಯಾತನೆಯನ್ನನುಭವಿಸುತ್ತಾನೆ.

೬೧-೬೨. ಅನಂತರ ಅಷ್ಟೇವರುಷಗಳವರೆಗೆ ಲೋಕದಲ್ಲಿ ಪಾಪಿಯಾಗಿರುತ್ತಾನೆ. ಆಗ ತನ್ನ ಕರ್ಮದಿಂದ ಕ್ಷಯರೋಗ ಪೀಡಿತನಾಗಿ ನೂರು ವರ್ಷಗಳನ್ನು ಕಳೆಯುತ್ತಾನೆ. ಆಗ ಒಂದುಲಕ್ಷ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಅನಂತರ ಶುದ್ಧನಾಗಿ ಬ್ರಾಹ್ಮಣನೂ ವಿದ್ವಾಂಸನೂ ತಪಸ್ಸಿನಲ್ಲಿ ನಿರತನೂ ಆಗುತ್ತಾನೆ.

೬೩-೬೪. ಆದರೂ ಪಾಪಶೇಷವನ್ನು ಸ್ವಲ್ಪ ಅನುಭವಿಸುತ್ತಾನೆ. ಚಿನ್ನವನ್ನು ದಾನಮಾಡಿದನಂತರ ಅದರಿಂದ ಬಿಡುಗಡೆಯನ್ನು ಹೊಂದುತ್ತಾನೆ. ಗರ್ಭಹತ್ಯೆಯನ್ನು ಮಾಡಿದವನು ಮಹಾಪಾಪಿಯಾಗಿ ಶುನೀಮುಖ (ನಾಯಿಗಳ ಬಾಯಿ)ವೆಂಬ ನರಕವನ್ನು ಒಂದುನೂರು ವರುಷಗಳವರೆಗೆ ಅನುಭವಿಸುತ್ತಾನೆ. ಅನಂತರ ನೂರು ವರುಷಗಳವರೆಗೆ ಕುದುರೆಯ ಜನ್ಮದಲ್ಲಿದ್ದು ಸೂಕ್ಷ್ಮವಾದ ಶಸ್ತ್ರದಿಂದ ಪೀಡಿತನಾಗುತ್ತಾನೆ.

ತತಃ ಪಾಪೀ ಭವೇದ್ವೈಶ್ಯೋ ದ್ರವ್ಯಯುಕ್ತೋ ಹಿ ಕರ್ಮಣಾ।
ಪಂಚಾಶದ್ವರ್ಷಪರ್ಯಂತಂ ಸ್ವರ್ಣದಾನಾದ್ಭವೇಚ್ಛುಚಿಃ ॥ ೬೫ ॥

ತತಃ ಸ್ವಕುಲಜಾತೋಽಪಿ ನಿರ್ವ್ಯಾಧಿರ್ಬ್ರಾಹ್ಮಣಃ ಶುಚಿಃ।
ಬ್ರಾಹ್ಮಣಃ ಕ್ಷತ್ರಿಯಘ್ನಶ್ಚ ಕ್ಷತ್ರಿಯೋ ವಾ ವಿನಾ ರಣಾತ್ ॥ ೬೬ ॥

ತಪ್ತಶೂಲಂ ಚ ಪ್ರಾಪ್ನೋತಿ ವರ್ಷಾಣಾಂ ಚ ಸಹಸ್ರಕಂ।
ಕ್ಷುಧಿತಂ ತಪ್ತಲೋಹೇನ ಚಾರ್ತನಾದಂ ಕರೋತಿ ಚ ॥ ೬೭ ॥

ತತೋ ಭವೇನ್ಮತ್ತಗಜೋ ವರ್ಷಾಣಾಂ ಶತಕಂ ತಥಾ।
ತತೋ ರಕ್ತವಿಕಾರೀ ಚ ಶೂದ್ರೋ ವರ್ಷಶತಂ ತಥಾ ॥ ೬೮ ॥

ಗಜದಾನೇನ ಮುಕ್ತಶ್ಚ ವ್ಯಾಧಿತಶ್ಚ ತತೋ ದ್ವಿಜಃ।
ವೈಶ್ಯಘ್ನಶ್ಚಾಪಿ ವೈಶ್ಯಶ್ಚ ಶೂದ್ರಘ್ನೋ ವೈಶ್ಯ ಏವ ಚ ॥ ೬೯ ॥

---

೬೫-೬೭. ಅನಂತರ ತನ್ನ ಕರ್ಮದಿಂದ ಮೇಲೆಹೇಳಿದ ಪಾಪಿಯು ಐವತ್ತು ವರುಷಗಳವರೆಗೆ ಹಣವಂತನಾದ ವೈಶ್ಯನಾಗಿ ಹುಟ್ಟುತ್ತಾನೆ. ಆಗ ಚಿನ್ನವನ್ನು ದಾನಮಾಡುವುದರಿಂದ ಶುದ್ಧಿಯನ್ನು ಪಡೆಯುತ್ತಾನೆ. ಅನಂತರ ತನ್ನ ಕುಲದಲ್ಲಿ ಯಾವ ವ್ಯಾಧಿಯೂ ಇಲ್ಲದ ಪರಿಶುದ್ಧನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಬ್ರಾಹ್ಮಣನು ಕ್ಷತ್ರಿಯನನ್ನು ಕೊಂದರೆ. ಕ್ಷತ್ರಿಯನೂ ಕೂಡ ಯುದ್ಧಕಾಲವನ್ನು ಬಿಟ್ಟು ಬೇರೆಯ ಕಾಲದಲ್ಲಿ ಕ್ಷತ್ರಿಯನನ್ನು ಕೊಂದರೆ ಒಂದು ಸಾವಿರ ವರುಷಗಳ ವರೆಗೆ ಕಬ್ಬಿಣವು ಕಾದು ಕುದಿಯುತ್ತಿರುವ ತಪ್ತಶೂಲವೆಂಬ ನರಕದಲ್ಲಿ ಬಿದ್ದು ದುಃಖದಿಂದ ಕೂಗುತ್ತಿರುತ್ತಾರೆ.

೬೮. ಅನಂತರ ಒಂದುನೂರು ವರುಷಗಳವರೆಗೆ ಮದಿಸಿದ ಆನೆಯಾಗಿದ್ದು ಅನಂತರ ಒಂದು ವರುಷಗಳು ರಕ್ತವ್ಯಾಧಿಯಿಂದ ಕೂಡಿದ ಶೂದ್ರನಾಗಿರುತ್ತಾನೆ.

೬೯-೭೦. ಅನಂತರ ಆನೆಯನ್ನು ದಾನಮಾಡಿ ಆ ರೋಗದಿಂದ ಮುಕ್ತನಾಗಿ ಅನಂತರ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ವೈಶ್ಯನನ್ನು ಕೊಂದ ವೈಶ್ಯನೂ ಶೂದ್ರನನ್ನು ಕೊಂದ ವೈಶ್ಯನೂ ವೈಶ್ಯನನ್ನು ಕೊಂದ ಶೂದ್ರನೂ ಕೂಡ ಒಂದೇರೀತಿ

ವೈಶ್ಯಘ್ನಶ್ಚಾಪಿ ಶೂದ್ರಶ್ಚ ಸಮಂ ಪಾಪಂ ಲಭೇದ್ಧ್ರುವಂ ।
ಕೃಮಿಕುಂಡಂ ಚ ಪ್ರಾಪ್ನೋತಿ ವರ್ಷಾಣಾಂ ಶತಕಂ ತಥಾ ॥ ೭೦ ॥

ಕೃಮಿಭಿರ್ಭಕ್ಷಿತೋ ದುಃಖೀ ಕಿರಾತಶ್ಚ ಭವೇತ್ತತಃ ।
ವರ್ಷಾಣಾಂ ಶತಕಂ ಚೈವ ಕೃಮಿವ್ಯಾಧಿಸಮನ್ವಿತಃ ॥ ೭೧॥

ತತೋ ಮಂದಾಗ್ನಿಯುಕ್ತಶ್ಚ ಬ್ರಾಹ್ಮಣೋ ದೈನ್ಯವಾನ್ವ್ರಜ ।
ಪಂಚಾಶದ್ವರ್ಷಪರ್ಯಂತಂ ದುರ್ಬಲಶ್ಚ ಕೃಶೋದರಃ ॥ ೭೨ ॥

ಮುಕ್ತಿರ್ಭವತಿ ಯುಕ್ತೇನ ತೀರ್ಥೇ ಚಾಶ್ವಪ್ರದಾನತಃ ।
ಶೂದ್ರಘ್ನೋ ಬ್ರಾಹ್ಮಣಶ್ಚೈವ ಕಾಮತೋಽಕಾಮತೋಽಪಿ ವಾ ॥ ೭೩ ॥

ಸಾವಿತ್ರೀಲಕ್ಷಜಾಪ್ಯೇನ ತದರ್ಧೇನ ಶುಚಿರ್ಭವೇತ್ ।
ಚತುರ್ವರ್ಣಃ ಕುಕ್ಕುಟಘ್ನೋ ಹ್ಯಭಿಶಪ್ತಶ್ಚ ಶಂಭುನಾ ॥ ೭೪ ॥

---

ಯಾದ ಪಾಪವನ್ನು ಹೊಂದುತ್ತಾರೆ. ಇವರುಗಳು ಒಂದುನೂರು ವರುಷಗಳವರೆಗೆ ಕೃಮಿಕುಂಡವೆಂಬ ನರಕವನ್ನು ಹೊಂದುತ್ತಾರೆ.

೭೧. ಆ ನರಕದಲ್ಲಿ ಕೃಮಿಗಳಿಂದ ತಿನ್ನಲ್ಪಡುತ್ತಿರುವವರಾಗಿ ದುಃಖಪಡುತ್ತಲ್ಲಿದ್ದು ಅನಂತರದಲ್ಲಿ ಒಂದುನೂರು ವರುಷಗಳವರೆಗೆ ಕಿರಾತಜನ್ಮವನ್ನು ಹೊಂದಿ ಕೃಮಿರೋಗದಿಂದ ಕೂಡಿದವರಾಗಿರುತ್ತಾರೆ.

೭೨. ಅನಂತರ ಅಗ್ನಿಮಾಂದ್ಯ ರೋಗದಿಂದ ಕೂಡಿದ ಬ್ರಾಹ್ಮಣನಾಗಿ ಐವತ್ತು ವರುಷಗಳವರೆಗೆ ಬಲಹೀನನೂ ಕೃಶವಾದ ಹೊಟ್ಟೆಯುಳ್ಳವನೂ ಆಗಿರುತ್ತಾನೆ.

೭೩–೭೪. ಉತ್ತಮ ತೀರ್ಥದಲ್ಲಿ ಯುಕ್ತರೀತಿಯಲ್ಲಿ ಕುದುರೆಯನ್ನು ದಾನ ಮಾಡುವುದರಿಂದ ಮುಕ್ತಿಯು ದೊರೆಯುತ್ತದೆ. ಇಚ್ಛೆಯಿಂದಾಗಲೀ ಇಚ್ಛೆಯಿಲ್ಲದೆಯಾಗಲೀ ಶೂದ್ರನನ್ನು ಕೊಂದ ಬ್ರಾಹ್ಮಣನು ಒಂದುಲಕ್ಷ ಅಥವಾ ಅರ್ಧಲಕ್ಷ ಗಾಯತ್ರಿಯನ್ನು ಜಪಮಾಡುವುದರಿಂದ ಶುದ್ಧನಾಗುತ್ತಾನೆ. ಕೋಳಿಯನ್ನು ಕೊಂದ ನಾಲ್ಕು ವರ್ಣದವನೂ ಕೂಡ ಈಶ್ವರನಿಂದ ಶಪಿಸಲ್ಪಟ್ಟವನಾಗಿ ಒಂದುನೂರು

ವರ್ಷಾಣಾಂ ಶತಕಂ ಚೈವ ಪ್ರಾಪ್ನೋತಿ ರೌರವಂ ನರಃ ।
ತತೋ ಭವೇತ್ ಕುಕ್ಕುಟಶ್ಚ ವರ್ಷಾಣಾಮಪಿ ಷೋಡಶ ॥ ೭೫ ॥

ತತಃ ಶುದ್ಧೋ ಭವೇದ್ವಿಪ್ರೋ ಭಕ್ಷಿತಃ ಕುಕ್ಕುಟೇನ ಚ ।
ಗಂಗಾಸ್ನಾನೇನ ದಾನೇನ ಸ್ವರ್ಣಸ್ಯಾಪಿ ಭವೇಚ್ಛುಚಿಃ ॥ ೭೬ ॥

ಮಾರ್ಜಾರಘ್ನಶ್ಚತುರ್ವರ್ಣೋ ಗಂಗಾಸ್ನಾನಾದ್ಭವೇಚ್ಛುಚಿಃ ।
ವಿಪ್ರಾಯ ಲವಣಂ ದತ್ವಾ ಷಟ್ಪಲಂ ಚ ಪ್ರಮುಚ್ಯತೇ ॥ ೭೭ ॥

ಹತ್ವಾ ಸರ್ಪಾಂಶ್ಚತುರ್ವರ್ಣೋ ಮಮ ಪಾದೇನ ಚಿಹ್ನಿತಾನ್ ।
ಬ್ರಹ್ಮಹತ್ಯಾ ಚತುರ್ಥಂ ಚ ಪಾತಕಂ ಚ ಲಭೇದ್ಧ್ರುವಂ ॥ ೭೮ ॥

ಅಸಿಪತ್ರಂ ಚ ನರಕಂ ವರ್ಷಾಣಾಂ ಶತಕಂ ತಥಾ ।
ಪ್ರಾಪ್ನೋತಿ ಯಾತನಾಯುಕ್ತೋ ವಿಚ್ಛಿನ್ನಸ್ತೀಕ್ಷ್ಣಧಾರಯಾ ॥ ೭೯ ॥

---

ವರುಷಗಳವರೆಗೆ ರೌರವನರಕವನ್ನು ಹೊಂದುತ್ತಾನೆ. ಅನಂತರ ಹದಿನಾರು ವರುಷಗಳವರೆಗೆ ಕೋಳಿಯಾಗಿರುತ್ತಾನೆ.

೭೬. ಅನಂತರ ಆ ಪಾಪದಿಂದ ಶುದ್ಧನಾಗಿ ಬ್ರಾಹ್ಮಣ ಜನ್ಮವನ್ನು ಪಡೆದು ಕೋಳಿಯಿಂದ ತಿನ್ನಲ್ಪಡುವವನಾಗಿರುತ್ತಾನೆ. ಗಂಗಾನದಿಯಲ್ಲಿ ಸ್ನಾನಮಾಡುವುದ ರಿಂದಲೂ ಶುದ್ಧನಾಗುತ್ತಾನೆ.

೭೭. ನಾಲ್ಕು ವರ್ಣಗಳವರಲ್ಲಿ ಯಾವನಾದರೂ ಬೆಕ್ಕನ್ನು ಕೊಂದಪಕ್ಷದಲ್ಲಿ ಗಂಗಾನದಿಯಲ್ಲಿ ಸ್ನಾನಮಾಡುವುದರಿಂದ ಶುದ್ಧಿಹೊಂದುತ್ತಾನೆ. ಹದಿನೆಂಟು ತೊಲ ಉಪ್ಪನ್ನು ಬ್ರಾಹ್ಮಣನಿಗೆ ದಾನಮಾಡಿ ಆ ಪಾಪದಿಂದ ಮುಕ್ತನಾಗುತ್ತಾನೆ.

೭೮. ನಾಲ್ಕು ವರ್ಣಗಳವರಲ್ಲಿ ಯಾವನೇ ಆಗಲೀ ನನ್ನ ಕಾಲುಹೆಜ್ಜೆಯ ಗುರುತುಳ್ಳ ಸರ್ಪಗಳನ್ನು ಕೊಂದರೆ ಬ್ರಹ್ಮಹತ್ಯೆಯ ಪಾಪದ ನಾಲ್ಕನೇ ಒಂದುಭಾಗ ಪಾತಕವನ್ನು ಹೊಂದುತ್ತಾನೆ. ಇದು ನಿಶ್ಚಯವು.

೭೯. ಮತ್ತು ಅಸಿಪತ್ರವೆಂಬ ನರಕವನ್ನು ಹೊಂದಿ ಒಂದು ನೂರು ವರುಷ ಗಳವರೆಗೆ ಆ ಅಸಿಪತ್ರಗಳ ಹರಿತವಾದ ಮೊನೆಗಳಿಂದ ಕುಯ್ಯಲ್ಪಟ್ಟ ಶರೀರವುಳ್ಳವ ನಾಗಿ ಯಾತನೆಯನ್ನು ಅನುಭವಿಸುತ್ತಿರುತ್ತಾನೆ.

ತತೋ ಭವತಿ ಸರ್ಪಶ್ಚ ಡುಂಡುಭೋ ವರ್ಷಪಂಚಕಂ ।
ನರೇಣ ತಾಡಿತೋ ದುಃಖೀ ಮೃತ್ಯೋರ್ಭವತಿ ಪೀಡಿತಃ ॥ ೮೦ ॥

ತತೋ ಭವೇನ್ನರಃ ಪಾಪೀ ಜ್ವರಯುಕ್ತೋ ಹಿ ದುರ್ಬಲಃ ।
ವರ್ಷಾಣಾಂ ಪಂಚಕೇನೈವ ಮೃತೋ ಭವತಿ ಕರ್ಮಣಾ ॥ ೮೧ ॥

ತತೋ ಭವತಿ ಹಸ್ತೀ ಚ ಘೋಟಕೋ ವಾ ವ್ರಜೇಶ್ವರ ।
ಯಾವದ್ವಿಂಶತಿವರ್ಷಂ ಚ ತತಃ ಶೂದ್ರೋ ಭವೇದ್ಧ್ರುವಂ ॥ ೮೨ ॥

ಅಹಂಕೃತೀ ವ್ಯಾಧಿಯುಕ್ತೋ ರೌಪ್ಯದಾನೇನ ಮುಚ್ಯತೇ ।
ಬ್ರಾಹ್ಮಣಾನಾಂ ಚ ಶತಕಂ ಭೋಜಯಿತ್ವಾ ಶುಚಿರ್ಭವೇತ್ ॥ ೮೩ ॥

ಕ್ಷುದ್ರಜಂತುವಧೇನೈವ ಕ್ಷುದ್ರಜಂತುರ್ಭವೇನ್ನರಃ ।
ವರ್ಷಾಣಾಂ ಶತಕಂ ಚೈವ ಕ್ಷುದ್ರವ್ಯಾಧಿಂ ತರೇತ್ತತಃ ॥ ೮೪ ॥

---

೮೦. ಅನಂತರ ಐದು ವರುಷಗಳವರೆಗೆ ಇಮ್ಮಂಡೆಯ ಹಾವಾಗಿದ್ದು ಮಾನವನಿಂದ ಹೊಡೆಯಲ್ಪಡುತ್ತ ದುಃಖಿತನಾಗಿ ಮೃತ್ಯುವಿನಿಂದ ಪೀಡಿಸಲ್ಪಡುತ್ತಾನೆ.

೮೧. ಅನಂತರ ಪಾಪಿಮನುಷ್ಯನಾಗಿ ಜ್ವರದಿಂದ ಕೂಡಿ ಬಲಹೀನನಾಗಿ ಐದು ವರುಷಗಳವರೆಗೆ ಇದ್ದು ಕರ್ಮಫಲದಿಂದ ಸಾಯುವವನಾಗುತ್ತಾನೆ.

೮೨. ಎಲೈ ಗೋಕುಲದ ಒಡೆಯನೇ ! ಅನಂತರ ಇಪ್ಪತ್ತು ವರುಷಗಳವರೆಗೆ ಆನೆಯಾಗಿಯೋ ಕುದುರೆಯಾಗಿಯೋ ಇರುತ್ತಾನೆ. ಅನಂತರ ಶೂದ್ರನಾಗಿ ಹುಟ್ಟುತ್ತಾನೆ.

೮೩. ಅಹಂಕಾರದಿಂದ ಕೂಡಿದವನಾಗಿ ರೋಗದಿಂದ ಪೀಡಿತನಾಗಿದ್ದು ಬೆಳ್ಳಿಯನ್ನು ದಾನಮಾಡಿ ಮುಕ್ತನಾಗುತ್ತಾನೆ. ಮತ್ತು ನೂರು ಮಂದಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಪರಿಶುದ್ಧನಾಗುತ್ತಾನೆ.

೮೪. ಕ್ಷುದ್ರಜಂತುಗಳನ್ನು ಕೊಲ್ಲುವುದರಿಂದ ಮಾನವನು ಕ್ಷುದ್ರಜಂತುವಾಗಿ ಹುಟ್ಟುತ್ತಾನೆ. ಒಂದುನೂರು ವರ್ಷಗಳವರೆಗೆ ಕೆಟ್ಟರೋಗವನ್ನನುಭವಿಸಿ ಅನಂತರ ಪಾರಾಗುತ್ತಾನೆ.

ಕೃಪಾ ಕಾರ್ಯಾ ಸತಾ ಶಶ್ವದಹಿಂಸಿಷು ಚ ಜಂತುಷು ।
ಹಿಂಸಾಯಾಂ ನ ಹಿ ದೋಷಶ್ಚ ಹಿಂಸ್ರಾಣಾಂ ಚ ವ್ರಜೇಶ್ವರ ॥ ೮೫ ॥

ಅಶ್ವತ್ಥಘ್ನಶ್ಚತುರ್ವರ್ಣೋ ಬ್ರಹ್ಮಹತ್ಯಾ ಚತುರ್ಥಕಂ ।
ಪಾಪಂ ಚ ಲಭತೇ ತಾತ ಚಾಸಿಪತ್ರಂ ವ್ರಜೇದ್ಧ್ರುವಂ ॥ ೮೬ ॥

ಸ ತೀಕ್ಷ್ಣೇನಾಪಿ ಶಸ್ತ್ರೇಣ ವಿಚ್ಛಿನ್ನಶ್ಚ ದಿವಾನಿಶಂ ।
ವರ್ಷಾಣಾಂ ಶತಕಂ ಚೈವ ಭುಂಕ್ತೇ ಪರಮಯಾತನಾಂ ॥ ೮೭ ॥

ತತೋ ಭವತಿ ವೃಕ್ಷಶ್ಚ ಶಾಲ್ಮಲಿರ್ವರ್ಷಲಕ್ಷಕಂ ।
ತತೋ ಭವತಿ ಶೂದ್ರಶ್ಚ ಛಿನ್ನಾಂಗೋ ವ್ಯಾಧಿಸಂಯುತಃ ॥ ೮೮ ॥

ಯಾವಜ್ಜೀವನಪರ್ಯಂತಂ ತತೋ ವಿಪ್ರೋ ಭವೇದ್ಧ್ರುವಂ ।
ವ್ರಣವ್ಯಾಧಿಸಮಾಯುಕ್ತೋ ಮುಚ್ಯತೇ ಸ್ವರ್ಣದಾನತಃ ॥ ೮೯ ॥

---

೮೫. ಎಲೈ ಗೋಕುಲದೊಡೆಯನೆ ! ಸತ್ಪುರುಷನಾದವನು ಯಾವಾಗಲೂ ಸಾಧುಪ್ರಾಣಿಗಳಲ್ಲಿ ದಯೆಯನ್ನು ತೋರಬೇಕು ; ಹಿಂಸೆಯನ್ನು ಮಾಡತಕ್ಕ ಪ್ರಾಣಿಗಳನ್ನು ಹಿಂಸಿಸಿದರೆ ದೋಷವಿಲ್ಲ. ನಿಶ್ಚಯವು.

೮೬. ನಾಲ್ಕು ವರ್ಣಗಳವರಲ್ಲಿ ಯಾವನಾದರೂ ಅಶ್ವತ್ಥದ ಮರವನ್ನು ಕೊಂದ ಪಕ್ಷದಲ್ಲಿ ಬ್ರಹ್ಮಹತ್ಯೆಯ ನಾಲ್ಕನೇ ಒಂದುಭಾಗ ಪಾಪವನ್ನು ಹೊಂದುತ್ತಾನೆ ಮತ್ತು ಅಸಿಪತ್ರವೆಂಬ ನರಕವನ್ನು ಸಂದೇಹವಿಲ್ಲದೆ ಹೊಂದುತ್ತಾನೆ.

೮೭. ಅವನು ಅಲ್ಲಿ ಹರಿತವಾದ ಆಯುಧದಿಂದ ಯಾವಾಗಲೂ ಕತ್ತರಿಸಲ್ಪಡುತ್ತಿರುವವನಾಗಿ ಒಂದು ನೂರು ವರುಷಗಳವರೆಗೆ ಹೆಚ್ಚಾದ ಯಾತನೆಯನ್ನನುಭವಿಸುತ್ತಾನೆ.

೮೮-೮೯. ಅನಂತರ ಒಂದು ಲಕ್ಷ ವರುಷಗಳವರೆಗೆ ಬೂರುಗದ ಮರವಾಗಿರುತ್ತಾನೆ. ಅನಂತರ ಶೂದ್ರನಾಗಿ ಹುಟ್ಟಿ ಬದುಕಿರುವವರೆಗೂ ಕತ್ತರಿಸಲ್ಪಟ್ಟ ಶರೀರವುಳ್ಳವನಾಗಿ ರೋಗದಿಂದ ನರಳುತ್ತಿದ್ದು ಅನಂತರ ಬ್ರಾಹ್ಮಣನಾಗಿ ಹುಟ್ಟಿ ಆಗಲೂ ವ್ರಣರೋಗದಿಂದ ಪೀಡಿತನಾಗಿರುತ್ತಾನೆ. ಆಗ ಚಿನ್ನವನ್ನು ದಾನಮಾಡುವುದರಿಂದ ವ್ಯಾಧಿಮುಕ್ತನಾಗುತ್ತಾನೆ.

ಮಿಥ್ಯಾ ಸಾಕ್ಷ್ಯಪ್ರದಾತಾ ಚ ಕೃತಘ್ನೋऽತಿಕೃತಘ್ನಕಃ ॥
ವಿಶ್ವಾಸಘಾತೀ ಮಿತ್ರಘ್ನೋ ವಿಪ್ರಾಣಾಂ ಧನಹಾರಕಃ ॥ ೯೦ ॥

ಶೂದ್ರಶ್ರಾದ್ಧಾನ್ನಭೋಜೀ ಚ ಶೂದ್ರಾಣಾಂ ಶವದಾಹಕಃ ।
ಶೂದ್ರಾಣಾಂ ಸೂಪಕಶ್ಚೈವ ವೃಷವಾಹಕಪಾತಕೀ ॥ ೯೧ ॥

ಧಾವಕೋ ದೇವಲಶ್ಚಾಪಿ ಚೈತೇऽತಿಪಾಪಿನಸ್ತಥಾ ।
ಕುಂಭೀಪಾಕಂ ಪ್ರಯಾಂತ್ಯೇವ ವರ್ಷಾಣಾಂ ಚ ಸಹಸ್ರಕಂ ॥ ೯೨ ॥

ತತ್ರೈವ ತಪ್ತತೈಲೇನ ಸಂತಪ್ತಶ್ಚ ದಿವಾನಿಶಂ ।
ಭಕ್ಷಿತೋ ವ್ಯಾಧಿತಶ್ಚೈವ ಸರ್ಪಾಕಾರೇಣ ಜಂತುನಾ ॥ ೯೩ ॥

ಗೃಧ್ರಃ ಕೋಟಿಸಹಸ್ರಾಣಿ ಶತಜನ್ಮಾನಿ ಶೂಕರಃ ।
ಶ್ವಾಪದಃ ಶತಜನ್ಮಾನಿ ಶೂದ್ರೋ ರೋಗೀ ಭವೇತ್ತತಃ ॥ ೯೪ ॥

ಮಂದಾಗ್ನಿಜ್ವರಸಂಯುಕ್ತಃ ಪಂಚಾಶದ್ವರ್ಷಕಂ ತಥಾ ।
ಸುವರ್ಣಾನಾಂ ಶತಪಲಂ ದತ್ವಾ ಶುದ್ಧೋ ಭವೇದ್ ಧ್ರುವಂ ॥ ೯೫ ॥

---

೯೦–೯೨. ಸುಳ್ಳುಸಾಕ್ಷಿ ಹೇಳುವವನೂ, ಉಪಕಾರಸ್ಮರಣೆಯಿಲ್ಲದವನೂ, ಮಹಾಕೃತಘ್ನನೂ, ನಂಬಿಕೆಯನ್ನುಂಟುಮಾಡಿ ಕೊಲ್ಲುವವನೂ, ಸ್ನೇಹಿತನನ್ನು ಕೊಲ್ಲುವವನೂ, ಬ್ರಾಹ್ಮಣರ ಧನವನ್ನು ಕದಿಯುವವನೂ, ಶೂದ್ರನು ಮಾಡಿದ ಶ್ರಾದ್ಧಾನ್ನವನ್ನು ತಿನ್ನುವವನೂ ಶೂದ್ರರ ಹೆಣವನ್ನು ಹೊರುವವನೂ, ಶೂದ್ರರ ಮನೆಯಲ್ಲಿ ಅಡಿಗೆ ಮಾಡುವವನೂ ಬಸವನನ್ನು ಹತ್ತುವ ಮಹಾಪಾಪಿಯೂ, ಬಟ್ಟೆಯನ್ನೊಗೆದು ಜೀವಿಸುವವನೂ ಕೂಲಿಗೋಸ್ಕರ ದೇವಪೂಜೆ ಮಾಡುವವನೂ ಹಾಗೆಯೇ ಮಹಾಪಾಪಿಗಳೂ ಕೂಡ ಒಂದು ಸಾವಿರ ವರುಷಗಳವರೆಗೆ ಕುಂಭೀಪಾಕವೆಂಬ ನರಕವನ್ನನುಭವಿಸುತ್ತಾರೆ.

೯೩–೯೫. ಅದೇ ನರಕದಲ್ಲಿ ಹಗಲು ರಾತ್ರಿಯೂ ಕುದಿಯುವ ಎಣ್ಣೆಯಿಂದ ಸಂಕಟಪಡುತ್ತ ಸರ್ಪಾಕಾರದ ಜಂತುವಿನಿಂದ ತಿನ್ನಲ್ಪಡುತ್ತಿರುವವರಾಗಿ ವ್ಯಾಧಿಯಿಂದ ಕೂಡಿದವರಾಗಿ ಒಂದುಸಾವಿರಕೋಟಿ ಜನ್ಮಗಳಲ್ಲಿ ಹದ್ದಾಗಿದ್ದು ಒಂದು ನೂರು ಜನ್ಮಗಳಲ್ಲಿ ಹಂದಿಯಾಗಿದ್ದು ನೂರು ಜನ್ಮಗಳಲ್ಲಿ ಶರಭನಾಗಿದ್ದು ಅನಂತರ ರೋಗದಿಂದ ಕೂಡಿದ ಶೂದ್ರರಾಗಿ ಹುಟ್ಟುವರು. ಆಗಲೂ ಅಗ್ನಿಮಾಂದ್ಯದಿಂದುಂಟಾದ ಜ್ವರದಿಂದ ಕೂಡಿದವರಾಗಿ ಐವತ್ತು ವರುಷಗಳನ್ನು ಕಳೆಯುತ್ತಾರೆ. ಆಗ ನೂರು ತೊಲ ಚಿನ್ನವನ್ನು ದಾನಮಾಡಿ ಪರಿಶುದ್ಧರಾಗುತ್ತಾರೆ.

ಚತುರ್ವರ್ಣೋ ವಸ್ತ್ರಹಾರೀ ಗವ್ಯಹಾರೀ ಚ ಮಾನವಃ ।
ರೌಪ್ಯಮುಕ್ತಾಪಹಾರೀ ಚ ಶೂದ್ರದ್ರವ್ಯಾಪಹಾರಕಃ ॥ ೯೬ ॥

ವರ್ಷಾಣಾಂ ಚ ಸಹಸ್ರಂ ಚ ಬಕಜಾತಿರ್ಭವೇದ್ಧ್ರುವಂ ।
ಮೂತ್ರಕುಂಡಂ ಚ ವೈ ಭುಕ್ತ್ವಾ ವರ್ಷಾಣಾಂ ಶತಕಂ ತಥಾ ॥ ೯೭ ॥

ತತೋ ಭವೇಚ್ಛೂದ್ರಜಾತಿರ್ವರ್ಷಾಣಾಂ ಶತಕಂ ವ್ರಜ ।
ಕುಷ್ಠವ್ಯಾಧಿಸಮಾಯುಕ್ತೋ ಗಲಿತಶ್ಚೈವ ಪಾತಕೀ ॥ ೯೮ ॥

ತತೋ ಭವೇದ್ಬ್ರಾಹ್ಮಣಶ್ಚ ಕುಷ್ಠಾವಶೇಷಸಂಯುತಃ ।
ಸ್ವರ್ಣಷಟ್ಪಲದಾನೇನ ವ್ಯಾಧಿತೋ ಮುಚ್ಯತೇ ಶುಚಿಃ ॥ ೯೯ ॥

ಕೋಶಾಪಹಾರಕಶ್ಚೈವ ಫಲಾಪಹಾರಕಸ್ತಥಾ ।
ಯಕ್ಷಃ ಪೃಥಿವ್ಯಾಂ ಸಂಭೂತೋ ಲೀಲಾದ್ರವ್ಯಾಪಹಾರಕಃ ॥ ೧೦೦ ॥

ವರ್ಷಾಣಾಂ ಶತಕಂ ಚೈವ ಚಾಷಪಕ್ಷೀ ಭವೇದ್ ಧ್ರುವಂ ।
ತತೋ ಭವೇತ್ಕೃಷ್ಣವರ್ಣಃ ಶೂದ್ರಶ್ಚ ಭಾರತೇ ಭುವಿ ॥ ೧೦೧ ॥

---

೯೬–೯೯. ನಾಲ್ಕು ವರ್ಣಗಳವರಲ್ಲಿ ಯಾವ ಮಾನವನೇ ಆದರೂ ಬಟ್ಟೆಯನ್ನು ಕದಿಯುವವನಾದರೆ, ಹಾಲು ಮೊಸರು, ತುಪ್ಪ ಮುಂತಾದ ದ್ರವ್ಯಗಳನ್ನು ಕದಿಯುವವನಾದರೆ ಬೆಳ್ಳಿ. ಮುತ್ತು ಇವುಗಳನ್ನು ಕದಿಯುವವನಾದರೆ ಮತ್ತು ಶೂದ್ರರ ದ್ರವ್ಯವನ್ನು ಕದಿಯುವವನಾದರೆ ಅಂತಹವನು ಒಂದು ಸಾವಿರ ವರುಷಗಳವರೆಗೆ ಬಕಪಕ್ಷಿಯಾಗಿ ಹುಟ್ಟುವನು. ಆ ಮೇಲೆ ಮೂತ್ರಕುಂಡವೆಂಬ ನರಕವನ್ನು ಒಂದುನೂರು ವರುಷಗಳು ಅನುಭವಿಸಿ ಅನಂತರ ಶೂದ್ರಜನ್ಮವನ್ನು ಪಡೆದು ಒಂದು ನೂರುವರುಷಗಳವರೆಗೆ ಕುಷ್ಠರೋಗದಿಂದ ಕೂಡಿದವನಾಗಿ ಮುದಿತನವನ್ನುಹೊಂದಿ ಮಹಾಪಾಪಿಯಾಗಿದ್ದು ಅನಂತರ ಇನ್ನೂ ಸ್ವಲ್ಪ ಉಳಿದಿರುವ ಕುಷ್ಠರೋಗವುಳ್ಳ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಹದಿನೆಂಟು ತೊಲ ಚಿನ್ನವನ್ನು ದಾನಮಾಡುವುದರಿಂದ ರೋಗಮುಕ್ತನಾಗಿ ಪರಿಶುದ್ಧನಾಗುತ್ತಾನೆ.

೧೦೦-೧೦೨. ಯಾವ ಮಾನವನು ಮೊಗ್ಗನ್ನು ಕದಿಯುತ್ತಾನೆಯೋ. ಹಣ್ಣನ್ನು ಕದಿಯುತ್ತಾನೆಯೋ ಅವನು ಭೂಮಿಯಲ್ಲಿ ಯಕ್ಷನಾಗಿ ಹುಟ್ಟುತ್ತಾನೆ. ಮತ್ತು ಲೀಲೆಯಿಂದ ದ್ರವ್ಯಗಳನ್ನಪಹರಿಸುತ್ತಾನೆ. ಅನಂತರ ಒಂದುನೂರು ವರ್ಷಗಳು

ತತೋ ಭವೇದ್ಬ್ರಾಹ್ಮಣಶ್ಚಾಪ್ಯಧಿಕಾಂಗೋಽಪಿ ಜನ್ಮಭಿಃ ।
ಪುನರ್ಜನ್ಮದ್ವಿಜೋ ಭೂತ್ವಾ ಮುಚ್ಯತೇ ವಿಪ್ರಭೋಜನಾತ್ ॥ ೧೦೨ ॥

ಪಕ್ವದ್ರವ್ಯಾಪಹಾರೀ ಚ ಪಶುಯೋನಿರ್ಭವೇದ್ ಧ್ರುವಂ ।
ಯಸ್ಯಾಂಡಕೋಶೋ ಗಂಧಾಕ್ತಃ ಕಸ್ತೂರೀ ಯಸ್ಯ ನಾಮ ಚ ॥ ೧೦೩ ॥

ಸಪ್ತಜನ್ಮಮೃಗೋ ಭೂತ್ವಾ ತತೋ ಭವತಿ ಗಂಧಕಃ ।
ಜನ್ಮೈಕಂ ಚ ತತಃ ಶೂದ್ರೋ ಗಲತ್ಕುಷ್ಠೀ ಚ ಜನ್ಮನಿ ॥ ೧೦೪ ॥

ತತೋ ರೋಗಾವಶೇಷೇಣ ಸಂಯುತೋ ಬ್ರಾಹ್ಮಣಃ ಕೃಶಃ ।
ಸ್ವರ್ಣಷಟ್ಪಲದಾನೇನ ಮುಚ್ಯತೇ ನಾತ್ರ ಸಂಶಯಃ ॥ ೧೦೫ ॥

ಧಾನ್ಯಾಪಹಾರೀ ದುಃಖೀ ಚ ಕೃಪಣಃ ಸಪ್ತಜನ್ಮಸು ।
ವಿಷ್ಠಾಕುಂಡಂ ವರ್ಷಶತಂ ಸಂಪ್ರಾಪ್ಯ ಮುಚ್ಯತೇ ಭಿಯಾ ॥ ೧೦೬ ॥

---

ಶಕುನದ ಹಕ್ಕಿಯಾಗಿರುತ್ತಾನೆ. ಅನಂತರ ಕಪ್ಪುಬಣ್ಣದ ಶೂದ್ರನಾಗಿ ಭರತಭೂಮಿಯಲ್ಲಿ ಹುಟ್ಟುತ್ತಾನೆ. ಅನಂತರ ಹುಟ್ಟಿದ ಮೊದಲ್ಗೊಂಡು ಅಧಿಕಾಂಗದಿಂದ ಕೂಡಿದ ಶರೀರವುಳ್ಳ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಅನಂತರ ಮತ್ತೆ ಬ್ರಾಹ್ಮಣ ಜನ್ಮವನ್ನುಪಡೆದು ಬ್ರಾಹ್ಮಣರಿಗೆ ಭೋಜನವನ್ನುಮಾಡಿಸಿ ಪಾಪಮುಕ್ತನಾಗುತ್ತಾನೆ.

೧೦೩. ಬೇಯಿಸಿದ ಪದಾರ್ಥವನ್ನು ಕದ್ದವನು ಪಶುಜನ್ಮವನ್ನು ಖಂಡಿತವಾಗಿಯೂ ಹೊಂದುತ್ತಾನೆ. ಯಾವ ಪಶುವಿನ ವೃಷಣವು ಸುಗಂಧವಾಗಿರುತ್ತದೋ ಮತ್ತು ಯಾವ ಪಶುವು ಕಸ್ತೂರಿಯೆಂಬ ಹೆಸರುಳ್ಳದ್ದಾಗಿರುತ್ತದೋ ಅಂಥಾ ಪಶುವಾಗುತ್ತಾನೆ.

೧೦೪–೧೦೫. ಏಳು ಜನ್ಮದಲ್ಲಿ ಮೃಗವಾಗಿ ಅನಂತರ ಗಂಧವನ್ನು ಮಾಡುವವನಾಗುತ್ತಾನೆ. ಅನಂತರ ಒಂದು ಜನ್ಮದಲ್ಲಿ ಶೂದ್ರನಾಗಿ ಆ ಜನ್ಮದಲ್ಲಿ ಕುಷ್ಠರೋಗದಿಂದ ಪೀಡಿತನಾಗುತ್ತಾನೆ. ಅನಂತರ ಸ್ವಲ್ಪ ಉಳಿದಿರುವ ರೋಗದಿಂದ ಕೂಡಿದ ಕೃಶನಾದ ಬ್ರಾಹ್ಮಣನಾಗಿ ಹುಟ್ಟಿ ಹದಿನೆಂಟು ತೊಲ ಚಿನ್ನವನ್ನು ದಾನ ಮಾಡುವುದರ ಮೂಲಕ ಪಾಪಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೦೬. ಧಾನ್ಯವನ್ನು ಕದ್ದವನು ಏಳುಜನ್ಮಗಳಲ್ಲಿ ದುಃಖದಿಂದ ಕೂಡಿದವನೂ ಜಿಪುಣನೂ ಆಗುತ್ತಾನೆ. ಮತ್ತು ಒಂದುನೂರು ವರುಷಗಳು ವಿಷ್ಠಾಕುಂಡ (ಅಮೇಧ್ಯದ ಕುಂಡ) ವೆಂಬ ನರಕವನ್ನು ಅನುಭವಿಸಿ ಭಯಮುಕ್ತನಾಗುತ್ತಾನೆ.

ಸ್ವರ್ಣಾಪಹಾರೀ ಕುಷ್ಠೀ ಚ ಮಾನವಃ ಪತಿತೋ ಭವೇತ್ ।
ಸ್ವರ್ಣದಾನಪ್ರತಿಗ್ರಾಹೀ ವಿಟ್ಕುಂಡಂ ಚ ಪ್ರಯಾತಿ ಚ ॥ ೧೦೭ ॥

ತತೋ ವರ್ಷಶತಂ ಭುಕ್ತ್ವಾ ಪುರೀಷಂ ಚ ದಿವಾನಿಶಂ ।
ತತೋವ್ಯಾಧೋ ಭವೇಚ್ಛೂದ್ರೋ ರಕ್ತದೋಷೇಣ ಸಂಯುತಃ ॥೧೦೮॥

ತಜ್ಜನ್ಮಪಾತಕಂ ಭುಕ್ತ್ವಾ ಬ್ರಾಹ್ಮಣಶ್ಚ ಪುನರ್ಭವೇತ್ ।
ವ್ಯಾಧಿಶೇಷೋಪಯುಕ್ತಶ್ಚ ಮುಚ್ಯತೇ ಸ್ವರ್ಣದಾನತಃ ॥ ೧೦೯ ॥

ಅಗಮ್ಯಾನಾಂ ಚ ಗಾಮೀ ಚ ಪೂರ್ವೋಕ್ತಂ ರೌರವಂ ವ್ರಜೇತ್ ।
ಕುಂಭೀಪಾಕಂ ಮಹಾಘೋರಂ ವರ್ಷಾಣಾಂ ಚಾಪ್ಯಸಂಖ್ಯಕಂ ॥ ೧೧೦ ॥

ತತೋ ಭವೇತ್ಸ್ವಂಶ್ಚಲೀನಾಂ ಯೋನೀನಾಂ ಚ ಕೃಮಿಸ್ತಥಾ ।
ವರ್ಷಾಣಾಂ ಚ ಸಹಸ್ರಂ ಚ ವಿಟ್ ಕೃಮಿರ್ವರ್ಷಲಕ್ಷಕಂ ॥ ೧೧೧ ॥

---

೧೦೭. ಚಿನ್ನವನ್ನು ಕದ್ದವನು ಕುಷ್ಠರೋಗದಿಂದ ಕೂಡಿದವನೂ ಜಾತಿ ಭ್ರಷ್ಟನೂ ಆಗುತ್ತಾನೆ. ಚಿನ್ನವನ್ನು ದಾನವಾಗಿ ತೆಗೆದುಕೊಂಡವನು ವಿಟ್ಕುಂಡ ವೆಂಬ ನರಕವನ್ನು ಹೊಂದುತ್ತಾನೆ.

೧೦೮. ಅನಂತರ ಒಂದುನೂರು ವರುಷಗಳವರೆಗೆ ಹಗಲುರಾತ್ರಿಯೂ ಮಲವನ್ನು ತಿನ್ನುತ್ತಿದ್ದು ಅನಂತರ ರಕ್ತದೋಷದಿಂದ ಕೂಡಿದ ಶೂದ್ರಜಾತಿಯ ಬೇಡರವನಾಗಿ ಹುಟ್ಟುತ್ತಾನೆ.

೧೦೯. ಆ ಜನ್ಮದ ಪಾಪವನ್ನನುಭವಿಸಿ ಮತ್ತೆ ರೋಗಶೇಷದಿಂದ ಕೂಡಿದ ಬ್ರಾಹ್ಮಣನಾಗಿ ಹುಟ್ಟಿ ಚಿನ್ನವನ್ನು ದಾನಮಾಡುವುದರ ಮೂಲಕ ಪಾಪಮುಕ್ತ ನಾಗುತ್ತಾನೆ.

೧೧೦-೧೧೧. ಸಂಗಮಯೋಗ್ಯಳಲ್ಲದ ಹೆಂಗಸಿನ ಸಂಗ ಮಾಡಿದವನು ಹಿಂದೆ ಹೇಳಿದ ರೌರವವೆಂಬ ನರಕವನ್ನು ಹೊಂದುತ್ತಾನೆ. ಮತ್ತು ಲೆಕ್ಕವಿಲ್ಲದಷ್ಟು ವರುಷಗಳು ಮಹಾಭಯಂಕರವಾದ ಕುಂಭೀಪಾಕವೆಂಬ ನರಕವನ್ನನುಭವಿಸು ತ್ತಾನೆ. ಅನಂತರ ಒಂದು ಸಾವಿರ ವರುಷಗಳು ಜಾರಸ್ತ್ರೀಯರ ಯೋನಿ ಕ್ರಿಮಿಯಾಗಿಯೂ ಒಂದು ಲಕ್ಷ ವರುಷಗಳವರೆಗೆ ಅಮೇಧ್ಯದ ಕ್ರಿಮಿಯಾಗಿಯೂ ಇರುತ್ತಾನೆ.

ಪಶುಯೋನಿರ್ಭವೇತ್ತಸ್ಮಾತ್ತಸ್ಮಾಚ್ಚ ಕ್ಷುದ್ರಜಂತವಃ ।
ತತೋ ಭವೇನ್ಮ್ಲೇಚ್ಛಜಾತಿಸ್ತತಃ ಶೂದ್ರಾಧಮಸ್ತಥಾ ॥ ೧೧೨ ॥

ತತೋ ಭವತಿ ವಿಪ್ರಶ್ಚ ವ್ಯಾಧಿಯುಕ್ತೋ ನಪುಂಸಕಃ ।
ಪುನಶ್ಚ ಬ್ರಾಹ್ಮಣೋ ಭೂತ್ವಾ ತೀರ್ಥಪರ್ಯಟನೇನ ಚ ॥ ೧೧೩ ॥

ಕ್ರಮೇಣ ಶುದ್ಧೋ ಭವತಿ ವಂಶಹೀನಶ್ಚ ಪಾತಕಾತ್ ।
ಭೋಜಯಿತ್ವಾ ವಿಪ್ರಲಕ್ಷಂ ಪುತ್ರಂ ಚ ಲಭತೇ ಶುಚಿಃ ॥ ೧೧೪ ॥

ಮಾನವಃ ಕ್ರೋಧಯುಕ್ತಶ್ಚ ಗರ್ದಭಃ ಸಪ್ತಜನ್ಮಸು ।
ಮಾನವಃ ಕಲಹಾವಿಷ್ಟಃ ಸಪ್ತಜನ್ಮಸು ವಾಯುಸಃ ॥ ೧೧೫ ॥

ಶಾಲಗ್ರಾಮಪ್ರತಿಗ್ರಾಹೀ ಕಾಲಸೂತ್ರಂ ವ್ರಜೇದ್ ಧ್ರುವಂ ।
ವರ್ಷಾಣಾಂ ಶತಕಂ ಚೈವ ಖಂಜರೀಟೋ ಭವೇತ್ತತಃ ॥ ೧೧೬ ॥

---

೧೧೨. ಅನಂತರ ಪಶುಯೋನಿಯಲ್ಲಿ ಹುಟ್ಟುತ್ತಾನೆ. ಅದಾದಮೇಲೆ ಕ್ಷುದ್ರಪ್ರಾಣಿಯಾಗಿ ಹುಟ್ಟುತ್ತಾನೆ. ಅನಂತರ ಮ್ಲೇಚ್ಛ ಜಾತಿಯಲ್ಲಿ ಹುಟ್ಟುತ್ತಾನೆ. ಅನಂತರ ಅಧಮನಾದ ಶೂದ್ರನಾಗಿ ಹುಟ್ಟುತ್ತಾನೆ.

೧೧೩–೧೧೪. ಅನಂತರ ರೋಗದಿಂದ ಕೂಡಿದ ನಪುಂಸಕನಾದ ಬ್ರಾಹ್ಮಣನಾಗಿ ಹುಟ್ಟಿ ತೀರ್ಥಯಾತ್ರೆಯನ್ನು ಮಾಡುವುದರಿಂದ ಕ್ರಮಕ್ರಮವಾಗಿ ಶುದ್ಧನಾಗುತ್ತಾನೆ. ಆದರೆ ಪಾಪದ ಫಲವಾಗಿ ವಂಶಹೀನನಾಗುತ್ತಾನೆ. ಒಂದು ಲಕ್ಷ ಬ್ರಾಹ್ಮಣಭೋಜನವನ್ನು ಮಾಡಿಸಿದನಂತರ ಮಗನನ್ನು ಪಡೆಯುತ್ತಾನೆ. ಮತ್ತು ಪರಿಶುದ್ಧನಾಗುತ್ತಾನೆ.

೧೧೫. ಯಾವಾಗಲೂ ಕೋಪಗೊಂಡಿರುವ ಮಾನವನು ಏಳು ಜನ್ಮಗಳಲ್ಲಿ ಕತ್ತೆಯಾಗುತ್ತಾನೆ. ಯಾವಾಗಲೂ ಜಗಳ ಮಾಡುವ ಮಾನವನು ಏಳು ಜನ್ಮಗಳಲ್ಲಿ ಕಾಗೆಯಾಗುತ್ತಾನೆ.

೧೧೬. ಸಾಲಿಗ್ರಾಮ ದಾನವನ್ನು ತೆಗೆದುಕೊಂಡವನು ಕಾಲಸೂತ್ರವೆಂಬ ನರಕವನ್ನು ಅನುಭವಿಸುತ್ತಾನೆ. ಅನಂತರ ಒಂದು ನೂರು ವರುಷಗಳವರೆಗೆ ಗೀಜುಗ ಹಕ್ಕಿಯಾಗಿರುತ್ತಾನೆ.

ಲೋಹಚೋರಶ್ಚ ನಿರ್ವಂಶೋ ಮಷೀಚೋರಶ್ಚ ಕೋಕಿಲಃ ।
ಶುಕೋಽಪ್ಯಂಜನಚೋರಶ್ಚ ಮಿಷ್ಟಚೋರಃ ಕೃಮಿರ್ಭವೇತ್ ॥ ೧೧೭ ॥

ವಿಪ್ರದ್ವೇಷೀ ಗುರುದ್ವೇಷೀ ಶಿರಸಾಂ ಚ ಕ್ರಿಮಿರ್ಭವೇತ್ ।
ಪುಂಶ್ಚಲೀಂ ಕಾಮಿನೀಂ ತಾತ ಭುಕ್ತ್ವಾ ಚ ರೌರವಂ ವ್ರಜೇತ್ ॥ ೧೧೮ ॥

ತತೋ ವೃಥಾ ಕೃಮಿಶ್ಚೈವ ವರ್ಷಾಣಾಂ ಶತಕಂ ತಥಾ ।
ತತೋಽಪಿ ವಿಧವಾ ಚೈವ ವಂಧ್ಯಾ ಚ ಸಪ್ತಜನ್ಮಸು ॥ ೧೧೯ ॥

ಅಸ್ಪೃಶ್ಯಾ ಜಾತಿಹೀನಾ ಚ ಛಿನ್ನನಾಸಾ ಭವೇತ್ಕ್ರಮಾತ್ ।
ರಕ್ತದ್ರವ್ಯಾಪಹಾರೀ ಚ ರಕ್ತದೋಷಾನ್ವಿತೋ ಭವೇತ್ ॥ ೧೨೦ ॥

ಆಚಾರಹೀನೋ ಯವನಃ ಖಂಜೋ ಭವತಿ ಹಿಂಸಕಃ ।
ಅದೀಕ್ಷಿತೋ ವಂಖರಶ್ಚ ದುಷ್ಟದರ್ಶೀ ಚ ಕಾನಕಃ ॥ ೧೨೧ ॥

---

೧೧೭. ಕಬ್ಬಿಣವನ್ನು ಕದ್ದವನು ವಂಶಹೀನನಾಗುತ್ತಾನೆ. ಮಸಿಯನ್ನು ಕದ್ದವನು ಕೋಗಿಲೆಯಾಗುತ್ತಾನೆ. ಕಾಡಿಗೆಯನ್ನು ಕದ್ದವನು ಗಿಳಿಯಾಗುತ್ತಾನೆ. ಮೃಷ್ಟಾನ್ನವನ್ನು ಕದ್ದವನು ಹುಳುವಾಗಿರುತ್ತಾನೆ.

೧೧೮. ಬ್ರಾಹ್ಮಣದ್ವೇಷಿಯೂ ಗುರುದ್ವೇಷಿಯೂ ಆದವನು ತಲೆಯಲ್ಲಿ ಹುಳುವಾಗುತ್ತಾನೆ. ಎಲೈ ತಂದೆಯೇ ! ಕುಲುಟೆಯಾದ ಸ್ತ್ರೀಯನ್ನು ಉಪಭೋಗಿಸಿದವನು ರೌರವ ನರಕವನ್ನು ಅನುಭವಿಸುತ್ತಾನೆ.

೧೧೯. ಅನಂತರ ಒಂದು ನೂರು ವರುಷಗಳವರೆಗೆ ವ್ಯರ್ಥವಾಗಿ ಕ್ರಿಮಿಯಾಗಿರುತ್ತಾನೆ. ಅನಂತರ ಏಳು ಜನ್ಮಗಳಲ್ಲಿ ವಿಧವೆಯೂ ಬಂಜೆಯೂ ಆಗುವನು.

೧೨೦. ಅನಂತರ ಕ್ರಮವಾಗಿ ಅಸ್ಪೃಶ್ಯಳೂ ಜಾತಿಯಿಲ್ಲದವಳೂ ಕತ್ತರಿಸಿದ ಮೂಗುಳ್ಳವಳೂ ಆಗಿ ಹುಟ್ಟುವನು. ಕೆಂಪುದ್ರವ್ಯವನ್ನು ಕದ್ದವನು ರಕ್ತದೋಷದಿಂದ ಕೂಡಿದವನಾಗುತ್ತಾನೆ.

೧೨೧. ಆಚಾರಹೀನನಾದವನು ಯವನನಾಗುತ್ತಾನೆ. ಹಿಂಸಿಸುವವನು ತೊಡೆಗಳವರೆಗೂ ಕಾಲುಗಳಿಲ್ಲದವನಾಗುತ್ತಾನೆ. ದೀಕ್ಷಿತನಾಗದವನು ವಂಖರನಾಗುವನು. ದುಷ್ಟವಾದ ನೋಟವುಳ್ಳವನು ಗೂಬೆಯಾಗುವನು.

ಅಹಂಕಾರೀ ಕರ್ಣಹೀನೋ ಬಧಿರೋ ವೇದನಿಂದಕಃ ।
ವಾಕ್ಯಹರ್ತಾ ಚ ಮೂಕಶ್ಚ ಹಿಂಸಕಃ ಕೇಶಹೀನಕಃ ॥ ೧೨೨ ॥

ಮಿಥ್ಯಾವಾದೀ ಶ್ಮಶ್ರುಹೀನೋ ದುರ್ವಾಕ್ಯೋ ದಂತಹೀನಕಃ ।
ಜಿಹ್ವಾಹೀನಃ ಸತ್ಯಹಾರೀ ದುಷ್ಟೋಽಪ್ಯಂಗುಲಿಹೀನಕಃ ॥ ೧೨೩ ॥

ಗ್ರಂಥಾಪಹಾರೀ ಮೂರ್ಖಶ್ಚ ವ್ಯಾಧಿಯುಕ್ತೋ ಭವೇದ್ಧ್ರುವಂ ।
ಅಶ್ವಗ್ರಾಹೀ ಚ ತಚ್ಚೋರೋ ಲಾಲಾಮೂತ್ರಂ ವ್ರಜೇದಿತಿ ॥ ೧೨೪ ॥

ವರ್ಷಾಣಾಂ ಚ ಶತಂ ಸ್ಥಿತ್ವಾ ಘೋಟಕಶ್ಚ ಭವೇದ್ಧ್ರುವಂ ।
ಗಜಚೋರೋ ಗಜಗ್ರಾಹೀ ವಿಟ್ಕುಂಡೇ ಚ ಸಹಸ್ರಕಂ ॥ ೧೨೫ ॥

ಸ್ಥಿತ್ವಾ ವರ್ಷಂ ಭವೇದ್ಧಸ್ತೀ ತತ್ಪಶ್ಚಾದ್ವೃಷಲೋ ಭವೇತ್ ।
ಅಯಜ್ಞೇ ಛಾಗಹಂತಾ ಚ ಛಾಗಚೋರಪ್ರತಿಗ್ರಹೀ ॥ ೧೨೬ ॥

---

೧೨೨. ಅಹಂಕಾರದಿಂದ ಕೂಡಿದವನು ಕಿವಿಯಿಲ್ಲದವನಾಗುವನು. ವೇದಗಳನ್ನು ದೂಷಣೆಮಾಡಿದವನು ಕಿವುಡನಾಗುವನು. ಪರರ ವಾಕ್ಯಗಳನ್ನಪಹರಿಸುವವನು ಮೂಕನೂ ತಲೆಗೂದಲಿಲ್ಲದವನೂ ಹಿಂಸಾಪರನೂ ಆಗುವನು.

೧೨೩. ಸುಳ್ಳುಮಾತನಾಡುವವನು ಮುಖದ ಮೇಲೆ ಕೂದಲಿಲ್ಲದವನಾಗುವನು. ಕೆಟ್ಟಮಾತನ್ನಾಡುವವನು ಹಲ್ಲುಗಳಿಲ್ಲದವನಾಗುವನು. ಸತ್ಯವನ್ನು ಅಪಹರಿಸುವವನು ನಾಲಗೆಯಿಲ್ಲದವನಾಗುವನು. ದುಷ್ಟನಾದವನು ಬೆರಳಿಲ್ಲದವನಾಗುವನು.

೧೨೪. ಪರಗ್ರಂಥಗಳನ್ನು ಅಪಹರಿಸಿದವನು ಮೂರ್ಖನೂ ರೋಗದಿಂದ ಕೂಡಿದವನೂ ಆಗುವನು. ನಿಶ್ಚಯವು. ಕುದುರೆಯನ್ನು ಕದ್ದವನು ಕುದುರೆಯನ್ನು ನಡೆಸುವವನಾಗುತ್ತಾನೆ. ಮತ್ತು ಲಾಲಾಮೂತ್ರವೆಂಬ ನರಕವನ್ನು ಹೊಂದುವನು.

೧೨೫–೧೨೬ ಆ ನರಕದಲ್ಲಿ ಒಂದುನೂರು ವರುಷಗಳವರೆಗಿದ್ದು ಅನಂತರ ಕುದುರೆಯಾಗಿ ಹುಟ್ಟುವನು. ಆನೆಯನ್ನು ಕದಿಯುವವನೂ ಆನೆಯನ್ನು ಹಿಡಿಯುವನೂ ಒಂದುಸಾವಿರ ವರುಷಗಳವರೆಗೆ ವಿಟ್ಕುಂಡವೆಂಬ ನರಕದಲ್ಲಿದ್ದು ಅನಂತರ ಆನೆಯಜನ್ಮವನ್ನು ಪಡೆಯುವನು. ಅನಂತರ ವೃಷಲನಾಗಿ ಹುಟ್ಟುವನು. ಯಜ್ಞ ಸಮಯವನ್ನು ಬಿಟ್ಟು ಇತರ ಕಾಲದಲ್ಲಿ ಮೇಕೆಯನ್ನು ಕೊಲ್ಲುವವನೂ ಆಡನ್ನು

ಪೂಯಕುಂಡೇ ವರ್ಷಶತಂ ಸ್ಥಿತ್ವಾ ಚಾಂಡಾಲತಾಂ ವ್ರಜೇತ್ ।
ಛಾಗಶ್ಚ ವರ್ಷಪರ್ಯಂತಂ ತಥಾ ಭವತಿ ಮಾನವಃ ॥ ೧೨೭ ॥

ಶತ್ರುಶಸ್ತ್ರೇಣ ಛಿನ್ನಶ್ಚ ತದಾ ಮುಕ್ತೋ ಭವೇದ್ದ್ವಿಜಃ ।
ದತ್ತಾಪಹಾರೀ ವಾಗ್ದಾನಂ ಕೃತ್ವಾಽಪಹರತೇ ಪುನಃ ॥ ೧೨೮ ॥

ಸ ಭವೇನ್ಮ್ಲೇಚ್ಛಯೋನೌ ಚ ಭುಕ್ತ್ವಾ ಚ ನರಕಂ ವ್ರಜೇತ್ ।
ಏಕಾಕೀ ಮಿಷ್ಟಮಶ್ನಾತಿ ಕಾಲಸೂತ್ರಂ ವ್ರಜೇದ್ಧ್ರುವಂ ॥ ೧೨೯ ॥

ತತ್ರ ವರ್ಷಶತಂ ಸ್ಥಿತ್ವಾ ಪ್ರೇತೋ ವರ್ಷಸಹಸ್ರಕಂ ।
ತದಾ ಭವತಿ ಜನ್ಮೈಕಂ ಮಕ್ಷಿಕಾ ಚ ಪಿಪೀಲಿಕಾ ॥ ೧೩೦ ॥

ಜನ್ಮೈಕಂ ಭ್ರಮರಶ್ಚೈವ ಜನ್ಮೈಕಂ ಮಧುಮಕ್ಷಿಕಾ ।
ಜನ್ಮೈಕಂ ವರಲಶ್ಚೈವ ಜನ್ಮೈಕಂ ದಂಶ ಏವ ಚ ॥ ೧೩೧ ॥

---

ಕದಿಯುವವನೂ ಆಡನ್ನು ದಾನ ತೆಗೆದುಕೊಳ್ಳುವವನೂ ಪೂಯಕುಂಡವೆಂಬ ನರಕದಲ್ಲಿ ಒಂದುನೂರು ವರುಷಗಳಿದ್ದು ಚಾಂಡಾಲತನವನ್ನು ಹೊಂದುವನು. ಮತ್ತು ಒಂದು ವರುಷದವರೆಗೆ ಮೇಕೆಯಾಗಿದ್ದು ಅನಂತರ ಮಾನವನಾಗುವನು.

೧೨೮–೧೨೯. ಶತ್ರುವಿನ ಶಸ್ತ್ರದಿಂದ ಕತ್ತರಿಸಲ್ಪಟ್ಟವನಾಗಿ ಪಾಪದಿಂದ ಬಿಡುಗಡೆಹೊಂದಿ ಬ್ರಾಹ್ಮಣನಾಗುವನು. ಯಾವನು ಒಮ್ಮೆ ದಾನಮಾಡಿದ ಪದಾರ್ಥವನ್ನಪಹರಿಸುತ್ತಾನೆಯೋ ಮತ್ತು ಕೊಡುವೆನೆಂದು ಮಾತುಕೊಟ್ಟು ಕೊಡದಿರುತ್ತಾನೋ ಅವನು ಮ್ಲೇಚ್ಛಯೋನಿಯಲ್ಲಿ ಹುಟ್ಟುವನು. ಅಲ್ಲಿ ಪಾಪ ಫಲವನ್ನನುಭವಿಸಿ ನರಕವನ್ನು ಹೊಂದುವನು. ಮತ್ತು ಯಾವನು ಒಂಟಿಯಾಗಿ ಮೃಷ್ಟಾನ್ನವನ್ನು ತಿನ್ನುತ್ತಾನೋ ಅವನು ಕಾಲಸೂತ್ರವೆಂಬ ನರಕವನ್ನು ತಪ್ಪದೆ ಹೊಂದುವನು.

೧೩೦. ಆ ನರಕದಲ್ಲಿ ಒಂದುನೂರು ವರುಷಗಳಿದ್ದು ಅನಂತರ ಒಂದು ಸಾವಿರ ವರುಷಗಳವರೆಗೆ ಪ್ರೇತ ಜನ್ಮದಲ್ಲಿರುವವನಾಗುವನು. ಅನಂತರ ಒಂದು ಜನ್ಮದಲ್ಲಿ ನೊಣವೂ ಒಂದು ಜನ್ಮದಲ್ಲಿ ಇರುವೆಯೂ ಆಗುವನು.

೧೩೧. ಮತ್ತೆ ಒಂದು ಜನ್ಮದಲ್ಲಿ ದುಂಬಿಯೂ ಒಂದು ಜನ್ಮದಲ್ಲಿ ಜೇನು ನೊಣವೂ ಒಂದು ಜನ್ಮದಲ್ಲಿ ರೆಕ್ಕೆಯುಳ್ಳ ಇರುವೆಯೂ ಒಂದು ಜನ್ಮದಲ್ಲಿ ಕಾಡು ನೊಣವೂ ಆಗುವನು.

ಜನ್ಮೈಕಂ ಮಶಕಶ್ಚೈವ ಜನ್ಮೈಕಂ ಪೂತಿಕಂ ಸ್ಮೃತಂ ।
ಜನ್ಮೈಕಂ ತಲ್ಪಕೀಟಶ್ಚ ತದಾ ಶೂದ್ರೋ ಭವೇದ್ಧ್ರುವಂ ॥ ೧೩೨ ॥

ಅಸದ್ಬುದ್ಧಿರ್ವ್ಯಾಧಿಯುಕ್ತಸ್ತದಾ ಮುಕ್ತೋ ಭವೇದ್ದ್ವಿಜಃ ।
ತೈಲಚೋರಸ್ತೈಲಕಾರೋ ಮೂರ್ಧ್ನಿಕೀಟಸ್ತ್ರಿಜನ್ಮಕಂ ॥ ೧೩೩ ॥

ತದಾ ಭವೇತ್ಸ್ವರ್ಣಕಾರೋ ಜನ್ಮೈಕಂ ದುಷ್ಟಮಾನಸಃ ।
ವಿಶ್ವೈಕಲಿಪಿಕರ್ತಾ ಚ ಭಕ್ಷ್ಯದಾತುರ್ಧನಂ ಹರೇತ್ ॥ ೧೩೪ ॥

ತಮಃಕುಂಡೇ ವರ್ಷಶತಂ ಸ್ಥಿತ್ವಾ ಸ್ವರ್ಣವಣಿಗ್ಭವೇತ್ ।
ಜನ್ಮೈಕಂ ಚ ದುರಾಚಾರೋ ಜನ್ಮೈಕಂ ಕರಣೋ ಭವೇತ್ ॥ ೧೩೫ ॥

ಕಾಯಸ್ಥೇನೋದರಸ್ಥೇನ ಮಾತುರ್ಮಾಂಸಂ ನ ಖಾದಿತಂ ।
ತತ್ರ ನಾಸ್ತಿ ಕೃಪಾ ತಸ್ಯ ದಂತಾಭಾವೇನ ಕೇವಲಂ ॥ ೧೩೬ ॥

---

೧೩೨–೧೩೩. ಮತ್ತು ಒಂದು ಜನ್ಮದಲ್ಲಿ ಸೊಳ್ಳೆಯಾಗಿಯೂ ಒಂದು ಜನ್ಮದಲ್ಲಿ ದುರ್ಗಂಧಯುಕ್ತವಾದ ಕೀಟವಾಗಿಯೂ ಒಂದು ಜನ್ಮದಲ್ಲಿ ತಿಗಣೆಯಾಗಿಯೂ ಇದ್ದು ಅನಂತರ ದುರ್ಬುದ್ಧಿಯಿಂದ ಕೂಡಿದ ವ್ಯಾಧಿಯುಕ್ತನಾದ ಶೂದ್ರನಾಗಿದ್ದು ಪಾಪಮುಕ್ತನಾಗಿ ಬ್ರಾಹ್ಮಣನಾಗುವನು. ಎಣ್ಣೆಯನ್ನು ಕದ್ದವನು ಎಣ್ಣೆ ಮಾಡುವವ (ಗಾಣಿಗ) ನಾಗುವನು. ಮೂರು ಜನ್ಮಗಳಲ್ಲಿ ತಲೆಯ ಹುಳುವಾಗಿರುತ್ತಾನೆ.

೧೩೪–೧೩೫. ಅನಂತರ ಸ್ವರ್ಣಕಾರನಾಗಿ ದುರ್ಬುದ್ಧಿಯುಳ್ಳವನಾಗಿ ಒಂದು ಜನ್ಮವನ್ನನುಭವಿಸುವನು. ಮತ್ತು ಯಾವನು ಅನ್ನವನ್ನು ಕೊಟ್ಟವನ ಧನವನ್ನು ಅಪಹರಿಸುತ್ತಾನೆಯೋ ಅವನು ವಿಶ್ವಕ್ಕೆಲ್ಲ ಒಂದೇ ಲಿಪಿಯನ್ನು ನಿರ್ಮಿಸುವವನಾಗಿ ತಮಃಕುಂಡವೆಂಬ ನರಕದಲ್ಲಿ ಒಂದುನೂರು ವರುಷಗಳು ಬಿದ್ದಿದ್ದು ಅನಂತರ ಚಿನ್ನವನ್ನು ವ್ಯಾಪಾರಮಾಡುವ ವೈಶ್ಯನಾಗಿ ಹುಟ್ಟುವನು. ಆ ಒಂದು ಜನ್ಮದಲ್ಲಿಯೂ ದುರಾಚಾರಿಯಾಗಿದ್ದು ಒಂದು ಜನ್ಮದಲ್ಲಿ ಬಡಗಿಯಾಗುವನು.

೧೩೬. ಬಡಗಿಯು ತಾಯಿಯ ಗರ್ಭದಲ್ಲಿದ್ದಾಗ ತಾಯಿ ಮಾಂಸವನ್ನು ತಿನ್ನುವುದಿಲ್ಲ. ಇದಕ್ಕೆ ಕಾರಣವು ಅವನ ದಯೆಯಲ್ಲ. ಹಲ್ಲಿಲ್ಲದಿರುವುದೇ ಮುಖ್ಯ ಕಾರಣವು.

ಸ್ವರ್ಣಕಾರಃ ಸ್ವರ್ಣವಣಿಕ್ ಕಾಯಸ್ಥಶ್ಚ ವ್ರಜೇಶ್ವರ ।
ನರೇಷು ಮಧ್ಯೇ ತೇ ಧೂರ್ತಾಃ ಕೃಪಾಹೀನಾ ಮಹೀತಲೇ ॥ ೧೩೭ ॥

ಹೃದಯಂ ಕ್ಷುರಧಾರಾಭಂ ತೇಷಾಂ ನಾಸ್ತಿ ಚ ಸಾದರಂ ।
ಶತೇಷು ಸಜ್ಜನಃ ಕೋಽಪಿ ಕಾಯಸ್ಥೋ ನೇತರೌ ಚ ತೌ ॥ ೧೩೮ ॥

ಸುಬುದ್ಧಿಃ ಶಿವಯುಕ್ತಶ್ಚ ಶಾಸ್ತ್ರಜ್ಞೋ ಧರ್ಮಮಾನಸಃ ।
ನ ವಿಶ್ವಸೇತ್ತೇಷು ತಾತ ಸ್ವಾತ್ಮಕಲ್ಯಾಣಹೇತವೇ ॥ ೧೩೯ ॥

ಸೀಮಾಪಹಾರೀ ದುಷ್ಟಶ್ಚ ಭೂಮಿಚೋರಶ್ಚ ಹಿಂಸಕಃ ।
ಭೂಮಿದಾನಾಪಹಾರೀ ಚ ಕಾಲಸೂತ್ರಂ ವ್ರಜೇದ್ಧ್ರುವಂ ॥ ೧೪೦ ॥

ಷಷ್ಟಿವರ್ಷಸಹಸ್ರಾಣಿ ಕ್ಷುತ್ಪಿಪಾಸಾರ್ದಿತಃ ಸ್ಥಿತಃ ।
ತತೋಽಪಿ ತಾನಿ ಮಾನಾನಿ ವಿಷ್ಠಾಯಾಂ ಜಾಯತೇ ಕೃಮಿಃ ॥ ೧೪೧ ॥

---

೧೩೭. ಎಲೈ ಗೋಕುಲದೊಡೆಯನೇ! ಸ್ವರ್ಣಕಾರ, ಚಿನ್ನದವ್ಯಾಪಾರಿ, ಬಡಗಿ ಇವರುಗಳು ಭೂಮಿಯಲ್ಲಿ ಮಾನವರ ಮಧ್ಯದಲ್ಲಿ ಮಹಾಧೂರ್ತರೂ ಕರುಣೆಯಿಲ್ಲದವರೂ ಆಗಿರುತ್ತಾರೆ.

೧೩೮. ಅವರ ಹೃದಯವು ಕತ್ತಿಯ ಮೊನೆಯಂತಿರುವುದು. ಅವರಿಗೆ ವಿಶ್ವಾಸವೆಂಬುದೇ ಇಲ್ಲ. ಬಡಗಿಯವನಾದರೋ ನೂರು ಜನಗಳಲ್ಲೊಬ್ಬನಾದರೂ ಒಳ್ಳೆಯವನಿರುತ್ತಾನೆ. ಉಳಿದೆರಡು ಜಾತಿಯಲ್ಲಿ ಅದೂ ಇರುವುದಿಲ್ಲ.

೧೩೯. ಎಲೈ ತಂದೆಯೇ! ಒಳ್ಳೆಯ ಬುದ್ಧಿಯುಳ್ಳವರೂ ಶಾಂತರೂ ಶಾಸ್ತ್ರವನ್ನುಬಲ್ಲವರೂ ಧರ್ಮಬುದ್ಧಿಯುಳ್ಳವರೂ ಆದ ಜನರು ತಮ್ಮ ಮೇಲ್ಮೆಗಾಗಿ ಅವರಲ್ಲಿ ನಂಬಿಕೆಯನ್ನಿಡಬಾರದು.

೧೪೦. ಭೂಮಿಯ ಗಡಿಯನ್ನಪಹರಿಸಿದವನು ದುಷ್ಟನಾಗುತ್ತಾನೆ. ಭೂಮಿಯನ್ನು ಕದ್ದವನು ಹಿಂಸಾಪರನಾಗುವನು. ಭೂಮಿದಾನವನ್ನಪಹರಿಸಿದವನು ಖಂಡಿತವಾಗಿಯೂ ಕಾಲಸೂತ್ರವೆಂಬ ನರಕವನ್ನು ಹೊಂದುವನು.

೧೪೧. ಅರವತ್ತುಸಾವಿರ ವರುಷಗಳವರೆಗೆ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದು ಆಮೇಲೆ ಅಷ್ಟುವರುಷಗಳವರೆಗೆ ಅಮೇಧ್ಯದ ಹುಳುವಾಗಿರುವನು.

ತತೋ ಭವೇದಸಚ್ಛೂದ್ರೋ ಜನ್ಮೈಕಂ ಚ ತತಃ ಶುಚಿಃ ।
ತಸ್ಮಾಜ್ಜ್ಞಾನೈಃ ಸಾವಧಾನಂ ಭವೇತ್ಪ್ರಾಜ್ಞಶ್ಚ ಯತ್ನತಃ ॥ ೧೪೨ ॥

ರಕ್ತವಸ್ತ್ರಾಪಹಾರೀ ಚ ಜನ್ಮೈಕಂ ರಕ್ತಕೀಟಕಃ ।
ತತಃ ಶೂದ್ರಶ್ಚ ಜನ್ಮೈಕಂ ತತೋ ವಿಪ್ರೋ ಭವೇಚ್ಛುಚಿಃ ॥ ೧೪೩ ॥

ತ್ರಿಸಂಧ್ಯಹೀನೋ ವಿಪ್ರಶ್ಚ ಪ್ರಾತಃಶಾಯೀ ಚ ಯೋ ನರಃ ।
ಸಂಧ್ಯಾಶಾಯೀ ದಿವಾಶಾಯೀ ಯಜ್ಞಸೂತ್ರಾಪಹಾರಕಃ ॥ ೧೪೪ ॥

ಅಶುದ್ಧಃ ಸಂಧ್ಯಾಕಾರೀ ಚ ವೇದವೇದಾಂಗನಿಂದಕಃ ।
ತದ್ವಿರುದ್ಧಃ ಸ್ವರ್ಗಮಾರ್ಗಸ್ತ್ರಿಜನ್ಮಪತಿತೋ ದ್ವಿಜಃ ॥ ೧೪೫ ॥

ಯಃ ಶೂದ್ರೋ ಬ್ರಾಹ್ಮಣೀಗಾಮೀ ಕುಂಭೀಪಾಕೇ ವ್ರಜೇದ್ಧ್ರುವಂ ।
ವರ್ಷಾಣಾಂ ಚ ತ್ರಿಲಕ್ಷಂ ಚ ಪಚ್ಯತೇ ತತ್ರ ಪೀಡಿತಃ ॥ ೧೪೬ ॥

---

೧೪೨. ಅನಂತರ ಒಂದು ಜನ್ಮದಲ್ಲಿ ಹೀನನಾದ ಶೂದ್ರನಾಗುವನು. ಅನಂತರ ಮುಕ್ತನಾಗುವನು. ಆದುದರಿಂದ ಬುದ್ಧಿವಂತನಾದವನು ಪ್ರಯತ್ನಪೂರ್ವಕವಾಗಿ ಜ್ಞಾನಮಾರ್ಗದಲ್ಲಿ ಜಾಗರೂಕನಾಗಿರಬೇಕು.

೧೪೩. ಕೆಂಪುಬಟ್ಟೆಯನ್ನು ಕದ್ದವನು ಒಂದು ಜನ್ಮದಲ್ಲಿ ಕೆಂಪುಬಣ್ಣದ ಹುಳುವಾಗಿರುವನು. ಅನಂತರ ಒಂದು ಜನ್ಮದಲ್ಲಿ ಶೂದ್ರನಾಗಿ ಅನಂತರ ಬ್ರಾಹ್ಮಣನಾಗಿ ಶುದ್ಧನಾಗುವನು.

೧೪೪–೧೪೫. ಯಾವ ಬ್ರಾಹ್ಮಣನು ಮೂರು ಕಾಲಗಳಲ್ಲೂ ಸಂಧ್ಯಾವಂದನೆಯನ್ನು ಮಾಡುವುದಿಲ್ಲವೋ, ಯಾವ ಮಾನವನು ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಹಗಲಿನಲ್ಲಿಯೂ ಮಲಗುತ್ತಾನೋ ಮತ್ತು ಜನಿವಾರವನ್ನು ಕದಿಯುತ್ತಾನೋ, ಅಶುದ್ಧನಾಗಿ ಸಂಧ್ಯಾವಂದನೆ ಮಾಡುತ್ತಾನೋ, ವೇದಗಳನ್ನೂ ವೇದಾಂಗಗಳನ್ನೂ ನಿಂದೆಮಾಡುವವನಾಗುತ್ತಾನೋ ಅವನು ಸ್ವರ್ಗದ ದಾರಿಗೆ ವಿರುದ್ಧನಾಗಿ ಮೂರು ಜನ್ಮಗಳು ಪತಿತನಾದ ಬ್ರಾಹ್ಮಣನಾಗುತ್ತಾನೆ.

೧೪೬–೧೪೮. ಯಾವ ಶೂದ್ರನು ಬ್ರಾಹ್ಮಣಸ್ತ್ರೀಸಂಗ ಮಾಡುತ್ತಾನೋ ಅವನು ಖಂಡಿತವಾಗಿಯೂ ಕುಂಭೀಪಾಕವೆಂಬ ನರಕವನ್ನು ಹೊಂದುವನು. ಅಲ್ಲಿ ಮೂರುಲಕ್ಷ ವರುಷಗಳವರೆಗೆ ಬೇಯಿಸಲ್ಪಟ್ಟು ಪೀಡಿತನಾಗಿ ಹಗಲುರಾತ್ರಿಗಳಲ್ಲಿ

ದಿವಾನಿಶಂ ಪ್ರದಗ್ಧಶ್ಚ ತಪ್ತತೈಲೇ ಚ ದಾರುಣೇ ।
ತತೋ ಭವೇದ್ಯೋನಿಕೀಟಃ ಪುಂಶ್ಚಲೀನಾಂ ಚ ಪಾತಕೀ ॥ ೧೪೭ ॥

ಷಷ್ಟಿವರ್ಷಸಹಸ್ರಾಣಿ ಚಾಹಾರಂ ತೆಸ್ಯಂ ತನ್ಮಲಂ ।
ತತೋ ಭವತಿ ಚಾಂಡಾಲೋ ಜನ್ಮಲಕ್ಷಂ ಕ್ರಮೇಣ ಚ ॥ ೧೪೮ ॥

ತತಃ ಶೂದ್ರೋ ಗಲತ್ಕುಷ್ಠೀ ಜನ್ಮೈಕಂ ಚ ತತಃ ಶುಚಿಃ ।
ಸೋಽಪಿ ವಿಪ್ರೋ ವ್ಯಾಧಿಶೇಷಸ್ತೀರ್ಥಪರ್ಯಟನಾಚ್ಛುಚಿಃ ॥ ೧೪೯ ॥

ಅಸಚ್ಛೂದ್ರಶ್ಚ ಭವತಿ ಸೋಽಸ್ಥಾನೇಽಸುರಪೂಜಿತೇ ।
ದತ್ವಾ ದೇವಾಯ ನೈವೇದ್ಯಮುಪವಿತ್ರಂ ಚ ಮಾನವಃ ॥ ೧೫೦ ॥

ಸಕೇಶಂ ಪಾರ್ಥಿವಂ ಲಿಂಗಂ ಸಂಪೂಜ್ಯ ಯವನೋ ಭವೇತ್ ।
ದುರ್ಬಲೇನ ಭವೇದಂಧಃ ಕುತ್ಸಿತೇನ ಚ ಕುತ್ಸಿತಃ ॥ ೧೫೧ ॥

---

ಕಾದ ತೈಲದಲ್ಲಿ ಸುಡಲ್ಪಡುತ್ತಿರುವವನಾಗಿ ಅನಂತರ ಕುಲಟೆಯರ ಯೋನಿಗಳಲ್ಲಿ ಅರವತ್ತು ಸಾವಿರ ವರುಷಗಳವರೆಗೆ ಹುಳುವಾಗಿರುತ್ತಾನೆ. ಅವರ ಮಲವೇ ಆಗ ಅವನಿಗೆ ಆಹಾರವಾಗಿರುತ್ತದೆ. ಅನಂತರ ಒಂದುಲಕ್ಷ ಜನ್ಮಗಳವರೆಗೆ ಚಾಂಡಾಲ ನಾಗುತ್ತಾನೆ.

೧೪೯. ಅನಂತರ ಕ್ರಮವಾಗಿ ಕುಷ್ಠರೋಗದಿಂದ ಕೂಡಿದ ಹೀನನಾದ ಶೂದ್ರನಾಗುವನು. ಹಾಗೆ ಒಂದು ಜನ್ಮವನ್ನು ಕಳೆದು, ಅನಂತರ ರೋಗಶೇಷದಿಂದ ಕೂಡಿದ ಬ್ರಾಹ್ಮಣನಾಗಿ ತೀರ್ಥಯಾತ್ರೆಯನ್ನು ಮಾಡುವುದರ ಮೂಲಕ ಶುದ್ಧನೂ ಪಾಪಮುಕ್ತನೂ ಆಗುವನು.

೧೫೦-೧೫೩. ಅಶುದ್ಧವಾದ ನೈವೇದ್ಯವನ್ನು ದೇವರಿಗೆ ಅರ್ಪಿಸಿದ ಮಾನವನು ಅಯೋಗ್ಯವೂ ರಾಕ್ಷಸರಿಂದ ಪೂಜಿಸಲ್ಪಟ್ಟುದೂ ಆದ ಸ್ಥಾನದಲ್ಲಿ ನೀಚ ಶೂದ್ರನಾಗಿ ಹುಟ್ಟುವನು. ಕೂದಲಿನಿಂದ ಕೂಡಿದ ಮಣ್ಣಿನ ಲಿಂಗವನ್ನು ಪೂಜೆ ಮಾಡಿದವನು ಯವನನಾಗುವನು. ದುರ್ಬಲನೂ, ಕುರುಡನೂ ನಿಂದಿತವಾದ ಕೆಲಸವನ್ನು ಮಾಡುವವನೂ, ನಿಂದೆಗೆ ಪಾತ್ರನೂ, ಅಂಗಹೀನನೂ, ದರಿದ್ರನೂ,

ಅಂಗಹೀನೋ ದರಿದ್ರಶ್ಚ ವ್ಯಾಧಿಯುಕ್ತಶ್ಚ ಮಾನವಃ ।
ಅಶ್ರದ್ಧಯಾ ಚ ನಿರ್ಮಾಣೇ ನಿರ್ಮಾಣಸದೃಶಂ ಫಲಂ ॥ ೧೫೨ ॥

ಮೃದ್ಭಸ್ಮಗೋಶಕೃತ್ಪಿಂಡೈಸ್ತಥಾ ವಾಲುಕಯಾಽಪಿ ವಾ ।
ಕೃತ್ವಾ ಲಿಂಗಂ ಸಕೃತ್ಪೂಜ್ಯ ವಸೇತ್ಕಲ್ಪಾಯುಷಂ ದಿವಿ ॥ ೧೫೩ ॥

ತತೋ ಭವತಿ ವಿಪ್ರಶ್ಚ ಮಹಾಪ್ರಾಜ್ಞಶ್ಚ ಭೂಮಿಮಾನ್ ।
ರಾಜಾ ಭವೇದ್ಭಾರತೇ ಚ ಲಿಂಗಾನಾಂ ಶತಪೂಜನಾತ್ ॥ ೧೫೪ ॥

ಸಹಸ್ರಪೂಜನಾತ್ಸೋಽಪಿ ಲಭತೇ ನಿಶ್ಚಿತಂ ಫಲಂ ।
ಸ್ಥಿತ್ವಾ ಚ ಸುಚಿರಂ ಸ್ವರ್ಗೇ ಗಜೇಂದ್ರೋ ಭಾರತೇ ಭವೇತ್ ॥ ೧೫೫ ॥

ಅಯುತೇ ಚ ತದೀಶಶ್ಚ ಲಕ್ಷೇ ಚ ಪೃಥಿವೀಶ್ವರಃ ।
ಪೂಜನೇ ಚಾತಿಭಕ್ತ್ಯಾ ಚಾಪ್ಯತಿರಿಕ್ತಂ ಫಲಂ ಲಭೇತ್ ॥ ೧೫೬ ॥

---

ರೋಗಗ್ರಸ್ತನೂ ಆಗುವನು. ಮತ್ತು ಅನಾದರದಿಂದ ಲಿಂಗವನ್ನು ಪೂಜೆ ಮಾಡಿದರೆ ಅದಕ್ಕೆ ತಕ್ಕ ಫಲವನ್ನು ಹೊಂದುವನು.

೧೫೩. ಮಣ್ಣು, ವಿಭೂತಿ, ಗೋವಿನ ಸಗಣಿ ಮತ್ತು ಮರಳು ಇವುಗಳಿಂದ ಲಿಂಗವನ್ನು ಮಾಡಿ, ಒಂದುಸಾರಿ ಪೂಜೆ ಮಾಡುವ ಮಾತ್ರದಿಂದ ಒಂದು ಕಲ್ಪದ ವರೆಗೆ ಸ್ವರ್ಗದಲ್ಲಿ ವಾಸಮಾಡುವನು.

೧೫೪. ಅನಂತರ ಮಹಾಬುದ್ಧಿವಂತನೂ ಭೂಮಿಯಿಂದ ಕೂಡಿದವನೂ ಆದ ಬ್ರಾಹ್ಮಣನಾಗುವನು. ಒಂದುನೂರು ಲಿಂಗಗಳನ್ನು ಪೂಜೆ ಮಾಡಿದವನು ಭಾರತ ಭೂಮಿಯಲ್ಲಿ ರಾಜನಾಗುವನು.

೧೫೫. ಒಂದು ಸಹಸ್ರ ಲಿಂಗವನ್ನು ಪೂಜೆ ಮಾಡುವುದರಿಂದ ಆ ರಾಜನೂ ಕೂಡ ನಿಶ್ಚಿತವಾದ ಫಲವನ್ನು ಹೊಂದುವನು. ಬಹುಕಾಲದವರೆಗೆ ಸ್ವರ್ಗಲೋಕ ದಲ್ಲಿದ್ದು ಭಾರತ ಭೂಮಿಯ ಆನೆಗಳಿಗೆ ಒಡೆಯನಾಗಿ ಹುಟ್ಟುತ್ತಾನೆ.

೧೫೬. ಹತ್ತುಸಾವಿರ ಲಿಂಗಗಳನ್ನು ಪೂಜೆ ಮಾಡಿದವನು ಭಾರತ ಭೂಮಿಗೆ ಒಡೆಯನಾಗುವನು. ಮತ್ತು ಒಂದು ಲಕ್ಷ ಲಿಂಗವನ್ನು ಪೂಜೆ ಮಾಡಿದವನು ಸಮಸ್ತ ಭೂಮಂಡಲಕ್ಕೂ ಒಡೆಯನಾಗುವನು. ಹೀಗೆ ಅತ್ಯಂತ ಭಕ್ತಿಯಿಂದ ಹೆಚ್ಚಾಗಿ ಪೂಜೆ ಮಾಡಿದರೆ ಹೆಚ್ಚು ಅತಿಶಯವಾದ ಫಲವನ್ನು ಪಡೆಯುತ್ತಾನೆ.

ತೀರ್ಥಸ್ನಾನೇನ ದಾನೇನ ವಿಪ್ರಾಣಾಂ ಭೋಜನೇನ ಚ ।
ನಾರಾಯಣಾರ್ಚಯಾ ಚೈವ ವಿಪ್ರಜಾತಿಶ್ಚ ಕರ್ಮಣಾ ॥ ೧೫೭ ॥

ಅತಿರಿಕ್ತೇನ ತಪಸಾ ಪಂಡಿತೋ ಬ್ರಾಹ್ಮಣೋ ಭವೇತ್ ।
ಪಂಡಿತೋ ಬ್ರಾಹ್ಮಣಶ್ಚೈವ ವೈಷ್ಣವಶ್ಚ ಜಿತೇಂದ್ರಿಯಃ ॥ ೧೫೮ ॥

ಅನೇಕಜನ್ಮಪುಣ್ಯೇನ ಜಾಯತೇ ಭಾರತೇ ಭುವಿ ।
ತಸ್ಯಾಂಘ್ರಿಸ್ಪರ್ಶನೇನೈವ ಸದ್ಯಃ ಪೂತಾ ವಸುಂಧರಾ । ॥ ೧೫೯ ॥

ತೀರ್ಥಾಃ ಕುರ್ವಂತಿ ತೀರ್ಥಾನಿ ಜೀವನ್ಮುಕ್ತಾಶ್ಚ ವೈಷ್ಣವಾಃ ।
ಸ್ವಪುಂಸಾಂ ಚ ಸಹಸ್ರಂ ಚ ಪುನಂತೀತಿ ಶ್ರುತೌ ಶ್ರುತಂ ॥ ೧೬೦ ॥

ಪಾಪೇನ ವೈದ್ಯಜನ್ಮೈವ ದುಶ್ಚಿಕಿತ್ಸೋಽಪಿ ಬ್ರಾಹ್ಮಣಃ ।
ದುಶ್ಚಿಕಿತ್ಸಸ್ತಥಾ ವೈದ್ಯೋ ವ್ಯಾಲಗ್ರಾಹೀ ತ್ರಿಜನ್ಮಸು ॥ ೧೬೧ ॥

---

೧೫೭. ಬ್ರಾಹ್ಮಣ ಜಾತಿಯು ತೀರ್ಥಸ್ನಾನ, ದಾನ, ಬ್ರಾಹ್ಮಣಭೋಜನ ಶ್ರೀಮನ್ನಾರಾಯಣನ ಪೂಜೆ ಈ ಕರ್ಮಗಳಿಂದ ಉಂಟಾಗುವುದು.

೧೫೮–೧೫೯. ಹೆಚ್ಚಾದ ತಪಸ್ಸಿನಿಂದ ಬ್ರಾಹ್ಮಣನು ಪಂಡಿತನಾಗುವನು. ಮತ್ತು ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಭಾರತ ಭೂಮಿಯಲ್ಲಿ ಪಂಡಿತನೂ ಬ್ರಾಹ್ಮಣನೂ, ವಿಷ್ಣುಭಕ್ತನೂ ಇಂದ್ರಿಯ ನಿಗ್ರಹವುಳ್ಳವನೂ ಆಗಿ ಹುಟ್ಟುವನು. ಆ ಮಾನವನ ಕಾಲು ತಗುಲಿದ ಮಾತ್ರದಿಂದಲೇ ಆ ಕ್ಷಣವೇ ಭೂಮಿಯು ಪರಿಶುದ್ಧವಾಗುತ್ತದೆ.

೧೬೦. ಜೀವನ್ಮುಕ್ತರಾದ ವಿಷ್ಣುಭಕ್ತರು ತೀರ್ಥಗಳನ್ನು ಪವಿತ್ರಗಳನ್ನಾಗಿ ಮಾಡುತ್ತಾರೆ. ಮತ್ತು ತಮ್ಮ ವಂಶದ ಸಾವಿರಾರು ಜನರನ್ನು ಪವಿತ್ರಗೊಳಿಸುತ್ತಾರೆ ಎಂದು ವೇದದಲ್ಲಿ ಹೇಳಲ್ಪಟ್ಟಿರುವುದು.

೧೬೧. ಕೆಟ್ಟ ಚಿಕಿತ್ಸೆಯನ್ನು ಮಾಡುವ (ರೋಗ ನಿಧಾನವನ್ನು ತಿಳಿಯದೆ ಮನಬಂದಂತೆ ಮದ್ದನ್ನು ಕೊಡುವ) ಬ್ರಾಹ್ಮಣನು ವೈದ್ಯಜನ್ಮವನ್ನೇ ಪಡೆಯುತ್ತಾನೆ ಮತ್ತು ಈ ಕೆಟ್ಟ ವೈದ್ಯನು ಮೂರು ಜನ್ಮಗಳಲ್ಲಿ ಹಾವಾಡಿಗನಾಗುತ್ತಾನೆ.

ಅತಿಕ್ರೂರೋ ದುರಾಚಾರೋ ದ್ವೇಷ್ಟಾ ಚ ಸುರವಿಪ್ರಯೋಃ ।
ಸ ಭವೇತ್ಕುಟಿಲವ್ಯಾಲೋ ವರ್ಷಾಣಾಂ ಚ ಸಹಸ್ರಕಂ ॥ ೧೬೨ ॥

ಪುಂಶ್ಚಲೀಲಂಪಟಾನಾಂ ಚ ದೂತೀ ಯಾ ಕಾಮಿನೀ ವ್ರಜ ।
ಕಾಲಸೂತ್ರೇ ವರ್ಷಶತಂ ಸ್ಥಿತ್ವಾ ಚ ಗೋಧಿಕಾ ಭವೇತ್ ॥ ೧೬೩ ॥

ಜನ್ಮೈಕಂ ಗೋಧಿಕಾ ಭೂತ್ವಾ ಹರಿಣಶ್ಚ ತ್ರಿಜನ್ಮಸು ।
ಜನ್ಮೈಕಂ ಮಹಿಷಶ್ಚೈವ ಜನ್ಮೈಕಂ ಭಲ್ಲುಕೋ ಭವೇತ್ ॥ ೧೬೪ ॥

ಜನ್ಮೈಕಂ ಗಂಡಕಶ್ಚೈವ ಶೃಗಾಲಶ್ಚ ತ್ರಿಜನ್ಮಸು ।
ಪರಕೀಯತಡಾಗಂ ಚ ಸುಪ್ತಸಸ್ಯಂ ದದಾತಿ ಚ ॥ ೧೬೫ ॥

ಸ ಭವೇನ್ನಕ್ರಜಾತಿಶ್ಚ ಕಚ್ಛಪಶ್ಚ ತ್ರಿಜನ್ಮಸು ।
ವೃಥಾ ಮಾಂಸಂ ಚ ಯೋ ಭುಂಕ್ತೇ ಮತ್ಸ್ಯಲುಬ್ಧಶ್ಚ ಬ್ರಾಹ್ಮಣಃ ॥೧೬೬॥

---

೧೬೨. ಮಹಾ ಕ್ರೂರಿಯೂ ದುರಾಚಾರಿಯೂ ದೇವಬ್ರಾಹ್ಮಣರನ್ನು ದ್ವೇಷಿಸುವವನೂ ಆದವನು ಒಂದು ಸಾವಿರ ವರುಷಗಳವರೆಗೆ ವಕ್ರವಾದ ಸರ್ಪವಾಗುವನು.

೧೬೩. ಕುಲಟೆಯರಲ್ಲಿ ಆಸಕ್ತರಾಗಿರುವವರಿಗೆ, ಯಾವ ಸ್ತ್ರೀಯು ದೂತತನವನ್ನು ಮಾಡುತ್ತಾಳೋ ಅವಳು ಒಂದುನೂರು ವರುಷಗಳವರೆಗೆ ಕಾಲಸೂತ್ರವೆಂಬ ನರಕದಲ್ಲಿದ್ದು ಸೀರುಡವೆಂಬ ಪ್ರಾಣಿಯಾಗುವಳು.

೧೬೪–೧೬೬. ಒಂದು ಜನ್ಮದಲ್ಲಿ ಸೀರುಡವೂ, ಮೂರು ಜನ್ಮದಲ್ಲಿ ಜಿಂಕೆಯೂ, ಒಂದು ಜನ್ಮದಲ್ಲಿ ಕೋಣನೂ, ಒಂದು ಜನ್ಮದಲ್ಲಿ ಕರಡಿಯೂ, ಒಂದು ಜನ್ಮದಲ್ಲಿ ಖಡ್ಗಮೃಗವೂ ಮೂರು ಜನ್ಮಗಳಲ್ಲಿ ನರಿಯೂ ಆಗುವಳು. ಮತ್ತು ಪರರ ಕೆರೆಯನ್ನೊ, ಸಸ್ಯಗಳು ಬಿದ್ದುಹೋಗಿರುವ ಭೂಮಿಯನ್ನೊ ಯಾರು ದಾನಮಾಡುವನೋ ಅವನು ಮೊಸಳೆಯ ಜಾತಿಯಲ್ಲಿ ಹುಟ್ಟುತ್ತಾನೆ; ಮತ್ತು ಮೂರುಜನ್ಮಗಳಲ್ಲಿ ಆಮೆಯಾಗುವನು. ವ್ಯರ್ಥವಾಗಿ ಮಾಂಸವನ್ನು ಯಾವನು ತಿನ್ನುತ್ತಾನೋ ಅವನು ಮೀನುಗಳಲ್ಲಿ ಆಶೆಗೊಂಡ ಬ್ರಾಹ್ಮಣನಾಗುವನು.

ಭುಂಕ್ತೇ ಮಾಂಸಮದತ್ತ್ವಾ ಚ ಸ ಮೀನಶ್ಚ ಮೃಗೋ ಭವೇತ್ ।
ವರ್ಷಾಣಾಂ ಚ ಸಹಸ್ರಂ ಚ ತಾತ ಭುಕ್ತ್ವಾ ಚ ಕಿಲ್ಬಿಷಂ ॥ ೧೬೭ ॥

ಕರ್ಮಭೋಗಾಚ್ಛುಚಿರ್ಭೂತ್ವಾ ಸ ಪುನರ್ಬ್ರಾಹ್ಮಣೋ ಭವೇತ್ ।
ಏಕಾದಶೀವಿಹೀನಶ್ಚ ಬ್ರಾಹ್ಮಣಃ ಪತಿತೋ ಭವೇತ್ ॥ ೧೬೮ ॥

ಭಕ್ಷ್ಯಸ್ಯ ದ್ವಿಗುಣಂ ದತ್ವಾ ತೇನ ಪಾಪೇನ ಮುಚ್ಯತೇ ।
ಮಮ ಜನ್ಮದಿನೇ ಚೈವ ಯೋ ಭುಂಕ್ತೇ ಮಾನವೋಽಧಮಃ ॥ ೧೬೯ ॥

ತ್ರೈಲೋಕ್ಯಜನಿತಂ ಪಾಪಂ ಸೋಽಪಿ ಭುಂಕ್ತೇ ನ ಸಂಶಯಃ ।
ಭುಕ್ತ್ವಾ ಚ ನರಕಂ ಸರ್ವಂ ಪಶ್ಚಾಚ್ಚಾಂಡಾಲತಾಂ ವ್ರಜೇತ್ ॥ ೧೭೦ ॥

ಏವಂ ಚ ಶಿವರಾತ್ರೌ ಚ ಶ್ರೀರಾಮನವಮೀದಿನೇ ।
ಉಪವಾಸಾಸಮರ್ಥಶ್ಚ ಹವಿಷ್ಯಾನ್ನಂ ಸಮಾಚರೇತ್ ॥ ೧೭೧ ॥

---

೧೬೭-೧೭೦. ಎಲೈ ತಂದೆಯೇ! ಯಾವನು ಮಾಂಸವನ್ನು ಮತ್ತೊಬ್ಬರಿಗೆ ಕೊಡದೆ ತಾನೊಬ್ಬನೇ ತಿನ್ನುತ್ತಾನೋ ಅವನು ಒಂದುಸಾವಿರ ವರುಷಗಳು ಮೀನಾಗಿಯೂ ಮೃಗವಾಗಿಯೂ ಇರುವನು. ಅಲ್ಲಿ ಕರ್ಮವನ್ನನುಭವಿಸುವುದರಿಂದ ಶುಚಿಯಾಗಿ ಮತ್ತೆ ಬ್ರಾಹ್ಮಣನಾಗುವನು. ಮತ್ತು ಏಕಾದಶೀ ವ್ರತವನ್ನು ಮಾಡದ ಬ್ರಾಹ್ಮಣನು ಜಾತಿಭ್ರಷ್ಟನಾಗುವ್ವನು. ಅಂಥವನು ಆ ಏಕಾದಶಿಯದಿನ ತಿಂದ ಪದಾರ್ಥದ ಎರಡರಷ್ಟನ್ನು ದಾನಮಾಡಿ ಆ ಪಾಪದಿಂದ ಮುಕ್ತನಾಗುವನು. ಮತ್ತು ಯಾವ ನರಾಧಮನು ನನ್ನ ಜನ್ಮದಿನದಲ್ಲಿ (ಕೃಷ್ಣಾಷ್ಟಮಿಯಲ್ಲಿ) ಊಟ ಮಾಡುತ್ತಾನೋ ಅವನು ಮೂರು ಲೋಕದಲ್ಲಿರುವ ಸಮಸ್ತಪಾಪಗಳನ್ನೂ ಅನುಭವಿಸುವವನಾಗುವನು. ಇದರಲ್ಲಿ ಸಂಶಯವಿಲ್ಲ. ಅಂಥವನು ಭಯಂಕರವಾದ ಸಮಸ್ತನರಕಗಳಲ್ಲಿಯೂ ಯಾತನೆಯನ್ನನುಭವಿಸಿ ಅನಂತರ ಚಾಂಡಾಲ ಜನ್ಮವನ್ನು ಪಡೆಯುವನು.

೧೭೧-೧೭೩. ಇದೇ ರೀತಿಯಲ್ಲಿ ಶಿವರಾತ್ರಿಯ ದಿನದಲ್ಲೂ ರಾಮನವಮಿಯ ದಿನದಲ್ಲೂ ಉಪವಾಸವನ್ನು ಮಾಡಬೇಕು; ಉಪವಾಸ ಮಾಡಲು ಅಶಕ್ತನಾದರೆ ಹವಿಷ್ಯಾನ್ನವನ್ನು ಊಟಮಾಡಬಹುದು. ಆದಕ್ಕೂ ಅಶಕ್ತನಾದರೆ ಪಾಪನಿವೃತ್ತಿ

ತತೋಽಶಕ್ತೋ ದುರ್ಬಲಶ್ಚ ಭೋಜಯೇದ್ಬ್ರಾಹ್ಮಣಾನಪಿ ।
ಕೃತ್ವಾ ಮಹೋತ್ಸವಂ ಪುಣ್ಯಂ ಮದೀಯಂ ಪಾತಕಾಚ್ಛುಚಿಃ ॥ ೧೩೨ ॥

ತಸ್ಮಾದ್ಯತ್ನೇನ ಕರ್ತವ್ಯಂ ನಾಮಸಂಕೀರ್ತನಂ ಮಮ ।
ಗೃಧ್ರಃ ಕೋಟಿಸಹಸ್ರಾಣಿ ಶತಜನ್ಮಾನಿ ಸೂಕರಃ ॥ ೧೭೩ ॥

ಶ್ವಾಪದಃ ಶತಜನ್ಮಾನಿ ಭವೇಚ್ಚ ನಿಶಿ ಭೋಜನಾತ್ ।
ಅದೀಕ್ಷಿತೋ ದ್ವಿಜಶ್ಚೈವ ಶಂಖಶ್ಚಿಲ್ಲಃ ಶುಕೋ ಭವೇತ್ ॥ ೧೭೪ ॥

ಅನುದ್ವಾಹೀ ದ್ವಿಜಶ್ಚೈವ ರಾಜಹಂಸೋ ಭವೇದ್ಧ್ರುವಂ ।
ಚಿತ್ರವಸ್ತ್ರಾಪಹಾರೀ ಚ ಮಯೂರಶ್ಚ ತ್ರಿಜನ್ಮಸು ॥ ೧೭೫ ॥

ತೇಜಃ ಪಾತ್ರಾಪಹಾರೀ ಚ ಭವೇತ್ಕಾರಂಡವಶ್ಚಿರಂ ।
ಸುರಾಣಾಂ ಪ್ರತಿಮಾಚೋರೋಽಪ್ಯಂಧಶ್ಚ ಸಪ್ತಜನ್ಮಸು ॥ ೧೭೬ ॥

---

ಗೋಸ್ಕರ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ನನ್ನ ಪುಣ್ಯಕರವಾದ ಮಹೋತ್ಸವವನ್ನು ಮಾಡಿ ಅನಂತರ ಶುದ್ಧನಾಗುವನು.

೧೭೩–೧೭೪. ಆದಕಾರಣ ಪ್ರಯತ್ನಪೂರ್ವಕವಾಗಿ ಮಾನವನು ನನ್ನ ನಾಮಸಂಕೀರ್ತನೆಯನ್ನು ಮಾಡಬೇಕು. ಅರ್ಧರಾತ್ರಿಯಲ್ಲಿ ಭೋಜನ ಮಾಡುವವನು ಒಂದುಸಾವಿರ ಕೋಟಿ ಜನ್ಮಗಳಲ್ಲಿ ಹದ್ದಾಗಿಯೂ ಒಂದುನೂರು ಜನ್ಮಗಳಲ್ಲಿ ಹಂದಿಯಾಗಿಯೂ ನೂರು ಜನ್ಮಗಳಲ್ಲಿ ಕಾಡುಮೃಗವಾಗಿಯೂ ಹುಟ್ಟುವನು ಮತ್ತು ಯಾಗವನ್ನು ಮಾಡದ ಬ್ರಾಹ್ಮಣನು ಶಂಖವೆಂಬ ಜಾತಿಯ ಸರ್ಪವಾಗಿಯೂ ಗಿಳಿಯಾಗಿಯೂ ರೋಗದಿಂದ ನೀರುಸುರಿಯುವ ಕಣ್ಣುಳ್ಳವನಾಗಿಯೂ ಹುಟ್ಟುವನು.

೧೭೫. ವಿವಾಹವನ್ನು ಮಾಡಿಕೊಳ್ಳದಿರುವ ಬ್ರಾಹ್ಮಣನು ನಿಶ್ಚಯವಾಗಿಯೂ ರಾಜಹಂಸವಾಗುವನು. ಮತ್ತು ಚಿತ್ರವರ್ಣದ ವಸ್ತ್ರಗಳನ್ನು ಕದಿಯುವವನು ಮೂರು ಜನ್ಮಗಳಲ್ಲಿ ನವಿಲಾಗುವನು.

೧೭೬–೧೭೭. ಪ್ರಕಾಶಮಾನವಾದ ಪಾತ್ರೆಯನ್ನು ಕದಿಯುವವನು ಬಹುಕಾಲದವರೆಗೆ ಕೊಕ್ಕರೆಯಾಗಿರುವನು. ದೇವರ ಮೂರ್ತಿಗಳನ್ನು ಕದಿಯುವವನು

ದರಿದ್ರೋ ವ್ಯಾಧಿಯುಕ್ತಶ್ಚ ಬಧಿರಶ್ಚಾಪಿ ಕುಬ್ಜಕಃ ।
ಸ್ತ್ರೀತೈಲಮಧುಮಾಂಸಾನಿ ರವೌ ವಾ ಪಂಚಪರ್ವಸು ॥ ೧೭೭ ॥

ಸೇವತೇ ಯೋ ಮಹಾಮೂಢೋ ವಜ್ರದಂಷ್ಟ್ರಂ ವ್ರಜೇದ್ಧ್ರುವಂ ।
ಪಾತಕೀ ದುಃಖಿತಸ್ತತ್ರ ವರ್ಷಾಣಾಂ ಚ ಸಹಸ್ರಕಂ ॥ ೧೭೮ ॥

ತತೋ ಭವತಿ ಮ್ಲೇಚ್ಛಶ್ಚ ಚಾಂಡಾಲಃ ಸಪ್ತಜನ್ಮಸು ।
ವ್ಯಾಧಿಯುಕ್ತಸ್ತತಃ ಶೂದ್ರೋ ಬ್ರಾಹ್ಮಣಶ್ಚ ತತಃ ಶುಚಿಃ ॥ ೧೭೯ ॥

ತಸ್ಮಾದ್ಯತ್ನಾನ್ನಭೋಕ್ತವ್ಯಂ ಭಾರತೇ ಧರ್ಮಭೀರುಣಾ ।
ಬ್ರಾಹ್ಮಣಂ ಚ ಸುರಂ ದೃಷ್ಟ್ವಾ ನ ನಮೇದ್ಯೋ ನರಾಧಮಃ ॥ ೧೮೦ ॥

ಯಾವಜ್ಜೀವನಪರ್ಯಂತಮಶುಚಿರ್ಯವನೋ ಭವೇತ್ ।
ಅಭ್ಯುತ್ಥಾನಂ ನ ಕುರುತೇ ದೃಷ್ಟ್ವಾ ಚಾಽಗತಬ್ರಾಹ್ಮಣಂ ॥ ೧೮೧ ॥

---

ಏಳು ಜನ್ಮಗಳಲ್ಲಿ ಕುರುಡನಾಗುವನು. ಮತ್ತು ದರಿದ್ರನೂ ರೋಗಿಯೂ ಕಿವುಡನೂ ಕಳ್ಳನೂ ಆಗುವನು. ಯಾವ ಮಹಾಮೂಢನು ಭಾನುವಾರದಲ್ಲಾಗಲಿ, ಪಂಚ ಪರ್ವದಿನದಲ್ಲಾಗಲೀ, ಸ್ತ್ರೀಯನ್ನೂ, ಎಣ್ಣೆಯನ್ನೂ, ಮಧ್ಯವನ್ನೂ, ಮಾಂಸವನ್ನೂ ಸೇವನೆ ಮಾಡುತ್ತಾನೋ ಅವನು ವಜ್ರದಂಷ್ಟ್ರವೆಂಬ ನರಕವನ್ನು ಖಂಡಿತವಾಗಿಯೂ ಹೊಂದುವನು. ಆ ಪಾಪಿಯು ಅಲ್ಲಿ ಒಂದುಸಾವಿರ ವರುಷಗಳು ದುಃಖಪಡುತ್ತಿದ್ದು ಅನಂತರ ಏಳುಜನ್ಮಗಳಲ್ಲಿ ಮ್ಲೇಚ್ಛನೂ ಚಂಡಾಲನೂ ಆಗುವನು. ಅನಂತರ ರೋಗದಿಂದ ಕೂಡಿದ ಶೂದ್ರನೂ ಅನಂತರ ಬ್ರಾಹ್ಮಣನೂ ಆಗಿ ಶುದ್ಧನಾಗುವನು.

೧೮೦–೧೮೨ ಆದುದರಿಂದ ಈ ಭಾರತ ಭೂಮಿಯಲ್ಲಿ ಧರ್ಮಭೀತಿಯುಳ್ಳವನು ಪ್ರಯತ್ನಪೂರ್ವಕವಾಗಿ ನಿಷಿದ್ಧ ವಸ್ತುಗಳನ್ನು ಭೋಜನ ಮಾಡದಿರಬೇಕು. ಮತ್ತು ಯಾವ ಮನುಷ್ಯನಾದವನು ಬ್ರಾಹ್ಮಣನನ್ನೂ ದೇವರನ್ನೂ ನೋಡಿಯೂ ನಮಸ್ಕಾರ ಮಾಡುವುದಿಲ್ಲವೋ ಅವನು ಬದುಕಿರುವವರೆಗೂ ಅಶುದ್ಧನೂ ಯವನ ಸಮಾನನೂ ಆಗುವನು. ಅಲ್ಲದೆ ಬ್ರಾಹ್ಮಣನು ಎದುರಿಗೆ ಬಂದುದನ್ನು ನೋಡಿಯೂ ಯಾವನು ಎದ್ದು ಮರ್ಯಾದೆ ಮಾಡುವುದಿಲ್ಲವೋ ಅವನು ನಿಶ್ಚಯವಾಗಿಯೂ ಏಳುಜನ್ಮಗಳಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದ ಪಾತಕದಿಂದ ಕೂಡಿರುತ್ತಾನೆ. ಮತ್ತು ಶಿವನನ್ನು

ಸ ಭವೇದ್ಬ್ರಹ್ಮಘಾತೀ ಚ ಸಪ್ತಜನ್ಮಸು ನಿಶ್ಚಿತಂ ।
ಶಿವದ್ವೇಷೀ ಕುಕ್ಕುಟಶ್ಚ ದೇವಲಃ ಸಪ್ತಜನ್ಮಸು ॥ ೧೮೨ ॥

ಪಿತೃದೇವಾರ್ಚನಂ ಹಂತಿ ವೇದೋಕ್ತಂ ಜ್ಞಾನದುರ್ಬಲಃ ।
ಸ ಯಾತಿ ನರಕಂ ಪಾಪೀ ವರ್ಷಾಣಾಂ ಚ ಸಹಸ್ರಕಂ ॥ ೧೮೩ ॥

ತತಶ್ಚ ರೌರವಂ ಭುಕ್ತ್ವಾ ತೀರ್ಥಕಾಕಸ್ತ್ರಿಜನ್ಮಸು ।
ತ್ರಿಜನ್ಮಸು ಶೃಗಾಲಶ್ಚ ತೀರ್ಥೇ ಭುಂಕ್ತೇ ಶವಂ ವ್ರಜ ॥ ೧೮೪ ॥

ತ್ರಿಜನ್ಮಸು ಭವೇತ್ಸೋಽಪಿ ತೀರ್ಥೇಷು ಶವರಕ್ಷಕಃ ।
ಶವಾನಾಂ ಕರಮಾದತ್ತೇ ಕರ್ಮಣಾ ಕೃತಪಾತಕೀ ॥ ೧೮೫ ॥

ನಿತ್ಯಂ ಸುರಾರ್ಚನಂ ಕೃತ್ವಾ ದಾಂಭಿಕೋ ಜ್ಞಾನದುರ್ಬಲಃ ।
ಗುರುಂ ಚ ನಾರ್ಚಯೇದ್ಭಕ್ತ್ಯಾ ತಸ್ಮೈ ನಾನ್ನಂ ದದಾತಿ ಯಃ ॥ ೧೮೬ ॥

---

ನಿಂದಿಸುವವನು ಕೋಳಿಯಾಗುವನು. ಕೂಲಿಗಾಗಿ ದೇವರಪೂಜೆ ಮಾಡುವವನೂ ಕೂಡ ಆಗುವನು.

೧೮೩. ಜ್ಞಾನವಿಲ್ಲದ ಯಾವನು ವೇದೋಕ್ತವಾದ ಪಿತೃಗಳ ಮತ್ತು ದೇವರ ಪೂಜೆಯನ್ನು ನಾಶ ಮಾಡುತ್ತಾನೋ ಆ ಪಾಪಿಯು ಒಂದು ಸಾವಿರ ವರುಷಗಳವರೆಗೆ ನರಕವಾಸವನ್ನನುಭವಿಸುವನು.

೧೮೪. ಎಲೈ ಗೋಕುಲದೊಡೆಯನೇ! ಆ ಪಾಪಿಯು ರೌರವವೆಂಬ ನರಕವನ್ನನುಭವಿಸಿದನಂತರ ಮೂರು ಜನ್ಮಗಳಲ್ಲಿ ತೀರ್ಥಪ್ರದೇಶಗಳಲ್ಲಿ ವಾಸಮಾಡುವ ಕಾಗೆಯಾಗುವನು. ಮತ್ತು ಮೂರು ಜನ್ಮಗಳಲ್ಲಿ ನರಿಯಾಗಿದ್ದು ತೀರ್ಥಪ್ರದೇಶಗಳಲ್ಲಿ ಹೆಣಗಳನ್ನು ತಿನ್ನುವವನಾಗುತ್ತಾನೆ.

೧೮೫. ಯಾವನು ಹೆಣಗಳಿಗೆ ಸುಂಕವನ್ನು ತೆಗೆದುಕೊಳ್ಳುತ್ತಾನೋ ಅವನು ಮಹಾಪಾಪಕಾರ್ಯಗಳನ್ನು ಮಾಡುತ್ತ ಮತ್ತೆ ಮೂರು ಜನ್ಮಗಳಲ್ಲಿ ತೀರ್ಥಪ್ರದೇಶದಲ್ಲಿ ಹೆಣಗಳನ್ನು ಕಾದುಕೊಂಡಿರುವವನಾಗುವನು.

೧೮೬–೧೮೮. ಯಾವನು ನಿತ್ಯವೂ ದೇವರ ಪೂಜೆಯನ್ನುಮಾಡಿ ದಾಂಭಿಕನಾಗಿಯೂ ಜ್ಞಾನವಿಲ್ಲದವನಾಗಿಯೂ ಗುರುವನ್ನು ಭಕ್ತಿಯಿಂದ ಪೂಜಿಸುವುದಿಲ್ಲವೋ ಮತ್ತು ಅವನಿಗೆ ಅನ್ನವನ್ನು ಕೂಡ ಕೊಡುವುದಿಲ್ಲವೋ ಅವನು ದೇವರ ಶಾಪದಿಂದ

ಸ ಭವೇದ್ದೇವಲೋ ದುಃಖೀ ದೇವಶಾಪೇನ ಪಾತಕೀ ।
ನಿತ್ಯಂ ಸುರಾರ್ಚನಂ ಕೃತ್ವಾ ದಾಂಭಿಕೋ ಜ್ಞಾನದುರ್ಬಲಃ ॥ ೧೮೭ ॥

ಪೂಜಾಫಲಂ ನ ಲಭತೇ ದೇವದ್ರೋಹೀ ಸ ದಾರುಣಃ ।
ದೀಪನಿರ್ವಾಣಕರ್ತಾ ಚ ಖದ್ಯೋತಃ ಸಪ್ತಜನ್ಮಸು ॥ ೧೮೮ ॥

ಅತೀವ ಮತ್ಸ್ಯಲುಬ್ಧಶ್ಚಾಪ್ಯನೈವೇದ್ಯಂ ಚ ಖಾದತಿ ।
ಸ ಭವೇನ್ಮತ್ಸ್ಯರಂಗಶ್ಚ ಮಾರ್ಜಾರಃ ಸಪ್ತಜನ್ಮಸು ॥ ೧೮೯ ॥

ಗೋಣೀಹರ್ತಾ ಕಪೋತಶ್ಚ ಮಾಲಾಹರ್ತಾ ವಿಹಂಗಮಃ ।
ಚಟಕೋ ಧಾನ್ಯಚೋರಶ್ಚ ಮಾಂಸಚೋರಶ್ಚ ಕುಂಜರಃ ॥ ೧೯೦ ॥

ಕವಿತ್ವಹರ್ತಾ ವಿದುಷಾಂ ಮಂಡೂಕಃ ಸಪ್ತಜನ್ಮಸು ।
ಅಸತ್ಕವಿರ್ಗ್ರಾಮವಿಪ್ರೋ ನಕುಲಃ ಸಪ್ತಜನ್ಮಸು ॥ ೧೯೧ ॥

---

ಪಾಪಿಯಾಗಿ ಕೂಲಿಗಾಗಿ ದೇವರಪೂಜೆ ಮಾಡುವವನೂ ದುಃಖದಿಂದ ಕೂಡಿದವನೂ ಆಗುವನು. ಮತ್ತು ಯಾವನು ನಿತ್ಯವೂ ದೇವತಾರ್ಚನೆಯನ್ನು ಮಾಡುತ್ತ ದಾಂಭಿಕನೂ ಜ್ಞಾನವಿಲ್ಲದವನೂ ಆಗಿರುವನೋ ಅವನು ಪೂಜೆಯ ಫಲವನ್ನು ಹೊಂದುವುದಿಲ್ಲ ಮತ್ತು ಅವನು ಭಯಂಕರವಾದ ದೇವದ್ರೋಹ ಮಾಡಿದವನಾಗುತ್ತಾನೆ. ಅಲ್ಲದೆ ದೇವರ ಮುಂದಿರುವ ದೀಪವನ್ನು ಯಾವನು ಆರಿಸುತ್ತಾನೋ ಅವನು ಏಳುಜನ್ಮಗಳಲ್ಲಿ ಹುಳುವಾಗುವನು.

೧೮೯. ದೇವರಿಗೆ ನಿವೇದನ ಮಾಡದೆ ಯಾವನು ಮೀನನ್ನು ತಿನ್ನುತ್ತಾನೊ, ಅವನು ಮೂರು ಜನ್ಮಗಳಲ್ಲಿ ಬೆಕ್ಕಾಗಿಯೂ ಮೀನುಗಳನ್ನು ಹಿಡಿಯುವ ಬೆಸ್ತರವನಾಗಿಯೂ ಹುಟ್ಟುವನು.

೧೯೦. ಗೋಣಿಯನ್ನು ಕದ್ದವನು ಪಾರಿವಾಳವೂ, ಹೂಮಾಲೆಯನ್ನು ಕದ್ದವನು ಹಕ್ಕಿಯೂ ಆಗುವನು. ಮತ್ತು ಧಾನ್ಯವನ್ನು ಕದ್ದವನು ಗುಬ್ಬಿಯೂ, ಮಾಂಸವನ್ನು ಕದ್ದವನು ಆನೆಯೂ ಆಗುವನು.

೧೯೧-೧೯೨. ವಿದ್ವಾಂಸರ ಕವಿತ್ವವನ್ನು ಅಪಹರಿಸಿದವನು ಏಳು ಜನ್ಮಗಳಲ್ಲಿ ಕಪ್ಪೆಯಾಗುವನು. ಕೆಟ್ಟಕವಿಯು ಹಳ್ಳಿಯ ಬ್ರಾಹ್ಮಣನಾಗುವನು ಮತ್ತು ಏಳು

ಕುಷ್ಠೀ ಭವೇಚ್ಚ ಜನ್ಮೈಕಂ ಕೃಕಲಾಸಸ್ತ್ರಿಜನ್ಮಸು ।
ಜನ್ಮೈಕಂ ವರಲಶ್ಚೈವ ತತೋ ವೃಕ್ಷಪಿಪೀಲಿಕಾ ॥ ೯೨ ॥

ತತಃ ಶೂದ್ರಶ್ಚ ವೈಶ್ಯಶ್ಚ ಕ್ಷತ್ರಿಯೋ ಬ್ರಾಹ್ಮಣಸ್ತಥಾ ।
ಕನ್ಯಾವಿಕ್ರಯಕಾರೀ ಚ ಚತುರ್ವರ್ಣೋ ಹಿ ಮಾನವಃ ॥ ೯೩ ॥

ಸದ್ಯಃ ಪ್ರಯಾತಿ ತಾಮಿಸ್ರಂ ಯಾವಚ್ಚಂದ್ರದಿವಾಕರೌ ।
ತತೋ ಭವತಿ ವ್ಯಾಧಶ್ಚ ಮಾಂಸವಿಕ್ರಯಕಾರಕಃ ॥ ೯೪ ॥

ತತೋ ವ್ಯಾಧಿರ್ಭವೇತ್ಪಶ್ಚಾದ್ಯೋ ಯಥಾ ಪೂರ್ವಜನ್ಮನಿ ।
ಮನ್ನಾಮವಿಕ್ರಯೀ ವಿಪ್ರೋ ನಹಿ ಮುಕ್ತೋ ಭವೇದ್ಧ್ರುವಂ ॥ ೯೫ ॥

ಮೃತ್ಯುಲೋಕೇ ಚ ಮನ್ನಾಮಸ್ಮೃತಿಮಾತ್ರಂ ನ ವಿದ್ಯತೇ ।
ಪಶ್ಚಾದ್ಭವೇತ್ಸ ಗೋಯೋನೌ ಜನ್ಮೈಕಂ ಜ್ಞಾನದುರ್ಬಲಃ ॥ ೯೬ ॥

---

ಜನ್ಮಗಳಲ್ಲಿ ಮುಂಗುಸಿಯಾಗುವನು. ಒಂದು ಜನ್ಮದಲ್ಲಿ ಕುಷ್ಟರೋಗಿಯೂ, ಮೂರು ಜನ್ಮಗಳಲ್ಲಿ ಹೆಂಟಿಗೊದ್ದನೂ ಒಂದು ಜನ್ಮದಲ್ಲಿ ವರಲನೂ ಅನಂತರ ಮರದಲ್ಲಿರುವ ಇರುವೆಯೂ ಆಗುವನು.

೯೩-೯೫. ಅನಂತರ ಶೂದ್ರನೂ, ವೈಶ್ಯನೂ, ಕ್ಷತ್ರಿಯನೂ ಆಗಿ ಅನಂತರ ಬ್ರಾಹ್ಮಣನಾಗುವನು ಮತ್ತು ನಾಲ್ಕು ವರ್ಣಗಳಲ್ಲಿ ಯಾವನೇ ಆಗಲಿ ಕನ್ಯೆಯನ್ನು ಮಾರುವವನಾದರೆ ಆಗಲೇ ತಾಮಿಸ್ರವೆಂಬ ನರಕವನ್ನು ಸೂರ್ಯ ಚಂದ್ರರಿರುವ ವರೆಗೂ ಅನುಭವಿಸುವನು. ಅನಂತರ ಮಾಂಸವನ್ನು ಮಾರುವ ಬೇಡರವನಾಗುತ್ತಾನೆ. ಅನಂತರ ರೋಗವುಂಟಾಗುತ್ತದೆ. ಅನಂತರ ಯಾವ ಯಾವನು ಯಾವ ಯಾವ ಜನ್ಮದಿಂದ ಬಂದಿರುವನೋ ಆಯಾಯ ಜನ್ಮವನ್ನು ಪಡೆಯುವನು. ಅಲ್ಲದೆ ನನ್ನ ನಾಮಗಳನ್ನು ಮಾರುವ ಬ್ರಾಹ್ಮಣನು ಖಂಡಿತವಾಗಿಯೂ ಮುಕ್ತನಾಗುವುದಿಲ್ಲ.

೯೬. ಅಂತಹವರಿಗೆ ಮೃತ್ಯುಲೋಕದಲ್ಲಿ ನನ್ನ ನಾಮಸ್ಮರಣೆಯೇ ಇರುವುದಿಲ್ಲ. ಅನಂತರ ಒಂದು ಜನ್ಮದಲ್ಲಿ ಜ್ಞಾನಹೀನನಾಗಿ ಗೋ ಜನ್ಮವನ್ನು ಪಡೆಯುವನು.

ತತಶ್ಚಾಗಸ್ತತೋ ಮೇಷೋ ಮಹಿಷಃ ಸಪ್ತಜನ್ಮಸು ।
ಮಹಾಚಕ್ರೀ ಚ ಕುಟಿಲೋ ಧರ್ಮಹೀನಸ್ತು ಮಾನವಃ　　॥ ೧೯೭ ॥

ಜನ್ಮೈಕಂ ತೈಲಕಾರಶ್ಚ ಕುಂಭಕಾರಸ್ತಥೈವ ಚ ।
ಮಿಥ್ಯಾಕಲಂಕವಕ್ತಾ ಚ ದೇವಬ್ರಾಹ್ಮಣನಿಂದಕಃ　　॥ ೧೯೮ ॥

ಸ ಭವೇತ್ಸ್ವರ್ಣಕಾರಶ್ಚ ರಜಕಃ ಸಪ್ತಜನ್ಮಸು ।
ಬ್ರಾಹ್ಮಣಕ್ಷತ್ರವಿಟ್‌ಶೂದ್ರಾಃ ಕುತ್ಸಿತಾ ಶೌಚವರ್ಜಿತಾಃ　　॥ ೧೯೯ ॥

ಜನ್ಮ ತೇಷಾಂ ಮ್ಲೇಚ್ಛಯೋನೌ ವರ್ಷಾಣಾಮಯುತಂ ತಥಾ ।
ಕಾಮತೋ ಯೋಷಿತಾಂ ಶ್ರೋಣೀಸ್ತನಾಸ್ಯೇ ಯಶ್ಚ ಪಶ್ಯತಿ　　॥ ೨೦೦ ॥

ಸ ಭವೇದ್ದೃಷ್ಟಿಹೀನಶ್ಚ ಪರತ್ರಾಪಿ ನಪುಂಸಕಃ ।
ವಿಪ್ರೋಽಭಿಚಾರಕರ್ತಾ ಚ ಹಿಂಸಕೋ ಜ್ಞಾನದುರ್ಬಲಃ　　॥ ೨೦೧ ॥

---

೧೯೭–೨೦೨. ಅನಂತರ ಹೋತನಾಗಿಯೂ ಏಳು ಜನ್ಮಗಳಲ್ಲಿ ಕೋಣವಾಗಿಯೂ ಇರುವನು. ಮತ್ತು ದೊಡ್ಡ ಗುಂಪನ್ನು ಕಟ್ಟಿಕೊಂಡು ಕುಟಿಲಮಾರ್ಗದಲ್ಲಿರುವ ಧರ್ಮಹೀನನಾದ ಮಾನವನು ಒಂದು ಜನ್ಮದಲ್ಲಿ ಎಣ್ಣೆಮಾರುವವನೂ, ಮತ್ತು ಮಡಿಕೆಮಾಡುವವನೂ ಆಗುವನು. ಯಾವನು ವ್ಯರ್ಥವಾಗಿ ಕಲಹವನ್ನು ಮಾಡುತ್ತಾನೋ ಮತ್ತು ದೇವರು ಬ್ರಾಹ್ಮಣರು ಇವರುಗಳನ್ನು ನಿಂದಿಸುತ್ತಾನೋ ಅವನು ಏಳು ಜನ್ಮಗಳಲ್ಲಿ ಸ್ವರ್ಣಕಾರನೂ ಮಡಿವಾಳನೂ ಆಗುವನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಯಾವನು ಆಚಾರವಿಲ್ಲದವನಾಗಿ ಕೆಟ್ಟವನಾಗಿರುತ್ತಾನೋ ಅಂಥವನಿಗೆ ಹತ್ತು ಸಾವಿರ ವರುಷಗಳವರೆಗೆ ಮ್ಲೇಚ್ಛಯೋನಿಯಲ್ಲಿ ಜನ್ಮವುಂಟಾಗುತ್ತದೆ. ಮತ್ತು ಯಾವ ಮಾನವನು ಕಾಮದೃಷ್ಟಿಯಿಂದ ಸ್ತ್ರೀಯರ ಕಟಿಪಶ್ಚಾದ್ಭಾಗವನ್ನೂ ಸ್ತನಗಳನ್ನೂ ಮುಖವನ್ನೂ ನೋಡುವನೋ ಅವನು ಕುರುಡನಾಗುವನು. ಅಲ್ಲದೆ ಮುಂದಿನ ಜನ್ಮದಲ್ಲಿ ನಪುಂಸಕನೂ ಆಗುವನು. ಯಾವ ಬ್ರಾಹ್ಮಣನು ಮಾಟಕೃತ್ಯಗಳನ್ನು ಮಾಡುವವನಾಗುತ್ತಾನೋ ಅವನು ಹಿಂಸಾಕಾರ್ಯದಲ್ಲಿ ನಿರತನೂ ಜ್ಞಾನಹೀನನೂ ಆಗುವನು. ಮತ್ತು ಹತ್ತು ಸಾವಿರ

ಯಾತ್ಯೇವಮಂಧತಾಮಿಸ್ರಂ ವರ್ಷಾಣಾಮಯುತಂ ತಥಾ ।
ತದಾ ಭವತಿ ದೈವಜ್ಞೋಽಪ್ಯಗ್ರದಾನೀ ಚ ದುರ್ಮತಿಃ ॥ ೨೦೨ ॥

ತತಃ ಶೂದ್ರೋ ಭವೇದ್ವಿಪ್ರೋ ಭೋಗೇನ ಕರ್ಮಣಸ್ತಥಾ ।
ಶಾಸ್ತ್ರಜ್ಞಾತಾ ಚ ದೈವಜ್ಞೋ ಮಿಥ್ಯಾ ವದತಿ ಲೋಭತಃ ॥ ೨೦೩ ॥

ಸ ಭವೇಚ್ಚ ಧ್ರುವಂ ಜ್ಯೇಷ್ಠೋ ವಾನರಃ ಸಪ್ತಜನ್ಮಸು ।
ಅನೇಕಜನ್ಮತಪಸಾ ಭಾರತೇ ಬ್ರಾಹ್ಮಣೋ ಭವೇತ್ ॥ ೨೦೪ ॥

ಸುಬುದ್ಧಿರತಿಧರ್ಮಿಷ್ಠೋ ಧರ್ಮಹೀನಶ್ಚ ಪಾತಕೀ ।
ಸ್ವಧರ್ಮನಿರತೋ ವಿಪ್ರಃ ಪರಮಾಚ್ಚ ಹುತಾಶನಾತ್ ॥ ೨೦೫ ॥

ಪವಿತ್ರಶ್ಚಾತಿತೇಜಸ್ವೀ ತಸ್ಮಾದ್ಭೀತಾಃ ಸುರಾಃ ಸದಾ ।
ನದೀಷು ಚ ಯಥಾ ಗಂಗಾ ತೀರ್ಥೇಷು ಪುಷ್ಕರಂ ಯಥಾ ॥ ೨೦೬ ॥

---

ವರುಷಗಳವರೆಗೆ ಅಂಧತಾಮಿಸ್ರವೆಂಬ ನರಕವನ್ನನುಭವಿಸುವನು. ಅನಂತರ ಹೆಚ್ಚಾಗಿ ದಾನಮಾಡುವ ದುರ್ಬುದ್ಧಿಯಿಂದ ಕೂಡಿದ ಜ್ಯೋತಿಷ್ಕನಾಗಿ ಹುಟ್ಟುವನು.

೨೦೩–೨೦೪. ಅನಂತರ ಶೂದ್ರನಾಗಿ ಕರ್ಮಫಲವನ್ನನುಭವಿಸಿದನಂತರ ಬ್ರಾಹ್ಮಣನಾಗುತ್ತಾನೆ. ಮತ್ತು ಶಾಸ್ತ್ರವನ್ನು ಚೆನ್ನಾಗಿ ತಿಳಿದವನಾದರೂ ಯಾವ ಜ್ಯೋತಿಷ್ಕನು ಆಶೆಯಿಂದ ಸುಳ್ಳು ಫಲಗಳನ್ನು ಹೇಳುತ್ತಾನೋ ಅವನು ಖಂಡಿತವಾಗಿಯೂ ಏಳು ಜನ್ಮಗಳಲ್ಲಿ ಕೋತಿಯಾಗುವನು. ಈ ಭೂಲೋಕದಲ್ಲಿ ಅದರಲ್ಲೂ ಭರತಖಂಡದಲ್ಲಿ ಬ್ರಾಹ್ಮಣನಾಗಿ ಹುಟ್ಟಬೇಕಾದರೆ ಅನೇಕ ಜನ್ಮಗಳಲ್ಲಿ ತಪಸ್ಸನ್ನಾಚರಿಸಿರಬೇಕು.

೨೦೫–೨೦೮. ಧರ್ಮಕಾರ್ಯವನ್ನು ಮಾಡದವನಾದರೆ ಪಾಪಿಯಾಗುವನು. ಒಳ್ಳೆಯ ಬುದ್ಧಿಯುಳ್ಳವನೂ ಹೆಚ್ಚು ಧರ್ಮನಿರತನೂ, ತನ್ನ ಧರ್ಮದಲ್ಲಿ ಆಸಕ್ತನೂ ಆದ ಬ್ರಾಹ್ಮಣನು ಅಗ್ನಿ ಸೇವೆಯನ್ನು ಮಾಡುತ್ತಿದ್ದರೆ ಅತಿ ಪವಿತ್ರನೂ ಮಹಾತೇಜಸ್ವಿಯೂ ಆದ ಆ ಬ್ರಾಹ್ಮಣನನ್ನು ನೋಡಿ ದೇವತೆಗಳೂ ಹೆದರುತ್ತಾರೆ. ನದಿಗಳ ಮಧ್ಯದಲ್ಲಿ ಗಂಗೆಯು ಹೇಗೋ ತೀರ್ಥಗಳಲ್ಲೆಲ್ಲಾ ಪುಷ್ಕರ ತೀರ್ಥವು ಹೇಗೋ

ಪುರೀಷು ಚ ಯಥಾ ಕಾಶೀ ಯಥಾ ಜ್ಞಾನಿಷು ಶಂಕರಃ ।
ಶಾಸ್ತ್ರೇಷು ಚ ಯಥಾ ವೇದಾ ಯಥಾऽಶ್ವತ್ಥಶ್ಚ ಪಾದಪೇ ॥ ೨೦೭ ॥

ಮಮ ಪೂಜಾತಪಸ್ಯಾಸು ವ್ರತೇಷ್ವನಶನಂ ಯಥಾ ।
ತಥಾ ಜಾತಿಷು ಸರ್ವಾಸು ಬ್ರಾಹ್ಮಣಃ ಶ್ರೇಷ್ಠ ಏವ ಚ ॥ ೨೦೮ ॥

ವಿಪ್ರಪಾದೇಷು ತೀರ್ಥಾನಿ ಪುಣ್ಯಾನಿ ಚ ವ್ರತಾನಿ ಚ ।
ವಿಪ್ರಪಾದರಜಃ ಶುದ್ಧಂ ಪಾಪವ್ಯಾಧಿವಿಮರ್ದನಂ ॥ ೨೦೯ ॥

ಶುಭಾಶೀರ್ವಚನಂ ತೇಷಾಂ ಸರ್ವಕಲ್ಯಾಣಕಾರಣಂ ।
ಏತತ್ತೇ ಕಥಿತಂ ತಾತ ವಿಪಾಕಃ ಕರ್ಮಣಾಮಹೋ ॥ ೨೧೦ ॥

ಯಥಾಶ್ರುತಂ ಯಥಾಜ್ಞಾತಂ ತದಶೇಷಂ ನಿಶಾಮಯ ।
ಶ್ರುತ್ವಾ ಧರ್ಮವಿಪಾಕಂ ಚ ವಾಚಕಾಯ ಸುವರ್ಣಕಂ ॥ ೨೧೧ ॥

---

ಪಟ್ಟಣಗಳಲ್ಲೆಲ್ಲ ಕಾಶಿಪಟ್ಟಣವು ಹೇಗೋ ಜ್ಞಾನಿಗಳಲ್ಲೆಲ್ಲ ಶಂಕರನು ಹೇಗೋ ಶಾಸ್ತ್ರಗಳಲ್ಲೆಲ್ಲಾ ವೇದಗಳು ಹೇಗೋ ಮರಗಳಲ್ಲೆಲ್ಲ ಅಶ್ವತ್ಥದ ಮರವು ಹೇಗೋ ಪೂಜೆಗಳಲ್ಲೆಲ್ಲ ನನ್ನ ಪೂಜೆಯು ಹೇಗೋ ವ್ರತಗಳಲ್ಲೆಲ್ಲ ಉಪವಾಸ ವ್ರತವು ಹೇಗೋ ಹಾಗೆ ಸಕಲ ಜಾತಿಗಳಲ್ಲಿಯೂ ಬ್ರಾಹ್ಮಣನು ಶ್ರೇಷ್ಠನಾಗಿರುವನು.

೨೦೯. ಬ್ರಾಹ್ಮಣನ ಪಾದಗಳಲ್ಲಿ ಸಮಸ್ತ ತೀರ್ಥಗಳೂ ಪುಣ್ಯತಮವಾದ ವ್ರತಗಳೂ ಕೂಡ ಇರುತ್ತವೆ. ಬ್ರಾಹ್ಮಣರ ಪಾದಧೂಳಿಯು ಅತ್ಯಂತ ಪರಿಶುದ್ಧವಾದುದು. ಪಾಪವೆಂಬ ರೋಗವನ್ನು ನಾಶಮಾಡತಕ್ಕುದು.

೨೧೦—೨೧೨. ಆ ಬ್ರಾಹ್ಮಣರ ಮಂಗಳಕರವಾದ ಆಶೀರ್ವಾದವು ಸಮಸ್ತವಾದ ಮಂಗಳಗಳಿಗೂ ಕಾರಣವು. ಎಲೈ ತಂದೆಯೇ ! ಕರ್ಮಗಳ ಪರಿಪಾಕಗಳನ್ನು ಹೇಗೆ ಕೇಳಿರುವೆನೊ ಹೇಗೆ ತಿಳಿದುಕೊಂಡಿರುವೆನೊ ಹಾಗೆ ಸಮಗ್ರವಾಗಿ ನಿನಗೆ ಹೇಳಿರುವೆನು. ಕೇಳುವವನಾಗು. ಈ ಧರ್ಮವಿಪಾಕವನ್ನು ಕೇಳಿ ಅದನ್ನು ಹೇಳಿದವನಿಗೆ ಚಿನ್ನವನ್ನೂ, ಬೆಳ್ಳಿಯನ್ನೂ, ವಸ್ತ್ರಗಳನ್ನೂ, ತಾಂಬೂಲವನ್ನೂ ಕೂಡ ಸಮರ್ಪಿಸುವವನಾಗಬೇಕು. ಯಾವನು ನನ್ನಲ್ಲಿ ಭಕ್ತಿಯುಳ್ಳವನಾಗಿ ಬ್ರಾಹ್ಮಣನಿಗೆ

ದದ್ಯಾತ್ತಸ್ಮೈ ಚ ರೌಪ್ಯಂ ಚ ವಸ್ತ್ರಂ ತಾಂಬೂಲಮೇವ ಚ ।
ಸುವರ್ಣಶತಕಂ ದದ್ಯಾತ್ಸದ್ಯೋ ದೇಹೀ ಚ ಗೋಕುಲಂ ।
ರೌಪ್ಯಂ ವಸ್ತ್ರಂ ಚ ತಾಂಬೂಲಂ ಮತ್ಪ್ರೀತ್ಯಾ ಬ್ರಾಹ್ಮಣಾಯ ಚ ॥ ೨೧೨ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ಭಗವನ್ನಂದಸಂವಾದೇ
ಪಂಚಾಶೀತಿತಮೋಽಧ್ಯಾಯಃ

---

ಒಂದುನೂರು ಚಿನ್ನದ ನಾಣ್ಯಗಳನ್ನೂ, ಬೆಳ್ಳಿಯ ವಸ್ತುಗಳನ್ನೂ, ವಸ್ತ್ರಗಳನ್ನೂ ತಾಂಬೂಲವನ್ನೂ ದಾನಮಾಡುತ್ತಾನೋ, ಅವನು ಆಕ್ಷಣವೇ ಗೋಕುಲವನ್ನು ಹೊಂದುವವನಾಗುತ್ತಾನೆ.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ಶ್ರೀಕೃಷ್ಣ
ನಂದಗೋಪರಸಂವಾದವೆಂಬ ಎಂಭತ್ತೈದನೆಯ ಅಧ್ಯಾಯವು
ಸಮಾಪ್ತವಾದುದು.



## ಎಂಭತ್ತೈದನೆಯ ಅಧ್ಯಾಯದ ಸಾರಾಂಶ.

ಈ ಅಧ್ಯಾಯದಲ್ಲಿ ನಾಲ್ಕು ವರ್ಣದವರ ಭಕ್ಷ್ಯಾಭಕ್ಷ್ಯವಸ್ತುಗಳನ್ನೂ, ಸಕಲ ಜಂತುಗಳ ಕರ್ಮಪ್ರಾಬಲ್ಯವನ್ನೂ ವಿವರಿಸಲಾಗಿದೆ. ಇಲ್ಲಿ ವಿವರಿಸಿರುವ ಅನೇಕ ವಿಷಯಗಳು ಆಧುನಿಕ ವಿಜ್ಞಾನ ಶಾಸ್ತ್ರಕ್ಕೂ ಅನುಗುಣವಾಗಿಯೇ ಇವೆ. ಕಬ್ಬಿಣ ಮತ್ತು ತಾಮ್ರದ ಪಾತ್ರೆಗಳಲ್ಲಿ ಹಾಲು, ಮೊಸರು, ತುಪ್ಪ, ಎಳನೀರು ಮುಂತಾದವುಗಳನ್ನು ಸೇವಿಸಕೂಡದೆಂಬುದು ವಿಜ್ಞಾನಿಗಳಿಗೂ ಸಮ್ಮತವಾಗಿದೆ. ಹಾಲಿಗೆ ಉಪ್ಪನ್ನು ಬೆರೆಸಿ ಕುಡಿಯುವುದನ್ನೂ, ಎಂಜಲು ಪದಾರ್ಥಗಳ ಸೇವನೆಯನ್ನೂ ಯಾವ ಆಧುನಿಕ ವೈದ್ಯರೂ ಒಪ್ಪುವುದಿಲ್ಲ. ನಾವು ಸೇವಿಸುವ ಆಹಾರವು ಹೇಗೆ ಶುದ್ಧವಾಗಿರಬೇಕೋ ಹಾಗೆಯೇ ಆಹಾರವನ್ನು ಕೊಡುವವರೂ ಕೂಡ ರೋಗ ರುಜಿನಾದಿಗಳಿಲ್ಲದೆ ಶುದ್ಧರಾಗಿರಬೇಕೆಂಬುದನ್ನೂ ಎಲ್ಲರೂ ಒಪ್ಪುತ್ತಾರೆ. ಆದರೆ ನೀಚರಿಗೆ ದುಷ್ಕಾರ್ಯದಲ್ಲಿ ಸ್ವಾಭಾವಿಕ ಪ್ರವೃತ್ತಿಯುಂಟಾಗುವುದರಿಂದ ಅದನ್ನು ತಪ್ಪಿಸಲು ನರಕದ ಘೋರ ಶಿಕ್ಷೆಗಳನ್ನು ಹೇಳಿರುವುದೂ ಅನುಚಿತವೇನಲ್ಲ. ಒಟ್ಟಿನಲ್ಲಿ ಚಾತುರ್ವರ್ಣ್ಯದವರು ತಮತಮಗೆ ವೇದೋಕ್ತವಾದ ಕರ್ಮಗಳನ್ನು ಆಚರಿಸಿಕೊಂಡು, ನಿಷಿದ್ಧ ವಸ್ತುಗಳನ್ನು ತೊರೆದು, ವಿಹಿತ ಭಕ್ಷ್ಯಗಳನ್ನು ತಿಂದುಕೊಂಡಿದ್ದರೆ ಸದ್ಗತಿ ಹೊಂದುವರೆಂದು ಈ ಅಧ್ಯಾಯದಲ್ಲಿ ಉಕ್ತವಾಗಿದೆ.

|| ಓಂ ||

|| ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀಕೃಷ್ಣಜನ್ಮಖಂಡೇ

---

### || ಷಡಶೀತಿತಮೋಽಧ್ಯಾಯಃ ||

**ನಂದ ಉವಾಚ**

**ಕೇದಾರಕನ್ಯಾಪ್ರಸ್ತಾವಾತ್ಕಥಿತಂ ಕರ್ಮಕೀರ್ತನಂ ।**
**ಕೃತ್ಯಾಸ್ತ್ರೀಣಾಂ ಪ್ರಸಂಗೇನ ತದ್ವ್ಯಾಸೇನ ವದ ಪ್ರಭೋ** || ೧ ||

**ಕೇದಾರಕನ್ಯಾ ಸಾ ಕಾ ವಾ ಕೋ ವಾ ಕೇದಾರಭೂಪತಿಃ ।**
**ಕಸ್ಯ ವಂಶೇ ಚ ತಜ್ಜನ್ಮ ತನ್ಮೇ ವ್ಯಾಖ್ಯಾತುಮರ್ಹಸಿ** || ೨ ||

**ಶ್ರೀ ಭಗವಾನುವಾಚ**

**ಪುರಾ ತು ಬ್ರಹ್ಮಣಃ ಪುತ್ರೋ ಮನುಃ ಸ್ವಾಯಂಭುವಸ್ತಥಾ ।**
**ತಸ್ಯ ಸ್ತ್ರೀ ಶತರೂಪಾ ಚ ಧನ್ಯಾ ಮಾನ್ಯಾ ಚ ಯೋಷಿತಾಂ** || ೩ ||

---

### ಎಂಭತ್ತಾರನೆಯ ಅಧ್ಯಾಯ

೧. ನಂದನು ಹೇಳುತ್ತಾನೆ:–ಎಲೈ ಪ್ರಭುವೇ ! ಕೇದಾರಕನ್ಯೆಯ ಪ್ರಸ್ತಾವದಿಂದ ಕರ್ಮಗಳ ವಿಷಯಗಳನ್ನು ಹೇಳಿದೆ. ಈಗ ಪ್ರಸಂಗವಶದಿಂದ ಸ್ತ್ರೀಯರ ಕರ್ತವ್ಯವನ್ನು ವಿವರವಾಗಿ ಹೇಳುವವನಾಗು.

೨. ಮತ್ತು ಆ ಕೇದಾರಕನ್ಯೆಯು ಯಾವಳು ? ಕೇದಾರರಾಜನು ಯಾರು ? ಅವನು ಯಾವ ವಂಶದಲ್ಲಿ ಹುಟ್ಟಿದವನು ? ಆ ವಿಷಯವನ್ನು ನನಗೆ ವಿವರಿಸಿ ಹೇಳಲರ್ಹನಾಗಿರುವಿ.

೩. ಶ್ರೀ ಭಗವಂತನು ಹೇಳಿದನು:–ಹಿಂದೆ ಬ್ರಹ್ಮನ ಮಗನಾದ ಸ್ವಾಯಂಭುವ ಮನು ಎಂಬುವನಿದ್ದನು. ಅವನ ಹೆಂಡತಿಯು ಶತರೂಪೆ ಎಂಬುವಳು. ಅವಳು ಸ್ತ್ರೀಯರಲ್ಲೆಲ್ಲ ಪುಣ್ಯವಂತಳೂ ಗೌರವ ಯೋಗ್ಯಳೂ ಆಗಿದ್ದಳು.

ಪ್ರಿಯವ್ರತೋತ್ತಾನಪಾದೌ ತಯೋಃ ಪುತ್ರೌ ಬಭೂವತುಃ ।
ಉತ್ತಾನಪಾದಪುತ್ರಶ್ಚ ಧ್ರುವ ಏವ ಮಹಾಯಶಾಃ ॥ ೪ ॥

ತತ್ಪುತ್ರೋ ನಂದಸಾವರ್ಣಿಃ ಕೇದಾರಶ್ಚ ತದಾತ್ಮಜಃ ।
ಸಪ್ತದ್ವೀಪಪತಿಃ ಶ್ರೀಮಾನ್ಕೇದಾರೋ ವೈಷ್ಣವಃ ಸ್ವಯಂ ॥ ೫ ॥

ತಸ್ಯ ರಕ್ಷಾನಿಮಿತ್ತೇನ ತತ್ಸಭಾಯಾಂ ಸುದರ್ಶನಂ ।
ಗವಾಂ ಲಕ್ಷಂ ನವಂ ಶುದ್ಧಂ ಸ್ವರ್ಣಶೃಂಗಂ ಚ ಭೂಷಿತಂ ॥ ೬ ॥

ವಹ್ನಿಶುದ್ಧಾನಿ ವಸ್ತ್ರಾಣಿ ದತ್ತಾನಿ ವರುಣೇನ ಚ ।
ಸುವರ್ಣಾನಾಂ ತಥಾ ಲಕ್ಷಂ ಸರ್ವಸಸ್ಯಾ ವಸುಂಧರಾ ॥ ೭ ॥

ಮಣಿರತ್ನಂ ಚ ಮುಕ್ತಾಶ್ಚ ಹೀರಕಂ ಪರಮಂ ತಥಾ ।
ಮಾಣಿಕ್ಯಮಶ್ವರತ್ನಾನಾಂ ಲಕ್ಷಂ ಲಕ್ಷಂ ಚ ಹಸ್ತಿನಾಂ ॥ ೮ ॥

---

೪. ಆ ದಂಪತಿಗಳಲ್ಲಿ ಪ್ರಿಯವ್ರತ, ಉತ್ತಾನಪಾದ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಉತ್ತಾನಪಾದನ ಮಗನೇ ಮಹಾಕೀರ್ತಿವಂತನಾದ ಧ್ರುವನೆಂಬುವನು.

೫. ಧ್ರುವನ ಮಗನು ನಂದಸಾವರ್ಣಿಯೆಂಬುವನು. ಅವನ ಮಗನು ಕೇದಾರನೆಂಬುವನು. ಸಂಪದ್ಯುಕ್ತನಾದ ಕೇದಾರನು ಏಳು ದ್ವೀಪಗಳಿಂದ ಕೂಡಿದ ಭೂಮಿಗೆ ಒಡೆಯನಾಗಿಯೂ ವಿಷ್ಣುಭಕ್ತನಾಗಿಯೂ ಇದ್ದನು.

೬-೭. ಅವನನ್ನು ರಕ್ಷಿಸುವುದಕ್ಕಾಗಿ ವರುಣನು ಅವನ ಸಭೆಯ ಮಧ್ಯದಲ್ಲಿ ಬಂದು, ನೋಡುವುದಕ್ಕೆ ಸುಂದರವಾದ ಚಿನ್ನದ ಕೊಂಬುಗಳಿಂದ ಕೂಡಿದ ಹೊಸದಾದ ಶುಭ್ರವರ್ಣವುಳ್ಳ ಅಲಂಕರಿಸಲ್ಪಟ್ಟ ಒಂದು ಲಕ್ಷ ಗೋವುಗಳನ್ನೂ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನೂ ಕೊಟ್ಟನು. ಮತ್ತು ಒಂದು ಲಕ್ಷ ಸುವರ್ಣ ನಾಣ್ಯಗಳನ್ನೂ ಸಮಸ್ತ ಸಸ್ಯಗಳಿಂದಲೂ ಕೂಡಿದ ಭೂಮಿಯನ್ನೂ ಕೊಟ್ಟನು.

೮. ರಾಜನು ರತ್ನಮಣಿಗಳನ್ನೂ ಮುತ್ತುಗಳನ್ನೂ ಉತ್ತಮವಾದ ಹೀರಕ ರತ್ನವನ್ನೂ ಮಾಣಿಕ್ಯವನ್ನೂ ಶ್ರೇಷ್ಠವಾದ ಕುದುರೆಗಳನ್ನೂ ಆನೆಗಳನ್ನೂ ಲಕ್ಷಗಟ್ಟಲೆಯಾಗಿ ಕೊಡುತ್ತಿದ್ದನು.

ರೌಪ್ಯಂ ಪ್ರವಾಲಂ ಮಿಷ್ಟಾನ್ನಂ ಶತಧಾನ್ಯಾಚಲಂ ವರಂ ।
ನಿತ್ಯಂ ನಿತ್ಯಂ ಬ್ರಾಹ್ಮಣೇಭ್ಯೋ ದದೌ ಚ ರತ್ನಭೂಷಣಂ ॥ ೯ ॥

ಶತಲಕ್ಷಂ ಬ್ರಾಹ್ಮಣಾನಾಂ ಭೋಜಯಾಮಾಸ ನಿತ್ಯಶಃ ।
ಜಲಭೋಜನಪಾತ್ರಾಣಿ ಸುವರ್ಣಾನಾಂ ದದೌ ನೃಪಃ ॥ ೧೦ ॥

ಸುವರ್ಣಾನಾಂ ಯಜ್ಞಸೂತ್ರಮಂಗುಲೀಕಮುತ್ತಮಂ ।
ಆಸನಂ ಸ್ವರ್ಣರತ್ನಾನಾಂ ಬ್ರಾಹ್ಮಣೇಭ್ಯೋ ದದೌ ಮುದಾ ॥ ೧೧ ॥

ಬ್ರಾಹ್ಮಣಾನಾಂ ಚ ಲಕ್ಷಂ ಚ ಸೂಪಕಾರಂ ನೃಪಸ್ಯ ಚ ।
ಬ್ರಾಹ್ಮಣಾನಾಂ ದ್ವಿಲಕ್ಷಂ ಚ ಪರಿವೇಷಣಕಾರಕಂ ॥ ೧೨ ॥

ಘೃತಕುಲ್ಯಾ ಮಧುಕುಲ್ಯಾ ದಧಿಕುಲ್ಯಾ ಮನೋಹರಾಃ ।
ಗುಡಕುಲ್ಯಾ ದುಗ್ಧಕುಲ್ಯಾ ನಿತ್ಯಂ ಪ್ರಾರ್ಥನವಾಪ್ಸಿತಂ ॥ ೧೩ ॥

---

೯. ಮತ್ತು ಬೆಳ್ಳಿಯನ್ನೂ ಹವಳವನ್ನೂ ಮೃಷ್ಟಾನ್ನವನ್ನೂ ನೂರಾರು ಧಾನ್ಯ ರಾಶಿಗಳನ್ನೂ ರತ್ನಾಭರಣಗಳನ್ನೂ ಪ್ರತಿದಿನವೂ ಬ್ರಾಹ್ಮಣರಿಗೆ ದಾನಮಾಡುತ್ತಿದ್ದನು

೧೦. ಪ್ರತಿದಿನವೂ ನೂರು ಲಕ್ಷ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದನು ಅಲ್ಲದೆ ಅವರಿಗೆ ಚಿನ್ನದ ಊಟದಪಾತ್ರೆ ನೀರಿನಪಾತ್ರೆ ಇವುಗಳನ್ನು ದಾನಮಾಡುತ್ತಿದ್ದನು.

೧೧. ಮತ್ತು ಆ ರಾಜನು ಆ ಬ್ರಾಹ್ಮಣರಿಗೆ ಚಿನ್ನದ ಜನಿವಾರವನ್ನೂ, ಉತ್ತಮವಾದ ಉಂಗುರವನ್ನೂ ಸ್ವರ್ಣರತ್ನಗಳಿಂದ ನಿರ್ಮಿತವಾದ ಆಸನವನ್ನೂ ಆನಂದದಿಂದ ದಾನ ಮಾಡುತ್ತಿದ್ದನು.

೧೨. ಆ ರಾಜನ ಮನೆಯಲ್ಲಿ ಅಡಿಗೆ ಮಾಡಲು ಒಂದುಲಕ್ಷಮಂದಿ ಬ್ರಾಹ್ಮಣರೂ, ಬಡಿಸುವುದಕ್ಕಾಗಿ ಎರಡುಲಕ್ಷಮಂದಿ ಬ್ರಾಹ್ಮಣರೂ ಇರುತ್ತಿದ್ದರು.

೧೩. ಮತ್ತು ತುಪ್ಪದ ಕಾಲುವೆ, ಜೇನುತುಪ್ಪದ ಕಾಲುವೆ, ಮೊಸರಿನ ಕಾಲುವೆ, ಮನೋಹರಗಳಾದ ಬೆಲ್ಲದ ಕಾಲುವೆ, ಹಾಲಿನ ಕಾಲುವೆ ಇವುಗಳನ್ನು ಏರ್ಪಡಿಸಿ, ಯಾವಾಗ ಯಾರು ಏನನ್ನಪೇಕ್ಷಿಸಿದರೂ ದೊರೆಯುವಂತೆ ಮಾಡಿದ್ದನು.

ಪ್ರಾತರಾರಭ್ಯ ಸಂಧ್ಯಾಂತಂ ವಿಪ್ರಾಣಾಂ ಭೋಜನಂ ತಥಾ ।
ದುಃಖಿನಾಂ ಭಿಕ್ಷುಕಾಣಾಂ ಚ ಧನದಾನಂ ಯಥೋಚಿತಂ ॥ ೧೪ ॥

ಫಲಮೂಲಾಶನೋ ರಾಜಾ ವೈಷ್ಣವಶ್ಚ ಜಿತೇಂದ್ರಿಯಃ ।
ಸರ್ವಂ ಮದರ್ಪಣಂ ಕೃತ್ವಾ ಜಪನ್ಮಾಂ ಚ ದಿವಾನಿಶಂ ॥ ೧೫ ॥

ಏಕದಾ ಸೂಪಕಾರಶ್ಚ ತಮುವಾಚ ನೃಪೇಶ್ವರಂ ।
ವಿಪ್ರಾಣಾಂ ಭೋಜನಾಯೈವ ದಶಲಕ್ಷಮುಪಸ್ಥಿತಂ ॥ ೧೬ ॥

ಭುಂಜತೇ ಬ್ರಾಹ್ಮಣಾಶ್ಚಾದ್ಯ ರೂಕ್ಷಮನ್ನಂ ವದ ಪ್ರಭೋ ।
ಕುರ್ವಂತು ಭಕ್ಷಣಂ ತೇ ವೈ ವಿಪ್ರಾಃ ಸೂಪಾದಿನಾ ನೃಪ ॥ ೧೭ ॥

ಚತುರ್ಯೋಜನಪರ್ಯಂತಮಧಿಕಾರೋ ನೃಪಸ್ಯ ಚ ।
ಯೋ ರಾಜಾ ತಚ್ಛತಗುಣಃ ಸ ಏವ ಮಂಡಲೇಶ್ವರಃ ॥ ೧೮ ॥

---

೧೪. ಪ್ರಾತಃಕಾಲ ಮೊದಲ್ಗೊಂಡು ಸಾಯಂಕಾಲದವರೆಗೂ ಬ್ರಾಹ್ಮಣ ಭೋಜನವನ್ನು ಮಾಡಿಸುತ್ತಿದ್ದನು. ಮತ್ತು ದುಃಖಿತರಾದ ಭಿಕ್ಷುಕರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಧನವನ್ನೂ ದಾನಮಾಡುತ್ತಿದ್ದನು.

೧೫. ರಾಜನಾದರೋ ಹಣ್ಣುಗಳನ್ನೂ ಗೆಡ್ಡೆಗಳನ್ನೂ ತಿಂದುಕೊಂಡು ವಿಷ್ಣು ಭಕ್ತಿಪರಾಯಣನಾಗಿ, ಇಂದ್ರಿಯಗಳನ್ನು ಜಯಿಸಿದವನಾಗಿ, ಸಕಲವನ್ನೂ ನನಗೆ ಅರ್ಪಣೆ ಮಾಡುತ್ತ, ಹಗಲು ರಾತ್ರಿಗಳಲ್ಲಿಯೂ ನನ್ನನ್ನೇ ಜಪಮಾಡುತ್ತಿದ್ದನು.

೧೬–೧೭. ಒಂದಾನೊಂದುದಿನ ಅಡಿಗೆಯವನು ರಾಜೇಶ್ವರನಾದ ಕೇದಾರ ನಲ್ಲಿಗೆ ಬಂದು ಈ ರೀತಿ ಹೇಳುತ್ತಾನೆ:— "ಇಂದು ಬ್ರಾಹ್ಮಣರು ಭೋಜನಕ್ಕೋ ಸ್ಕರವಾಗಿ ಹತ್ತುಸಾವಿರಮಂದಿ ಬಂದಿರುವರು. ಆ ಬ್ರಾಹ್ಮಣರು ಹೇಗೆತಾನೆ ಕದನ್ನವನ್ನು ತಿಂದಾರು? ಅವರೂ ಕೂಡ ತೊವ್ವೆಯೇ ಮುಂತಾದ ದಿವ ಪದಾರ್ಥಗಳಿಂದ ಊಟವನ್ನು ಮಾಡಲಿ."

೧೮. ನಾಲ್ಕುಯೋಜನಪರ್ಯಂತ ರಾಜನಾದವನ ಅಧಿಕಾರವಿರುತ್ತದೆ. ಅದರ ನೂರರಷ್ಟು ಅಧಿಕಾರವುಳ್ಳ ರಾಜನಾವನೋ ಅವನು ಮಂಡಲೇಶ್ವರನೆನಿಸಿ ಕೊಳ್ಳುವನು.

ತತ್ತ್ರದ್ದಗುಣೋ ರಾಜಾ ರಾಜೇಂದ್ರಃ ಪರಿಕೀರ್ತಿತಃ ।
ರಾಜೇಂದ್ರಾಣಾಂ ಪಂಚಲಕ್ಷಂ ನಿತ್ಯಂ ಕೇದಾರಸಂಸದಿ ॥ ೧೯ ॥

ಅಮೂಲ್ಯರತ್ನಮಾಣಿಕ್ಯಂ ಮುಕ್ತಾಹಾರಂ ಮಣೀಶ್ವರಂ ।
ಗಜರತ್ನಮಶ್ವರತ್ನಂ ಕೇದಾರಾಯ ಕರಂ ದದೌ ॥ ೨೦ ॥

ಕಮಲಾ ಕಲಯಾಜಾತಾ ಯಜ್ಞಕುಂಡಸಮುದ್ಭವಾ ।
ವಹ್ನಿಶುದ್ಧಾಂಶುಕಾಧಾನಾ ರತ್ನಭೂಷಣಭೂಷಿತಾ ॥ ೨೧ ॥

ಕಾಮುಕೇ ಕಾಮಿನೀಶ್ರೇಷ್ಠಾ ಕನ್ಯಾ ಕಮಲಲೋಚನಾ ।
ಕನ್ಯಾಸ್ಮಿ ತೇ ಮಹಾರಾಜೇತ್ಯುವಾಚ ನೃಪತಿಂ ಚ ಸಾ ॥ ೨೨ ॥

ರಾಜಾ ಸಂಪೂಜ್ಯ ತಾಂ ಭಕ್ತ್ಯಾ ತಸ್ಯೈ ಪತ್ನೀಂ ಸಮರ್ಪ್ಯ ಚ ।
ಸಾ ವಿಜ್ಞಾಯ ಪ್ರಸೂಂ ತಾತಂ ಕೃತ್ವಾ ಚ ವಿನಯಂ ಮುದಾ ॥ ೨೩ ॥

---

೧೯–೨೦. ಆ ಮಂಡಲಾಧಿಪತಿಗಿಂತ ಹತ್ತರಷ್ಟು ಅಧಿಕಾರವುಳ್ಳ ರಾಜನು ರಾಜೇಂದ್ರನೆನಿಸಿಕೊಳ್ಳುವನು. ಇಂತಹ ಐದುಲಕ್ಷಮಂದಿ ರಾಜೇಂದ್ರರು ಈ ಕೇದಾರ ಭೂಪತಿಯ ಸನ್ನಿಧಿಯಲ್ಲಿ ಇದ್ದುಕೊಂಡು, ಬೆಲೆ ಬಾಳುವ ರತ್ನಗಳು, ಮಾಣಿಕ್ಯಗಳು, ಮುತ್ತಿನ ಹಾರಗಳು, ಶ್ರೇಷ್ಠವಾದ ಮಣಿಗಳು, ಶ್ರೇಷ್ಠವಾದ ಆನೆಗಳು, ಕುದುರೆಗಳು ಇವುಗಳನ್ನು ಕೇದಾರ ರಾಜನಿಗೆ ಕಾಣಿಕೆಯಾಗಿ ಕೊಡುತ್ತಿದ್ದರು.

೨೧–೨೨. ಲಕ್ಷ್ಮೀದೇವಿಯು ತನ್ನ ಕಲೆಯಿಂದ ಹುಟ್ಟಿ ಯಜ್ಞಕುಂಡದಿಂದ ಮೇಲೆ ಬಂದು ಅಗ್ನಿಯಂತೆ ಪರಿಶುದ್ಧವಾದ ಬಟ್ಟೆಯನ್ನುಟ್ಟು ರತ್ನಾಭರಣಗಳಿಂದ ಅಲಂಕಾರ ಮಾಡಿಕೊಂಡವಳಾಗಿ ಕಮಲದಂತೆ ಕಣ್ಣುಳ್ಳವಳಾಗಿ ಸ್ತ್ರೀಯರಲ್ಲೆಲ್ಲಾ ಶ್ರೇಷ್ಠಳಾಗಿ ಕನ್ಯಾರೂಪವನ್ನು ಹೊಂದಿದವಳಾಗಿ ರಾಜನೆದುರಿಗೆ ಬಂದು ಎಲೈ ರಾಜನೇ ! ನಾನು ನಿನ್ನ ಮಗಳಾಗಿರುವೆನು ಎಂದು ಹೇಳಿದಳು.

೨೩. ರಾಜನೂ ಕೂಡ ಆ ಲಕ್ಷ್ಮಿಯನ್ನು ಭಕ್ತಿಯಿಂದ ಪೂಜಿಸಿ, ಆ ಕುಮಾರಿಯನ್ನು ತನ್ನ ಹೆಂಡತಿಯ ವಶಕ್ಕೆ ಕೊಟ್ಟು ಸುಖವಾಗಿದ್ದನು. ಆ ಕುಮಾರಿಯು ರಾಜನನ್ನು ತಂದೆಯೆಂದೂ, ರಾಣಿಯನ್ನು ತಾಯಿಯೆಂದೂ ತಿಳಿದುಕೊಂಡು ಅವರಲ್ಲಿ ನಮ್ರತೆಯಿಂದಿರುತ್ತಿದ್ದಳು.

ಯಯೌ ಪುಣ್ಯವನಂ ರಮ್ಯಂ ತಪಸೇ ಯಮುನಾಂತಿಕಂ ।
ತತ್ತಪಸ್ಯಾವನಂ ಯಸ್ಮಾತ್ತಸ್ಮಾದ್ವೃಂದಾವನಂ ಸ್ಮೃತಂ || ೨೪ ||

ತಪಸಾ ವರಯಾಮಾಸ ಮಾಂ ವರಂ ಚ ವರಂವರಂ ।
ಬ್ರಹ್ಮಾ ದದೌ ವರಂ ತಸ್ಯೈ ಪಶ್ಚಾತ್ಕೃಷ್ಣಂ ಲಭಿಷ್ಯಸಿ || ೨೫ ||

ಸಾ ಚೈಕದಾ ನದೀತೀರೇ ವಸಂತೇ ಸಸ್ಮಿತಾ ಸತೀ ।
ಶಯಾನಾ ಪುಷ್ಪಶಯ್ಯಾಯಾಂ ರತ್ನಾಭರಣಭೂಷಿತಾ || ೨೬ ||

ಬ್ರಹ್ಮಾ ಪರೀಕ್ಷಿತುಂ ಯಾತಃ ಸಾಧ್ವೀಂ ಚ ಸುಮನೋಹರಾಂ ।
ದದರ್ಶ ಕನ್ಯಾ ರಹಸಿ ಯುವಾನಂ ಪುರುಷಂ ಪರಂ|| || ೨೭ ||

ಚಂದನೋಕ್ಷಿತಸರ್ವಾಂಗಂ ರತ್ನಭೂಷಣಭೂಷಿತಂ ।
ಸಸ್ಮಿತಂ ಕಾಮುಕಂ ರಮ್ಯಂ ರಮಣೀನಾಂ ಚ ವಾಂಛಿತಂ || ೨೮ ||

---

೨೪. ಹೀಗಿರುತ್ತ ಆ ಕನ್ಯೆಯು ಯಮುನಾನದಿಯ ತೀರದಲ್ಲಿರುವ ಮನೋಹರವಾದ, ಪುಣ್ಯಕರವಾದ ವನವನ್ನು ಕುರಿತು ತಪಸ್ಸನ್ನು ಮಾಡಲು ಹೋದಳು. ಅವಳು ತಪಸ್ಸನ್ನು ಆ ವನದಲ್ಲಿ ಮಾಡಿದ ಕಾರಣ ವೃಂದಾವನವೆಂದು ಆ ವನವು ಪ್ರಸಿದ್ಧವಾಯಿತು.

೨೫. ಆ ಕನ್ಯೆಯು ತಪಸ್ಸನ್ನು ಮಾಡಿ ಉತ್ತಮವರನಾದ ನನ್ನನ್ನು ಪತಿಯನ್ನಾಗಿ ಪಡೆಯಬೇಕೆಂಬ ವರವನ್ನಪೇಕ್ಷಿಸಿದಳು. ಬ್ರಹ್ಮನು ಪ್ರತ್ಯಕ್ಷನಾಗಿ ಅವಳಿಗೆ "ನೀನು ಕೊನೆಗೆ ಕೃಷ್ಣನನ್ನು ಹೊಂದುವಿ" ಎಂದು ವರವನ್ನು ಕೊಟ್ಟನು.

೨೬. ಅವಳು ಒಂದುದಿನ ವಸಂತ ಋತುವಿನಲ್ಲಿ ನದೀ ತೀರದಲ್ಲಿ ಮಂದಹಾಸಯುಕ್ತಳಾಗಿ, ರತ್ನಾಭರಣಗಳಿಂದ ಅಲಂಕರಿಸಿಕೊಂಡವಳಾಗಿ ಹೂವಿನ ಹಾಸಿಗೆಯ ಮೇಲೆ ಮಲಗಿಕೊಂಡು ವಿಹರಿಸುತ್ತಿದ್ದಳು.

೨೭. ಧರ್ಮನು ಆ ಸಮಯದಲ್ಲಿ ಸುಂದರಿಯೂ ಪತಿವ್ರತೆಯೂ ಆದ ಆ ಕನ್ಯೆಯನ್ನು ಪರೀಕ್ಷಿಸುವುದಕ್ಕಾಗಿ ಬ್ರಾಹ್ಮಣ ವೇಷದಿಂದ ಅಲ್ಲಿಗೆ ಬಂದನು. ಆಗ ಈ ಕನ್ಯೆಯು ರಹಸ್ಯವಾಗಿ ಯುವಕನೂ ಉತ್ತಮನೂ ಆದ ಆ ಪುರುಷನನ್ನು ನೋಡಿದಳ

೨೮–೩೦. ಸಕಲಾಂಗಗಳಿಗೂ ಗಂಧವನ್ನು ಹಚ್ಚಿಕೊಂಡು, ರತ್ನಾಭರಣಗಳಿಂದಲಂಕಾರ ಮಾಡಿಕೊಂಡು ಮುಗುಳು ನಗೆಯನ್ನು ನಗುತ್ತ ಕಾಮುಕನಾಗಿಯೂ

**ಯಥಾ ಷೋಡಶವರ್ಷೀಯಂ ಕುಮಾರಂ ಕನಕಪ್ರಭಂ ।**
**ಕೋಟಿಕಂದರ್ಪಲೀಲಾಭಂ ಪೀತಾಂಬರಧರಂ ವರಂ ॥ ೨೯ ॥**

**ಶರತ್ಪಾರ್ವಣಚಂದ್ರಾಸ್ಯಂ ಶರತ್ಪದ್ಮಸುಲೋಚನಂ ।**
**ದೃಷ್ಟ್ವಾ ತಂ ಚ ಸಮುತ್ಥಾಯ ವಾಸಯಾಮಾಸ ಸನ್ನಿಧೌ ॥ ೩೦ ॥**

**ಪೂಜಾಂ ಚಕಾರ ಭಕ್ತ್ಯಾ ಚ ಫಲಂ ಮೂಲಂ ದದೌ ಮುದಾ ।**
**ಸುವಾಸಿತಂ ಜಲಂ ದತ್ತ್ವಾ ಪ್ರಣನಾಮ ಮುದಾನ್ವಿತಾ ॥ ೩೧ ॥**

**ಪೂಜಾಂ ಗೃಹೀತ್ವಾ ಮುದಿತಃ ಸಾದರಾಂ ತಾಮುವಾಚ ಹ ।**
**ವಿಪ್ರರೂಪೀ ಚ ಭಗವಾನ್ಪ್ರಜ್ವಲನ್ಬ್ರಹ್ಮತೇಜಸಾ ।**
**ಕಾಮುಕೀನಾಂ ಚ ಕಾಮ್ಯಂ ಚ ಸತೀನಾಂ ದುಷ್ಕರಂ ವ್ರಜ ॥ ೩೨ ॥**

---

ಮನೋಹರನಾಗಿಯೂ, ಇದ್ದು ನೋಡಿದೊಡನೆ ಸ್ತ್ರೀಯರೆಲ್ಲರೂ ಅಪೇಕ್ಷಿಸುವಂತಿರುವ ಹದಿನಾರು ವರುಷದವನಾಗಿ ಚಿನ್ನದಂತೆ ಮೈಬಣ್ಣವುಳ್ಳವನಾಗಿ, ಒಂದು ಕೋಟಿ ಮನ್ಮಥರ ವಿಲಾಸವನ್ನು ಹೊಂದಿ, ಪೀತಾಂಬರವನ್ನುಟ್ಟು, ಶರದೃತುವಿನ ಹುಣ್ಣಿಮೆಯ ಚಂದ್ರನಂತಿರುವ ಮುಖವುಳ್ಳವನಾಗಿ, ಶರದೃತುವಿನಲ್ಲಿ ಅರಳಿದ ಕಮಲದಂತಿರುವ ಕಣ್ಣುಳ್ಳವನಾಗಿರುವ ಆ ಕುಮಾರನನ್ನು ನೋಡಿ ಬೇಗನೆ ಮೇಲೆದ್ದು, ಅವನನ್ನು ಕರೆತಂದು ತನ್ನೆದುರಿನಲ್ಲಿ ಕೂರಿಸಿದಳು.

೩೧. ಮತ್ತು ಭಕ್ತಿಯಿಂದ ಹಣ್ಣುಹಂಪಲುಗಳನ್ನು ಕೊಟ್ಟು ಸಂತೋಷದಿಂದ ಪೂಜಿಸಿದಳು. ಪರಿಮಳದಿಂದ ಕೂಡಿದ ನೀರನ್ನೂ ಕೊಟ್ಟು ಸಂತೋಷಗೊಂಡು ನಮಸ್ಕಾರ ಮಾಡಿದಳು.

೩೨. ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿರುವ ಬ್ರಾಹ್ಮಣ ರೂಪವನ್ನು ಧರಿಸಿದ ಆ ಪೂಜ್ಯನು ಆ ಕನ್ಯೆಯು ಭಕ್ತಿಯಿಂದ ಮಾಡಿದ ಪೂಜೆಯನ್ನು ಸ್ವೀಕರಿಸಿ, ಸಂತೋಷಗೊಂಡು ಆ ಕನ್ಯೆಯನ್ನು ಕುರಿತು ಹೀಗೆಂದನು— ಎಲೈ ಗೋಪನೇ! ಪತಿವ್ರತೆಯರಾದ ಕಾಮಿನಿಯರ ಅಪೇಕ್ಷೆಯೂ ಕೂಡ ಬಹಳ ಕಷ್ಟದಿಂದ ಪಡೆಯಬೇಕಾದುದು.

|| ಧರ್ಮ ಉವಾಚ ||

ಭವತೀ ಕಸ್ಯ ಕನ್ಯಾ ವಾ ಕಿಂ ತೇ ನಾಮ ಮನೋಹರೇ
ಕಿಂ ಕರೋಷಿ ರಹಸ್ಯೇವಂ ತನ್ಮೇ ಕಥಿತುಮರ್ಹಸಿ || ೩೩ ||

ಕಸ್ಯ ಹೇತೋಸ್ತಪಸ್ಯಾ ತೇ ಕಿಂ ವಾ ವಾಂಛಸಿ ಸುಂದರಿ ।
ವರಂ ವೃಣೀಷ್ವ ಭದ್ರಂ ತೇ ಯತ್ತೇ ಮನಸಿ ವಾಂಛಿತಂ || ೩೪ ||

|| ವೃಂದೋವಾಚ ||

ವಿಪ್ರ ಕೇದಾರಕನ್ಯಾಹಂ ವೃಂದಾ ವೃಂದಾವನೇ ಸ್ಥಿತಾ ।
ತಪಃ ಕರೋಮಿ ರಹಸಿ ಚಿಂತಯಾಮಿ ಹರಿಂ ಪತಿಮ್ || ೩೫ ||

ಯದಿ ದಾತುಂ ಸಮರ್ಥೋಽಸಿ ದೇಹಿ ಮೇ ವಾಂಛಿತಂ ವರಮ್ ।
ಅಸಮರ್ಥೋಽಸಿ ಚೇದ್ಗಚ್ಛ ಕಿಂತೇ ಪ್ರಶ್ನೇನ ಬ್ರಾಹ್ಮಣ || ೩೬ ||

---

೩೩. ಧರ್ಮನು ಹೇಳುತ್ತಾನೆ:—ಎಲೈ ಮನೋಹರಳೇ! ನೀನು ಯಾರ ಮಗಳು? ನಿನ್ನ ಹೆಸರೇನು? ನೀನು ಈ ರಹಸ್ಯಸ್ಥಾನದಲ್ಲಿದ್ದುಕೊಂಡು ಏನನ್ನು ಮಾಡುತ್ತಿರುವಿ? ಈ ವಿಷಯಗಳನ್ನು ನನಗೆ ಹೇಳುವವಳಾಗು.

೩೪. ಎಲೈ ಸುಂದರಿಯೇ! ನೀನು ಈ ತಪಸ್ಸನ್ನು ಯಾವ ಕಾರಣದಿಂದ ಮಾಡುತ್ತಿರುವಿ? ನೀನು ಏನನ್ನಪೇಕ್ಷಿಸುತ್ತಿರುವೆ? ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿಗೆ ಇಷ್ಟವಾಗಿರುವ ವರವನ್ನು ಕೇಳುವವಳಾಗು.

೩೫. ವೃಂದೆಯು ಹೇಳುತ್ತಾಳೆ:—ಎಲೈ ಬ್ರಾಹ್ಮಣನೇ! ನಾನು ಕೇದಾರ ರಾಜನ ಮಗಳು. ನನ್ನ ಹೆಸರು ವೃಂದಾ ಎಂಬುದು. ನಾನು ವೃಂದಾವನದಲ್ಲಿದ್ದು ಕೊಂಡು ರಹಸ್ಯವಾಗಿ ತಪಸ್ಸನ್ನು ಮಾಡುತ್ತಾ ಆ ಹರಿಯನ್ನು ಪತಿಯನ್ನಾಗಿ ಪಡೆಯಲು ಧ್ಯಾನಮಾಡುತ್ತಿರುವೆನು.

೩೬. ಎಲೈ ಬ್ರಾಹ್ಮಣನೇ! ನನ್ನ ಮನಸ್ಸಿನಲ್ಲಿರುವ ವರವನ್ನು ಕೊಡುವ ಸಾಮರ್ಥ್ಯವು ನಿನಗಿದ್ದರೆ ಅದನ್ನು ಕೊಡು. ಹಾಗೆ ಕೊಡುವ ಸಾಮರ್ಥ್ಯವಿಲ್ಲದಿದ್ದರೆ ಹೊರಟುಹೋಗು. ನೀನು ಕೇಳಿದ ಪ್ರಶ್ನೆಯಿಂದ ನಿನಗಾಗಬೇಕಾದುದೇನಿದೆ?

|| ಧರ್ಮ ಉವಾಚ ||

ನಿರೀಹಮವಿತರ್ಕ್ಯಂ ಚ ಪರಮಾತ್ಮಾನಮೀಶ್ವರಮ್ ।
ನಿರ್ಗುಣಂ ಚ ನಿರಾಕಾರಂ ಭಕ್ತಾನುಗ್ರಹವಿಗ್ರಹಮ್ || ೩೭ ||

ಕಾ ಕ್ಷಮಾ ತಂ ಪತಿಂ ಕರ್ತುಂ ವಿನಾ ಲಕ್ಷ್ಮೀಂ ಸರಸ್ವತೀಮ್ ।
ಚತುರ್ಭುಜಸ್ಯ ದ್ವೇ ಭಾರ್ಯೇ ಹರೇರ್ವೈಕುಂಠಶಾಯಿನಃ || ೩೮ ||

ಗೋಲೋಕೇ ದ್ವಿಭುಜಸ್ಯಾಪಿ ಶ್ರೀವಂಶೀವದನಸ್ಯ ಚ ।
ಕಿಶೋರಗೋಪವೇಶಸ್ಯ ಪರಿಪೂರ್ಣತಮಸ್ಯ ಚ || ೩೯ ||

ತಸ್ಯ ಭಾರ್ಯಾ ಸ್ವಯಂ ರಾಧಾ ಮಹಾಲಕ್ಷ್ಮೀಃ ಪರಾತ್ಪರಾ ।
ಬ್ರಹ್ಮಸ್ವರೂಪಾ ಪರಮಾ ಪರಮಾತ್ಮಾನಮೀಶ್ವರಮ್ || ೪೦ ||

ಭಜತೇ ಸತತಂ ಶಾಂತಂ ಸುರಮ್ಯಂ ಶ್ಯಾಮಸುಂದರಂ ।
ಕೋಟಿಕಂದರ್ಪಸೌಂದರ್ಯನಿಂದಿತಂ ಸುಕಲೇವರಮ್ || ೪೧ ||

---

೩೭–೩೮. ಧರ್ಮನು ಹೇಳುತ್ತಾನೆ:— ಯಾವ ಇಚ್ಛೆಯೂ ಇಲ್ಲದವನಾದ, ಊಹೆಗೂ ಸಿಲುಕದವನಾದ, ಪರಮಾತ್ಮನೂ ಈಶ್ವರನೂ ನಿರ್ಗುಣನೂ ಆಕಾರವಿಲ್ಲದವನೂ ಆದ, ಭಕ್ತರನ್ನು ಸಲಹಲೋಸ್ಕರ ದೇಹಧಾರಿಯಾದ ಆ ಹರಿಯನ್ನು ಪತಿಯನ್ನಾಗಿ ಪಡೆಯಲು ಲಕ್ಷ್ಮಿಯನ್ನೂ ಸರಸ್ವತಿಯನ್ನೂ ಬಿಟ್ಟು ಯಾವಳು ಸಮರ್ಥಳಾಗುತ್ತಾಳೆ? (ಯಾರೂ ಸಮರ್ಥರಲ್ಲವೆಂದು ತಾತ್ಪರ್ಯವು.) ಆ ವೈಕುಂಠದಲ್ಲಿ ವಾಸಮಾಡುವ ನಾಲ್ಕು ತೋಳುಗಳುಳ್ಳ ಶ್ರೀ ಹರಿಗೆ ಲಕ್ಷ್ಮಿ ಮತ್ತು ಸರಸ್ವತಿ ಇವರಿಬ್ಬರು ಹೆಂಡತಿಯರಾಗಿರುತ್ತಾರೆ.

೩೯–೪೧. ಗೋಲೋಕದಲ್ಲಿ ಎರಡು ತೋಳುಳ್ಳವನಾಗಿ ಕೊಳಲನ್ನೂ ಮತ್ತ ಗೋಪಬಾಲಕವೇಷದಿಂದಿರುವ ಸಕಲಗುಣ ಪರಿಪೂರ್ಣನಾದ ಆ ಹರಿಯ ಹೆಂಡತಿಯು ರಾಧೆಯು. ಅವಳು ಸಾಕ್ಷಾಲ್ಲಕ್ಷ್ಮೀಸ್ವರೂಪಳೂ ಪರಾತ್ಪರಳೂ ಬ್ರಹ್ಮಸ್ವರೂಪಳೂ ಉತ್ತಮಳೂ ಆಗಿರುವಳು. ಮತ್ತು ಅವಳು ಯಾವಾಗಲೂ ಪರಮಾತ್ಮನೂ, ಪ್ರಪಂಚಕ್ಕೆ ಒಡೆಯನೂ, ಶಾಂತನೂ, ಮನೋಹರನೂ, ಒಂದುಕೋಟಿ ಮನ್ಮಥರ ಸೌಂದರ್ಯದಿಂದ ಪ್ರಕಾಶಿಸುವವನೂ, ಶ್ಯಾಮಲವರ್ಣದಿಂದ ಸುಂದರನೂ, ಉತ್ತಮ ದೇಹವನ್ನು ಧರಿಸಿರುವವನೂ, ಬೆಲೆ ಬಾಳುವ ರತ್ನಾಭರಣಗಳನ್ನು ಧರಿಸಿರುವವನೂ.

ಅಮೂಲ್ಯರತ್ನಾಭರಣಂ ಸತ್ಯಂ ಚ ನಿತ್ಯವಿಗ್ರಹಮ್ ।
ಪೀತಾಂಬರಧರಂ ರಮ್ಯಂ ದಾತಾರಂ ಸರ್ವಸಂಪದಾಂ ॥ ೪೨ ॥

ಶ್ರೀಕೃಷ್ಣಶ್ಚ ದ್ವಿಧಾರೂಪೋ ದ್ವಿಭುಜಶ್ಚ ಚತುರ್ಭುಜಃ ।
ಚತುರ್ಭುಜಶ್ಚ ವೈಕುಂಠೇ ಗೋಲೋಕೇ ದ್ವಿಭುಜಃ ಸ್ವಯಂ ॥ ೪೩ ॥

ಯನ್ನಿಮೇಷೋ ಭವೇದ್ವೃಂದೇ ಬ್ರಹ್ಮಣಃ ಪತನೇನ ಚ ।
ಪಂಚವಿಂಶತ್ಸಹಸ್ರೇಣ ಯುಗೇನೇಂದ್ರಸ್ಯಪಾತನಂ ॥ ೪೪ ॥

ಚತುರ್ದಶೇಂದ್ರಾವಚ್ಛಿನ್ನಕಾಲೇನ ಬ್ರಹ್ಮಣೋ ದಿನಂ ।
ತಾವತೀತಿ ನಿಶಾ ತಸ್ಯ ವಿಧಾತುರ್ಜಗತಾಮಪಿ ॥ ೪೫ ॥

ಏವಂ ತ್ರಿಂಶದ್ದಿನೈರ್ಮಾಸಂ ದ್ವಿಷಟ್ಕೇಮಾಸಿ ವರ್ಷಕಂ ।
ಏವಂ ಶತಾಯುಸ್ತಸ್ಯೈವ ನಿಬೋಧ ಬೋಧತತ್ಪರಂ ॥ ೪೬ ॥

---

ಸತ್ಯಸ್ವರೂಪನೂ, ನಾಶರಹಿತವಾದ ಶರೀರವುಳ್ಳವನೂ, ಪೀತಾಂಬರವನ್ನು ಧರಿಸಿರುವವನೂ, ಸಕಲ ಸಂಪತ್ತುಗಳನ್ನೂ ಕೊಡುವವನೂ ಆದ ಆ ಹರಿಯನ್ನು ಸೇವಿಸುತ್ತಿರುವಳು.

೪೩. ಶ್ರೀ ಕೃಷ್ಣನೂ ಕೂಡ ನಾಲ್ಕು ತೋಳುಳ್ಳ ಮತ್ತು ಎರಡು ತೋಳುಳ್ಳ ಶರೀರಧಾರಣೆಮಾಡಿ ಎರಡುವಿಧವಾದ ರೂಪವುಳ್ಳವನಾಗಿರುತ್ತಾನೆ. ಅವನು ನಾಲ್ಕು ತೋಳುಗಳಿಂದ ಕೂಡಿ ವೈಕುಂಠದಲ್ಲಿರುತ್ತಾನೆ. ಮತ್ತು ಎರಡು ತೋಳುಗಳಿಂದ ಕೂಡಿ ಗೋಲೋಕದಲ್ಲಿರುತ್ತಾನೆ.

೪೪. ಎಲೈ ವೃಂದೆಯೇ! ಬ್ರಹ್ಮನ ಆಯುಸ್ಸು (ಬ್ರಹ್ಮಕಲ್ಪ) ಮುಗಿದರೆ ಪರಮಾತ್ಮನಿಗೆ ಒಂದು ನಿಮಿಷವಾಗುವುದು. ಇಪ್ಪತ್ತೈದುಸಾವಿರ ಯುಗಗಳು ಕಳೆದರೆ ಇಂದ್ರನ ಆಯುಸ್ಸು ಮುಗಿಯುವುದು.

೪೫. ಹದಿನಾಲ್ಕುಮಂದಿ ಇಂದ್ರರ ಆಯುಸ್ಸಿನಷ್ಟು ಕಾಲವಾದರೆ ಸಕಲ ಜಗತ್ತನ್ನು ಸೃಷ್ಟಿಸುವ ಬ್ರಹ್ಮನಿಗೆ ಒಂದು ಹಗಲಾಗುತ್ತದೆ. ಮತ್ತು ಅಷ್ಟೇ ಕಾಲವಾದರೆ ಒಂದು ರಾತ್ರಿಯಾಗುತ್ತದೆ.

೪೬. ಈ ರೀತಿಯಾದ ಮೂವತ್ತು ದಿನಗಳಿಂದ ಒಂದು ಮಾಸವೂ, ಇಂಥಾ ಹನ್ನೆರಡು ಮಾಸಗಳಿಂದ ಒಂದು ವರುಷವೂ ಆಗುತ್ತದೆ. ಹೀಗೆ ಬ್ರಹ್ಮನಿಗೆ ಒಂದು ನೂರು ವರುಷಗಳ ಆಯುಃಪರಿಮಿತಿಯೆಂಬುದನ್ನು ತಿಳಿದುಕೊಳ್ಳುವವಳಾಗು.

ಯಾವಜ್ಜೀವನಪರ್ಯಂತಂ ಸೇವಂತೇ ಸನಕಾದಯಃ ।
ಕಲ್ಪಾನಾಂ ಕೋಟಿಕೋಟಿಂ ಚ ತನ್ನಸಾಧ್ಯಶ್ಚ ಯೋ ವಿಭುಃ ॥ ೪೭ ॥

ಸಹಸ್ರವಕ್ತ್ರಃ ಶೇಷಶ್ಚ ಸೇವತೇ ಚ ಜಪೇತ್ಸದಾ ।
ದಿವಾನಿಶಂ ಚ ಯಂ ಭಕ್ತ್ಯಾ ಕಲ್ಪಕೋಟಿಶತಂ ಶತಂ ॥ ೪೮ ॥

ತನ್ನಸಾಧ್ಯೋ ಹಿತಕರೋ ದುರಾರಾಧ್ಯಃ ಪರಾತ್ಪರಃ ।
ಬ್ರಹ್ಮಾ ಬ್ರಹ್ಮಸ್ವರೂಪಂ ತಂ ಭಜೇಜ್ಜನ್ಮನಿಜನ್ಮನಿ ॥ ೪೯ ॥

ವಕ್ತ್ರೈಶ್ಚತುರ್ಭಿಃ ಸತತಂ ಸ್ತೌತಿ ನಿತ್ಯಂ ಸನಾತನಂ ।
ವೇದೇ ನಿರ್ವಚನೀಯಶ್ಚ ವೇದಾನಾಂ ಜನಕೋ ವಿಧಿಃ ॥ ೫೦ ॥

ವಿಧಾತಾ ಫಲದಾತಾ ಚ ದಾತಾ ಚ ಸರ್ವಸಂಪದಾಂ ।
ತನ್ನಸಾಧ್ಯೋ ಹಿ ಭಗವಾನ್ ಕಾಲಕಾಲಾಂತಕಾಂತಕಃ ॥ ೫೧ ॥

---

೪೭. ಸನಕನೇ ಮೊದಲಾದ ಮುನಿಗಳು ಅನೇಕ ಕೋಟಿ ಕಲ್ಪಗಳಲ್ಲಿ ತಮ್ಮ ಜೀವಮಾನಕಾಲದಲ್ಲೆಲ್ಲಾ ವ್ಯಾಪಕನಾದ ಆ ಪರಮಾತ್ಮನನ್ನು ಸೇವಿಸುತ್ತಾರೆ. ಆದರೂ ಅವನು ಹೊಂದಲಸಾಧ್ಯನಾಗಿರುವನು.

೪೮. ಸಾವಿರ ಮುಖಗಳುಳ್ಳ ಆದಿಶೇಷನೂ ಕೂಡ ಒಂದುನೂರುಕೋಟಿ ಕಲ್ಪಗಳಲ್ಲಿ ಹಗಲುರಾತ್ರಿಗಳಲ್ಲಿ ಭಕ್ತಿಯಿಂದ ಜಪಮಾಡುತ್ತ ಆ ಪರಮಾತ್ಮನನ್ನು ಸೇವಿಸುತ್ತಿರುವನು.

೪೯–೫೧. ಆದುದರಿಂದ ಲೋಕಗಳಿಗೆ ಹಿತವನ್ನು ಮಾಡುವವನೂ ಕಷ್ಟಪಟ್ಟು ಪೂಜಿಸಲು ಯೋಗ್ಯನೂ, ಉತ್ತಮೋತ್ತಮನೂ ಆದ ಆ ಪರಮಾತ್ಮನನ್ನು ಪಡೆಯುವುದು ಅಸಾಧ್ಯವು. ವೇದಗಳಲ್ಲಿ ಹೊಗಳಲ್ಪಟ್ಟವನೂ, ವೇದ ಕರ್ತೃವೂ, ಸಕಲ ಜಗತ್ತನ್ನು ನಿರ್ಮಿಸುವವನೂ, ಎಲ್ಲ ಫಲಗಳನ್ನೂ ಕೊಡುವವನೂ, ಸಕಲ ಸಂಪತ್ತುಗಳನ್ನುಂಟು ಮಾಡುವವನೂ, ಮೃತ್ಯುವಿಗೆ ಮೃತ್ಯುವೂ, ಯಮನಿಗೆ ಯಮನೂ ಆದ ಆ ಪರಮಾತ್ಮನನ್ನು ಬ್ರಹ್ಮನು ತನ್ನ ನಾಲ್ಕು ಮುಖಗಳಿಂದಲೂ ಯಾವಾಗಲೂ ಸ್ತೋತ್ರಮಾಡುತ್ತಿರುವನು. ಆದುದರಿಂದ, ಪರಮಾತ್ಮನನ್ನು ಒಲಿಸಿಕೊಳ್ಳುವುದು ಸಾಧ್ಯವಲ್ಲ.

ಸಂಹಾರಕರ್ತಾ ಜಗತಾಂ ಕಲಯಾ ರುದ್ರರೂಪತಃ ।
ಸ ಸ್ತೌತಿ ಪಂಚವಕ್ತ್ರೈಸ್ತು ಕೋಽನ್ಯೋಽನ್ಯಸ್ಯಾಪಿ ಕಾ ಕಥಾ । ॥ ೫೨ ॥

ತತ್ಪರಶ್ಚ ಪ್ರಿಯೋ ನಾಸ್ತಿ ವೃಂದೇ ಭಗವತಃ ಶೃಣು।
ಸರ್ವಶಕ್ತಿಸ್ವರೂಪಾ ಸಾ ದುರ್ಗಾ ದುರ್ಗತಿನಾಶಿನೀ ॥ ೫೩ ॥

ಬ್ರಹ್ಮಸ್ವರೂಪಾ ಪರಮಾ ಮೂಲಪ್ರಕೃತಿರೀಶ್ವರೀ ।
ನಾರಾಯಣೀ ವಿಷ್ಣುಮಾಯಾ ವೈಷ್ಣವೀ ಸಾ ಸನಾತನೀ ॥ ೫೪ ॥

ಯಸ್ಮಾಯಯಾ ಜಗದ್ಭ್ರಾಂತಮನಿತ್ಯೇ ಭ್ರಮತೇ ಸದಾ ।
ಸಾ ಸ್ತೌತಿ ಭಕ್ತ್ಯಾ ಯಂ ದೇವಂ ವೃಂದೇಪ್ಯಂಗೇ ದಿವಾನಿಶಂ ॥ ೫೫ ॥

ಸ್ತೌತಿ ಭಕ್ತ್ಯಾ ಸ್ವಶಕ್ತ್ಯಾ ಚ ಗಜವಕ್ತ್ರಃ ಷಡಾನನಃ ।
ಧ್ಯಾಯತೇ ಯಂ ಗಣೇಶಶ್ಚ ಸರ್ವಾದೌ ಯಸ್ಯ ಪೂಜನಂ ॥ ೫೬ ॥

---

೫೨. ಯಾವನು ರುದ್ರಾಂಶದ ಕಲಾಮಾತ್ರದಿಂದ ಜಗತ್ತೆಲ್ಲವನ್ನೂ ಸಂಹಾರ ಮಾಡುತ್ತಾನೆಯೋ ಆ ಈಶ್ವರನೂ ಕೂಡ ತನ್ನ ಐದು ಮುಖಗಳಿಂದಲೂ ಆ ಪರಮಾತ್ಮನನ್ನು ಸ್ತೋತ್ರ ಮಾಡುತ್ತಾನೆ. ಇತರರ ಮಾತೇನು ?

೫೩–೫೫. ಎಲೈ ವೃಂದೆಯೇ! ಕೇಳು, ಪರಮಪುರುಷನಾದ ಭಗವಂತನಿಗೆ ಶಿವನಿಗಿಂತ ಪ್ರಿಯನಾದವನು ಇಲ್ಲ. ಸರ್ವರ ಶಕ್ತಿಸ್ವರೂಪಳೂ, ಭಕ್ತರ ಕಷ್ಟಗಳನ್ನು ಪರಿಹರಿಸುವವಳೂ, ಬ್ರಹ್ಮಸ್ವರೂಪಳೂ, ಉತ್ತಮಳೂ, ಮೂಲಪ್ರಕೃತಿಯೂ, ಒಡೆಯಳೂ, ನಾರಾಯಣಶಕ್ತಿರೂಪಳೂ, ವಿಷ್ಣು ಮಾಯೆಯೂ, ವಿಷ್ಣುಶಕ್ತಿಯೂ ಆದ ಮತ್ತು ಯಾವಳ ಮಾಯೆಯಿಂದ ಭ್ರಾಂತಿಗೊಂಡು ಈ ಜಗತ್ತು ಅನಿತ್ಯ ವಸ್ತುವಿನಲ್ಲಿ ಮೋಹಗೊಳ್ಳುತ್ತಿರುವುದೋ ಅಂಥಾ ದುರ್ಗಾದೇವಿಯು ಹಗಲು ರಾತ್ರಿಗಳಲ್ಲಿಯೂ ಭಕ್ತಿಯಿಂದ ಆ ದೇವನನ್ನು ಸ್ತೋತ್ರಮಾಡುತ್ತಿರುತ್ತಾಳೆ.

೫೬. ಆ ಪರಮಾತ್ಮನನ್ನು ಷಣ್ಮುಖನೂ ಕೂಡ ತನ್ನ ಶಕ್ತಿಸಹಿತನಾಗಿ ಭಕ್ತಿಯಿಂದ ಸ್ತೋತ್ರಮಾಡುತ್ತಾನೆ. ಯಾವನು ಸಕಲ ಕಾರ್ಯಗಳ ಆರಂಭದಲ್ಲಿ ಆದಿಪೂಜೆಯನ್ನು ಹೊಂದುವನೋ ಮತ್ತು ಯಾವನು ಆನೆಯ ಮುಖವುಳ್ಳವನಾಗಿರುವನೋ ಆ ಗಣೇಶನೂ ಕೂಡ ಭಕ್ತಿಯಿಂದ ಸ್ತೋತ್ರಮಾಡುತ್ತಾನೆ.

ಮಾಂ ಭಜಸ್ವ ಮಹಾಭಾಗೇ ನೃಪಾಣಾಮೀಶ್ವರಂ ಪತಿಂ ।
ಬಲವಂತಂ ಚ ದೇವೇಭ್ಯೋ ದೈತ್ಯೇಭ್ಯಶ್ಚ ವರಾನನೇ ॥ ೬೭ ॥

ಸುಖಾನಿ ಯಾನಿ ಕಲ್ಯಾಣಿ ತ್ರಿಷು ಲೋಕೇಷು ಸಂತಿ ವೈ ।
ಭುಂಕ್ಷ್ವ ತಾನ್ಯೇವ ಸರ್ವಾಣಿ ಮತ್ಪ್ರಸಾದಾನ್ನ ಸಂಶಯಃ ॥ ೬೮ ॥

ಸಪ್ತಸಾಗರಪಾರೇ ಚ ಕಾಂಚನೀ ರುಚಿರಾ ವರೇ ।
ದೇವಾನಾಂ ಕ್ರೀಡನಾರ್ಥಾಯ ವಿಧಾತ್ರಾ ನಿರ್ಮಿತಾ ಪುರೀ ॥ ೬೯ ॥

ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ।
ಮಹೇಂದ್ರಸ್ಯ ಪ್ರಿಯವನಂ ಪುಷ್ಪೋದ್ಯಾನಸಮನ್ವಿತಂ ॥ ೭೦ ॥

ಗಚ್ಛ ಸ್ವರ್ಣಮಯೀಂ ಲಂಕಾಂ ನಾನಾರತ್ನವಿಭೂಷಿತಾಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೭೧ ॥

---

೬೭. ಎಲೈ ಮಹಾತ್ಮಳೇ! ಸುಂದರವಾದ ಮುಖವುಳ್ಳವಳೇ! ರಾಜರಿಗೂ ಒಡೆಯನಾದ ದೇವತೆಗಳಿಗಿಂತಲೂ ರಾಕ್ಷಸರಿಗಿಂತಲೂ ಹೆಚ್ಚು ಬಲಶಾಲಿಯಾದ ನನ್ನನ್ನು ನಿನ್ನ ಗಂಡನನ್ನಾಗಿ ಮಾಡಿಕೊಳ್ಳುವವಳಾಗು.

೬೮. ಎಲೈ ಮಂಗಳರೂಪಳೇ! ನನ್ನ ಅನುಗ್ರಹದಿಂದ ಮೂರುಲೋಕಗಳಲ್ಲಿ ಉತ್ತಮ ಸುಖಗಳು ಯಾವುವು ಎಲ್ಲಿ ಇರುತ್ತವೆಯೋ ಅವೆಲ್ಲವನ್ನೂ ನೀನು ಅನುಭವಿಸುವವಳಾಗು.

೬೯. ಎಲೈ ಉತ್ತಮಳೇ! ಏಳು ಸಮುದ್ರಗಳ ಆಚೆಗೆ ದೇವತೆಗಳ ಕ್ರೀಡೆಗೋಸ್ಕರವಾಗಿ ಬ್ರಹ್ಮನಿಂದ ನಿರ್ಮಿಸಲ್ಪಟ್ಟಿರುವ ಮನೋಹರವಾದ ಚಿನ್ನದ ಪಟ್ಟಣವೊಂದಿರುವುದು.

೭೦. ನಾನಾ ವಿಧವಾದ ಹೂವಿನ ತೋಟಗಳಿಂದ ಕೂಡಿದ ಮಹೇಂದ್ರನ ಪ್ರೀತಿಪಾತ್ರವಾದ ತೋಟವಿರುವುದು. ಎಲೈ ರಮಣಿಯೆ! ನಿನಗೆ ಮಂಗಳವಾಗಲಿ. ಅಲ್ಲಿಗೆ ಹೋಗಿ ನನ್ನೊಡನೆ ಕ್ರೀಡಿಸುವವಳಾಗು.

೭೧. ಎಲೈ ರಮಣಿಯೇ! ಚಿನ್ನದಿಂದ ಮಾಡಲ್ಪಟ್ಟು ನಾನಾ ರತ್ನಗಳಿಂದ ಅಲಂಕರಿಸಲ್ಪಟ್ಟುದಾಗಿರುವ ಲಂಕಾಪಟ್ಟಣಕ್ಕೆ ಹೋಗುವವಳಾಗು. ಅಲ್ಲಿಯೂ ನನ್ನೊಡನೆ ವಿಹರಿಸುವವಳಾಗು.

ನಿಸ್ಪಂದಕಂ ಸುವಸನಂ ನಂಪಕಂ ಪುಷ್ಪಭದ್ರಕಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೭೨ ॥

ಸುಮೇರುಗಹ್ವರಂ ವಾಪಿ ಕ್ಷೀರೋದಂ ವಾ ಮನೋಹರಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೭೩ ॥

ಸತ್ಯಲೋಕಂ ಬ್ರಹ್ಮಲೋಕಂ ರಮ್ಯಂ ಸದ್ಮ ರಹಃಸ್ಥಲಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೭೪ ॥

ಮಲಯಂ ನಿಲಯಂ ರಮ್ಯಂ ಮಹೇಂದ್ರಸಾರನಿರ್ಮಿತಂ ।
ಸುಗಂಧಿಯುಕ್ತಂ ಸತತಂ ಶುದ್ಧಂ ಚಂದನವಾಯುನಾ ॥ ೭೫ ॥

ಮಾಲತೀ ಯೂಥಿಕಾ ರಮ್ಯಾ ಕೇತಕೀ ಮಾಧವೀ ತಥಾ
ಚಾರುಚಂಪಕಪುಷ್ಪಾಣಾಂ ಗಂಧೇನ ಸುಮನೋಹರಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ । ॥ ೭೬ ॥

---

೭೨. ದಿವ್ಯವಾದ ವಸ್ತ್ರಗಳನ್ನು ಹಾರಿಸುವಂಥಾ ನಂದಕ ಪುಷ್ಪಭದ್ರಕವೆಂಬ ವಿಹಾರ ಪ್ರದೇಶಗಳಿರುವುವು. ಎಲೈ ರಮಣಿಯೇ! ಅಲ್ಲಿಯೂ ಹೋಗಿ ನನ್ನೊಡನೆ ವಿಹರಿಸುವವಳಾಗು. ನಿನಗೆ ಶುಭವಾಗಲಿ.

೭೩. ಎಲೈ ರಮಣಿಯೇ! ಸುಮೇರುಪರ್ವತದ ಗುಹೆಯಲ್ಲಾಗಲೀ ಮನೋಹರ ವಾದ ಹಾಲಿನ ಸಮುದ್ರದಲ್ಲಾಗಲೀ ಹೋಗಿ ನನ್ನೊಡನೆ ವಿಹರಿಸುವವಳಾಗು. ನಿನಗೆ ಶುಭವಾಗಲಿ.

೭೪. ಸತ್ಯಲೋಕವೆಂಬ ಬ್ರಹ್ಮಲೋಕದಲ್ಲಿಯೂ ಮನೋಹರವಾದ ಮನೆ ಗಳಲ್ಲಿಯೂ ಇನ್ನೂ ರಹಸ್ಯವಾದ ಸ್ಥಳಗಳಲ್ಲಿಯೂ ಹೋಗಿ ನನ್ನೊಡನೆ ವಿಹರಿಸು ವವಳಾಗು. ಎಲೈ ರಮಣಿಯೆ! ನಿನಗೆ ಮಂಗಳವಾಗಲಿ.

೭೫–೭೬. ನಾಶರಹಿತವಾಗಿಯೂ ರಮಣೀಯವಾಗಿಯೂ ಮಹೇಂದ್ರ ಪರ್ವತದ ಸಾರವಾದ ಪದಾರ್ಥಗಳಿಂದ ಮಾಡಲ್ಪಟ್ಟುದಾಗಿಯೂ ಗಂಧದ ಮರದ ಗಾಳಿಯಿಂದ ಯಾವಾಗಲೂ ಸುವಾಸನೆಯಿಂದ ಕೂಡಿದುದಾಗಿಯೂ ಮಾಲತೀ, ಯೂಥಿಕಾ, ಮನೋಹರವಾದ ಕೇದಿಗೆ, ಮಲ್ಲಿಗೆ ಮತ್ತು ಸಂಪಿಗೆ ಈ ಹೂಗಳ ಸುಗಂಧದಿಂದ ಮನೋಹರವಾದ ಮಲಯ ಪರ್ವತಕ್ಕೆ ಹೋಗಿ ನನ್ನೊಡನೆ ಅಲ್ಲಿ ವಿಹರಿಸುವವಳಾಗು. ಎಲೈ ರಮಣಿಯೆ! ನಿನಗೆ ಮಂಗಳವಾಗಲಿ.

ಪಿಕಾನಾಂ ಭ್ರಮರಾಣಾಂ ಚ ಮಧುರಧ್ವನಿ ಸಂಯುತಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೭೭ ॥

ಇಂದ್ರಸ್ಯ ವರುಣಸ್ಯೈವ ವಾಯೋರಪಿ ಯಮಸ್ಯ ಚ ।
ಧನೇಶ್ವರಸ್ಯ ವಹ್ನೇಶ್ಚ ಧರ್ಮಸ್ಯ ಶಶಿನಸ್ತಥಾ ॥ ೭೮ ॥

ಸುರಮ್ಯಂ ಲೋಕಮೇತೇಷಾಂ ಮಧ್ಯೇ ದೇವಿ ಯಥೇಚ್ಛಸಿ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೭೯ ॥

ರತ್ನದ್ವೀಪಂ ಮಣಿದ್ವೀಪಂ ರಮ್ಯಂ ಚಂದ್ರಸರೋವರಂ ।
ತತ್ರೈವ ಗಚ್ಛ ಭದ್ರಂ ತೇ ರಮ ರಾಮೇ ಮಯಾ ಸಹ ॥ ೮೦ ॥

ಇತ್ಯೇವಮುಕ್ತ್ವಾ ಸಂಭೋಕ್ತುಂ ಗಚ್ಛಂತಂ ತಂ ಛಲೇನ ಚ ।
ನ ವಾಸ್ತವಪರೀಕ್ಷಾರ್ಥಂ ಸತೀತ್ವಂ ಬೋಧಿತುಂ ವ್ರಜ ॥ ೮೧ ॥

---

೭೭. ಕೋಗಿಲೆಗಳು ದುಂಬಿಗಳು ಇವುಗಳ ಮಂಜುಳವಾದ ಧ್ವನಿಗಳಿಂದ ಕೂಡಿರುವ ಪ್ರದೇಶವಾವುದಿರುವುದೋ ಅಲ್ಲಿಗೆ ಹೋಗಿ ನನ್ನೊಡನೆ ವಿಹರಿಸುವವಳಾಗು. ಎಲೈ ರಮಣಿಯೇ! ನಿನಗೆ ಮಂಗಳವಾಗಲಿ.

೭೮–೭೯. ಇಂದ್ರ, ವರುಣ, ವಾಯು, ಯಮ, ಕುಬೇರ, ಅಗ್ನಿ, ಧರ್ಮ ಮತ್ತು ಚಂದ್ರ ಇವರುಗಳ ಲೋಕಗಳು ಅತ್ಯಂತ ರಮಣೀಯವಾದುವುಗಳು. ಎಲೈ ದೇವಿಯೇ! ಈ ಲೋಕಗಳ ಮಧ್ಯದಲ್ಲಿ ನಿನ್ನ ಇಷ್ಟಬಂದಂತೆ ಹೋಗಿ ನನ್ನೊಡನೆ ವಿಹರಿಸುವವಳಾಗು. ಎಲೈ ರಮಣಿಯೇ ನಿಗೆ ಮಂಗಳವಾಗಲಿ.

೮೦. ಮನೋಹರವಾದ ರತ್ನದ್ವೀಪವನ್ನಾಗಲೀ ಮಣಿದ್ವೀಪವನ್ನಾಗಲೀ ಚಂದ್ರಸರೋವರವನ್ನಾಗಲೀ ಸೇರಿ ನನ್ನೊಡನೆ ಅಲ್ಲಿಯೇ ವಿಹರಿಸುವವಳಾಗು. ಎಲೈ ರಮಣಿಯೇ! ನಿನಗೆ ಮಂಗಳವುಂಟಾಗಲಿ.

೮೧–೮೨. ಎಲೈ ನಂದನೇ ಈ ರೀತಿಯಾಗಿ ಹೇಳಿ ಮನಃಪೂರ್ವಕವಲ್ಲದೆ ಅವಳ ಪಾತಿವ್ರತ್ಯವನ್ನು ಪರೀಕ್ಷೆ ಮಾಡಿ ತಿಳಿದುಕೊಳ್ಳುವ ಅಭಿಪ್ರಾಯದಿಂದ ಅವಳನ್ನು ಉಪಭೋಗಿಸಲು ಹಟದಿಂದ ಬರುತ್ತಿರುವ ಆ ಬ್ರಾಹ್ಮಣನನ್ನು ಕುರಿತು ಕೋಪದಿಂದ ಕೆಂಪಾದ ಮುಖ ಬಾಯಿ ಕಣ್ಣುಗಳಿಂದ ಕೂಡಿದ ಆ ರಾಜಪುತ್ರಿಯು

ಉವಾಚ ಸಾ ನೃಪಸುತಾ ಕೋಪವಕ್ತ್ರಾಸ್ಯಲೋಚನಾ ।
ಹಿತಂ ಸತ್ಯಂ ಯೋಗಯುಕ್ತಂ ಧರ್ಮಾರ್ಥಂ ಚ ಯಶಸ್ಕರಂ ॥ ೮೨ ॥

॥ ಶ್ರೀ ವೃಂದೋವಾಚ ॥

ಧೈರ್ಯಂ ಕುರು ಮಹಾಭಾಗ ಶ್ರೇಷ್ಠೋ ಜಾತಿಷು ಬ್ರಾಹ್ಮಣಃ ।
ಬ್ರಾಹ್ಮಣಾನಾಂ ತಪೋ ಮೂಲಂ ಸತ್ಯಂ ವೇದವ್ರತಂ ಧೃತಿಃ ॥ ೮೩ ॥

ಪರಸ್ತ್ರೀಸಹಸಂಭೋಗಃ ಸ್ವಭಾವಶ್ಚಾಪ್ಯಧರ್ಮಿಣಾಂ ।
ಅಧರ್ಮೇಣೈವ ಹೇ ವಿಪ್ರ ದುಷ್ಟೋಽಭದ್ರಾಣಿ ಪಶ್ಯತಿ ।
ತತಃ ಸಪತ್ನೇ ಜಯತಿ ಸಮೂಲಸ್ತೋ ವಿನಶ್ಯತಿ ॥ ೮೪ ॥

ಪತಿವ್ರತಾನಾಂ ಗಮನೇ ಬಲಾತ್ಕಾರೇಣ ನಿಶ್ಚಿತಂ ।
ಮಾತೃಗಾಮೀ ಭವೇತ್ಸದ್ಯೋ ಬ್ರಹ್ಮಹತ್ಯಾಶತಂ ಭವೇತ್ ॥ ೮೫ ॥

---

ಹಿತವಾಗಿಯೂ ಸತ್ಯವಾಗಿಯೂ ಮನೋನಿಗ್ರಹವನ್ನುಂಟುಮಾಡುವುದಾಗಿಯೂ ಧರ್ಮದ ಅರ್ಥದಿಂದ ಕೂಡಿದುದಾಗಿಯೂ ಕೀರ್ತಿಯನ್ನುಂಟುಮಾಡತಕ್ಕುದಾಗಿಯೂ ಇರುವ ಮಾತುಗಳನ್ನು ಹೇಳಿದಳು.

೮೩. ಶ್ರೀ ವೃಂದೆಯು ಹೇಳುತ್ತಾಳೆ :—ಎಲೈ ಮಹಾತ್ಮನೇ! ಧೈರ್ಯವನ್ನು ತಂದುಕೋ. ಎಲ್ಲ ಜಾತಿಗಳವರಲ್ಲಿಯೂ ಬ್ರಾಹ್ಮಣನು ಶ್ರೇಷ್ಠನೆನಿಸಿರುವನು. ಬ್ರಾಹ್ಮಣರಿಗೆ ತಪಸ್ಸು ಸತ್ಯ ವೇದಾಧ್ಯಯನ ನಿಯಮ ಮತ್ತು ಧೈರ್ಯ ಇವು ಮುಖ್ಯವಾದುವು.

೮೪. ಎಲೈ ಬ್ರಾಹ್ಮಣನೇ! ಪರಸ್ತ್ರೀಯೊಡನೆ ಸಂಭೋಗ ಮಾಡುವುದು ಅಧರ್ಮನಿರತರಿಗೆ ಸ್ವಾಭಾವಿಕವಾದುದು. ಆ ದುಷ್ಟನು ತನ್ನ ಅಧರ್ಮಾಚರಣೆಯಿಂದಲೇ ಅಮಂಗಲಗಳನ್ನು ಅನುಭವಿಸುತ್ತಾನೆ. ಆ ಕಾರಣದಿಂದ ಶತ್ರುವಿನಿಂದ ಜಿತನಾಗಿ ಸಮೂಲನಾಗಿ ನಾಶಹೊಂದುತ್ತಾನೆ.

೮೫. ಬಲಾತ್ಕಾರದಿಂದ ಪತಿವ್ರತಾ ಸ್ತ್ರೀಯನ್ನುಪಭೋಗಿಸಿದವನು ತಾಯಿಯನ್ನುಪಭೋಗಿಸಿದ ಪಾಪಿಯಾಗುತ್ತಾನಲ್ಲದೆ ಒಂದು ನೂರು ಬ್ರಹ್ಮಹತ್ಯೆಯನ್ನು ಮಾಡಿದ ಪಾತಕವನ್ನು ಪಡೆಯುತ್ತಾನೆ.

ಕುಂಭೀಪಾಕೇ ಪಚ್ಯತೇ ಚ ಯಾವಚ್ಚಂದ್ರದಿವಾಕರಾ ।
ಪ್ರದಗ್ಧಸ್ತೈಲತಪ್ತೇಷು ನಮ್ರುತಃ ಸೂಕ್ಷ್ಮದೇಹತಃ || ೮೬ ||

ತಾಡಿತೋ ಯಮದೂತೈಶ್ಚ ಲೋಹದಂಡೇನ ಮೂರ್ಧನಿ ।
ಕ್ಷಣಂ ಸುಖಂ ಚಿರಂ ದುಃಖಂ ಸರ್ವನಾಶಸ್ಯ ಕಾರಣಂ || ೮೭ ||

ಅಗಮ್ಯಾಗಮನಂ ದುಃಖಂ ಧರ್ಮಿಷ್ಠೋ ನೈವ ವಾಂಛತಿ ।
ಕ್ಷಮಸ್ವ ಗಚ್ಛ ಭದ್ರಂ ತೇ ಬ್ರಾಹ್ಮಣ ಜ್ಞಾನದುರ್ಬಲ || ೮೮ ||

ಯಥಾ ದೀಪಶಿಖಾಂ ದೃಷ್ಟ್ವಾ ಕೀಟಃ ಪತತಿ ನಿಶ್ಚಿತಂ ।
ಮಿಷ್ಟಂ ದೃಷ್ಟ್ವಾ ಬಡಿಶಾಗ್ರೇ ಲುಬ್ಧಮೀನೋ ಮೃಗೋ ಯಥಾ || ೮೯ ||

ಯಥಾವಿಷಾಕ್ತಂ ಭಕ್ಷ್ಯಂ ಚ ಭುಂಕ್ತೇ ಭೋಕ್ತಾ ಬುಭುಕ್ಷಿತಃ ।
ಗೃಹ್ಣಾತಿ ದುಷ್ಟೋ ದುಷ್ಟಂ ಚ ವಿಷಕುಂಭಂ ಪಯೋಮುಖಂ । || ೯೦ ||

---

೮೬. ಸೂರ್ಯಚಂದ್ರರಿರುವ ವರೆಗೂ ಕುಂಭೀಪಾಕವೆಂಬ ನರಕದಲ್ಲಿ ಬೇಯಿಸಲ್ಪಡುತ್ತಾನೆ. ಸೂಕ್ಷ್ಮ ದೇಹವನ್ನು ಹೊಂದಿರುವವನಾದ ಕಾರಣ ಕಾದು ಕುದಿಯುತ್ತಿರುವ ಎಣ್ಣೆಯ ಮಧ್ಯದಲ್ಲಿ ಸುಡುತ್ತಿರುವವನಾದರೂ ಸಾಯದೇ ಇರುವನು.

೮೭. ಯಮದೂತರಿಂದ ಕಬ್ಬಿಣದ ಸಲಾಕೆಗಳನ್ನು ತೆಗೆದುಕೊಂಡು ತಲೆಯ ಮೇಲೆ ಹೊಡೆಯಲ್ಪಡುವವನಾಗುತ್ತಾನೆ. ಸಂಭೋಗದ ಸುಖವು ಕ್ಷಣಕಾಲ ಮಾತ್ರ. ಸರ್ವನಾಶವನ್ನುಂಟುಮಾಡುವ ದುಃಖವು ಬಹಳ ಕಾಲದ ವರೆಗೂ ಅನುಭವಿಸಬೇಕಾದುದು.

೮೮. ಧರ್ಮನಿರತನಾದವನು ಗಮನಕ್ಕೆ ಯೋಗ್ಯಳಲ್ಲದ ಸ್ತ್ರೀಯನ್ನುಪಭೋಗಿಸುವುದರಿಂದುಂಟಾಗುವ ದುಃಖವನ್ನು ಅಪೇಕ್ಷಿಸುವುದೇ ಇಲ್ಲ. ಎಲೈ ಜ್ಞಾನವಿಲ್ಲದ ಬ್ರಾಹ್ಮಣನೇ! ಕ್ಷಮಿಸುವವನಾಗು. ನಿನಗೆ ಮಂಗಳವಾಗಲಿ. ನೀನು ಹೊರಟು ಹೋಗು.

೮೯–೯೧. ದೀಪದ ಜ್ವಾಲೆಯನ್ನು ನೋಡಿ ಪತಂಗವು ಹೇಗೆ ಅದರಲ್ಲಿ ಬೀಳುವುದೋ ಬಲೆಯ ತುದಿಯಲ್ಲಿರುವ ಭಕ್ಷ್ಯವನ್ನು ನೋಡಿ ಆಶೆಗೊಂಡ ಮೀನು ಹೇಗೆ ಬಲೆಯಲ್ಲಿ ಬೀಳುತ್ತದೆಯೋ ಹಸಿವಿನಿಂದ ಬಳಲಿದವನು ಹೇಗೆ ವಿಷದಿಂದ

ತಥಾ ದೃಷ್ಟ್ವಾ ಪರಸ್ತ್ರೀಣಾಂ ಮುಖಪದ್ಮಂ ಮನೋಹರಂ ।
ವಿನಾಶಬೀಜಂ ಮೋಹೇನ ಭ್ರಾಂತೋ ಭವತಿ ಲಂಪಟಃ ॥ ೯೦ ॥

ಮುಖಂ ಚ ರುಚಿರಂ ಸ್ತ್ರೀಣಾಂ ಶ್ರೋಣಿಯುಗ್ಮಂ ಸ್ತನೌ ತಥಾ ।
ಕಾಮಾಧಾರಂ ನಾಶಬೀಜಮಧರ್ಮಸ್ಥಲಮೇವ ಚ ॥ ೯೧ ॥

ಭಗಂ ನರಕಕುಂಡಂ ಚ ಲಾಲಾಮೂತ್ರಸಮನ್ವಿತಂ ।
ದುರ್ಗಂಧಿಯುಕ್ತಂ ಪಾಪಂ ಚ ಯಮದಂಡಸ್ಯ ಕಾರಣಂ ॥ ೯೨ ॥

ಯಥಾ ಲಿಂಗಂ ವಿಶತ್ಯೇವ ಪಾಪಯೋನೌ ಚ ಯೋಷಿತಾಂ ।
ತಥಾ ಪುಮಾನ್ ವಿಶತ್ಯೇವ ರೌರವೇ ಚ ಯುಗೇ ಯುಗೇ ॥ ೯೪ ॥

ರಹಸ್ಯಂ ಚಾಪದಂ ದೃಷ್ಟ್ವಾ ಮಾಂ ತ್ವಂ ಧರ್ಷಿತುಮಿಚ್ಛಸಿ ।
ಅತ್ರೈವ ಸರ್ವದೇವಾಶ್ಚ ಲೋಕಪಾಲಾಶ್ಚ ಬ್ರಾಹ್ಮಣ ॥ ೯೫ ॥

---

ಕೂಡಿದ ತಿಂಡಿಯನ್ನೂ ತಿನ್ನುತ್ತಾನೋ ದುಷ್ಟನಾದವನು ಕೆಟ್ಟ ವಿಷದಿಂದ ಕೂಡಿ ಮೇಲ್ಭಾಗದಲ್ಲಿ ಮಾತ್ರ ಹಾಲಿನಿಂದ ಕೂಡಿದ ಗಡಿಗೆಯನ್ನು ಹೇಗೆ ತೆಗೆದುಕೊಳ್ಳುತ್ತಾನೋ ಹಾಗೆ ಸ್ತ್ರೀಲಂಪಟನಾದವನು ವಿನಾಶಕ್ಕೆ ಬೀಜದಂತಿರುವ ಪರಸ್ತ್ರೀಯರ ಮುಖಕಮಲವನ್ನು ಮೋಹದಿಂದ ನೋಡುವವನಾಗಿ ಭ್ರಾಂತಿಗೊಳ್ಳುತ್ತಾನೆ.

೯೧. ಸ್ತ್ರೀಯರ ಸುಂದರವಾದ ಮುಖವೂ ಮತ್ತು ಸೊಂಟದ ಕೆಳಭಾಗದಲ್ಲಿರುವ ಪಿರ್ರೆಗಳೂ ಸ್ತನಗಳೂ ಕೂಡ ಕಾಮಕ್ಕೆ ಆಧಾರಗಳೂ ವಿನಾಶಕ್ಕೆ ಬೀಜದಂತಿರುವವುಗಳೂ ಮತ್ತು ಅಧರ್ಮಕ್ಕೆ ಸ್ಥಳಗಳೂ ಆಗಿರುವುವು.

೯೨. ಸ್ತ್ರೀಯ ಯೋನಿಯೆಂಬುದು ಮೂತ್ರದಿಂದ ಕೂಡಿದುದಾಗಿಯೂ ದುರ್ವಾಸನೆಯಿಂದ ಕೂಡಿದುದಾಗಿಯೂ ಯಮನ ಶಿಕ್ಷೆಗೆ ಕಾರಣವಾದ ಪಾಪರೂಪವೂ ಆದ ನರಕಕುಂಡವಾಗಿರುವುದು.

೯೪. ಹೇಗೆ ಪುರುಷನ ಲಿಂಗವು ಸ್ತ್ರೀಯರ ಪಾಪಕರವಾದ ಯೋನಿಯಲ್ಲಿ ಪ್ರವೇಶಮಾಡುತ್ತದೋ ಹಾಗೆಯೇ ಪುರುಷನೂ ಕೂಡ ಯುಗ ಯುಗಗಳಲ್ಲಿಯೂ ರೌರವ ನರಕದಲ್ಲಿ ಪ್ರವೇಶಿಸುತ್ತಾನೆ.

೯೫. ಎಲೈ ಬ್ರಾಹ್ಮಣನೇ! ಇದು ರಹಸ್ಯ ಸ್ಥಾನವಾಗಿರುವದನ್ನು ನೋಡಿ ನೀನು ನನ್ನನ್ನು ಉಪಭೋಗಿಸಲು ಅಪೇಕ್ಷಿಸುತ್ತಿರುವೆ. ಆದರೆ ಇಲ್ಲಿಯೇ ಎಲ್ಲ ದೇವತೆಗಳೂ ಲೋಕಪಾಲಕರೂ ಇರುವರು.

ಜಾಜ್ವಲ್ಯಮಾನೋ ಧರ್ಮಶ್ಚ ಸಾಕ್ಷೀ ಶಾಸ್ತಾ ಚ ಕರ್ಮಣಾಂ ।
ಯಮಶ್ಚ ದಂಡಕರ್ತಾ ಚ ಸ್ಥಾಪಿತೋ ಹರಿಣಾ ಸ್ವಯಂ ॥ ೯೬ ॥

ಸ್ವಯಂ ಕೃಷ್ಣಶ್ಚ ಧರ್ಮಾತ್ಮಾ ಜ್ಞಾನರೂಪೋ ಮಹೇಶ್ವರಃ ।
ದುರ್ಗಾ ಬುದ್ಧಿರ್ಮನೋ ಬ್ರಹ್ಮಾ ಚೇಂದ್ರಿಯಾಣಿ ಸುರಾಸ್ತಥಾ ॥ ೯೭ ॥

ಸರ್ವಪ್ರಾಣಿಷು ತಿಷ್ಠಂತಿ ಸಾಕ್ಷಿಣಃ ಕರ್ಮಣಾಂ ದ್ವಿಜ ।
ಕ್ವ ಗುಪ್ತಂ ಕ್ವ ರಹಸ್ಯಂ ವಾ ಬ್ರಾಹ್ಮಣ ಜ್ಞಾನದುರ್ಬಲ ॥ ೯೮ ॥

ಕ್ಷಮಸ್ವ ಗಚ್ಛ ಭದ್ರಂ ತೇ ಅವಧ್ಯಾಶ್ಚ ದ್ವಿಜಾತಯಃ ।
ಶಕ್ತಾಹಂ ಭಸ್ಮಸಾತ್ಕರ್ತುಂ ಗಚ್ಛ ವತ್ಸ ಯಥಾಸುಖಂ ॥ ೯೯ ॥

ತಪಸ್ಯಾಸು ಮಮ ಗತಮಷ್ಟೋತ್ತರಶತಂ ಯುಗಂ।
ನಾಸ್ತಿ ಗೋತ್ರಂ ಮತ್ಪಿತುಶ್ಚ ನಮಾತಾ ನಪಿತಾ ಮಮ । ॥ ೧೦೦ ॥

---

೯೬. ಅಗ್ನಿಯೂ, ಎಲ್ಲ ಕರ್ಮಗಳಿಗೂ ಸಾಕ್ಷಿಯಾಗಿಯೂ ಪ್ರೇರಕವಾಗಿಯೂ ಇರುವ ಧರ್ಮನೂ, ಪಾಪಿಗಳನ್ನು ಶಿಕ್ಷಿಸುವವನಾದ ಯಮನೂ ಇವರೆಲ್ಲರೂ ಆ ಹರಿಯಿಂದ ಸ್ಥಾಪಿಸಲ್ಪಟ್ಟವರಾಗಿರುತ್ತಾರೆ.

೯೭–೯೮. ಧರ್ಮಾತ್ಮನೂ ಜ್ಞಾನರೂಪನೂ ಮಹೇಶ್ವರನೂ ಆದ ಆ ಕೃಷ್ಣನೂ ದುರ್ಗಾದೇವಿಯೂ ಬುದ್ಧಿಯೂ ಮನಸ್ಸೂ ಬ್ರಹ್ಮನೂ ಇಂದ್ರಿಯಗಳೂ ಮತ್ತು ಸಕಲ ದೇವತೆಗಳೂ ಕೂಡ ಸಮಸ್ತ ಪ್ರಾಣಿಗಳಲ್ಲಿಯೂ ಇರುತ್ತಾರಲ್ಲವೆ? ಎಲೈ ಬ್ರಾಹ್ಮಣನೇ! ಅವರುಗಳು ಪ್ರಾಣಿಗಳು ಮಾಡತಕ್ಕ ಪಾಪ ಪುಣ್ಯ ಕೆಲಸಗಳಿಗೆ ಸಾಕ್ಷಿಗಳಾಗಿರುತ್ತಾರೆ. ಎಲೈ ಜ್ಞಾನವಿಲ್ಲದ ಬ್ರಾಹ್ಮಣನೇ! ಗುಪ್ತವೂ ರಹಸ್ಯವೂ ಎಲ್ಲಿ ಬಂತು? (ಸರ್ವವೂ ಪ್ರಕಾಶವಾದುದೇ ಆಗಿರುತ್ತದೆಂದು ಅಭಿಪ್ರಾಯ.)

೯೯. ಬ್ರಾಹ್ಮಣನೇ! ಹೋಗು ನಿನಗೆ ಶುಭವಾಗಲಿ. ನನ್ನನ್ನು ಕ್ಷಮಿಸು. ಬ್ರಾಹ್ಮಣರು ಕೊಲ್ಲಲರ್ಹರಲ್ಲ. ಎಲೈ ಮಗುವೇ ನಿನ್ನನ್ನು ಬೂದಿ ಮಾಡಲು ನಾನು ಸಮರ್ಥಳಾಗಿರುವೆನು. ಆದರೂ ನಿನಗೆ ಇಷ್ಟ ಬಂದೆಡೆಗೆ ಸುಖವಾಗಿ ಹೋಗು.

೧೦೦. ನಾನು ಈ ರೀತಿ ತಪಸ್ಸನ್ನು ಮಾಡುತ್ತ ಒಂದು ನೂರ ಎಂಟು ಯುಗಗಳು ಕಳೆದುವು. ನನ್ನ ತಂದೆಯ ವಂಶದವರು ಕೂಡ ಇಲ್ಲ. ನನ್ನ ತಂದೆಯಾಗಲಿ ತಾಯಿಯಾಗಲಿ ಯಾರೊಬ್ಬರೂ ಇಲ್ಲ.

ಸರ್ವಾಂತರಾತ್ಮಾ ಭಗವಾನ್ಕೃಷ್ಣೋ ರಕ್ಷತಿ ಮಾಂ ದ್ವಿಜ ।
ಕೃಷ್ಣೇನ ಸ್ಥಾಪಿತೋ ಧರ್ಮೋ ಮಾಂ ಚ ರಕ್ಷತಿ ನಿತ್ಯಶಃ ॥ ೧೧೧ ॥

ಆದಿತ್ಯಶ್ಚ ತಥಾ ಚಂದ್ರಃ ಪವನಶ್ಚ ಹುತಾಶನಃ ।
ಬ್ರಹ್ಮಾ ಶಂಭುರ್ಜಗಪತೀ ದುರ್ಗಾ ರಕ್ಷತಿ ಮಾಂ ಸದಾ ॥ ೧೧೨ ॥

ಯೇನ ಶುಕ್ಲೀಕೃತಾ ಹಂಸಾಃ ಶುಕಾಶ್ಚ ಹರಿತಾಃ ಕೃತಾಃ ।
ಮಯೂರಾಶ್ಚಿತ್ರಿತಾ ಯೇನ ಸ ಮೇ ರಕ್ಷಾಂ ಕರಿಷ್ಯತಿ ॥ ೧೧೩ ॥

ಅನಾಥಬಾಲವೃದ್ಧಾನಾಂ ರಕ್ಷಕಾಃ ಸರ್ವದೇವತಾಃ ।
ನಾರೀಬುದ್ಧ್ಯಾ ನ ಮಾಂ ಧರ್ಮಸ್ತ್ಯಕ್ತ್ವಾ ಗಚ್ಛೇದ್ಧಿ ಸರ್ವದಾ ॥ ೧೧೪ ॥

ಮಾಂ ಮಾತರಂ ಪರಿತ್ಯಜ್ಯ ಗಚ್ಛ ವತ್ಸ ಯಥಾಸುಖಂ ।
ಇತ್ಯೇವಮುಕ್ತ್ವಾ ದೇವೀ ಸಾ ತಸ್ಥೌ ತತ್ರ ಧರಾ ಯಥಾ ॥ ೧೧೫ ॥

---

೧೧೧. ಎಲೈ ಬ್ರಾಹ್ಮಣನೇ! ಎಲ್ಲರಲ್ಲಿಯೂ ಅಂತರ್ಯಾಮಿಯಾಗಿರುವ ಷಡ್ಗುಣೈಶ್ವರ್ಯಸಂಪನ್ನನಾದ ಕೃಷ್ಣನು ನನ್ನನ್ನು ಕಾಪಾಡುತ್ತಾನೆ. ಆ ಕೃಷ್ಣನಿಂದ ಸ್ಥಾಪಿಸಲ್ಪಟ್ಟ ಧರ್ಮವೂ ಕೂಡ ನನ್ನನ್ನು ಯಾವಾಗಲೂ ಕಾಪಾಡುತ್ತದೆ.

೧೧೨. ಸೂರ್ಯನೂ ಚಂದ್ರನೂ ಗಾಳಿಯೂ ಅಗ್ನಿಯೂ ಬ್ರಹ್ಮನೂ ಈಶ್ವರನೂ ಮತ್ತು ಮಹಾತ್ಮಳಾದ ದುರ್ಗಾದೇವಿಯೂ ಕೂಡ ನನ್ನನ್ನು ಯಾವಾಗಲೂ ಕಾಪಾಡುತ್ತಾರೆ.

೧೧೩. ಯಾವ ಮಹಾತ್ಮನಿಂದ ಹಂಸಗಳು ಬಿಳುಪಾಗಿ ಮಾಡಲ್ಪಟ್ಟವೋ ನವಿಲುಗಳು ಚಿತ್ರ ಬಣ್ಣಗಳಾಗಿ ಮಾಡಲ್ಪಟ್ಟವೋ ಗಿಳಿಗಳು ಹಸುರಾಗಿ ಮಾಡಲ್ಪಟ್ಟುವೋ ಅವನು ನನ್ನ ರಕ್ಷಣೆಯನ್ನು ಮಾಡುತ್ತಾನೆ.

೧೧೪. ಪಾಲಕರಿಲ್ಲದವರಿಗೂ ಮಕ್ಕಳಿಗೂ ಮುದುಕರಿಗೂ ಕೂಡ ಸಕಲ ದೇವತೆಗಳೂ ರಕ್ಷಕರಾಗಿರುತ್ತಾರೆ. ಹೆಂಗಸಾದ ಮಾತ್ರಕ್ಕೆ ಯಾವಾಗಲೂ ಧರ್ಮವು ನನ್ನನ್ನು ಬಿಟ್ಟು ಹೋಗಲಾರದಷ್ಟೇ.

೧೧೫. ಎಲೈ ಮಗುವೇ! ತಾಯಿಯಾದ ನನ್ನನ್ನು ಬಿಟ್ಟು ನಿನಗೆ ಯಾವ ರೀತಿ ಸುಖವಾಗುತ್ತದೋ ಹಾಗೆ ಹೊರಟು ಹೋಗು. ಈ ಪ್ರಕಾರವಾಗಿ ಹೇಳಿ ವೃಂದಾದೇವಿಯು ಅಲ್ಲಿಯೇ ಅಲುಗಾಡದೆ ಭೂಮಿಯಂತೆ ನಿಂತಿದ್ದಳು.

ಆಗಚ್ಛಂತಂ ಚ ಸಂಭೋಕ್ತುಂ ಮಾಯಾತಂ ಬೋಧನೇನ ಚ ।
ಶಶಾಪೇತಿ ಚ ಸಾ ಕೋಪಾದ್ಬ್ರಹ್ಮಬಂಧೋ ಕ್ಷಯೋ ಭವ ॥ ೧೦೬ ॥

ಕ್ಷಯೋ ಭವ ದುರಾಚಾರ ಹೇ ಪಾಪಿಷ್ಠ ಕ್ಷಯೋಭವ ।
ಪುನಃ ಶಪ್ತುಂ ಸ್ವಯಂ ಸೂರ್ಯೋ ವಾರಯಾಮಾಸ ಯತ್ನತಃ ॥ ೧೦೭ ॥

ಏತಸ್ಮಿನ್ನಂತರೇ ತಾತ ತತ್ರೈವ ಜಗದೀಶ್ವರಾಃ ।
ಅಜಗ್ಮುರತಿಸಂತ್ರಸ್ತಾ ಬ್ರಹ್ಮವಿಷ್ಣು ಶಿವಾದಯಃ ॥ ೧೦೮ ॥

ಧರ್ಮಂ ದೃಷ್ಟ್ವಾ ಕಲಾರೂಪಂ ರುರುದುಸ್ತ್ರಿದಶೇಶ್ವರಾಃ ।
ಕೃತ್ವಾ ಕ್ರೋಡೇ ತೀವಕೃಶಂ ಕುಹ್ವಾ ಭೀತಂ ಯಥಾಘುಮ್ ।
ನಿಶ್ಚೇಷ್ಟಂ ಮಲಿನಂ ದಗ್ಧಂ ಸತೀ ಕೋಪಾಗ್ನಿನಾ ವ್ರಜ ॥ ೧೦೯ ॥

---

೧೦೬. ಹೀಗೆ ಹೇಳಿದರೂ ಕೂಡ ಅವಳನ್ನುಪಭೋಗಿಸಲು ಮುಂದೆ ಬರುತ್ತಿರುವ ಆ ಬ್ರಾಹ್ಮಣ ವೇಷದಿಂದಿರುವ ಧರ್ಮನನ್ನು ಆ ವೃಂದೆಯು ಕೋಪದಿಂದ ಎಲೈ ನೀಚ ಬ್ರಾಹ್ಮಣನೇ! ನೀನು ಕ್ಷೀಣನಾಗು ಎಂದು ಶಾಪಕೊಟ್ಟಳು.

೧೦೭. ಎಲೈ ದುರಾಚಾರನೇ! ಕ್ಷೀಣನಾಗು, ಎಲೈ ಪಾಪಿಷ್ಠನೇ! ಕ್ಷೀಣನಾಗು, ಎಂದು ಮೂರುಸಾರಿ ಶಪಿಸಿ ಮತ್ತೆ ನಾಲ್ಕನೇಸಾರಿ ಶಪಿಸಲು ಸಿದ್ಧಳಾಗಲು ಸೂರ್ಯನು ತಾನು ಅಲ್ಲಿಗೆ ಬಂದು ಪ್ರಯತ್ನಪೂರ್ವಕವಾಗಿ ತಡೆದನು.

೧೦೮. ಎಲೈ ತಂದೆಯೇ! ಈ ಸಮಯಕ್ಕೆ ಸರಿಯಾಗಿ ಪ್ರಪಂಚಕ್ಕೆ ಒಡೆಯರಾದ ಬ್ರಹ್ಮ ವಿಷ್ಣು ಈಶ್ವರ ಇವರೇ ಮೊದಲಾದ ದೇವತೆಗಳು ಭಯಗೊಂಡವರಾಗಿ ಅಲ್ಲಿಗೆ ಬಂದರು.

೧೦೯. ಆ ದೇವತೆಗಳು ಕ್ಷೀಣನಾಗಿ ಕಲಾಮಾತ್ರ ಉಳಿದವನಾಗಿ ಪತಿವ್ರತೆಯ ಕೋಪಾಗ್ನಿಯಿಂದ ಸುಟ್ಟವನಾಗಿ ಮಲಿನನಾಗಿ ಕಲಾಹೀನತೆಯಿಂದ ಹೆದರಿದ ಚಂದ್ರನಂತೆ ಅಲುಗಾಡದೇ ಇರುವ ಧರ್ಮನನ್ನು ನೋಡಿ ಅವನನ್ನು ಎದೆಗಪ್ಪಿಕೊಂಡು ಬಹಳವಾಗಿ ಅತ್ತರು.

|| ಶ್ರೀ ಭಗವಾನುವಾಚ ||

ಕ್ಷಮಸ್ವ ವೃಂದೇ ಮದ್ಭಕ್ತೇ ಜನ್ಮಮೃತ್ಯುಜರಾಹರೇ ।
ಧರ್ಮಂ ಜೀವಯ ಮದ್ಭಕ್ತಂ ರಕ್ಷ ಧರ್ಮಂ ಪತಿವ್ರತೇ || ೧೧೦ ||

|| ಬ್ರಹ್ಮೋವಾಚ ||

ಧ್ವಾಂತಪೂರ್ಣಂ ಜಗತ್ಸರ್ವಂ ವಿನಾ ಧರ್ಮಂ ಬಭೂವ ಹ ।
ಕಂಪಿತೌ ಚಂದ್ರಸೂರ್ಯೌ ಚ ಶೇಷಾಶ್ಚಾಪಿ ವಸುಂಧರಾ || ೧೧೧ ||

|| ಮಹಾದೇವ ಉವಾಚ ||

ಪ್ರನಷ್ಟಂ ಚ ಜಗತ್ಸರ್ವಂ ವಿನಾ ಧರ್ಮೇಣ ಸುಂದರಿ ।
ಧರ್ಮಂ ಜೀವಯ ಭದ್ರಂ ತೇ ಸ್ವಸ್ತಿ ತೇಽಸ್ತು ವರಾನನೇ || ೧೧೨ ||

|| ಸೂರ್ಯ ಉವಾಚ ||

ವರಂ ವೃಣೀಷ್ವ ಭದ್ರಂ ತೇ ಯತ್ತೇ ಮನಸಿ ವಾಂಛಿತಮ್ ।
ಧರ್ಮಂ ಜೀವಯ ಭದ್ರಂ ತೇ ರಕ್ಷ ಸೃಷ್ಟಿಂ ಪತಿವ್ರತೇ || ೧೧೩ ||

---

೧೧೦. ಶ್ರೀಭಗವಂತನು ಹೇಳುತ್ತಾನೆ:—ಎಲೈ ವೃಂದೆಯೇ, ಹುಟ್ಟು ಸಾವು ಮುಪ್ಪುಗಳನ್ನು ನಾಶ ಮಾಡುವವನಾದ ನನ್ನ ಭಕ್ತನಲ್ಲಿ ದಯೆಯನ್ನು ತೋರಿಸುವವಳಾಗು. ಎಲೈ ಪತಿವ್ರತೆಯೇ! ನನ್ನ ಭಕ್ತನಾದ ಧರ್ಮನನ್ನು ಬದುಕಿಸುವವಳಾಗು.

೧೧೧. ಬ್ರಹ್ಮನು ಹೇಳುತ್ತಾನೆ:—ಧರ್ಮನಿಲ್ಲದ ಕಾರಣ, ಪ್ರಪಂಚವೆಲ್ಲವೂ ಕತ್ತಲೆಯಾಗಿದೆ. ಸೂರ್ಯಚಂದ್ರರು ನಡುಗುತ್ತಲಿದ್ದಾರೆ. ಆದಿಶೇಷನೂ, ಭೂಮಿಯೂ ಕೂಡಾ ನಡುಗುತ್ತಲಿದ್ದಾರೆ.

೧೧೨. ಮಹಾದೇವನು ಹೇಳುತ್ತಾನೆ:—ಎಲೈ ಸುಂದರಿಯೇ! ಧರ್ಮವಿಲ್ಲದ ಕಾರಣ ಪ್ರಪಂಚವೆಲ್ಲವೂ ನಾಶವಾಗುತ್ತಲಿದೆ. ಎಲೈ ಸುಂದರವಾದ ಮುಖವುಳ್ಳವಳೇ! ನಿನಗೆ ಸಕಲ ಸನ್ಮಂಗಳಗಳುಂಟಾಗಲಿ. ಈ ಧರ್ಮನನ್ನು ಬದುಕಿಸುವವಳಾಗು.

೧೧೩. ಸೂರ್ಯನು ಹೇಳುತ್ತಾನೆ:—ಎಲೈ ಪತಿವ್ರತೆಯೇ! ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳುವವಳಾಗು. ಧರ್ಮನನ್ನು ಬದುಕಿಸುವವಳಾಗು. ಮತ್ತು ಈ ಲೋಕಗಳನ್ನು ಕಾಪಾಡುವವಳಾಗು.

|| ಅನಂತ ಉವಾಚ ||

ಧರ್ಮಂ ಕರೋಷಿ ತಪಸಾ ಕಥಂ ಧರ್ಮಂ ವಿಹಂಸಿ ಚ |
ಧರ್ಮಂ ಜೀವಯ ಭದ್ರಂ ತೇ ಸರ್ವಧರ್ಮೋ ಭವೇತ್ತವ || ೧೧೪ ||

|| ಚಂದ್ರ ಉವಾಚ ||

ದ್ವಿಜರೂಪಧರೋ ಧರ್ಮಸ್ತ್ವಾಂ ಪರೀಕ್ಷಿತುಮಾಗತಃ |
ಬ್ರಹ್ಮಣಾ ಪ್ರೇರಿತಶ್ಚೈವ ನಿರ್ದೋಷಶ್ಚ ವಿಹಿಂಸತಃ || ೧೧೫ ||

|| ಮಹೇಂದ್ರ ಉವಾಚ ||

ತಪಸೋಪಾರ್ಜಿತೋ ಧರ್ಮೋ ಧರ್ಮೇಣ ಚ ಫಲಂ ನೃಣಾಮ್ |
ಕಥಂ ಫಲಂ ಚ ತಪಸಾಂ ಯದಿ ಧರ್ಮಃ ಕ್ಷಯಂ ಗತಃ || ೧೧೬ ||

|| ವರುಣ ಉವಾಚ ||

ಧರ್ಮಂ ಜೀವಯ ಧರ್ಮಿಷ್ಠೇ ಧರ್ಮಂ ರಕ್ಷ ಸನಾತನಮ್ |
ನಿಷ್ಫಲಂ ಕರ್ಮಿಣಾಂ ಕರ್ಮ ವಿನಾ ಧರ್ಮೇಣ ಧಾರ್ಮಿಕೇ || ೧೧೭ ||

---

೧೧೪. ಅನಂತನು ಹೇಳುತ್ತಾನೆ:—ನೀನು ತಪಸ್ಸಿನಿಂದ ಧರ್ಮವನ್ನು ಮಾಡುತ್ತಿರುವೆ. ಈಗ ಹೇಗೆ ಆ ಧರ್ಮವನ್ನು ನಾಶಮಾಡಿಕೊಳ್ಳುವೆ? ನಿನಗೆ ಮಂಗಳವಾಗಲಿ ಧರ್ಮನನ್ನು ಬದುಕಿಸುವವಳಾಗು. ನಿನಗೆ ಎಲ್ಲ ಧರ್ಮಗಳೂ ಉಂಟಾಗುತ್ತವೆ.

೧೧೫. ಚಂದ್ರನು ಹೇಳುತ್ತಾನೆ:—ಬ್ರಹ್ಮನಿಂದ ಪ್ರೇರಿಸಲ್ಪಟ್ಟ ಧರ್ಮನು ನಿನ್ನನ್ನು ಪರೀಕ್ಷಿಸುವುದಕ್ಕೋಸ್ಕರ ಬ್ರಾಹ್ಮಣ ರೂಪವನ್ನು ಹೊಂದಿದವನಾಗಿ ಬಂದಿರುವನು. ಅವನು ದೋಷವಿಲ್ಲದವನೂ ಹಿಂಸೆ ಮಾಡಲ್ಪಟ್ಟವನೂ ಆಗಿರುತ್ತಾನೆ.

೧೧೬. ಮಹೇಂದ್ರನು ಹೇಳುತ್ತಾನೆ:—ತಪಸ್ಸಿನಿಂದ ಧರ್ಮವು ಸಂಪಾದಿಸಲ್ಪಟ್ಟಿದೆ. ಮಾನವರಿಗೆ ಧರ್ಮದಿಂದ ಫಲವುಂಟಾಗುತ್ತದೆ. ಧರ್ಮವು ನಾಶವಾದರೆ ತಪಸ್ಸುಗಳ ಫಲವು ತಾನೆ ಹೇಗೆ ಉಂಟಾಗುತ್ತದೆ?

೧೧೭. ವರುಣನು ಹೇಳುತ್ತಾನೆ:— ಎಲೈ ಧರ್ಮಿಷ್ಠಳೇ! ಧರ್ಮನನ್ನು ಬದುಕಿಸುವವಳಾಗು. ನಾಶರಹಿತವಾದ ಧರ್ಮವನ್ನು ಕಾಪಾಡುವವಳಾಗು. ಎಲೈ ಧರ್ಮನಿರತಳೇ! ಕರ್ಮದಲ್ಲಿ ನಿರತರಾದವರ ಕರ್ಮವು ಧರ್ಮವಿಲ್ಲದಿದ್ದರೆ ಫಲವಿಲ್ಲದುದಾಗುತ್ತದೆ.

|| ಪವನ ಉವಾಚ ||

ಜಗತ್ಪೂತಂ ಕುರು ಶುಭೇ ಧರ್ಮಂ ಜೀವಯ ಸಾಂಪ್ರತಮ್ |
ಧರ್ಮೇ ಪ್ರನಷ್ಟೇ ತಪಸಾಂ ತವಾಪೂರ್ವಂ ವಿನಂಕ್ಷ್ಯತಿ || ೧೧೮ ||

|| ವಹ್ನಿರುವಾಚ ||

ಸ್ವಧರ್ಮೋಪಾರ್ಜನಂ ಕರ್ತುಮಾಗತಾಸಿ ಚ ಭಾರತಮ್ |
ವಿಹಂಸಿ ಧರ್ಮಮಜ್ಞಾತ್ವಾ ಪುನರ್ಜೀವಯ ಸುಂದರಿ || ೧೧೯ ||

|| ಯಮ ಉವಾಚ ||

ವೇದೋಕ್ತಕರ್ಮಕರ್ತ್ಯಾಣಾಮಹಂ ವಿಶ್ವೇಶ್ವರಾನನೇ |
ಧರ್ಮಾನುಸಾರಾತ್ಫಲದೋ ಧರ್ಮಂ ಜೀವಯ ಸತ್ವರಮ್ || ೧೨೦ ||

ದೇವಾನಾಂ ವಚನಂ ಶ್ರುತ್ವಾ ಸಮುತ್ಥಾಯ ಪತಿವ್ರತಾ |
ನಮಸ್ಕೃತ್ಯ ಸುರೇಶಾಂಶ್ಚ ತಾನುವಾಚ ತಪಸ್ವಿನೀ || ೧೨೧ ||

---

೧೧೮. ವಾಯುವು ಹೇಳುತ್ತಾನೆ:—ಎಲೈ ಮಂಗಳಕರಳೇ! ಈಗ ಧರ್ಮನನ್ನು ಬದುಕಿಸುವವಳಾಗಿ ಪ್ರಪಂಚವನ್ನು ಪವಿತ್ರವನ್ನಾಗಿ ಮಾಡು. ತಪಸ್ಸಿನಿಂದುಂಟಾದ ಧರ್ಮವು ನಾಶವಾದರೆ ನಿನ್ನ ಧರ್ಮವು ನಾಶಹೊಂದುತ್ತದೆ.

೧೧೯. ಅಗ್ನಿಯು ಹೇಳುತ್ತಾನೆ:— ಎಲೈ ಸುಂದರಿಯೇ! ನೀನು ನಿನ್ನ ಧರ್ಮವನ್ನು ಸಂಪಾದಿಸುವುದಕ್ಕೋಸ್ಕರವಾಗಿ ಭಾರತಭೂಮಿಗೆ ಬಂದಿರುವೆ. ತಿಳಿಯದೆ ಧರ್ಮನನ್ನು ನಾಶಮಾಡಿರುವೆ. ಅವನನ್ನು ಮತ್ತೆ ಬದುಕಿಸುವವಳಾಗು.

೧೨೦. ಯಮನು ಹೇಳುತ್ತಾನೆ:—ಎಲೈ ಸುಂದರವಾದ ಮುಖವುಳ್ಳವಳೇ! ನಾನು ಈ ಪ್ರಪಂಚದಲ್ಲಿ ವೇದೋಕ್ತವಾದ ಕರ್ಮಗಳನ್ನು ಮಾಡುವವರಿಗೆ ಅವರವರ ಧರ್ಮಕ್ಕೆ ತಕ್ಕಂತೆ ಫಲವನ್ನು ಕೊಡುವವನಾಗಿರುವೆನು. ಜಾಗ್ರತೆಯಾಗಿ ಧರ್ಮನನ್ನು ಬದುಕಿಸುವವಳಾಗು.

೧೨೧. ದೇವತೆಗಳಾಡಿದ ಮಾತುಗಳನ್ನು ಕೇಳಿ ತಪಸ್ವಿನಿಯಾದ ಆ ಪತಿವ್ರತೆಯು ಮೇಲಕ್ಕೆದ್ದು, ಆ ದೇವಶ್ರೇಷ್ಠರಿಗೆ ನಮಸ್ಕಾರಮಾಡಿ, ಅವರನ್ನು ಕುರಿತು ಇಂತೆಂದಳು.

|| ವೃಂದೋವಾಚ ||

ಅಹಂ ದೇವ ನ ಜಾನಾಮಿ ಧರ್ಮಂ ಬ್ರಾಹ್ಮಣರೂಪಿಣಮ್ ।
ಕೃತಃ ಕ್ಷಯೋ ಮಯಾ ಕೋಪಾನ್ಮಾಂ ಪರೀಕ್ಷಿತುಮಾಗತಃ || ೧೨೨ ||

ಜೀವಯಾಮಿ ಧ್ರುವಂ ಧರ್ಮಂ ಯುಷ್ಮಾಕಂ ಚ ಪ್ರಸಾದತಃ ।
ಇತ್ಯೇವಮುಕ್ತ್ವಾ ಸಾ ವೃಂದಾ ಚೇತ್ಯುವಾಚ ವ್ರಜೇಶ್ವರ || ೧೨೩ ||

ತಪಃ ಸತ್ಯಂ ಯದಿ ಮಮ ಸತ್ಯಂ ಚ ವಿಷ್ಣುಪೂಜನಮ್ ।
ತೇನ ಪುಣ್ಯೇನ ಸದ್ಯೋಽತ್ರ ದ್ವಿಜೋ ಭವತು ವಿಜ್ವರಃ || ೧೨೪ ||

ಯದಿ ಮೇ ಚ ಭವೇತ್ಸತ್ಯಂ ವ್ರತಃ ಸತ್ಯಂ ತಪಃ ಶುಚಿ ।
ತೇನ ಪುಣ್ಯೇನ ಸತ್ಯೇನ ದ್ವಿಜೋ ಭವತು ವಿಜ್ವರಃ || ೧೨೫ ||

---

೧೨೨. ವೃಂದೆಯು ಹೇಳುತ್ತಾಳೆ:—ಎಲೈ ದೇವತೆಗಳೇ! ನನ್ನನ್ನು ಪರೀಕ್ಷಿಸುವುದಕ್ಕೋಸ್ಕರ ಧರ್ಮನು ಬ್ರಾಹ್ಮಣ ರೂಪದಿಂದ ಬಂದಿರುವುದನ್ನು ನಾನು ತಿಳಿಯದವಳಾದೆನು. ಆದುದರಿಂದಲೇ ನಾನು ಕೋಪದಿಂದ ಅವನನ್ನು ಕ್ಷೀಣನನ್ನಾಗಿ ಮಾಡಿರುವೆನು.

೧೨೩. ನಿಮ್ಮಿಂದ ಅನುಗ್ರಹಮಾಡಲ್ಪಟ್ಟಿರುವ ಧರ್ಮನನ್ನು ಖಂಡಿತವಾಗಿಯೂ ಬದುಕಿಸುತ್ತೇನೆ. ಎಲೈ ಗೋಕುಲದೊಡೆಯನೇ! ಆ ವೃಂದೆಯು ಈ ಪ್ರಕಾರವಾಗಿ ದೇವತೆಗಳನ್ನು ಕುರಿತು ಹೇಳಿ ಮುಂದೆ ಈ ರೀತಿಯಾಗಿ ಹೇಳತೊಡಗಿದಳು.

೧೨೪. ನಾನು ಮಾಡಿರುವ ತಪಸ್ಸು ಸತ್ಯವಾಗಿರುವುದಾದರೆ ಮತ್ತು ನಾನು ಮಾಡಿರುವ ವಿಷ್ಣು ಪೂಜೆಯು ಸತ್ಯವಾದುದೇ ಆದರೆ, ಆ ಪುಣ್ಯದಿಂದ ಇಲ್ಲಿ ಈಗಲೇ ಈ ಬ್ರಾಹ್ಮಣನು ಶಾಪಮುಕ್ತನಾಗಲಿ.

೧೨೫. ನನ್ನ ವ್ರತಾಚರಣೆಯೂ, ಸತ್ಯಸಂಧತೆಯೂ, ತಪಸ್ಸೂ, ಪರಿಶುದ್ಧತೆಯೂ ಯಥಾರ್ಥವಾದುದಾದಪಕ್ಷದಲ್ಲಿ, ಆ ಸತ್ಯದಿಂದಲೂ ಪುಣ್ಯದಿಂದಲೂ ಬ್ರಾಹ್ಮಣನು ರೋಗಮುಕ್ತನಾಗಲಿ.

ಯದಿ ನಾರಾಯಣಃ ಸತ್ಯಃ ಸರ್ವಾತ್ಮಾ ನಿತ್ಯವಿಗ್ರಹಃ ।
ಜ್ಞಾನಾತ್ಮಕಃ ಶಿವಃ ಸತ್ಯೋ ದ್ವಿಜೋ ಭವತು ವಿಜ್ವರಃ ॥ ೧೨೬ ॥

ಬ್ರಹ್ಮ ಸತ್ಯಂ ಚ ತೇ ದೇವಾಃ ಪ್ರಕೃತಿಃ ಪರಮಾ ಯದಿ ।
ಯಜ್ಞಃ ಸತ್ಯಸ್ತಪಃ ಸತ್ಯಂ ದ್ವಿಜೋ ಭವತು ವಿಜ್ವರಃ ॥ ೧೨೭ ॥

ಇತ್ಯೇವ ಮುಕ್ತ್ವಾ ಸಾ ವೃಂದಾ ಧರ್ಮಂ ಕ್ರೋಡೇ ಚಕಾರ ಚ ।
ತಂ ದೃಷ್ಟ್ವಾ ಚ ಕಲಾರೂಪಂ ರುರೋದ ಕೃಪಯಾ ಸತೀ ॥ ೧೨೮ ॥

ಏತಸ್ಮಿನ್ನಂತರೇ ಮೂರ್ತಿರ್ಧರ್ಮಭಾರ್ಯಾ ಶುಚಾಕುಲಾ ।
ನಿಪತ್ಯ ವಿಷ್ಣುಪಾದೇ ಚ ಶಿರಸಾ ಚೇತ್ಯುವಾಚ ಸಾ ॥ ೧೨೯ ॥

॥ ಮೂರ್ತಿರುವಾಚ ॥

ಹೇ ನಾಥ ಕರುಣಾಸಿಂಧೋ ದೀನಬಂಧೋ ಕೃಪಾಂ ಕುರು ।
ತೂರ್ಣಂ ಜೀವಯ ಕಾಂತಂ ಮೇ ಜಗನ್ನಾಥ ಕೃಪಾಮಯ ॥ ೧೩೦ ॥

---

೧೨೬. ಸರ್ವಸ್ವರೂಪನೂ ನಿತ್ಯಶರೀರವುಳ್ಳವನೂ ಆದ ನಾರಾಯಣನು ಸತ್ಯಸ್ವರೂಪನಾಗಿರುವುದು ನಿಜವಾದಪಕ್ಷದಲ್ಲಿ, ಮತ್ತು ಶಿವನು ಜ್ಞಾನಸ್ವರೂಪನಾಗಿರುವುದು ನಿಜವಾದಪಕ್ಷದಲ್ಲಿ ಈ ಬ್ರಾಹ್ಮಣನು ಆರೋಗ್ಯವನ್ನು ಹೊಂದಲಿ.

೧೨೭. ಪರಬ್ರಹ್ಮವು ಸತ್ಯವಾದುದಾದರೆ, ದೇವತೆಗಳಿರುವುದು ಸತ್ಯವಾದರೆ, ಉತ್ತಮಳಾದ ಪ್ರಕೃತಿಯು ನಿಜವೇ ಆದರೆ, ಯಜ್ಞ ಮತ್ತು ತಪಸ್ಸು ಇವುಗಳು ಸತ್ಯವಾದುದೇ ಆದರೆ ಈ ಬ್ರಾಹ್ಮಣನು ರೋಗಮುಕ್ತನಾಗಲಿ.

೧೨೮. ಹೀಗೆ ಹೇಳಿ ಆ ವೃಂದೆಯು ಧರ್ಮನನ್ನು ಎತ್ತಿಕೊಂಡಳು. ಮತ್ತು ಪತಿವ್ರತೆಯಾದ ವೃಂದೆಯು ಧರ್ಮನು ಒಂದು ಕಲಾಮಾತ್ರದಿಂದುಳಿದಿರುವುದನ್ನು ನೋಡಿ ಕರುಣೆಯಿಂದ ಕೂಡಿದವಳಾಗಿ ಅತ್ತಳು.

೧೨೯. ಇಷ್ಟುಹೊತ್ತಿಗೆ ಧರ್ಮನ ಹೆಂಡತಿಯಾದ ಮೂರ್ತಿಯು ದುಃಖಗೊಂಡವಳಾಗಿ ಬಂದು, ವಿಷ್ಣುವಿನ ಕಾಲುಗಳ ಮೇಲೆ ಬಿದ್ದು ಈ ರೀತಿಯಾಗಿ ಹೇಳತೊಡಗಿದಳು.

೧೩೦. ಮೂರ್ತಿಯು ಹೇಳುತ್ತಾಳೆ:— ಎಲೈ ಒಡೆಯನೇ! ದಯಾಸಮುದ್ರನೇ! ದುಃಖಿತರಾದವರ ಬಂಧುವೇ! ನನ್ನಲ್ಲಿ ದಯೆಯನ್ನು ತೋರು. ಎಲೈ ಜಗತ್ಪ್ರಭುವೇ! ಕರುಣಾರೂಪನೇ! ನನ್ನ ಗಂಡನನ್ನು ಜಾಗ್ರತೆಯಾಗಿ ಬದುಕಿಸಿ ಕೊಡುವವನಾಗು.

ಪತಿಹೀನಾ ಚ ಯೊ ನಾರೀ ಪಾಪಿನೀ ಸಾ ಭವಾರ್ಣವೇ ।
ಯಥಾಸ್ಯಂ ಚಕ್ಷುರ್ವಿರತಂ ಪ್ರಾಣಹೀನಾ ಯಥಾ ತನೂಃ ॥ ೧೩೧ ॥

ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ।
ಮಿತಂ ಬಂಧುರ್ಮಿತಂ ಮಾತಾ ಸರ್ವದಾತಾ ಪತಿಃ ಪ್ರಭುಃ ॥ ೧೩೨ ॥

ಇತ್ಯೇವಮುಕ್ತ್ವಾ ಸಾ ದೇವೀ ತತ್ರ ತಸ್ಥೌ ರುರೋದ ಚ ।
ಉವಾಚ ವೃಂದಾಂ ಭಗವಾನ್ಸರ್ವಾತ್ಮಾ ಪ್ರಕೃತೇಃ ಪರಃ ॥ ೧೩೩ ॥

॥ ಶ್ರೀ ಭಗವಾನುವಾಚ ॥

ತ್ವಯೋಽಯುಸ್ತಪಸಾ ಲಬ್ಧಂ ಯಾವದಾಯುಶ್ಚ ಬ್ರಹ್ಮಣಃ ।
ತದೇವ ದೇಹಿ ಧರ್ಮಾಯ ಗೋಲೋಕಂ ಗಚ್ಛ ಸುಂದರಿ ॥ ೧೩೪ ॥

ತನ್ವಾನಯಾ ಚ ತಪಸಾ ಪಶ್ಚಾನ್ಮಾಂ ಚ ಲಭಿಷ್ಯಸಿ ।
ಪಶ್ಚಾದ್ಗೋಲೋಕಮಾಗತ್ಯ ವಾರಾಹೇ ಚ ವರಾನನೇ ।
ವೃಷಭಾನಸುತಾ ತ್ವಂ ಚ ರಾಧಾಚ್ಛಾಯಾ ಭವಿಷ್ಯಸಿ ॥ ೧೩೫ ॥

---

೧೩೧. ಯಾವ ಹೆಂಗಸು ಗಂಡನಿಲ್ಲದವಳಾಗಿರುತ್ತಾಳೋ ಅವಳು ಈ ಸಂಸಾರ ಸಮುದ್ರದಲ್ಲಿ ಪಾಪಿನಿಯಾಗಿರುತ್ತಾಳೆ. ಮತ್ತು ಕಣ್ಣಿಲ್ಲದ ಮುಖದಂತೆಯೂ, ಜೀವವಿಲ್ಲದ ಶರೀರದಂತೆಯೂ ಆಗುತ್ತಾಳೆ.

೧೩೨. ಹೆಂಗಸಿಗೆ ತಂದೆ, ಸೋದರ, ಮಗ, ಬಂಧುಗಳು ಮತ್ತು ತಾಯಿ ಇವರು ಕೊಡುವ ಸುಖವು ಮಿತವಾದುದು, ಸ್ವಾಮಿಯಾದ ಗಂಡನು ಯಾವಾಗಲೂ ಸಕಲ ವಿಧವಾದ ಸುಖಗಳನ್ನೂ ಕೊಡುತ್ತಾನೆ.

೧೩೩. ಈಪ್ರಕಾರ ಹೇಳಿ ಆ ಮೂರ್ತಿದೇವಿಯು ಅಲ್ಲಿಯೇ ನಿಂತುಕೊಂಡು ಅಳುತ್ತಿದ್ದಳು. ಸರ್ವಾತ್ಮನೂ ಪ್ರಕೃತಿಗಿಂತಲೂ ಉತ್ತಮನೂ ಆದ ಆ ಭಗವಂತನು ವೃಂದಾದೇವಿಯನ್ನು ಕುರಿತು ಈ ರೀತಿಯಾಗಿ ಹೇಳಿದನು.

೧೩೪–೧೩೫. ಶ್ರೀ ಭಗವಂತನು ಹೇಳುತ್ತಾನೆ:— ಎಲೈ ಸುಂದರಿಯೇ! ನೀನು ತಪಸ್ಸು ಮಾಡಿ ಬ್ರಹ್ಮಕಲ್ಪದವರೆಗೆ ಪಡೆದ ಆಯುಸ್ಸನ್ನು ಈ ಧರ್ಮನಿಗೆ ಕೊಡುವವಳಾಗು ಮತ್ತು ನೀನು ಗೋಲೋಕಕ್ಕೆ ಹೋಗು. ಈ ಶರೀರದಿಂದಲೇ ಅಲ್ಲಿಗೆ ಹೋಗಿ ಅನಂತರ ನನ್ನನ್ನು ಹೊಂದುವೆ. ಎಲೈ ಸುಂದರಮುಖಿಯೇ! ಗೋಲೋಕಕ್ಕೆ ಬಂದು ಅನಂತರ ಶ್ವೇತವರಾಹಕಲ್ಪದಲ್ಲಿ ನೀನು ರಾಧೆಯ ಛಾಯೆಯಿಂದ ವೃಷಭಾನುವಿನ ಮಗಳಾಗುವೆ.

ಮತ್ಕಲಾಂಶಶ್ಚ ರಾಪಾಣಸ್ತ್ವಾಂ ವಿವಾಹೇ ಗ್ರಹೀಷ್ಯತಿ ।
ಮಾಂ ಲಭಿಷ್ಯಸಿ ರಾಸೇ ಚ ಗೋಪೀಭೀ ರಾಧಯಾ ಸಹ || ೧೩೬ ||

ರಾಧಾ ಶ್ರೀದಾಮಶಾಪೇನ ವೃಷಭಾನುಸುತಾ ಯದಾ ।
ಸಾ ಚೈವ ವಾಸ್ತವೀ ರಾಧಾ ತ್ವಂ ಚ ಛಾಯಾಸ್ವರೂಪಿಣೀ || ೧೩೭ ||

ವಿವಾಹಕಾಲೇ ರಾಪಾಣಸ್ತ್ವಾಂ ಚ ಛಾಯಾಂ ಗ್ರಹೀಷ್ಯತಿ
ತ್ವಾಂ ದತ್ವಾ ವಾಸ್ತವೀ ರಾಧಾ ಸಾಂತರ್ಧಾನಾ ಭವಿಷ್ಯತಿ || ೧೩೮ ||

ರಾಧೈವೇತಿ ವಿಮೂಢಾಶ್ಚ ವಿಜ್ಞಾಸ್ಯಂತಿ ಚ ಗೋಕುಲೇ ।
ಸ್ವಪ್ನೇ ರಾಧಾಪದಾಂಭೋಜಂ ನ ಹಿ ಪಶ್ಯಂತಿ ಬಲ್ಲವಾಃ || ೧೩೯ ||

ಸ್ವಯಂ ರಾಧಾ ಮಮ ಕ್ರೋಡೇ ಛಾಯಾ ರಾಪಾಣಕಾಮಿನೀ ।
ವಿಷ್ಣೋಶ್ಚ ವಚನಂ ಶ್ರುತ್ವಾ ದದಾವಾಯುಶ್ಚ ಸುಂದರೀ || ೧೪೦ ||

---

೧೩೬. ನನ್ನ ಕಲಾಂಶದಿಂದ ಹುಟ್ಟಿದ ರಾಪಾಣನೆಂಬುವನು ನಿನ್ನನ್ನು ಮದುವೆಮಾಡಿಕೊಳ್ಳುತ್ತಾನೆ. ಗೋಪಿಯರೊಂದಿಗೂ ರಾಧೆಯೊಂದಿಗೂ ರಾಸಕ್ರೀಡೆಯನ್ನಾಡುವ ಸಮಯದಲ್ಲಿ ನನ್ನನ್ನು ಪಡೆಯುತ್ತೀಯೆ.

೧೩೭. ರಾಧೆಯು ಶ್ರೀದಾಮನ ಶಾಪದಿಂದ ಯಾವಾಗ ವೃಷಭಾನುವಿನ ಮಗಳಾಗಿ ಹುಟ್ಟುತ್ತಾಳೋ ಅವಳೇ ನಿಜವಾದ ರಾಧೆಯು, ನೀನು ಅವಳ ಛಾಯಾ ಮಾತ್ರಸ್ವರೂಪಳು.

೧೩೮. ಮದುವೆಯ ಸಮಯದಲ್ಲಿ ರಾಪಾಣನು ಛಾಯಾರೂಪಳಾದ ನಿನ್ನನ್ನೇ ಸ್ವೀಕರಿಸುತ್ತಾನೆ. ಆ ನಿಜವಾದ ರಾಧೆಯು ನಿನ್ನನ್ನು ಕೊಟ್ಟು ತಾನು ಮಾಯವಾಗುತ್ತಾಳೆ.

೧೩೯. ಭ್ರಾಂತರಾದ ಗೋಕುಲದ ವಲ್ಲವರೆಲ್ಲರೂ ನಿಜವಾದ ರಾಧೆಯೇ ಇವಳೆಂದು ತಿಳಿದುಕೊಳ್ಳುತ್ತಾರೆ. ಅವರು ಕನಸಿನಲ್ಲಿಯೂ ಕೂಡ ರಾಧೆಯ ಪಾದ ಕಮಲಗಳನ್ನು ನೋಡುವುದಿಲ್ಲ.

೧೪೦. ನಿಜವಾದ ರಾಪಾಣನ ಹೆಂಡತಿಯಾದ ರಾಧೆಯು ನನ್ನ ಎದೆಯಲ್ಲಿರುವವಳಾಗುತ್ತಾಳೆ. ವಿಷ್ಣುವು ಹೇಳಿದ ಮಾತನ್ನು ಕೇಳಿ ಸುಂದರಿಯಾದ ವೃಂದೆಯು ಧರ್ಮನಿಗೆ ಆಯುಸ್ಸನ್ನು ಕೊಟ್ಟಳು.

ಉತ್ತಸ್ಥೌ ಪೂರ್ಣಧರ್ಮಶ್ಚ ತಪ್ತಕಾಂಚನಸನ್ನಿಭಃ ।
ಪೂರ್ವಸ್ಮಾತ್ಸುಂದರಶ್ರೀಮಾನ್ಪ್ರಣನಾಮ ಪರಾತ್ಪರಮ್ ॥ ೧೪೧ ॥

॥ ವೃಂದೋವಾಚ ॥

ದೇವಾಃ ಶೃಣುತ ಮದ್ವಾಕ್ಯಂ ದುರ್ಲಂಘ್ಯಂ ಸಾವಧಾನತಃ ।
ನಹಿ ಮಿಥ್ಯಾಭವೇದ್ವಾಕ್ಯಂ ಮದೀಯಂ ಚ ನಿಶಾಮಯ ॥ ೧೪೨ ॥

ಕ್ಷಯೋ ಭವೇತಿವಾಕ್ಯಂ ಚ ಮಯೋಕ್ತಂ ಕೋಪಭೀತಯಾ ।
ವಾರತ್ರಯಂ ಪುನರ್ವಕ್ತುಂ ವಾರಯಾಮಾಸ ಭಾಸ್ಕರಃ ॥ ೧೪೩ ॥

ಸತ್ಯೇ ಚ ಪರಿಪೂರ್ಣೋಽಯಂ ಯಥಾ ಪೂರ್ವೋ ಯಥಾಧುನಾ ।
ತ್ರಿಪಾದಶ್ಚಾಪಿ ತ್ರೇತಾಯಾಂ ದ್ವಿಪಾದೋ ದ್ವಾಪರೇ ತಥಾ ॥ ೧೪೪ ॥

ಏಕಪಾಧಶ್ಚ ಧರ್ಮೋಽಯಂ ಕಲೇಶ್ಚ ಪ್ರಥಮೇ ಹರೇ ।
ಶೇಷಃ ಕಲಾಷೋಡಶಾಂಶಃ ಪುನಃ ಸತ್ಯೇ ಯಥಾ ಪುರಾ ॥ ೧೪೫ ॥

---

೧೪೧. ಧರ್ಮನು ಪರಿಪೂರ್ಣನಾಗಿ ಕಾಯಿಸಿದ ಚಿನ್ನದಂತೆ ಹೊಳೆಯುತ್ತ, ಮೊದಲಿಗಿಂತಲೂ ಸುಂದರನಾಗಿ ಶಾಂತಿಯಿಂದ ಕೂಡಿ ಮೇಲಕ್ಕೆದ್ದನು. ಮತ್ತು ಪರಾತ್ಪರನಾದ ವಿಷ್ಣುವಿಗೆ ನಮಸ್ಕಾರ ಮಾಡಿದನು.

೧೪೨. ವೃಂದೆಯು ಹೇಳುತ್ತಾಳೆ:— ಓ ದೇವತೆಗಳೇ! ಸಾವಧಾನರಾಗಿ ಕೇಳಿರಿ. ನನ್ನ ಮಾತು ಮೀರಲಸಾಧ್ಯವೂ ಮತ್ತು ಸುಳ್ಳಾಗದುದೂ ಆಗಿದೆ.

೧೪೩. ಕೋಪದಿಂದಲೂ ಭಯದಿಂದಲೂ ಕೂಡಿದ ನಾನು ಮೂರುಸಾರಿ ಕ್ಷಯಿಸು ಎಂದು ಹೇಳಿದೆನು. ನಾಲ್ಕನೇಸಾರಿ ಹೇಳಲು ಪ್ರಾರಂಭಿಸಿದ ನನ್ನನ್ನು ಸೂರ್ಯನು ತಡೆದನು.

೧೪೪. ಈ ಧರ್ಮನು ಸತ್ಯಯುಗ (ಕೃತಯುಗ) ದಲ್ಲಿ ಈ ಹಿಂದೆ ಹೇಗಿದ್ದನೋ ಮತ್ತು ಈಗ ಹೇಗಿರುತ್ತಾನೆಯೋ ಹಾಗೆಯೇ ಸಂಪೂರ್ಣನಾಗಿರಲಿ. ತ್ರೇತಾಯುಗದಲ್ಲಿ ಮೂರು ಕಾಲುಳ್ಳವನಾಗಿರಲಿ. ದ್ವಾಪರಯುಗದಲ್ಲಿ ಎರಡು ಕಾಲುಳ್ಳವನಾಗಿರಲಿ.

೧೪೫. ಮತ್ತು ಈ ಧರ್ಮನು ಕಲಿಯುಗದ ಮೊದಲ ಭಾಗದಲ್ಲಿ ಒಂದು ಕಾಲನಿಂದಿರಲಿ. ಎಲೈ ಹರಿಯೇ! ಉಳಿದ ಕಾಲದಲ್ಲಿ ಹದಿನಾರನೆಯ ಒಂದಂಶದಿಂದ ಮಾತ್ರ ಇರಲಿ, ಮತ್ತೆ ಕೃತಯುಗವು ಬರಲು ಮೊದಲಿನಂತಾಗಲಿ.

ತ್ರಿರ್ನಿರ್ಗತಂ ಮಮ ಮುಖಾತ್ಕ್ಷಯಸ್ತೇನ ತತಃ ಕ್ರಮಾತ್ ।
ಪುನರುಕ್ತೇ ಚ ಮನಸಿ ವಾರಯಾಮಾಸ ಭಾಸ್ಕರಃ ॥ ೧೪೬ ॥

ತೇನೈವ ಹೇತುನಾಯಂ ಚ ಕಲಿಶೇಷೇ ಕಲಾಮಯಃ ।
ತಥಾ ಶಪ್ತಃ ಸ್ಥಿತೋ ದುರ್ಗೇ ಕಲಿಶೇಷೇ ತಥಾ ಧ್ರುವಮ್ ॥ ೧೪೭ ॥

ಏತಸ್ಮಿನ್ನಂತರೇ ನಂದ ದದೃಶುರ್ದೇವತಾ ರಥಮ್ ।
ಗೋಲೋಕಾದಾಗತಂ ವೇಗಾದತೀವ ಸುಂದರಂ ಶುಭಮ್ ॥ ೧೪೮ ॥

ಅಮೂಲ್ಯರತ್ನನಿರ್ಮಾಣ ಹೀರಹಾರಪರಿಷ್ಕೃತಮ್ ।
ಮಣಿಮಾಣಿಕ್ಯ ಮುಕ್ತಾಭಿರ್ವಸ್ತ್ರೈಶ್ಚ ಶ್ವೇತಚಾಮರೈಃ ॥ ೧೪೯ ॥

ವಿಭೂಷಿತಂ ಭೂಷಣೈಶ್ಚ ರುಚಿರೈ ರತ್ನದರ್ಪಣೈಃ ।
ನತ್ವಾ ಹರಿಂ ಹರಂ ವೃಂದಾ ಬ್ರಹ್ಮಾಣಂ ಸರ್ವದೇವತಾಃ ॥ ೧೫೦ ॥

---

೧೪೬. ನನ್ನ ಬಾಯಿಯಿಂದ ಕ್ಷಯವೆಂಬ ಮಾತು ಮೂರುಸಾರಿ ಹೊರಟಿತು. ನಾಲ್ಕನೇ ಸಾರಿ ಹೇಳಲು ಮನಸ್ಸು ಮಾಡಿದಾಗ ಸೂರ್ಯನು ತಡೆದನು. ಆದುದರಿಂದ ಈ ಧರ್ಮನು ಕ್ರಮವಾಗಿ ಕ್ಷೀಣನಾಗಲಿ.

೧೪೭. ಈ ಧರ್ಮನು ಕಲಿಯುಗದ ಬಾಕಿಯ ಕಾಲಗಳಲ್ಲಿ ಕಲಾಮಾತ್ರದಿಂದ ಕೂಡಿ, ನನ್ನ ಶಾಪದ ಪ್ರಭಾವದಿಂದ ಕಷ್ಟದೆಶೆಯಲ್ಲಿರುತ್ತಾನೆ.

೧೪೮. ಎಲೈ ನಂದನೇ! ಈ ಸಮಯದಲ್ಲಿ ಗೋಲೋಕದಿಂದ ಬರುತ್ತಿರುವ ಸುಂದರವೂ, ಮಂಗಳವೂ ಆಗಿರುವ ರಥವನ್ನು ದೇವತೆಗಳು ಕಂಡರು.

೧೪೯–೧೫೧. ಬೆಲೆ ಬಾಳುವ ರತ್ನಗಳಿಂದಲೂ, ಮುತ್ತುಗಳಿಂದಲೂ, ವಸ್ತ್ರಗಳಿಂದಲೂ, ಬಿಳಿಯ ಚಾಮರಗಳಿಂದಲೂ, ಮನೋಹವಾದ ಆಭರಣಗಳಿಂದಲೂ, ರತ್ನಮಯವಾದ ಕನ್ನಡಿಗಳಿಂದಲೂ, ಅಲಂಕೃತವಾದ ವಿಮಾನವನ್ನು ನೋಡಿ, ವೃಂದೆಯು ವಿಷ್ಣು, ಇಂದ್ರ, ಬ್ರಹ್ಮ ಮೊದಲಾದ ಎಲ್ಲ ದೇವತೆಗಳಿಗೂ ನಮಸ್ಕಾರ ಮಾಡಿ, ರಥವನ್ನು ಹತ್ತಿಕೊಂಡು, ಗೋಲೋಕಕ್ಕೆ ಹೊರಟುಹೋದಳು. ಅನಂತರ

ಸಮಾರುಹ್ಯ ರಥಂ ಧೃಷ್ಟ್ವಾ ಗೋಲೋಕಂ ಚ ಜಗಾಮ ಸಾ ।
ದೇವಾ ಜಗ್ಮುಶ್ಚ ಸ್ವಸ್ಥಾನಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೫೧ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ನಾರಾಯಣನಾರದಸಂವಾದೇ
ಶ್ರೀಕೃಷ್ಣಜನ್ಮಖಂಡೇ ಉತ್ತರಾರ್ಧೇ ಭಗವನ್ನಂದಸಂವಾದೇ
ಷಡಶೀತಿತಮೋಽಧ್ಯಾಯಃ.

---

ಅಲ್ಲಿಗೆ ಬಂದಿದ್ದ ದೇವತೆಗಳೆಲ್ಲರೂ, ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು. ಎಲೈ ನಂದನೇ, ಇನ್ನೇನನ್ನು ಕೇಳಲಪೇಕ್ಷಿಸುತ್ತೀಯೆ?

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ನಾರಾಯಣ ನಾರದ ಸಂವಾದದಲ್ಲಿ
ಶ್ರೀ ಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ ಕೃಷ್ಣನಂದ ಸಂವಾದದಲ್ಲಿ
ಎಂಭತ್ತಾರನೇ ಅಧ್ಯಾಯವು ಮುಗಿದುದು.

## ಎಂಭತ್ತಾರನೆಯ ಅಧ್ಯಾಯದ ಸಾರಾಂಶ.

ಸ್ವಾಯಂಭುವ ಮನುವಿನ ವಂಶದಲ್ಲಿ ಕೇದಾರನೆಂಬ ರಾಜನು ಧ್ರುವನ ಮೊಮ್ಮೊಗನಾಗಿ ಜನಿಸಿ ಸಪ್ತದ್ವೀಪಗಳನ್ನು ಆಳಿಕೊಂಡಿದ್ದನು. ಅವನ ರಾಜ್ಯ ಶಾಸನವು ಅನ್ಯಾಧೃಶವಾಗಿದ್ದಿತು. ಧರ್ಮಪರಾಯಣನೂ, ತಪೋನಿರತನೂ, ಆದ ಆ ರಾಜನು ಒಮ್ಮೆ ಯಾಗಮಾಡುತ್ತಿದ್ದಾಗ, ಯಜ್ಞಕುಂಡದಿಂದ ಲಕ್ಷ್ಮೀ ದೇವಿಯು ಮೇಲಕ್ಕೆ ಬಂದು ತನ್ನನ್ನು ಮಗಳಂತೆ ಸ್ವೀಕರಿಸಬೇಕೆಂದು ರಾಜನನ್ನು ಕೇಳಿದಳು. ಕೇದಾರ ರಾಜನು ಸಂತೋಷದಿಂದ ಸ್ವೀಕರಿಸಿ, ವೃಂದಾ ಎಂಬ ಆ ಕನ್ಯೆಯನ್ನು ತನ್ನ ಪತ್ನಿಗೆ ಒಪ್ಪಿಸಿದನು. ಪ್ರಾಪ್ತವಯಸ್ಕಳಾದ ಆ ಕನ್ಯೆಯು ಯಮುನಾ ತೀರದ ತಪೋವನದಲ್ಲಿ ಅನನ್ಯ ನಿಷ್ಠೆಯಿಂದ ತಪಸ್ಸು ಮಾಡಿ ತನಗೆ ಪ್ರತ್ಯಕ್ಷನಾದ ಬ್ರಹ್ಮನಿಂದ ಶ್ರೀ ಕೃಷ್ಣನೇ ತನಗೆ ಪತಿಯಾಗಬೇಕೆಂಬ ವರವನ್ನು ಪಡೆದುಕೊಂಡಳು. ಹೀಗಿರುತ್ತ ಒಮ್ಮೆ ವಸಂತ ಮಾಸದಲ್ಲಿ ನದೀತೀರದಲ್ಲಿ ಈ ವೃಂದೆಯು ವಿಹರಿಸುತ್ತಿದ್ದಾಗ, ಇವಳ ಮನೋನಿಷ್ಠೆಯನ್ನು ಪರೀಕ್ಷಿಸಲೋಸುಗ, ಧರ್ಮದೇವನು ಬ್ರಾಹ್ಮಣರೂಪದಿಂದ ಅವಳಲ್ಲಿಗೆ ಬಂದು ತನ್ನನ್ನು ವರಿಸಬೇಕೆಂದು ಕೇಳಿದನು. ಶ್ರೀ ಕೃಷ್ಣನಲ್ಲಿ ಅನನ್ಯ ಪ್ರೇಮವನ್ನಿಟ್ಟಿದ್ದ ಆ ಕನ್ಯೆಯು ಬ್ರಾಹ್ಮಣನ ಮಾತುಗಳನ್ನು ಧಿಕ್ಕರಿಸಿ ಅವನು ಧರ್ಮದೇವನೆಂದರಿಯದೆ ಅವನು ಕ್ಷೀಣನಾಗುವಂತೆ ಶಪಿಸಿದಳು. ಆಗ ಬ್ರಹ್ಮಾದಿ ಸಕಲ ದೇವತೆಗಳೂ ಅಲ್ಲಿಗೆ ಬಂದು ಆ ಪತಿವ್ರತೆಯನ್ನು ಪ್ರಾರ್ಥಿಸಿಕೊಂಡನಂತರ, ಧರ್ಮದೇವನು ಕೃತಯುಗದಲ್ಲಿ ಮಾತ್ರ ಪರಿಪೂರ್ಣ ವಾಗಿರುವಂತೆಯೂ, ತ್ರೇತಾಯುಗದಲ್ಲಿ ಮೂರು ಪಾದಗಳಿಂದಲೂ, ದ್ವಾಪರಯುಗ ದಲ್ಲಿ ಎರಡು ಪಾದಗಳಿಂದಲೂ, ಕಲಿಯುಗದ ಆದಿಯಲ್ಲಿ ಒಂದು ಪಾದದಿಂದಲೂ ಇದ್ದು ಕ್ರಮವಾಗಿ ಕ್ಷೀಣಿಸುವಂತೆಯೂ ಅನುಗ್ರಹಿಸಿದಳು. ಶ್ರೀ ಕೃಷ್ಣಪರಮಾ ತ್ಮನು ಆ ಕನ್ಯೆಯ ನಿಷ್ಠೆಗೆ ಮೆಚ್ಚಿ ಶ್ವೇತವರಾಹಕಲ್ಪದಲ್ಲಿ ರಾಧೆಯ ಛಾಯೆ ಯಿಂದ ವೃಷಭಾನುವಿನ ಮಗಳಾಗಿ ಜನಿಸಿ ತನ್ನನ್ನು ವರಿಸುವಂತೆ ಅವಳಿಗೆ ಅನು ಗ್ರಹಿಸಿದನು. ಕೂಡಲೇ ಗೋಲೋಕದಿಂದ ಬಂದ ದಿವ್ಯವಾದ ವಿಮಾನವನ್ನೇರಿ ಆ ವೃಂದೆಯು ಶ್ರೀಕೃಷ್ಣನ ಸನ್ನಿಧಿಗೆ ಸೇರಿದಳು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಸಪ್ತಾಶೀತಿತಮೋಽಧ್ಯಾಯಃ ||

|| ನಂದ ಉವಾಚ ||

ತ್ವಾಂ ಜ್ಞಾತುಂ ನಹಿ ಶಕ್ತಾಶ್ಚ ವೇದಾ ವೇದಪ್ರಭುಂ ಸ್ವಯಮ್ ।
ಸುರಾ ಬ್ರಹ್ಮೇಶಶೇಷಾದ್ಯಾ ಮುನಿಸಿದ್ಧಾದಯಸ್ತಥಾ || ೧ ||

ಕೋ ಭವಾನಿತಿ ವಿಜ್ಞಾತುಂ ಪರಂ ಕೌತೂಹಲಂ ಮಮ ।
ತತ್ಸರ್ವಂ ಸ್ವಾತ್ಮಯಾಥಾರ್ಥ್ಯಂ ನಿರ್ಜನೇ ಕಥಯ ಪ್ರಭೋ || ೨ ||

|| ಶ್ರೀ ನಾರಾಯಣ ಉವಾಚ ||

ಏತಸ್ಮಿನ್ನಂತರೇ ತತ್ರ ಕೃಷ್ಣಂ ದ್ರಷ್ಟುಂ ಮುನೀಶ್ವರಾಃ ।
ಆಜಗ್ಮುಃ ಸಹಸಾ ವತ್ಸ ಜ್ವಲಂತೋ ಬ್ರಹ್ಮತೇಜಸಾ || ೩ ||

---

### ಎಂಭತ್ತೇಳನೆಯ ಅಧ್ಯಾಯವು.

೧-೨. ನಂದನು ಹೇಳುತ್ತಾನೆ:—ಎಲೈ ಪ್ರಭುವೇ! ವೇದಗಳಿಗೂ ಒಡೆಯನಾದ ನಿನ್ನನ್ನು ವೇದಗಳು ಬ್ರಹ್ಮ ಮಹೇಶ್ವರ ಶೇಷ ಮುಂತಾದ ದೇವತೆಗಳೂ, ಮತ್ತು ಮುನಿಗಳು ಸಿದ್ಧರೇ ಮುಂತಾದವರು ತಿಳಿಯಲು ಶಕ್ತಿಯಿಲ್ಲದವರಾಗಿರುತ್ತಾರೆ. ನೀನು ಯಾರೆಂಬುದನ್ನು ತಿಳಿಯಬೇಕೆಂದು ನನಗೆ ಬಹಳ ಕುತೂಹಲ ಉಂಟಾಗಿದೆ. ಈ ನಿರ್ಜನ ಪ್ರದೇಶದಲ್ಲಿ ನಿನ್ನ ನಿಜಾಂಶವನ್ನು ಸಂಪೂರ್ಣವಾಗಿ ನನಗೆ ಹೇಳುವವನಾಗು.

೩. ಶ್ರೀ ನಾರಾಯಣನು ಹೇಳುತ್ತಾನೆ:— ಎಲೈ ಮಗುವೇ ನಾರದನೇ! ಈ ಸಂದರ್ಭಕ್ಕೆ ಸರಿಯಾಗಿ ಕೃಷ್ಣನನ್ನು ನೋಡುವುದಕ್ಕೋಸ್ಕರ ಬ್ರಹ್ಮತೇಜಸ್ಸಿನಿಂದ ಪ್ರಕಾಶಮಾನರಾದ ಮುನಿಶ್ರೇಷ್ಠರು ಅಕಸ್ಮಾತ್ತಾಗಿ ಬಂದರು.

ಪುಲಹಶ್ಚ ಪುಲಸ್ತ್ಯಶ್ಚ ಕ್ರತುಶ್ಚ ಭೃಗುರಂಗಿರಾಃ ।
ಪ್ರಚೇತಾಶ್ಚ ವಸಿಷ್ಠಶ್ಚ ದುರ್ವಾಸಾಃ ಕಣ್ವ ಏವ ಚ ॥ ೪ ॥

ಕಾತ್ಯಾಯನಃ ಪಾಣಿನಿಶ್ಚ ಕಣಾದೋ ಗೌತಮಸ್ತಥಾ ।
ಸನಕಶ್ಚಸನಂದಶ್ಚ ತೃತೀಯಶ್ಚ ಸನಾತನಃ ॥ ೫ ॥

ಕಪಿಲಶ್ಚಾಸುರಿಶ್ಚೈವ ವಾಯುಃ ಪಂಚಶಿಖಸ್ತಥಾ ।
ವಿಶ್ವಾಮಿತ್ರೋ ವಾಲ್ಮೀಕಿಶ್ಚ ಕಶ್ಯಪಶ್ಚ ಪರಾಶರಃ ॥ ೬ ॥

ವಿಭಾಂಡಕೋ ಮರೀಚಿಶ್ಚ ಶುಕ್ರೋತ್ರಿಶ್ಚ ಬೃಹಸ್ಪತಿಃ ।
ಗಾರ್ಗ್ಯಶ್ಚಾಪಿ ತಥಾ ವಾತ್ಸ್ಯೋ ವ್ಯಾಸಶ್ಚ ಜೈಮಿನಿಸ್ತಥಾ ॥ ೭ ॥

ಮಿತವಾಗೃಷ್ಯಶೃಂಗಶ್ಚ ಯಾಜ್ಞವಲ್ಕ್ಯಃ ಶುಕಸ್ತಥಾ ।
ಸೌಭರಿಃ ಶುದ್ಧಜಟಿಲೋ ಭರದ್ವಾಜಃ ಸುಭದ್ರಕಃ ॥ ೮ ॥

ಮಾರ್ಕಂಡೇಯೋ ಲೋಮಶಶ್ಚ ಆಸುರಿಶ್ಚ ವಿಟಂಕಣಃ ।
ಅಷ್ಟಾವಕ್ರಃ ಶತಾನಂದೋ ವಾಮದೇವಶ್ಚ ಭಾಗುರಿಃ ॥ ೯ ॥

ಸಂವರ್ತಶ್ಚಾಪ್ಯುತಥ್ಯಶ್ಚ ನರೋಹಂ ಚಾಪಿ ನಾರದಃ ।
ಜಾಬಾಲಿಃ ಪರ್ಶುರಾಮಶ್ಚಾಪ್ಯಗಸ್ತ್ಯಃ ಪೈಲ ಏವ ಚ ॥ ೧೦ ॥

ಯುಧಾಮನ್ಯುರ್ಗೌರಮುಖೋಪ್ಯುಪಮನ್ಯುಃ ಶ್ರುತಶ್ರವಾಃ ।
ಮೈತ್ರೇಯಶ್ಚ್ಯವನಶ್ಚೈವ ವರರುಚ್ಯೃಷಿರೇವ ಚ ॥ ೧೧ ॥

---

೪–೧೧. ಯಾರುಯಾರೆಂದರೆ:— ಪುಲಹ, ಪುಲಸ್ತ್ಯ, ಭೃಗು, ಅಂಗಿರಸ, ಪ್ರಚೇತ, ವಸಿಷ್ಠ, ದೂರ್ವಾಸ, ಕಣ್ವ, ಕಾತ್ಯಾಯನ, ಪಾಣಿನಿ, ಕಣಾದ, ಗೌತಮ, ಸನಕ, ಸನಂದನ, ಮೂರನೆಯವನಾದ ಸನಾತನ, ಕಪಿಲ, ಆಸುರಿ, ವಾಯು, ಪಂಚಶಿಖ, ವಿಶ್ವಾಮಿತ್ರ, ವಾಲ್ಮೀಕಿ, ಕಶ್ಯಪ, ಪರಾಶರ, ವಿಭಾಂಡಕ, ಮರೀಚಿ, ಶುಕ್ರ, ಅತ್ರಿ, ಬೃಹಸ್ಪತಿ, ಗಾರ್ಗ್ಯ, ವಾತ್ಸ್ಯ, ವ್ಯಾಸ, ಜೈಮಿನಿ, ಮಿತವಾಕ್, ಋಷ್ಯಶೃಂಗ, ಯಾಜ್ಞವಲ್ಕ್ಯ, ಶುಕ, ಸೌಭರಿ, ಶುದ್ಧಜಟಿಲ, ಭರದ್ವಾಜ, ಸುಭದ್ರಕ, ಮಾರ್ಕಂಡೇಯ, ಲೋಮಶ, ವಿಟಂಕಣ, ಅಷ್ಟಾವಕ್ರ, ಶತಾನಂದ, ಭಾಗುರಿ, ಸಂವರ್ತ, ಉತಥ್ಯ, ನರನಾರಾಯಣರು, ನಾರದ, ಜಾಬಾಲಿ, ಪರಶುರಾಮ, ಅಗಸ್ತ್ಯ, ಪೈಲ, ಮೈತ್ರೇಯ, ಚ್ಯವನ, ವರರುಚಿ—ಇವರೆಲ್ಲರೂ ಬಂದರು.

ತಾನ್ದೃಷ್ಟ್ವಾ ಸಹಸೋತ್ಥಾಯ ನಮಸ್ಕೃತ್ಯ ಪುಟಾಂಜಲಿಃ ।
ಸಿಂಹಾಸನೇಷು ರಮ್ಯೇಷು ವಾಸಯಾಮಾಸ ಸಾದರಮ್ ॥ ೧೨ ॥

ಪೂಜಯಾಮಾಸ ವಿಧಿವತ್ಕುಶಲಪ್ರಶ್ನಪೂರ್ವಕಮ್ ।
ಪರಸ್ಪರಂ ಚ ಸಂಭಾಷ್ಯ ಮಧ್ಯೇ ಕೃಷ್ಣ ಉವಾಸ ಸಃ ॥ ೧೩ ॥

ಏತಸ್ಮಿನ್ನಂತರೇ ಕೃಷ್ಣಸ್ತೇಜೋರಾಶಿಂ ದದರ್ಶ ಸಃ ।
ದದೃಶುಸ್ತೇ ಚ ಮುನಯೋಽಪ್ಯಾಕಾಶೇ ಚ ಸಮುಜ್ಜ್ವಲಮ್ ॥ ೧೪ ॥

ತೇಜಸೋಽಭ್ಯಂತರೇ ವತ್ಸ ಕುಮಾರಂ ಕನಕಪ್ರಭಮ್ ।
ಯಥೈವ ಪಂಚವರ್ಷೀಯಂ ನಗ್ನಂ ಬಾಲಕಮೀಪ್ಸಿತಮ್ ॥ ೧೫ ॥

ಆವಿರ್ಬಭೂವ ಸಹಸಾ ಸಭಾಮಧ್ಯೇ ಚ ನಾರದ ।
ಉತ್ತಿಷ್ಠಮಾನಂ ಸಹಸಾ ತದ್ದೃಷ್ಟ್ವಾ ಮುನಿಪುಂಗವಾಃ ॥ ೧೬ ॥

ಪ್ರಣೇಮುರ್ಮುನಯಃ ಸರ್ವೇ ಶೌರಿಶ್ಚ ಪ್ರಣನಾಮ ತಮ್ ।
ಸಸ್ಮಿತಂ ಸ್ನಿಗ್ಧನೇತ್ರಂ ಚ ಕೃತ್ವಾ ಯುಕ್ತಿಂ ಚ ಸಾದರಮ್ ॥ ೧೭ ॥

---

೧೨. ಅವರುಗಳನ್ನು ನೋಡಿ ಕೃಷ್ಣನು ಬೇಗನೆ ಎದ್ದು ನಮಸ್ಕಾರಮಾಡಿ, ಕೈಗಳನ್ನು ಜೋಡಿಸಿಕೊಂಡು, ವಿಶ್ವಾಸಪೂರ್ವಕವಾಗಿ ಮನೋಹರವಾದ ಸಿಂಹಾಸನಗಳಲ್ಲಿ ಕುಳ್ಳಿರಿಸಿದನು.

೧೩. ಮತ್ತು ನಿಯಮಾನುಸಾರವಾಗಿ ಪೂಜೆ ಮಾಡಿ, ಕುಶಲ ಪ್ರಶ್ನೆಯನ್ನು ಮಾಡುತ್ತ, ಎಲ್ಲರೊಡನೆಯೂ ಮಾತನಾಡುತ್ತ ಕೃಷ್ಣನು ಸಭೆಯ ಮಧ್ಯದಲ್ಲಿ ಕುಳಿತಿದ್ದನು.

೧೪. ಈ ಸಮಯದಲ್ಲಿ ಶ್ರೀ ಕೃಷ್ಣನು ಆಕಾಶದಲ್ಲಿ ಪ್ರಕಾಶಿಸುತ್ತಿರುವ ಒಂದು ಕಾಂತಿಯ ರಾಶಿಯನ್ನು ನೋಡಿದನು. ಆ ಮುನಿಗಳೂ ಕೂಡ ನೋಡಿದರು.

೧೫. ಎಲೈ ಮಗುವೇ! ನಾರದನೇ! ಆ ಕಾಂತಿಯ ಮಧ್ಯದಲ್ಲಿ ಚಿನ್ನದಂತೆ ಕಂಗೊಳಿಸುತ್ತಿರುವ ಐದುವರುಷದವನಂತೆ ಎಲ್ಲರಿಗೂ ಮೆಚ್ಚಿಗೆಯಾದ ನಗ್ನ ಬಾಲಕನನ್ನೂ ಕಂಡರು.

೧೬–೧೭ ಎಲೈ ನಾರದನೇ! ಆ ಕುಮಾರನು ಸಭೆಯ ಮಧ್ಯದಲ್ಲಿ ಕಾಣಿಸಿಕೊಂಡನು. ಬಂದು ನಿಂತಿರುವ ಅವನನ್ನು ನೋಡಿ ಎಲ್ಲ ಮುನಿಶ್ರೇಷ್ಠರೂ ನಮಸ್ಕಾರ ಮಾಡಿದರು. ಶ್ರೀ ಕೃಷ್ಣನೂ ಕೂಡ ನಮಸ್ಕರಿಸಿದನು. ಮಂದಹಾಸದಿಂದ ಕೂಡಿದ ಸ್ನೇಹಮಯವಾದ ನೋಟವುಳ್ಳ ಅವನನ್ನು ಗೌರವದಿಂದ ಸತ್ಕರಿಸಿದನು.

ಸ ಸರ್ವಾನಾಶಿಷಂ ಕೃತ್ವಾ ಸಮುವಾಸ ಚ ಸಂಸದಿ ।
ಉವಾಚ ತಾಂಶ್ಚ ಶೌರಿಂ ಚ ಭಗವಂತಂ ಸನಾತನಮ್ ॥ ೧೮ ॥

॥ ಸನತ್ಕುಮಾರ ಉವಾಚ ॥

ಭದ್ರಂ ವೋ ಮುನಯಃ ಶಶ್ವತ್ತಪಸಾಂ ಫಲಮೀಪ್ಸಿತಮ್ ।
ಕೃಷ್ಣಸ್ಯ ಕುಶಲಪ್ರಶ್ನಂ ಶಿವಬೀಜಸ್ಯ ನಿಷ್ಫಲಮ್ ॥ ೧೯ ॥

ಸಾಂಪ್ರತಂ ಕುಶಲಂ ವಶ್ಚ ದರ್ಶನಂ ಪರಮಾತ್ಮನಃ ।
ಭಕ್ತಾನುರೋಧಾದ್ದೇಹಸ್ಯ ಪರಸ್ಯ ಪ್ರಕೃತೇರಪಿ ॥ ೨೦ ॥

ನಿರ್ಗುಣಸ್ಯ ನಿರೀಹಸ್ಯ ಸರ್ವಬೀಜಸ್ಯ ತೇಜಸಾ ।
ಭೂರಾವತರಣಾಯೈವ ಚಾವಿರ್ಭೂತಸ್ಯ ಸಾಂಪ್ರತಮ್ ॥ ೨೧ ॥

॥ ಶ್ರೀ ಕೃಷ್ಣ ಉವಾಚ ॥

ಶರೀರಧಾರಿಣಶ್ಚಾಪಿ ಕುಶಲಪ್ರಶ್ನಮೀಪ್ಸಿತಮ್ ।
ತತ್ಕಥಂ ಕುಶಲಪ್ರಶ್ನಂ ಮಯಿ ವಿಪ್ರ ನ ವಿದ್ಯತೇ ॥ ೨೨ ॥

---

೧೮. ಅವನು ಎಲ್ಲರಿಗೂ ಆಶೀರ್ವಾದವನ್ನು ಮಾಡಿ ಸಭೆಯ ಮಧ್ಯದಲ್ಲಿ ಬಂದು ಕುಳಿತನು. ಮತ್ತು ಆ ಮುನಿಗಳನ್ನೂ, ಶಾಶ್ವತನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಕೃಷ್ಣನನ್ನೂ ಕುರಿತು ಹೇಳತೊಡಗಿದನು.

೧೯. ಸನತ್ಕುಮಾರನು ಹೇಳುತ್ತಾನೆ:— ಎಲೈ ಮುನಿಗಳೇ! ನಿಮಗೆಲ್ಲ ಸರ್ವದಾ ಕ್ಷೇಮವೇ? ನಿಮ್ಮ ತಪಸ್ಸಿನ ಇಷ್ಟವಾದ ಫಲವನ್ನು ನೀವು ಹೊಂದಿರುವಿರಷ್ಟೇ? ಸಕಲ ಮಂಗಳಗಳಿಗೂ ಕಾರಣನಾದ ಕೃಷ್ಣನನ್ನು ಕುರಿತು ಕುಶಲಪ್ರಶ್ನೆ ಮಾಡುವುದು ವ್ಯರ್ಥವು.

೨೦–೨೧. ಈಗ ಭಕ್ತರ ಅಧೀನನಾಗಿ ಶರೀರವನ್ನು ಧರಿಸಿರುವ ಪ್ರಕೃತಿಗಿಂತಲೂ ಉತ್ತಮನಾದ ಗುಣಗಳ ಸಂಬಂಧವಿಲ್ಲದವನೂ, ಆಶೆಯಿಲ್ಲದವನೂ, ಸಮಸ್ತಕ್ಕೂ ಕಾರಣನೂ, ಪ್ರಕಾಶಮಾನನೂ, ಭೂಮಿಯ ಭಾರವನ್ನಿಳುಹಲೋಸ್ಕರ ಅವತಾರ ಮಾಡಿರುವ ಪರಮಾತ್ಮನ ಸಂದರ್ಶನವೆಂಬುದು ಈಗ ನಿಮಗೆಲ್ಲ ಕ್ಷೇಮವನ್ನುಂಟುಮಾಡುತ್ತಲಿದೆ.

೨೨. ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ಬ್ರಾಹ್ಮಣನೇ! ಶರೀರವನ್ನು ಪಡೆದವನಿಗೆಲ್ಲ ಕುಶಲ ಪ್ರಶ್ನೆಯು ಇಷ್ಟವಾದುದು. ಹೀಗಿರುವಲ್ಲಿ ನನ್ನ ವಿಷಯದಲ್ಲಿ ಕುಶಲಪ್ರಶೆಯು ಹೇಗೆ ಅಯುಕ್ತವಾಗುತ್ತದೆ ?

|| ಸನತ್ಕುಮಾರ ಉವಾಚ ||

ಶರೀರೇ ಪ್ರಾಕೃತೇ ನಾಥ ಸತತಂ ಚ ಶುಭಾವಹಮ್ ।
ನಿತ್ಯದೇಹೇ ಕ್ಷೇಮಬೀಜೇ ಶಿವಪ್ರಶ್ನಮನರ್ಥಕಮ್ || ೨೪ ||

|| ಶ್ರೀ ಭಗವಾನುವಾಚ ||

ಯೋಯೋ ವಿಗ್ರಹಕಾರೀ ಚ ಸ ಚ ಪ್ರಾಕೃತಿಕಃ ಸ್ಮೃತಃ ।
ದೇಹೋ ನ ವಿದ್ಯತೇ ವಿಪ್ರ ತಾಂ ನಿತ್ಯಾಂ ಪ್ರಕೃತಿಂ ವಿನಾ || ೨೪ ||

|| ಸನತ್ಕುಮಾರ ಉವಾಚ ||

ರಕ್ತಬಿಂದೂದ್ಭವಾ ದೇಹಾಸ್ತೇ ಚ ಪ್ರಾಕೃತಿಕಾಃ ಸ್ಮೃತಾಃ ।
ಕಥಂ ಪ್ರಕೃತಿನಾಥಸ್ಯ ಬೀಜಸ್ಯ ಪ್ರಾಕೃತಂ ವಪುಃ || ೨೫ ||

ಸರ್ವಬೀಜಸ್ಯ ಸರ್ವಾದಿರ್ಭವಾಂಶ್ಚ ಭಗವಾನ್ಸ್ವಯಂ ।
ಸರ್ವೇಷಾಮವತಾರಾಣಾಂ ಪ್ರಧಾನಂ ಬೀಜಮವ್ಯಯಮ್ || ೨೬ ||

---

೨೩. ಸನತ್ಕುಮಾರನು ಹೇಳುತ್ತಾನೆ:— ಎಲೈ ಪ್ರಭುವೇ! ಪ್ರಕೃತಿಯಿಂದುಂಟಾದ (ಅನಿತ್ಯ) ಶರೀರದಲ್ಲಿ ಕುಶಲಪ್ರಶ್ನೆಯು ಯಾವಾಗಲೂ ಶುಭಕರವಾದುದು. ಕ್ಷೇಮಗಳಿಗೆ ಕಾರಣವಾದ ನಿತ್ಯ (ನಾಶವಿಲ್ಲದ) ದೇಹದ ವಿಷಯದಲ್ಲಿ ಸುಖಪ್ರಶ್ನೆಯು ಪ್ರಯೋಜನವಿಲ್ಲದುದು.

೨೪. ಶ್ರೀ ಭಗವಂತನು ಹೇಳುತ್ತಾನೆ:— ಎಲೈ ಬ್ರಾಹ್ಮಣನೇ! ಯಾವ ಯಾವನು ಶರೀರವನ್ನು ಧಾರಣೆ ಮಾಡುತ್ತಾನೋ ಅವನವನೆಲ್ಲ ಅನಿತ್ಯಶರೀರಿಯೆಂಬುದಾಗಿ ಹೇಳಲ್ಪಡುತ್ತಾನೆ. ನಿತ್ಯಳಾದ ಪ್ರಕೃತಿಯನ್ನು ಬಿಟ್ಟು ನಿತ್ಯದೇಹವೆಂಬುದು ಮತ್ತೆಲ್ಲಿಯೂ ಇರುವುದಿಲ್ಲ.

೨೫. ಸನತ್ಕುಮಾರನು ಹೇಳುತ್ತಾನೆ:— ರಕ್ತಬಿಂದುವಿನಿಂದ ಹುಟ್ಟಿದ ದೇಹಗಳೆಲ್ಲವೂ ಪ್ರಾಕೃತಗಳೆನಿಸುತ್ತವೆ. ಪ್ರಕೃತಿಗೂ ಒಡೆಯನಾಗಿ, ಸಕಲಕ್ಕೂ ಕಾರಣನಾಗಿರುವವನ ದೇಹವು ಹೇಗೆತಾನೇ ಪ್ರಾಕೃತಶರೀರವೆನಿಸುತ್ತದೆ?

೨೬. ಷಡ್ಗುಣೈಶ್ವರ್ಯಸಂಪನ್ನನಾದ ನೀನು ಸಕಲಕ್ಕೂ ಆದಿಯೂ, ಸಕಲಕ್ಕೂ ಕಾರಣನೂ ಆಗಿರುವೆ. ಮತ್ತು ಸಮಸ್ತ ಅವತಾರಗಳಿಗೂ ನಾಶರಹಿತವಾದ ಮುಖ್ಯವಾದ ಕಾರಣನಾಗಿರುವೆ.

ಕೃತ್ವಾ ವದಂತಿ ವೇದಾಶ್ಚ ನಿತ್ಯಂ ನಿತ್ಯಂ ಸನಾತನಮ್ ।
ಜ್ಯೋತಿಃಸ್ವರೂಪಂ ಪರಮಂ ಪರಮಾತ್ಮಾನಮೀಶ್ವರಮ್ ॥ ೨೭ ॥

ಮಾಯಯಾ ಸಗುಣಂ ಚೈವ ಮಾಯೇಶಂ ನಿರ್ಗುಣಂ ಪರಮ್ ।
ಪ್ರವದಂತಿ ಚ ವೇದಾಂಗಾಸ್ತಥಾ ವೇದವಿದಃ ಪ್ರಭೋ ॥ ೨೮ ॥

॥ ಶ್ರೀ ಕೃಷ್ಣ ಉವಾಚ ॥

ಸಾಂಪ್ರತಂ ವಾಸುದೇವೋಽಹಂ ರಕ್ತವೀರ್ಯಾಶ್ರಿತಂ ವಪುಃ ।
ಕಥಂ ನ ಪ್ರಾಕೃತೋ ವಿಪ್ರ ಶಿವಪ್ರಶ್ನಮಭೀಪ್ಸಿತಮ್ ॥ ೨೯ ॥

॥ ಸನತ್ಕುಮಾರ ಉವಾಚ ॥

ವಾಸುಃ ಸರ್ವನಿವಾಸಶ್ಚ ವಿಶ್ವಾನಿ ಯಸ್ಯ ಲೋಮಸು ।
ತಸ್ಯದೇಹಃ ಪರಂ ಬ್ರಹ್ಮ ವಾಸುದೇವ ಇತೀರಿತಃ ॥ ೩೦ ॥

---

೨೭. ಹೀಗೆ ತಿಳಿದುಕೊಂಡು ಯಾವಾಗಲೂ ವೇದಗಳೂ ಕೂಡ ನಿನ್ನನ್ನು ನಿತ್ಯನೆಂದೂ, ಪುರಾತನನೆಂದೂ, ಉತ್ತಮವಾದ ಜ್ಯೋತಿಸ್ಸ್ವರೂಪನೆಂದೂ, ಪರಮಾತ್ಮನೆಂದೂ, ಸರ್ವಪ್ರಭುವೆಂದೂ ಹೊಗಳುತ್ತವೆ.

೨೮. ಎಲೈ ಸ್ವಾಮಿಯೇ! ವೇದವನ್ನು ತಿಳಿದವರು ಮತ್ತು ವೇದಾಂಗ(ತ)ಗಳೂ ಕೂಡ ನಿನ್ನನ್ನು ಮಾಯಾಸಂಬಂಧದಿಂದ ಸಗುಣನೆಂದೂ, ಮಾಯೆಗೂ ಅಧಿಪತಿಯಾಗಿರುವುದರಿಂದ ನಿರ್ಗುಣನೂ ಉತ್ತಮನೂ ಎಂದು ಹೇಳುತ್ತವೆ.

೨೯. ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ಬ್ರಾಹ್ಮಣನೇ! ಈಗ ನಾನು ವಸುದೇವನ ಮಗನಾಗಿರುವೆನು. ಈ ನನ್ನ ಶರೀರವು ರಕ್ತವೀರ್ಯ ಇವುಗಳಿಂದ ಕೂಡಿದುದಾಗಿದೆ. ಆದುದರಿಂದ ಈ ಶರೀರವು ಹೇಗೆ ಪ್ರಾಕೃತವೆನಿಸುವುದಿಲ್ಲ? ಅಪೇಕ್ಷಿತವಾದ ಕುಶಲಪ್ರಶ್ನೆಯು ತಾನೆ ಹೇಗೆ ಅನುಚಿತವಾಗುತ್ತದೆ?

೩೦. ಸನತ್ಕುಮಾರನು ಹೇಳುತ್ತಾನೆ:— ವಾಸು ಎಂದರೆ ಸಕಲಕ್ಕೂ ವಾಸಸ್ಥಾನವೆಂದರ್ಥವು. ಯಾವ ಪರಬ್ರಹ್ಮನ ರೋಮಕೂಪಗಳಲ್ಲಿ ಸಕಲ ಪ್ರಪಂಚಗಳೂ ವಾಸಮಾಡುತ್ತಲಿವೆಯೋ ಅಂತಹವನ ದೇಹವನ್ನೇ ವಾಸುದೇವನೆಂದು ಹೇಳುತ್ತಾರೆ.

ವಾಸುದೇವೇತಿ ತನ್ನಾಮ ವೇದೇಷು ಚ ಚತುರ್ಷು ಚ ।
ಪುರಾಣೇಷ್ವಿತಿಹಾಸೇಷು ಯಾತ್ರಾದಿಷು ಚ ದೃಶ್ಯತೇ ॥ ೩೦ ॥

ರಕ್ತವೀರ್ಯಾಶ್ರಿತೋ ದೇಹಃ ಕ್ವ ತೇ ವೇದೇ ನಿರೂಪಿತಃ ।
ಸಾಕ್ಷಿಣೋ ಮುನಯಶ್ಚೈವ ಧರ್ಮಃ ಸರ್ವತ್ರ ಏವ ಚ ।
ಸಾಕ್ಷಿಣೋ ಮಮ ವೇದಾಶ್ಚ ರವಿಚಂದ್ರೌ ಚ ಸಾಂಪ್ರತಮ್ ॥ ೩೧ ॥

॥ ಭೃಗುರುವಾಚ ॥

ಸತ್ಯಂ ವದಸಿ ವಿಪ್ರೇಂದ್ರ ತ್ವಮೇವ ವೈಷ್ಣವಾಗ್ರಣೀಃ ।
ಸ್ವಾಗತಂ ಕುಶಲಂ ಶಶ್ವತ್ಕಿನ್ನಿಮಿತ್ತಮಿಹಾಗತಃ ॥ ೩೨ ॥

॥ ಸನತ್ಕುಮಾರ ಉವಾಚ ॥

ಶ್ರೂಯತಾಂ ಮುನಯಃ ಸರ್ವೇ ಶ್ರೂಯತಾಂ ಕೃಷ್ಣ ಸಾಂಪ್ರತಮ್ ।
ಅಹೋ ಯೇನ ನಿಮಿತ್ತೇನ ಚಾತಿಶೀಘ್ರಮಿಹಾಗತಃ ॥ ೩೩ ॥

---

೩೦. ವಾಸುದೇವನೆಂಬ ಆ ಹೆಸರು ನಾಲ್ಕು ವೇದಗಳಲ್ಲಿಯೂ, ಪುರಾಣಗಳಲ್ಲಿಯೂ. ಇತಿಹಾಸಗಳಲ್ಲಿಯೂ, ತೀರ್ಥಯಾತ್ರಾಪ್ರಕರಣಗಳಲ್ಲಿಯೂ ಕೂಡ ಹೇಳಲ್ಪಟ್ಟಿರುತ್ತದೆ.

೩೧. ನಿನ್ನ ಶರೀರವು ರಕ್ತ ವೀರ್ಯಗಳಿಂದ ಕೂಡಿದುದು ವೇದದಲ್ಲಿ ಎಲ್ಲಿ ನಿರೂಪಿತವಾಗಿದೆ? ಈ ಮುನಿಗಳೆಲ್ಲರೂ ಸಾಕ್ಷಿಗಳಾಗಿರುತ್ತಾರೆ. ಸರ್ವವ್ಯಾಪಿಯಾದ ಧರ್ಮನೂ ಸಾಕ್ಷಿಯಾಗಿರುವನು. ವೇದಗಳೂ ಸೂರ್ಯ ಚಂದ್ರರೂ ಕೂಡ ಈ ವಿಷಯದಲ್ಲಿ ನನಗೆ ಸಾಕ್ಷಿಗಳಾಗಿರುವರು.

೩೨. ಭೃಗುವು ಹೇಳುತ್ತಾನೆ:— ಎಲೈ ಬ್ರಾಹ್ಮಣಶ್ರೇಷ್ಠನೇ! ನೀನು ನಿಜವಾದ ಮಾತನ್ನು ಹೇಳುತ್ತಿರುವೆ. ಅಲ್ಲದೆ ನೀನೇ ವಿಷ್ಣುಭಕ್ತರಲ್ಲೆಲ್ಲ ಶ್ರೇಷ್ಠನಾದವನು. ನಿನಗೆ ಸುಖಾಗಮನವೇ? ಮತ್ತು ಯಾವಾಗಲೂ ಕುಶಲವೇ? ನೀನು ಯಾವ ಕೆಲಸದ ಸಲುವಾಗಿ ಇಲ್ಲಿಗೆ ಬಂದಿರುವೆ? ಹೇಳು.

೩೩. ಸನತ್ಕುಮಾರನು ಹೇಳುತ್ತಾನೆ:—ಎಲೈ ಸಕಲ ಮುನಿಗಳೇ! ಕೇಳಿರಿ. ಎಲೈ ಕೃಷ್ಣನೇ! ಕೇಳುವವನಾಗು. ಯಾವ ಕಾರಣದಿಂದ ನಾನು ಈಗ ಇಲ್ಲಿಗೆ ಜಾಗ್ರತೆಯಾಗಿ ಬಂದಿರುವೆನೆಂಬುದನ್ನು ಹೇಳುತ್ತೇನೆ.

|| ಶ್ರೀ ಕೃಷ್ಣ ಉವಾಚ ||

ಭಗವನ್ಸರ್ವಧರ್ಮಜ್ಞ ಕಿನ್ನಿಮಿತ್ತಮಿಹಾಗತಃ ।
ಸರ್ವಂ ಜಾನಾಸಿ ಸರ್ವಜ್ಞ ತ್ವಮೇವ ವಿದುಷಾಂ ವರ || ೩೫ ||

|| ಸನತ್ಕುಮಾರ ಉವಾಚ ||

ಧನ್ಯೋಽಸಿ ಭಗವನ್ಕೃಷ್ಣ ಮಾನ್ಯೋಽಸಿ ಜಗತಾಮಪಿ ।
ಸರ್ವೇಶ್ವರೇಶ್ವರೋಽಸಿ ತ್ವಂ ತ್ವತ್ಪರೋ ನಾಸ್ತಿ ವಿಶ್ವತಃ || ೩೬ ||

|| ಶ್ರೀ ಕೃಷ್ಣ ಉವಾಚ ||

ಯಜ್ಞಾನಾಂ ಚ ವ್ರತಾನಾಂ ಚ ತಪಸ್ಯಾನಾಂ ದ್ವಿಜೇಶ್ವರ ।
ಸತತಂ ಫಲದಾತಾಹಂ ದಕ್ಷಿಣಾಭಿಃ ಸಹೇತಿ ಚ || ೩೭ ||

ಇತಿ ಶ್ರುತ್ವಾ ಕುಮಾರಶ್ಚ ಜವೇನ ಪ್ರಯಯೌ ಚ ತೇ ।
ಮತ್ವಾಶ್ಚರ್ಯಂ ಚ ವಚನಂ ವಾರಯಾಮಾಸ ತೇಽಪಿ ಕಿಮ್ || ೩೮ ||

---

೩೫. ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ಷಡ್ಗುಣೈಶ್ವರ್ಯಸಂಪನ್ನನೂ ಸಕಲ ಧರ್ಮಗಳನ್ನು ತಿಳಿದವನೂ ಆದ ಮುನಿಯೇ! ನೀನು ಸಕಲವನ್ನೂ ತಿಳಿದವನಾಗಿರುವೆ. ನೀನೇ ವಿದ್ವಾಂಸರುಗಳಲ್ಲೆಲ್ಲ ಉತ್ತಮನು. ನೀನು ಯಾವುದಕ್ಕಾಗಿ ಇಲ್ಲಿಗೆ ಬಂದಿರುವೆ? ತಿಳಿಸು.

೩೬. ಸನತ್ಕುಮಾರನು ಹೇಳುತ್ತಾನೆ:— ಎಲೈ ಭಗವಂತನೇ! ನೀನು ಧನ್ಯನಾಗಿರುವೆ. ಮತ್ತು ಯಾವಾಗಲೂ ಪ್ರಪಂಚಕ್ಕೆ ಮಾನ್ಯನಾಗಿರುವೆ. ನೀನು ಸರ್ವೇಶ್ವರನಿಗೂ ಈಶ್ವರನಾಗಿರುವೆ. ಈ ಪ್ರಪಂಚದಲ್ಲಿ ನಿನಗಿಂತಲೂ ಶ್ರೇಷ್ಠನಾದವನು ಯಾವನೂ ಇಲ್ಲ.

೩೭. ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ಬ್ರಾಹ್ಮಣಶ್ರೇಷ್ಠನೇ! ದಕ್ಷಿಣೆಯಿಂದ ಕೂಡಿದ ಯಜ್ಞಗಳಿಗೂ, ವ್ರತಗಳಿಗೂ, ತಪಸ್ಸುಗಳಿಗೂ ಕೂಡ ಯಾವಾಗಲೂ ಫಲವನ್ನು ಕೊಡುವವನು ನಾನಾಗಿರುವೆನು.

೩೮. ಹೀಗೆ ಹೇಳಿದ ಮಾತನ್ನು ಕೇಳಿ ಕುಮಾರನು ಶೀಘ್ರವಾಗಿ ಅಲ್ಲಿಂದ ಹೊರಟನು. ಆ ಮುನಿಗಳು ಅದೇನು ಆಶ್ಚರ್ಯಕರವಾದ ಮಾತನ್ನು ಕುಮಾರನು ಹೇಳುತ್ತಾನೋ ಎಂದು ಕುತೂಹಲದಿಂದಿರುವುದನ್ನು ತಿಳಿದು ಕೃಷ್ಣನು ಅವನನ್ನು ತಡೆದನು.

|| ಋಷಯ ಊಚುಃ ||

ಹೇ ಸಿದ್ಧೇಂದ್ರ ಮಹಾಭಾಗ ಕುಮಾರ ಕರುಣಾಮಯ |
ಕಾ ಶಂಕಿತಕಥಾ ಪ್ರೋಕ್ತಾ ಭಗವತ್ಕೃಷ್ಣಸನ್ನಿಧೌ || ೩೯ ||

ಕಿಂ ಪುತ್ರ ದೃಷ್ಟಮಾಶ್ಚರ್ಯಂ ಶ್ರುತಂ ಕಿಮಪಿ ಕುತ್ರಚಿತ್ |
ಅತೀವ ಕೃತ್ವಾ ವಿಸ್ತೀರ್ಣಮಸ್ಮಾಕಂ ವಕ್ತುಮರ್ಹಸಿ || ೪೦ ||

ಏತಸ್ಮಿನ್ನಂತರೇ ಬ್ರಹ್ಮಾ ಪಾರ್ವತ್ಯಾ ಸಹ ಶಂಕರಃ |
ಅನಂತಶ್ಚಾಪಿ ಧರ್ಮಶ್ಚ ಶ್ರೀ ಸೂರ್ಯಶ್ಚ ನಿಶಾಕರಃ || ೪೧ ||

ಆದಿತ್ಯಾ ವಸವೋ ರುದ್ರಾ ದಿಕ್ಪಾಲಾದ್ಯಾಶ್ಚ ದೇವತಾಃ |
ಶ್ರೀಕೃಷ್ಣಂ ಸಹಸೋತ್ಥಾಯ ಸಂಭಾವ್ಯ ಚ ಪೃಥಕ್ಪೃಥಕ್ || ೪೨ ||

ಮಧುಪರ್ಕಾದಿಕಂ ದತ್ವಾ ಪೂಜಯಾಮಾಸ ಭಕ್ತಿತಃ |
ಪ್ರಣೇಮುರ್ಋಷಯಃ ಸರ್ವೇ ಶೇಷಂ ಶಂಭುಂ ವಿಧಿಂ ಶಿವಮ್ || ೪೩ ||

---

೩೯. ಋಷಿಗಳು ಹೇಳುತ್ತಾರೆ:— ಎಲೈ ಸಿದ್ಧಶ್ರೇಷ್ಠನೇ! ಮಹಾತ್ಮನೇ! ದಯಾರೂಪನೇ! ಕುಮಾರನೇ! ಭಗವಂತನಾದ ಕೃಷ್ಣನ ಎದುರಿನಲ್ಲಿ ಅದೇನೋ ಶಂಕೆಯಿಂದ ಮಾತನಾಡುತ್ತಿದ್ದೆಯಲ್ಲ ಅದೇನು?

೪೦. ಎಲೈ ಪುತ್ರನಿಗೆ ಸಮಾನನಾದವನೇ! ಎಲ್ಲಿ ಏನು ಆಶ್ಚರ್ಯವನ್ನು ಕಂಡಿರುವೆ? ಎಲ್ಲಿ ಏನು ಆಶ್ಚರ್ಯಕರನಾದ ಸಂಗತಿಗಳನ್ನು ಕೇಳಿರುವೆ? ನೀನು ಅದನ್ನೆಲ್ಲ ಬಹಳ ವಿಸ್ತಾರಮಾಡಿ ನಮಗೆ ಹೇಳುವವನಾಗು,

೪೧–೪೩. ಈ ಸಮಯದಲ್ಲಿ ಬ್ರಹ್ಮನೂ, ಪಾರ್ವತೀಸಮೇತನಾದ ಈಶ್ವರನೂ, ಅನಂತನೂ, ಧರ್ಮನೂ, ಸೂರ್ಯನೂ, ಚಂದ್ರನೂ, ಆದಿತ್ಯರೂ, ವಸುಗಳೂ, ರುದ್ರರೂ, ದಿಕ್ಪಾಲಕರೇ ಮುಂತಾದ ದೇವತೆಗಳೂ ಅಲ್ಲಿಗೆ ಬಂದರು. ಶ್ರೀ ಕೃಷ್ಣನು ಜಾಗ್ರತೆಯಾಗಿ ಮೇಲೆದ್ದು, ಒಬ್ಬೊಬ್ಬರನ್ನೂ ಗೌರವಿಸಿ, ಮಧುಪರ್ಕಾದಿಗಳನ್ನು ಕೊಟ್ಟು ಭಕ್ತಿಯಿಂದ ಪೂಜೆ ಮಾಡಿದನು.

ಪರಸ್ಪರಂ ಚ ಸಂಭಾಷಾ ಬಭೂವ ದ್ವಿಜದೇವಯೋಃ ।
ಸಮುವಾಸಾಸನೇ ಮಧ್ಯೇ ಕುಮಾರಃ ಕನಕಪ್ರಭಃ ।
ಕಥಾಂ ಕಥಿತುಮಾರೇಭೇ ಸಂಸದಿ ದ್ವಿಜದೇವಯೋಃ || ೪೪ ||

|| ಸನತ್ಕುಮಾರ ಉವಾಚ ||

ಮಯಾ ಗತಶ್ಚ ಗೋಲೋಕೋ ನ ದೃಷ್ಟೋ ರಾಧಿಕಾಪತಿಃ ।
ತತೋ ಗತಂ ಚ ವೈಕುಂಠಂ ತತ್ರನಾಸ್ತಿ ಚತುರ್ಭುಜಃ || ೪೫ ||

ತತೋ ಗತಶ್ಚ ಕ್ಷೀರೋದಸ್ತತ್ರ ನಾಸ್ತಿ ಹರಿಃ ಸ್ವಯಮ್ ।
ಪರಿಶ್ರಾಂತೋ ವಿಷಣ್ಣಶ್ಚ ಸ್ನಾತಂ ಕ್ಷೀರೋದಧೇಸ್ತಟೇ । || ೪೬ ||

ವಿಸ್ತೀರ್ಣವಾಲುಕಾಮಧ್ಯೇ ಕಚ್ಛಪಃ ಶತಯೋಜನಃ ।
ಭೀತಶ್ಚ ಕಂಪಿತಸ್ತತ್ರ ದೃಷ್ಟೋ ದುಃಖೀ ಚ ಶುಷ್ಕಿತಃ || ೪೭ ||

---

೪೪. ದೇವತೆಗಳಿಗೂ ಬ್ರಾಹ್ಮಣನಿಗೂ ಪರಸ್ಪರ ಮಾತುಕಥೆಯು ನಡೆಯಿತು. ಚಿನ್ನದಂತೆ ಹೊಳೆಯುತ್ತಿರುವ ಸನತ್ಕುಮಾರನು ಆಸನಮಧ್ಯದಲ್ಲಿ ಕುಳಿತುಕೊಂಡನು. ಮತ್ತು ಆ ದೇವತೆಗಳು ಬ್ರಾಹ್ಮಣರು ಇವರುಗಳ ಸಭೆಯಲ್ಲಿ ಕಥೆಯನ್ನು ಹೇಳ ತೊಡಗಿದನು.

೪೫. ಸನತ್ಕುಮಾರನು ಹೇಳುತ್ತಾನೆ:— ನಾನು ಗೋಲೋಕಕ್ಕೆ ಹೋಗಿದ್ದೆನು. ಅಲ್ಲಿ ರಾಧೆಯ ಪತಿಯಾದ ಕೃಷ್ಣನು ಕಾಣಿಸಲಿಲ್ಲ. (ಇರಲಿಲ್ಲ) ಅನಂತರ ಅಲ್ಲಿಂದ ವೈಕುಂಠಕ್ಕೆ ಹೋದೆನು. ಅಲ್ಲಿ ನಾಲ್ಕು ತೋಳುಗಳಿಂದ ವಿರಾಜಮಾನನಾದ ವಿಷ್ಣುವಿರಲಿಲ್ಲ.

೪೬. ಅನಂತರ ಅಲ್ಲಿಂದ ಹಾಲಿನ ಸಮುದ್ರಕ್ಕೆ ಹೋದೆನು. ಅಲ್ಲಿಯೂ ಹರಿಯು ಇರಲಿಲ್ಲ. ನಾನು ಒಹಳ ಬಳಲಿದವನಾಗಿಯೂ, ವ್ಯಥೆಗೊಂಡವನಾಗಿಯೂ ಆ ಹಾಲಿನ ಸಮುದ್ರದ ದಡದಲ್ಲಿಯೇ ಸ್ನಾನವನ್ನು ಮಾಡಿದೆನು.

೪೭. ಅಲ್ಲಿ ವಿಸ್ತಾರವಾದ ಮರಳಿನ ಮಧ್ಯದಲ್ಲಿ ಒಂದುನೂರು ಯೋಜನ ವಿಸ್ತಾರವುಳ್ಳ, ಭಯಗೊಂಡ, ನಡುಗುತ್ತಿರುವ, ಸೊರಗಿಹೋದ ಒಂದು ಆಮೆಯನ್ನು ಕಂಡೆನು.

ನಿಃಸಾರಿತೋ ರಾಘವೇಣ ಮೀನೇನ ಚ ಮಹಾತ್ಮನಾ ।
ಧನ್ಯೋಽಸೀತಿ ಮಯೋಕ್ತಶ್ಚ ನಾಹಂ ಧನ್ಯ ಉವಾಚ ಸಃ ॥ ೪೮ ॥

ಕ್ಷೀರೋದಃ ಸಾಗರೋ ಧನ್ಯೋ ಜಂತವೋ ಯತ್ರ ಮದ್ವಿಧಾಃ ।
ಮತ್ತೋ ಮಹತ್ತರಾಶ್ಚಾಪಿ ಹ್ಯಸಂಖ್ಯಾಶ್ಚ ಮಹಾಮುನೇ ॥ ೪೯ ॥

ಭವಾನ್ಧನ್ಯೋಽಸಿ ಕ್ಷೀರೋದ ತೇನೋಕ್ತೋ ನಾಹಮೇವ ಚ ।
ಧನ್ಯಾ ವಸುಂಧರಾ ದೇವೀ ಯತ್ರೈವ ಸಪ್ತಸಾಗರಾಃ ॥ ೫೦ ॥

ಧನ್ಯಾಸಿ ವಸುಧೇತ್ಯುಕ್ತಾ ನಾಹಮೇವೇತ್ಯುವಾಚ ಸಾ ।
ಧನ್ಯೋಽನಂತೋ ಮಮಾಧಾರಃ ಕೃಷ್ಣಾಂಶೋ ನಾಗರಾಡ್ವಿಭುಃ ॥ ೫೧ ॥

ಸಹಸ್ರಮೂರ್ಧ್ನಾಂ ಮಧ್ಯೇಽಹಂ ಮೂರ್ಧ್ನಿ ಶೂರ್ಪೇಽಕ ಸರ್ಷಪಃ ।
ಧನ್ಯೋಽಸಿ ಶೇಷೇತ್ಯುಕ್ತೋಽಯಂ ಧನ್ಯೋ ನಾಹಮುವಾಚ ವೈ ॥ ೫೨ ॥

---

೪೮. ಮಹಾತ್ಮನಾದ ರಾಘವನಿಂದಲೂ ಮೀನಿನಿಂದಲೂ ಹೊರಹಾಕಲ್ಪಟ್ಟಿರುವ ಆ ಕೂರ್ಮವನ್ನು ಕಂಡು ನೀನೇ ಧನ್ಯನು ಎಂದೆನು. ಅದಕ್ಕೆ ಆ ಕೂರ್ಮವು ನಾನು ಧನ್ಯನಲ್ಲ ಎಂದಿತು.

೪೯. ಎಲೈ ಮಹಾ ಮುನಿಯೇ! ಕ್ಷೀರಸಮುದ್ರದಲ್ಲಿ ನನ್ನಂತಿರುವ ನನಗಿಂತಲೂ ಬಹು ದೊಡ್ಡವುಗಳಾದ ಪ್ರಾಣಿಗಳು ಬಹಳವಾಗಿವೆ ಆದುದರಿಂದ ಕ್ಷೀರಸಮುದ್ರನೇ ಧನ್ಯನು ಎಂದೂ ಹೇಳಿತು.

೫೦. ಅದನ್ನು ಕೇಳಿದ ನಾನು ಕ್ಷೀರಸಮುದ್ರನನ್ನು ಕುರಿತು ನೀನೇ ಧನ್ಯನು ಎಂದೆನು. ಅದಕ್ಕೆ ಕ್ಷೀರಸಮುದ್ರನು ನಾನು ಧನ್ಯನಲ್ಲ. ಏಳು ಸಮುದ್ರಗಳನ್ನು ಹೊಂದಿರುವ ಭೂಮಿದೇವಿಯು ಧನ್ಯಳು ಎಂದು ನುಡಿದನು.

೫೧–೫೨. ಆಗ ನಾನು ಎಲೈ ಭೂಮಿಯೇ! ನೀನು ಧನ್ಯಳು ಎಂದೆನು. ಅದಕ್ಕೆ ಭೂಮಿಯು ನಾನು ಧನ್ಯಳಲ್ಲ. ನನಗೆ ಆಧಾರನಾಗಿರುವ ಕೃಷ್ಣನ ಅಂಶರೂಪನಾದ ಸರ್ಪರಾಜನು ಧನ್ಯನು. ಆ ಅನಂತನ ಸಾವಿರ ತಲೆಗಳ ಮಧ್ಯದಲ್ಲಿ ಒಂದು ತಲೆಯ ಮೇಲೆ ಮೊರದಲ್ಲಿ ಸಾಸುವೆಯ ಕಾಳಿನಂತೆ ನಾನಿರುವೆನು ಎಂದಳು. ಆಗ ನಾನು ಎಲೈ ಶೇಷನೇ! ನೀನು ಧನ್ಯನು ಎಂದೆನು. ಅವನು ನಾನು ಧನ್ಯನಲ್ಲ ಎಂದನು.

ಧನ್ಯಃ ಕೂರ್ಮೋ ಮಮಾಧಾರೋ ಗಚ್ಛ ತತ್ರೈವ ವೈಮುನೇ ।
ಧನ್ಯೋಽಸಿ ಕೂರ್ಮೇತ್ಯುಕ್ತೋಽಯಂ ನಾಹಂ ಧನ್ಯೋಽಸ್ಮಿ ವೈಮುನೇ ॥ ೫೩ ॥

ವಾಯುನಾ ಧಾರ್ಯಮಾಣೋಹಂ ಮತ್ತೋ ಧನ್ಯತಮಶ್ಚ ಸಃ ।
ಧನ್ಯೋಽಸೀತ್ಯುಕ್ತಃ ಪವನೋ ಧನ್ಯೋ ನಾಹಮುವಾಚ ಸಃ
ಧನ್ಯಶ್ಚ ಭಗವಾನ್ಬ್ರಹ್ಮಾ ವಿಧಾತಾ ಜಗತಾಮಪಿ ॥ ೫೪ ॥

ಧನ್ಯೋಽ ತತ್ರ ವಿಧಾತಾ ಚ ಧನ್ಯೋ ನಾಹಮುವಾಚ ಸಃ ।
ಧನ್ಯೋ ಮಹೇಶ್ವರೋ ದೇವೋ ಯೋಗೀಂದ್ರಾಣಾಂ ಗುರೋರ್ಗುರುಃ ॥ ೫೫ ॥

ಸರ್ವಾರಾಧ್ಯಃ ಸರ್ವಪೂಜ್ಯೋ ಧರ್ಮರೂಪಃ ಸನಾತನಃ ।
ಕಾಲಕಾಲಶ್ಚ ಸಂಹರ್ತಾ ಸ್ವಯಂ ಮೃತ್ಯುಂಜಯಃ ಪ್ರಭುಃ ।
ಧನ್ಯೋಽಸಿ ತತ್ರ ಶಂಭುಶ್ಚ ಧನ್ಯೋ ನಾಹಮುವಾಚ ಸಃ ॥ ೫೬ ॥

---

೫೩. ಮತ್ತು ಎಲೈ ಮುನಿಯೇ! ನನಗೂ ಆಧಾರನಾಗಿ ಆದಿಕೂರ್ಮನಿರುವನು. ನೀನು ಅಲ್ಲಿಗೆ ಹೋಗು ಎಂದನು. ನಾನು ಅಲ್ಲಿಗೆ ಹೋಗಿ ಎಲೈ ಕೂರ್ಮನೇ! ನೀನೇ ಧನ್ಯನು ಎನಲು, ಕೂರ್ಮನು ಮುನಿಯೆ! ನಾನು ಧನ್ಯನಲ್ಲ ಎಂದನು.

೫೪. ನಾನು ವಾಯುವಿನಿಂದ ಹಿಡಿಯಲ್ಪಟ್ಟವನಾಗಿರುವೆನು. ಆದುದರಿಂದ ಅವನೇ ಧನ್ಯನು ಎಂದನು. ಆಗ ನಾನು ವಾಯುವನ್ನು ಕುರಿತು ನೀನು ಧನ್ಯನು ಎನ್ನಲು, ಅವನು ನಾನು ಧನ್ಯನಲ್ಲ ಎಂದನು. ಮತ್ತು ಸಕಲ ಪ್ರಪಂಚಗಳನ್ನೂ ಸೃಷ್ಟಿಮಾಡುವ ಪೂಜ್ಯನಾದ ಬ್ರಹ್ಮನು ಧನ್ಯನು ಎಂದನು.

೫೫—೫೬. ನಾನು ಬ್ರಹ್ಮನೇ! ನೀನು ಧನ್ಯನು ಎನಲು, ಅದಕ್ಕೆ ಬ್ರಹ್ಮನು ನಾನು ಧನ್ಯನಲ್ಲ. ಯೋಗೀಂದ್ರರಿಗೆ ಗುರುಗಳಾರೋ ಅವರಿಗೂ ಗುರುವಾದ ದೇವನಾದ ಮಹೇಶ್ವರನು ಧನ್ಯನು. ಅವನು ಎಲ್ಲರಿಂದಲೂ ಪೂಜಿತನೂ, ಧರ್ಮಸ್ವರೂಪನೂ, ಸನಾತನನೂ, ಮೃತ್ಯುವಿಗೆ ಮೃತ್ಯುವೂ, ಪ್ರಪಂಚವನ್ನು ಸಂಹಾರಮಾಡುವವನೂ, ಮೃತ್ಯುವನ್ನು ಜಯಿಸಿದವನೂ, ಸರ್ವರಿಗೂ ಸ್ವಾಮಿಯೂ ಆಗಿರುವನು ಎಂದನು. ಆಗ ನಾನು ಶಂಭುವೇ! ನೀನು ಧನ್ಯನು ಎನಲು, ಈಶ್ವರನು ನಾನು ಧನ್ಯನಲ್ಲ ಎಂದನು

ಸರ್ವಾದೌ ಪೂಜನಂ ಯಸ್ಯ ಜ್ಞಾನಿನಾಂ ಚ ಗುರೋರ್ಗುರುಃ ।
ಧನ್ಯೋ ಗಣೇಶ್ವರೋ ದೇವೋ ದೇವಾನಾಂ ಪ್ರವರಃ ಪರಃ ॥ ೫೭ ॥

ಸಿದ್ಧೇಂದ್ರೇಷು ಮುನೀಂದ್ರೇಷು ದೇವೇಂದ್ರೇಷು ಶ್ರುತೌಶ್ರುತಮ್ ।
ಯೋಗೀಂದ್ರೇಷು ಚ ಪ್ರಾಜ್ಞೇಷು ನ ಗಣೇಶಾತ್ಪರಃ ಪುಮಾನ್ ॥ ೫೮ ॥

ನಿಮ್ನಗಾಸು ಯಥಾ ಗಂಗಾ ತೀರ್ಥೇಷು ಪುಷ್ಕರಂ ಯಥಾ ।
ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ೫೯ ॥

ವೇದೋ ನಾರಾಯಣಃ ಸಾಕ್ಷಾದ್ವಯಂ ಪೂಜ್ಯಾ ವ್ಯವಸ್ಥಯಾ ।
ತಸ್ಮಾಚ್ಛಾಸ್ತ್ರಾಣಿ ಸರ್ವಾಣಿ ಪುರಾಣಾನಿ ಚ ಸಂತಿ ವೈ ॥ ೬೦

ತಸ್ಮಾನ್ನಿರೂಪಿತೋ ಧರ್ಮಶ್ಚೇತಿಹಾಸಶ್ಚ ಸಂಹಿತಾಃ ।
ತಸ್ಮಾದ್ಧನ್ಯಾಶ್ಚ ತೇ ವೇದಾ ವದಂತ್ಯತ್ರ ಮನೀಷಿಣಃ ॥ ೬೧ ॥

---

೫೭. ಮತ್ತು ಯಾವನು ಸಮಸ್ತ ಕಾರ್ಯಗಳ ಆರಂಭದಲ್ಲಿ ಪೂಜೆಯನ್ನು ಹೊಂದುವನೋ, ಯಾವನು ಜ್ಞಾನಿಗಳಿಗೂ ಗುರುಗಳಿಗೂ ಗುರುವಾಗಿರುವನೋ, ದೇವತೆಗಳಲ್ಲೆಲ್ಲ ಅತ್ಯಂತ ಉತ್ತಮನಾದ ಆ ಗಣಪತಿಯು ಧನ್ಯನು.

೫೮. ಸಿದ್ಧಶ್ರೇಷ್ಠರಲ್ಲಿಯೂ, ಮುನಿಶ್ರೇಷ್ಠರಲ್ಲಿಯೂ, ದೇವಶ್ರೇಷ್ಠರಲ್ಲಿಯೂ, ಯೋಗಿಶ್ರೇಷ್ಠರಲ್ಲಿಯೂ, ಜ್ಞಾನವಂತರಲ್ಲಿಯೂ ಗಣೇಶನಿಗಿಂತಲೂ ಉತ್ತಮನಾದ ಪುರುಷ ಇಲ್ಲವೆಂದು ವೇದದಲ್ಲಿ ಹೇಳಲ್ಪಟ್ಟಿರುತ್ತದೆ.

೫೯. ನದಿಗಳಲ್ಲೆಲ್ಲ ಗಂಗಾನದಿಯು ಹೇಗೆ ಶ್ರೇಷ್ಠವಾದುದೋ, ತೀರ್ಥಗಳಲ್ಲೆಲ್ಲ ಪುಷ್ಕರ ತೀರ್ಥವು ಹೇಗೆ ಮೇಲಾದುದೋ ಹಾಗೆ ವೇದದಲ್ಲಿ ಹೇಳಲ್ಪಟ್ಟಿರುವುದೇ ಶ್ರೇಷ್ಠವಾದ ಧರ್ಮವು. ಅದಕ್ಕೆ ವಿರುದ್ಧವಾದುದೆಲ್ಲ ಅಧರ್ಮವು.

೬೦. ವೇದವೆಂಬುದು ಮತ್ತು ಸಾಕ್ಷಾನ್ನಾರಾಯಣನು ಈ ಎರಡು ಪೂಜ್ಯವಾದವುಗಳೆಂದು ವ್ಯವಸ್ಥೆ ಮಾಡಲ್ಪಟ್ಟವೆ. ಆ ವೇದಗಳಿಂದ ಶಾಸ್ತ್ರಗಳೂ ಪುರಾಣಗಳೂ ಕೂಡ ಉಂಟಾಗಿವೆ.

೬೧. ಆ ವೇದ ಶಾಸ್ತ್ರ ಪುರಾಣ ಸಮೂಹದಿಂದ ಧರ್ಮವೂ ಇತಿಹಾಸವೂ ಹೇಳಲ್ಪಟ್ಟವೆ. ಆದುದರಿಂದ ಆ ವೇದಗಳೇ ಧನ್ಯಗಳೆಂದು ಜ್ಞಾನಿಗಳು ಹೇಳುತ್ತಾರೆ.

ಯೂಯಂ ಧನ್ಯಾಶ್ಚ ಮಾನ್ಯಾಶ್ಚೇತ್ಯುಕ್ತ್ವಾ ವೇದಾಮಯಾ ತತಃ ।
ಊಚುಸ್ತೇ ನ ವಯಂ ಧನ್ಯಾ ಯಜ್ಞಸಂಘಶ್ಚ ಸಾಂಪ್ರತಮ್ ॥ ೬೨ ॥

ವಯಂ ವ್ಯವಸ್ಥಾಕರ್ತಾರೋ ಯಜ್ಞಾಘಃ ಫಲದಃ ಸ್ವಯಮ್ ।
ತಸ್ಮಾದ್ಧನ್ಯಃ ಸ ಏವಾಪಿ ಗಚ್ಛ ಗಚ್ಛ ಮಹಾಮುನೇ ॥ ೬೩ ॥

ಧನ್ಯೋಽಸಿ ಯಜ್ಞಸಂಘೋಸೀತ್ಯುಕ್ತಸ್ತತ್ರ ಮಯಾ ವಿಭೋ ।
ಊಚುಸ್ತೇ ನವಯಂ ಧನ್ಯಾ ಧನ್ಯಂ ಕರ್ಮ ಶುಭಂ ಮುನೇ ॥ ೬೪ ॥

ಶುಭಕರ್ಮಾಸಿ ಧನ್ಯಂ ತ್ವಂ ನಾಹಂ ಧನ್ಯಮುವಾಚ ತತ್ ।
ಕರ್ಮಣಾಂ ಫಲದಾತಾ ಯಃ ಕರ್ಮಹೇತುಶ್ಚ ಸಾಂಪ್ರತಮ್ ॥ ೬೫ ॥

ಧಾತುರ್ವಿಧಾತಾ ಭಗವಾನ್ಸರ್ವಾದಿಃ ಸರ್ವಕಾರಕಃ ।
ಶ್ರೀಕೃಷ್ಣಃ ಪರಮಾತ್ಮಾ ಚ ಧನ್ಯೋ ಮಾನ್ಯಶ್ಚ ನಿಶ್ಚಿತಮ್ ॥ ೬೬ ॥

---

೬೨-೬೩. ಅನಂತರ ನಾನು ಎಲೈ ವೇದಗಳೇ! ನೀವುಗಳೇ ಧನ್ಯರು ಮತ್ತು ಮಾನ್ಯರು ಎಂದು ಹೇಳಿದೆನು. ಅದಕ್ಕೆ ಆ ವೇದಗಳು ನಾವು ಧನ್ಯರಲ್ಲ. ಯಜ್ಞ ಸಮೂಹಗಳೇ ಇಂದು ಧನ್ಯಗಳು. ಎಲೈ ಮಹಾ ಮುನಿಯೇ! ನಾವು ಯಜ್ಞ ಗಳನ್ನು ಮಾಡಬೇಕಾದ ರೀತಿಯನ್ನು ವ್ಯವಸ್ಥೆ ಮಾಡುವವರು. ಫಲವನ್ನು ಯಜ್ಞ ಸಮೂಹವೇ ಕೊಡತಕ್ಕುದು. ಆದುದರಿಂದ ಯಜ್ಞಸಮೂಹವೇ ಧನ್ಯವಾದುದು ಅಲ್ಲಿಗೇ ಹೋಗು ಎಂದು ಹೇಳಿದುವು.

೬೪. ಆಗ ನಾನು ಎಲೈ ಯಜ್ಞಸಮೂಹವೇ! ನೀನೇ ಧನ್ಯನು ಎನಲು, ಎಲೈ ಪ್ರಭುವೇ! ಆ ಯಜ್ಞ ಸಮೂಹಗಳು ನನ್ನನ್ನು ಕುರಿತು ಓ ಮುನಿಯೇ! ನಾವು ಧನ್ಯರಲ್ಲ. ಶುಭಕರ್ಮವೆಂಬುದು ಧನ್ಯವಾದುದು ಎಂದುವು.

೬೫-೬೬. ಅನಂತರ ನಾನು ಎಲೈ ಶುಭಕರ್ಮವೇ! ನೀನೇ ಧನ್ಯನು ಎನಲು, ಆ ಕರ್ಮವು ಯಾವನು ಕರ್ಮಗಳ ಫಲಗಳನ್ನು ಕೊಡುವವನಾಗಿರುವನೋ, ಕರ್ಮಗಳಿಗೆ ಕಾರಣನಾಗಿರುವನೋ, ಬ್ರಹ್ಮನನ್ನೂ ಕೂಡ ಸೃಷ್ಟಿಮಾಡಿರುವನೋ, ಸಕಲಕ್ಕೂ ಆದಿಯಾಗಿ ಸಕಲವನ್ನೂ ನಿರ್ಮಾಣಮಾಡುವವನಾಗಿರುವನೋ ಅಂತಹ ಷಡ್ಗುಣೈಶ್ವರ್ಯ ಸಂಪನ್ನನೂ ಪರಮಾತ್ಮನೂ ಆದ ಶ್ರೀ ಕೃಷ್ಣನು ಈಗ ಧನ್ಯನೂ ಮಾನ್ಯನೂ ಆಗಿರುವನು ಎಂದಿತು.

ಧರ್ಮಾಲಯಂ ತತೋ ಗತ್ವಾ ನದೃಷ್ಟ್ವಾ ಜಗದೀಶ್ವರಮ್ ।
ಮಥುರಾಮಾಗತಂ ದ್ರಷ್ಟುಂ ಪರಿಪೂರ್ಣತಮಂ ಪ್ರಭುಮ್ ॥ ೧೭ ॥

ಯಜ್ಞಾನಾಂ ತಪಸಾಂ ಚೈವ ವ್ರತಾನಾಂ ಶುಭಕರ್ಮಣಾಮ್ ।
ಈಶ್ವರಂ ಫಲದಾತಾರಂ ಪರಮಾತ್ಮಾನಮೇವ ಚ ॥ ೧೮ ॥

ಕಾರಣಂ ಕಾರಣಾನಾಂ ಚ ಬ್ರಹ್ಮಾದೀನಾಂ ಪುರಃಸರಮ್ ।
ಧನ್ಯೋಽಸೀತಿ ಮಯೋಕ್ತಶ್ಚ ದಕ್ಷಿಣಾಭಿಃ ಸಹೇತಿ ಚ ॥ ೧೯ ॥

ಇತ್ಯುಕ್ತೇನ ಭಗವತಾ ಕಥಿತಂ ಸರ್ವಕಾರಣಮ್ ।
ದಕ್ಷಿಣಾಭಿಶ್ಚ ಫಲದೋ ಹತಯಜ್ಞೋ ಹ್ಯದಕ್ಷಿಣಃ ॥ ೨೦ ॥

ದಕ್ಷಿಣಾ ವಿಪ್ರಮುದ್ದಿಶ್ಯ ತತ್ಕಾಲೇ ತು ನ ದೀಯತೇ ।
ಏಕರಾತ್ರೇ ವ್ಯತೀತೇತು ತದ್ದಾನಂ ದ್ವಿಗುಣಂ ಭವೇತ್ ॥ ೨೧ ॥

ಮಾಸೇ ಶತಗುಣಂ ಪ್ರೋಕ್ತಂ ದ್ವಿಮಾಸೇ ತು ಸಹಸ್ರಕಮ್ ।
ಸಂವತ್ಸರೇ ವ್ಯತೀತೇ ತು ಸ ದಾತಾ ನರಕಂ ವ್ರಜೇತ್ ॥ ೨೨ ॥

---

೧೭–೧೯. ಅನಂತರ ಧರ್ಮನ ಮನೆಗೆ ಹೋಗಿ ಅಲ್ಲಿಯೂ ಜಗದೀಶ್ವರನನ್ನು ಕಾಣದೆ ಈ ಮಥುರಾಪಟ್ಟಣಕ್ಕೆ ಸರ್ವಪೂರ್ಣನೂ, ಪ್ರಭುವೂ ದಕ್ಷಿಣೆಗಳಿಂದ ಕೂಡಿದ ಯಜ್ಞಗಳು, ತಪಸ್ಸುಗಳು, ವ್ರತಗಳು, ಶುಭಕರ್ಮಗಳು ಇವುಗಳ ಫಲಗಳನ್ನು ಕೊಡುವವನಾದ ಮತ್ತು ಅವುಗಳಿಗೆ ಒಡೆಯನಾದ ಪ್ರಪಂಚಕ್ಕೆ ಕಾರಣರಾದ ಬ್ರಹ್ಮನೇ ಮೊದಲಾದವರಿಗೂ ಕಾರಣನಾದ ಮತ್ತು ಮುಂದಾಳಾದ ಪರಮಾತ್ಮನನ್ನು ನೋಡುವುದಕ್ಕಾಗಿ ಬಂದೆನು ಮತ್ತು ಧನ್ಯನಾಗಿರುವೆಯೆಂದನು.

೨೦. ಹೀಗೆ ಸನತ್ಕುಮಾರಮುನಿಯು ಹೇಳಿದನಂತರ ಶ್ರೀ ಭಗವಂತನು ಹೇಳತೊಡಗಿದನು. ಯಾಗವು ದಕ್ಷಿಣೆಗಳಿಂದ ಕೂಡಿದುದಾದರೆ ಫಲವನ್ನು ಕೊಡುತ್ತದೆ. ದಕ್ಷಿಣೆಯಿಲ್ಲದೆ ಯಾಗವು ನಾಶವಾಗುತ್ತದೆ.

೨೧. ಬ್ರಾಹ್ಮಣನಿಗೆ ಕೊಡಬೇಕಾದ ದಕ್ಷಿಣೆಯನ್ನು ತಕ್ಕ ಕಾಲದಲ್ಲಿ ಕೊಡದಿದ್ದರೆ ಒಂದು ದಿನವು ಕಳೆದರೆ ಎರಡರಷ್ಟು ಕೊಡಬೇಕಾಗುತ್ತದೆ.

೨೨. ಒಂದು ತಿಂಗಳು ಕಳೆದರೆ ನೂರರಷ್ಟು ಕೊಡಬೇಕಾಗುವುದು. ಎರಡು ತಿಂಗಳು ಕಳೆದರೆ ಸಾವಿರದಷ್ಟು ಕೊಡಬೇಕಾಗುತ್ತದೆ. ಒಂದು ವರುಷವು ಕಳೆದರೆ ದಾನ ಮಾಡಿದವನು ನರಕವನ್ನು ಹೊಂದುತ್ತಾನೆ.

ವರ್ಷಾಣಾಂ ಚ ಸಹಸ್ರಂ ಚ ಮೂತ್ರಕುಂಡೇ ನಿಪತ್ಯ ಚ ।
ತತಶ್ಚಾಂಡಾಲತಾಂ ಯಾತಿ ವ್ಯಾಧಿಯುಕ್ತಶ್ಚ ಪಾತಕೀ ॥ ೭೩ ॥

ದಾತ್ರಾ ನ ದೀಯತೇ ದಾನಂ ಗೃಹೀತ್ರಾ ಚೇನ್ನ ಗೃಹ್ಯತೇ ।
ಉಭೌ ತೌ ನರಕಂ ಪ್ರಾಪ್ತೌ ವರ್ಷಾಣಾಂ ಚ ಸಹಸ್ರಕಮ್ ॥ ೭೪ ॥

ಯಜಮಾನಶ್ಚ ಚಾಂಡಾಲೋ ಬ್ರಾಹ್ಮಣಸ್ತತ್ಪುರೋಹಿತಃ ।
ವ್ಯಾಧಿಯುಕ್ತಾವುಭೌ ತೌ ಚ ಪಾಪಿನೌ ಕರ್ಮಣಃ ಫಲಾತ್ ॥ ೭೫ ॥

ಸರ್ವೇ ದೇವಾಶ್ಚ ಮುನಯೋ ಜಹಸುರ್ವಿಸ್ಮಯಂ ಯಯುಃ ।
ವಿಸ್ಮಯಂ ಚ ಯಯೌ ನಂದಸ್ತತ್ಯಾಜ ಪುತ್ರಭಾವಕಮ್ ॥ ೭೬ ॥

ರುರೋದ ಚ ಸಭಾಮಧ್ಯೇ ಲಜ್ಜಾಹೀನಃ ಶುಚಾಕುಲಃ ।
ತ್ಯಜ ಮೋಹಮಿತೀತ್ಯುಕ್ತ್ವಾ ಬೋಧಯಾಮಾಸ ಪಾರ್ವತೀ ॥ ೭೭ ॥

॥ ಶ್ರೀ ನಂದ ಉವಾಚ ॥

ಅಮೂಲ್ಯ ರತ್ನಂ ಮಾಣಿಕ್ಯಂ ಯಥಾಕುಜನ್ಮನೋ ಗೃಹೇ ।
ಸ್ಥಿತಂ ತೇನ ಚ ದೇವೇಶ ತಥಾಹಂ ವಂಚಿತಃ ಪ್ರಭೋ ॥ ೭೮ ॥

---

೭೩. ಒಂದುಸಾವಿರ ವರುಷಗಳವರೆಗೆ ಮೂತ್ರಕುಂಡವೆಂಬ ನರಕದಲ್ಲಿ ಬಿದ್ದಿದ್ದು, ಅನಂತರ ಪಾಪಿಯೂ ರೋಗದಿಂದ ಕೂಡಿದವನೂ ಆಗಿ ಚಾಂಡಾಲ ಜನ್ಮವನ್ನು ಪಡೆಯುತ್ತಾನೆ.

೭೪. ದಾನ ಮಾಡುವವನು ದಾನ ಕೊಡದಿದ್ದರೆ ದಾನ ತೆಗೆದುಕೊಳ್ಳುವವನು ದಾನವನ್ನು ತೆಗೆದುಕೊಳ್ಳದಿದ್ದರೆ ಇಬ್ಬರೂ ಕೂಡ ಒಂದುಸಾವಿರ ವರುಷಗಳವರೆಗೆ ನರಕವನ್ನು ಹೊಂದುತ್ತಾರೆ.

೭೫. ಕರ್ಮಫಲದಿಂದ ಯಜಮಾನನು ಚಂಡಾಲನಾಗಿ ಹುಟ್ಟುತ್ತಾನೆ. ಬ್ರಾಹ್ಮಣನು ಆವನಿಗೆ ಪುರೋಹಿತನಾಗಿರುತ್ತಾನೆ. ಇಬ್ಬರೂ ಪಾಪಿಗಳಾಗಿರುತ್ತಾರೆ.

೭೬. ಈ ಮಾತುಕಥೆಗಳನ್ನು ಕೇಳಿ ಎಲ್ಲ ದೇವತೆಗಳೂ ಮುನಿಗಳೂ ಬಹಳ ಆಶ್ಚರ್ಯಗೊಂಡರು. ನಂದನೂ ಕೂಡ ಆಶ್ಚರ್ಯಪಟ್ಟನಲ್ಲದೆ, ಕೃಷ್ಣನು ತನ್ನ ಮಗನೆಂಬ ಭಾವನೆಯನ್ನು ಬಿಟ್ಟನು.

೭೭. ದುಃಖದಿಂದ ಕೂಡಿದವನಾಗಿ ನಂದನು ಸಭೆಯ ಮಧ್ಯದಲ್ಲಿ ಅಳುತ್ತಲಿದ್ದನು. ಪಾರ್ವತಿಯು ನಂದನೇ! ಮೋಹವನ್ನು ಬಿಡು ಎಂದು ಹೇಳುತ್ತ ಸಮಾಧಾನ ಮಾಡಿದಳು.

೭೮. ಶ್ರೀ ನಂದನು ಹೇಳುತ್ತಾನೆ:— ಎಲೈ ದೇವತೆಗಳ ಒಡೆಯನೇ! ಪ್ರಭುವೇ! ಬೆಲೆಕಟ್ಟಲು ಸಾಧ್ಯವಿಲ್ಲದ ಮಾಣಿಕ್ಯವೆಂಬ ರತ್ನವು ಮೂಢನಾದಮನುಜನ ಮನೆಯಲ್ಲಿದ್ದರೆ ಹೇಗೋ ಹಾಗೆ ನಾನೂ ಕೂಡ ವಂಚಿಸಲ್ಪಟ್ಟವನಾಗಿರುವೆನು.

ಮಮಾಪರಾಧಂ ಭಗವನ್ ಕ್ಷಮಸ್ವ ಪ್ರಕೃತೇಃ ಪರ ।
ಯಾಸ್ಯಾಮಿ ನ ಪುನರ್ಗೇಽಹಂ ಗೋಕುಲಂ ಯಮುನಾತಟಮ್ ॥ ೭೯ ॥

ವೃಂದಾವನಂ ತಥಾವಾಸಂ ಕ್ರೀಡಾವಾಸಂ ಗದಾಗ್ರಜ ।
ತತ್ಸರ್ವಂ ಚ ಯಶೋದಾಯಾ ಗೋಪಕಾಂತಿಕಮೇವ ಚ ॥ ೮೦ ॥

ಕಿಂ ಬ್ರವೀಮಿ ಯಶೋದಾಂ ಚ ಪ್ರೇಯಸೀಂ ರಾಧಿಕಾಮಪಿ ।
ಪ್ರೇಮಪಾತ್ರಂ ಚ ಬಾಲೌಘಂ ವದ ಭೋ ಕಥಯಾಮಿ ಕಿಮ್ ॥೮೧ ॥

ಇತ್ಯುಕ್ತ್ವಾ ಚ ಸಭಾಮಧ್ಯೇ ಮೂರ್ಛಾಂ ಸಂಪ್ರಾಪ ನಾರದ ।
ಕ್ರೋಡೇ ಕೃತ್ವಾ ಜಗನ್ನಾಥೋ ಬೋಧಯಾಮಾಸ ತತ್ಕ್ಷಣಮ್ ॥ ೮೨ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣ ನಾರದ ಸಂವಾದೇ
ಭಗವನ್ನಂದಸಂವಾದೇ
ಸಪ್ತಾಶೀತಿತಮೋಽಧ್ಯಾಯಃ.

---

೭೯. ಎಲೈ ಪ್ರಕೃತಿಗಿಂತಲೂ ಶ್ರೇಷ್ಠನಾದ ಭಗವಂತನೇ! ನನ್ನ ಅಪರಾಧವನ್ನು ಕ್ಷಮಿಸುವವನಾಗು. ನಾನು ಇನ್ನು ಮನೆಗಾಗಲೀ, ಗೋಕುಲಕ್ಕಾಗಲೀ, ಯಮುನಾನದಿಯ ದಡಕ್ಕಾಗಲೀ ಹೋಗುವುದಿಲ್ಲ.

೮೦. ಎಲೈ ಗದಾಗ್ರಜನೇ! ನಾನು ವೃಂದಾವನಕ್ಕಾಗಲೀ ಅಥವಾ ಆಟದ ಸ್ಥಳಗಳಿಗಾಗಲೀ ಯಶೋದೆಯ ಸಮೀಪಕ್ಕಾಗಲೀ, ಗೋಪಾಲರ ಸಮೀಪಕ್ಕಾಗಲೀ ಯಾವ ಸ್ಥಳಗಳಿಗೂ ಹೋಗುವುದಿಲ್ಲ.

೮೧. ಯಶೋದೆಯು ಕೇಳಿದರೆ ಏನೆಂದು ಹೇಳಲಿ? ನಿನ್ನ ಪ್ರಿಯತಮೆಯಾದ ರಾಧೆಗೂ, ನಿನ್ನ ಪ್ರೀತಿಪಾತ್ರರಾದ ಬಾಲಕರ ಸಮೂಹಕ್ಕೂ ನಾನ ಏನೆಂದು ಹೇಳಲಿ?

೮೨. ಎಲೈ ನಾರದನೇ! ಹೀಗೆ ಹೇಳುತ್ತ ನಂದನು ಸಭೆಯ ಮಧ್ಯದಲ್ಲಿ ಮೂರ್ಛೆಗೊಂಡವನಾದನು. ಜಗನ್ನಾಥನಾದ ಕೃಷ್ಣನು ಅವನನ್ನು ಆಕ್ಷಣವೇ ಎದೆಗಪ್ಪಿಕೊಂಡು ಸಮಾಧಾನದ ಮಾತುಗಳನ್ನಾಡತೊಡಗಿದನು.

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣನಾರದಸಂವಾದದಲ್ಲಿ ಭಗವನ್ನಂದಸಂವಾದರೂಪವಾದ
ಎಂಭತ್ತೇಳನೆಯ ಅಧ್ಯಾಯವು ಮುಗಿದುದು.

## ಎಂಭತ್ತೇಳನೆಯ ಅಧ್ಯಾಯದ ಸಾರಾಂಶ.

ನಂದಗೋಪನು ಶ್ರೀಕೃಷ್ಣನಾರೆಂದು ರಹಸ್ಯವಾಗಿ ತಿಳಿಯಲು ಬಯಸಿದನು. ಆ ಸಮಯಕ್ಕೆ ಸರಿಯಾಗಿ ಪುಲಹ, ಪುಲಸ್ತ್ಯ ಮೊದಲಾದ ಅನೇಕ ಮಹರ್ಷಿಗಳು ಅಲ್ಲಿಗೆ ಬಂದರು. ಅವರೊಡನೆ ಐದು ವರ್ಷ ವಯಸ್ಸಿನ ಸನತ್ಕುಮಾರನೂ ಬಂದನು. ಆ ಸನತ್ಕುಮಾರನು ಮಾತನಾಡುತ್ತಾ ಪರಮಾತ್ಮನೂ ಶ್ರೀಕೃಷ್ಣನ ರೂಪದಲ್ಲಿ ಭೂಮಿಯಲ್ಲಿ ಅವತರಿಸುವುದರಿಂದ ವೈಕುಂಠಲೋಕ, ಬ್ರಹ್ಮಲೋಕ ಮತ್ತು ಕೈಲಾಸ ಮುಂತಾದುವೆಲ್ಲ ಬರಿದಾಗಿರುವುದೆಂದು ಹೇಳಿದನು. ಅಲ್ಲದೆ ಸಕಲ ಚರಾಚರಗಳಿಗೂ ಮೂಲಪ್ರಕೃತಿಗೂ ಶ್ರೀಕೃಷ್ಣನೇ ಮೂಲಕಾರಣನೆಂಬುದನ್ನು ವ್ಯಕ್ತ ಪಡಿಸಿದನು. ಆಗ ನಂದಗೋಪನು ಇಂಥ ಶ್ರೀಕೃಷ್ಣನನ್ನು ಪುತ್ರನನ್ನಾಗಿ ಪಡೆದ ತಾನೇ ಧನ್ಯನೆನುತ್ತ ಆನಂದತುಂದಿಲನಾದನು ಮತ್ತು ಶ್ರೀ ಕೃಷ್ಣನನ್ನು ಮನುಜ ಸಾಮಾನ್ಯನೆಂದು ತಿಳಿದಿದ್ದ ತಪ್ಪಿಗಾಗಿ ಹೆದರಿ ಮೂರ್ಛಿತನಾದನು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಷ್ಟಾಶೀತಿತಮೋಽಧ್ಯಾಯಃ ||

|| ಶ್ರೀ ಕೃಷ್ಣ ಉವಾಚ ||

ಚೇತನಂ ಕುರು ಹೇ ತಾತ ಹೇ ತಾತ ಚೇತನಂ ಕುರು ।
ಜಲಬುದ್ಬುದವತ್ಸರ್ವಂ ಸಂಸಾರಂ ಸಚರಾಚರಮ್ || ೧ ||

ತ್ಯಜ ಮೋಹಂ ಮಹಾಭಾಗ ಮಾಯಾಂ ಸ್ತೌಹಿ ಪರಾತ್ಪರಾಮ್ ।
ಬ್ರಹ್ಮಸ್ವರೂಪಾಂ ಪರಮಾಂ ಸರ್ವಮೋಹನಿಕೃಂತನೀಮ್ ।
ಮುಕ್ತಿಪ್ರದಾಂ ಮಹಾಭಾಗಾಂ ವಿಷ್ಣುಮಾಯಾಂ ಸನಾತನೀಮ್ || ೨ ||

ತ್ರಿಪುರಸ್ಯ ವಧೇ ಘೋರೇ ಮಹಾಯುದ್ಧೇ ಭಯಾಕುಲೇ ।
ಯೇನ ಸ್ತೋತ್ರೇಣ ಶಂಭುಶ್ಚ ತಯಾ ದೈತ್ಯಂ ಜಘಾನ ಸಃ || ೩ ||

---

### ಎಂಭತ್ತೆಂಟನೆಯ ಅಧ್ಯಾಯವು.

೧. ಶ್ರೀ ಕೃಷ್ಣನು ಹೇಳುತ್ತಾನೆ:—ಎಲೈ ತಂದೆಯೇ! ಎಚ್ಚರಗೊಳ್ಳುವವನಾಗು. ಎಲೈ ತಂದೆಯೇ ಎಚ್ಚರಗೊಳ್ಳುವವನಾಗು. ಚರಾತ್ಮಕವಾದ ಈ ಸಂಸಾರವೆಲ್ಲವೂ ನೀರಿನ ಮೇಲಿನ ಗುಳ್ಳೆಗೆ ಸಮಾನವಾದುದು.

೨. ಎಲೈ ಮಹಾತ್ಮನೇ! ಮೋಹವನ್ನು ಬಿಡು. ಪರಾತ್ಪರಳೂ ಬ್ರಹ್ಮಸ್ವರೂಪಳೂ, ಉತ್ತಮಳೂ ಸಮಸ್ತ ಅಜ್ಞಾನಗಳನ್ನೂ ನಾಶಮಾಡುವವಳೂ ಮುಕ್ತಿಯನ್ನು ಕೊಡುವವಳೂ, ಮಹಾತ್ಮಳೂ ಶಾಶ್ವತಳೂ ವಿಷ್ಣುಮಾಯೆಯೂ ಆದ ಮಾಯೆಯನ್ನು ಸ್ತೋತ್ರಮಾಡುವವನಾಗು.

೩—೪. ಹಿಂದೆ ಮಹಾ ಭಯಂಕರನಾದ ತ್ರಿಪುರಾಸುರನನ್ನು ಕೊಲ್ಲುವ ಸಮಯದಲ್ಲಿ ಶಂಕರನು ಭಯಂಕರವಾದ ಯುದ್ಧಮಧ್ಯದಲ್ಲಿ ಯಾವ ಸ್ತೋತ್ರದ ಮಹಿಮೆಯಿಂದ ಆ ರಾಕ್ಷಸನನ್ನು ಕೊಂದನೋ ಅಂಥಾ ಸಕಲ ಸ್ತೋತ್ರಗಳಿಗೂ

ಸ್ತೋತ್ರರಾಜಂ ಪ್ರದಾಸ್ಯಾಮಿ ಸರ್ವಮೋಹನಿಕೃಂತನಮ್ ।
ಸರ್ವವಾಂಛಾಪ್ರದಂ ನಂದ ಶ್ರೂಯತಾಮತ್ರ ಸಂಸದಿ || ೪ ||

ಸರ್ವವಿಘ್ನವಿನಾಶಾಯ ದುಃಖಪ್ರಶಮನಾಯ ಚ ।
ವಿಭೂತಯೇ ಚ ಯಶಸೇ ನೃಣಾಂ ವಾಂಛಿತಸಿದ್ಧಯೇ || ೫ ||

ಸ್ತೋತ್ರಮೇಕಂ ಮಹಾದೇವ್ಯಾ ಜಗನ್ಮಾತುರ್ಜಗತ್ಪ್ರಭೋ ।
ಪರಂ ದುರ್ಗತಿನಾಶಿನ್ಯಾ ಗೋಪನೀಯಂ ಸುದುರ್ಲಭಮ್ || ೬ ||

ದೇಹಿಮಹ್ಯಂ ವಿನೀತಾಯ ಭಕ್ತಾಯ ಭಕ್ತವತ್ಸಲ ।
ದೇಹಾನಾಂ ಜನಕಸ್ತ್ವಂ ಚ ನಿರ್ಗುಣಶ್ಚ ಪರಾತ್ಪರಃ || ೭ ||

|| ಶ್ರೀ ಭಗವಾನುವಾಚ ||

ಶೃಣು ವಕ್ಷ್ಯಾಮಿ ವೈಶ್ಯೇಂದ್ರ ಸ್ತೋತ್ರಂ ಯತ್ಪರಮಾದ್ಭುತಮ್ ।
ಸರ್ವವಿಘ್ನವಿನಾಶಾರ್ಥಂ ಮೋಹಪಾಶನಿಕೃಂತನಮ್ || ೮ ||

---

ಶ್ರೇಷ್ಠವಾದ ಸಮಸ್ತ ಅಜ್ಞಾನಗಳನ್ನು ಹೋಗಲಾಡಿಸುವ ಸಕಲರ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಸ್ತೋತ್ರವನ್ನು ನಾನು ನಿನಗೆ ಈ ಸಭೆಯಲ್ಲಿ ಉಪದೇಶ ಮಾಡುತ್ತೇನೆ. ಎಲೈ ನಂದನೇ! ಸಾವಧಾನನಾಗಿ ಕೇಳುವವನಾಗು.

೫-೭. ಶ್ರೀ ನಂದನು ಹೇಳುತ್ತಾನೆ:—ಎಲೈ ಜಗದೊಡೆಯನೇ! ಮಾನವರ ಎಲ್ಲ ತೊಂದರೆಗಳನ್ನು ಪರಿಹರಿಸುವ, ದುಃಖಗಳನ್ನು ನಾಶಮಾಡುವ, ಐಶ್ವರ್ಯವನ್ನೂ ಕೀರ್ತಿಯನ್ನೂ ಉಂಟುಮಾಡುವ, ದುರ್ಗತಿಯನ್ನು ಹೋಗಲಾಡಿಸುವಳೂ ಪ್ರಪಂಚಕ್ಕೆ ತಾಯಿಯೂ ಆದ ಮಹಾದೇವಿಯ ರಹಸ್ಯವಾಗಿಡಬೇಕಾದ ಅತಿದುರ್ಲಭವಾದ ಒಂದು ಸ್ತೋತ್ರವನ್ನು ಭಕ್ತರಲ್ಲಿ ದಯೆಯುಳ್ಳವನೂ, ವೇದಗಳನ್ನು ಸೃಷ್ಟಿಮಾಡಿದವನೂ, ನಿರ್ಗುಣನೂ, ಪರಾತ್ಪರನೂ ಆದ ನೀನು ವಿನಯವಂತನೂ ಭಕ್ತನೂ ಆದ ನನಗೆ ಉಪದೇಶ ಮಾಡುವವನಾಗು.

೮. ಶ್ರೀ ಭಗವಂತನು ಹೇಳುತ್ತಾನೆ:—ಎಲೈ ವೈಶ್ಯಶ್ರೇಷ್ಠನೇ! ಸಕಲ ವಿಘ್ನಗಳನ್ನೂ ಹೋಗಲಾಡಿಸುವ ಅಜ್ಞಾನವೆಂಬ ಹಗ್ಗದ ಕಟ್ಟನ್ನು ಕಿತ್ತೊಗೆಯುವ ಅತ್ಯಂತ ಆಶ್ಚರ್ಯಕರವಾದ ಸ್ತೋತ್ರವನ್ನು ಹೇಳುತ್ತೇನೆ. ಕೇಳುವವನಾಗು.

ರಣತ್ರಸ್ತೇನ ವಿಭುನಾ ಶಂಕರೇಣ ಪುರಾಕೃತಮ್ ।
ನಾರಾಯಣೋಪದೇಶೇನ ಪ್ರೇರಿತೇನ ಚ ಬ್ರಹ್ಮಣಾ ॥ ೯ ॥

ಶತ್ರುಗ್ರಸ್ತಂ ಶಿವಂ ದೃಷ್ಟ್ವಾ ಸ ಬ್ರಹ್ಮಾಣ ಮುವಾಚ ಹ ।
ಉವಾಚ ಶಂಕರಂ ಬ್ರಹ್ಮಾ ರಥಸ್ತಂ ಪತಿತಂ ರಣೇ ॥ ೧೦ ॥

ಶೂರಸಂಕಟೆ ಶಾಂತ್ಯರ್ಥಂ ದುರ್ಗಾಂ ದುರ್ಗತಿನಾಶಿನೀಮ್ ।
ಮೂಲಪ್ರಕೃತಿಮಾದ್ಯಾಂ ತಾಂ ಸ್ತೌಹಿ ಬ್ರಹ್ಮಸ್ವರೂಪಿಣೀಮ್ ॥ ೧೧ ॥

ಹರಿಣಾ ಪ್ರೇರಿತೋಽಹಂ ಚ ತ್ವಾಂ ವದಾಮಿ ಸುರೇಶ್ವರ ।
ವಿನಾ ಶಕ್ತಿಸಹಾಯೇನ ಕೋ ವಾ ಕಂ ಜೇತುಮೀಶ್ವರಃ ॥ ೧೨ ॥

ಬ್ರಹ್ಮಣಶ್ಚ ವಚಃ ಶ್ರುತ್ವಾ ದುರ್ಗಾಂ ಸಸ್ಮಾರ ಶಂಕರಃ ।
ಪುಟಾಂಜಲಿಪರೋ ಭೂತ್ವಾ ಭಕ್ತಿನಮ್ರಾತ್ಮಕಂಧರಃ ॥ ೧೩ ॥

---

೯. ಹಿಂದೆ ಯುದ್ಧದಲ್ಲಿ ಬಳಲಿದ ವಿಭುವಾದ ಶಂಕರನು ನಾರಾಯಣನ ಮಾತಿನಂತೆ ಬ್ರಹ್ಮನಿಂದ ಪ್ರೇರಿಸಲ್ಪಟ್ಟವನಾಗಿ ಈ ಸ್ತೋತ್ರವನ್ನು ಮಾಡಿರುವನು.

೧೦. ನಾರಾಯಣನು, ಶಿವನು ಶತ್ರುವಿನಿಂದ ಆವರಿಸಲ್ಪಟ್ಟು ರಥದ ಮೇಲಿರುವವನು ಯುದ್ಧದಲ್ಲಿ ಬಿದ್ದಿರುವುದನ್ನು ಕಂಡು ಬ್ರಹ್ಮನಿಗೆ ಹೇಳಿದನು. ಆಗ ಬ್ರಹ್ಮನು ಶಂಕರನಿಗೆ ಹೇಳಿದನು.

೧೧. ಎಲೈ ಶೂರನೇ! ಈಗ ನಿನಗೆ ಬಂದೊದಗಿರುವ ಕಷ್ಟದ ನಿವಾರಣೆಗಾಗಿ ಭಕ್ತರ ದುರ್ಗತಿಯನ್ನು ನಾಶಮಾಡುವವಳೂ, ಮೂಲಪ್ರಕೃತಿಯೂ, ಎಲ್ಲರಿಗಿಂತಲೂ ಮೊದಲಿಗಳೂ, ಬ್ರಹ್ಮಸ್ವರೂಪಿಣಿಯೂ ಆದ ಆ ದುರ್ಗಾದೇವಿಯನ್ನು ಸ್ತೋತ್ರಮಾಡುವವನಾಗು.

೧೨. ಎಲೈ ದೇವತೆಗಳ ಒಡೆಯನೇ! ಶ್ರೀಹರಿಯಿಂದ ಪ್ರೇರಿಸಲ್ಪಟ್ಟವನಾದ ನಾನು ಈ ವಿಷಯವನ್ನು ನಿನಗೆ ಹೇಳುತ್ತಿರುವೆನು. ಆ ಶಕ್ತಿಯ ಸಹಾಯವಿಲ್ಲದೆ ಯಾವನು ಯಾವನನ್ನು ಜಯಿಸಲು ಸಾಧ್ಯನಾಗುತ್ತಾನೆ.

೧೩–೧೪. ಬ್ರಹ್ಮನು ಹೇಳಿದ ಮಾತನ್ನು ಕೇಳಿ ಶಂಕರನು ಸ್ನಾನಮಾಡಿ, ಮಡಿ ಬಟ್ಟೆಗಳನ್ನು ಧರಿಸಿಕೊಂಡು, ಕಾಲುಗಳನ್ನು ತೊಳೆದುಕೊಂಡು, ಆಚಮನವನ್ನು

ಸ್ನಾತಃ ಪಾದೌ ಚ ಪ್ರಕ್ಷಾಲ್ಯ ಧೃತ್ವಾ ಧೌತೇ ಚ ವಾಸಸೀ ।
ಆಚಾಂತಃ ಕುಶಹಸ್ತಶ್ಚ ಶುಚಿರ್ವಿಷ್ಣುಂ ಚ ಸಂಸ್ಮರನ್ ॥ ೧೪ ॥

॥ ಶ್ರೀ ಮಹಾದೇವ ಉವಾಚ ॥

ರಕ್ಷ ರಕ್ಷ ಮಹಾದೇವಿ ದುರ್ಗೇ ದುರ್ಗತಿನಾಶಿನೀ ।
ಮಾಂ ಭಕ್ತಮನುರಕ್ತಂ ಚ ಶತ್ರುಗ್ರಸ್ತೇ ಕೃಪಾಮಯಿ ॥ ೧೫ ॥

ವಿಷ್ಣುಮಾಯೇ ಮಹಾಭಾಗೇ ನಾರಾಯಣಿ ಸನಾತನಿ ।
ಬ್ರಹ್ಮಸ್ವರೂಪೇ ಪರಮೇ ನಿತ್ಯಾನಂದಸ್ವರೂಪಿಣಿ ॥ ೧೬ ॥

ತ್ವಂ ಚ ಬ್ರಹ್ಮಾದಿದೇವಾನಾಮಂಬಿಕೇ ಜಗದಂಬಿಕೇ ।
ತ್ವಂ ಸಾಕಾರೇ ಚ ಗುಣತೋ ನಿರಾಕಾರೇ ಚ ನಿರ್ಗುಣಾತ್ ॥ ೧೭ ॥

ಮಾಯಯಾ ಪುರುಷಸ್ತ್ವಂ ಚ ಮಾಯಯಾ ಪ್ರಕೃತಿಃ ಸ್ವಯಮ್ ।
ತಯೋಃ ಪರಂ ಬ್ರಹ್ಮ ಪರಂ ತ್ವಂ ಬಿಭರ್ಷಿ ಸನಾತನಿ ॥ ೧೮ ॥

---

ಮಾಡಿ, ದರ್ಭೆಯನ್ನು ಕೈಯಲ್ಲಿ ಹಿಡಿದು ಶುದ್ಧನಾಗಿ ವಿಷ್ಣುವನ್ನು ಸ್ಮರಿಸುತ್ತ ಎರಡು ಕೈಗಳನ್ನೂ ಬೊಗಸೆಮಾಡಿಕೊಂಡು, ಭಕ್ತಿಯಿಂದ ತನ್ನ ಕತ್ತನ್ನು ಬಾಗಿಸಿಕೊಂಡು ಆ ದುರ್ಗಾದೇವಿಯನ್ನು ಧ್ಯಾನಮಾಡಿದನು.

೧೫. ಶ್ರೀ ಮಹಾದೇವನು ಹೇಳುತ್ತಾನೆ:—ಎಲೈ ದುರ್ಗತಿಯನ್ನು ನಾಶ ಮಾಡುವವಳೇ! ಮಹಾದೇವಿಯೇ! ದುರ್ಗೆಯೇ! ದಯಾಮಯಳೇ! ನಿನ್ನ ಭಕ್ತನೂ ನಿನ್ನ ಕೃಪೆಗೆ ಪಾತ್ರನೂ ಪ್ರಕೃತದಲ್ಲಿ ಶತ್ರುವಿನಿಂದ ಆವರಿಸಲ್ಪಟ್ಟವನೂ ಆಗಿರುವ ನನ್ನನ್ನು ಕಾಪಾಡು, ಕಾಪಾಡು.

೧೬. ಎಲೈ ವಿಷ್ಣುಮಾಯೆಯೇ! ಮಹಾತ್ಮಳೇ! ನಾರಾಯಣ ಶಕ್ತಿರೂಪಿಣಿಯೇ! ಶಾಶ್ವತಳೇ! ಬ್ರಹ್ಮಸ್ವರೂಪಳೇ! ಸರ್ವೋತ್ತಮಳೇ! ನಿತ್ಯಾನಂದ ಸ್ವರೂಪಳೇ! ಕಾಪಾಡು.

೧೭. ಎಲೈ ಪ್ರಪಂಚದ ತಾಯಿಯೇ! ನೀನು ಬ್ರಹ್ಮನೇ ಮೊದಲಾದ ದೇವತೆಗಳಿಗೂ ತಾಯಿಯಾಗಿರುವೆ. ನೀನು ಗುಣಗಳ ಸಂಬಂಧದಿಂದ ಆಕಾರ ಯುಕ್ತಳೂ ಆಗುಣಗಳ ಸಂಬಂಧವಿಲ್ಲದಿರುವಾಗ ಆಕಾರವಿಲ್ಲದವಳೂ ಆಗಿರುವೆ.

೧೮. ಎಲೈ ಶಾಶ್ವತಳೇ! ಪುರುಷನೆಂಬುವನೂ ಮಾಯೆಯಿಂದಾದವನು. ನೀನು ಮೂಲಪ್ರಕೃತಿಯೆಂಬುದೂ ಮಾಯೆಯಿಂದಲೇ ಇವೆರಡಕ್ಕೂ ಮೇಲಿನದಾದ ಬ್ರಹ್ಮಸ್ವರೂಪವೇ ನೀನಾಗಿರುವೆ.

ವೇದಾನಾಂ ಜನನೀ ತ್ವಂ ಚ ಸಾವಿತ್ರೀ ಚ ಪರಾತ್ಪರಾ ।
ವೈಕುಂಠೇ ಚ ಮಹಾಲಕ್ಷ್ಮೀ ಸರ್ವಸಂಪತ್ಸ್ವರೂಪಿಣೀ ॥ ೧೯ ॥

ಮರ್ತ್ಯಲಕ್ಷ್ಮೀಶ್ಚ ಕ್ಷೀರೋದೇ ಕಾಮಿನೀ ಶೇಷಶಾಯಿನಃ ।
ಸ್ವರ್ಗೇಷು ಸ್ವರ್ಗಲಕ್ಷ್ಮೀಸ್ತ್ವಂ ರಾಜಲಕ್ಷ್ಮೀಶ್ಚ ಭೂತಲೇ ॥ ೨೦ ॥

ನಾಗಾದಿಲಕ್ಷ್ಮೀಃ ಪಾತಾಲೇ ಗ್ರಹೇಷು ಗೃಹದೇವತಾ ।
ಸರ್ವಸಸ್ಯಸ್ವರೂಪಾ ತ್ವಂ ಸರ್ವೈಶ್ವರ್ಯವಿಧಾಯಿನೀ ॥ ೨೧ ॥

ರಾಗಾಧಿಷ್ಠಾತೃದೇವೀ ತ್ವಂ ಬ್ರಹ್ಮಣಶ್ಚ ಸರಸ್ವತೀ ।
ಪ್ರಾಣಾನಾಮಧಿದೇವೀ ತ್ವಂ ಕೃಷ್ಣಸ್ಯ ಪರಮಾತ್ಮನಃ ॥ ೨೨ ॥

ಗೋಲೋಕೇ ಚ ಸ್ವಯಂ ರಾಧಾ ಶ್ರೀಕೃಷ್ಣಸ್ಯೈವ ವಕ್ಷಸಿ ।
ಗೋಲೋಕಾಧಿಷ್ಠಿತಾ ದೇವೀ ವೃಂದಾವನವನೇ ವನೇ ॥ ೨೩ ॥

---

೧೯. ನೀನು ವೇದಗಳಿಗೆ ತಾಯಿಯಾಗಿರುವೆ. ಸಾವಿತ್ರಿಯೂ ಪರಾತ್ಪರಳೂ ಆಗಿರುವೆ. ಮತ್ತು ವೈಕುಂಠದಲ್ಲಿ ಸಮಸ್ತ ಐಶ್ವರ್ಯರೂಪಳಾದ ಮಹಾಲಕ್ಷ್ಮಿಯು ನೀನೇ ಆಗಿರುವೆ.

೨೦. ಮತ್ತು ಕ್ಷೀರಸಮುದ್ರದಲ್ಲಿ ಆದಿಶೇಷನ ಮೇಲೆ ಮಲಗಿರುವ ಶ್ರೀಮನ್ನಾರಾಯಣನ ಪತ್ನಿಯಾಗಿರುವವಳೂ ನೀನೆ. ಮಾನವನ ಐಶ್ವರ್ಯರೂಪಳೂ ನೀನೆ. ಸ್ವರ್ಗದಲ್ಲಿ ನೀನು ಸ್ವರ್ಗಲಕ್ಷ್ಮಿಯೆನಿಸಿಕೊಳ್ಳುವೆ. ಭೂಮಿಯಲ್ಲಿ ರಾಜಲಕ್ಷ್ಮಿಯೆನಿಸಿಕೊಳ್ಳುವೆ.

೨೧. ಪಾತಾಳಲೋಕದಲ್ಲಿ ನೀನು ನಾಗಲಕ್ಷ್ಮಿಯೆಂದು ಹೇಳಿಸಿಕೊಳ್ಳುವೆ. ಮನೆಗಳಲ್ಲಿ ಮನೆಯ ದೇವತೆಯೆನಿಸಿಕೊಳ್ಳುವೆ. ಮತ್ತು ನೀನು ಸಕಲ ಸಸ್ಯರೂಪಳೂ ಸಕಲರಿಗೂ ಸಕಲ ಐಶ್ವರ್ಯವನ್ನುಂಟುಮಾಡುವವಳೂ ಆಗಿರುವೆ.

೨೨. ನೀನು ಪ್ರೀತಿಗೆ ಆಧಾರಳಾದ ದೇವಿಯಾಗಿರುವೆ. ಬ್ರಹ್ಮನ ಶಕ್ತಿಯಾದ ಸರಸ್ವತಿಯೂ ನೀನೆ. ಪರಮಾತ್ಮನಾದ ಕೃಷ್ಣನಿಗೆ ನೀನೇ ಪ್ರಾಣಪ್ರಿಯಳಾದ ದೇವಿಯಾಗಿದ್ದೀಯೆ.

೨೩. ಗೋಲೋಕದಲ್ಲಿ ನೀನು ಶ್ರೀಕೃಷ್ಣನ ಎದೆಯಲ್ಲಿ ರಾಧೆಯಾಗಿರುವೆ. ವೃಂದಾವನದಲ್ಲಿಯೂ ವನಗಳಲ್ಲಿಯೂ ಗೋಲೋಕದ ಆಧಾರದೇವಿಯಾಗಿರುವೆ.

ಶ್ರೀರಾಸಮುಂಡಲೇ ರಮ್ಯಾ ವೃಂದಾವನವಿನೋದಿನೀ ।
ಶತಶೃಂಗಾಧಿದೇವೀ ತ್ವಂ ನಾಮ್ನಾ ಚಿತ್ರಾವಲೀತಿ ಚ ॥ ೨೪ ॥

ದಕ್ಷಕನ್ಯಾ ಕುತ್ರಕಲ್ಪೇ ಕುತ್ರಕಲ್ಪೇ ಚ ಶೈಲಜಾ ।
ದೇವಮಾತಾ ದಿತಿಸ್ತ್ವಂ ಚ ಸರ್ವಾಧಾರಾ ವಸುಂಧರಾ ॥ ೨೫ ॥

ತ್ವಮೇವ ಗಂಗಾ ತುಲಸೀ ತ್ವಂ ಚ ಸ್ವಾಹಾ ಸ್ವಧಾ ಸತೀ ।
ತ್ವದಂಶಾಂಶಾಂಶಕಲಯಾ ಸರ್ವದೇವಾದಿಯೋಷಿತಃ ॥ ೨೬ ॥

ಸ್ತ್ರೀರೂಪಂ ಚಾತಿಪುರುಷಂ ದೇವಿ ತ್ವಂ ಚ ನಪುಂಸಕಮ್ ।
ವೃಕ್ಷಾಣಾಂ ವೃಕ್ಷರೂಪಾ ತ್ವಂ ಸೃಷ್ಟ್ವಾ ಚಾಂಕುರರೂಪಿಣೀ ॥ ೨೭ ॥

ವಹ್ನೌ ಚ ದಾಹಿಕಾ ಶಕ್ತಿರ್ಜಲೇ ಶೈತ್ಯಸ್ವರೂಪಿಣೀ ।
ಸೂರ್ಯೇ ತೇಜಸ್ಸ್ವರೂಪಾ ಚ ಪ್ರಭಾರೂಪಾ ಚ ಸಂತತಮ್ ॥ ೨೮ ॥

---

೨೪. ಸಂಪದ್ಭರಿತವಾದ ರಾಸಮುಂಡಲದಲ್ಲಿ ಮನೋಜ್ಞಳಾಗಿರುವೆ. ಮತ್ತು ವೃಂದಾವನವನ್ನು ಆನಂದಗೊಳಿಸುವವಳೂ ಆಗಿರುವೆ. ಅಲ್ಲದೆ, ಶತಶೃಂಗನ ಅಧಿದೇವಿಯೂ ಚಿತ್ರಾವಲಿಯೆಂಬ ಹೆಸರುಳ್ಳವಳೂ ನೀನೇ ಆಗಿರುವೆ.

೨೫. ನೀನು ಕೆಲವು ಕಲ್ಪದಲ್ಲಿ ದಕ್ಷಬಹ್ಮನ ಮಗಳಾದ ದಾಕ್ಷಾಯಣಿಯೂ, ಕೆಲವು ಕಲ್ಪದಲ್ಲಿ ಪರ್ವತರಾಜನ ಮಗಳೂ ಆಗಿರುವೆ. ದೇವತೆಗಳ ತಾಯಿಯೂ ನೀನೇ ಮತ್ತು ಸಕಲಕ್ಕೂ ಆಧಾರವಾಗಿರುವ ಭೂಮಿಯೂ ನೀನೇ ಆಗಿರುವೆ.

೨೬. ನೀನೇ ಗಂಗೆಯು, ತುಲಸಿಯೂ ನೀನೆ. ಸ್ವಾಹಾಕಾರ ಸ್ವಧಾಕಾರಗಳೂ ನೀನೇ ಆಗಿರುವೆ. ದೇವತೆಗಳೇ ಮೊದಲಾದ ಸಮಸ್ತ ಸ್ತ್ರೀಯರೂ ಕೂಡ ನಿನ್ನ ಅಂಶದ ಹದಿನಾರನೆಯ ಒಂದು ಭಾಗದಿಂದ ಹುಟ್ಟಿದವರಾಗಿರುತ್ತಾರೆ.

೨೭. ಎಲೈ ದೇವಿಯೇ! ನೀನು ಸ್ತ್ರೀರೂಪಳೂ ಪುರುಷರೂಪಳೂ ನಪುಂಸಕರೂಪಳೂ ಆಗಿರುವೆ. ವೃಕ್ಷಗಳ ಮಧ್ಯೆ ವೃಕ್ಷರೂಪಳೂ ಈ ಸೃಷ್ಟಿಗೆ ಮೊಳಕೆಯ ರೂಪಳೂ ಆಗಿರುವೆ.

೨೮. ನೀನು ಬೆಂಕಿಯಲ್ಲಿ ಸುಡುವ ಶಕ್ತಿಯೂ, ನೀರಿನಲ್ಲಿ ಶೀತಸ್ವರೂಪಳೂ, ಸೂರ್ಯನಲ್ಲಿ ತೇಜಃಸ್ವರೂಪಳೂ ಮತ್ತು ಯಾವಾಗಲೂ ಪ್ರಭಾರೂಪಳೂ ಆಗಿರುವೆ.

ಗಂಧರೂಪಾ ಚ ಭೂಮೌ ಚ ಆಕಾಶೇ ಶಬ್ದರೂಪಿಣೀ ।
ಶೋಭಾಸ್ವರೂಪಾ ಚಂದ್ರೇ ಚ ಪದ್ಮಸಂಘೇ ಚ ನಿಶ್ಚಿತಮ್ ॥ ೨೯ ॥

ಸೃಷ್ಟೌ ಸೃಷ್ಟಿಸ್ವರೂಪಾ ಚ ಪಾಲನೇ ಪರಿಪಾಲಿಕಾ ।
ಮಹಾಮಾರೀ ಚ ಸಂಹಾರೇ ಜಲೇ ಚ ಜಲರೂಪಿಣೀ ॥ ೩೦ ॥

ಕ್ಷುತ್ತ್ವಂ ದಯಾ ತ್ವಂ ನಿದ್ರಾತ್ವಂ ತೃಷ್ಣಾ ತ್ವಂ ಬುದ್ಧಿರೂಪಿಣೀ ।
ತುಷ್ಟಿಸ್ತ್ವಂ ಚಾಪಿ ಪುಷ್ಟಿಸ್ತ್ವಂ ಶ್ರದ್ಧಾ ತ್ವಂ ಚ ಕ್ಷಮಾಸ್ಸ್ವಯಮ್ ॥ ೩೧ ॥

ಶಾಂತಿಸ್ತ್ವಂ ಚ ಸ್ವಯಂ ಭ್ರಾಂತಿಃ ಕಾಂತಿಸ್ತ್ವಂ ಕೀರ್ತಿರೇವ ಚ ।
ಲಜ್ಜಾ ತ್ವಂ ಚ ತಥಾ ಮಾಯಾ ಭುಕ್ತಿಮುಕ್ತಿಸ್ವರೂಪಿಣೀ ॥ ೩೨ ॥

ಸರ್ವಶಕ್ತಿಸ್ವರೂಪಾ ತ್ವಂ ಸರ್ವಸಂಪತ್ಪ್ರದಾಯಿನೀ ।
ವೇದೇ ನಿರ್ವಚನೀಯಾ ತ್ವಂ ತ್ವಾಂ ನ ಜಾನಾತಿ ಕಶ್ಚನ ॥ ೩೩ ॥

---

೨೯. ನೀನು ಭೂಮಿಯಲ್ಲಿ ಗಂಧಸ್ವರೂಪಳೂ, ಆಕಾಶದಲ್ಲಿ ಶಬ್ದಸ್ವರೂಪಳೂ, ಚಂದ್ರನಲ್ಲಿಯೂ, ಕಮಲ ಸಮೂಹದಲ್ಲಿಯೂ ಕಾಂತಿರೂಪಳೂ ಆಗಿರುವೆಯೆಂದು ನಿಶ್ಚಯಿಸಲ್ಪಟ್ಟಿರುವೆ.

೩೦. ಪ್ರಪಂಚವನ್ನು ಸೃಷ್ಟಿಮಾಡುವ ಕಾಲದಲ್ಲಿ ನೀನು ಸೃಷ್ಟಿರೂಪಳೂ, ಆ ಪ್ರಪಂಚವನ್ನು ಕಾಪಾಡುವ ಕಾಲದಲ್ಲಿ ಪಾಲನರೂಪಳೂ, ಅದನ್ನು ಸಂಹಾರ ಮಾಡುವ ಕಾಲದಲ್ಲಿ ಮಹಾಮಾರೀ ಸ್ವರೂಪಳೂ, ನೀರಿನಲ್ಲಿ ನೀರಿನ ರೂಪಳೂ ಆಗಿರುವೆ.

೩೧. ನೀನೇ ಹಸಿವು. ದಯೆಯೂ ನೀನೇ. ನಿದ್ರೆಯೂ ನೀನೇ. ಆಶೆಯೂ ನೀನೇ. ಬುದ್ಧಿರೂಪಳೂ ನೀನೇ. ನೀನೇ ತೃಪ್ತಿಯು. ಪುಷ್ಟಿಯೂ ನೀನೇ. ಶ್ರದ್ಧೆಯೂ ನೀನೇ. ತಾಳ್ಮೆಯೂ ನೀನೇ.

೩೨. ಶಾಂತಿಯೂ ನೀನೇ. ಭ್ರಾಂತಿಯೂ ನೀನೇ. ಕಾಂತಿಯೂ ನೀನೇ. ಕೀರ್ತಿಯೂ ನೀನೇ. ಲಜ್ಜೆಯೂ ನೀನೇ. ಮಾಯೆಯೂ ನೀನೇ. ಭುಕ್ತಿ ಮುಕ್ತಿ ಸ್ವರೂಪಿಣಿಯೂ ನೀನೇ.

೩೩. ನೀನು ಸಕಲ ಶಕ್ತಿರೂಪಳಾಗಿಯೂ, ಸಮಸ್ತ ಸಂಪತ್ತುಗಳನ್ನೂ ಕೊಡುವವಳಾಗಿಯೂ ಇರುವೆ. ಮತ್ತು ನೀನು ವೇದದಲ್ಲಿ ಹೇಳಲ್ಪಟ್ಟವಳಾಗಿರುವುದರಿಂದ ನಿನ್ನನ್ನು ಯಾವನೊಬ್ಬನೂ ತಿಳಿಯಲಾರನು.

ಸಹಸ್ರವಕ್ತ್ರಸ್ತ್ವಾಂ ಸ್ತೋತುಂ ನ ಚ ಶಕ್ತಃ ಸುರೇಶ್ವರಿ ।
ವೇದಾ ನ ಶಕ್ತಾಃ ಕೋ ವಿದ್ವಾನ್ನ ಚ ಶಕ್ತಾ ಸರಸ್ವತೀ || ೩೪ ||

ಸ್ವಯಂ ವಿಧಾತಾ ಶಕ್ತೋ ನ ನ ಚ ವಿಷ್ಣುಃ ಸನಾತನಃ ।
ಕಿಂ ಸ್ತೌಮಿ ಪಂಚವಕ್ತ್ರೈಸ್ತು ರಣತ್ರಸ್ತೋ ಮಹೇಶ್ವರಿ || ೩೫ ||

ಕೃಪಾಂ ಕುರು ಮಹಾಮಾಯೇ ಮಮ ಶತ್ರುಕ್ಷಯಂ ಕುರು ।
ಇತ್ಯುಕ್ತ್ವಾ ಚ ಸಕರುಣಂ ರಥಸ್ಥೇ ಪತಿತೇ ರಣೇ || ೩೬ ||

ಆವಿರ್ಬಭೂವ ಸಾ ದುರ್ಗಾ ಸೂರ್ಯಕೋಟಿಸಮಪ್ರಭಾ ।
ನಾರಾಯಣೇನ ಕೃಪಯಾ ಪ್ರೇರಿತಾ ಪರಮಾತ್ಮನಾ || ೩೭ ||

ಶಿವಸ್ಯ ಪುರತಃ ಶೀಘ್ರಂ ಶಿವಾಯ ಚ ಜಯಾಯ ಚ ।
ಇತ್ಯುವಾಚ ಮಹಾದೇವಿ ಮಾಯಾ ಶಕ್ತ್ಯಾಸುರಂ ಜಹಿ || ೩೮ ||

---

೩೪ ಎಲೈ ದೇವೇಶ್ವರಿಯೇ! ಸಾವಿರ ಮುಖವುಳ್ಳ ಆದಿಶೇಷನೂ ಕೂಡ ನಿನ್ನನ್ನು ಸ್ತೋತ್ರ ಮಾಡಲು ಸಮರ್ಥನಲ್ಲ. ವೇದಗಳೂ ಕೂಡ ಸಮರ್ಥಗಳಲ್ಲ. ಸರಸ್ವತಿಯೂ ಕೂಡ ಶಕ್ತಳಲ್ಲ. ಇನ್ನು ಯಾವ ವಿದ್ವಾಂಸನು ತಾನೇ ಸ್ತೋತ್ರ ಮಾಡಲು ಶಕ್ತನಾಗುತ್ತಾನೆ?

೩೫. ಎಲೈ ಮಹೇಶ್ವರಿಯೇ! ಸಾಕ್ಷಾತ್ ಬ್ರಹ್ಮನೂ ಸ್ತೋತ್ರಮಾಡಲಸಮರ್ಥನಾಗಿರುವನು. ಶಾಶ್ವತನಾದ ವಿಷ್ಣುವೂ ಕೂಡ ಅಶಕ್ತನಾಗಿರುವನು. ಯುದ್ಧದಲ್ಲಿ ಬಳಲಿರುವ ನಾನು ನನ್ನ ಈ ಐದು ಮುಖಗಳಿಂದ ನಿನ್ನನ್ನು ಹೇಗೆ ಸ್ತೋತ್ರ ಮಾಡಲಿ?

೩೬–೩೮. ಎಲೈ ಮಹಾಮಾಯೆಯೇ! ನನ್ನ ಮೇಲೆ ಕೃಪೆಯನ್ನು ಮಾಡು ನನ್ನ ಶತ್ರುವನ್ನು ನಾಶಮಾಡು. ಎಂದು ಹೇಳಿ ದುಃಖದಿಂದ ರಥದ ಮೇಲಿದ್ದ ಶಂಕರನು ಯುದ್ಧಭೂಮಿಯಲ್ಲಿ ಬಿದ್ದಿರಲು, ದಯೆಯಿಂದ ಪರಮಾತ್ಮನಾದ ನಾರಾಯಣನಿಂದ ಪ್ರೇರಿಸಲ್ಪಟ್ಟವಳಾಗಿ ಆ ದುರ್ಗಾದೇವಿಯು ಕೋಟಿಸೂರ್ಯರಂತೆ ಹೊಳೆಯುತ್ತಿರುವವಳಾಗಿ ಶಂಕರನಿಗೆ ಜಯವನ್ನುಂಟುಮಾಡುವುದಕ್ಕೂ, ಮಂಗಳವನ್ನುಂಟುಮಾಡುವುದಕ್ಕಾಗಿಯೂ ಬೇಗನೆ ಶಿವನೆದುರಿನಲ್ಲಿ ಪ್ರತ್ಯಕ್ಷಳಾದಳು. ಮತ್ತು ಆ ಮಹಾದೇವಿಯು ಶಂಕರನನ್ನು ಕುರಿತು— ಮಾಯಾಶಕ್ತಿಯಿಂದ ರಾಕ್ಷಸನನ್ನು ಕೊಲ್ಲುವವನಾಗು ಎಂದು ಹೇಳಿದಳು.

|| ಶ್ರೀ ದುರ್ಗೋವಾಚ ||

ವರಂ ವೃಣೀಷ್ವ ಭದ್ರಂ ತೇ ಯತ್ತೇ ಮನಸಿ ವಾಂಛಿತಮ್ ।
ಭವಾನ್ಸುರಃ ಸುರಾಣಾಂ ಚ ಜಯಂ ತುಭ್ಯಂ ದದಾಮ್ಯಹಮ್ || ೩೯ ||

|| ಶ್ರೀ ಮಹಾದೇವ ಉವಾಚ ||

ಕ್ಷಯೋ ಭವತು ದೈತ್ಯಸ್ಯ ಇತಿ ಮೇ ವರಮೀಶ್ವರಿ ।
ದೇಹೀತಿ ವಾಂಛಿತಂ ದುರ್ಗೇ ಪರಮಾದ್ಯೇ ಸನಾತನಿ || ೪೦ ||

|| ಭಗವತ್ಯುವಾಚ ||

ಹರಿಂ ಸ್ಮರ ಮಹಾಭಾಗ ಜಯಂ ದೈತ್ಯಂ ಜಗದ್ಗುರೋ ।
ಸ್ವಯಂ ವಿಧಾತಾ ಭಗವಾಂಸ್ತ್ವಮೇವ ಜ್ಯೋತಿರೀಶ್ವರಃ . || ೪೧ ||

ಏತಸ್ಮಿನ್ನಂತರೇ ವಿಷ್ಣುರ್ವೃಷರೂಪೋ ಬಭೂವ ಹ ।
ದಧಾರ ಕಲಯಾ ಮೂರ್ಧ್ನಾ ಶೂಲಪಾಣೇ ರಥಂ ವಿಭುಃ || ೪೨ ||

---

೩೯. ಶ್ರೀ ದುರ್ಗಿಯು ಹೇಳುತ್ತಾಳೆ:—ಎಲೈ ಶಂಕರನೇ! ನಿನಗೆ ಮಂಗಳ ವಾಗಲಿ. ನಿನ್ನ ಮನಸ್ಸಿನಲ್ಲಿ ಏನಿದೆಯೋ ಆ ವರವನ್ನು ಬೇಡು. ನೀನು ಸಮಸ್ತ ದೇವತೆಗಳಲ್ಲೆಲ್ಲ ಉತ್ತಮನು. ನಾನು ನಿನಗೆ ಜಯವನ್ನು ಕೊಡುತ್ತೇನೆ.

೪೦. ಶ್ರೀ ಮಹಾದೇವನು ಹೇಳುತ್ತಾನೆ :—ಎಲೈ ಈಶ್ವರಿಯೇ! ಎಲ್ಲರಿಗೂ ಮೊದಲಿನವಳೇ! ಶಾಶ್ವತಳಾದ ದುರ್ಗಾದೇವಿಯೇ! ಈ ರಾಕ್ಷಸನು ನಾಶವಾಗ ಬೇಕೆಂಬುದೇ ನನಗೆ ಇಷ್ಟವಾದ ವರವು. ಅದನ್ನು ಕೊಡುವವಳಾಗು

೪೧. ಭಗವತಿಯು ಹೇಳುತ್ತಾಳೆ:— ಎಲೈ ಮಹಾತ್ಮನೇ! ಜಗತ್ತಿಗೆ ಗುರುವೇ! ನೀನು ಸಕಲವನ್ನೂ ಸೃಷ್ಟಿಮಾಡಬಲ್ಲವನೂ, ಷಡ್ಗುಣೈಶ್ವರ್ಯಸಂಪನ್ನನೂ, ತೇಜೋರೂಪನೂ, ಈಶ್ವರನೂ ಆಗಿರುವೆ ಶ್ರೀ ಹರಿಯನ್ನು ಸ್ಮರಣೆ ಮಾಡು. ರಾಕ್ಷಸನನ್ನು ಗೆಲ್ಲು.

೪೨. ಇಷ್ಟು ಸಮಯದಲ್ಲಿ ವಿಭುವಾದ ವಿಷ್ಣುವು ತನ್ನ ಕಲೆಯಿಂದ ಬಸವನ ರೂಪವನ್ನು ಧರಿಸಿದನು. ಮತ್ತು ತನ್ನ ತಲೆಯಿಂದ ಶೂಲಪಾಣಿಯಾದ ಶಿವನ ರಥವನ್ನು ಹೊತ್ತುಕೊಂಡನು.

ಊರ್ಧ್ವಚಕ್ರಮಥೋಗ್ರಂ ಚ ಪ್ರಕೃತಿಂ ಚ ಚಕಾರ ಸಃ ।
ಅಸ್ತ್ರಂ ದದೌ ಮಂತ್ರಪೂತಮುದ್ದಧಾರ ತತೋ ರಥಮ್ ॥ ೪೩ ॥

ಶಿವಃ ಶಸ್ತ್ರಂ ಗೃಹೀತ್ವಾ ಚ ಧ್ಯಾತ್ವಾ ವಿಷ್ಣುಂ ಮಹೇಶ್ವರೀಮ್ ।
ಜಘಾನ ತ್ರಿಪುರಂ ಶೀಘ್ರಂ ಸ ಪಪಾತ ಮಹೀತಲೇ ॥ ೪೪ ॥

ತುಷ್ಟುವುಃ ಶಂಕರಂ ದೇವಾಶ್ಚಕ್ರುಶ್ಚ ಪುಷ್ಪವರ್ಷಣಮ್ ।
ದುರ್ಗಾ ತಸ್ಮೈ ದದೌ ಶೂಲಂ ಪಿನಾಕಂ ವಿಷ್ಣುರೇವ ಚ ॥ ೪೫ ॥

ಬ್ರಹ್ಮಾ ಶುಭಾಶಿಷಂ ಚ್ಕೈವ ಮುನಯಶ್ಚಾಪಿ ಹರ್ಷಿತಾಃ ।
ನನೃತುರ್ದೇವತಾಃ ಸರ್ವಾ ಜಗುರ್ಗಂಧರ್ವಕಿನ್ನರಾಃ ॥ ೪೬ ॥

ಏತಸ್ಮಿನ್ನಂತರೇ ತಾತ ಸ್ತವರಾಜಮನುತ್ತಮಮ್ ।
ವಿಘ್ನಂ ವಿಘ್ನಹರಂ ಶೀಘ್ರಂ ಶತ್ರುಸಂಹಾರಕಾರಣಮ್ ॥ ೪೭ ॥

---

೪೩. ಆ ವಿಷ್ಣುವು ಮಂತ್ರದಿಂದ ಪರಿಶುದ್ಧವಾದ ಅಸ್ತ್ರವನ್ನು ಶಂಕರನಿಗೆ ಕೊಟ್ಟನು. ಅನಂತರ ತಲೆಕೆಳಗಾಗಿ ಚಕ್ರಗಳು ಮೇಲ್ಮುಖವಾಗಿದ್ದ ರಥವನ್ನು ಮೇಲಕ್ಕೆತ್ತಿ ಸರಿಯಾಗಿರುವಂತೆ ಮಾಡಿದನು.

೪೪. ಶಿವನು ವಿಷ್ಣುವು ಕೊಟ್ಟ ಅಸ್ತ್ರವನ್ನು ತೆಗೆದುಕೊಂಡು ವಿಷ್ಣುವನ್ನೊಮ್ಮೆ ಸ್ಮರಣೆ ಮಾಡಿದನು ಮತ್ತು ಆ ಮಹೇಶ್ವರಿಯನ್ನೂ ಸ್ಮರಣೆ ಮಾಡಿದನು. ಜಾಗ್ರತೆಯಾಗಿ ತ್ರಿಪುರಾಸುರನನ್ನು ಹೊಡೆದನು. ಆ ದೈತ್ಯನು ಭೂಮಿಯ ಮೇಲೆ ಬಿದ್ದನು

೪೫. ಆಗ ದೇವತೆಗಳೆಲ್ಲರೂ ಸಂತೋಷದಿಂದ ಹೂಮಳೆಯನ್ನು ಕರೆದರು ಮತ್ತು ಈಶ್ವರನನ್ನು ಸ್ತೋತ್ರ ಮಾಡಿದರು. ದುರ್ಗಾದೇವಿ ಈಶ್ವರನಿಗೆ ಶೂಲವೆಂಬ ಆಯುಧವನ್ನು ಕೊಟ್ಟಳು. ವಿಷ್ಣುವೂ ಕೂಡ ಪಿನಾಕವೆಂಬ ಬಿಲ್ಲನ್ನು ಕೊಟ್ಟನು.

೪೬. ಬ್ರಹ್ಮನು ಮಂಗಳಕರವಾದ ಆಶೀರ್ವಾದವನ್ನು ಮಾಡಿದನು. ಮುನಿಗಳೆಲ್ಲರೂ ಸಂತೋಷಗೊಂಡರು. ದೇವತೆಗಳೆಲ್ಲರೂ ಕುಣಿದಾಡಿದರು. ಗಂಧರ್ವರು ಮತ್ತು ಕಿನ್ನರರು ಹಾಡಿದರು.

೪೭. ಎಲೈ ತಂದೆಯೇ! ಈ ಸಮಯದಲ್ಲಿ ಹೇಳಲ್ಪಟ್ಟ ಈ ಸ್ತೋತ್ರವು ಅತ್ಯಂತ ಶ್ರೇಷ್ಠವಾದುದು. ಸಮಸ್ತ ವಿಘ್ನಗಳನ್ನು ನಾಶಮಾಡುವುದಾಗಿಯೂ, ಜಾಗ್ರತೆಯಾಗಿ ಶತ್ರು ಸಂಹಾರಮಾಡುವುದಕ್ಕೆ ಕಾರಣವಾಗಿಯೂ ಇರುವುದು.

ಪರಮೈಶ್ವರ್ಯಜನಕಂ ಸುಖದಂ ಪರಮಂ ಶುಭಮ್ ।
ನಿರ್ವಾಣಮೋಕ್ಷದಂ ಚೈವ ಹರಿಭಕ್ತಿಪ್ರದಂ ಧ್ರುವಮ್ ॥ ೪೮ ॥

ಗೋಲೋಕವಾಸದಂ ಚೈವ ಸರ್ವಸಿದ್ಧಿಪ್ರದಂ ವರಮ್ ।
ಸ್ತೋತ್ರರಾಜಪ್ರಪಠನಾತ್ಪ್ರಸನ್ನಾ ಪಾರ್ವತೀ ಸದಾ ॥ ೪೯ ॥

ಲೋಭಮೋಹಕಾಮಕ್ರೋಧಕರ್ಮಮೂಲನಿಕೃಂತನಮ್ ।
ಬಲಬುದ್ಧಿಕರಂ ಚೈವ ಜನ್ಮಮೃತ್ಯುವಿನಾಶನಮ್ ॥ ೫೦ ॥

ಧನಪುತ್ರಪ್ರಿಯಾಭೂಮಿಸರ್ವಸಂಪತ್ಪ್ರದಂ ನೃಣಾಮ್ ।
ಶೋಕದುಃಖಹರಂ ಚೈವ ಸರ್ವಸಿದ್ಧಿಪ್ರದಂ ವರಮ್ ॥ ೫೧ ॥

ಸ್ತೋತ್ರರಾಜಪ್ರಪಠನಾನ್ಮಹಾವಂಧ್ಯಾ ಪ್ರಸೂಯತೇ ।
ಬಂಧನಾನ್ಮುಚ್ಯತೇ ದುಃಖೀ ಭಯಾನ್ಮುಚ್ಯೇತ ನಿಶ್ಚಿತಮ್ ॥ ೫೨ ॥

---

೪೮. ಅಲ್ಲದೆ ಉತ್ತಮವಾದ ಐಶ್ವರ್ಯವನ್ನುಂಟುಮಾಡುವುದು. ಉತ್ತಮವಾದ ಸುಖವನ್ನೂ ಮಂಗಳವನ್ನೂ ಉಂಟುಮಾಡುತ್ತದೆ.

೪೯. ಗೋಲೋಕದ ವಾಸವನ್ನು ಕೊಡುತ್ತದೆ. ಮತ್ತು ಸಮಸ್ತ ಸಿದ್ಧಿಯನ್ನುಂಟುಮಾಡುತ್ತದೆ. ಈ ಉತ್ತಮವಾದ ಸ್ತೋತ್ರಶ್ರೇಷ್ಠವನ್ನು ಪಠನೆಮಾಡುವುದರಿಂದ ಯಾವಾಗಲೂ ಪಾರ್ವತೀದೇವಿಯು ಪ್ರಸನ್ನಳಾಗುತ್ತಾಳೆ.

೫೦. ಲೋಭ, ಮೋಹ, ಕಾಮ, ಕ್ರೋಧ ಇವುಗಳಿಂದುಂಟಾಗುವ ಕರ್ಮದ ಬೇರನ್ನು ಕತ್ತರಿಸತಕ್ಕುದಾಗಿದೆ. ಮತ್ತು ಬಲವನ್ನೂ ಬುದ್ಧಿಯನ್ನೂ ಉಂಟುಮಾಡಿ ಹುಟ್ಟು ಸಾವುಗಳನ್ನು ಹೋಗಲಾಡಿಸುತ್ತದೆ.

೫೧. ಮಾನವನಿಗೆ ಈ ಸ್ತೋತ್ರವು ಐಶ್ವರ್ಯವನ್ನೂ, ಮಕ್ಕಳನ್ನೂ, ಪತ್ನಿಯನ್ನೂ, ಭೂಮಿಯನ್ನೂ, ಸಕಲ ಸಂಪತ್ತನ್ನೂ ಕೊಡುತ್ತದೆ. ಮತ್ತು ಸಮಸ್ತ ದುಃಖಗಳನ್ನೂ ಹೋಗಲಾಡಿಸಿ, ಸಮಸ್ತ ಸಿದ್ಧಿಯನ್ನೂ ಉಂಟುಮಾಡುತ್ತದೆ.

೫೨. ಈ ಸ್ತೋತ್ರರಾಜವನ್ನು ಭಕ್ತಿಯಿಂದ ಪಠಣಮಾಡುವುದರಿಂದ ಹುಟ್ಟು ಬಂಜೆಯೂ ಕೂಡ ಪ್ರಸವಿಸುತ್ತಾಳೆ. ಬಂಧನದಲ್ಲಿರುವವನು ಬಿಡುಗಡೆ ಹೊಂದುತ್ತಾನೆ. ಸಕಲ ದುಃಖದಿಂದಲೂ ಭಯದಿಂದಲೂ ಮುಕ್ತನಾಗುತ್ತಾನೆ.

ರೋಗಾದ್ವಿಮುಚ್ಯತೇ ರೋಗೀ ದರಿದ್ರಶ್ಚ ಧನೀ ಭವೇತ್ ।
ದಾವಾಗ್ನಿಮಧ್ಯೇ ನ ಮೃತೋ ಮಗ್ನಃ ಪೋತೋ ಮಹಾರ್ಣವೇ ॥ ೫೩ ॥

ದಸ್ಯುಗ್ರಸ್ತೋ ರಿಪುಗ್ರಸ್ತೋ ಹಿಂಸ್ರಜಂತುಸಮನ್ವಿತಃ ।
ಸ್ತೋತ್ರೇಣಾನೇನ ವೈಶ್ಯೇಂದ್ರ ಕಲ್ಯಾಣಂ ಲಭತೇ ನರಃ ॥ ೫೪ ॥

ತೈಜಸಾನಾಂ ಯಥಾ ರತ್ನಮಾಶ್ರಮಾಣಾಂ ದ್ವಿಜೋ ಯಥಾ ।
ನದೀನಾಂ ಚ ಯಥಾ ಗಂಗಾ ಮಂತ್ರಾಣಾಂ ಪ್ರಣವೋ ಯಥಾ ॥ ೫೫ ॥

ತುಲಸೀಸರ್ವಪತ್ರಾಣಾಂ ಧರಾಣಾಂ ಚ ವಸುಂಧರಾ ।
ಪುಷ್ಪಾಣಾಂ ಪಾರಿಜಾತಂ ಚ ಕಾಷ್ಠಾನಾಂ ಚಂದನಂ ಯಥಾ ॥ ೫೬ ॥

ವಿಷ್ಣುಪೂಜಾ ಚ ತಪಸಾಂ ವ್ರತೇಷ್ವೇಕಾದಶೀ ಯಥಾ ।
ಜ್ಞಾನಿನಾಂ ಚ ಯಥಾ ಶಂಭುಃ ಸಿದ್ಧಾನಾಂ ಚ ಗಣೇಶ್ವರಃ ॥ ೫೭ ॥

---

೫೩. ರೋಗಿಯು ರೋಗಮುಕ್ತನಾಗುತ್ತಾನೆ. ದರಿದ್ರನು ಹಣವಂತನಾಗುತ್ತಾನೆ. ಕಾಡುಕಿಚ್ಚಿನ ಮಧ್ಯದಲ್ಲಿ ಸಿಕ್ಕಿದವನು ಸಾಯುವುದಿಲ್ಲ. ದೊಡ್ಡ ಸಮುದ್ರ ಮಧ್ಯದಲ್ಲಿ ಬಿರುಗಾಳಿ ಬೀಸುತ್ತಿದ್ದರೂ ದೋಣಿಯಲ್ಲಿರುವವನು ಮುಳುಗುವುದಿಲ್ಲ.

೫೪. ಎಲೈ ವೈಶ್ಯಶ್ರೇಷ್ಠನೇ! ಮಾನವನು ಕಳ್ಳರ ಕೈಗೆ ಸಿಕ್ಕಿರಲಿ, ಶತ್ರುವಿನ ವಶನಾಗಿರಲಿ, ಕ್ರೂರ ಪ್ರಾಣಿಗಳಿಂದ ಹಿಡಿಯಲ್ಪಟ್ಟರಲಿ ಈ ಸ್ತೋತ್ರವನ್ನು ಪಠನ ಮಾಡುವುದರಿಂದ ಶುಭವನ್ನು ಹೊಂದುತ್ತಾನೆ.

೫೫–೫೯. ಕಾಂತಿಯುಳ್ಳ ಪದಾರ್ಥಗಳಲ್ಲಿ ರತ್ನಮಣಿಯು ಹೇಗೆ ಉತ್ತಮವಾದುದೋ, ಆಶ್ರಮಗಳಲ್ಲಿ) ವರ್ಣಗಳಲ್ಲಿ) ಬ್ರಾಹ್ಮಣನು ಹೇಗೆ ಉತ್ತಮನೋ, ನದಿಗಳಲ್ಲೆಲ್ಲ ಗಂಗೆಯು ಹೇಗೆ ಉತ್ತಮವಾದುದೋ, ಮಂತ್ರಗಳಲ್ಲೆಲ್ಲ ಓಂಕಾರವು ಹೇಗೋ, ಸಮಸ್ತ ಪತ್ರೆಗಳಲ್ಲಿಯೂ ತುಲಸೀ ಪತ್ರೆಯು ಹೇಗೋ, ಧಾರಣೆಮಾಡುವುದರಲ್ಲಿ ಭೂಮಿಯು ಹೇಗೊ, ಹೂಗಳಿಗೆಲ್ಲ ಪಾರಿಜಾತವು ಹೇಗೋ, ಕಟ್ಟಿಗೆಗಳಲ್ಲಿ ಗಂಧದ ಕಟ್ಟಿಗೆಯು ಹೇಗೋ, ತಪಸ್ಸುಗಳಲ್ಲೆಲ್ಲ ವಿಷ್ಣುಪೂಜೆಯು ಹೇಗೋ, ವ್ರತಗಳಲ್ಲೆಲ್ಲ ಏಕಾದಶೀ ವ್ರತವು ಹೇಗೋ, ಜ್ಞಾನಿಗಳಿಗೆಲ್ಲ ಈಶ್ವರನು ಹೇಗೋ, ಸಿದ್ಧರಿಗೆಲ್ಲ ಗಣೇಶ್ವರನು ಹೇಗೋ, ದೇವರಲ್ಲೆಲ್ಲ ವಿಷ್ಣುವು ಹೇಗೋ, ಶಾಸ್ತ್ರಗಳಲ್ಲೆಲ್ಲ ವೇದವು ಹೇಗೋ, ದೇವಿಯರಲ್ಲೆಲ್ಲ ದುರ್ಗಾದೇವಿಯು ಹೇಗೋ, ಶಾಂತರಲ್ಲಿ ಲಕ್ಷ್ಮಿಯು

ದೇವಾನಾಂ ಚ ಯಥಾ ವಿಷ್ಣುರ್ವೇದಾಃ ಶಾಸ್ತ್ರೇಷು ತಂತ್ರತಃ ।
ದೇವೀನಾಂ ಚ ಯಥಾ ದುರ್ಗಾ ಶಾಂತಸಾಂ ಕಮಲಾ ಯಥಾ ॥ ೫೮ ॥

ಸರಸ್ವತೀ ಚ ವಿದುಷಾಂ ರಾಧಿಕಾ ಸುಂದರೀಷು ಚ ।
ತಥಾ ಸ್ತೋತ್ರೇಷ್ವಿದಂ ಸ್ತೋತ್ರಂ ನಾತಃ ಪರತರಂ ವ್ರಜ ॥ ೫೯ ॥

ಪುರಾ ದತ್ತಂ ಬ್ರಹ್ಮಣೇ ಚ ಪುಷ್ಕರೇ ಸೂರ್ಯಪರ್ವಣಿ ।
ದೈತ್ಯಗ್ರಸ್ತಾಯ ಭೀತಾಯ ಸರ್ವದುರ್ಗಹರಂ ಪರಮ್ ॥ ೬೦ ॥

ಶಿವಾಯ ಶತ್ರುಗ್ರಸ್ತಾಯ ದದೌ ಬ್ರಹ್ಮಾ ಮದಾಜ್ಞಯಾ ।
ಶಿವಶ್ಚ ಸನಕಾದಿಭ್ಯಃ ಪುರಾ ದುರ್ವಾಸಸೇ ದದೌ ॥ ೬೧ ॥

ಸನತ್ಕುಮಾರೋ ಭಗವಾನ್ ಕೃಪಯಾ ಗೌತಮಾಯ ಚ ।
ಪುಲಹಾಯ ಪುಲಸ್ತ್ಯಾಯ ದದೌ ಚಾಂಗೀರಸೇ ಮುದಾ ॥ ೬೨ ॥

ತಥಾ ಚಂದ್ರಾಯ ಸೂರ್ಯಾಯ ಸೂರ್ಯಶ್ಚಾಪಿ ಯಮಾಯ ಚ ।
ಯಮಶ್ಚ ಚಿತ್ರಗುಪ್ತಾಯ ಕೃಪಯಾ ಚ ಪುರಾ ದದೌ ॥ ೬೩ ॥

---

ಹೇಗೋ, ವಿದ್ವಾಂಸರಲ್ಲಿ ಸರಸ್ವತಿಯು ಹೇಗೋ, ಸುಂದರಿಯರಲ್ಲಿ ರಾಧೆಯು ಹೇಗೋ ಹಾಗೆ ಸಕಲ ಸ್ತೋತ್ರಗಳಲ್ಲಿಯೂ ಈ ಸ್ತೋತ್ರವು ಶ್ರೇಷ್ಠವಾದುದು. ಎಲೈ ಗೋಪನೇ! ಇದಕ್ಕಿಂತಲೂ ಉತ್ತಮವಾದುದು ಇಲ್ಲವೇ ಇಲ್ಲ.

೬೦. ಹಿಂದೆ ಬ್ರಹ್ಮನು ರಾಕ್ಷಸರಿಂದ ಹಿಡಿಯಲ್ಪಟ್ಟು ಭಯಗೊಂಡಕಾಲದಲ್ಲಿ ಪುಷ್ಕರ ಕ್ಷೇತ್ರದಲ್ಲಿ ಸೂರ್ಯಗ್ರಹಣ ಸಮಯದಲ್ಲಿ ಸಕಲ ಸಂಕಷ್ಟಗಳನ್ನೂ ನಾಶ ಮಾಡುವ ಈ ಸ್ತೋತ್ರವು ಉಪದೇಶಿಸಲ್ಪಟ್ಟಿತು.

೬೧. ನನ್ನ ಅಪ್ಪಣೆಯ ಪ್ರಕಾರ ಬ್ರಹ್ಮನು ಶತ್ರುವಿನಿಂದ ಹಿಡಿಯಲ್ಪಟ್ಟಿದ್ದ ಈಶ್ವರನಿಗೆ ಉಪದೇಶ ಮಾಡಿದನು. ಈಶ್ವರನೂ ಕೂಡ ಸನಕಾದಿಗಳಿಗೆ ಉಪದೇಶ ಮಾಡಿದನಲ್ಲದೆ, ಹಿಂದೆ ದೂರ್ವಾಸ ಮುನಿಗೂ ಉಪದೇಶಿಸಿದನು.

೬೨. ಪೂಜ್ಯನಾದ ಸನತ್ಕುಮಾರನು ದಯೆಯಿಂದ ಗೌತಮನಿಗೂ, ಪುಲಹನಿಗೂ, ಪುಲಸ್ತ್ಯನಿಗೂ, ಅಂಗಿರಸನಿಗೂ ಸಂತೋಷದಿಂದ ಉಪದೇಶ ಮಾಡಿದನು.

೬೩, ಹಾಗೆಯೇ ಚಂದ್ರನಿಗೂ ಸೂರ್ಯನಿಗೂ ಉಪದೇಶ ಮಾಡಿದನು. ಸೂರ್ಯನು ಯಮನಿಗೆ ಉಪದೇಶಿಸಿದನು. ಯಮನು ಪೂರ್ವದಲ್ಲಿ ದಯೆಯಿಂದ ಚಿತ್ರಗುಪ್ತನಿಗೆ ಉಪದೇಶ ಮಾಡಿದನು.

ನಿತ್ಯಂ ಪಠಿಷ್ಯಸಿ ಸ್ತೋತ್ರಂ ಗೋಲೋಕಗಮನಾಯ ವೈ ।
ಸಾಕ್ಷಾತ್ಪಶ್ಯಸಿ ಭೋ ತಾತ ತಾಮೇವ ಪಾರ್ವತೀಮಿಹ　　|| ೬೪ ||

ಯಸ್ಮೈ ಕಸ್ಮೈ ನ ದಾತವ್ಯಂ ಪಾಪಿನೇ ಗೋಪನಂ ಕುರು ।
ನಾರಾಯಣಸ್ಯ ಭಕ್ತಾಯ ಶಾಂತಾಯ ವಿದುಷೇ ತಥಾ　　|| ೬೫ ||

ಸರ್ವಜ್ಞಾಯ ಚ ವಿಪ್ರಾಯ ಪ್ರದಾತವ್ಯಂ ಪ್ರಯತ್ನತಃ ।
ವಿಪ್ರಾಯ ವೃಷವಾಹಾಯ ವೃಷಲೀಪತಯೇ ತಥಾ　　|| ೬೬ ||

ಶೂದ್ರಾಣಾಂ ಸೂಪಕಾರಾಯ ಶೂದ್ರಶ್ರಾದ್ಧಾನ್ನಭೋಜಿನೇ ।
ಕನ್ಯಾವಿಕ್ರಯಿಣೇ ಚೈವ ಬ್ರಾಹ್ಮಣಾಯ ವಿಶೇಷತಃ　　|| ೬೭ ||

ಸರ್ವಸಿದ್ಧಿಂ ಚ ಲಭತೇ ಸಿದ್ಧಸ್ತೋತ್ರೋ ಭವೇದ್ಯದಿ ।
ದಶಾಯುತ ಜಪೇನೈವ ಸಿದ್ಧಸ್ತೋತ್ರೋ ಭವೇನ್ನರಃ　　|| ೬೮ ||

---

೬೪. ಎಲೈ ತಂದೆಯೇ! ಗೋಲೋಕಕ್ಕೆ ಹೋಗುವುದಕ್ಕೋಸ್ಕರ ನಿತ್ಯವೂ ಈ ಸ್ತೋತ್ರವನ್ನು ಹೇಳುವವನಾದ ಪಕ್ಷದಲ್ಲಿ ಆ ಪಾರ್ವತೀ ದೇವಿಯನ್ನು ಇಲ್ಲಿಯೇ ಪ್ರತ್ಯಕ್ಷವಾಗಿ ನೋಡುವವನಾಗುತ್ತೀಯೆ.

೬೫–೬೭. ಪಾಪಿಯಾದ ಮಾನವನಿಗೆ ಈ ಮಂತ್ರವನ್ನು ಉಪದೇಶ ಮಾಡಬಾರದು. ರಹಸ್ಯವಾಗಿಟ್ಟುಕೊಳ್ಳುವವನಾಗು. ನಾರಾಯಣನ ಭಕ್ತನೂ ಶಾಂತನೂ ಪಂಡಿತನೂ, ಸರ್ವಜ್ಞನೂ ಆದ ಬ್ರಾಹ್ಮಣನಿಗೆ ಪ್ರಯತ್ನಪೂರ್ವಕವಾಗಿ ಉಪದೇಶಿಸತಕ್ಕದು. ಬ್ರಾಹ್ಮಣನಾಗಿ ಎತ್ತನ್ನು ಗಾಡಿಗೆ ಕಟ್ಟಿ ನಡೆಸುವವನಿಗೂ, ವೃಷಲೀಪತಿಗೂ ಶೂದ್ರರಿಗೆ ಅಡಿಗೆ ಮಾಡುವವನಿಗೂ ಶೂದ್ರರು ಮಾಡುವ ಶ್ರಾದ್ಧಾನ್ನವನ್ನು ಊಟಮಾಡುವವನಿಗೂ, ವಿಶೇಷವಾಗಿ ಕನ್ಯೆಯನ್ನು ಮಾರುವ ಬ್ರಾಹ್ಮಣನಿಗೂ ಉಪದೇಶಿಸಬಾರದು.

೬೮. ಈ ಸ್ತೋತ್ರವನ್ನು ಸಿದ್ಧಿಮಾಡಿಕೊಂಡವನಾದರೆ ಸಕಲ ಕಾರ್ಯಸಿದ್ಧಿಯನ್ನೂ ಹೊಂದುತ್ತಾನೆ. ಒಂದು ಲಕ್ಷ ಸಾರಿ ಜಪಮಾಡಿದವನಾದರೆ ಮಾನವನು ಸ್ತೋತ್ರಸಿದ್ಧಿಯನ್ನು ಹೊಂದುತ್ತಾನೆ.

ಅಗ್ನಿಸ್ತಂಭಂ ಜಲಸ್ತಂಭಂ ಮೃತ್ಸ್ತಂಭಂ ಮನಸಸ್ತಥಾ ।
ಅಶ್ವಮೇಧಸಹಸ್ರಾಚ್ಚ ಪೃಥಿವ್ಯಾಶ್ಚ ಪ್ರದಕ್ಷಿಣಾತ್ ॥ ೭೯ ॥

ಸ್ನಾನಾಚ್ಚ ಸರ್ವತೀರ್ಥಾನಾಂ ಸ್ತೋತ್ರಮೇತಚ್ಚ ಪುಣ್ಯದಮ್ ।
ದತ್ತಂ ತುಭ್ಯಂ ಮಯಾ ತಾತ ಮಮ ಪ್ರಾಣಸಮಂ ವ್ರಜ ॥ ೭೦ ॥

ಸ್ತವನಂ ಕುರು ಪಾರ್ವತ್ಯಾಶ್ಚೇದಾನೀಂ ಮಮ ಸಂಸದಿ ।
ಶ್ರೀಕೃಷ್ಣಸ್ಯ ವಚಃ ಶ್ರುತ್ವಾ ನಂದಸ್ತುಷ್ಟಾವ ಪಾರ್ವತೀಮ್ ॥ ೭೧ ॥

ಸ್ತೋತ್ರೇಣಾನೇನ ವಿಪ್ರೇಂದ್ರ ಸರ್ವ ಸಂಪತ್ಪ್ರದಾಯಿನೀಮ್ ।
ವರಂ ತಸ್ಮೈ ದದೌ ದುರ್ಗಾ ಗೋಲೋಕವಾಸಮೀಪ್ಸಿತಮ್ ॥ ೭೨ ॥

ದುರ್ಲಭಂ ಪರಮಂ ಜ್ಞಾನಂ ವೇದೇ ಯನ್ನ ಶ್ರುತಂ ಮುನೇ ।
ರಾಜೇಂದ್ರತ್ವಂ ಗೋಕುಲೇ ಚ ಕೃಷ್ಣಭಕ್ತಿಂ ಸುದುರ್ಲಭಾಮ್ ॥ ೭೩ ॥

---

೬೯–೭೦. ಅಗ್ನಿಸ್ತಂಭನವನ್ನೂ, ಜಲಸ್ತಂಭನವನ್ನೂ, ಮೃತ್ಯುಸ್ತಂಭನವನ್ನೂ ಮನಸ್ಸಿನಸ್ತಂಭನವನ್ನೂ ಮಾಡಲು ಶಕ್ತನಾಗುತ್ತಾನೆ. ಎಲೈ ನಂದನೇ! ಒಂದು ಸಾವಿರ ಅಶ್ವಮೇಧಯಾಗ ಮಾಡುವುದರಿಂದಲೂ ಭೂಮಂಡಲವನ್ನು ಪ್ರದಕ್ಷಿಣೆ ಮಾಡುವುದರಿಂದಲೂ, ಸಮಸ್ತ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದಲೂ, ಮಾನವನು ಯಾವ ಪುಣ್ಯವನ್ನು ಹೊಂದುತ್ತಾನೋ, ಆ ಪುಣ್ಯವನ್ನು ಈ ಸ್ತೋತ್ರ ಜಪದಿಂದ ಹೊಂದುತ್ತಾನೆ. ಎಲೈ ತಂದೆಯೇ! ನನ್ನ ಪ್ರಾಣಕ್ಕೆ ಸಮಾನವಾದ ಈ ಸ್ತೋತ್ರವನ್ನು ನಿನಗೆ ಉಪದೇಶಮಾಡುವುದರ ಮೂಲಕ ಕೊಟ್ಟಿರುವೆನು.

೭೧–೭೨. ಈಗ ನನ್ನೆದುರಿನಲ್ಲಿಯೇ ಆ ಪಾರ್ವತಿಯನ್ನು ಸ್ತೋತ್ರಮಾಡುವವನಾಗು. ಎಲೈ ಬ್ರಾಹ್ಮಣ ಶ್ರೇಷ್ಠನೇ! ಶ್ರೀಕೃಷ್ಣನು ಹೇಳಿದ ಮಾತನ್ನು ಕೇಳಿ ನಂದನು ಸಕಲ ಸಂಪತ್ತುಗಳನ್ನೂ ಕೊಡುವವಳಾದ ಪಾರ್ವತಿಯನ್ನು ಇದೇ ಸ್ತೋತ್ರದಿಂದಲೇ ಸ್ತುತಿ ಮಾಡಿದನು. ಆಗ ದುರ್ಗಾದೇವಿಯು ಅವನ ಇಷ್ಟವಾದ ಗೋಲೋಕವಾಸವೆಂಬ ವರವನ್ನು ನಂದನಿಗೆ ಕೊಟ್ಟಳು.

೭೩–೭೪. ಎಲೈ ಮುನಿಯೇ! ವೇದದಲ್ಲಿಯೂ ಹೇಳಲ್ಪಡದಿರುವ ಹೊಂದಲಸಾಧ್ಯವಾದ ಶ್ರೇಷ್ಠವಾದ ಜ್ಞಾನವನ್ನೂ, ಗೋಕುಲದಲ್ಲಿ ರಾಜತನವನ್ನೂ, ದುರ್ಲಭವಾದ ಕೃಷ್ಣಭಕ್ತಿಯನ್ನೂ, ಆ ಪರಮಾತ್ಮನ ದಾಸನಾಗಿರುವಿಕೆಯನ್ನೂ, ಶ್ರೇಷ್ಠ

ತದ್ದಾಸ್ಯಂ ಚಾಪ ಪರತೋ ಮಹತ್ಸಂ ಸಿದ್ಧಮೇವ ಚ ।
ವರಂ ದತ್ವಾ ಯಯೌ ದುರ್ಗಾ ಸಂಭಾಷ್ಯ ಶಂಭುನಾ ಸಹ ।
ಜಗ್ಮುರ್ದೇವಾಶ್ಚ ಮುನಯಃ ಸ್ತುತ್ವಾ ಚ ನಂದನಂದನಮ್ || ೭೪ ||

ಉವಾಚ ನಂದಂ ಶ್ರೀಕೃಷ್ಣೋ ವ್ರಜ ನಂದ ವ್ರಜಾನ್ವಿತೈಃ ।
ಪ್ರಹೃಷ್ಟಸ್ತ್ಯಕ್ತಮೋಹಶ್ಚ ಬೋಧೇನ ದುರ್ಲಭೇನ ಚ || ೭೫ ||

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣ ನಾರದ ಸಂವಾದೇ
ಶ್ರೀ ಭಗವನ್ನಂದಸಂವಾದೇ
ಅಷ್ಟಾಶೀತಿತಮೋಽಧ್ಯಾಯಃ.

---

ವಾದ ಸಿದ್ಧಿಯನ್ನೂ ದೇವಿಯಿಂದ ನರದನು ವಶವಾಗಿ ಪಡೆದನು. ದುರ್ಗಾದೇವಿಯು ವರವನ್ನು ಕೊಟ್ಟು ಶಂಕರನೊಡನೆ ಮಾತನಾಡಿಕೊಂಡು ಹೊರಟುಹೋದಳು. ದೇವತೆಗಳೂ ಮುನಿಗಳೂ ಕೂಡ ನಂದನ ಮಗನಾದ ಕೃಷ್ಣನನ್ನು ಸ್ತೋತ್ರಮಾಡಿ ತಮ್ಮ ತಮ್ಮ ಸ್ಥಳಗಳನ್ನು ಕುರಿತು ಹೊರಟರು.

೭೫. ಶ್ರೀ ಕೃಷ್ಣನು ನಂದನನ್ನು ಕುರಿತು ಎಲೈ ನಂದನೇ! ಈ ಗೋಪಾಲರೊಡನೆ ದುರ್ಲಭವಾದ ಈ ಉಪದೇಶದಿಂದ ಅಜ್ಞಾನವನ್ನು ಬಿಟ್ಟು ಸಂತೋಷ ಹೊಂದಿದವನಾಗಿ ಹೊರಡು ಎಂದು ಹೇಳಿದನು.

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ
ನಾರದ ನಾರಾಯಣ ಸಂವಾದದಲ್ಲಿ ಶ್ರೀ ಭಗವನ್ನಂದಸಂವಾದದ
ಎಂಭತ್ತೆಂಟನೇ ಅಧ್ಯಾಯವು ಸಂಪೂರ್ಣವಾದುದು.

## ಎಂಭತ್ತೆಂಟನೇ ಅಧ್ಯಾಯದ ಸಾರಾಂಶ.

ಅಜ್ಞಾನದಿಂದ ಮೂರ್ಛಿತನಾದ ನಂದಗೋಪನನ್ನು ನೋಡಿ ಶ್ರೀ ಕೃಷ್ಣನು ಅವನನ್ನು ಸಾಂತ್ವನಗೊಳಿಸಿ, ವಿಷ್ಣುಮಾಯೆಯನ್ನು ಸ್ತೋತ್ರಮಾಡಿ ಈ ಅಜ್ಞಾನ ದಿಂದ ವಿಮುಕ್ತನಾಗೆಂದನು. ಆಗ ನಂದನು ಆ ಸ್ತೋತ್ರದ ವಿಧಿಯನ್ನೂ, ಅದರ ಫಲವನ್ನೂ ವಿವರಿಸಬೇಕೆಂದು ಕೇಳಲು, ಶ್ರೀ ಕೃಷ್ಣನು ಅದನ್ನು ವಿವರಿಸಿ, ಹಿಂದೆ ತ್ರಿಪುರಾಸುರನನ್ನು ಸಂಹರಿಸಲು ಶಂಕರನು ಅಶಕ್ತನಾಗಿ ವಿಷ್ಣುಮಾಯೆಯನ್ನು ಭಕ್ತಿಯಿಂದ ಸ್ತುತಿಸಿ, ಈ ಸ್ತೋತ್ರದ ಪ್ರಭಾವದಿಂದಲೇ ಆ ದುಷ್ಟ ಶತ್ರುವನ್ನು ನಿಗ್ರಹಿಸಿದನೆಂದು ಹೇಳಿದನು. ವಿಷ್ಣುಮಾಯೆಯ ಪ್ರಭಾವವನ್ನು ಕೇಳಿದ ನಂದನು ಭಕ್ತಿಯಿಂದ ಆ ದೇವಿಯನ್ನು ಸ್ತುತಿಸಿ, ಆಕೆಯ ಅನುಗ್ರಹಕ್ಕೆ ಪಾತ್ರನಾಗಿ, ಗೋಲೋಕಪ್ರಾಪ್ತಿರೂಪವಾದ ವರವನ್ನು ಪಡೆದನು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಏಕೋನನವತಿತಮೋಽಧ್ಯಾಯಃ ||

|| ಶ್ರೀ ಕೃಷ್ಣ ಉವಾಚ ||

ಗಚ್ಛ ಗಚ್ಛ ಗೃಹಂ ಗಚ್ಛ ವ್ರಜರಾಜ ವ್ರಜಂ ವ್ರಜ ।
ಸರ್ವತತ್ತ್ವಂ ತ್ವಯಾ ಜ್ಞಾತಂ ದೃಷ್ಟಾಶ್ಚ ಮುನಯಃ ಸುರಾಃ || ೧ ||

ಶ್ರುತಂ ಮೇ ಧನ್ಯಮಾಖ್ಯಾನಂ ನಾನಾಖ್ಯಾನಂ ಸುದುರ್ಲಭಮ್ ।
ದುರ್ಗಾಯಾಃ ಸ್ತೋತ್ರರಾಜಂ ಚ ಜನ್ಮಪಾಪನಿಕೃಂತನಮ್ || ೨ ||

ಸ್ಥಿತಂ ತತ್ತೇ ನಿಗದಿತಂ ಹರ್ಷೇಣ ಚ ಸುಖೇನ ಚ ।
ಮತ್ಕೃತಂ ಬಾಲಭಾವೇನ ಚಾಪರಾಧಂ ಚ ತತ್ಕ್ಷಮ || ೩ ||

---

### ಎಂಭತ್ತೊಂಭತ್ತನೆಯ ಅಧ್ಯಾಯವು.

೧. ಶ್ರೀ ಕೃಷ್ಣನು ಹೇಳುತ್ತಾನೆ:—ಎಲೈ ಗೋಕುಲದ ರಾಜನೇ! ಹೋಗು ಹೋಗು. ಗೋಕುಲಕ್ಕೆ ಹೋಗು. ನೀನು ಸಮಸ್ತ ತತ್ವಗಳನ್ನೂ ತಿಳಿದುಕೊಂಡಾಯಿತು. ಮತ್ತು ಮುನಿಗಳು ದೇವತೆಗಳು ಇವರನ್ನು ನೋಡಿದುದೂ ಆಯಿತು.

೨-೩. ಮತ್ತು ನನ್ನ ಪುಣ್ಯಕರವಾದ ಕಥೆಯನ್ನೂ, ನಾನಾವಿಧವಾದ ಮತ್ತೆಲ್ಲಿಯೂ ಕೇಳಿ ತಿಳಿದುಕೊಳ್ಳಲಸಾಧ್ಯವಾದ ಕಥೆಗಳನ್ನೂ ಕೇಳಿರುವೆ. ಮತ್ತು ಹುಟ್ಟಿದಂದಿನಿಂದಲೂ ಮಾಡಿದ ಪಾಪಗಳನ್ನು ನಿರ್ಮೂಲ ಮಾಡುವುದಾದ ದುರ್ಗಾದೇವಿಯ ಸ್ತೋತ್ರೋತ್ತಮವನ್ನು ಸಂತೋಷದಿಂದಲೂ ಸುಲಭವಾಗಿಯೂ ನಿನಗೆ ಹೇಳಿರುವೆನು. ಹುಡುಗತನದಿಂದ ನಾನು ಮಾಡಿರುವ ತಪ್ಪುಗಳನ್ನು ಕ್ಷಮಿಸುವವನಾಗು.

ಯತ್ಸುಖಂ ನ ಕೃತಂ ತಾತ ಪಿತ್ರೋರೀಶ್ಚ ನೃಪಮಂದಿರೇ ।
ಕೃತಂ ಸುಖಂ ತತ್ಪರಂ ಚ ಸ್ವರ್ಗಾದಪಿ ಸುದುರ್ಲಭಮ್ ॥ ೪ ॥

ಮದೀಯಂ ಪ್ರಿಯವಾಕ್ಯಂ ಚ ಪ್ರಹ್ವತ್ವಂ ವಿನಯಂ ನಯಂ ।
ಪರಿಹಾಸಂ ಬಹುತರಂ ಯಶೋದಾಂ ಗೋಪಿಕಾಗಣಮ್ ॥ ೫ ॥

ಬಾಲಕಾನಾಂ ಸಮೂಹಂ ಚ ರಾಧಾಂ ಚಾಪಿ ವಿಶೇಷತಃ ।
ಏಕತ್ರ ಚ ಸ್ಥಿತಂ ತೇಷು ಬಂಧುವರ್ಗೇಷು ಕರ್ಮಣಾ ॥ ೬ ॥

ಇಹೈವಾಪಿ ಸುಖಂ ಭುಕ್ತ್ವಾ ಗಚ್ಛ ಗೋಲೋಕಮುತ್ತಮಮ್ ।
ಸಾರ್ಧಂ ಯಶೋದಯಾ ತಾತ ರೋಹಿಣ್ಯಾ ಗೋಪಿಕಾಗಣೈಃ ॥ ೭ ॥

ಗೋಪಾನಾಂ ಬಾಲಕೈಃ ಸಾರ್ಧಂ ವೃಷಭಾನೇನ ಗೋಪಕೈಃ ।
ರಾಧಾಮಾತ್ರಾ ಕಲಾವತ್ಯಾ ರಾಧಯಾ ಸಹ ಯಾಸ್ಯಸಿ ॥ ೮ ॥

---

೪. ಎಲೈ ತಂದೆಯೇ! ರಾಜಮಂದಿರದಲ್ಲಿ ತಂದೆತಾಯಿಗಳಿಗೆ ಮಗನು ಯಾವ ಸೌಖ್ಯವನ್ನುಂಟುಮಾಡಬೇಕೋ ಅಂಥಾ ಸೌಖ್ಯವನ್ನು ನಾನು ನಿಮಗೆ ಉಂಟುಮಾಡಲಿಲ್ಲ ಈಗ ಅದಕ್ಕಿಂತಲೂ ಮಿಗಿಲಾದ ಸ್ವರ್ಗಲೋಕದಲ್ಲಿಯೂ ಲಭಿಸದ ಸುಖವನ್ನುಂಟುಮಾಡಿರುವೆನು.

೫–೬. ನನ್ನ ಪ್ರಿಯವಾದ ಮಾತುಗಳನ್ನೂ, ವಿನಯವನ್ನೂ, ನೀತಿಯನ್ನೂ ಕೇಳಿ ಅನೇಕಬಾರಿ ಯಶೋದೆಯನ್ನೂ, ಗೋಪಿಕಾಸ್ತ್ರೀಯರನ್ನೂ, ಬಾಲಕರ ಸಮೂಹವನ್ನೂ, ಹೆಚ್ಚಾಗಿ ರಾಧೆಯನ್ನೂ ಕುರಿತು ಮಾಡಿದ ಪರಿಹಾಸಗಳನ್ನೂ ಮನ್ನಿಸುವವನಾಗು. ಅವರುಗಳು ಬಂಧುಗಳಾದುದರಿಂದಲೂ, ಒಂದೆಡೆಯಲ್ಲಿದ್ದುದರಿಂದಲೂ, ಒಟ್ಟುಗೂಡಿ ಕೆಲಸ ಮಾಡುತ್ತಿದ್ದುದರಿಂದಲೂ ವಿನೋದಕ್ಕಾಗಿ ಪರಿಹಾಸಾದಿಗಳು ಮಾಡಲ್ಪಟ್ಟುವು.

೭–೮. ಎಲೈ ತಂದೆಯೇ! ನೀನು ಈ ಲೋಕದಲ್ಲಿ ಯಶೋದೆಯೊಡನೆಯೂ, ರೋಹಿಣೀದೇವಿಯೊಡನೆಯೂ, ಗೋಪಿಕಾಸ್ತ್ರೀಯರ ಸಮೂಹದೊಡನೆಯೂ ಸುಖವನ್ನನುಭವಿಸಿ, ಅನಂತರ ಇವರೆಲ್ಲರಿಂದಲೂ, ಗೋಪಬಾಲಕರಿಂದಲೂ, ವೃಷಭಾನವಿನಿಂದಲೂ, ರಾಧೆಯ ತಾಯಿಯಾದ ಕಲಾವತಿಯಿಂದಲೂ, ರಾಧೆಯಿಂದಲೂ ಕೂಡಿದವನಾಗಿ ಉತ್ತಮವಾದ ಗೋಲೋಕಕ್ಕೆ ಹೋಗುವವನಾಗು.

ರಥಾನಾಂ ಶತಲಕ್ಷಂ ಚ ಗೋಲೋಕಾದಾಗತಂ ಪಿತಃ ।
ಅಮೂಲ್ಯರತ್ನ ನಿರ್ಮಾಣಂ ಹೀರಹಾರ ಪರಿಷ್ಕೃತಮ್ ॥ ೯ ॥

ಮಣಿಮಾಣಿಕ್ಯಮುಕ್ತಾನಾಂ ಮಾಲಾಜಾಲವಿಭೂಷಿತಮ್ ।
ವಹ್ನಿಶುದ್ಧಾಂಶುಕೈ ರಮ್ಯೈ ರಾಚ್ಛನ್ನಂ ಪೀತವರ್ಣಕೈಃ ॥ ೧೦ ॥

ಪಾರ್ಷದಪ್ರವರೈಃ ರಮ್ಯೈರ್ವೇಷ್ಟಿತಂ ಶ್ವೇತಚಾಮರೈಃ ।
ಸದ್ರತ್ನದರ್ಪಣೈ ರಮ್ಯೈ ರ್ಗೋಪಿಕಾಭಿಶ್ಚ ಗೋಪಕೈಃ ।
ವೇಷ್ಟಿತಂ ಚ ತದಾರುಹ್ಯ ಕೌತುಕಾದ್ಯಾಸ್ಯಸಿ ಧ್ರುವಮ್ ॥ ೧೧ ॥

ತ್ಯಕ್ತ್ವಾ ಚ ಪಾರ್ಥಿವಂ ದೇಹಂ ದಿವ್ಯದೇಹಂ ವಿಧಾಯ ಚ ।
ಅಯೋನಿಸಂಭವಾ ರಾಧಾ ರಾಧಾಮಾತಾ ಕಲಾವತೀ ॥ ೧೨ ॥

ಯಾಸ್ಯತ್ಯೇವ ಹಿ ತೇನೈವ ನಿತ್ಯದೇಹೇನ ನಿಶ್ಚಿತಮ್ ।
ಪಿತೄಣಾಂ ಮಾನಸೀ ಕನ್ಯಾ ಧನ್ಯಾ ಮಾನ್ಯಾ ಕಲಾವತೀ ॥ ೧೩ ॥

---

೯–೧೩. ಎಲೈ ತಂದೆಯೇ! ಗೋಲೋಕದಿಂದ ಒಂದುನೂರುಲಕ್ಷ ರಥಗಳು ಬಂದಿವೆ. ಆ ರಥಗಳು ಅಮೂಲ್ಯವಾದ ರತ್ನದಿಂದ ಮಾಡಲ್ಪಟ್ಟವುಗಳಾಗಿಯೂ, ಹೀರಕ ರತ್ನಗಳಿಂದ ಅಲಂಕಾರ ಮಾಡಲ್ಪಟ್ಟವುಗಳಾಗಿಯೂ, ರತ್ನಮಣಿಗಳು ಮಾಣಿಕ್ಯಗಳು ಮುತ್ತುಗಳು ಇವುಗಳ ಗೊಂಚಲುಗಳಿಂದ ಅಲಂಕರಿಸಲ್ಪಟ್ಟವುಗಳಾಗಿಯೂ, ಬೆಂಕಿಯಂತೆ ಶುದ್ಧವಾದ ಸುಂದರವಾದ ಬಟ್ಟೆಗಳನ್ನು ಹೊದಿಸಲ್ಪಟ್ಟವುಗಳಾಗಿಯೂ, ಹಳದಿಯ ಬಟ್ಟೆಗಳಿಂದ ಕೂಡಿದವುಗಳಾಗಿಯೂ. ಸುಂದರವಾದ ಮತ್ತು ಬಿಳಿಯ ಚಾಮರಗಳಿಂದ ಕೂಡಿದ ಸೇವಕರಿಂದ ಕಂಗೊಳಿಸುತ್ತಿರುವವುಗಳಾಗಿಯೂ, ಉತ್ತಮರತ್ನಮಯವಾದ ಕನ್ನಡಿಗಳಿಂದಲೂ, ಗೋಪಿಕಾಸ್ತ್ರೀಯರಿಂದಲೂ, ಗೋಪಾಲಕರಿಂದಲೂ ಕೂಡಿರುವವುಗಳಾಗಿಯೂ ಇವೆ. ನೀನು ನಿಜವಾಗಿಯೂ ಇದನ್ನು ಆಶ್ಚರ್ಯದಿಂದ ನೋಡುತ್ತ ರಥವನ್ನು ಹತ್ತಿಕೊಂಡವನಾಗಿ ಹೋಗುವೆ. ಮತ್ತು ನಿನ್ನ ಈ ಪಾರ್ಥಿವ ದೇಹವನ್ನು ಬಿಟ್ಟು ದೇವತೆಗಳ ಶರೀರವನ್ನು ಧರಿಸಿಕೊಂಡು ಹೋಗುವವನಾಗುವೆ. ಯೋನಿಮುಖದಿಂದ ಹುಟ್ಟದವಳಾದ ರಾಧೆಯೂ, ರಾಧೆಯ ತಾಯಿಯಾದ ಕಲಾವತಿಯೂ ಅವರವರ ನಿತ್ಯವಾದ ಶರೀರದಿಂದಲೇ ಹೋಗುತ್ತಾರೆ. ಕಲಾವತಿಯು ಪಿತೃದೇವತೆಗಳ ಮನಸ್ಸಿನಿಂದ ಹುಟ್ಟಿದ ಕನ್ಯೆಯು ಮತ್ತು ಪುಣ್ಯವತಳೂ ಮರ್ಯಾದೆ ಮಾಡಲು ಯೋಗ್ಯಳೂ ಆಗಿರುತ್ತಾಳೆ.

ಧನ್ಯಾ ಚ ಸೀತಾಮಾತಾ ಚ ದುರ್ಗಾಮಾತಾ ಚ ಮೇನಕಾ ।
ಅಯೋನಿಸಂಭವಾ ದುರ್ಗಾ ತಾರಾ ಸೀತಾ ಚ ಸುಂದರೀ ॥ ೧೪ ॥

ಆಯೋನಿಸಂಭವಾಸ್ತಾಶ್ಚ ಧನ್ಯಾ ಮೇನಾ ಕಲಾವತೀ ।
ಇತ್ಯೇವಂ ಕಥಿತಂ ತಾತ ಗೋಪನೀಯಂ ಸುದುರ್ಲಭಮ್ ।
ವರೋಽಯಂ ದತ್ತಸ್ತುಭ್ಯಂ ಚ ಮಯಾ ಚ ದುರ್ಗಯಾ ತಥಾ ॥ ೧೫ ॥

ಶ್ರೀಕೃಷ್ಣಸ್ಯ ವಚಃ ಶ್ರುತ್ವಾ ಪ್ರತ್ಯುವಾಚ ವ್ರಜೇಶ್ವರಃ ।
ಪುನರೇವ ಜಗನ್ನಾಥಂ ತತ್ಪ್ರಕ್ತೋ ಭಕ್ತವತ್ಸಲಮ್ ॥ ೧೬ ॥

॥ ನಂದ ಉವಾಚ ॥

ಯುಗಾನಾಂ ಚ ಚತುರ್ಣಾಂ ಚ ಯಂ ಯಂ ಧರ್ಮಂ ಸನಾತನಮ್ ।
ಕ್ರಮೇಣ ಕೃಷ್ಣ ವಿಸ್ತೀರ್ಣಂ ಕೃತ್ವಾ ಮಾಂ ಕಥಯ ಪ್ರಭೋ ॥ ೧೭ ॥

ಕಲಿಶೇಷೇ ಭವೇದ್ಯದ್ಯದ್ಗುಣದೋಷಂ ಕಲೇಸ್ತಥಾ ।
ಕಾ ಗತಿರ್ವಾ ಪೃಥಿವ್ಯಾಶ್ಚ ಧರ್ಮಸ್ಯ ಪ್ರಾಣಿನಾಂ ತಥಾ ॥ ೧೮ ॥

---

೧೪—೧೫. ಪುಣ್ಯವಂತಳಾದ ಸೀತಾಮಾತೆಯೂ, ದುರ್ಗಾದೇವಿಯೂ, ಮೇನಕೆಯೂ, ಸುಂದರಿಯಾದ ತಾರಾದೇವಿಯೂ, ಮೇನಾದೇವಿಯೂ, ಕಲಾವತಿಯೂ ಕೂಡ ಅಯೋನಿಸಂಭೂತರು. (ಯೋನಿಮುಖದಿಂದ ಹುಟ್ಟದವರು) ಮತ್ತು ಪುಣ್ಯವತಿಯರು ಎಲೈ ತಂದೆಯೇ! ಈಪ್ರಕಾರವಾಗಿ ನಾನು ಹೇಳಿರುವ ಮಾತುಗಳನ್ನೆಲ್ಲ ರಹಸ್ಯವಾಗಿಡಬೇಕು. ಮತ್ತು ನಿನಗೆ ನಾನೂ ವರವನ್ನು ಕೊಟ್ಟಿರುವೆನಲ್ಲದೆ ದುರ್ಗಾದೇವಿಯೂ ವರವನ್ನು ಕೊಟ್ಟಿರುವಳು.

೧೬, ಶ್ರೀ ಕೃಷ್ಣನು ಹೇಳಿದ ಮಾತನ್ನು ಕೇಳಿ ಅವನ ಭಕ್ತನಾದ ನಂದನು ಮತ್ತೆ ಭಕ್ತರಲ್ಲಿ ಕರುಣೆಯುಳ್ಳ ಶ್ರೀ ಕೃಷ್ಣನನ್ನು ಕುರಿತು ಇಂತೆಂದನು.

೧೭. ನಂದನು ಹೇಳುತ್ತಾನೆ:— ಎಲೈ ಪ್ರಭುವಾದ ಕೃಷ್ಣನೇ! ನಾಲ್ಕು ಯುಗಗಳಲ್ಲಿಯೂ ಶಾಶ್ವತವಾದ ಧರ್ಮವು ಯಾವ ಯಾವ ಕ್ರಮವನ್ನನುಸರಿಸಿರುತ್ತವೆಯೆಂಬುದನ್ನು ನನಗೆ ವಿಸ್ತಾರವಾಗಿ ಹೇಳುವವನಾಗು.

೧೮. ಕಲಿಯುಗದ ಕೊನೆಯಲ್ಲಿ ಕಲಿಯುಗದ ಯಾವ ಯಾವ ಗುಣದೋಷಗಳು ಯಾವ ಯಾವ ರೀತಿಯಲ್ಲಿರುತ್ತವೆ? ಮತ್ತು ಧರ್ಮ, ಭೂಮಿ ಪ್ರಾಣಿಗಳು ಇವರುಗಳಿಗೆ ಗತಿಯಾವುದು? ಇವೆಲ್ಲವನ್ನೂ ವಿವರಿಸುವವನಾಗು.

ನಂದಸ್ಯ ವಚನಂ ಶ್ರುತ್ವಾ ಹೃಷ್ಟಃ ಕಮಲಲೋಚನಃ ।
ಕಥಾಂ ಕಥಿತುಮಾರೇಭೇ ವಿಚಿತ್ರಾಂ ಮಧುರಾನ್ವಿತಾಮ್ ॥ ೧೯ ॥

ಇತಿ ಶ್ರೀ ಬ್ರಹ್ಮವೈವರ್ತೆ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಭಾಗೇ ನಾರಾಯಣ ನಾರದ ಸಂವಾದೇ
ಭಗವನ್ನಂದಸಂವಾದೇ
ಏಕೋನನವತಿತಮೋಽಧ್ಯಾಯಃ.

---

೧೯. ನಂದನಾಡಿದ ಮಾತನ್ನು ಕೇಳಿ ಕಮಲದಂತೆ ಕಣ್ಣುಗಳುಳ್ಳ ಶ್ರೀ ಕೃಷ್ಣನು ಸಂತೋಷಗೊಂಡವನಾಗಿ ಆಶ್ಚರ್ಯಕರವಾಗಿಯೂ ಮನೋಹರವಾಗಿಯೂ ಇರುವ ಕಥೆಯನ್ನು ಹೇಳಲು ತೊಡಗಿದನು.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮಖಂಡದ
ಉತ್ತರಭಾಗದ ನಾರಾಯಣ ನಾರದಸಂವಾದದ
ಭಗವನ್ನಂದಸಂವಾದದಲ್ಲಿ
ಎಂಭತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವಾದುದು.

## ಎಂಭತ್ತೊಂಭತ್ತನೆಯ ಅಧ್ಯಾಯದ ಸಾರಾಂಶ.

ಮೂಲಪ್ರಕೃತಿಯ ಅನುಗ್ರಹಕ್ಕೆ ಪಾತ್ರನಾದ ನಂದಗೋಪನಿಗೆ ಶ್ರೀ ಕೃಷ್ಣನು ರಾಧೆ ಕಲಾವತಿ ಮುಂತಾದವರ ನಿಜಸ್ಥಿತಿಯನ್ನು ವಿವರಿಸಿ, ತಮ್ಮ ಅವಧಿಯು ಮುಗಿದನಂತರ ಗೋಲೋಕಕ್ಕೆ ತೆರಳುವರೆಂದು ಹೇಳುವನು. ಆಗ ನಂದಗೋಪನು ಕಲಿಯುಗದ ಕೊನೆಯಭಾಗದಲ್ಲಿ ಪ್ರಪಂಚದಲ್ಲಿ ಕಂಡುಬರುವ ಗುಣದೋಷಗಳನ್ನೂ, ಧರ್ಮಾಧರ್ಮಗಳನ್ನೂ ಪ್ರಾಣಿಗಳ ಸ್ಥಿತಿಯನ್ನೂ ವರ್ಣಿಸಬೇಕೆಂದು ಕೇಳುವನು.

|| ಓಂ ||

|| ಓಂ ಶ್ರೀ ಗುರುಭ್ಯೋನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ನವತಿತಮೋಽಧ್ಯಾಯಃ ||

|| ಶ್ರೀ ಕೃಷ್ಣ ಉವಾಚ ||

ಶೃಣು ನಂದ ಪ್ರವಕ್ಷ್ಯಾಮಿ ಸಾನಂದಂ ಮಾನಸಂ ಯಥಾ ।
ಕಥಾಂ ರಮ್ಯಾಂ ಸುಮಧುರಾಂ ಪುರಾಣೇಷು ಪರಿಷ್ಕೃತಾಮ್ || ೧ ||

ಪರಿಪೂರ್ಣತಮೋ ಧರ್ಮೋ ಧಾರ್ಮಿಕಾಶ್ಚ ಕೃತೇ ಯುಗೇ ।
ಪರಿಪೂರ್ಣತಮೋ ಸತ್ಯಂ ಪರಿಪೂರ್ಣತಮೋ ದಯಾ || ೨ ||

ಅತೀವಪ್ರಜ್ವಲದ್ರೂಪಾ ವೇದಾಶ್ಚತ್ವಾರ ಏವ ಚ ।
ವೇದಾಂಗಾಶ್ಚಾಪಿ ವಿವಿಧಾಶ್ಚೇತಿಹಾಸಾಶ್ಚ ಸಂಹಿತಾಃ || ೩ ||

---

### ತೊಂಭತ್ತನೆಯ ಅಧ್ಯಾಯವು.

೧. ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ನಂದನೇ! ಕೇಳು. ಯಾವ ಕಥೆಯನ್ನು ಕೇಳುವುದರಿಂದ ಮನಸ್ಸು ಸಂತೋಷವನ್ನು ಹೊಂದುತ್ತದೆಯೋ, ಅಂಥಾ ಮನೋಹರವೂ, ಮಧುರವೂ, ಪುರಾಣಗಳಲ್ಲಿ ಪರಿಷ್ಕರಿಸಲ್ಪಟ್ಟುದೂ ಆದ ಕಥೆಯನ್ನು ಹೇಳುತ್ತೇನೆ.

೨. ಕೃತಯುಗದಲ್ಲಿ ಧರ್ಮವು ಅತ್ಯಂತ ಪರಿಪೂರ್ಣವಾಗಿರುತ್ತದೆ. ಧರ್ಮ ಮಾರ್ಗದಲ್ಲಿ ನಿರತರಾದವರು ತುಂಬ ಇರುತ್ತಾರೆ. ಸತ್ಯವು ಎಲ್ಲೆಡೆಯಲ್ಲಿಯೂ ಪೂರ್ಣವಾಗಿರುತ್ತದೆ. ದಯೆಯೆಂಬುದೂ ಕೂಡ ಪೂರ್ಣರೂಪದಿಂದಿರುತ್ತದೆ.

೩. ನಾಲ್ಕು ವೇದಗಳೂ ಕೂಡ ಹೆಚ್ಚಾಗಿ ಬೆಳಗುವ ರೂಪಗಳನ್ನು ಹೊಂದಿರುತ್ತವೆ. ವೇದಾಂಗಗಳೂ ನಾನಾವಿಧವಾದ ಇತಿಹಾಸಗಳೂ ಕೂಡ ಒಂದಕ್ಕೊಂದು ಆಶ್ರಯವಾಗಿ ಕಂಗೊಳಿಸುತ್ತಿರುತ್ತವೆ.

**ಪುರಾಣಾನಿ ಸುರಮ್ಯಾಣಿ ಪಂಚರಾತ್ರಾಣಿ ಪಂಚ ಚ ।**
**ರುಚಿರಾಣಿ ಸುಭದ್ರಾಣಿ ಧರ್ಮಶಾಸ್ತ್ರಾಣಿ ಯಾನಿ ಚ ॥ ೪ ॥**

**ವಿಪ್ರಾ ವೇದವಿದಾಃ ಸರ್ವೇ ಪುಣ್ಯವಂತಸ್ತಪಸ್ವಿನಃ ।**
**ನಾರಾಯಣಂ ತೇ ಧ್ಯಾಯಂತಿ ತನ್ಮನಸ್ಕಾ ಜಪಂತಿ ಚ ॥ ೫ ॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಶ್ಚತುರ್ವರ್ಣಾಶ್ಚ ವೈಷ್ಣವಾಃ ।**
**ಶೂದ್ರಾಃ ಬ್ರಾಹ್ಮಣಭೃತ್ಯಾಶ್ಚ ಸತ್ಯಧರ್ಮಪರಾಯಣಾಃ ॥ ೬ ॥**

**ರಾಜಾನೋ ಧಾರ್ಮಿಕಾಶ್ಚೈವ ಪ್ರಜಾಪಾಲನತತ್ಪರಾಃ ।**
**ಗೃಹ್ಣಂತ್ಯೇವ ಪ್ರಜಾನಾಂ ಚ ಷೋಡಶಾಂಶಕರಾನ್ನೃಪಾಃ ॥ ೭ ॥**

**ಕರಶೂನ್ಯಾಶ್ಚ ವಿಪ್ರಾಶ್ಚ ಪೂಜ್ಯಾಃ ಸ್ವಚ್ಛಂದಗಾಮಿನಃ ।**
**ಸಂತತಂ ಸರ್ವಸಸ್ಯಾಢ್ಯಾ ರತ್ನಾಧಾರಾ ವಸುಂಧರಾ ॥ ೮ ॥**

---

೪. ಮನೋಹರಗಳಾದ ಐದು ಲಕ್ಷಣಗಳಿಂದ ಕೂಡಿದ ಪುರಾಣಗಳೂ, ಮನೋಹರಗಳಾದ ಮಂಗಳಕರಗಳಾದ ಐದು ಧರ್ಮಶಾಸ್ತ್ರಗಳೂ ಕೂಡ ಪೂರ್ಣ ರೂಪದಿಂದಿರುತ್ತವೆ.

೫. ಬ್ರಾಹ್ಮಣರೆಲ್ಲರೂ ವೇದಾಧ್ಯಯನದಲ್ಲಿ ನಿರತರಾಗಿರುತ್ತಾರೆ. ಮತ್ತು ಪುಣ್ಯವನ್ನು ಗಳಿಸಿದವರೂ, ತಪಸ್ಸನ್ನು ಮಾಡುವವರೂ ಆಗಿರುತ್ತಾರೆ. ಅವರೆಲ್ಲರೂ ಯಾವಾಗಲೂ ಶ್ರೀಮನ್ನಾರಾಯಣನನ್ನು ಧ್ಯಾನಮಾಡುತ್ತಿರುತ್ತಾರಲ್ಲದೆ, ಅವನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಜಪ ಮಾಡುತ್ತಿರುತ್ತಾರೆ.

೬. ಬ್ರಾಹ್ಮಣರು. ಕ್ಷತ್ರಿಯರು, ವೈಶ್ಯರು, ಶೂದ್ರರು ಇವರೆಲ್ಲರೂ ವಿಷ್ಣು ಭಕ್ತರಾಗಿರುತ್ತಾರೆ. ಶೂದ್ರರಾದರೋ ಬ್ರಾಹ್ಮಣರ ಸೇವೆ ಮಾಡುವವರಾಗಿರುತ್ತಾರೆ. ಮತ್ತು ಸತ್ಯ ಧರ್ಮಗಳಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ.

೭. ರಾಜರುಗಳು ಧರ್ಮಮಾರ್ಗದಲ್ಲಿ ನಡೆಯುವವರಾಗಿ ಪ್ರಜೆಗಳನ್ನು ಕಾಪಾಡುವುದರಲ್ಲಿ ನಿರತರಾಗಿರುತ್ತಾರೆ. ಮತ್ತು ಪ್ರಜೆಗಳಿಂದ ಹದಿನಾರನೆಯ ಒಂದಂಶವನ್ನು ಮಾತ್ರ ಕಂದಾಯವಾಗಿ ತೆಗೆದುಕೊಳ್ಳುವವರಾಗಿರುತ್ತಾರೆ.

೮. ಬ್ರಾಹ್ಮಣರು ಕಂದಾಯವಿಲ್ಲದವರಾಗಿಯೂ, ಪೂಜ್ಯರಾಗಿಯೂ, ಇಷ್ಟ ಬಂದೆಡೆಗಳಲ್ಲಿ ತಿರುಗುವವರಾಗಿಯೂ ಇರುತ್ತಾರೆ. ಭೂಮಿಯು ಯಾವಾಗಲೂ ಎಲ್ಲ ವಿಧವಾದ ಸಸ್ಯಗಳಿಂದ ಕೂಡಿದುದಾಗಿ ಸಕಲ ರತ್ನಗಳಿಗೂ ಗಣಿಯಾಗಿರುತ್ತದೆ.

ಗುರುಭಕ್ತಾಶ್ಚ ಶಿಷ್ಯಾಶ್ಚ ಪಿತೃಭಕ್ತಾ ಸುತಾಸ್ತಥಾ ।
ಯೋಷಿತಃ ಪತಿಭಕ್ತಾಶ್ಚ ಪತಿವ್ರತಪರಾಯಣಾಃ ॥ ೯ ॥

ಋತೌ ಸಂಭೋಗಿನಃ ಸರ್ವೇ ನ ಸ್ತ್ರೀಲುಬ್ಧಾ ನ ಲಂಪಟಾಃ ।
ನ ಭಯಂ ದಸ್ಯುಚೌರ್ಯಾಣಾಂ ನ ತತ್ರ ಪಾರದಾರಿಕಾಃ ॥ ೧೦ ॥

ತರವಃ ಪೂರ್ಣಫಲಿನಃ ಪೂರ್ಣಕ್ಷೀರಾಶ್ಚ ಧೇನವಃ ।
ಬಲವಂತೋ ಜನಃ ಸರ್ವೇ ದೀರ್ಘಾಃ ಸೌಂದರ್ಯಸಂಯುತಾಃ ॥ ೧೧ ॥

ಲಕ್ಷವರ್ಷಾಯುಷಃ ಕೇಚಿತ್ಪುಣ್ಯವಂತೋ ಹ್ಯರೋಗಿಣಃ ।
ಯಥಾ ವಿಪ್ರಾ ವಿಷ್ಣುಭಕ್ತಾಃ ತ್ರಿವರ್ಣಾಃ ವಿಷ್ಣುಸೇವಿನಃ ॥ ೧೨ ॥

ಜಲಪೂರ್ಣಾ ನದಾ ನದ್ಯಃ ಸಂತತಂ ಕಂದರಾಸ್ತಥಾ ।
ತೀರ್ಥಪೂತಾಶ್ಚತುರ್ವರ್ಣಾಸ್ತಪಃ ಪೂತಾ ದ್ವಿಜಾತಯಃ ॥ ೧೩ ॥

---

೯. ಶಿಷ್ಯರುಗಳು ಗುರುಗಳಲ್ಲಿ ಭಕ್ತಿಯುಳ್ಳವರೂ, ಮಕ್ಕಳುಗಳು ತಾಯಿ ತಂದೆಗಳಲ್ಲಿ ಭಕ್ತಿಯುಳ್ಳವರೂ, ಸ್ತ್ರೀಯರುಗಳು ಗಂಡನಲ್ಲಿ ಭಕ್ತಿಯುಳ್ಳವರೂ, ಪಾತಿವ್ರತ್ಯದಲ್ಲಿ ಆಸಕ್ತಿಯುಳ್ಳವರೂ ಆಗಿರುತ್ತಾರೆ.

೧೦. ಎಲ್ಲರೂ ಋತು ಕಾಲದಲ್ಲಿ ಮಾತ್ರ ಸಂಭೋಗ ಮಾಡುವವರಾಗಿರುತ್ತಾರೆ. ಯಾರೊಬ್ಬರೂ ಹೆಂಗಸಿಗಾಗಿ ಆಶೆಪಡುವವರಾಗಲೀ, ಯಾವಾಗಲೂ ಸ್ತ್ರೀ ಲಂಪಟರಾಗಲೀ ಆಗಿರುವುದಿಲ್ಲ. ಆಗ ಕಳ್ಳರು ಮತ್ತು ಶತ್ರುಗಳು ಇವರ ದೆಸೆಯಿಂದ ಭಯವೆಂಬುದು ಇರುವುದಿಲ್ಲ. ಮತ್ತು ಪರಸ್ತ್ರೀಯರನ್ನಪೇಕ್ಷಿಸುವವರೂ ಇರುವುದಿಲ್ಲ.

೧೧. ಮರಗಳೆಲ್ಲವೂ ತುಂಬ ಹಣ್ಣುಗಳಿಂದ ಕೂಡಿರುತ್ತವೆ. ಹಸುಗಳೆಲ್ಲವೂ ತುಂಬ ಹಾಲನ್ನು ಕೊಡುವವುಗಳಾಗಿರುತ್ತವೆ. ಜನರೆಲ್ಲರೂ ಎತ್ತರವಾದ ದೇಹವುಳ್ಳವರೂ, ಸುಂದರವಾದ ರೂಪವುಳ್ಳವರೂ ಆಗಿರುತ್ತಾರೆ.

೧೨. ಕೆಲವರು ಪುಣ್ಯವಂತರಾಗಿ ಒಂದುಲಕ್ಷವರುಷ ಆಯುಸ್ಸುಳ್ಳವರಾಗಿಯೂ, ರೋಗವಿಲ್ಲದವರಾಗಿಯೂ ಇರುತ್ತಾರೆ. ಬ್ರಾಹ್ಮಣರು ಹೇಗೆ ವಿಷ್ಣುಭಕ್ತರಾಗಿರುವರೋ ಹಾಗೆಯೇ ಉಳಿದ ಮೂರು ವರ್ಣದವರೂ ವಿಷ್ಣುವನ್ನು ಪೂಜಿಸುವವರಾಗಿರುತ್ತಾರೆ.

೧೩. ನದಗಳು ಮತ್ತು ನದಿಗಳು ಯಾವಾಗಲೂ ನೀರಿನಿಂದ ತುಂಬಿರುವುವು. ನಾಲ್ಕುವರ್ಣದವರೂ ತೀರ್ಥಗಳಿಂದ ಪರಿಶುದ್ಧರಾಗಿರುತ್ತಾರೆ. ಬ್ರಾಹ್ಮಣರು ತಪಸ್ಸಿನಿಂದ ಪರಿಪೂತರಾಗಿರುತ್ತಾರೆ.

ಮನಃಪೂತಾಶ್ಚ ನಿಖಿಲಾಃ ಖಲಹೀನಂ ಜಗತ್ತ್ರಯಮ್ ।
ಸತ್ಕೀರ್ತಿಪರಿಪೂರ್ಣಂ ಚ ಯಶಸ್ಯಂ ಮಂಗಲಾನ್ವಿತಮ್ ॥ ೧೪ ॥

ಪಿತರಃ ಸರ್ವಕಾಲೇಷು ತಿಥಿಕಾಲೇಷು ದೇವತಾಃ ।
ಸರ್ವಕಾಲೇಷ್ವತಿಥಯಃ ಪೂಜಿತಾಶ್ಚ ಗೃಹೇ ಗೃಹೇ ॥ ೧೫ ॥

ತ್ರಿವರ್ಣಾ ವಿಪ್ರಭಕ್ತಾಶ್ಚ ವಿಪ್ರಭೋಜನತತ್ಪರಾಃ ।
ಬ್ರಾಹ್ಮಣಸ್ಯ ಮುಖಂ ಕ್ಷೇತ್ರಮನೂಷರಮಕಂಟಕಮ್ ॥ ೧೬ ॥

ನಾರಾಯಣೋತ್ಕೀರ್ತನೇನ ಹರ್ಷಯುಕ್ತಾಸ್ತದುತ್ಸವೇ ।
ನ ದೇವಾನಾಂ ದ್ವಿಜಾನಾಂ ಚ ವಿದುಷಾಂ ತತ್ರ ನಿಂದಕಾಃ ॥ ೧೭ ॥

ನಾತ್ಮಪ್ರಶಂಸಕಾಃ ಕೇಚಿತ್ಸರ್ವೇ ಪರಗುಣೋತ್ಸುಕಾಃ ।
ನ ಶತ್ರವೋ ಜನಾನಾಂ ಚ ಸರ್ವೇ ಸರ್ವಹಿತೈಷಿಣಃ ॥ ೧೮ ॥

---

೧೪. ಎಲ್ಲರೂ ಶುದ್ಧವಾದ ಮನಸ್ಸುಳ್ಳವರಾಗಿರುತ್ತಾರೆ. ಮೂರುಲೋಕದಲ್ಲಿಯೂ ದುಷ್ಟರು ಇರುವುದಿಲ್ಲ. ಮತ್ತು ಉತ್ತಮವಾದ ಕೀರ್ತಿಯಿಂದ ತುಂಬಿರುತ್ತದೆಯಲ್ಲದೆ, ಸಕಲ ವಿಧವಾದ ಸನ್ಮಂಗಳಗಳಿಂದಲೂ ಕೂಡಿರುತ್ತದೆ.

೧೫. ಮನೆಮನೆಗಳಲ್ಲಿಯೂ ಪರ್ವಕಾಲಗಳಲ್ಲಿ ಪಿತೃಗಳ ಪೂಜೆಯೂ, ಉತ್ತಮ ತಿಥಿಕಾಲಗಳಲ್ಲಿ ದೇವತೆಗಳ ಪೂಜೆಯೂ, ಯಾವಕಾಲದಲ್ಲಾದರೂ ಅತಿಥಿಗಳ ಪೂಜೆಯೂ ಕೂಡ ನಡೆಯುತ್ತಿರುತ್ತದೆ.

೧೬. ಮೂರು ವರ್ಣದವರೂ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸುವುದರಲ್ಲಿ ನಿರತರಾಗಿರುತ್ತಾರೆ. ಬ್ರಾಹ್ಮಣನ ಬಾಯಿಯು ಬಂಜರಲ್ಲದ ಮುಳ್ಳುಗಳಿಲ್ಲದ ಕ್ಷೇತ್ರದಂತಿರುತ್ತದೆ.

೧೭. ನಾರಾಯಣನ ಉತ್ಸವ ಸಮಯದಲ್ಲಿ ಆ ಪರಮಾತ್ಮನ ಗುಣಗಾನವನ್ನು ಮಾಡುತ್ತ ಎಲ್ಲರೂ ಸಂತೋಷಗೊಂಡವರಾಗಿರುತ್ತಾರೆ. ದೇವರನ್ನಾಗಲಿ, ಬ್ರಾಹ್ಮಣರನ್ನಾಗಲಿ, ವಿದ್ವಾಂಸರನ್ನಾಗಲಿ ನಿಂದೆ ಮಾಡುವವರು ಇರುವುದಿಲ್ಲ.

೧೮. ತಮ್ಮನ್ನು ಹೊಗಳಿಕೊಳ್ಳತಕ್ಕವರಾರೂ ಇರುವುದಿಲ್ಲ. ಎಲ್ಲರೂ ಮತ್ತೊಬ್ಬರ ಗುಣವನ್ನು ನೋಡಿ ಸಂತೋಷಿಸುವವರಾಗಿರುತ್ತಾರೆ. ಜನರಿಗೆ ಶತ್ರುಗಳೇ ಇರುವುದಿಲ್ಲ. ಎಲ್ಲರೂ ಎಲ್ಲರಿಗೂ ಹಿತವನ್ನು ಬಯಸುವವರಾಗಿರುತ್ತಾರೆ.

ಪುರುಷಾ ಯೋಷಿತಶ್ಚಾಪಿ ನಹಿ ಮೂರ್ಖಾಶ್ಚ ಪಂಡಿತಾಃ ।
ನ ದುಃಖಿನೋ ಜನಾಃ ಸರ್ವೇ ಸರ್ವೇಷಾಂ ರತ್ನಮಂದಿರಮ್ ॥ ೧೯ ॥

ಮಣಿಮಾಣಿಕ್ಯರತ್ನೌಘರತ್ನಸ್ವರ್ಣಸಮನ್ವಿತಮ್ ।
ನ ಭಿಕ್ಷುಕಾ ನ ರೋಗಾರ್ತಾಃ ಶೋಕಹೀನಾಶ್ಚ ಹರ್ಷಿತಾಃ ॥ ೨೦ ॥

ನ ಹಿ ಭೂಷಣಹೀನಾಶ್ಚ ನರಾ ನಾರ್ಯಶ್ಚ ಕೇಚನ ।
ನ ಪಾಪಿನೋ ನ ಧೂರ್ತಾಶ್ಚ ನ ಕ್ಷುಧಾರ್ತಾ ನ ಕುತ್ಸಿತಾಃ ॥ ೨೧ ॥

ಜರಾಹೀನಾಃ ಪ್ರಾಣಿನಶ್ಚ ಶಶ್ವದ್ಯೌವನಸಂಸ್ಥಿತಾಃ ।
ಆಧಿವ್ಯಾಧಿವಿಹೀನಾಶ್ಚ ನಿರ್ವಿಕಾರಾಶ್ಚ ದೇಹಿನಃ ॥ ೨೨ ॥

ಯದುಕ್ತೋ ವೈ ಸತ್ಯಯುಗೇ ಧರ್ಮಃ ಸತ್ಯಂ ದಯಾದಿಕಮ್ ।
ಪಾದಹೀನಶ್ಚ ತ್ರೇತಾಯಾಂ ಸತ್ಯಾರ್ಧಂ ದ್ವಾಪರೇಽಪಿ ಚ ॥ ೨೩ ॥

---

೧೯–೨೦. ಗಂಡಸರಾಗಲಿ ಹೆಂಗಸರಾಗಲಿ ಯಾರೊಬ್ಬರೂ ಮೂರ್ಖರಾಗಿರುವುದಿಲ್ಲ. ಎಲ್ಲರೂ ಪಂಡಿತರಾಗಿರುತ್ತಾರೆ. ಜನರು ಯಾರೊಬ್ಬರೂ ದುಃಖವಂತರಾಗಿರುವುದಿಲ್ಲ. ಎಲ್ಲರ ಮನೆಗಳೂ ರತ್ನಗಳಿಂದ ಕಟ್ಟಲ್ಪಟ್ಟವುಗಳಾಗಿ ಮಾಣಿಕ್ಯ, ರತ್ನರಾಶಿ, ಚಿನ್ನ ಮುಂತಾದ ವಸ್ತುಗಳಿಂದ ಕೂಡಿರುತ್ತವೆ. ಭಿಕ್ಷುಕರು ಇರುವುದಿಲ್ಲ. ಕಾಯಿಲೆಯಿಂದ ಬಳಲುವವರೂ ಇರುವುದಿಲ್ಲ. ದುಃಖವಿಲ್ಲದವರಾಗಿಯೂ ಸಂತೋಷಗೊಂಡವರಾಗಿಯೂ ಇರುತ್ತಾರೆ.

೨೧. ಗಂಡಸರಾಗಲಿ, ಹೆಂಗಸರಾಗಲಿ ಯಾವಾಗಲೂ ಆಭರಣಗಳಿಂದ ಅಲಂಕಾರಮಾಡಿಕೊಳ್ಳದಿರುವವರಾಗಿರುವುದಿಲ್ಲ. ಪಾಪಿಗಳೂ, ಧೂರ್ತರೂ, ಹಸಿವೆಯಿಂದ ಪೀಡಿತರೂ. ಹೀನಕೆಲಸಗಳಲ್ಲಿ ಮನಸ್ಸುಳ್ಳವರೂ ಆಗಿರುವುದಿಲ್ಲ.

೨೨. ಪ್ರಾಣಿಗಳು ಮುಪ್ಪನ್ನು ಹೊಂದದೆ ಯಾವಾಗಲೂ ಪ್ರಾಯವಯಸ್ಸಿನಲ್ಲಿಯೇ ಇರುತ್ತಾರೆ. ಮತ್ತು ಮನೋವ್ಯಥೆಯಿಲ್ಲದವರೂ, ರೋಗವಿಲ್ಲದವರೂ ಯಾವ ವಿಧವಾದ ದೇಹವಿಕಾರವಿಲ್ಲದವರೂ ಆಗಿರುತ್ತಾರೆ.

೨೩. ಸತ್ಯಯುಗವೆಂಬ ಕೃತಯುಗದಲ್ಲಿ ಧರ್ಮ, ಸತ್ಯ, ದಯೆಯೇ ಮುಂತಾದುವುಗಳು ಯಾವರೀತಿಯಲ್ಲಿರುತ್ತವೆಯೆಂದು ಹೇಳಿದೆನೋ, ಅದರ ಕಾಲುಭಾಗವು ತ್ರೇತಾಯುಗದಲ್ಲಿ ಕಡಿಮೆಯಾಗಿರುತ್ತದೆ. ದ್ವಾಪರಯುಗದಲ್ಲಿ ಕೃತಯುಗದ ಅರ್ಧಭಾಗ ಧರ್ಮ ಮುಂತಾದುವುಗಳಿರುತ್ತವೆ.

ಧರ್ಮೈಕಪಾಚ್ಚ ಪ್ರಥಮೇ ಕಲೇಶ್ಚಾಪಿ ಕೃಶೋಽಬಲಃ ।
ದುಷ್ಟಾನಾಂ ದಸ್ಯುಚೌರ್ಯಾಣಾಮಂಕುರಃ ಪ್ರಭವೇದ್ವ್ರಜ ॥ ೨೪ ॥

ಅಧರ್ಮನಿರತಾಃ ಕೇಚಿದ್ಭೀತಾಃ ಸಂಗೋಪಿನಸ್ತಥಾ ।
ಭೀತಾಃ ಗುಪ್ತಾಶ್ಚ ಪುಂಶ್ಚಲ್ಯೋ ಭೀತಾಶ್ಚ ಪಾರದಾರಿಕಾಃ ॥ ೨೫ ॥

ಧರ್ಮಿಷ್ಠಾನಾಂ ಭಯಂ ಶಶ್ವದಧರ್ಮಿಷ್ಠಾಶ್ಚ ಕಂಪಿತಾಃ ।
ಸ್ವಲ್ಪಧರ್ಮರತಾ ಭೂಪಾಃ ಸ್ವಲ್ಪವೇದರತಾ ದ್ವಿಜಾಃ ॥ ೨೬ ॥

ವ್ರತಧರ್ಮರತಾಃ ಕೇಚಿತ್ಸರ್ವೇ ಸ್ವಚ್ಛಂದಗಾಮಿನಃ ।
ಯಾವತ್ತಿಷ್ಠಂತಿ ತೀರ್ಥಾನಿ ಯಾವತ್ತಿಷ್ಠಂತಿ ಸಾಧವಃ ॥ ೨೭ ॥

---

೨೪. ಎಲೈ ನಂದನೇ! ಕಲಿಯುಗದ ಮೊದಲಭಾಗದಲ್ಲಿ ಧರ್ಮಾದಿಗಳು ಕಾಲುಭಾಗವಮಾತ್ರ ಇರುತ್ತವೆ. ಮಾನವನು ಕೃಶನಾಗಿಯೂ ಬಲವಿಲ್ಲದವನಾಗಿಯೂ ಇರುತ್ತಾನೆ. ದುಷ್ಟರು, ಶತ್ರುಗಳು, ಕಳ್ಳರು ಇವರುಗಳೆಲ್ಲ ಎಲ್ಲೆಡೆಯಲ್ಲಿಯೂ ಇರಲು ಪ್ರಾರಂಭವಾಗುತ್ತದೆ.

೨೫. ಜನರು ಅಧರ್ಮದಲ್ಲಿ ನಿರತರಾಗುತ್ತಾರೆ. ಕೆಲವರು ಭಯದಿಂದ ಗುಟ್ಟಾಗಿ ಅಧರ್ಮಕಾರ್ಯಗಳನ್ನು ಮಾಡುತ್ತಾರೆ. ಮತ್ತು ಕುಲಟೆಯರು ಭಯದಿಂದ ಗುಟ್ಟಾಗಿ ತಮ್ಮ ಕೆಲಸವನ್ನು ಮಾಡುತ್ತಾರೆ. ಪರಸ್ತ್ರೀಯರಲ್ಲಿ ಆಸಕ್ತರೂ ಕೂಡ ಭಯದಿಂದ ಗುಟ್ಟಾಗಿಯೇ ಇರುತ್ತಾರೆ.

೨೬. ಧರ್ಮದಲ್ಲಿ ನಿರತರಾದವರಿಗೆ ಮೇಲಿಂದ ಮೇಲೆ ಭಯವುಂಟಾಗುವುದು. ಅಧರ್ಮದಲ್ಲಿ ನಿರತರಾದವರೂ ಭಯದಿಂದಿರುವರು. ರಾಜರುಗಳು ಸ್ವಲ್ಪ ಮಾತ್ರ ಧರ್ಮದಲ್ಲಿ ನಿರತರಾಗಿರುತ್ತಾರೆ. ಬ್ರಾಹ್ಮಣರೂ ಕೂಡ ಸ್ವಲ್ಪ ವೇದಾಧ್ಯಯನ ಮಾಡುವವರಾಗುತ್ತಾರೆ.

೨೭–೨೮. ವ್ರತ, ಧರ್ಮ ಇವುಗಳಲ್ಲಿ ಕೆಲವರು ಮಾತ್ರ ಆಸಕ್ತಿ ಹೊಂದಿರುತ್ತಾರೆ. ಎಲ್ಲರೂ ತಮ್ಮ ಇಷ್ಟಬಂದ ಮಾರ್ಗದಲ್ಲಿ ನಡೆವವರಾಗುತ್ತಾರೆ. ಎಲ್ಲಿಯವರೆಗೆ ಪುಣ್ಯತೀರ್ಥಗಳಿರುತ್ತವೆಯೋ, ಎಲ್ಲಿಯವರೆಗೆ ಸಾಧುಗಳಿರುತ್ತಾರೆಯೋ, ಎಲ್ಲಿಯವರೆಗೆ ಗ್ರಾಮದೇವತೆಗಳಿರುತ್ತಾರೆಯೋ, ಶಾಸ್ತ್ರಗಳು ಎಲ್ಲಿಯವರೆಗೆ ಇರುತ್ತ

ಯಾವತ್ತಿಷ್ಠಂತಿ ಗ್ರಾಮಾಣಾಂ ದೇವಾಃ ಶಾಸ್ತ್ರಾಣಿ ಪೂಜನಮ್ ।
ತಾವತ್ಕಿಂಚಿತ್ತಪಃ ಸತ್ಯಂ ಸ್ವರ್ಗಧರ್ಮಾಂಶ ಏವ ಚ ॥ ೨೮ ॥

ಕಲೇರ್ದೋಷನಿಧೇಸ್ತಾತ ಗುಣಏಕೋ ಮಹಾನಪಿ ।
ಮಾನಸಂ ಚ ಭವೇತ್ಪುಣ್ಯಂ ಸುಕೃತಂ ನ ಹಿ ದುಷ್ಕೃತಮ್ ॥ ೨೯ ॥

ತೀರ್ಥಾದಿಕೇ ಗತೇ ತಾತ ನಷ್ಟೋ ಧರ್ಮಾಂಶ ಏವ ಚ ।
ಕಲಾರೂಪಶ್ಚ ಧರ್ಮಶ್ಚ ಯಥಾ ಕುಹ್ವಾಂ ನಿಶಾಕರಃ ॥ ೩೦ ॥

॥ ನಂದ ಉವಾಚ ॥

ತೀರ್ಥಾನ್ಯೇತಾನಿ ಸರ್ವಾಣಿ ತಿಷ್ಠಂತ್ಯೇವ ಕಿಯದ್ದಿನಮ್ ।
ಸಾಧವೋ ಗ್ರಾಮ್ಯದೇವಾಶ್ಚ ಶಾಸ್ತ್ರಾಣ್ಯೇತಾನಿ ವತ್ಸಕ ॥ ೩೧ ॥

---

ವೆಯೋ, ದೇವಪೂಜೆಯು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಸ್ವಲ್ಪ ತಪಸ್ಸು, ಸತ್ಯ, ಸ್ವರ್ಗವನ್ನುಂಟುಮಾಡುವ ಧರ್ಮ ಇವುಗಳೆಲ್ಲ ಒಂದಂಶಮಾತ್ರ ಇರುತ್ತವೆ

೨೯. ಎಲೈ ತಂದೆಯೇ! ದೋಷಗಳಿಗೆ ಗಣಿಯಾದ ಕಲಿಯುಗದಲ್ಲಿ ಒಂದು ದೊಡ್ಡ ಗುಣವುಂಟು. ಯಾವುದೆಂದರೆ—ಮಾನಸ ಸರೋವರವು ಮಹಾ ಪುಣ್ಯ ತೀರ್ಥವಾಗಿರುತ್ತದೆ. ಅಲ್ಲಿ ಪುಣ್ಯವಲ್ಲದೆ ಪಾಪವಿರುವುದೇ ಇಲ್ಲ.

೩೦. ಎಲೈ ತಂದೆಯೇ! ತೀರ್ಥ ಮೊದಲಾದವುಗಳು ನಷ್ಟವಾದಮೇಲೆ ಅಂಶಮಾತ್ರ ಉಳಿದ ಧರ್ಮವೂ ಕೂಡ ನಾಶವಾಗುತ್ತದೆ. ಧರ್ಮವು ಕುಹೂ ಎಂಬ ಅಮಾವಾಸ್ಯೆಯ ದಿನದ ಚಂದ್ರನಂತೆ ಒಂದು ಕಲೆಮಾತ್ರದಿಂದಿರುತ್ತದೆ.

೩೧. ನಂದನು ಹೇಳುತ್ತಾನೆ:— ಎಲೈ ಮಗನೇ! ಈ ತೀರ್ಥಗಳೂ, ಎಲ್ಲ ಸಾಧುಗಳೂ, ಗ್ರಾಮದೇವತೆಗಳೂ, ಈ ಶಾಸ್ತ್ರಗಳು ಎಲ್ಲವೂ ಎಷ್ಟು ದಿನಗಳವರೆಗೆ ಇರುತ್ತವೆ ?

|| ಶ್ರೀ ಕೃಷ್ಣ ಉವಾಚ ||

ಕಲೌ ದಶಸಹಸ್ರಾಣಿ ಹರಿಸ್ತಿಷ್ಠತಿ ಮೇದಿನೀಮ್ ।
ದೇವಾನಾಂ ಪ್ರತಿಮಾ ಪೂಜ್ಯಾ ಶಾಸ್ತ್ರಾಣಿ ಚ ಪುರಾಣಕಮ್ || ೩೨ ||

ತದರ್ಧಮಪಿ ತೀರ್ಥಾನಿ ಗಂಗಾದೀನಿ ಸುನಿಶ್ಚಿತಮ್ ।
ತದರ್ಧಂ ಗ್ರಾಮದೇವಾಶ್ಚ ವೇದಾಶ್ಚ ವಿದುಷಾಮಪಿ || ೩೩ ||

ಅಧರ್ಮಃ ಪರಿಪೂರ್ಣಶ್ಚ ತದಂತೇ ಚ ಕಲೌ ಪಿತಃ ।
ಏಕವರ್ಣಾ ಭವಿಷ್ಯಂತಿ ವರ್ಣಾಶ್ಚತ್ವಾರ ಏವ ಚ || ೩೪ ||

ನ ಮಂತ್ರಪೂತೋದ್ವಾಹಶ್ಚ ನ ಹಿ ಸತ್ಯಂ ನ ಚ ಕ್ಷಮಾ ।
ಸ್ತ್ರೀ ಸ್ವೀಕಾರರತೋ ನಿತ್ಯಂ ಗ್ರಾಮ್ಯಧರ್ಮಪ್ರಧಾನತಃ || ೩೫ ||

---

೩೨. ಶ್ರೀ ಕೃಷ್ಣನು ಹೇಳುತ್ತಾನೆ:—ಕಲಿಯುಗದಲ್ಲಿ ಹತ್ತುಸಾವಿರ ವರುಷಗಳವರೆಗೆ ಹರಿಯು ಭೂಮಿಯಲ್ಲಿರುತ್ತಾನೆ. ದೇವರ ವಿಗ್ರಹಗಳೂ, ಶಾಸ್ತ್ರಗಳೂ, ಪುರಾಣಗಳೂ ಪೂಜ್ಯಗಳಾಗಿರುತ್ತವೆ.

೩೩. ಅದರ ಅರ್ಧಕಾಲ ಎಂದರೆ ಐದುಸಾವಿರ ವರುಷಗಳವರೆಗೆ ಗಂಗೆಯೇ ಮೊದಲಾದ ತೀರ್ಥಗಳು ಭೂಮಿಯಲ್ಲಿರುತ್ತವೆ. ಅದರ ಅರ್ಧಕಾಲದವರೆಗೆ ಗ್ರಾಮ ದೇವತೆಗಳು ಭೂಮಿಯಲ್ಲಿರುತ್ತಾರೆ. ವೇದಗಳೂ ಕೂಡ ವಿದ್ವಾಂಸರಲ್ಲಿರುತ್ತವೆ.

೩೪- ಎಲೈ ತಂದೆಯೇ! ಕಲಿಯುಗದಲ್ಲಿ ಅಧರ್ಮವು ಸಂಪೂರ್ಣವಾಗಿರುತ್ತದೆ. ಕಲಿಯುಗದ ಕೊನೆಯಲ್ಲಿ ಬ್ರಹ್ಮ, ಕ್ಷತ್ರ, ವಿಟ್‌ಶೂದ್ರರೆಂಬ ನಾಲ್ಕುವರ್ಣಗಳೂ ಸೇರಿ ಒಂದೇವರ್ಣವಾಗುತ್ತದೆ.

೩೫. ಮಂತ್ರದಿಂದ ಪರಿಶುದ್ಧವಾದ ವಿವಾಹವು ನಡೆಯುವುದಿಲ್ಲ. ಸತ್ಯವು ಇರುವುದಿಲ್ಲ. ತಾಳ್ಮೆಯೂ ಇರುವುದಿಲ್ಲ. ನಿಂದಿತವಾದ ಕಾರ್ಯವನ್ನೇ ಪ್ರಧಾನವಾಗಿಟ್ಟುಕೊಂಡು ಅದಕ್ಕಾಗಿ ಸ್ತ್ರೀಯನ್ನು ಮದುವೆಮಾಡಿಕೊಳ್ಳಲು ಯಾವಾಗಲೂ ನಿರತರಾಗಿರುತ್ತಾರೆ.

ನ ಯಜ್ಞಸೂತ್ರಂ ತಿಲಕಂ ಬ್ರಾಹ್ಮಣಾನಾಂ ಚ ನಿತ್ಯಶಃ ।
ಸಂಧ್ಯಾಶಾಸ್ತ್ರವಿಹೀನಾಶ್ಚ ವಿಪ್ರವಂಶಾಃ ಶ್ರುತಾ ಅಪಿ || ೩೬ ||

ಸರ್ವೈಃ ಸಾರ್ಧಂ ಚ ಸರ್ವೇಷಾಂ ಭಕ್ಷಣಂ ನಿಯಮಚ್ಯುತಮ್ ।
ಅಭಕ್ಷ್ಯಭಕ್ಷಾ ಲೋಕಾಶ್ಚ ಚತುರ್ವರ್ಣಾಶ್ಚ ಲಂಪಟಾಃ || ೩೭ ||

ನಾರೀಷು ನ ಸತೀ ಕಾಚಿತ್ಪುಂಶ್ಚಲೀ ಚ ಗೃಹೇ ಗೃಹೇ ।
ಕರೋತಿ ತರ್ಜನಂ ಕಾಂತಂ ಭೃತ್ಯತುಲ್ಯಂ ಚ ಕಂಪಿತಮ್ || ೩೮ ||

ಜಾರಾಯ ದತ್ತ್ವಾ ಮಿಷ್ಟಾನ್ನಂ ತಾಂಬೂಲಂ ವಸ್ತ್ರಚಂದನಮ್ ।
ನ ದದಾತ್ಯೇವ ಚಾಹಾರಂ ಸ್ವಾಮಿನೇ ದುಃಖಿನೇ ಪಿತಃ || ೩೯ ||

ಪುತ್ರೇಣ ಭರ್ತ್ಸಿತಸ್ತಾತಃ ಶಿಷ್ಯೇಣ ಭರ್ತ್ಸಿತೋ ಗುರುಃ ।
ಪ್ರಜಾಭಿಸ್ತಾಡಿತೋ ಭೂಪೋ ಭೂಪೇನ ತಾಡಿತಾಃ ಪ್ರಜಾಃ || ೪೦ ||

---

೩೬. ಬ್ರಾಹ್ಮಣರು ಜನಿವಾರವನ್ನೂ, ಹಣೆಗೆ ತಿಲಕವನ್ನೂ ಯಾವಾಗಲೂ ಧರಿಸುವುದಿಲ್ಲ. ಸಂಧ್ಯಾವಂದನೆ, ಶಾಸ್ತ್ರಾನುಷ್ಠಾನ ಇವುಗಳಿಲ್ಲದವರಾಗಿರುತ್ತಾರೆ. ಉತ್ತಮವಾದ ಬ್ರಾಹ್ಮಣರ ವಂಶಗಳೂ ವೇದಾಧ್ಯಯನಗಳೂ ನಾಶವಾಗುತ್ತವೆ.

೩೭. ಎಲ್ಲರೂ ತಮ್ಮ ತಮ್ಮ ಕುಲಾಚಾರವನ್ನು ಬಿಟ್ಟು ಎಲ್ಲರೊಂದಿಗೂ ತಿನ್ನುವವರಾಗುತ್ತಾರೆ. ಜನರು ತಿನ್ನಬಾರದವುಗಳನ್ನು ತಿನ್ನುವವರಾಗುತ್ತಾರೆ. ನಾಲ್ಕುವರ್ಣದವರೂ ಕೂಡ ದುರಾಚಾರ ನಿರತರಾಗಿರುತ್ತಾರೆ.

೩೮. ಹೆಂಗಸರಲ್ಲಿ ಯಾವಳೂ ಪತಿವ್ರತೆಯಾಗಿರುವುದಿಲ್ಲ. ಮನೆಮನೆಯಲ್ಲಿಯೂ ವ್ಯಭಿಚಾರಿಣಿಯರಾಗುತ್ತಾರೆ. ಸೇವಕನಂತೆ ಹೆದರಿ ನಡುಗುತ್ತಿರುವ ಗಂಡನನ್ನು ಗದರಿಸುತ್ತಿರುವವಳಾಗುತ್ತಾಳೆ.

೩೯. ಎಲೈ ತಂದೆಯೇ! ಸ್ತ್ರೀಯರು ರುಚಿಕರವಾದ ಅನ್ನವನ್ನೂ, ತಾಂಬೂಲವನ್ನೂ, ವಸ್ತ್ರವನ್ನೂ, ಗಂಧವನ್ನೂ ತನ್ನ ಜಾರನಿಗೆ ಕೊಟ್ಟು. ಮನೆಯಲ್ಲಿ ದುಃಖದಿಂದಿರುವ ತನ್ನ ಗಂಡನಿಗೆ ಆಹಾರವನ್ನೇ ಕೊಡುವುದಿಲ್ಲ.

೪೦. ತಂದೆಯು ಮಗನಿಂದ ಗದರಿಸಲ್ಪಡುತ್ತಾನೆ. ಗುರುವು ಶಿಷ್ಯನಿಂದ ಗದರಿಸಲ್ಪಡುತ್ತಾನೆ. ರಾಜನು ಪ್ರಜೆಗಳಿಂದ ಹೊಡೆಯಲ್ಪಡುತ್ತಾನೆ. ಪ್ರಜೆಗಳೂ ಕೂಡ ರಾಜನಿಂದ ಹೊಡೆಯಲ್ಪಡುತ್ತಾರೆ.

ದಸ್ಯುಚೋರೈಶ್ಚ ದುಷ್ಟೈಶ್ಚ ಶಿಷ್ಟಾಶ್ಚ ಪರಿಪೀಡಿತಾಃ ।
ಸಸ್ಯಹೀನಾ ಚ ವಸುಧಾ ಕ್ಷೀರಹೀನಾಶ್ಚ ಧೇನವಃ ॥ ೪೧ ॥

ಸ್ವಲ್ಪಕ್ಷೀರೇ ಘೃತಂ ನಾಸ್ತಿ ನವನೀತಂ ಚ ನಿತ್ಯಶಃ ।
ಸತ್ಯಹೀನಾ ಜನಾಃ ಸರ್ವೇ ನಿತ್ಯಂ ಮಿಥ್ಯಾ ವದಂತಿ ಚ ॥ ೪೨ ॥

ಶೌಚಸಂಧ್ಯಾಶಾಸ್ತ್ರಹೀನಾ ಬ್ರಾಹ್ಮಣಾಃ ವೃಷವಾಹಕಾಃ ।
ಸೂಪಕಾರಾಶ್ಚ ಶೂದ್ರಾಣಾಂ ಶೂದ್ರಾಣಾಂ ಶವದಾಹಕಾಃ ॥ ೪೩ ॥

ಶೂದ್ರಸ್ತ್ರೀನಿರತಾ ಶಶ್ವಚ್ಛೂದ್ರಾ ವಿಪ್ರವಧೂರತಾಃ ।
ಖಾದಂತಿ ಯಸ್ಯ ವಿಪ್ರಸ್ಯ ಭಕ್ಷ್ಯಂ ಚ ಪರಿಪಾಚಕಾಃ ॥ ೪೪ ॥

ಮಾತುಃ ಪರಾಂ ತಸ್ಯ ಪತ್ನೀಂ ಶೂದ್ರಾ ಗೃಹ್ಣಂತಿ ಲಂಪಟಾಃ ।
ಭೃತ್ಯಶ್ಚ ಹತ್ವಾ ರಾಜಾನಂ ಸ್ವಯಂ ರಾಜಾ ಭವಿಷ್ಯತಿ ॥ ೪೫ ॥

---

೪೧. ಧರ್ಮನಿರತರಾದ ಆಚಾರವಂತರು, ಶತ್ರುಗಳು, ಕಳ್ಳರು, ದುಷ್ಟರು ಇವರುಗಳಿಂದ ಪೀಡೆಯನ್ನು ಹೊಂದುತ್ತಾರೆ. ಭೂಮಿಯು ಸಸ್ಯಗಳಿಲ್ಲದುದಾಗುತ್ತದೆ. ಮತ್ತು ಹಸುಗಳು ಹಾಲಿಲ್ಲದವುಗಳಾಗುತ್ತವೆ.

೪೨. ಆ ಸ್ವಲ್ಪ ಹಾಲಿನಲ್ಲಿಯೂ ಬೆಣ್ಣೆ ತುಪ್ಪ ಇವುಗಳು ಇರುವುದಿಲ್ಲ. ಎಲ್ಲ ಜನರೂ ಸತ್ಯವಾದ ಮಾತನ್ನಾಡುವುದನ್ನು ಬಿಟ್ಟು ಯಾವಾಗಲೂ ಸುಳ್ಳನ್ನೇ ಹೇಳುವವರಾಗುತ್ತಾರೆ.

೪೩. ಬ್ರಾಹ್ಮಣರು ಶೌಚ, ಸಂಧ್ಯಾವಂದನೆ, ಶಾಸ್ತ್ರಾಚಾರ ಇವುಗಳನ್ನು ಬಿಟ್ಟು ಎತ್ತುಗಳನ್ನು ನಡೆಸುವವರಾಗುತ್ತಾರೆ. ಮತ್ತು ಶೂದ್ರರ ಮನೆಯಲ್ಲಿ ಅಡಿಗೆ ಮಾಡುವವರೂ, ಶೂದ್ರರ ಹೆಣಗಳನ್ನು ಸುಡುವವರೂ ಆಗುತ್ತಾರೆ.

೪೪–೪೫. ಶೂದ್ರರು ಬ್ರಾಹ್ಮಣ ಸ್ತ್ರೀಯಲ್ಲಿ ಆಸಕ್ತರಾಗಿರುತ್ತಾರೆ. ಬ್ರಾಹ್ಮಣರು ಶೂದ್ರ ಸ್ತ್ರೀಯಲ್ಲಿ ಆಸಕ್ತರಾಗಿರುತ್ತಾರೆ. ಯಾವ ಬ್ರಾಹ್ಮಣನ ಅನ್ನವನ್ನು ತಿನ್ನುತ್ತಾರೆಯೋ, ಮತ್ತು ಯಾವನ ಸೇವೆಯನ್ನು ಮಾಡಿಕೊಂಡಿರುತ್ತಾರೆಯೋ ಅಂಥವನ ಹೆಂಡತಿಯನ್ನು ತಾಯಿಗೆ ಸಮಾನಳನ್ನು ಶೂದ್ರರು ಕಾಮಾತುರರಾಗಿ ಸ್ವೀಕರಿಸುತ್ತಾರೆ. ಮತ್ತು ಸೇವಕನೂ ಕೂಡ ರಾಜನನ್ನು ಕೊಂದು ತಾನೇ ರಾಜನಾಗುತ್ತಾನೆ.

ನಾರೀ ಹತ್ವಾ ಪತಿಂ ಕಾಮಾಚ್ಛಜೇಜ್ಜಾರಂ ಚ ಕೌತುಕಾತ್ ।
ಪುತ್ರಶ್ಚ ಪಿತರಂ ಹತ್ವಾ ಸ್ವಯಂ ಭೂಪೋ ಭವಿಷ್ಯತಿ ॥ ೪೬ ॥

ಸರ್ವೇ ಸ್ವಚ್ಛಂದನಿರತಾಃ ಶಿಶ್ನೋದರಪರಾಯಣಾಃ ।
ವಂಖರಾ ವ್ಯಾಧಿಯುಕ್ತಾಶ್ಚ ಕುತ್ಸಿತಾಶ್ಚ ಕುಚ್ಛೈಲಕಾಃ ॥ ೪೭ ॥

ವಿಷ್ಣುಣ್ಣಮಂತ್ರಲಿಪ್ತಾಶ್ಚ ಮಿಥ್ಯಾ ಯಂತ್ರಪ್ರಚಾರಕಾಃ ।
ಜಾತಿಹೀನಾಶ್ಚ ಗುರವೋ ವಯೋ ಹೀನಾಶ್ಚ ನಿಂದಕಾಃ ॥ ೪೮ ॥

ರಾಜಾನಶ್ಚಾಪಿ ಮ್ಲೇಛಾಶ್ಚ ಯವನಾ ಧರ್ಮನಿಂದಕಾಃ ।
ಸತ್ಕೀರ್ತಿಮಪಿ ಸಾಧೂನಾಂ ಕುರ್ವನ್ತ್ಯುನ್ಮೂಲನಂ ಮುದಾ ॥ ೪೯ ॥

ಪಿತೃದೇವದ್ವಿಜಾತೀನಾಮತಿಥೀನಾಂ ಚ ನಿತ್ಯಶಃ ।
ಪೂಜಾ ನಾಸ್ತಿ ಗುರೂಣಾಂ ಚ ಪಿತ್ರೋಶ್ಚ ಪೂಜನಂ ಸ್ತ್ರಿಯಾಃ ॥ ೫೦ ॥

---

೪೬. ಹೆಂಗಸು ಗಂಡನನ್ನು ಕೊಂದು ಕಾಮಪೀಡಿತಳಾಗಿ ಸಂತೋಷದಿಂದ ಜಾರನನ್ನು ಸೇವಿಸುತ್ತಾಳೆ. ಮಗನು ತಂದೆಯನ್ನು ಕೊಂದು ಅವನ ಭೂಮಿಗೆ ತಾನು ಯಜಮಾನನಾಗುತ್ತಾನೆ.

೪೭. ಎಲ್ಲರೂ ತಮ್ಮ ತಮ್ಮ ಮನಬಂದಂತೆ ನಡೆಯುವವರಾಗುತ್ತಾರೆ. ಯಾವಾಗಲೂ ಹೊಟ್ಟೆ ತುಂಬಿಕೊಳ್ಳುವುದು ಮತ್ತು ಕಾಮತೃಪ್ತಿ ಹೊಂದುವುದು ಇವರಲ್ಲಿ ಆಸಕ್ತರಾಗಿರುತ್ತಾರೆ. ರೋಗದಿಂದ ಕೂಡಿದವರಾಗಿ ನಿಂದಿತರೂ ಕೆಟ್ಟ ಬಟ್ಟೆಯುಳ್ಳವರೂ ಆಗಿರುತ್ತಾರೆ.

೪೮. ಶಕ್ತಿಗುಂದಿದ ಮಂತ್ರಗಳಲ್ಲಿ ಆಸಕ್ತರೂ, ಸುಳ್ಳು ಮಂತ್ರಗಳನ್ನು ಲೋಕದಲ್ಲಿ ಪ್ರಚಾರ ಮಾಡುವವರೂ ಆಗುತ್ತಾರೆ. ಹೀನಜಾತಿಯವರು ಗುರುಗಳಾಗುತ್ತಾರೆ. ಮತ್ತು ಅಲ್ಪವಯಸ್ಸಿನವರೂ ಇತರರನ್ನು ನಿಂದೆಮಾಡುವವರೂ ಆಗಿರುತ್ತಾರೆ.

೪೯. ಮ್ಲೇಚ್ಛಜಾತಿಯವರು ರಾಜರಾಗುತ್ತಾರೆ. ಯವನರು ಧರ್ಮವನ್ನು ನಿಂದಿಸುತ್ತ ತಾವೂ ರಾಜರಾಗುತ್ತಾರೆ. ಅವರು ಸಾಧುಗಳ ಉತ್ತಮ ಕೀರ್ತಿಯನ್ನು ಕೂಡ ಸಂತೋಷದಿಂದ ನಾಶಮಾಡುತ್ತಾರೆ.

೫೦. ಯಾವಾಗಲೂ ಪಿತೃಗಳು, ದೇವರು, ಬ್ರಾಹ್ಮಣರು, ಅತಿಥಿಗಳು, ಗುರುಗಳು ಇವರುಗಳಿಗೆ ಪೂಜೆಯೆಂಬುದೇ ಇರುವುದಿಲ್ಲ. ಹೆಂಡತಿಯ ತಂದೆತಾಯಿಗಳನ್ನು ಪೂಜೆ ಮಾಡುವವರಾಗುತ್ತಾರೆ.

ಸ್ತ್ರೀಬಂಧೂನಾಂ ಗೌರವಂ ಚ ಸ್ತ್ರೀಣಾಂ ಚ ಸತತಂ ಪಿತಃ ।
ಚೋರಃ ಸತ್ಕುಲಜಾತಿಶ್ಚ ಬ್ರಾಹ್ಮಣೋ ದೇವಹಾರಕಃ ॥ ೫೧ ॥

ಮಾನಂ ವಹಂತಿ ಲೋಭೇನ ಯುಗೇ ಧರ್ಮೇಣ ಕೌತುಕಾತ್ ।
ದೇವಾಯತನಹೀನಂ ಚ ಜಗತ್ಸರ್ವಂ ಭಯಾಕುಲಮ್ ॥ ೫೨ ॥

ಅರಾಜಕಂ ಚ ದುರ್ನೀತಂ ಸಂತತಂ ಕಲಿದೋಷತಃ ।
ಬುಭುಕ್ಷಿತಾಃ ಕುಚೈಲಾಶ್ಚ ದರಿದ್ರಾ ವ್ಯಾಧಿನೋ ನರಾಃ ॥ ೫೩ ॥

ಕಪರ್ದಕಟಟಾಢ್ಯಶ್ಚೋ ರಾಜೇಂದ್ರೋ ಹಿ ಘಟೇಶ್ವರಃ ।
ವೃದ್ಧಾಂಗುಷ್ಠಸಮಾಲೋಕಾಃ ವೃಕ್ಷಾಃ ಶಾಕಸಮಾಸ್ತಥಾಃ ॥ ೫೪ ॥

ತಾಲಾನಾಂ ನಾರಿಕೇರಾಣಾಂ ಪನಸಾನಾಂ ತಥೈವ ಚ ।
ಫಲಾನಿ ಸರ್ಷಪಾಣ್ಯೇವ ತತ್ಕ್ಷುಪ್ರಂ ಚ ತತಃ ಪರಮ್ ॥ ೫೫ ॥

---

೫೧. ಎಲೈ ತಂದೆಯೇ! ಹೆಂಡತಿಯ ಬಂಧುಗಳಿಗೂ ಹೆಂಗಸರಿಗೂ ಯಾವಾಗಲೂ ಗೌರವವು ದೊರೆಯುತ್ತದೆ. ಉತ್ತಮಕುಲದಲ್ಲಿ ಹುಟ್ಟಿದವನು ಕಳ್ಳತನವನ್ನು ಮಾಡುತ್ತಾನೆ. ಬ್ರಾಹ್ಮಣನು ದೇವರನ್ನೇ ಕದಿಯುವವನಾಗುತ್ತಾನೆ.

೫೨. ಕಲಿಯುಗದಲ್ಲಿ ಅಧರ್ಮದಿಂದಲೂ, ಆಶೆಯಿಂದಲೂ ಆಶ್ಚರ್ಯಕರವಾಗಿ ಗೌರವವನ್ನೇ ಹೊಂದುತ್ತಾರೆ. ಈ ಪ್ರಪಂಚವೆಲ್ಲವೂ ದೇವಾಲಯವಿಲ್ಲದುದಾಗಿ ಮಹಾ ಭಯವನ್ನುಂಟುಮಾಡುತ್ತಿರುವುದು.

೫೩. ಕಲಿಯುಗದ ದೋಷದಿಂದ ಪ್ರಪಂಚವು ರಾಜನಿಲ್ಲದುದಾಗಿ ನೀತಿಯಿಲ್ಲದುದಾಗಿರುತ್ತದೆ. ಮತ್ತು ಮನುಷ್ಯರು ಹೊಟ್ಟೆಗೆ ಅನ್ನವಿಲ್ಲದೆ ಹಸಿವಿನಿಂದ ಬಳಲುವವರೂ, ಮಲಿನವಾದ ಬಟ್ಟೆಯುಳ್ಳವರೂ, ದರಿದ್ರರೂ, ರೋಗದಿಂದ ಕೂಡಿದವರೂ ಆಗಿರುತ್ತಾರೆ.

೫೪. ದೊಡ್ಡದಾದ ಗುಂಪಿಗೆ ಒಡೆಯನಾಗಿದ್ದರೂ, ರಾಜಶ್ರೇಷ್ಠನಾಗಿದ್ದರೂ ಅಂಥವನು ದರಿದ್ರನಾಗುತ್ತಾನೆ. ಜನರೆಲ್ಲರೂ ಅಂಗುಷ್ಠ (ಹೆಬ್ಬೆಟ್ಟಿನಂತೆ) ಪರಿಮಾಣವುಳ್ಳವರಾಗುತ್ತಾರೆ. ಮರಗಳೆಲ್ಲವೂ ಚಿಕ್ಕ ಗಿಡದ ಪ್ರಮಾಣದಲ್ಲಿರುತ್ತವೆ.

೫೫. ತಾಳೆಯ ಮರದ, ತೆಂಗಿನ ಮರದ, ಹಲಸಿನ ಮರದ ಹಣ್ಣುಗಳೆಲ್ಲವೂ ಸಾಸುವೆಯ ಗಾತ್ರದವುಗಳಾಗಿರುತ್ತವೆ. ಅವೂ ಕೂಡ ರಸಭರಿತಗಳಾಗಿರುವುದಿಲ್ಲ.

ಜಲಭಾಜನಪಾತ್ರೇಣ ಸಸ್ಯೇನ ವಾಸಸಾ ತಥಾ ।
ವಿಹೀನಂ ಮಂದಿರಂ ಸರ್ವಂ ಗೃಹಾಣಾಮುಪರಿಷ್ಕೃತಮ್ ॥ ೫೬ ॥

ಗಂಧಕೇನ ಪರಿವೃತಂ ದೀಪಹೀನಂ ತಮೋಯುತಮ್ ।
ಹಿಂಸ್ರಜಂತುಭಯಾದ್ಭೀತಾ ಜನಾಃ ಸರ್ವೇ ಚ ಪಾಪಿನಃ ॥ ೫೭ ॥

ಸರ್ವೇ ಚ ಫಲಲೋಭಿಷ್ಠಾಃ ಪುಂಶ್ಚಲ್ಯಃ ಕಲಹಪ್ರಿಯಾಃ ।
ರೂಪವತ್ಯೋ ನ ಕಾಮಿನ್ಯೋ ನರಾಶ್ಚಾಪಿ ನ ರೂಪಿಣಃ ॥ ೫೮ ॥

ನದ್ಯೋ ನದಾಃ ಕಂದರಾಶ್ಚ ತಡಾಗಾಶ್ಚ ಸರೋವರಾಃ ।
ಜಲಪದ್ಮವಿಹೀನಾಶ್ಚ ಜಲಹೀನಾ ಘನಾಸ್ತಥಾ ॥ ೫೯ ॥

ಅಪತ್ಯಹೀನಾ ನಾರ್ಯಶ್ಚ ಕಾಮುಕ್ಯೋ ಜಾರಸಂಯುತಾಃ ।
ಅಶ್ವತ್ಥಚ್ಛೇದಿನಃ ಸರ್ವೇ ವೃಕ್ಷಹೀನಾ ವಸುಂಧರಾ ॥ ೬೦ ॥

---

೫೬. ಮನೆಗಳು ಎಲ್ಲವೂ ನೀರಿನ ಪಾತ್ರೆಗಳಿಲ್ಲದೆ, ಸಸ್ಯಗಳಿಲ್ಲದೆ, ಬಟ್ಟೆಗಳಿಲ್ಲದೆ ಹೀನಸ್ಥಿತಿಯಲ್ಲಿರುತ್ತವೆ. ಮತ್ತು ಮನೆಗಳು ಗುಡಿಸಿ ಸಾರಿಸಿ ಅಲಂಕರಿಸಲ್ಪಟ್ಟವುಗಳಾಗಿರುವುದಿಲ್ಲ.

೫೭. ಅಲ್ಲದೆ ದುರ್ವಾಸನೆಯಿಂದ ಕೂಡಿದವುಗಳಾಗಿಯೂ, ದೀಪವಿಲ್ಲದವುಗಳಾಗಿಯೂ ಕತ್ತಲೆಯಿಂದ ತುಂಬಿದವುಗಳಾಗಿಯೂ ಇರುತ್ತವೆ. ಜನರೆಲ್ಲರೂ ಕ್ರೂರ ಪ್ರಾಣಿಗಳ ಭಯದಿಂದ ಹೆದರಿದವರಾಗಿಯೂ, ಪಾಪಕಾರ್ಯಗಳಲ್ಲಿ ತೊಡಗಿದವರೂ ಆಗಿರುತ್ತಾರೆ.

೫೮. ಎಲ್ಲರೂ ಫಲವನ್ನು ಹೊಂದುವ ವಿಷಯದಲ್ಲಿ ದುರಾಶೆಗೊಂಡಿರುತ್ತಾರೆ. ಸ್ತ್ರೀಯರು ವ್ಯಭಿಚಾರಿಣಿಯರೂ, ಜಗಳ ಮಾಡುವುದರಲ್ಲಿ ಬಹಳ ಆಶೆಯುಳ್ಳವರೂ ಆಗಿರುತ್ತಾರೆ. ಸ್ತ್ರೀಯರು ರೂಪವತಿಯರಾಗಿರುವುದಿಲ್ಲ. ಪುರುಷರೂ ಕೂಡ ರೂಪವಂತರಾಗಿರುವುದಿಲ್ಲ.

೫೯. ನದಿಗಳು, ನದಗಳು, ಕೆರೆಗಳು, ಹಳ್ಳಗಳು, ಕೊಳಗಳು, ಬಾವಿಗಳು ಇವುಗಳೆಲ್ಲ ಕಮಲವಿಲ್ಲದವುಗಳೂ, ನೀರಿಲ್ಲದವುಗಳೂ, ಗಟ್ಟಿ ನೆಲವುಳ್ಳವುಗಳೂ ಆಗಿರುತ್ತವೆ-

೬೦. ಹೆಂಗಸರು ಮಕ್ಕಳಿಲ್ಲದವರಾಗಿ ಕಾಮಾಸಕ್ತರಾಗಿ ಜಾರರಿಂದೊಡಗೂಡಿದವರಾಗಿರುತ್ತಾರೆ. ಎಲ್ಲರೂ ಅಶ್ವತ್ಥಮರವನ್ನು ಕಡಿಯುವವರಾಗುತ್ತಾರೆ. ಭೂಮಿಯೂಕೂಡ ಮರವಿಲ್ಲದುದಾಗಿರುತ್ತದೆ.

ಫಲಹೀನಾಶ್ಚ ತರವಃ ಶಾಖಾಸ್ಕಂಧವಿಹೀನಕಾಃ ।
ಫಲಾನಿ ಸ್ವಾದುಹೀನಾನಿ ಚಾನ್ನಾನಿ ಚ ಜಲಾನಿ ಚ ॥ ೬೧ ॥

ಮಾನವಾಃ ಕೂಟವಕ್ತಾರೋ ನಿರ್ದಯಾ ಧರ್ಮವರ್ಜಿತಾಃ ।
ತದಂತೇ ದ್ವಾದಶಾದಿತ್ಯಾಃ ಸಂಹರಿಷ್ಯಂತಿ ಮಾನವಾನ್ ॥ ೬೨ ॥

ಸರ್ವಾನ್ ಜಂತೂಶ್ಚ ತಾಪೇನ ಬಹುವೃಷ್ಟ್ಯಾ ವ್ರಜೇಶ್ವರ ।
ಅವಶಿಷ್ಟಾ ಚ ಪೃಥಿವೀ ಕಥಾಮಾತ್ರಾವಶೇಷಿತಾ ॥ ೬೩ ॥

ಕಲಾಗತೇ ಚ ಪೃಥಿವೀ ಕ್ಷೇತ್ರಂ ವರ್ಷಾಗತೇ ತಥಾ ।
ಪುನಃ ಸತ್ಯಪ್ರವೃತ್ತಿಶ್ಚ ಭವಿಷ್ಯತಿ ಕ್ರಮೇಣ ವೈ ॥ ೬೪ ॥

ಇತ್ಯೇವಂ ಕಥಿತಂ ಸರ್ವಂ ಗಚ್ಛ ತಾತ ವ್ರಜಂ ಸುಖಮ್ ।
ಅಹಂ ದುಗ್ಧಮುಖೋ ಬಾಲಃ ಪುತ್ರಸ್ತೇ ಕಥಯಾಮಿ ಕಿಮ್ ॥ ೬೫ ॥

---

೬೧. ಮರಗಳು ಹಣ್ಣಿಲ್ಲದವುಗಳೂ, ರೆಂಬೆಯಿಲ್ಲದವುಗಳೂ, ದಿಂಡಿಲ್ಲದವುಗಳೂ ಆಗಿರುತ್ತವೆ. ಹಣ್ಣುಗಳೂ, ಅನ್ನನೀರುಗಳೂ ಕೂಡ ರುಚಿಯಿಲ್ಲದವುಗಳಾಗಿರುತ್ತವೆ.

೬೨–೬೩. ಮನುಷ್ಯರು ದಯೆಯಿಲ್ಲದವರೂ, ಧರ್ಮವಿಲ್ಲದವರೂ ಆಗಿ ಸುಳ್ಳು ಸಾಕ್ಷಿಗಳನ್ನು ಹೇಳುವವರಾಗುತ್ತಾರೆ. ಈ ಕಲಿಯುಗದ ಕೊನೆಯಲ್ಲಿ ಹನ್ನೆರಡುಮಂದಿ ಸೂರ್ಯರು ಮನುಷ್ಯರನ್ನೂ, ಎಲ್ಲ ಪ್ರಾಣಿಗಳನ್ನೂ ಬಿಸಿಲಿನಿಂದಲೂ, ಅತಿಯಾದ ಮಳೆಯಿಂದಲೂ ನಾಶಮಾಡುತ್ತಾರೆ. ಎಲೈ ಗೋಕುಲದ ರಾಜನೇ! ಭೂಮಿಯು ಹೆಸರುಮಾತ್ರ ಉಳಿದುದಾಗಿರುತ್ತದೆ.

೬೪. ಕಲಿಯುಗವು ಕೊನೆಗಂಡಾಗ ಭೂಮಿಯು ಮಳೆಬಂದಕಾಲದಲ್ಲಿ ಹೊಲ ಗದ್ದೆಗಳು ಹೇಗಿರುತ್ತವೋ ಹಾಗಿರುತ್ತದೆ. ಆಮೇಲೆ ಕ್ರಮವಾಗಿ ಕೃತಯುಗವು ಪ್ರಾರಂಭವಾಗುತ್ತದೆ.

೬೫. ಎಲೈ ತಂದೆಯೇ! ಈಪ್ರಕಾರ ನೀನು ಕೇಳಿದುದೆಲ್ಲವನ್ನೂ ಹೇಳಿರುವೆನು. ಇನ್ನು ನೀನು ಸುಖವಾಗಿ ಗೋಕುಲಕ್ಕೆ ಹೋಗುವವನಾಗು. ನಾನು ಹಾಲು ಕುಡಿಯುವ ಮಗುವಾಗಿರುವೆನು, ನಿನ್ನ ಮಗನಾದ ನಾನು ನಿನಗೇನೆಂದುಹೇಳಲಿ.

ನವನೀತಂ ಘೃತಂ ದುಗ್ಧಂ ದಧಿ ತಕ್ರಂ ಪರಿಷ್ಕೃತಮ್ ।
ಸ್ವಸ್ತಿಕಂ ಶುಭಕರ್ಮಾರ್ಹಂ ಮಿಷ್ಟಾನ್ನಂ ಚ ಸುಧೋಪಮಮ್ ॥ ೧೬ ॥

ಮಿಷ್ಟದ್ರವ್ಯಂ ಚ ಯತ್ಕಿಂಚಿತ್ಪಿತೃದೇವನಿಮಿತ್ತಕಮ್ ।
ಭುಕ್ತಂ ಬಲಾಚ್ಚ ತತ್ಸರ್ವಂ ಬಾಲಾನಾಂ ರೋದನಂ ಬಲಮ್ ॥ ೧೭ ॥

ತತ್ಕ್ಷಮಸ್ವಾಪರಾಧಂ ಮೇ ಬಾಲದೋಷಃ ಪದೇ ಪದೇ ।
ತ್ವಂ ಪಿತಾ ತವ ಪುತ್ರೋಽಹಂ ಯಶೋದಾ ಜನನೀ ಮಮ ॥ ೧೮ ॥

ಮದೀಯಂ ಪರಿಹಾಸಂ ಚ ಯಶೋದಾಂ ರೋಹಿಣೀಂ ವದ ।
ಕುಮಾರಾಸ್ಯಾಚ್ಛ್ರುತಂ ಸರ್ವಂ ಸೋಽಹಮಿತ್ಯೇವಮೀಪ್ಸಿತಮ್ ॥ ೧೯ ॥

ಕೀರ್ತಯಿಷ್ಯಸಿ ತತ್ಸರ್ವಂ ಸರ್ವಂ ಗೋಕುಲವಾಸಿನಮ್ ।
ಕಾಲಃ ಕರೋತಿ ಸಂಸರ್ಗಂ ಬಂಧೂನಾಂ ಬಂಧುಭಿಃ ಸಹ ॥ ೨೦ ॥

---

೧೬–೧೮. ಬೆಣ್ಣೆ, ತುಪ್ಪ, ಹಾಲು, ಮೊಸರು, ಪರಿಷ್ಕಾರಮಾಡಿದ ಮಜ್ಜಿಗೆ, ಶುಭಕರ್ಮಗಳಿಗಾಗಿ ಮಾಡಿದ ಕಡುಬುಗಳು, ಅಮೃತದಂತೆ ರುಚಿಕರವಾದ ಅನ್ನ, ಮತ್ತು ಪಿತೃಗಳಿಗಾಗಿ ದೇವರಿಗಾಗಿ ಮಾಡಿದ ರುಚಿಕರವಾದ ತಿಂಡಿ ಇವುಗಳನ್ನು ನಾನು ಬಲಾತ್ಕಾರದಿಂದ ತಿಂದಿರುವೆನು. ಹಾಗೆ ತಿನ್ನಲು ಅವಕಾಶವಿಲ್ಲದ ಸಂದರ್ಭದಲ್ಲಿ ಬಾಲಕರಿಗೆ ಸಹಜವಾದ ಅಳುವಿಕೆಯೂಕೂಡ ನನ್ನನ್ನು ಆಶ್ರಯಿಸುತ್ತಿತ್ತು. ಮತ್ತೆ ಮತ್ತೆ ಹುಡುಗತನದಿಂದ ಮಾಡಿದ ಆ ಅಪರಾಧವನ್ನು ಕ್ಷಮಿಸುವವನಾಗು. ನೀನು ನನ್ನ ತಂದೆಯಾಗಿರುವೆ; ನಾನು ನಿನ್ನ ಮಗನಾಗಿರುವೆನು. ಯಶೋದೆಯು ನನ್ನ ತಾಯಿಯು.

೧೯–೨೦. ನಾನು ಮಾಡಿದ ಪರಿಹಾಸಗಳನ್ನು ಕ್ಷಮಿಸಬೇಕೆಂದು ಯಶೋದೆಗೂ ರೋಹಿಣಿಗೂ ತಿಳಿಸುವವನಾಗು. ಮತ್ತು ಮಗನಾದ ನನ್ನ ಬಾಯಿಯಿಂದ ಕೇಳಲ್ಪಟ್ಟ ಮತ್ತು ನೀನು ಅಪೇಕ್ಷಿಸಿದ ಸಕಲ ವಿಚಾರಗಳನ್ನೂ ಆ ಗೋಕುಲವಾಸಿಗಳಾದ ಜನರಿಗೆ ಹೇಳುವವನಾಗು. ಕಾಲವೆಂಬುದು ಬಂಧುಗಳಿಗೆ ಬಂಧುಗಳೊಡನೆ ಸಂಬಂಧವನ್ನುಂಟುಮಾಡುತ್ತದೆ.

ಕಾಲಃಕರೋತಿ ವಿಚ್ಛೇದಂ ವಿರೋಧಂ ಪ್ರೀತಿಮೇವ ಚ ।
ಕಾಲಃ ಸೃಷ್ಟಿಂ ಚ ಕುರುತೇ ಕಾಲಶ್ಚ ಪರಿಪಾಲನಮ್ ॥ ೭೧ ॥

ಕಾಲಃ ಕರೋತಿ ಸಾನಂದಂ ಕಾಲಃ ಸಂಹರತೇ ಪ್ರಜಾಃ ।
ಸುಖಂ ದುಃಖಂ ಭಯಂ ಶೋಕಂ ಜರಾಂ ಮೃತ್ಯುಂ ಚ ಜನ್ಮ ಚ ॥ ೭೨ ॥

ಸರ್ವಕರ್ಮಾನುರೋಧೇನ ಕಾಲ ಏವ ಕರೋತಿ ಚ ।
ಸರ್ವಂ ಕಾಲಕೃತಂ ತಾತ ವಿಸ್ಮಯಂ ನ ವ್ರಜಂ ವ್ರಜ ॥ ೭೩ ॥

ಕುತಸ್ತ್ವಂ ಗೋಕುಲೇ ವೈಶ್ಯೋ ನಂದೋ ವೈಶ್ಯಾಧಿಪೋ ನೃಪಃ ।
ವಸುದೇವಸುತೋಽಹಂ ಚ ಮಥುರಾಯಾಮಹೋ ಕುತಃ ॥ ೭೪ ॥

ಪಿತ್ರಾ ಮೇ ಕಂಸಭೀತೇನ ತ್ವದ್ಗೃಹೇ ಚ ಸಮರ್ಪಿತಃ ।
ಪಿತುಃ ಪರಃ ಪಿತಾ ತ್ವಂ ಚ ಮಾತಾ ಮಾತುಃ ಪರಾಪಿ ವಾ ॥ ೭೫ ॥

---

೭೧. ಕಾಲವೆಂಬುದೇ ಪರಸ್ಪರ ಅಗಲುವಂತೆ ಮಾಡುತ್ತದೆ. ಕಾಲವೇ ಒಬ್ಬರೊಬ್ಬರಿಗೆ ವಿರೋಧವನ್ನುಂಟುಮಾಡುತ್ತದೆ. ಅದೇ ಕಾಲವು ಪರಸ್ಪರ ಪ್ರೀತಿಯನ್ನುಂಟುಮಾಡುತ್ತದೆ. ಕಾಲವೇ ಸೃಷ್ಟಿಮಾಡುವುದು. ಕಾಲವೇ ಜಗತ್ತನ್ನು ಕಾಪಾಡುತ್ತದೆ.

೭೨–೭೩. ಕಾಲವೆಂಬುದು ಪ್ರಾಣಿಯನ್ನು ಆನಂದದಿಂದಿರುವಂತೆ ಮಾಡುತ್ತದೆ. ಕಾಲವೇ ಪ್ರಜೆಗಳನ್ನು ಸಂಹಾರಮಾಡುತ್ತದೆ. ಸುಖ, ದುಃಖ, ಹೆದರಿಕೆ, ಶೋಕ, ಮುಪ್ಪು, ಸಾವು, ಹುಟ್ಟು ಇವೆಲ್ಲವನ್ನೂ ಪ್ರಾಣಿಗಳ ಪಾಪ ಪುಣ್ಯ ಕರ್ಮಗಳಿಗೆ ತಕ್ಕಂತೆ ಕಾಲವೇ ಮಾಡುತ್ತದೆ. ಎಲೈ ತಂದೆಯೇ! ಎಲ್ಲವೂ ಕಾಲದಿಂದಲೇ ಮಾಡಲ್ಪಟ್ಟುದು. ಇದರಲ್ಲಿ ಆಶ್ಚರ್ಯಪಡಬೇಕಾದುದೇ ಇಲ್ಲ. ಇನ್ನು ನೀನು ಗೋಕುಲಕ್ಕೆ ಹೋಗು.

೭೪. ಗೋಕುಲದಲ್ಲಿ ವೈಶ್ಯಜಾತಿಯವನಾಗಿ ವೈಶ್ಯರಿಗೆಲ್ಲ ರಾಜನಾದ ನೀನೆಲ್ಲಿ, ಮಥುರಾ ಪಟ್ಟಣದಲ್ಲಿ ವಸುದೇವನಿಗೆ ಮಗನಾಗಿ ಹುಟ್ಟಿದ ನಾನೆಲ್ಲಿ, ಆಶ್ಚರ್ಯವು.

೭೫. ಕಂಸನಿಂದ ಭಯಗೊಂಡ, ತಂದೆಯಾದ ವಸುದೇವನಿಂದ ನಾನು ನಿನ್ನ ಮನೆಯಲ್ಲಿಡಲ್ಪಟ್ಟವನಾದೆನು. ನೀನು ನನ್ನ ತಂದೆಗಿಂತಲೂ ಹೆಚ್ಚಾಗಿ (ಶ್ರೇಷ್ಠನಾಗಿ) ತಂದೆಯಾಗಿರುವೆ. ಆ ಯಶೋದೆಯು ತಾಯಿಗಿಂತಲೂ ಅತಿಶಯವಾದ ತಾಯಿಯಾಗಿರುವಳು.

ಮಯಾ ದತ್ತೇನ ಜ್ಞಾನೇನ ಪಾರ್ವತ್ಯಾ ಚ ವ್ರಜೇಶ್ವರ ।
ತ್ಯಜ ಮೋಹಂ ಮಹಾಭಾಗ ಗಚ್ಛ ತಾತ ಸುಖಂ ಗೃಹಮ್ ॥ ೭೬ ॥

॥ ನಂದ ಉವಾಚ ॥

ಸ್ಮರ ವೃಂದಾವನಂ ತಾತ ರಮ್ಯಂ ಪುಣ್ಯಂ ಮಹೋತ್ಸವಮ್ ।
ಗೋಕುಲಂ ಗೋಕುಲಂ ರಮ್ಯಂ ಸುಂದರಂ ಯಮುನಾತಟಮ್ ॥ ೭೭ ॥

ರಮಣೀನಾಂ ಸುರಮ್ಯಂ ಚ ತ್ವತ್ಪ್ರಿಯಂ ರಾಸಮಂಡಲಮ್ ।
ಗೋಪಾಲಿಕಾ ಗೋಪಬಾಲಾನ್ಯಶೋದಾಂ ರೋಹಿಣೀಂ ಪ್ರಿಯಾಮ್ ॥೭೮॥

ಪ್ರಾಣಾಧಿಕಾಂ ರಾಧಿಕಾಂ ನ ಕಥಂ ಸ್ಮರಸಿ ಪುತ್ರಕ ।
ವಾರಮೇಕಂ ಸ್ವಲ್ಪದಿನಂ ಗೋಕುಲಂ ಗಚ್ಛ ವತ್ಸಕ ॥ ೭೯ ॥

ಇತ್ಯೇವಮುಕ್ತ್ವಾ ನಂದಶ್ಚ ಕ್ರೋಡೇ ಕೃಷ್ಣಂ ಚಕಾರ ಸಃ ।
ನೇತ್ರಾಶ್ರುಣಾ ಚ ಪೂರ್ಣೇನ ತಂ ಸಿಷೇಚ ಶುಚಾನ್ವಿತಃ ॥ ೮೦ ॥

---

೭೬. ಎಲೈ ಗೋಕುಲದ ರಾಜನೇ! ನಾನು ಕೊಟ್ಟಿರುವ ಮತ್ತು ಪಾರ್ವತೀ ದೇವಿಯು ಕೊಟ್ಟಿರುವ ದಿವ್ಯಜ್ಞಾನದಿಂದ ಎಲೈ ಮಹಾತ್ಮನೇ, ಭ್ರಾಂತಿಯನ್ನು ಬಿಟ್ಟು ಸುಖವಾಗಿ ಮನೆಗೆ ಹೋಗುವವನಾಗು.

೭೭. ನಂದನು ಹೇಳುತ್ತಾನೆ:— ಎಲೈ ಮಗನೇ! ಮನೋಹರವಾಗಿಯೂ ಪುಣ್ಯಕರವಾಗಿಯೂ ಇರುವ ವೃಂದಾವನವನ್ನೂ, ಅಲ್ಲಿಯ ಮಹಾ ಉತ್ಸವಗಳನ್ನೂ, ಗೋವುಗಳ ಸಮೂಹವನ್ನೂ, ಗೋಕುಲವನ್ನೂ, ಮನೋಹರವೂ ಸುಂದರವೂ ಆದ ಯಮುನಾನದಿಯ ದಡವನ್ನೂ ಜ್ಞಾಪಿಸಿಕೊಳ್ಳುವವನಾಗು.

೭೮. ಮತ್ತು ನಿನಗೆ ಬಹಳ ಇಷ್ಟವಾದ ರಮಣಿಯರ ರಾಸಕ್ರೀಡಾ ಸಮೂಹವನ್ನೂ, ಗೋಪಸ್ತ್ರೀಯರನ್ನೂ, ಗೋಪಬಾಲಕರನ್ನೂ, ನಿನ್ನ ಪ್ರೀತಿಪಾತ್ರಳಾದ ಯಶೋದಾದೇವಿಯನ್ನೂ, ರೋಹಿಣೀದೇವಿಯನ್ನೂ ಜ್ಞಾಪಿಸಿಕೊಳ್ಳುವವನಾಗು.

೭೯. ಎಲೈ ಮಗನೇ! ನಿನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯಳಾದ ರಾಧೆಯನ್ನು ನೀನು ಹೇಗೆ ಜ್ಞಾಪಿಸಿಕೊಳ್ಳದೆ ಮರೆಯುತ್ತೀಯೆ? ಎಲೈ ಮಗುವೇ! ಒಂದುಸಾರಿಯಾದರೂ ಸ್ವಲ್ಪದಿನಗಳವರೆಗೆ ಗೋಕುಲಕ್ಕೆ ಹೋಗಿರುವವನಾಗು.

೮೦. ಆ ನಂದನು ಈಪ್ರಕಾರವಾಗಿ ಹೇಳಿ ಕೃಷ್ಣನನ್ನು ಬಿಗಿದಪ್ಪಿಕೊಂಡನು. ಕೂಡಿದವನಾಗಿ ತುಂಬಿ ಬರುತ್ತಿರುವ ಕಣ್ಣೀರಿನಿಂದ ಆ ಕೃಷ್ಣನನು ನೆನೆಸಿದನು.

ಚುಚುಂಬ ತದ್ಗಂಡಯುಗ್ಮಂ ಕೃತ್ವಾ ವಕ್ಷಸಿ ಮೋಹತಃ ।
ಸಾನಂದಃ ಪರಮಾನಂದೋ ಭಗವಾಂಸ್ತಮುವಾಚ ಸಃ ॥ ೮೧ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಭಾಗೇ ನಾರಾಯಣ ನಾರದ ಸಂವಾದೇ
ನವತಿತಮೋಽಧ್ಯಾಯಃ.

---

೮೧. ಅವನನ್ನು ಎದೆಗೆ ಬಲವಾಗಿ ಅಪ್ಪಿಕೊಂಡು ಸ್ನೇಹದಿಂದ ಅವನ ಎರಡು ಕೆನ್ನೆಗಳಿಗೂ ಮುತ್ತು ಕೊಟ್ಟನು. ಆಗ ಪರಮಾನಂದರೂಪನಾದ ಭಗವಂತನು ಆನಂದದಿಂದ ಕೂಡಿದವನಾಗಿ ನಂದನನ್ನು ಕುರಿತು ಈ ಪ್ರಕಾರ ಹೇಳಿದನು.

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮಖಂಡದ ಉತ್ತರಭಾಗದಲ್ಲಿ
ನಾರದ ನಾರಾಯಣ ಸಂವಾದದಲ್ಲಿ
ತೊಂಭತ್ತನೆಯ ಅಧ್ಯಾಯವು ಸಮಾಪ್ತವಾದುದು.





## ತೊಂಭತ್ತನೆಯ ಅಧ್ಯಾಯದ ಸಾರಾಂಶ.

ಧರ್ಮವು ಕೃತಯುಗದಲ್ಲಿ ಚತುಷ್ಪಾದಗಳಿಂದಲೂ, ತ್ರೇತಾಯುಗದಲ್ಲಿ ಮೂರುಪಾದಗಳಿಂದಲೂ, ದ್ವಾಪರಯುಗದಲ್ಲಿ ಎರಡುಪಾದಗಳಿಂದಲೂ, ಕಲಿಯುಗದ ಆದಿಯಲ್ಲಿ ಒಂದುಪಾದದಿಂದಲೂ ಇದ್ದು ಮುಂದೆ ವರ್ಣಸಾಂಕರ್ಯಕ್ಕೆ ಎಡೆಕೊಡುವುದು. ತತ್ಪರಿಣಾಮವಾಗಿ ನೀಚವರ್ಣದವರೆಲ್ಲರೂ ಉತ್ತಮ ವರ್ಣದವರಿಗೆ ಉಚಿತ ಗೌರವ ಕೊಡದೆ ತಿರಸ್ಕಾರ ಮಾಡುವರು. ಮಕ್ಕಳು ತಾಯಿತಂದೆಗಳಿಗೂ, ಶಿಷ್ಯರು ಗುರುಗಳಿಗೂ, ಹೆಂಗಸು ಗಂಡಸಿಗೂ, [illegible] ಉತ್ತಮವರ್ಣದವರಿಗೂ ವಿಧೇಯರಾಗಿರದೆ ವಿಪರೀತಮಾರ್ಗದಲ್ಲಿ ವರ್ತಿಸಿ ಹಾಳಾಗುತ್ತಾರೆ. "ಅತಿಕ್ರಾಂತಸುಖಾಃ ಕಾಲಾಃ ಪ್ರತ್ಯುಪಸ್ಥಿತದಾರುಣಾಃ। ಶ್ವಃಶ್ವಃ ಪಾಪೀಯದಿವಸಾಃ ಪೃಥಿವೀಗತಯೌವನಾ"॥ ಎಂಬ ಮಾತು ಸತ್ಯವಾಗಿ ಪರಿಣಮಿಸಿದಾಗ ಜಗತ್ತು ಪ್ರಳಯ ಹೊಂದಿ ಎಂದಿನಂತೆ ಕೃತಯುಗವು ಬರುತ್ತದೆಂದು ಶ್ರೀ ಕೃಷ್ಣನು ನಂದಗೋಪನಿಗೆ ತಿಳಿಸಿ ಗೋಕುಲಕ್ಕೆ ಹಿಂತಿರುಗಲು ಹೇಳಿದನು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಏಕನವತಿತಮೋಽಧ್ಯಾಯಃ ||

|| ಶ್ರೀ ಭಗವಾನುವಾಚ ||

ನಿಷೇಕೇನ ಪರಿಷ್ವಂಗೋ ವಿಭೇದಸ್ತೇನ ವಾ ಭವೇತ್ ।
ಕ್ಷಣೇನ ದರ್ಶನಂ ತೇನ ನಿಷೇಕಃ ಕೇನ ವಾರ್ಯತೇ || ೧ ||

ಗಮನಾಗಮನಾರ್ಥಂ ಚಾಪ್ಯುದ್ಧವಃ ಕಥಯಿಷ್ಯತಿ ।
ಪ್ರಸ್ಥಾಪಯಾಮಿ ತಂ ಶೀಘ್ರಂ ವಿಜ್ಞಾಸ್ಯಸಿ ತತಃ ಪಿತಃ || ೨ ||

ಯಶೋದಾಂ ರೋಹಿಣೀಂ ಚೈವ ಗೋಪಿಕಾಂ ಗೋಪಬಾಲಕಾನ್ ।
ಪ್ರಾಣಾಧಿಕಾಂ ರಾಧಿಕಾಂ ತಾಂ ಗತ್ವಾ ಸಂಬೋಧಯಿಷ್ಯತಿ || ೩ ||

---

### ತೊಂಭತ್ತೊಂದನೆಯ ಅಧ್ಯಾಯವು.

೧. ಶ್ರೀ ಭಗವಂತನು ಹೇಳುತ್ತಾನೆ:— ಸ್ನೇಹದಿಂದ ಸಮಾಗಮವೂ, ಅಗಲುವಿಕೆಯೂ, ಕ್ಷಣದರ್ಶನವೂ ಕೂಡ ಉಂಟಾಗುತ್ತದೆ. ಆ ಸ್ನೇಹವನ್ನು ಯಾರು ತಡೆಯಲು ಸಾಧ್ಯವಾಗುತ್ತದೆ?

೨. ಎಲೈ ತಂದೆಯೇ! ಈ ಲೋಕದಲ್ಲಿ ಹುಟ್ಟುವುದು ಮತ್ತು ಸಾಯುವುದು ಇವುಗಳ ವಿಷಯವನ್ನು ಉದ್ಧವನು ಹೇಳುತ್ತಾನೆ. ಅವನನ್ನು ಜಾಗ್ರತೆಯಾಗಿ ಕಳುಹಿಸುತ್ತೇನೆ. ಅವನಿಂದ ಎಲ್ಲವನ್ನೂ ನೀನು ತಿಳಿದುಕೊಳ್ಳುವವನಾಗುವಿ.

೩. ಉದ್ಧವನು ಹೋಗಿ ಯಶೋದೆಯನ್ನೂ, ರೋಹಿಣಿಯನ್ನೂ, ಗೋಪಿಕೆಯರನ್ನೂ, ಗೋಪಾಲಕರ ಹುಡುಗರನ್ನೂ, ನನ್ನ ಪ್ರಾಣಪ್ರಿಯಳಾದ ರಾಧೆಯನ್ನೂ ಕುರಿತು ಉಪದೇಶ ಮಾಡುತ್ತಾನೆ.

ಏತಸ್ಮಿನ್ನಂತರೇ ತತ್ರ ವಸುದೇವಶ್ಚ ದೇವಕೀ ।
ಬಲದೇವಶ್ಚೋದ್ಧವಶ್ಚ ತಥಾಕ್ರೂರಶ್ಚ ಸತ್ವರಮ್ ॥ ೪ ॥

॥ ವಸುದೇವ ಉವಾಚ ॥

ನಂದ ತ್ವಂ ಬಲವಾನ್ ಜ್ಞಾನೀ ಸದ್ಬಂಧುಶ್ಚ ಸಖಾಮಮ ।
ತ್ಯಜ ಮೋಹಂ ಗೃಹಂ ಗಚ್ಛ ವತ್ಸಸ್ತೇಽಯಂ ಯಥಾ ಮಮ ॥ ೫ ॥

ಪ್ಸಾರಭೂತಾ ಗೋಕುಲಾಚ್ಚ ಮಥುರಾ ನಾಸ್ತಿ ಬಾಂಧವಃ ।
ಮಹೋತ್ಸವೇ ಸದಾನಂದೇ ನಂದ ದ್ರಕ್ಷ್ಯಸಿ ಪುತ್ರಕಮ್ ॥ ೬ ॥

॥ ಶ್ರೀ ದೇವಕ್ಯುವಾಚ ॥

ಯಥಾಯಮಾವಯೋಃ ಪುತ್ರಸ್ತಥೈವ ಭವತೋ ಧ್ರುವಮ್ ।
ಸಾಲಸಃ ಕೇನ ಹೇ ನಂದ ಶುಚಾ ದೇಹೋ ಹಿ ಲಕ್ಷ್ಯತೇ ॥ ೭ ॥

---

೪. ಈಪ್ರಕಾರ ಹೇಳುತ್ತಿರುವ ಸಮಯದಲ್ಲಿ ಅಲ್ಲಿಗೆ ವಸುದೇವನೂ, ದೇವಕಿಯೂ, ಬಲರಾಮನೂ, ಉದ್ಧವನೂ ಮತ್ತು ಅಕ್ರೂರನೂ ಜಾಗ್ರತೆಯಾಗಿ ಬಂದರು.

೫. ವಸುದೇವನು ಹೇಳುತ್ತಾನೆ:—ಎಲೈ ನಂದನೇ! ನೀನು ಬಲವಂತನೂ, ಜ್ಞಾನವಂತನೂ, ನನ್ನ ಉತ್ತಮ ಬಂಧುವೂ ಆಗಿರುವೆ. ಶ್ರೀ ಕೃಷ್ಣನು ನಿನಗೆ ಹೇಗೆ ಮಗನೋ ನನಗೂ ಹಾಗೆ ಮಗನಾಗಿರುವನು. ಈ ವ್ಯಾಮೋಹವನ್ನು ಬಿಡು ಮನೆಗೆ ಹೋಗುವವನಾಗು.

೬. ಎಲೈ ನಂದನೇ! ಗೋಕುಲಕ್ಕಿಂತಲೂ ಮಥುರೆಯು ಮುಖ್ಯವಾದುದು. ಬಂಧುವೂ ಮುಖ್ಯವಲ್ಲ. ಮಹೋತ್ಸವ ಸಮಯದಲ್ಲೂ, ಸಂತೋಷಕಾಲದಲ್ಲೂ ಮಗನನ್ನು ನೀನು ನೋಡುವಿ.

೭. ಶ್ರೀ ದೇವಕಿಯು ಹೇಳುತ್ತಾಳೆ:— ಎಲೈ ನಂದನೇ! ಈ ಕೃಷ್ಣನು ಹೇಗೆ ನನಗೂ ವಸುದೇವನಿಗೂ ಮಗನಾಗಿರುವನೋ ಹಾಗೆಯೇ ನಿಜವಾಗಿಯೂ ನಿನಗೂ ಮಗನಾಗಿರುವನು. ನಿನ್ನ ಶರೀರವು ಏಕೆ ದುಃಖದಿಂದ ಆಲಸ್ಯಗೊಂಡಂತೆ ಕಾಣುತ್ತದೆ?

ಏಕಾದಶಾಬ್ದಂ ಸಬಲಃ ಸ್ಥಿತ್ವಾ ತೇ ಮಂದಿರೇ ಸುಖಂ ।
ಕಥಂ ಸ್ವಲ್ಪದಿನೇನೈವ ಶೋಕಗ್ರಸ್ತೋ ಭವಿಷ್ಯಸಿ ॥ ೮ ॥

ತಿಷ್ಠ ಪುತ್ರೇಣ ಸಾರ್ಧಂ ಚ ಮಥುರಾಯಾಂ ಕಿಯದ್ದಿನಮ್ ।
ಪೂರ್ಣಚಂದ್ರಾನನಂ ಪಶ್ಯ ಜನ್ಮ ತ್ವಂ ಸಫಲಂ ಕುರು ॥ ೯ ॥

॥ ಶ್ರೀ ಭಗವಾನುವಾಚ ॥

ಗಚ್ಛೋದ್ಧವ ಸುಖಂ ಭದ್ರಂ ಭವಿಷ್ಯತಿ ತವ ಪ್ರಿಯಮ್ ।
ಪ್ರಹರ್ಷಂ ಗೋಕುಲಂ ಗತ್ವಾ ಯಶೋದಾಂ ರೋಹಿಣೀಂ ಪ್ರಸೂಮ್ ॥

ಗೋಪಬಾಲಸಮೂಹಂ ಚ ರಾಧಿಕಾಂ ಗೋಪಿಕಾಗಣಮ್ ।
ಪ್ರಬೋಧಯಾಧ್ಯಾತ್ಮಿಕೇನ ಮದ್ದತ್ತೇನ ಚ ಶುಕ್ಛಿದಾ ॥ ೧೧ ॥

ನಂದಸ್ತಿಷ್ಠತು ಸಾನಂದಂ ಮನ್ಮಾತುರಾಜ್ಞಯಾ ಶುಚಾ ।
ನಂದಸ್ಥಿತಿಂ ಮದ್ವಿನಯಂ ಯಶೋದಾಂ ಕಥಯಿಷ್ಯಸಿ ॥ ೧೨ ॥

---

೮. ಹನ್ನೊಂದುವರುಷಗಳವರೆಗೆ ಬಲರಾಮನೊಡನೆ ನಿನ್ನ ಮನೆಯಲ್ಲಿ ಶ್ರೀ ಕೃಷ್ಣನು ಸುಖವಾಗಿದ್ದನು. ಈಗ ಸ್ವಲ್ಪದಿನಗಳ ವಿರಹಕ್ಕಾಗಿ ಏಕೆ ದುಃಖ ಗೊಂಡವನಾಗುವಿ ?

೯. ಮಗನೊಡನೆ ಕೆಲವು ದಿನಗಳವರೆಗೆ ಮಥುರೆಯಲ್ಲಿಯೇ ಇರು. ಪೂರ್ಣ ಚಂದ್ರನಂತೆ ಮುಖವುಳ್ಳ ಕೃಷ್ಣನನ್ನು ನೋಡು. ಮತ್ತು ನಿನ್ನ ಜನ್ಮವನ್ನು ಸಫಲ ಗೊಳಿಸಿಕೋ.

೧೦–೧೧. ಶ್ರೀ ಭಗವಂತನು ಹೇಳುತ್ತಾನೆ;—ಎಲೈ ಉದ್ಧವನೇ! ನೀನು ಹೊರಡು. ನಿನಗೆ ಸುಖವೂ, ಮಂಗಳವೂ, ಹಿತವೂ ಉಂಟಾಗುತ್ತದೆ. ಸಂತೋಷ ದಿಂದ ಗೋಕುಲಕ್ಕೆ ಹೋಗಿ ನನ್ನ ತಾಯಿಯಾದ ಯಶೋದೆಯನ್ನೂ, ರೋಹಿಣಿ ಯನ್ನೂ, ಗೋಪಾಲ ಬಾಲಕರ ಗುಂಪನ್ನೂ, ರಾಧೆಯನ್ನೂ, ಗೋಪಿಕಾಸ್ತ್ರೀಯರ ಗುಂಪನ್ನೂ ಕುರಿತು ನಾನು ಉಪದೇಶಿಸಿರುವ ದುಃಖಗಳನ್ನು ನಾಶಮಾಡುವ ಪರಮಾತ್ಮನವಿಷಯವಾದ ಮಾತುಗಳಿಂದ ಸಮಾಧಾನಪಡಿಸು.

೧೨. ನಂದನು ನನ್ನ ತಾಯಿಯ ಅಪ್ಪಣೆಯಂತೆ ಆನಂದದಿಂದ ಇಲ್ಲಿಯೇ ಇರಲಿ. ನಂದನ ದುಃಖಸ್ಥಿತಿಯನ್ನೂ, ನನ್ನ ವಿಧೇಯತೆಯನ್ನೂಕೂಡ ಯಶೋದೆಗೆ ತಿಳಿಸುವವನಾಗು.

ಇತ್ಯೇವಮುಕ್ತ್ವಾ ಶ್ರೀಕೃಷ್ಣಃ ಪಿತ್ರಾ ಮಾತ್ರಾ ಬಲೇನ ಚ ।
ಅಕ್ರೂರೇಣ ಸಮಂ ತೂರ್ಣಂ ಯಯಾವಭ್ಯಂತರಂ ಗೃಹಮ್ ॥ ೧೩ ॥

ಉದ್ಧವೋ ರಜನೀಂ ಸ್ಥಿತ್ವಾ ಮಥುರಾಯಾಂ ಚ ನಾರದ ।
ಪ್ರಭಾತೇ ಪ್ರಯಯೌ ಶೀಘ್ರಂ ರಮ್ಯಂ ವೃಂದಾವನಂ ವನಮ್ ॥ ೧೪ ॥

ಇತಿ ಶ್ರೀ ಬ್ರಹ್ಮವೈವರ್ತ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಭಾಗೇ ನಾರಾಯಣ ನಾರದ ಸಂವಾದೇ
ಏಕನವತಿತಮೋಽಧ್ಯಾಯಃ.

---

೧೩. ಕೃಷ್ಣನು ಈಪ್ರಕಾರ ಹೇಳಿ ತಂದೆಯೊಡನೆಯೂ, ತಾಯಿಯೊಡನೆಯೂ, ಬಲರಾಮನೊಡನೆಯೂ, ಅಕ್ರೂರನೊಡನೆಯೂ ಜಾಗ್ರತೆಯಾಗಿ ಮನೆಯ ಒಳಭಾಗಕ್ಕೆ ಹೋದನು.

೧೪, ಎಲೈ ನಾರದನೇ! ಉದ್ಧವನು ಆ ರಾತ್ರಿಯಲ್ಲಿ ಮಥುರಾಪಟ್ಟಣದಲ್ಲಿದ್ದು, ಬೆಳಗಾದನಂತರ ಮನೋಹರವಾದ ವೃಂದಾವನವೆಂಬ ವನವನ್ನು ಕುರಿತು ಜಾಗ್ರತೆಯಾಗಿ ಹೊರಟನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಖಂಡದಲ್ಲಿ
ನಾರದ ನಾರಾಯಣ ಸಂವಾದದಲ್ಲಿ
ತೊಂಭತ್ತೊಂದನೆಯ ಅಧ್ಯಾಯವು ಸಂಪೂರ್ಣವಾದುದು.



## ತೊಂಭತ್ತೊಂಧನೆಯ ಅಧ್ಯಾಯದ ಸಾರಾಂಶ.

ಸಂಸಾರದಲ್ಲಿ ಜನನ ಮರಣಾದಿಗಳು ಜನ್ಮಾಂತರದ ಸಂಸ್ಕಾರಾನುಗುಣವಾಗಿ ಉಂಟಾಗುತ್ತಿರುತ್ತವೆ. ಈ ವಿಷಯವನ್ನು ಉದ್ಧವನು ನಿಮಗೆಲ್ಲ ವಿಸ್ತಾರವಾಗಿ ಹೇಳುವನು ಎಂದು ಶ್ರೀ ಕೃಷ್ಣನು ಹೇಳುವಷ್ಟರಲ್ಲಿಯೇ ವಸುದೇವ, ದೇವಕಿ ಮತ್ತು ಉದ್ಧವರು ಅಲ್ಲಿಗೆ ಬರುತ್ತಾರೆ. ಅವರಲ್ಲಿ ಉದ್ಧವನನ್ನು ಯಶೋದೆ, ರೋಹಿಣಿ ರಾಧೆ ಮುಂತಾದವರಿಗೆ ಉಪದೇಶಮಾಡಲು ವೃಂದಾವನಕ್ಕೆ ಕಳುಹಿಸಿ, ಶ್ರೀ ಕೃಷ್ಣನು ವಸುದೇವ, ದೇವಕಿ, ಬಲರಾಮ ಮತ್ತು ನಂದಗೋಪನೊಡನೆ ಮಧುರೆಯಲ್ಲಿ ನೆಲೆಸಿದನು.



|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ದ್ವಿನವತಿತಮೋऽಧ್ಯಾಯಃ ||

### || ಶ್ರೀ ನಾರಾಯಣ ಉವಾಚ ||

ಶ್ರೀಕೃಷ್ಣಪ್ರೇರಿತೋ ಹೃಷ್ಟಃ ಪ್ರಣಮ್ಯ ಚ ಗಣೇಶ್ವರಮ್ ।
ಸ್ಮರನ್ನಾರಾಯಣಂ ಶಂಭುಂ ದುರ್ಗಾಂ ಲಕ್ಷ್ಮೀಂ ಸರಸ್ವತೀಮ್ || ೧ ||

ಗಂಗಾಂ ಚ ಮನಸಿ ಧ್ಯಾತ್ವಾ ದಿಗೀಶಂ ತಂ ಮಹೇಶ್ವರಮ್ ।
ಪ್ರಜಗಾಮೋದ್ಧವಶ್ಚೈವ ದೃಷ್ಟ್ವಾ ಮಂಗಲಸೂಚಕಮ್ || ೨ ||

ಶುಶ್ರಾವ ದುಂದುಭಿಂ ಘಂಟಾನಾದಂ ಶಂಖಧ್ವನಿಂ ತಥಾ ।
ಹರಿಶಬ್ದಂ ಚ ಸಂಗೀತಂ ಶುಶ್ರಾವ ಮಂಗಲಧ್ವನಿಮ್ || ೩ ||

---

### ತೊಂಭತ್ತೆರಡನೆಯ ಅಧ್ಯಾಯವು.

೧-೩. ಶ್ರೀ ನಾರಾಯಣನು ಹೇಳುತ್ತಾನೆ:— ಉದ್ಧವನು ಶ್ರೀಕೃಷ್ಣನಿಂದ ಪ್ರೇರಿಸಲ್ಪಟ್ಟವನಾಗಿ ಸಂತೋಷದಿಂದ ಗಣಪತಿಗೆ ನಮಸ್ಕಾರ ಮಾಡಿದವನಾಗಿ, ನಾರಾಯಣನನ್ನೂ, ಈಶ್ವರನನ್ನೂ, ದುರ್ಗೆಯನ್ನೂ, ಲಕ್ಷ್ಮಿಯನ್ನೂ, ಸರಸ್ವತಿಯನ್ನೂ ಸ್ಮರಿಸಿಕೊಳ್ಳುತ್ತ, ಗಂಗೆಯನ್ನೂ ದಿಕ್ಪಾಲಕರನ್ನೂ ಮನದಲ್ಲಿ ನೆನೆಯುತ್ತ, ಮಂಗಲಸೂಚಕವಾದವುಗಳನ್ನು ನೋಡುತ್ತ, ದುಂದುಭಿ ಧ್ವನಿಯನ್ನೂ ಗಂಟೆಯ ಧ್ವನಿಯನ್ನೂ ಶಂಖದ ಧ್ವನಿಯನ್ನೂ ಕೇಳುತ್ತ, ಮತ್ತು ಹರಿಯೆಂಬ ಶಬ್ದವನ್ನೂ, ಸಂಗೀತವನ್ನೂ, ಮಂಗಲಧ್ವನಿಯನ್ನೂ ಕೇಳುತ್ತ ಹೊರಟನು.

ಪತಿಪುತ್ರವತೀಂ ಸಾಧ್ವೀಂ ಪ್ರದೀಪಂ ಮಾಲ್ಯದರ್ಪಣಮ್ ।
ಪರಿಪೂರ್ಣತಮಂ ಕುಂಭಂ ದಧಿಲಾಜಫಲಾನಿ ಚ ॥ ೪ ॥

ದೂರ್ವಾಂಕುರಂ ಶುಕ್ಲಧಾನ್ಯಂ ರಜತಂ ಕಾಂಚನಂ ಮಧು ।
ಬ್ರಾಹ್ಮಣಾನಾಂ ಸಮೂಹಂ ಚ ಕೃಷ್ಣಸಾರಂ ವೃಷಂ ಘೃತಮ್ ॥ ೫ ॥

ಸದ್ಯೋ ಮಾಂಸಂ ಗಜೇಂದ್ರಂ ಚ ನೃಪೇಂದ್ರಂ ಶ್ವೇತಘೋಟಕಮ್ ।
ಪತಾಕಾಂ ನಕುಲಂ ಚಾಷಂ ಶುಕ್ಲಂ ಪುಷ್ಪಂ ಚ ಚಂದನಮ್ ॥ ೬ ॥

ದೃಷ್ಟ್ವೈವಂ ಪಥಿ ಕಲ್ಯಾಣಂ ಪ್ರಾಪ ವೃಂದಾವನಂ ವನಮ್ ।
ದದರ್ಶ ಪುರತೋ ವೃಕ್ಷಂ ಭಾಂಡೀರವಟಮುತ್ತಮಮ್ ॥ ೭ ॥

ಸ್ನಿಗ್ಧಪೂರ್ಣಂ ರಕ್ತವರ್ಣಂ ಪುಣ್ಯದಂ ತೀರ್ಥವಾಸಿತಮ್ ।
ಸುವೇಷಾನ್ಬಾಲಕಾಂಶ್ಚೈವ ರಕ್ತಭೂಷಣಭೂಷಿತಾನ್ ॥ ೮ ॥

---

೪–೬. ಗಂಡ ಮಕ್ಕಳುಗಳಿಂದೊಡಗೂಡಿದ ಪತಿವ್ರತಾಸ್ತ್ರೀಯನ್ನೂ, ಉತ್ತಮವಾದ ದೀಪವನ್ನೂ, ಹೂಮಾಲೆಯನ್ನೂ, ಕನ್ನಡಿಯನ್ನೂ, ತುಂಬಿದ ಕೊಡವನ್ನೂ, ಮೊಸರು ಅರಳು ಹಣ್ಣು ಮಂತ್ರಾಕ್ಷತೆ ಇವುಗಳನ್ನೂ, ಚಿಗುರು ಗರಿಕೆಯನ್ನೂ, ಬಿಳಿಯ ಧಾನ್ಯವನ್ನೂ. ಬೆಳ್ಳಿಯನ್ನೂ, ಚಿನ್ನವನ್ನೂ, ಜೇನುತುಪ್ಪವನ್ನೂ, ಬ್ರಾಹ್ಮಣರ ಗುಂಪನ್ನೂ, ಜಿಂಕೆಯನ್ನೂ, ಬಸವವನ್ನೂ, ತುಪ್ಪವನ್ನೂ, ಆಗತಾನೆ ತೆಗೆದ (ಹೊಸ) ಮಾಂಸವನ್ನೂ, ಶ್ರೇಷ್ಠವಾದ ಆನೆಯನ್ನೂ, ರಾಜೇಂದ್ರನನ್ನೂ, ಬಿಳಿಯ ಕುದುರೆಯನ್ನೂ, ಪತಾಕೆಗಳನ್ನೂ, ಮುಂಗಸಿಯನ್ನೂ, ಶಕುನದ ಹಕ್ಕಿಯನ್ನೂ, ಬಿಳಿಯ ಹೂವನ್ನೂ, ಬಿಳಿಯ ಗಂಧವನ್ನೂ ನೋಡುತ್ತ ಹೊರಟನು.

೭–೮. ಹೀಗೆ ಮಾರ್ಗದಲ್ಲಿ ಮಂಗಳಗಳನ್ನು ನೋಡುತ್ತ ವೃಂದಾವನವೆಂಬ ವನವನ್ನು ತಲಪಿದನು. ಅಲ್ಲಿ ಮುಂಭಾಗದಲ್ಲಿ ವಿಶಾಲವಾದ, ದಟ್ಟವಾಗಿ ಬೆಳೆದಿರುವ, ಕೆಂಪುಬಣ್ಣವುಳ್ಳ, ಪುಣ್ಯವನ್ನುಂಟುಮಾಡುವ, ತೀರ್ಥರೂಪವಾದ, ಇಷ್ಟಾರ್ಥಗಳನ್ನು ಕೊಡುವ, ಅಕ್ಷಯಫಲವನ್ನುಂಟುಮಾಡುವ ದೊಡ್ಡ ಫಣಿಯಾಲದ ಮರವನ್ನು ಕಂಡನು. ಒಳ್ಳೆಯ ಅಲಂಕಾರಗಳನ್ನು ಮಾಡಿಕೊಂಡಿರುವ, ಕೆಂಪುಬಣ್ಣದ ಆಭರಣಗಳಿಂದ ಶೃಂಗಾರ ಮಾಡಿಕೊಂಡು ಕಂಗೊಳಿಸುತ್ತಿರುವ ಹುಡುಗರನ್ನೂ,

ವದತೋ ಬಲಕೃಷ್ಣೇತಿ ರುದತಶ್ಚ ಶುಚಾನ್ವಿತಾನ್ ।
ತಾನಾಶ್ವಾಸ್ಯ ಯಯೌ ದೂರಂ ಪ್ರವಿಶ್ಯ ನಗರಂ ಮುದಾ ॥ ೯ ॥

ದದರ್ಶ ನಂದಶಿಬಿರಂ ರಚಿತಂ ವಿಶ್ವಕರ್ಮಣಾ ।
ಮಣಿರತ್ನವಿನಿರ್ಮಾಣಂ ಮುಕ್ತಾಮಾಣಿಕ್ಯಹೀರಕೈಃ ॥ ೧೦ ॥

ಪರಿಚ್ಛನ್ನಂ ಮನೋರಮ್ಯಂ ಸದ್ರತ್ನಕಲಶಾನ್ವಿತಮ್ ।
ದ್ವಾರಂ ಚಿತ್ರಂ ವಿಚಿತ್ರಾಢ್ಯಂ ದೃಷ್ಟ್ವಾ ಚ ಪ್ರವಿವೇಶ ಸಃ ॥ ೧೧ ॥

ಅವರುಹ್ಯ ರಥಾತ್ತೂರ್ಣಂ ತಸ್ಥೌ ತತ್ರಾಂಗಣೇ ಮುದಾ ।
ಯಶೋದಾ ರೋಹಿಣೀ ಶೀಘ್ರಂ ಪಪ್ರಚ್ಛ ಕುಶಲಂ ಪರಮ್ ॥ ೧೨ ॥

ಉದ್ಧವಃ ಕಥಯಾಮಾಸ ಸರ್ವಂ ಭದ್ರಂ ಕ್ರಮೇಣ ಚ ।
ಸಾರ್ಧಂ ಚ ಬಲಕೃಷ್ಣಾಭ್ಯಾಂ ನಂದಃ ಸಾನಂದಪೂರ್ವಕಮ್ ॥ ೧೪ ॥

---

ದುಃಖಿತರಾಗಿ ಅಳುತ್ತ ಬಲರಾಮ ಕೃಷ್ಣ ಎಂದು ಕೂಗುತ್ತಿದ್ದ ಜನರನ್ನೂ ಕಂಡು, ಅವರನ್ನೂ ಸಮಾಧಾನಗೊಳಿಸಿ ಸಂತೋಷದಿಂದ ನಗರವನ್ನು ಪ್ರವೇಶಿಸಿದನು.

೧೦. ವಿಶ್ವಕರ್ಮನಿಂದ ರಚಿತವಾದ ರತ್ನಮಣಿಗಳು ಮತ್ತು ಮಾಣಿಕ್ಯ ಹೀರಕ ಇವುಗಳಿಂದ ಅಲಂಕೃತವಾದ ನಂದನ ಶಿಬಿರವನ್ನು ಕಂಡನು.

೧೧. ಕೋಟೆಯಿಂದ ಮುಚ್ಚಿಕೊಂಡಿರುವ ಆ ಪಟ್ಟಣದ, ಮನೋಹರವಾದ ಮತ್ತು ಉತ್ತಮ ರತ್ನಗಳಿಂದ ಮಾಡಲ್ಪಟ್ಟ, ಕಲಶಗಳಿಂದ ಶೋಭಿಸುವ, ಅನೇಕ ಚಿತ್ರಗಳಿಂದ ಕೂಡಿದಬಾಗಿಲನ್ನು ನೋಡಿ ಸಂತೋಷಗೊಂಡು ಪ್ರವೇಶಿಸಿದನು.

೧೨. ಜಾಗ್ರತೆಯಾಗಿ ರಥದಿಂದಿಳಿದು ಆನಂದದಿಂದ ಆ ಮನೆಯ ಮುಂಭಾಗದಲ್ಲಿ ನಿಂತುಕೊಂಡನು. ಯಶೋದೆಯೂ ರೋಹಿಣಿಯೂ ಕೂಡ ಬೇಗನೆ ಬಂದು ಕ್ಷೇಮಸಮಾಚಾರವನ್ನು ಕೇಳಿದರು.

೧೩–೧೭. ಉದ್ಧವನು ಕ್ರಮವಾಗಿ ಸಕಲರ ಕ್ಷೇಮಸಮಾಚಾರಗಳನ್ನೂ ಹೇಳಿದನು. ಮತ್ತು "ನಂದನು ಬಲರಾಮ ಕೃಷ್ಣರೊಂದಿಗೆ ಆನಂದದಿಂದ ಕೃಷ್ಣನ ಉಪನಯನ ಸಮಯಕ್ಕೆ ಸಾವಕಾಶವಾಗಿ ಬರುತ್ತಾನೆ. ಎಲೈ ಯಶೋದೆಯೇ ಪ್ರಕೃತದ ಮಾತನ್ನು ಕೇಳುವವಳಾಗು. ನಾನು ನಿಮ್ಮೆಲ್ಲರ ಕ್ಷೇಮಸಮಾಚಾರಗಳನ್ನು ಕ್ರಮವಾಗಿಯೂ ಯಥಾರ್ಥವಾಗಿಯೂ ತಿಳಿದುಕೊಂಡು ಮಧುರಾಪಟ್ಟಣಕ್ಕೆ

ಆಯಾಸ್ಯತಿ ವಿಲಂಬೇನ ಕೃಷ್ಣೋಽಪನಯ ಸಾವಧಿ ।
ಯುಷ್ಮಾಕಂ ಕುಶಲಂ ತತ್ತ್ವಂ ವಿಜ್ಞಾಯ ವಿಧಿಪೂರ್ವಕಮ್ ॥ ೧೫ ॥

ಅಹಂ ಯಾಸ್ಯಾಮಿ ಮಥುರಾಂ ಯಶೋದೇ ಶೃಣು ಸಾಂಪ್ರತಮ್ ।
ಶ್ರುತ್ವಾ ಮಂಗಳವಾರ್ತಾಂ ಚ ಯಶೋದಾ ರೋಹಿಣೀ ಮುದಾ ॥ ೧೬ ॥

ಬ್ರಾಹ್ಮಣಾಯ ದದೌ ರತ್ನಂ ಸುವರ್ಣಂ ವಸ್ತ್ರಮೀಪ್ಸಿತಮ್ ।
ಉದ್ಧವಂ ಭೋಜಯಾಮಾಸ ಮಿಷ್ಟಾನ್ನಂ ಚ ಸುಧೋಪಮಮ್ ॥ ೧೭ ॥

ಮಣಿಶ್ರೇಷ್ಠಂ ಚ ರತ್ನಂ ಚ ದದೌ ತಸ್ಮೈ ಚ ಹೀರಕಮ್ ।
ವಾದ್ಯಂ ಚ ವಾದಯಾಮಾಸ ಭದ್ರಂ ನಾನಾವಿಧಂ ತಥಾ ॥ ೧೮ ॥

ಬ್ರಾಹ್ಮಣಾನ್ ಭೋಜಯಾಮಾಸ ಕಾರಯಾಮಾಸ ಮಂಗಲಮ್ ।
ವೇದಾಂಶ್ಚ ಪಾಠಯಾಮಾಸ ಪರಮಾನಂದಪೂರ್ವಕಮ್ ॥ ೧೯ ॥

ಶಂಕರಂ ಪೂಜಯಾಮಾಸ ವಿಪ್ರದ್ವಾರಾ ಪರಂ ವಿಭುಮ್ ।
ನಾನೋಪಹಾರೈರ್ನೈವೇದ್ಯೈಃ ಪುಷ್ಪಧೂಪಪ್ರದೀಪಕೈಃ ॥ ೨೦ ॥

---

ಹೋಗುವೆನು" ಎಂದು ಹೇಳಿದನು. ಯಶೋದೆಯೂ ರೋಹಿಣಿಯೂ ಕೂಡ ಈ ಶುಭಸಮಾಚಾರವನ್ನು ಕೇಳಿ ಸಂತೋಷ ಹೊಂದಿದವರಾಗಿ ಬ್ರಾಹ್ಮಣರಿಗೆ ರತ್ನಗಳನ್ನೂ ಚಿನ್ನವನ್ನೂ ಅವರು ಅಪೇಕ್ಷಿಸಿದ ಬಟ್ಟೆಯನ್ನೂ ಕೊಟ್ಟರು. ಅಮೃತಕ್ಕೆ ಸಮನಾದ ರುಚಿಕರವಾದ ಅನ್ನದಿಂದ ಉದ್ಧವನಿಗೆ ಊಟಮಾಡಿಸಿದರು.

೧೮. ಆ ಉದ್ಧವನಿಗೆ ಉತ್ತಮವಾದ ಮಣಿಗಳನ್ನೂ, ರತ್ನಗಳನ್ನೂ ಹೀರಕವೆಂಬ ಶ್ರೇಷ್ಠವಾದ ರತ್ನವನ್ನೂ ಕೊಟ್ಟರು. ಮಂಗಳಕರವಾದ ಅನೇಕ ಬಗೆಯ ವಾದ್ಯಗಳನ್ನು ಮಾಡಿಸಿದರು.

೧೯. ಮಂಗಲೋತ್ಸವವನ್ನು ಮಾಡಿ ಬ್ರಾಹ್ಮಣರಿಗೆ ಊಟಮಾಡಿಸಿದರು. ಆನಂದದಿಂದ ವೇದಘೋಷವನ್ನು ಮಾಡಿಸಿದರು.

೨೦. ಉತ್ತಮನೂ ವ್ಯಾಪಕನೂ ಆದ ಶಂಕರನಿಗೆ ನಾನಾಬಗೆಯಾದ ಕಾಣಿಕೆಗಳಿಂದಲೂ, ನೈವೇದ್ಯ ಸಮರ್ಪಣೆಯಿಂದಲೂ, ಹೂವು ಧೂಪ ಪ್ರಕಾಶಮಾನವಾದ ದೀಪ ಇವುಗಳಿಂದಲೂ ಬ್ರಾಹ್ಮಣರಿಂದ ಪೂಜೆ ಮಾಡಿಸಿದರು.

ಚಂದನೈರ್ವಸ್ತ್ರತಾಂಬೂಲೈಃ ಮಧುಗವ್ಯ ಘೃತಾದಿಭಿಃ ।
ಭವಾನೀಂ ಪೂಜಯಾಮಾಸ ಶ್ರೀ ವೃಂದಾರಣ್ಯದೇವತಾಮ್ ॥ ೨೦ ॥

ಷೋಡಶೋಪಚಾರೈದ್ರವ್ಯೈಶ್ಚ ಬಲಿಭಿರ್ವಿವಿಧೈರ್ಮುನೇ ।
ಮಹಿಷಾಣಾಂ ಶತಂ ಶುದ್ಧಂ ಛಾಗಲಾನಾಂ ಸಹಸ್ರಕಮ್ ॥ ೨೨ ॥

ಮೇಷಾಣಾಮಯುತಂ ಶುದ್ಧಂ ಯುಕ್ತಮಾದಾಯ ಪಂಚಕಂ ।
ಬ್ರಾಹ್ಮಣೇಭ್ಯಃ ಸ್ವರ್ಣಶತಂ ಧೇನೂನಾಂ ಚ ಶತಂ ತಥಾ ॥ ೨೩ ॥

ಪ್ರದದೌ ದಕ್ಷಿಣಾಂ ತೂರ್ಣಂ ಕೃಷ್ಣಕಲ್ಯಾಣಹೇತವೇ ।
ಉದ್ಧವಂ ಪೂಜಯಾಮಾಸ ಸಾದರಂ ಚ ಪುನಃ ಪುನಃ ॥ ೨೪ ॥

ಸಮಾಶ್ವಾಸ್ಯ ಯಶೋದಾಂ ಚ ರೋಹಿಣೀಂ ಗೋಪಬಾಲಕಾನ್ ।
ವೃದ್ಧಾನ್ಗೋಪಾಲಿಕಾಃ ಸರ್ವಾಃ ಪ್ರಯಯೌ ರಾಸಮಂಡಲಮ್ ॥ ೨೫ ॥

ದದರ್ಶ ರಾಸಂ ರುಚಿರಂ ಚಂದ್ರಮಂಡಲವರ್ತುಲಮ್ ।
ಶ್ರೀರಾಮಕದಲೀಸ್ತಂಭಶತಕೈರುಪಶೋಭಿತಮ್ ॥ ೨೬ ॥

---

೨೧–೨೪. ಗಂಧ, ವಸ್ತ್ರ, ತಾಂಬೂಲ, ಮಧು, ಹಸುವಿನ ಹಾಲು, ಮೊಸರು, ತುಪ್ಪ ಮುಂತಾದ ಪದಾರ್ಥಗಳಿಂದ ವೃಂದಾವನದ ದೇವತೆಯಾದ ಭವಾನೀದೇವಿಯನ್ನು ಷೋಡಶೋಪಚಾರವಿಧಿಯಿಂದಲೂ, ನಾನಾವಿಧವಾದ ಬಲಿಗಳಿಂದಲೂ, ಶುದ್ಧವಾದ ನೂರು ಕೋಣಗಳಿಂದಲೂ, ಸಾವಿರ ಆಡುಗಳಿಂದಲೂ ಪೂಜೆ ಮಾಡಿದರು. ಮತ್ತು ಕೃಷ್ಣನಿಗೆ ಒಳ್ಳೆಯದಾಗಲೆಂದು ಬ್ರಾಹ್ಮಣರಿಗೆ ನೂರು ಚಿನ್ನದ ನಾಣ್ಯಗಳನ್ನೂ ಮತ್ತು ನೂರು ಹಸುಗಳನ್ನೂ ದಾನಮಾಡಿದರು. ಉದ್ಧವನನ್ನು ವಿಶ್ವಾಸದಿಂದ ಮತ್ತೆಮತ್ತೆ ಪೂಜಿಸಿದರು.

೨೫. ಉದ್ಧವನು ಯಶೋದೆಯನ್ನೂ, ರೋಹಿಣಿಯನ್ನೂ, ಗೋಪಬಾಲಕರನ್ನೂ, ವೃದ್ಧರನ್ನೂ, ಗೋಪಿಯರನ್ನೂ, ಎಲ್ಲರನ್ನೂ ಸಮಾಧಾನಪಡಿಸಿ ರಾಸಮಂಡಲಕ್ಕೆ ಹೊರಟನು.

೨೬–೨೮. ಚಂದ್ರಮಂಡಲದಂತೆ ಗುಂಡಾಗಿರುವ ನೂರಾರು ರಾಮಬಾಳೆ ಮರಗಳಿಂದ ಕಂಗೊಳಿಸುತ್ತಿರುವ ಮನೋಹರವಾದ ರೇಷ್ಮೆಯ ದಾರಗಳಿಂದ ಕಟ್ಟಿದ,

ಯುಕ್ತೈಶ್ಚ ಸ್ನಿಗ್ಧವಸನೈಶ್ಚಂದನಾನಾಂ ಚ ಪಲ್ಲವೈಃ ।
ಪಟ್ಟಸೂತ್ರನಿಬದ್ಧೈಶ್ಚ ಶ್ರೀಯುಕ್ತಮಾಲ್ಯಜಾಲಕೈಃ ॥ ೨೭ ॥

ದಧಿಲಾಜಫಲೈಃ ಪಟ್ಟೈಃ ಪುಷ್ಪೈರ್ದೂರ್ವಾಂಕುರೈರಪಿ ।
ಚಂದನಾಗುರುಕಸ್ತೂರೀಕುಂಕುಮೈಃ ಪರಿಸಂಸ್ಕೃತಮ್ ॥ ೨೮ ॥

ವೇಷ್ಟಿತಂ ರಕ್ಷಿತಂ ಯತ್ನಾದ್ಗೋಪಿಕಾನಾಂ ತ್ರಿಕೋಟಿಭಿಃ ।
ತ್ರಿಲಕ್ಷೈಃ ಸುಂದರೈ ರಮ್ಯೈಃ ಸಂಸಿಕ್ತಂ ರತಿಮಂದಿರೈಃ ॥ ೨೯ ॥

ಲಕ್ಷಗೋಪೈಃ ಪರಿವೃತಂ ಕೃಷ್ಣಾಗಮನಶಂಕಿತೈಃ ।
ಯಮುನಾಂ ದಕ್ಷಿಣಾಂ ಕೃತ್ವಾ ಪ್ರಯಯೌ ಮಾಲತೀವನಮ್

ಚಂದನಾನಾಂ ಚಂಪಕಾನಾಂ ಯೂಥಿಕಾನಾಂ ತಥೈವ ಚ ।
ಕೇತಕೀ ಮಾಧವೀನಾಂ ಚ ವನಂ ಕೃತ್ವಾ ಪ್ರದಕ್ಷಿಣಮ್ ॥ ೩೦ ॥

---

ಕಾಂತಿಯಿಂದ ಬೆಳಗುತ್ತಿರುವ ಮಾಲಿಕೆಗಳ ಗುಂಪಿನಿಂದಲೂ, ಮೊಸರು ಅರಳು ಹಣ್ಣುಗಳಿಂದಲೂ, ಪಟ್ಟೆಯ ವಸ್ತ್ರಗಳಿಂದಲೂ, ನವಿರಾದ ಮತ್ತು ಸುವಾಸನೆಯಿಂದ ಕೂಡಿದ ವಸ್ತ್ರಗಳಿಂದಲೂ, ಚಿಗುರುಗಳಿಂದಲೂ, ಹೂವುಗಳಿಂದಲೂ, ಗರಿಕೆಯ ಚಿಗುರುಗಳಿಂದಲೂ ಕೂಡಿರುವ ಗಂಧ ಅಗರು ಕಸ್ತೂರಿ ಕೇಸರಿ ಮುಂತಾದ ಸುಗಂಧ ದ್ರವ್ಯಗಳಿಂದ ಪರಿಷ್ಕರಿಸಲ್ಪಟ್ಟ ರಾಸಮಂಡಲವನ್ನು ಕಂಡನು.

೨೯. ಮೂರುಕೋಟಿ ಗೋಪಿಕೆಯರಿಂದ ಕೂಡಿದ ಪ್ರಯತ್ನಪೂರ್ವಕವಾಗಿ ರಕ್ಷಿಸಲ್ಪಟ್ಟಿರುವ ಸುಂದರವೂ ಮನೋಹರವೂ ಆದ ಸುಗಂಧದ್ರವ್ಯಗಳಿಂದ ಚಿಮುಕಿಸಲ್ಪಟ್ಟಿರುವ ಮೂರುಲಕ್ಷ ರತಿಕ್ರೀಡೆಯ ಮನೆಗಳಿಂದ ಕಂಗೊಳಿಸುತ್ತಿರುವ ರಾಸ ಮಂಡಲವನ್ನು ಕಂಡನು.

೩೦. ಯಮುನಾನದಿಯನ್ನು ಬಲದಲ್ಲಿ ಬಿಟ್ಟುಕೊಂಡು ಕೃಷ್ಣನು ಬರಬಹುದೆಂದು ಊಹಿಸಿಕೊಂಡು ಬಂದಿರುವ ಒಂದುಲಕ್ಷ ಗೋಪಾಲ ಬಾಲಕರಿಂದ ಕೂಡಿದ ಮಾಲತೀವನಕ್ಕೆ ಹೊರಟನು.

೩೧–೩೭. ಗಂಧದ ವನವನ್ನೂ, ಸಂಪಿಗೆಯ ವನವನ್ನೂ, ಯೂಥಿಕಾಪುಷ್ಪದ ವನವನ್ನೂ ಮತ್ತು ಕೇದಿಗೆಯ ವನವನ್ನೂ, ಜಾಜಿಯ ವನವನ್ನೂ ಪ್ರದಕ್ಷಿಣೆ ಮಾಡಿ

ಬಕುಲಾನಾಂ ವಂಜುಲಾನಾಮಶೋಕಾನಾಂ ಚ ಕಾನನಮ್ ।
ಮಲ್ಲಿಕಾನಾಂ ಪಲಾಶಾನಾಂ ಶಿರೀಷಾಣಾಂ ತಥೈವ ಚ || ೩೨ ||

ಧಾತ್ರೀಣಾಂ ಕಾಂಚನಾನಾಂ ಚ ಕರ್ಣಿಕಾನಾಂ ವನಂ ತಥಾ ।
ನಾಗೇಶ್ವರಾಣಾಂ ವಿಪಿನಂ ಲವಂಗಾನಾಂ ತಥೈವ ಚ || ೩೩ ||

ವನಂ ಚ ಶಾಲತಾಲಾನಾಂ ಹಿಂತಾಲಾನಾಂ ವನಂ ತಥಾ ।
ಪನಸಾನಾಂ ರಸಾಲಾನಾಂ ಲಾಂಗಲೀನಾಂ ಮನೋಹರಮ್ || ೩೪ ||

ಮಂದಾರಕಾನನಂ ರಮ್ಯಂ ವಾಮಂ ಕೃತ್ವಾ ಚ ಸತ್ವರಮ್ ।
ದೃಷ್ಟ್ವಾ ಕುಂದವನಂ ರಮ್ಯಂ ಸಂಪ್ರಾಪ್ಯ ಮಧುಕಾನನಮ್ || ೩೫ ||

ಪುಂಸ್ಕೋಕಿಲಾನಾಂ ಶಬ್ದೇನ ಮಧುರೇಣ ಸಮನ್ವಿತಮ್ ।
ಮಧುವ್ರತಸಮೂಹಾನಾಂ ಮಧುರಧ್ವನಿಪೂರಿತಮ್ || ೩೬ ||

ವನ್ಯವೃಕ್ಷೈಃ ಪರಿವೃತಂ ಮಾಧ್ವೀಕಾಧಾರಮೀಪ್ಸಿತಮ್ ।
ವಾತೇನ ವನ್ಯಪುಷ್ಪಾಣಾಂ ಪರಿತಃ ಸುರಭೀಕೃತಮ್ || ೩೭ ||

---

ಕೊಂಡು ಮತ್ತು ಬಕುಳ ವನವನ್ನೂ, ವಂಜುಳ ವನವನ್ನೂ, ಮಲ್ಲಿಗೆಯ ವನವನ್ನೂ ಮುತ್ತುಗದ ವನವನ್ನೂ, ಬಾಗೇ ವನವನ್ನೂ, ನೆಲ್ಲಿಯ ವನವನ್ನೂ, ಕಾಂಚನ ವನವನ್ನೂ, ಕಣಿಗಲ ವನವನ್ನೂ, ನಾಗೇಶ್ವರ ವನವನ್ನೂ, ಲವಂಗ ವನವನ್ನೂ, ಸಾಲ ವೃಕ್ಷದ ವನವನ್ನೂ, ತಾಲೀ ವನವನ್ನೂ, ಹಿಂತಾಲ ಮರದ ವನವನ್ನೂ, ಹಲಸಿನ ವನವನ್ನೂ, ಮಾವಿನ ವನವನ್ನೂ, ಮನೋಹರವಾದ ಲಾಂಗಲೀ ವನವನ್ನೂ, ಮಂದಾರದ ವನವನ್ನೂ ಎಡಭಾಗದಲ್ಲಿ ಬಿಟ್ಟುಕೊಂಡು, ಸುಂದರವಾದ ಕುಂಜವನವನ್ನು ನೋಡಿಕೊಂಡು, ಗಂಡು ಕೋಗಿಲೆಗಳ ಮಧುರವಾದ ಧ್ವನಿಯಿಂದ ಕೂಡಿದ ದುಂಬಿಗಳ ಗುಂಪಿನ ಮಂಜುಳವಾದ ಝೇಂಕಾರದಿಂದ ತುಂಬಿದ ಕಾಡುಮರಗಳಿಂದ ಕೂಡಿರುವ ಮಧುರವಾದ ಮತ್ತು ಇಷ್ಟವಾದ ಹಣ್ಣುಗಳಿಂದ ತುಂಬಿರುವ ಮತ್ತು ಕಾಡು ಹೂವುಗಳಿಂದ ಬೀಸಿ ಬರುವ ಗಾಳಿಯಿಂದ ಎಲ್ಲೆಡೆಯಲ್ಲಿಯೂ ಸುವಾಸನೆಯಾಗಿ ಮಾಡಲ್ಪಟ್ಟ ಮಧುಕಾನನ (ವನ) ವನ್ನು ಸೇರಿದನು.

ತದ್ದೃಷ್ಟ್ವಾ ರಾಜಮಾರ್ಗೇಣ ಯಶೋದೋಕ್ತೇನ ಸಾಂಪ್ರತಮ್ ।
ಯಯೌ ಶೀಘ್ರಂ ನಿರುದ್ವಿಗ್ನಂ ರಹಸ್ಯಂ ಬದರೀವನಮ್ ॥ ೩೮ ॥

ಶ್ರೀಫಲಾನಾಂ ಚ ನಿಂಬಾನಾಂ ನಾರಿಂಗಾಣಾಂ ವನಂ ತಥಾ ।
ಪದ್ಮಾನಾಂ ಕರವೀರಾಣಾಂ ತುಲಸೀನಾಂ ಚ ಕಾನನಮ್ ॥ ೩೯ ॥

ದೃಷ್ಟ್ವಾ ರಕ್ತಿಮವರ್ಣಂ ಚ ಸುಪಕ್ವಫಲಮೀಪ್ಸಿತಮ್ ।
ತದೇವ ವಾಮತಃ ಕೃತ್ವಾ ವಿವೇಶ ಕದಲೀವನಮ್ ॥ ೪೦ ॥

ಅತೀವ ನಿರ್ಜನೇ ರಮ್ಯೇ ದದರ್ಶ ರಾಧಿಕಾಶ್ರಮಮ್ ।
ಮಣೀಂದ್ರಾಣಾಂ ಚ ಪ್ರಾಕಾರಂ ಪರಿಖಾದುರ್ಗವೇಷ್ಟಿತಮ್ ॥ ೪೧ ॥

ಅತ್ಯಗಮ್ಯಂ ರಿಪೂಣಾಂಚ ಮಿತ್ರಾಣಾಂ ಸುಗಮಂ ಸುಖಮ್ ।
ಗೋಪ್ಯಂ ಸಂಕೇತಮಾರ್ಗಂ ಚ ರಕ್ಷಕೈಃ ಪರಿರಕ್ಷಿತಮ್ ॥ ೪೨ ॥

ನಾನಾಚಿತ್ರ ವಿಚಿತ್ರಾಢ್ಯಂ ನಿರ್ಮಿತಂ ವಿಶ್ವಕರ್ಮಣಾ ।
ಮಣೀಂದ್ರ ಮುಕ್ತಾ ಮಾಣಿಕ್ಯ ಹೀರಹಾರೋಜ್ವಲಂ ಪರಮ್ ॥ ೪೩ ॥

---

೩೮. ಆ ವನವನ್ನು ನೋಡಿಕೊಂಡು ಯಶೋದೆಯು ಹೇಳಿದ ಹೆದ್ದಾರಿಯಿಂದ ಜಾಗ್ರತೆಯಾಗಿ ಶಾಂತವಾದ ಮನಸ್ಸಿನಿಂದ ರಹಸ್ಯವಾಗಿರುವ ಬದರೀವನಕ್ಕೆ ಹೊರಟನು.

೩೯–೪೦. ನೆಲ್ಲಿಯ, ಬೇವಿನ ಮತ್ತು ಕಿತ್ತಿಲೆಯ ವನವನ್ನೂ, ತಾವರೆಯ, ಕಣಗಲೆಯ ಮತ್ತು ತುಲಸಿಯ ವನವನ್ನೂ ಕೂಡ ನೋಡಿ ಅವುಗಳಲ್ಲಿರುವ ಇಷ್ಟವಾದ, ಹಣ್ಣಾಗಿ ಕೆಂಪುಬಣ್ಣದಿಂದಿರುವ ಹಣ್ಣನ್ನೂ ಕೂಡ ನೋಡುತ್ತ ಅದನ್ನೂ ಎಡದಲ್ಲಿ ಬಿಟ್ಟುಕೊಂಡು ಬಾಗೆಯ ವನವನ್ನು ಹೊಕ್ಕನು.

೪೧–೪೫. ಅತಿ ನಿರ್ಜನವಾದ ಮನೋಹರವಾದ ಪ್ರದೇಶದಲ್ಲಿರುವ ರಾಧಿಕೆಯ ಮನೆಯನ್ನು ಕಂಡನು. ಅದು ಹೇಗಿದ್ದಿತೆಂದರೆ— ಶ್ರೇಷ್ಠವಾದ ರತ್ನಮಣಿಗಳಿಂದ ಮಾಡಿದ ಕೋಟೆಗಳುಳ್ಳದ್ದಾಗಿಯೂ, ಸುತ್ತಲೂ ಕಂದಕದ ದುರ್ಗದಿಂದ ಕೂಡಿದುದಾಗಿಯೂ, ಶತ್ರುಗಳು ಹೇಗೂ ಪ್ರವೇಶಿಸಲಾಗದುದಾಗಿಯೂ, ಮಿತ್ರರಿಗೆ ಪ್ರವೇಶಿಸಲು ಸುಲಭವಾಗಿಯೂ ಗುಟ್ಟಾಗಿಯೂ ಗುಟ್ಟಾದ ದಾರಿಗಳುಳ್ಳದ್ದಾಗಿಯೂ, ಪಹರೆಯವರಿಂದ ಕೂಡಿದುದ್ದಾಗಿಯೂ, ಅನೇಕ ಚಿತ್ರಗಳಿಂದ ಅಲಂಕೃತವಾಗಿಯೂ, ವಿಶ್ವಕರ್ಮನಿಂದ ಮಾಡಲ್ಪಟ್ಟುದಾಗಿಯೂ, ಶ್ರೇಷ್ಠವಾದ ಮಣಿಗಳು ಮತ್ತು ಮಾಣಿ

ರತ್ನೇಂದ್ರಸಾರರಚಿತಂ ರತ್ನಸ್ತಂಭೈಃ ಸುಶೋಭಿತಮ್ ।
ರತ್ನಸೋಪಾನಸಂಸಕ್ತಮಂದಿರೇಣ ಮನೋಹರಮ್ || ೪೪ ||

ಅಮೂಲ್ಯರತ್ನರಚಿತಂ ಕಲಶೈಃ ಪರಿಶೋಭಿತಮ್ ।
ವಹ್ನಿಶುದ್ಧಾಂಶುಕಾಭಿಶ್ಚ ಪತಾಕಾಭಿಃ ಪರಿಷ್ಕೃತಮ್ || ೪೫ ||

ಸದ್ರತ್ನದರ್ಪಣೋತ್ಕೃಷ್ಟಂ ಚರ್ಚಿತಂ ಶ್ವೇತಚಾಮರೈಃ ।
ದದರ್ಶ ಸಿಂಹದ್ವಾರಂ ಚ ಯುಕ್ತಂ ರತ್ನಕಪಾಟಕೈಃ || ೪೬ ||

ದ್ವಾರೋಪರಿ ವಿಚಿತ್ರಂ ಚ ರಮ್ಯಂ ವೃಂದಾವನಂ ವನಮ್ ।
ಕದಂಬಕಾನನಂ ರಮ್ಯಂ ತದ್ವಸ್ತ್ರಹರಣಾದಿಕಮ್ || ೪೭ ||

ವಿಶ್ವಕರ್ಮವಿರಚಿತಂ ಸುರಮ್ಯಂ ರಾಸಮಂಡಲಮ್ ।
ನಾನಾರತ್ನಕುಟೀರಂ ಚ ಗೋಪಗೋಪೀಸಮನ್ವಿತಮ್ || ೪೮ ||

---

ಕ್ಯಗಳು ಹೀರ ಇವುಗಳ ಹಾರಗಳಿಂದ ಹೆಚ್ಚಾಗಿ ಕಂಗೊಳಿಸುತ್ತಿರುವುದಾಗಿಯೂ, ಶ್ರೇಷ್ಠವಾದ ರತ್ನಸಾರಗಳಿಂದ ಮಾಡಲ್ಪಟ್ಟಿದಾಗಿಯೂ, ರತ್ನದ ಕಂಬಗಳಿಂದ ಕಂಗೊಳಿಸುತ್ತಿರುವುದಾಗಿಯೂ, ರತ್ನಮಯವಾದ ಮೆಟ್ಟಲುಗಳಿಂದ ಕೂಡಿದ ಮನೆಯಿಂದ ಮನೋಹರವಾಗಿಯೂ, ಹೆಚ್ಚು ಬೆಲೆಬಾಳುವ ರತ್ನಗಳಿಂದ ಮಾಡಿದ ಕಲಶಗಳಿಂದ ಕಂಗೊಳಿಸುತ್ತಿರುವುದಾಗಿಯೂ, ಅಗ್ನಿಯಂತೆ ಶುಭ್ರವಾದ ಬಟ್ಟೆಗಳಿಂದ ಮಾಡಿದ ಪತಾಕೆಗಳಿಂದ ಅಲಂಕರಿಸಲ್ಪಟ್ಟಿರುವುದಾಗಿಯೂ ಇದ್ದಿತು.

೪೬. ಶ್ರೇಷ್ಠವಾದ ರತ್ನದ ಕನ್ನಡಿಗಳಿಂದಲೂ, ಬಿಳಿಯ ಚಾಮರಗಳಿಂದಲೂ ಕಂಗೊಳಿಸುತ್ತಲಿರುವ ರತ್ನಮಯವಾದ ಬಾಗಿಲುಗಳಿಂದ ಕೂಡಿದ ಸಿಂಹದ್ವಾರವನ್ನು ಕಂಡನು.

೪೭–೪೮. ಆ ಸಿಂಹದ್ವಾರದ ಮುಂಭಾಗದಲ್ಲಿ ವಿಚಿತ್ರವೂ ಮನೋಹರವೂ ಆದ ವೃಂದಾವನವೆಂಬ ವನವನ್ನೂ, ಸುಂದರವಾದ ಈಚಲಮರದ ವನವನ್ನೂ, ಅಲ್ಲಿ ನಡೆದ ವಸ್ತ್ರಾಪಹರಣದ ಚಿಹ್ನೆಯನ್ನೂ, ವಿಶ್ವಕರ್ಮನಿಂದ ಮಾಡಲ್ಪಟ್ಟ ಮನೋಹರವಾದ ರಾಸಮಂಡಲವನ್ನೂ, ಅನೇಕ ರತ್ನಗಳಿಂದ ಮಾಡಿದ ಗೋಪರು ಮತ್ತು ಗೋಪಿಯರಿಂದ ಕೂಡಿರುವ ಮನೆಯನ್ನು ಕೂಡ ಕಂಡನು.

ಕೃತ್ವಾ ನಿರ್ಮಂಛನಂ ಶೀಘ್ರಮುದ್ಧವಂ ಪ್ರಿಯಮಾಗತಮ್ ।
ಹೃಷ್ಟಾ ಪ್ರವೇಶಯಾಮಾಸ ರಾಧಾಭ್ಯಂತರಮುತ್ತಮಮ್ ॥ ೫೯ ॥

ಅಮೂಲ್ಯರತ್ನನಿರ್ಮಾಣಂ ಗತ್ವಾ ಮಂದಿರಮುತ್ತಮಮ್ ।
ದದರ್ಶ ಪುರತೋ ರಾಧಾಂ ಕುಹ್ವಾಂ ಚಂದ್ರಕಲೋಪಮಮ್ ॥ ೬೦ ॥

ಸುಪಕ್ವಪದ್ಮನೇತ್ರಾಂ ಚ ಶಯಾನಾಂ ಶೋಕಮೂರ್ಛಿತಾಮ್ ।
ರುದಂತೀಂ ರಕ್ತವದನಾಂ ಕ್ಲಿಷ್ಟಾಂ ಚ ತ್ಯಕ್ತಭೂಷಣಾಮ್ ॥ ೬೧ ॥

ನಿಶ್ಚೇಷ್ಟಾಂ ಚ ನಿರಾಹಾರಾಂ ಸುವರ್ಣವರ್ಣಕುಂಡಲಾಮ್ ।
ಶುಷ್ಕಿತಾಧರ ಕಂಠಾಂ ಚ ಕಿಂಚಿನ್ನಿಶ್ವಾಸಸಂಯುತಾಮ್ ॥ ೬೨ ॥

ಪ್ರಣನಾಮ ಚ ತಾಂ ದೃಷ್ಟ್ವಾ ಭಕ್ತಿನಮ್ರಾತ್ಮಕಂಧರಃ ।
ಪುಲಕಾಂಚಿತಸರ್ವಾಂಗೋ ಭಕ್ತ್ಯಾ ಭಕ್ತಃ ಸ ಉದ್ಧವಃ ॥ ೬೩ ॥

---

ಮೃದಂಗ ಭೇರಿ ಮುಂತಾದ ವಾದ್ಯಘೋಷಗಳೊಡನೆ ಉತ್ಸವದಿಂದ ಆ ಉದ್ಧವನನ್ನು ಜಾಗ್ರತೆಯಾಗಿ ರಾಧೆಯಿದ್ದ ಗೃಹಕ್ಕೆ ಪ್ರವೇಶಮಾಡಿಸಿದರು.

೬೦. ಬೆಲೆಕಟ್ಟಲಸಾಧ್ಯವಾದ ರತ್ನಗಳಿಂದ ನಿರ್ಮಿಸಿರುವ ಆ ಉತ್ತಮವಾದ ಮನೆಯನ್ನು ಉದ್ಧವನು ಪ್ರವೇಶಿಸಿ, ಮುಂಭಾಗದಲ್ಲಿ ಕುಹೂಯೋಗದಲ್ಲಿ ಚಂದ್ರನ ಕಲೆಯಿರುವಂತೆ ಇರುವ ರಾಧೆಯನ್ನು ಕಂಡನು.

೬೧–೬೨. ಬಲಿತ ಕಮಲದಂತೆ ಕಣ್ಣುಗಳುಳ್ಳ ದುಃಖದಿಂದ ಆವರಿಸಲ್ಪಟ್ಟವಳಾಗಿ ಮಲಗಿರುವ ಆಭರಣಗಳೆಲ್ಲವನ್ನೂ ಬಿಟ್ಟು ಅಲಂಕಾರ ಮಾಡಿಕೊಳ್ಳದೆ, ಕೆಂಪಾದ ಮುಖದಿಂದ ಕೂಡಿ ಅಳುತ್ತ ವ್ಯಥೆಗೊಂಡಿರುವ, ಅಳ್ಳಾಡದೆ ಆಹಾರವನ್ನು ತೆಗೆದುಕೊಳ್ಳದೆ ಚಿನ್ನದ ಕುಂಡಲಗಳನ್ನು ಧರಿಸಿ, ಒಣಗಿದ ತುಟಿ ಮತ್ತು ಗಂಟಲುಳ್ಳವಳಾಗಿ ಸ್ವಲ್ಪಮಾತ್ರ ನಿಟ್ಟುಸಿರನ್ನು ಬಿಡುತ್ತಿರುವ ರಾಧೆಯನ್ನು ಕಂಡನು.

೬೩. ಭಕ್ತನಾದ ಆ ಉದ್ಧವನು ಆ ರಾಧೆಯನ್ನು ನೋಡಿ ಭಕ್ತಿಯಿಂದ ಬಾಗಿದ ಕತ್ತುಳ್ಳವನಾಗಿಯೂ, ಸಕಲಾವಯವಗಳಲ್ಲಿಯೂ ರೋಮಾಂಚನವನ್ನು ಹೊಂದಿದವನಾಗಿಯೂ ಅತ್ಯಂತ ಭಕ್ತಿಯಿಂದ ನಮಸ್ಕಾರ ಮಾಡಿದನು.

॥ ಉದ್ಧವ ಉವಾಚ ॥

ವಂದೇ ರಾಧಾ ಪದಾಂಭೋಜಂ ಬ್ರಹ್ಮಾದಿಸುರವಂದಿತಮ್ ।
ಯತ್ಕೀರ್ತಿಕೀರ್ತನೇನೈವ ಪುನಾತಿ ಭುವನತ್ರಯಮ್ ॥ ೬೪ ॥

ನಮೋ ಗೋಕುಲವಾಸಿನ್ಯೈ ರಾಧಿಕಾಯೈ ನಮೋ ನಮಃ ।
ಶತಶೃಂಗ ನಿವಾಸಿನ್ಯೈ ಚಂದ್ರವತ್ಯೈ ನಮೋ ನಮಃ ॥ ೬೫ ॥

ತುಲಸೀವನವಾಸಿನ್ಯೈ ವೃಂದಾರಣ್ಯೈ ನಮೋ ನಮಃ ।
ರಾಸಮಂಡಲವಾಸಿನ್ಯೈ ರಾಸೇಶ್ವರ್ಯೈ ನಮೋ ನಮಃ ॥ ೬೬ ॥

ವಿರಜಾತೀರವಾಸಿನ್ಯೈ ವೃಂದಾಯೈ ಚ ನಮೋ ನಮಃ ।
ವೃಂದಾವನವಿಲಾಸಿನ್ಯೈ ಕೃಷ್ಣಾಯೈ ಚ ನಮೋ ನಮಃ ॥ ೬೭ ॥

ನಮಃ ಕೃಷ್ಣಪ್ರಿಯಾಯೈ ಚ ಶಾಂತಾಯೈ ಚ ನಮೋ ನಮಃ ।
ಕೃಷ್ಣವಕ್ಷಃಸ್ಥಿತಾಯೈ ಚ ತತ್ಪ್ರಿಯಾಯೈ ನಮೋ ನಮಃ ॥ ೬೮ ॥

---

೬೪. ಉದ್ಧವನು ಹೇಳುತ್ತಾನೆ:— ಯಾವುದರ ಕೀರ್ತಿಯನ್ನು ಹಾಡುವ ಮಾತ್ರದಿಂದಲೇ ಮೂರುಲೋಕಗಳೂ ಪರಿಶುದ್ಧವಾಗುತ್ತವೆಯೋ, ಅಂಥಾ ಬ್ರಹ್ಮನೇ ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುತ್ತಿರುವ ರಾಧೆಯ ಕಾಲೆಂಬ ತಾವರೆಯನ್ನು ನಮಸ್ಕರಿಸುತ್ತೇನೆ.

೬೫. ಗೋಕುಲದಲ್ಲಿ ವಾಸವಾಗಿರುವ ರಾಧಿಕೆಗೆ ನಮಸ್ಕಾರಗಳು. ಶತಶೃಂಗದಲ್ಲಿ ಹೆಚ್ಚಾಗಿ ವಾಸಮಾಡುವವಳಿಗೆ ನಮಸ್ಕಾರವು, ಚಂದ್ರವತಿಗೆ ನಮಸ್ಕಾರವು.

೬೬. ತುಲಸೀತೋಟದಲ್ಲಿ ವಾಸಮಾಡುವವಳಿಗೆ ನಮಸ್ಕಾರವು. ವೃಂದಾದೇವಿಯ ಅವತಾರ ರೂಪಳಿಗೆ ನಮಸ್ಕಾರಗಳು. ರಾಸಮಂಡಲದಲ್ಲಿ ವಾಸಮಾಡುವವಳಿಗೆ ನಮಸ್ಕಾರವು. ರಾಸಕ್ರೀಡೆಯಲ್ಲಿ ಮುಖ್ಯಳಾದವಳಿಗೆ ನಮಸ್ಕಾರವು.

೬೭. ವಿರಜಾನದಿಯ ತೀರದಲ್ಲಿ ವಾಸಮಾಡುವವಳಿಗೆ ನಮಸ್ಕಾರವು. ವೃಂದಾದೇವಿಗೆ ನಮಸ್ಕಾರವು. ವೃಂದಾವನದಲ್ಲಿ ವಿಲಾಸದಿಂದಿರುವವಳಿಗೆ ನಮಸ್ಕಾರವು. ಕೃಷ್ಣವರ್ಣವುಳ್ಳವಳಿಗೆ ನಮಸ್ಕಾರವು.

೬೮. ಕೃಷ್ಣನಿಗೆ ಪ್ರಿಯಳಾದವಳಿಗೆ ನಮಸ್ಕಾರವು. ಶಾಂತಸ್ವಭಾವವುಳ್ಳವಳಿಗೆ ನಮಸ್ಕಾರವು. ಶ್ರೀಕೃಷ್ಣನ ವಕ್ಷಃಸ್ಥಳದಲ್ಲಿ ವಾಸಮಾಡುವವಳಿಗೆ ನಮಸ್ಕಾರವು. ಮತ್ತು ಆ ಕೃಷ್ಣನ ಪ್ರೀತಿಗೆ ಪಾತ್ರಳಾದವಳಿಗೆ ನಮಸ್ಕಾರವು.

ನಮೋ ವೈಕುಂಠವಾಸಿನ್ಯೈ ಮಹಾಲಕ್ಷ್ಮ್ಯೈ ನಮೋ ನಮಃ ।
ವಿದ್ಯಾಧಿಷ್ಠಾತೃದೇವ್ಯೈ ಚ ಸರಸ್ವತ್ಯೈ ನಮೋ ನಮಃ ॥ ೭೯ ॥

ಸರ್ವೈಶ್ವರ್ಯಾಧಿದೇವ್ಯೈ ಚ ಕಮಲಾಯೈ ನಮೋ ನಮಃ ।
ಪದ್ಮನಾಭಪ್ರಿಯಾಯೈ ಚ ಪದ್ಮಾಯೈ ಚ ನಮೋ ನಮಃ ॥ ೭೦ ॥

ಮಹಾವಿಷ್ಣೋಶ್ಚ ಮಾತ್ರೇ ಚ ಪರಾದ್ಯಾಯೈ ನಮೋ ನಮಃ ।
ನಮಃ ಸಿಂಧುಸುತಾಯೈ ಚ ಮರ್ತ್ಯಲಕ್ಷ್ಮ್ಯೈ ನಮೋ ನಮಃ ॥ ೭೧ ॥

ನಾರಾಯಣಪ್ರಿಯಾಯೈ ಚ ನಾರಾಯಣ್ಯೈ ನಮೋ ನಮಃ ।
ನಮೋಽಸ್ತು ವಿಷ್ಣುಮಾಯಾಯೈ ವೈಷ್ಣವ್ಯೈ ಚ ನಮೋ ನಮಃ ॥ ೭೨ ॥

ಮಹಾಮಾಯಾಸ್ವರೂಪಾಯೈ ಸಂಪದಾಯೈ ನಮೋ ನಮಃ ।
ನಮಃ ಕಲ್ಯಾಣರೂಪಿಣ್ಯೈ ಶುಭಾಯೈ ಚ ನಮೋ ನಮಃ ॥ ೭೩ ॥

---

೬೯. ವೈಕುಂಠದಲ್ಲಿ ವಾಸಮಾಡುವವಳಿಗೆ ನಮಸ್ಕಾರವು. ಮಹಾಲಕ್ಷ್ಮಿಗೆ ನಮಸ್ಕಾರವು. ವಿದ್ಯೆಗಳಿಗೆ ಆಧಾರಭೂತಳಾದ ಸರಸ್ವತೀದೇವಿಗೆ ನಮಸ್ಕಾರವು.

೭೦. ಸಕಲೈಶ್ವರ್ಯಗಳಿಗೂ ಯಜಮಾನಿಯಾದ ಕಮಲಾದೇವಿಗೆ ನಮಸ್ಕಾರವು. ಹೊಕ್ಕುಳಲ್ಲಿ ತಾವರೆಯನ್ನು ಹೊಂದಿದ ಮಹಾ ವಿಷ್ಣುವಿನ ಪ್ರಿಯಳಾದ ಪದ್ಮಾದೇವಿಗೆ ನಮಸ್ಕಾರವು.

೭೧. ಮಹಾ ವಿಷ್ಣುವಿಗೂ ಜನನಿಯಾದ ಅತ್ಯಂತ ಶ್ರೇಷ್ಠಳಾದ ದೇವಿಗೆ ನಮಸ್ಕಾರವು. ಸಮುದ್ರನ ಕುಮಾರಿಯಾದ ಮಾನವ ಲಕ್ಷ್ಮಿಗೆ ನಮಸ್ಕಾರವು.

೭೨. ನಾರಾಯಣನ ಪ್ರಿಯಳೂ ನಾರಾಯಣಿಯೂ ಆದ ದೇವಿಗೆ ನಮಸ್ಕಾರವು. ವಿಷ್ಣುಮಾಯೆಯೂ ವೈಷ್ಣವಿಯೂ ಆದ ದೇವಿಗೆ ನಮಸ್ಕಾರವು.

೭೩. ಮಹಾಮಾಯಾಸ್ವರೂಪಿಣಿಯೂ ಸಂಪತ್ತುಗಳನ್ನು ಕೊಡುವವಳೂ ಆದ ದೇವಿಗೆ ನಮಸ್ಕಾರವು. ಮಂಗಳರೂಪಳಿಗೆ ನಮಸ್ಕಾರವು. ಶುಭಸ್ವರೂಪಳಿಗೆ ನಮಸ್ಕಾರವು.

ಮಾತ್ರೇ ಚತುರ್ಣಾಂ ವೇದಾನಾಂ ಸಾವಿತ್ರ್ಯೈ ಚ ನಮೋ ನಮಃ ।
ನಮೋ ದುರ್ಗವಿನಾಶಿನ್ಯೈ ದುರ್ಗಾದೇವ್ಯೈ ನಮೋ ನಮಃ ॥ ೭೪ ॥

ತೇಜಃಸುಸರ್ವದೇವಾನಾಂ ಪುರಾ ಕೃತಯುಗೇ ಮುದಾ ।
ಅಧಿಷ್ಠಾನ ಕೃತಾಯೈ ಚ ಪ್ರಕೃತ್ಯೈ ಚ ನಮೋ ನಮಃ ॥ ೭೫ ॥

ನಮಸ್ತ್ರಿಪುರಹಾರಿಣ್ಯೈ ತ್ರಿಪುರಾಯೈ ನಮೋ ನಮಃ ।
ಸುಂದರೀಷು ಚ ರಮ್ಯಾಯೈ ನಿರ್ಗುಣಾಯೈ ನಮೋ ನಮಃ ॥ ೭೬ ॥

ನಮೋ ನಿದ್ರಾಸ್ವರೂಪಾಯೈ ನಿರ್ಗುಣಾಯೈ ನಮೋ ನಮಃ ।
ನಮೋ ದಕ್ಷಸುತಾಯೈ ಚ ನಮಃ ಸತ್ಯೈ ನಮೋ ನಮಃ ॥ ೭೭ ॥

ನಮಃಶೈಲಸುತಾಯೈ ಚ ಪಾರ್ವತ್ಯೈ ಚ ನಮೋ ನಮಃ ।
ನಮೋನಮಸ್ತಪಸ್ವಿನ್ಯೈ ಹ್ಯುಮಾಯೈ ಚ ನಮೋ ನಮಃ ॥ ೭೮ ॥

---

೭೪. ನಾಲ್ಕು ವೇದಗಳಿಗೂ ತಾಯಿಯಾದ ಸಾವಿತ್ರಿಗೆ ನಮಸ್ಕಾರವು. ಭಕ್ತರ ದುರ್ಗತಿಯನ್ನು ನಾಶಮಾಡುವವಳಿಗೆ ನಮಸ್ಕಾರವು. ದುರ್ಗಾದೇವಿಗೆ ನಮಸ್ಕಾರವು.

೭೫. ಹಿಂದೆ ಕೃತಯುಗದಲ್ಲಿ ಎಲ್ಲ ದೇವತೆಗಳ ತೇಜಸ್ಸಿನಲ್ಲಿಯೂ ಸಂತೋಷ ದಿಂದ ವಾಸಮಾಡಿದ್ದ ಪ್ರಕೃತಿರೂಪಳಿಗೆ ನಮಸ್ಕಾರವು.

೭೬. ತ್ರಿಪುರರಾಕ್ಷಸರ ಪಟ್ಟಣಗಳನ್ನು ನಾಶಮಾಡಿದವಳಿಗೆ ನಮಸ್ಕಾರವು. ತ್ರಿಪುರಾದೇವಿಗೆ ನಮಸ್ಕಾರವು. ಸುಂದರಿಯರಲ್ಲೆಲ್ಲ ಮನೋಹರಳಾದ ಗುಣರಹಿತ ಳಾದವಳಿಗೆ ನಮಸ್ಕಾರಗಳು.

೭೭. ನಿದ್ರಾರೂಪಳಾದವಳಿಗೆ ನಮಸ್ಕಾರವು, ಗುಣರಹಿತಳಾದವಳಿಗೆ ನಮಸ್ಕಾರವು. ದಕ್ಷಬ್ರಹ್ಮನ ಮಗಳಾದ ಸತೀದೇವಿಯರೂಪಳಾದ ದೇವಿಗೆ ನಮಸ್ಕಾರವು.

೭೮. ಪರ್ವತರಾಜನ ಮಗಳಾದ ಪಾರ್ವತಿಗೆ ನಮಸ್ಕಾರವು. ತಪಸ್ಸನ್ನು ಮಾಡುವವಳಿಗೆ ನಮಸ್ಕಾರವು. ಉಮಾರೂಪಳಿಗೆ ನಮಸ್ಕಾರವು.

ನಿರಾಹಾರ ಸ್ವರೂಪಾಯೈ ಹ್ಯಪರ್ಣಾಯೈ ನಮೋ ನಮಃ ।
ಗೌರೀ ಲೋಕವಿಲಾಸಿನ್ಯೈ ನಮೋ ಗೌರ್ಯೈ ನಮೋ ನಮಃ ॥ ೭೯ ॥

ನಮಃ ಕೈಲಾಸವಾಸಿನ್ಯೈ ಮಹೇಶ್ವರ್ಯೈ ನಮೋ ನಮಃ ।
ನಿದ್ರಾಯೈ ಚ ದಯಾಯೈ ಚ ಶ್ರದ್ಧಾಯೈ ಚ ನಮೋ ನಮಃ ॥ ೮೦ ॥

ನಮೋ ಧೃತ್ಯೈ ಕ್ಷಮಾಯೈ ಚ ಲಜ್ಜಾಯೈ ಚ ನಮೋ ನಮಃ ।
ತೃಷ್ಣಾಯೈ ಕ್ಷುತ್ಸ್ವರೂಪಾಯೈ ಸ್ಥಿತಿಕರ್ತ್ಯೈ ನಮೋ ನಮಃ ॥ ೮೧ ॥

ನಮಃ ಸಂಹಾರರೂಪಿಣ್ಯೈ ಮಹಾಮಾರ್ಯೈ ನಮೋ ನಮಃ ।
ಭಯಾಯೈ ಚಾಭಯಾಯೈ ಚ ಮುಕ್ತಿದಾಯೈ ನಮೋ ನಮಃ ॥ ೮೨ ॥

ನಮಃ ಸ್ವಧಾಯೈ ಸ್ವಾಹಾಯೈ ಶಾಂತ್ಯೈ ಕಾಂತ್ಯೈ ನಮೋ ನಮಃ ।
ನಮಸ್ತುಷ್ಟ್ಯೈ ಚ ಪುಷ್ಟ್ಯೈ ಚ ದಯಾಯೈ ಚ ನಮೋ ನಮಃ ॥ ೮೩ ॥

---

೭೯. ನಿರಾಹಾರಸ್ವರೂಪಳೂ ಅಪರ್ಣೆಯೂ ಆದ ದೇವಿಗೆ ನಮಸ್ಕಾರವು. ಗೌರೀಲೋಕದಲ್ಲಿ ವಾಸಮಾಡುವವಳಿಗೆ ನಮಸ್ಕಾರವು, ಗೌರಿಗೆ ನಮಸ್ಕಾರವು.

೮೦. ಕೈಲಾಸಪರ್ವತದಲ್ಲಿ ವಾಸಮಾಡುವವಳಿಗೆ ನಮಸ್ಕಾರವು. ಮಹೇಶ್ವರಿಗೆ ನಮಸ್ಕಾರವು. ನಿದ್ರಾರೂಪಳೂ ದಯಾರೂಪಳೂ ಶ್ರದ್ಧಾರೂಪಳೂ ಆದ ದೇವಿಗೆ ನಮಸ್ಕಾರವು.

೮೧. ಧೈರ್ಯಸ್ವರೂಪಳಿಗೆ ನಮಸ್ಕಾರವು. ತಾಳ್ಮೆಯ ರೂಪಳೂ, ಲಜ್ಜಾಸ್ವರೂಪಳೂ ಆದ ದೇವಿಗೆ ನಮಸ್ಕಾರವು, ತೃಷ್ಣಾರೂಪಳೂ. ಹಸಿವಿನರೂಪಳೂ, ಲೋಕದ ರಕ್ಷಣೆಯನ್ನು ಮಾಡುವವಳೂ ಆದ ದೇವಿಗೆ ನಮಸ್ಕಾರವು.

೮೨. ಈ ಪ್ರಪಂಚವನ್ನು ಸಂಹಾರಮಾಡುವ ದೇವಿಗೆ ನಮಸ್ಕಾರವು. ಮಹಾ ಮಾರೀರೂಪಳಿಗೆ ನಮಸ್ಕಾರವು. ಭಯರೂಪಳೂ, ಅಭಯರೂಪಳೂ, ಮುಕ್ತಿಯನ್ನು ಕೊಡುವವಳೂ ಆದ ದೇವಿಗೆ ನಮಸ್ಕಾರವು.

೮೩. ಸ್ವಧಾರೂಪಳೂ, ಸ್ವಾಹಾಸ್ವರೂಪಳೂ ಆದ ದೇವಿಗೆ ನಮಸ್ಕಾರವು. ಶಾಂತಿಸ್ವರೂಪಳೂ, ಕಾಂತಿಸ್ವರೂಪಳೂ ಆದ ದೇವಿಗೆ ನಮಸ್ಕಾರವು.

ನಮೋ ನಿದ್ರಾಸ್ಸ್ವರೂಪಾಯೈ ಶ್ರದ್ಧಾಯೈ ಚ ನಮೋನಮಃ ।
ಕ್ಷುತ್ಪಿಪಾಸಾಸ್ಸ್ವರೂಪಾಯೈ ಲಜ್ಜಾಯೈ ಚ ನಮೋ ನಮಃ ॥ ೮೪ ॥

ನಮೋ ಧೃತ್ಯೈ ಕ್ಷಮಾಯೈ ಚ ಚೇತನಾಯೈ ನಮೋನಮಃ ।
ಸರ್ವಶಕ್ತಿಸ್ವರೂಪಿಣ್ಯೈ ಸರ್ವಮಾತ್ರೇ ನಮೋ ನಮಃ ॥ ೮೫ ॥

ಅಗ್ನೌದಾಹಸ್ಸ್ವರೂಪಾಯೈ ಭದ್ರಾಯೈ ಚ ನಮೋ ನಮಃ ।
ಶೋಭಾಯೈ ಪೂರ್ಣಚಂದ್ರೇ ಚ ಶರತ್ಪದ್ಮೇ ನಮೋನಮಃ ॥ ೮೬ ॥

ನಾಸ್ತಿ ಭೇದೋ ಯಥಾದೇವಿ ದುಗ್ಧಧಾವಲ್ಯಯೋಃ ಸದಾ ।
ಯಥೈವ ಗಂಧಭೂಮ್ಯೋಶ್ಚ ಯಥೈವ ಜಲಶೈತ್ಯಯೋಃ ॥ ೮೭ ॥

ಯಥೈವ ಶಬ್ದನಭಸೋರ್ಜ್ಯೋತಿಃ ಸೂರ್ಯಕಯೋರ್ಯಥಾ ।
ಲೋಕೇ ವೇದೇ ಪುರಾಣೇ ಚ ರಾಧಾಮಾಧವಯೋಸ್ತಥಾ ॥ ೮೮ ॥

---

೮೪. ನಿದ್ರಾಸ್ವರೂಪಳಿಗೆ ನಮಸ್ಕಾರವು. ಶ್ರದ್ಧಾರೂಪಳಿಗೆ ನಮಸ್ಕಾರವು. ಹಸಿವು ಬಾಯಾರಿಕೆಗಳ ಸ್ವರೂಪಳಿಗೂ, ಲಜ್ಜಾರೂಪಳಿಗೂ ನಮಸ್ಕಾರವು.

೮೫. ಧೃತಿರೂಪಳೂ, ಕ್ಷಮಾರೂಪಳೂ ಆದ ದೇವಿಗೆ ನಮಸ್ಕಾರವು. ಚೇತನರೂಪಳಿಗೆ ನಮಸ್ಕಾರವು. ಸಮಸ್ತರ ಶಕ್ತಿರೂಪಳೂ, ಎಲ್ಲರಿಗೂ ತಾಯಿಯೂ ಆದ ದೇವಿಗೆ ನಮಸ್ಕಾರವು.

೮೬. ಬೆಂಕಿಯಲ್ಲಿ ಸುಡುವಿಕೆಯ ರೂಪಳೂ, ಮಂಗಳಕರಳೂ ಆದ ದೇವಿಗೆ ನಮಸ್ಕಾರವು. ಹುಣ್ಣಿಮೆಯ ಚಂದ್ರನಲ್ಲಿ ಕಾಂತಿರೂಪಳೂ, ಶರದೃತುವಿನ ಕಮಲ ಸ್ವರೂಪಳೂ ಆದ ದೇವಿಗೆ ನಮಸ್ಕಾರವು.

೮೭–೮೮. ಎಲೈ ದೇವಿಯೇ! ಯಾವಾಗಲೂ ಹಾಲಿಗೂ, ಬಿಳುಪಿಗೂ, ಭೂಮಿಗೂ, ಗಂಧಕ್ಕೂ, ನೀರಿಗೂ, ಶೀತಕ್ಕೂ, ಶಬ್ದಕ್ಕೂ, ಆಕಾಶಕ್ಕೂ, ಸೂರ್ಯನಿಗೂ, ಬೆಳಕಿಗೂ ಭೇದವಿಲ್ಲವೋ ಹಾಗೆ ಲೋಕದಲ್ಲಿಯೂ, ವೇದದಲ್ಲಿಯೂ ಪುರಾಣದಲ್ಲಿಯೂ ಕೂಡ ರಾಧಾಮಾಧವರಿಗೆ ಭೇದವಿರುವುದಿಲ್ಲ.

ಚೇತನಂ ಕುರು ಕಲ್ಯಾಣಿ ದೇಹಿ ಮಾಮುತ್ತರಂ ಸತಿ ।
ಇತ್ಯುಕ್ತ್ವಾ ಚೋದ್ಧವಸ್ತತ್ರ ಪ್ರಣನಾಮ ಪುನಃಪುನಃ ॥ ೮೯ ॥

ಇತ್ಯುದ್ಧವಕೃತಂ ಸ್ತೋತ್ರಂ ಯಃ ಪಠೇದ್ಭಕ್ತಿಪೂರ್ವಕಂ ।
ಇಹಲೋಕೇ ಸುಖಂ ಭುಕ್ತ್ವಾ ಯಾತ್ಯಂತೇ ಹರಿಮಂದಿರಮ್ ॥ ೯೦ ॥

ನಭವೇದ್ಬಂಧುವಿಚ್ಛೇದೋ ರೋಗಃ ಶೋಕಃ ಸುದಾರುಣಃ ।
ಪ್ರೋಷಿತಾಸ್ತ್ರೀ ಲಭೇತ್ಕಾಂತಂ ಭಾರ್ಯಾಭೇದೀಲಭೇತ್ಪ್ರಿಯಾಮ್ ॥ ೯೧ ॥

ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಲಭತೇ ಧನಮ್ ।
ನಿರ್ಭೂಮಿರ್ಲಭತೇ ಭೂಮಿಂ ಪ್ರಜಾಹೀನೋ ಲಭೇತ್ಪ್ರಜಾಮ್ ॥ ೯೨ ॥

ರೋಗಾದ್ವಿಮುಚ್ಯತೇ ರೋಗೀ ಬದ್ಧೋ ಮುಚ್ಯೇತ ಬಂಧನಾತ್ ।
ಭಯಾನ್ಮುಚ್ಯೇತ ಭೀತಸ್ತು ಮುಚ್ಯೇತಾಪನ್ನ ಆಪದಃ ।

---

೮೯. ಎಲೈ ಮಂಗಳಕರಳೇ! ಪತಿವ್ರತೆಯೇ! ಚೈತನ್ಯವನ್ನು ಹೊಂದುವವಳಾಗು. ನನ್ನನ್ನು ಕುರಿತು ಉತ್ತರದ ಮಾತುಗಳನ್ನಾಡುವವಳಾಗು. ಹೀಗೆಂದು ಹೇಳಿ ಉದ್ಧವನು ಅಲ್ಲಿಯೇ ಮತ್ತೆ ಮತ್ತೆ ನಮಸ್ಕಾರ ಮಾಡಿದನು.

೯೦. ಈ ರೀತಿಯಾಗಿ ಉದ್ಧವನಿಂದ ಮಾಡಲ್ಪಟ್ಟ ಸ್ತೋತ್ರವನ್ನು ಯಾವನು ಭಕ್ತಿಪೂರ್ವಕವಾಗಿ ಹೇಳುತ್ತಾನೋ ಅವನು ಈ ಲೋಕದಲ್ಲಿ ಸುಖವನ್ನನುಭವಿಸಿ ಈ ಶರೀರವನ್ನು ಬಿಟ್ಟನಂತರ ಹರಿಮಂದಿರವಾದ ವೈಕುಂಠಕ್ಕೆ ಹೋಗುತ್ತಾನೆ.

೯೧. ಅವನಿಗೆ ಬಂಧುಗಳ ಅಗಲುವಿಕೆಯುಂಟಾಗುವುದಿಲ್ಲ. ರೋಗವಾಗಲೀ ಭಯಂಕರವಾದ ದುಃಖವಾಗಲಿ ಉಂಟಾಗುವುದಿಲ್ಲ. ದೇಶಾಂತರಕ್ಕೆ ಹೋದ ಗಂಡನುಳ್ಳ ಹೆಂಗಸು ಈ ಸ್ತೋತ್ರವನ್ನು ಹೇಳುವುದರಿಂದ ತನ್ನ ಗಂಡನನ್ನು ಹೊಂದುತ್ತಾಳೆ. ಹೆಂಡತಿಯನ್ನಗಲಿದವನು ಅವಳನ್ನು ಮತ್ತೆ ಸೇರುತ್ತಾನೆ.

೯೨. ಮಕ್ಕಳಿಲ್ಲದವನು ಮಕ್ಕಳನ್ನು ಪಡೆಯುತ್ತಾನೆ. ದರಿದ್ರನಾದವನು ಧನವನ್ನು ಪಡೆಯುತ್ತಾನೆ. ಭೂಮಿಯಿಲ್ಲದವನು ಭೂಮಿಯನ್ನು ಪಡೆಯುತ್ತಾನೆ. ಪ್ರಜೆಯಿಲ್ಲದವನು ಪ್ರಜೆಯನ್ನು ಪಡೆಯುತ್ತಾನೆ.

೯೩. ರೋಗದಿಂದ ನರಳುವವನು ಆ ರೋಗದಿಂದ ಬಿಡುಗಡೆ ಹೊಂದುತ್ತಾನೆ. ಬಂಧನದಲ್ಲಿದ್ದವನು ಬಿಡುಗಡೆ ಹೊಂದುತ್ತಾನೆ. ಹೆದರಿದವನು ಹೆದರಿಕೆ

ಅಸ್ಪಷ್ಟಕೀರ್ತಿಃ ಸುಯಶಾ ಮೂರ್ಖೋ ಭವತಿ ಪಂಡಿತಃ || ೯೩ ||

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣ ನಾರದ ಸಂವಾದೇ ರಾಧಾಸ್ತೋತ್ರೇ
ದ್ವಿನವತಿತಮೋಽಧ್ಯಾಯಃ.

---

ಯಿಂದ ಬಿಡಲ್ಪಡುತ್ತಾನೆ. ಆಪತ್ತಿಗೆ ಒಳಗಾದವನು ಆ ಆಪತ್ತಿನಿಂದ ಬಿಡುಗಡೆ ಹೊಂದುತ್ತಾನೆ. ಮಲಿನವಾದ ಕೀರ್ತಿಯುಳ್ಳವನು ಉತ್ತಮ ಕೀರ್ತಿವಂತನಾಗುತ್ತಾನೆ. ಮೂರ್ಖನು ಪಂಡಿತನಾಗುತ್ತಾನೆ.

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ
ನಾರದ ನಾರಾಯಣ ಸಂವಾದದಲ್ಲಿ ರಾಧಾಸ್ತೋತ್ರದಲ್ಲಿ
ತೊಂಭತ್ತೆರಡನೆಯ ಅಧ್ಯಾಯವು ಸಮಾಪ್ತವು.



## ತೊಂಭತ್ತೆರಡನೆಯ ಅಧ್ಯಾಯದ ಸಾರಾಂಶ.

ಶ್ರೀ ಕೃಷ್ಣನಿಂದ ಪ್ರೇಷಿತನಾದ ಉದ್ಧವನು ವೃಂದಾವನದ ಕಡೆಗೆ ಹೊರಟು, ದಾರಿಯಲ್ಲಿ ಶುಭ ಶಕುನಗಳನ್ನು ಕಂಡು ಉಲ್ಲಾಸಗೊಂಡು, ಮಂಗಳಕರವಾದ ವೃಂದಾವನವನ್ನು ಹೊಕ್ಕನು. ಅಲ್ಲಿ ವಿಶ್ವಕರ್ಮನ ಸುಂದರ ಸೃಷ್ಟಿಯನ್ನೆಲ್ಲ ನೋಡಿ ಹರ್ಷಿತನಾಗಿ ರಾಧಾಮಂದಿರಕ್ಕೆ ಪ್ರವೇಶಿಸಿ, ಚಿಂತಾಕ್ರಾಂತಳಾದ ರಾಧೆಯನ್ನು ವಿಧವಿಧವಾಗಿ ಸ್ತುತಿಸಿದನು, ಇಲ್ಲಿರುವ ರಾಧಾ ಸ್ತೋತ್ರವನ್ನು ಭಕ್ತಿಭಾವದಿಂದ ಪಠಿಸುವವರ ಸಕಲ ಪಾಪಗಳೂ ಪರಿಹಾರವಾಗಿ ಅವರ ಇಷ್ಟಾರ್ಥವು ಸಿದ್ಧಿಸುವುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ತ್ರಿನವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಉದ್ಧವಸ್ತವನಂ ಶ್ರುತ್ವಾ ಚೇತನಾಂ ಪ್ರಾಪ್ಯ ರಾಧಿಕಾ ।
ವಿಲೋಕ್ಯ ಕೃಷ್ಣಾಕಾರಂ ಚ ತಮುವಾಚ ಶುಚಾನ್ವಿತಾ || ೧ ||

|| ಶ್ರೀ ರಾಧಿಕೋವಾಚ ||

ಕಿನ್ನಾಮ ಭವತೋ ವತ್ಸ ಕೇನ ವಾ ಪ್ರೇರಿತೋ ಭವಾನ್ ।
ಆಗತೋ ವಾ ಕುತ ಇತಿ ಬ್ರೂಹಿ ಮಾಂ ಕೇನ ಹೇತುನಾ || ೨ ||

ಕೃಷ್ಣಾಕೃತಿಸ್ತ್ವಂ ಸರ್ವಾಂಗೈರ್ಮನ್ಯೇ ತ್ವಾಂ ಕೃಷ್ಣಪಾರ್ಷದಮ್ ।
ಕೃಷ್ಣಸ್ಯ ಕುಶಲಂ ಬ್ರೂಹಿ ಬಲದೇವಸ್ಯ ಸಾಂಪ್ರತಮ್ || ೩ ||

---

### ತೊಂಭತ್ತಮೂರನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ:— ಉದ್ಧವನು ಮಾಡಿದ ಸ್ತೋತ್ರವನ್ನು ಕೇಳಿ ರಾಧಿಕೆಯು ಚೈತನ್ಯವನ್ನು ಹೊಂದಿದವಳಾಗಿ ಕೃಷ್ಣನಂತೆ ಆಕಾರವುಳ್ಳ ಉದ್ಧವನನ್ನು ನೋಡಿ ದುಃಖದಿಂದ ಕೂಡಿದವಳಾಗಿ ಅವನನ್ನುಕುರಿತಿಂತೆಂದಳು.

೨. ಶ್ರೀ ರಾಧಿಕೆಯು ಹೇಳುತ್ತಾಳೆ:— ಎಲೈ ವತ್ಸನೇ! ನಿನ್ನ ಹೆಸರೇನು? ನೀನು ಯಾರಿಂದ ಕಳುಹಿಸಲ್ಪಟ್ಟಿರುವೆ? ಎಲ್ಲಿಂದ ನೀನು ಬಂದಿರುವೆ? ಯಾವ ಕಾರಣದಿಂದ ಬಂದಿರುವೆ? ಇವೆಲ್ಲವನ್ನೂ ನನಗೆ ಹೇಳುವವನಾಗು.

೩. ನೀನು ಸಕಲಾವಯವಗಳಿಂದಲೂ ಕೃಷ್ಣನಂತೆ ಆಕಾರವುಳ್ಳವನಾಗಿರುವೆ ಯಾದುದರಿಂದ ನೀನು ಕೃಷ್ಣನ ದಾಸನೆಂದು ತಿಳಿಯುತ್ತೇನೆ. ಪ್ರಕೃತ ಕೃಷ್ಣನ ಮತ್ತು ಬಲರಾಮನ ಕ್ಷೇಮವಾರ್ತೆಯನ್ನು ಹೇಳುವವನಾಗು.

ನಂದಸ್ತಿಷ್ಠತಿ ತತ್ರೈವ ಹೇತುನಾ ಕೇನ ತದ್ವದ ।
ಸಮಾಯಾಸ್ಯತಿ ಗೋವಿಂದೋ ರಮ್ಯಂ ವೃಂದಾವನಂ ವನಮ್ ॥ ೪ ॥

ಪುನರ್ದ್ರಕ್ಷ್ಯಾಮಿ ತಸ್ಯೈವ ಪೂರ್ಣಚಂದ್ರಮುಖಂ ಶುಭಮ್ ।
ಪುನಃ ಕ್ರೀಡಾಂ ಕರಿಷ್ಯಾಮಿ ತೇನಾಹಂ ರಾಸಮಂಡಲೇ ॥ ೫ ॥

ಜಲೇ ಚ ವಿಹರಿಷ್ಯಾಮಿ ಪುನರ್ವಾ ಸಖಿಭಿಃ ಸಹ ।
ಶ್ರೀನಂದನಂದನಾಂಗೇ ಚ ಪುನರ್ದಾಸ್ಯಾಮಿ ಚಂದನಮ್ ॥ ೬ ॥

॥ ಉದ್ಧವ ಉವಾಚ ॥

ಉದ್ಧವೇತ್ಯಭಿಧಾನಂ ಮೇ ಕ್ಷತ್ರಿಯೋಽಹಂ ವರಾನನೇ ।
ಪ್ರೇಷಿತಃ ಶುಭವಾರ್ತಾರ್ಥಂ ಕೃಷ್ಣೇನ ಪರಮಾತ್ಮನಾ ॥ ೭ ॥

ತವಾಂತಿಕಂ ಸಮಾಯಾತಃ ಪಾರ್ಷದೋಽಹಂ ಹರೇರಪಿ ।
ಕೃಷ್ಣಸ್ಯ ಬಲದೇವಸ್ಯ ಶಿವಂ ನಂದಸ್ಯ ಸಾಂಪ್ರತಮ್ ॥ ೮ ॥

---

೪. ನಂದನು ಮಥುರಾಪಟ್ಟಣದಲ್ಲಿಯೇ ಯಾವಕಾರಣದಿಂದಿರುತ್ತಾನೆ? ಹೇಳು. ಗೋವಿಂದನು ಮತ್ತೆ ಈ ಮನೋಹರವಾದ ವೃಂದಾವನಕ್ಕೆ ಬರುತ್ತಾನೆಯೇ? ಹೇಳು.

೫. ನಾನು ಮತ್ತೆ ಆ ಗೋವಿಂದನ, ಹುಣ್ಣಿಮೆಯ ಚಂದ್ರನಂತೆ ಪ್ರಕಾಶಮಾನವೂ ಮಂಗಳಕರವೂ ಆದ ಮುಖವನ್ನು ನೋಡುವೆನೇ? ನಾನು ಅವನೊಡನೆ ರಾಸಮಂಡಲದಲ್ಲಿ ಆಟವನ್ನಾಡುವೆನೇ?

೬. ಈ ಸಖಿಯರಿಂದ ಕೂಡಿಕೊಂಡವಳಾಗಿ ಮತ್ತೆ ನೀರಿನಲ್ಲಿ ಆಡವಾಡುವೆನೇ? ಮತ್ತೊಮ್ಮೆ ಶ್ರೀ ನಂದಕುಮಾರನಾದ ಗೋವಿಂದನ ಮೈಗೆ ಗಂಧವನ್ನು ಹಚ್ಚುವೆನೇ?

೭. ಉದ್ಧವನು ಹೇಳುತ್ತಾನೆ:— ಎಲೈ ಉತ್ತಮವಾದ ಮುಖವುಳ್ಳವಳೇ! ನನ್ನ ಹೆಸರು ಉದ್ಧವನೆಂದು. ನಾನು ಕ್ಷತ್ರಿಯನು. ಶುಭವಾರ್ತೆಯನ್ನು ತಿಳಿಸುವುದಕ್ಕೋಸ್ಕರವಾಗಿ ಪರಮಾತ್ಮನಾದ ಕೃಷ್ಣನಿಂದ ಕಳುಹಿಸಲ್ಪಟ್ಟವನಾಗಿದ್ದೇನೆ.

೮. ನಾನು ಆ ಹರಿಯ ಭಕ್ತನು. ನಿನ್ನ ಸಮೀಪಕ್ಕೆ ಬಂದಿರುವೆನು. ಪ್ರಕೃತದಲ್ಲಿ ಕೃಷ್ಣನಿಗೂ ಬಲರಾಮನಿಗೂ ನಂದನಿಗೂ ಮಂಗಳವು.

|| ಶ್ರೀ ರಾಧಿಕೋವಾಚ ||

ಅಸ್ತಿ ತದ್ಯಮುನಾಕೂಲಂ ಸುಗಂಧಿ ಪವನೋಽಸ್ತಿ ಸಃ |
ತಸ್ಯ ಕೇಲೀಕದಂಬಾನಾಂ ಮೂಲಮಸ್ತ್ಯೇವ ಸಾಂಪ್ರತಮ್ || ೯ ||

ಪುಣ್ಯಂ ವೃಂದಾವನಂ ರಮ್ಯಂ ತದ್ವಿದ್ಯಮಾನಭೀಪ್ಸಿತಮ್ |
ಪುಂಸ್ಕೋಕಿಲಾನಾಂ ವಿರುತಂ ತಲ್ಪಂ ಚಂದನಚರ್ಚಿತಮ್ || ೧೦ ||

ಚತುರ್ವಿಧಂ ಚ ಭೋಜ್ಯಂ ಚ ಮಧುಪಾನಂ ಚ ಸುಂದರಮ್ |
ದುರಂತೋ ದುಃಖದೋಽಪ್ಯಸ್ತಿ ಪಾಪಿಷ್ಠೋ ಮನ್ಮಥಸ್ತಥಾ || ೧೧ ||

ತೇ ಚ ರತ್ನಪ್ರದೀಪಾಶ್ಚ ಜ್ವಲಂತಿ ರಾಸಮಂಡಲೇ |
ಮಣೀಂದ್ರಸಾರನಿರ್ಮಾಣಮಸ್ತ್ಯೇವಂ ರತಿಮಂದಿರಮ್ || ೧೨ ||

ಗೋಪಾಂಗನಾಗಣೋಽಸ್ತ್ಯೇವ ಪೂರ್ಣಚಂದ್ರೋಽಸ್ತಿ ಶೋಭಿತಃ |
ಸುಗಂಧಿಪುಷ್ಪರಚಿತಂ ತಲ್ಪಂ ಚಂದನಚರ್ಚಿತಮ್ || ೧೩ ||

---

೯. ಶ್ರೀ ರಾಧಿಕೆಯು ಹೇಳುತ್ತಾಳೆ:— ಆ ಯಮುನಾನದಿಯ ದಡವೇ ಇದೆ. ಅದೇ ಸುವಾಸನೆಯಾದ ಗಾಳಿಯೂ ಇದೆ. ಈಗಲೂ ಆ ಕೃಷ್ಣನ ಆಟದ ಸ್ಥಳವಾದ ಕಾಡುಕದಂಬ ಮರದ ಬುಡವೂ ಕೂಡ ಇದೆ.

೧೦. ಪುಣ್ಯಕರವೂ ಮನೋಹರವೂ ಆದ ವೃಂದಾವನವೂ ಆತನಿಗೆ ಬೇಕಾದ ಸಾಮಗ್ರಿಯೂ ಇವೆ. ಗಂಡು ಕೋಗಿಲೆಗಳ ಧ್ವನಿಯೂ, ಗಂಧದಿಂದ ಸುವಾಸನೆಯಾದ ಹಾಸಿಗೆಯೂ ಇದೆ.

೧೧. ನಾಲ್ಕುಬಗೆಯಾದ ಅನ್ನವೂ ಸುಂದರವಾದ ಮದ್ಯಪಾನವೂ ಇದೆ. ಮತ್ತು ಹಾಗೆಯೇ ನಾಶವಿಲ್ಲದವನೂ, ದುಃಖವನ್ನು ಕೊಡುವವನೂ, ಪಾಪಿಯೂ ಆದ ಮನ್ಮಥನೂ ಇರುವನು.

೧೨. ರಾಸಮಂಡಲದಲ್ಲಿ ಆ ರತ್ನಮಯವಾದ ಪ್ರಕಾಶಮಾನವಾದ ದೀಪಗಳು ಉರಿಯುತ್ತಿವೆ. ಶ್ರೇಷ್ಠವಾದ ಮಣಿಗಳ ಸಾರದಿಂದ ಮಾಡಿದ ರತಿಕ್ರೀಡೆಯ ಮನೆಯು ಇದ್ದೇಇದೆ.

೧೩. ಗೋಪಸ್ತ್ರೀಯರ ಗುಂಪು ಕೂಡ ಇದ್ದೇಇದೆ. ಸಂಪೂರ್ಣನಾದ ಚಂದ್ರನೂ ಹೊಳೆಯುತ್ತಲಿದ್ದಾನೆ. ಸುವಾಸನೆಯಿಂದ ಕೂಡಿದ, ಹೂವಿನಿಂದ ಮಾಡಿದ, ಗಂಧದಿಂದ ಪರಿಷ್ಕರಿಸಲ್ಪಟ್ಟ ಹಾಸಿಗೆಯೂ ಇದೆ.

ತಾಂಬೂಲಂ ರತಿಭೋಗಾರ್ಹಂ ಕರ್ಪೂರಾದಿ ಸುಸಂಸ್ಕೃತವಕ್ |
ಸುಗಂಧಿಮಾಲತೀಮಾಲ್ಯಂ ಶ್ವೇತಚಾಮರದರ್ಪಣಮ್ || ೧೪ ||

ಮುಕ್ತಾಮಾಣಿಕ್ಯಸಂಸಕ್ತಹರಿಹಾರಮನೋಹರಮ್ |
ನಾನೋಪಕಾನನಂ ರಮ್ಯಂ ರಮ್ಯಕ್ರೀಡಾಸರೋವರಮ್ || ೧೫ ||

ಸುಗಂಧಿಪುಷ್ಪೋದ್ಯಾನಂ ಚ ಪದ್ಮಶ್ರೇಣೀಮನೋಹರಮ್ |
ಅಸ್ತ್ಯೇವಂ ಸರ್ವವಿಭವಃ ಪ್ರಾಣನಾಥಃ ಕುತೋ ಮಮ || ೧೬ ||

ಹಾ ಕೃಷ್ಣ ಹಾ ರಮಾನಾಥ ಕ್ವಾಸಿ ಮೇ ಪ್ರಾಣವಲ್ಲಭ |
ಕ್ವ ವಾಪರಾಧೋ ದಾಸ್ಯಾಶ್ಚ ದಾಸೀದೋಷಃ ಪದೇಪದೇ || ೧೭ ||

ಇತ್ಯೇವಮುಕ್ತ್ವಾ ಸಾ ದೇವೀ ಪುನರ್ಮೂರ್ಛಾಮವಾಪ ಸಾ |
ಚೇತನಾಂ ಕಾರಯಾಮಾಸ ಪುನರೇವ ಸ ಉದ್ಧವಃ |
ತಾಂ ದೃಷ್ಟ್ವಾ ಪರಮಾಶ್ಚರ್ಯಂ ಮೇನೇ ಕ್ಷತ್ರಿಯಪುಂಗವಃ || ೧೮ ||

---

೧೪. ರತಿಭೋಗಕ್ಕೆ ಯೋಗ್ಯವಾದ ಪಚ್ಚಕರ್ಪೂರವೇ ಮುಂತಾದವುಗಳಿಂದ ಪರಿಷ್ಕರಿಸಿರುವ ತಾಂಬೂಲವೂ, ಸುವಾಸನೆಯಿಂದ ಕೂಡಿದ ಮಾಲತೀ ಹೂವಿನ ಮಾಲಿಕೆಯೂ ಇದೆ ಬಿಳಿಯ ಚಾಮರಗಳೂ ಕನ್ನಡಿಯೂ ಇವೆ.

೧೫. ಮುತ್ತು ಮಾಣಿಕ್ಯಗಳಿಂದ ಕೂಡಿದ ಮನೋಹರವಾದ ಹಾರದಿಂದ ರಮಣೀಯವಾದ ಅನೇಕಬಗೆಯ ಉಪವನಗಳೂ ಮನೋಹರಗಳಾಗಿವೆ. ರಮಣೀಯವಾದ ಆಟದ ಸರೋವರಗಳೂ ಇವೆ.

೧೬. ಸುವಾಸನೆಯಿಂದ ಕೂಡಿದ ಹೂವಿನ ತೋಟವೂ ಇದೆ. ಕಮಲದ ಮನೋಹರವಾದ ಸಾಲು ಇದೆ. ಈಪ್ರಕಾರವಾಗಿ ಎಲ್ಲ ವೈಭವವೂ ಇದೆ. ನನ್ನ ಪ್ರಾಣಪ್ರಿಯನಾದರೋ ಎಲ್ಲಿರುವನೋ ತಿಳಿಯದು.

೧೭. ಹಾ ಕೃಷ್ಣನೇ! ಹಾ ರಮೆಯ ಪತಿಯೇ! ನನ್ನ ಪ್ರಾಣಪ್ರಿಯನೇ! ಎಲ್ಲಿರುವೆ? ಈ ದಾಸಿಯಾದದೋ ಯಾವಾಗ ಯಾವವಿಧವಾದ ತಪ್ಪನ್ನು ಮಾಡಿರುವಳು? ಅಲ್ಲದೆ ದಾಸಿಯಾದವಳಲ್ಲಿ ಮತ್ತೆಮತ್ತೆ ತಪ್ಪುಗಳಿದ್ದೇ ಇರುತ್ತವೆ.

೧೮. ದೇವಿಯಾದ ಆ ರಾಧೆಯು ಹೀಗೆ ಹೇಳಿ ಮತ್ತೆ ಮೂರ್ಛೆಯನ್ನು ಹೊಂದಿದಳು. ಉದ್ಧವನು ಮತ್ತೆ ಅವಳಿಗೆ ಪ್ರಜ್ಞೆಬರುವಂತೆ ಮಾಡಿಸಿದನು. ಕ್ಷತ್ರಿಯಶ್ರೇಷ್ಠನಾದ ಆ ಉದ್ಧವನು ಅವಳನ್ನು ನೋಡಿ ಪರಮಾಶ್ಚರ್ಯದಿಂದ ಕೂಡಿದವನಾದನು.

ಸಖೀಭಿಃ ಸಪ್ತಭಿಃ ಶಶ್ವತ್ಸೇವಿತಾಂ ಶ್ವೇತಚಾಮರೈಃ ।
ಗೋಪೀನಾಂ ಚ ತ್ರಿಲಕ್ಷೈಶ್ಚ ಸುಪ್ರಿಯೈಃ ಪ್ರಿಯಸೇವಿತಾಮ್ ॥ ೧೯ ॥

ದಿವಾನಿಶಂ ವೇಷ್ಟಿತಾಂ ಚ ಗೋಪೀನಾಂ ಶತಕೋಟಿಭಿಃ ।
ಕಾಚಿತ್ಕಜ್ಜಲಹಸ್ತಾ ಚ ಕಾಚಿನ್ಮಾಲ್ಯಧರಾಪರಾ ॥ ೨೦ ॥

ಕಾಚಿತ್ಸಿಂದೂರಹಸ್ತಾ ಚ ಕಾಚಿತ್ಗೋರೋಚನಾಕರಾ ।
ಕಾಚಿತ್ ಚಂದನಪಾತ್ರಂ ಚ ಹಸ್ತೇ ಕೃತ್ವಾ ಚ ತಿಷ್ಠತಿ ॥ ೨೧ ॥

ಕಾಚಿದ್ದರ್ಪಣಹಸ್ತಾ ಚ ಕಾಚಿತ್ಕುಂಕುಮವಾಹಿಕಾ ।
ಕಸ್ತೂರೀಪಾತ್ರಮಿಷ್ಟಂ ಚ ಕಾಚಿದ್ವಹತಿ ತತ್ರ ವೈ ॥ ೨೨ ॥

ಕಾಚಿಚ್ಚಂಪಕಪಾತ್ರಂ ಚ ಕರೇ ಧೃತ್ವಾ ಚ ತಿಷ್ಠತಿ ।
ಮಧುಭಿರ್ಮಧುರೈಃ ಪೂರ್ಣಪಾತ್ರಂ ಧೃತ್ವಾ ಶುಚಾನ್ವಿತಾ ॥ ೨೩ ॥

---

೧೯. ಏಳುಮಂದಿ ಸಖಿಯರಿಂದ ಬಿಳಿಯ ಚಾಮರಗಳಿಂದ ಯಾವಾಗಲೂ ಸೇವಿಸಲ್ಪಡುತ್ತಿರುವ ತನ್ನ ಪ್ರೀತಿಗೆ ಪಾತ್ರರಾದ ಮೂರುಲಕ್ಷ ಗೋಪಿಕೆಯರಿಂದ ಪ್ರೀತಿ ಪೂರ್ವಕವಾಗಿ ಸೇವಿಸಲ್ಪಡುತ್ತಿರುವ ರಾಧಿಕೆಯನ್ನು ನೋಡಿ ಆಶ್ಚರ್ಯಗೊಂಡನು.

೨೦. ಆ ರಾಧೆಯು ಹಗಲು ರಾತ್ರಿಯೂ ಒಂದುನೂರುಕೋಟಿ ಗೋಪಿಯರಿಂದ ಸುತ್ತುವರಿಯಲ್ಪಟ್ಟಿರುವಳು. ಒಬ್ಬಳು ಕಾಡಿಗೆಯನ್ನು ಕೈಯಲ್ಲಿ ಹಿಡಿದು ನಿಂತಿರುವಳು. ಮತ್ತೋರ್ವಳು ಹೂವಿನಮಾಲಿಕೆಯನ್ನು ಹಿಡಿದುಕೊಂಡು ನಿಂತಿರುವಳು.

೨೧. ಒಬ್ಬಳು ಸಿಂದೂರ (ಚಂದ್ರ) ವನ್ನು ಕೈಯಲ್ಲಿ ಹಿಡಿದು ನಿಂತಿರುವಳು. ಮತ್ತೊಬ್ಬಳು ಗೋರೋಚನವನ್ನು ಕೈಯಲ್ಲಿ ಹಿಡಿದು ನಿಂತಿರುವಳು. ಇನ್ನೊಬ್ಬಳು ಗಂಧದ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ನಿಂತಿರುವಳು.

೨೨. ಒಬ್ಬಳು ಕನ್ನಡಿಯನ್ನು ಕೈಯಲ್ಲಿ ಹಿಡಿದಿರುವಳು. ಮತ್ತೊಬ್ಬಳು ಕುಂಕುಮವನ್ನು ಹಿಡಿದು ನಿಂದಿರುವಳು. ಇನ್ನೊಬ್ಬಳು ಹಿತಕರವಾದ ಕಸ್ತೂರಿಯ ಪಾತ್ರೆಯನ್ನು ಹಿಡಿದಿರುವಳು.

೨೩. ಒಬ್ಬಳು ಸಂಪಿಗೆಯ ಹೂವಿನ ಪಾತ್ರೆಯನ್ನು ಕೈಯಲ್ಲಿ ಧರಿಸಿಕೊಂಡು ನಿಂತಿರುವಳು. ಮತ್ತೋರ್ವಳು ರುಚಿಕರವಾದ ಮಧುಗಳಿಂದ ತುಂಬಿದ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ದುಃಖದಿಂದ ಕೂಡಿದವಳಾಗಿ ನಿಂತಿರುವಳು.

ಕಾಚಿತ್ಸುಗಂಧಿ ತೈಲಂ ಚ ಗೃಹೀತ್ವಾ ಪರಿತಿಷ್ಠತಿ ।
ಕಾಚಿದ್ವಹತಿ ತಾಂಬೂಲಂ ಕರ್ಪೂರಾದಿಸುವಾಸಿತಮ್ ॥ ೨೪ ॥

ಕಾಚಿದ್ವಾಸಿತಮಿಷ್ಟಂ ಚ ಜಲಂ ಧೃತ್ವಾ ಚ ತಿಷ್ಠತಿ ।
ಕ್ರೀಡಾಪುತ್ತಲಿಕಾಂ ಕಾಚಿಚ್ಚಿತ್ರಾಢ್ಯಾಂ ಪರಿರಕ್ಷತಿ ॥ ೨೫ ॥

ಕಾಚಿದ್ವಹತಿ ಕಂದುಕಂ ಕಾಚಿಚ್ಚ ರತ್ನಭೂಷಣಮ್ ।
ವಹ್ನಿಶುದ್ಧಾಂಶುಕಂ ಕಾಚಿದಮೂಲ್ಯಂ ಪರಿರಕ್ಷತಿ ॥ ೨೬ ॥

ಕಾಚಿದ್ಭಕ್ಷ್ಯೋಪಹಾರಂ ಚ ಗೃಹೀತ್ವಾ ಪರಿವರ್ತತೇ ।
ಕಾಚಿಚ್ಚ ಕೇಶವೇಶಾರ್ಥಂ ಕರೋತಿ ಮಾಲ್ಯಮೀಪ್ಸಿತಮ್ ॥ ೨೭ ॥

ಕಾಚಿತ್ಕಂಕತಿಕಾಂ ಧೃತ್ವಾ ಪುರತಃ ಪರಿತಿಷ್ಠತಿ ।
ಕಾಚಿದ್ಯಾವಕಹಸ್ತಾ ಚ ಕಾಚಿದ್ಧಾತ್ರೀರಸಂ ಮುದಾ ॥ ೨೮ ॥

---

೨೪. ಒಬ್ಬಳು ಸುವಾಸನೆಯಾಗಿರುವ ತೈಲವನ್ನು ಹಿಡಿದು ನಿಂತಿರುವಳು. ಒಬ್ಬಳು ಪಚ್ಚಕರ್ಪೂರ ಮುಂತಾದ ಸಾಮಗ್ರಿಗಳಿಂದ ಸುವಾಸನೆಯಾಗಿರುವ ತಾಂಬೂಲವನ್ನು ಹಿಡಿದುಕೊಂಡಿರುವಳು.

೨೫. ಒಬ್ಬಳು ಸುವಾಸನೆಯಾದ ಮತ್ತು ರುಚಿಕರವಾದ ನೀರಿನ ಪಾತ್ರೆಯನ್ನು ಹಿಡಿದುಕೊಂಡು ನಿಂತಿರುವಳು. ಮತ್ತೊಬ್ಬಳು ಅನೇಕ ಚಿತ್ರಕೆಲಸಗಳಿಂದ ಪ್ರಕಾಶವಾದ ಆಟದ ಗೊಂಬೆಯನ್ನು ರಕ್ಷಿಸುತ್ತಿರುವಳು.

೨೬. ಒಬ್ಬಳು ಚೆಂಡನ್ನು ಹಿಡಿದು ನಿಂತಿರುವಳು. ಮತ್ತೊಬ್ಬಳು ರತ್ನಮಯವಾದ ಆಭರಣಗಳನ್ನು ಹಿಡಿದು ನಿಂತಿರುವಳು. ಒಬ್ಬಳು ಬೆಲೆಬಾಳುವ ಮತ್ತು ಬೆಂಕಿಯಂತೆ ಪರಿಶುದ್ಧವಾದ ಬಟ್ಟೆಯನ್ನು ಕಾಪಾಡುತ್ತಿರುವಳು.

೨೭. ಒಬ್ಬಳು ಭಕ್ಷ್ಯಗಳ ಆಹಾರಗಳನ್ನು ಹಿಡಿದುಕೊಂಡು ಸಮೀಪದಲ್ಲಿರುವಳು. ಮತ್ತೊಬ್ಬಳು ತುರುಬಿಗೆ ಮುಡಿಸುವ ಇಷ್ಟವಾದ ಹೂಮಾಲಿಕೆಯನ್ನು ಮಾಡುತ್ತಿರುವಳು.

೨೮. ಇನ್ನೊಬ್ಬಳು ಬಾಚಣಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಮುಂಭಾಗದಲ್ಲಿ ನಿಂತುಕೊಂಡಿರುವಳು. ಮತ್ತೊಬ್ಬಳು ಅರಗಿನ ರಸವನ್ನು ಹಿಡಿದಿರುವಳು. ಮಗದೊಬ್ಬಳು ನೆಲ್ಲಿಯ ಹಣ್ಣಿನ ರಸವನ್ನು ಹಿಡಿದು ಆನಂದದಿಂದಿರುವಳು.

ಪೂರತೋಽಪಿ ವಹತ್ಯೇವಂ ಭೀತಾ ಚ ಪರಿತಿಷ್ಠತಿ ।
ಕಾಚಿದ್ಭೀತಾ ಭಿಯಾ ಸ್ತೌತಿ ಕಾಚಿದ್ರೋದಿತಿ ಶೋಕತಃ ॥ ೨೯ ॥

ಕಾಚಿತ್ತಾಂ ಬೋಧಯತ್ಯೇವ ವಿದಗ್ಧಾ ವಿರಹಾತುರಾಮ್ ।
ಕಾಚಿದುತ್ತಾಪತಪ್ತಾ ಚ ಸ್ನಿಗ್ಧತಲ್ಪೇ ಮನೋಹರೇ ।
ಸ್ಥಾಪಯೇದ್ದಾಹಪೂರಾರ್ಥಂ ಸ್ನಿಗ್ಧ ಪದ್ಮದಲೇ ಶುಭೇ ॥ ೩೦ ॥

ಏವಂಭೂತಾಂ ಚ ತಾಂ ದೃಷ್ಟ್ವಾ ಚೋವಾಚ ಪುನರುದ್ಧವಃ ।
ಸುಪ್ರಿಯಂ ಕರ್ಣಪೀಯೂಷಂ ವಿನಯೇನ ಚ ಭೀತವತ್ ॥ ೩೧ ॥

॥ ಉದ್ಧವ ಉವಾಚ ॥

ಜಾನೇ ತ್ವಾಂ ದೇವದೇವೀಶಾಂ ಸುಸ್ನಿಗ್ಧಾಂ ಸಿದ್ಧಯೋಗಿನೀಮ್ ॥ ೩೨ ॥

---

೨೯. ಈರೀತಿಯಾಗಿ ದೂರದಿಂದಲೇ ಭಯದಿಂದ ಕೂಡಿ ಒಬ್ಬಳು ಸೇವಾ ಸಾಮಗ್ರಿಯನ್ನು ಧರಿಸಿರುವಳು. ಒಬ್ಬಳು ಭಯಗೊಂಡವಳಾಗಿ ಭಯದಿಂದಲೇ ಸ್ತೋತ್ರಮಾಡುತ್ತಲಿರುವಳು. ಮತ್ತೊಬ್ಬಳು ದುಃಖದಿಂದ ಅಳುತ್ತಿರುವಳು.

೩೦. ಬುದ್ಧಿವಂತಳಾದ ಒಬ್ಬಳು ವಿರಹದುಃಖದಿಂದ ಸಂತಪ್ತಳಾದ ಆ ರಾಧಿಕೆಯನ್ನು ಸಮಾಧಾನಪಡಿಸುವಳು. ಹೆಚ್ಚಾದ ಸಂತಾಪದಿಂದ ಸಂಕಟಪಡುತ್ತಿರುವ ರಾಧಿಕೆಯನ್ನು ಒಬ್ಬಳು ಗೆಳತಿಯು ಆ ಸಂತಾಪವನ್ನು ಹೋಗಲಾಡಿಸುವುದಕ್ಕಾಗಿ ಮನೋಹರವಾದ ಮೃದುವಾದ ತಾವರೆಯೆಲೆಗಳಿಂದ ಮಾಡಿದ ಮೆತ್ತಗಿರುವ ಹಾಸಿಗೆಯಮೇಲೆ ಮಲಗಿಸುವಳು,

೩೧- ಈರೀತಿಯಲ್ಲಿರುವ ಆ ರಾಧಿಕೆಯನ್ನು ನೋಡಿ ಉದ್ಧವನು ವಿನಯದಿಂದ ಕೂಡಿದವನಾಗಿಯೂ, ಭಯಗೊಂಡವನಾಗಿಯೂ, ರಾಧಿಕೆಯನ್ನು ಕುರಿತು ಕಿವಿಗೆ ಇಂಪಾಗಿಯೂ, ಹಿತವಾಗಿಯೂ ಇರುವ ಮಾತನ್ನು ಮತ್ತೆ ಹೇಳತೊಡಗಿದನು.

೩೨–೩೪. ಉದ್ಧವನು ಹೇಳುತ್ತಾನೆ:—ನಿನ್ನನ್ನು ದೇವದೇವನಾದ ಪರಮಾತ್ಮನಿಗೂ ಒಡೆಯಳೆಂದೂ, ಸ್ನೇಹಯುಕ್ತಳೆಂದೂ, ಸಿದ್ಧಯೋಗಿನಿಯೆಂದೂ, ಸಮಸ್ತ

ಸರ್ವಶಕ್ತಿಸ್ವರೂಪಾಂ ಚ ಮೂಲಪ್ರಕೃತಿಮೀಶ್ವರೀಮ್ ।
ಶ್ರೀದಾಮಶಾಪಾದ್ಧರಣೀಂ ಪ್ರಾಪ್ತಾಂ ಗೋಲೋಕಕಾಮಿನೀಮ್ ॥ ೩೩ ॥

ಕೃಷ್ಣಪ್ರಾಣಾಧಿಕಾಂ ದೇವೀಂ ತದ್ವಕ್ಷಃಸ್ಥಲವಾಸಿನೀಮ್ ।
ಸರ್ವಶಕ್ತಿಸ್ವರೂಪಾಂ ಚ ಮೂಲಪ್ರಕೃತಿಮೀಶ್ವರೀಮ್ ॥ ೩೪ ॥

ಶೃಣು ದೇವಿ ಪ್ರವಕ್ಷ್ಯಾಮಿ ಶುಭವಾರ್ತಾಮಭೀಪ್ಸಿತಾಮ್ ।
ಸುಸ್ಥಿರಂ ಸಖಿಭಿಃ ಸಾರ್ಧಂ ಹೃದಯೆಸ್ನಿಗ್ಧಕಾರಿಣೀಮ್ ॥ ೩೫ ॥

ದುಃಖದಾವಾಗ್ನಿದಗ್ಧಾಯಾಃ ಸುಧಾವರ್ಷಣರೂಪಿಣೀಮ್ ।
ವಿರಹವ್ಯಾಧಿಯುಕ್ತಾಯಾ ರಸಾಯನಸಮಾಂ ಶುಭಾಮ್ ॥ ೩೬ ॥

ತತ್ರ ತಿಷ್ಠತಿ ನಂದೋಽಯಂ ಸಾನಂದೋ ಮುದಿತಃ ಸದಾ ।
ನಿಮಂತ್ರಿತಶ್ಚ ವಸುನಾ ಕೃಷ್ಣೋಪನಯನಾವಧಿ ॥ ೩೭ ॥

ಗೃಹೀತ್ವಾ ಸಬಲಂ ಕೃಷ್ಣಂ ಸಾಂಗೇ ಮಂಗಲಕರ್ಮಣಿ ।
ಸುನಂದಃ ಪರಮಾನಂದೋ ಮುದಾ ಯಾಸ್ಯತಿ ಗೋಕುಲಮ್ ॥ ೩೮ ॥

---

ವಾದ ಶಕ್ತಿಸ್ವರೂಪಳೆಂದೂ, ಮೂಲಪ್ರಕೃತಿಯೆಂದೂ, ಒಡೆಯಳೆಂದೂ, ಶ್ರೀದಾಮನ ಶಾಪದಿಂದ ಭೂಲೋಕದಲ್ಲಿ ಅವತಾರಮಾಡಿರುವವಳೆಂದೂ, ಗೋಲೋಕದಲ್ಲಿರುವ ಕಾಮಿನಿಯೆಂದೂ, ಶ್ರೀ ಕೃಷ್ಣನ ಪ್ರಾಣಪ್ರಿಯಳೆಂದೂ, ಆ ಕೃಷ್ಣನ ಹೃದಯದಲ್ಲಿ ವಾಸಮಾಡುತ್ತಿರುವ ದೇವಿಯೆಂದೂ ನಾನು ತಿಳಿದುಕೊಂಡಿರುವೆನು.

೩೫–೩೬. ಎಲೈ ದೇವಿಯೇ! ದುಃಖವೆಂಬ ಕಾಳ್ಕಿಚ್ಚಿನಿಂದ ಸುಡಲ್ಪಟ್ಟಿರುವ ನಿನಗೆ ಮನಸ್ಸಿಗೆ ಹರ್ಷವನ್ನುಂಟುಮಾಡುವ ವಿರಹವೆಂಬ ರೋಗದಿಂದ ಕೂಡಿದವಳಿಗೆ ಅಮೃತದ ಮಳೆಯಂತಿರುವ ರಸಾಯನಕ್ಕೆ ಸಮನಾದ ನಿನಗೆ ಇಷ್ಟವಾದ ಶುಭ ಸಮಾಚಾರವನ್ನು ಹೇಳುತ್ತೇನೆ. ಸಮಾಧಾನವಾದ ಮನಸ್ಸಿನಿಂದ ಕೂಡಿದವಳಾಗಿ ಸಖಿಯರೊಂದಿಗೆ ಕೇಳುವವಳಾಗು.

೩೭–೩೮. ನಂದನು ಯಾವಾಗಲೂ ಸಂತೋಷಗೊಂಡು ಅಲ್ಲಿಯೇ ಇರುತ್ತಾನೆ. ಕೃಷ್ಣನ ಉಪನಯನಕ್ಕಾಗಿ ವಸುದೇವನಿಂದ ಕರೆಯಲ್ಪಟ್ಟವನಾಗಿದ್ದಾನೆ. ಪರಮಾನಂದದಿಂದಿರುವ ನಂದನು ಬಲರಾಮಸಹಿತನಾದ ಕೃಷ್ಣನನ್ನು ಮಂಗಲ ಕಾರ್ಯವು ನಡೆಯುವ ಸಮಯದಲ್ಲಿ ಪ್ರೀತಿಯಿಂದ ಗೋಕುಲಕ್ಕೆ ಕರೆತರುವನು.

ಆಗತ್ಯ ಕೃಷ್ಣೋ ಮುದಿತಃ ಪ್ರಣಮ್ಯ ಮಾತರಂ ಪುನಃ ।
ನಕ್ತಮಾಯಾಸ್ಯತಿ ಮುದಾ ಪುಣ್ಯಂ ವೃಂದಾವನಂ ವನಮ್ ॥ ೩೯ ॥

ಅಚಿರಾದ್ದ್ರಕ್ಷ್ಯಸಿ ಸತಿ ಶ್ರೀಕೃಷ್ಣಮುಖಪಂಕಜಮ್ ।
ಸರ್ವಂ ವಿರಹದುಃಖಂ ಚ ಸಂತ್ಯಕ್ಷ್ಯಸಿ ಚ ಸಾಂಪ್ರತಮ್ ॥ ೪೦ ॥

ಸುಸ್ಥಿರಾ ಭವ ಮಾತಸ್ತ್ವಂ ತ್ಯಜ ಶೋಕಂ ಸುದಾರುಣಮ್ ।
ವಹ್ನಿಶುದ್ಧಾಂಶುಕಂ ರಮ್ಯಂ ಪರಿಧಾಯ ಪ್ರಹರ್ಷಿತಾ ॥ ೪೧ ॥

ಅಮೂಲ್ಯರತ್ನನಿರ್ಮಾಣಭೂಷಣಗ್ರಹಣಂ ಕುರು ।
ಗೃಹಾಣ ಚಂದನಂ ಸ್ನಿಗ್ಧಂಕಸ್ತೂರೀಕುಂಕುಮಾನ್ವಿತಮ್ ॥ ೪೨ ॥

ಕುರುಷ್ವ ಕೇಶಸಂಸ್ಕಾರಂ ಮಾಲತೀಮಾಲ್ಯಭೂಷಿತಮ್ ।
ಸುವೇಷಂ ಕುರು ಕಲ್ಯಾಣಿ ಗಂಡೇ ಚ ಚಿತ್ರಪತ್ರಕಮ್ ॥ ೪೩ ॥

---

೩೯. ಕೃಷ್ಣನು ಸಂತೋಷದಿಂದ ಇಲ್ಲಿಗೆ ಬಂದು ತಾಯಿಗೆ ನಮಸ್ಕಾರವಮಾಡಿ ಮತ್ತೆ ರಾತ್ರಿವೇಳೆಗೆ ಸಂತೋಷಗೊಂಡವನಾಗಿ ಪುಣ್ಯಕರವಾದ ವೃಂದಾವನಕ್ಕೆ ಬರುವನು.

೪೦. ಎಲೈ ಪತಿವ್ರತೆಯೇ! ನೀನು ಜಾಗ್ರತೆಯಾಗಿ ಶ್ರೀ ಕೃಷ್ಣನ ಮುಖ ಕಮಲವನ್ನು ನೋಡುವವಳಾಗುತ್ತೀಯೆ. ಈಗಿನ ವಿರಹದುಃಖವೆಲ್ಲವನ್ನೂ ಬಿಡುವ ವಳಾಗುತ್ತೀಯೆ.

೪೧. ಎಲೈ ತಾಯಿಯೆ! ಅಗ್ನಿಯಂತೆ ಶುಭ್ರವಾದ ಬಟ್ಟೆಯನ್ನು ಧರಿಸಿ ಕೊಂಡು ಘೋರವಾದ ದುಃಖವನ್ನು ಬಿಟ್ಟು, ಸಂತೋಷದಿಂದ ಸ್ಥಿರವಾದ ಬುದ್ಧಿ ಯುಳ್ಳವಳಾಗು.

೪೨. ಬೆಲೆಕಟ್ಟಲಸಾಧ್ಯವಾದ ಒಡವೆಗಳನ್ನು ಧರಿಸುವವಳಾಗು. ಮತ್ತು ಕಸ್ತೂರಿ ಕೇಸರಿ ಇವುಗಳನ್ನು ಸೇರಿಸಿ ಸುವಾಸನೆಯಾಗುವಂತೆ ಮಾಡಿರುವ ಗಂಧ ವನ್ನು ಮೈಗೆ ಹಚ್ಚಿಕೊಳ್ಳುವವಳಾಗು.

೪೩. ಎಲೈ ಮಂಗಳಕರಳೇ! ತಲೆಗೆ ಉತ್ತಮವಾದ ಸುಗಂಧ ತೈಲವನ್ನು ಹಚ್ಚಿಕೊಂಡು ಬಾಚಿಕೊಂಡು, ಮಾಲತಿ ಹೂವಿನ ದಂಡೆಯಿಂದ ಅಲಂಕರಿಸಿಕೊಳ್ಳು ವಳಾಗು. ಕೆನ್ನೆಗಳ ಮೇಲೆ ಮಕರಿಕಾ ಪತ್ರವನ್ನು ಬರೆದುಕೊಂಡು ಒಳ್ಳೆಯ ಅಲಂಕಾರ ಮಾಡಿಕೊಳ್ಳುವವಳಾಗು.

ಸಿಂದೂರಬಿಂದುಂ ಸೀಮಂತೇ ಕಸ್ತೂರೀಚಂದನಾನ್ವಿತಮ್ ।
ಅಲಕ್ತಕಾಕ್ತಂ ಚರಣಂ ಯುಕ್ತಂ ಯಾವಕಭೂಷಣೈಃ ॥ ೪೪ ॥

ಕುರುಷ್ವ ತಿಷ್ಠ ಚೋತ್ತಿಷ್ಠ ರತ್ನಸಿಂಹಾಸನೇ ವರೇ ।
ಸಪಂಕಪಂಕಜಂ ತಲ್ಪಂ ತ್ಯಜ ಸಾರ್ಧಂ ಶುಚಾ ಸತಿ ॥ ೪೫ ॥

ಭುಂಕ್ಷ್ವ ಕೃಷ್ಣೇನ ಮನಸಾ ವಿಶುದ್ಧಂ ಮಧುರಂ ಮಧು ।
ಸಂಸ್ಕೃತಂ ಭಾಸಿತಂ ತೋಯಂ ತಾಂಬೂಲಂ ಚ ಸುವಾಸಿತಮ್ ॥ ೪೬ ॥

ರತ್ನೇಂದ್ರಸಾರನಿರ್ಮಾಣಪರ್ಯಂಕೇ ಸುಮನೋಹರೇ ।
ವಹ್ನಿಶುದ್ಧಾಂಶುಕಾಂತೇ ಚ ಮಾಲತೀಮಾಲ್ಯ ಭೂಷಿತೇ ॥ ೪೭ ॥

ಸುಗಂಧಿಯುಕ್ತೇ ಕಸ್ತೂರೀಜಾತೀ ಚಂಪಕ ಚಂದನೈಃ ।
ಪರಿತೋ ಮಾಲತೀಮಾಲ್ಯಹೀರಹಾರವಿಭೂಷಿತೇ ॥ ೪೮ ॥

---

೪೪. ಬೈತಲೆಯಲ್ಲಿ ಕಸ್ತೂರಿ ಮತ್ತು ಗಂಧದಿಂದ ಕೂಡಿದ ಚಂದ್ರದ ಬಿಂದುಗಳನ್ನಿಟ್ಟುಕೊಂಡು, ಅರಗಿನ ರಸವನ್ನು ಕಾಲುಗಳಿಗೆ ಹಚ್ಚಿಕೊಂಡು ಅಲಂಕಾರ ಮಾಡಿಕೊಳ್ಳುವವಳಾಗು.

೪೫. ಎಲೈ ಪತಿವ್ರತೆಯೇ! ಮೇಲಕ್ಕೆ ಏಳುವವಳಾಗು. ಉತ್ತಮವಾದ ರತ್ನಮಯವಾದ ಸಿಂಹಾಸನದಮೇಲೆ ಕುಳಿತುಕೊಳ್ಳುವವಳಾಗು. ನಿನ್ನ ಈ ದುಃಖ ದೊಂದಿಗೆ ತಣ್ಣಗಿರುವ ತಾವರೆಯ ಹೂವುಗಳಿಂದ ಮಾಡಿರುವ ಹಾಸಿಗೆಯನ್ನೂ ಬಿಡುವವಳಾಗು.

೪೬. ಸಂತೋಷದಿಂದ ಕೂಡಿದ ಮನಸ್ಸುಳ್ಳವಳಾಗಿ ಪರಿಶುದ್ಧವಾಗಿಯೂ, ಸಿಹಿಯಾಗಿಯೂ ಇರುವ ಮಧುವನ್ನು ಸೇವನೆಮಾಡುವವಳಾಗು. ಶುದ್ಧಿಗೊಳಿಸಿರುವ ಸುವಾಸನೆಯಾಗಿರುವ ನೀರನ್ನು ಕುಡಿದು ಸುವಾಸನೆಯಾದ ತಾಂಬೂಲವನ್ನು ಸ್ವೀಕರಿಸುವವಳಾಗು.

೪೭.–೫೧. ಅಗ್ನಿಯಂತೆ ಶುಭ್ರವಾದ ವಸ್ತ್ರಗಳಿಂದ ರಮಣೀಯವಾದ ಮಾಲತೀಹೂವಿನ ಹಾರಗಳಿಂದ ಅಲಂಕಾರ ಮಾಡಲ್ಪಟ್ಟ ಕಸ್ತೂರಿ ಜಾಜಿ ಸಂಪಿಗೆ ಗಂಧ ಇವುಗಳಿಂದ ಸುವಾಸನೆಯಾಗಿರುವ ಸುತ್ತಲೂ ಮಾಲತೀಹೂವಿನ ಹಾರಗ

ಮಣೀಂದ್ರಮುಕ್ತಾಮಾಣಿಕ್ಯಸಂಪದ್ಭಿಶ್ಚ ಪರಿಷ್ಕೃತೇ ।
ಪುಷ್ಪಮಾಲ್ಯೋಪಧಾನೇ ಚ ಮಂಗಲಾರ್ಹೇ ಮುದಾನ್ವಿತಾ ॥ ೮೯ ॥

ಶಯನಂ ಕುರು ದೇವೇಶಿ ಗೋಪೀಭಿಃ ಸೇವಿತಾ ಸದಾ ।
ಕರೋತಿ ಸೇವನಂ ಶಶ್ವತ್ಪ್ರಿಯಾಲಿಃ ಶ್ವೇತಚಾಮರೈಃ ॥ ೯೦ ॥

ಪದಾರವಿಂದಸೇವಾಂ ಚ ಗೋಪೀಭಕ್ತಾ ಮನೋಹರೇ ।
ಸದ್ರತ್ನಸಾರನಿರ್ಮಾಣಪರ್ಯಂಕೇ ಸುಮನೋಹರೇ ॥ ೯೧ ॥

ಇತ್ಯೇವಮುಕ್ತ್ವಾ ಸ ಮುನೇ ಪುನಸ್ತೂಷ್ಣೀಂ ಬಭೂವ ಹ ।
ಪ್ರಣಮ್ಯ ಪಾದಪದ್ಮಂ ಚ ಬ್ರಹ್ಮಾದಿಸುರವಂದಿತಮ್ ॥ ೯೨ ॥

ಉದ್ಧವಸ್ಯ ವಚಃ ಶ್ರುತ್ವಾ ಸಸ್ಮಿತಾ ರಾಧಿಕಾ ಸತೀ ।
ಕೌತುಕಂ ಚ ದದೌ ತಸ್ಮೈ ರತ್ನಸಾರಾಂಗುಲೀಯಕಂ ॥ ೯೩ ॥

---

ಳಿಂದಲೂ, ವಜ್ರದ ಹಾರಗಳಿಂದಲೂ, ಅಲಂಕಾರ ಮಾಡಲ್ಪಟ್ಟ ಶ್ರೇಷ್ಠವಾದ ಮಣಿಗಳಿಂದಲೂ, ಮುತ್ತುಗಳಿಂದಲೂ, ಮಾಣಿಕ್ಯಗಳಿಂದಲೂ ಶೃಂಗರಿಸಿರುವ, ಹೂವಿನ ಮಾಲಿಕೆಗಳಿಂದ ಮಾಡಿರುವ ದಿಂಬಿನಿಂದ ಕೂಡಿರುವ, ಮಂಗಲಕರವಾದ ರತ್ನಶ್ರೇಷ್ಠಗಳಿಂದ ಮಾಡಿರುವ, ಮನೋಹರವಾದ ಮಂಚದಲ್ಲಿ ಸಂತೋಷದಿಂದ ಕೂಡಿದವಳಾಗಿ ಗೋಪಿಯರಿಂದ ಯಾವಾಗಲೂ ಸೇವಿಸಲ್ಪಡುತ್ತಿರುವವಳಾಗಿ ಮಲಗಿಕೊಳ್ಳುವವಳಾಗು. ಎಲೈ ದೇವತೆಗಳ ಒಡೆಯಳೇ! ಮನೋಹರವಾದ ಉತ್ತಮರತ್ನಸಾರದಿಂದ ಮಾಡಲ್ಪಟ್ಟಿರುವ ಮಂಚದಲ್ಲಿ ನಿನ್ನ ಭಕ್ತಳೂ ಪ್ರಿಯ ಸಖಿಯೂ ಆದ ಗೋಪಿಯು ಯಾವಾಗಲೂ ಬಿಳಿಯ ಚಾಮರಗಳಿಂದ ನಿನ್ನನ್ನು ಸೇವಿಸುತ್ತಾಳೆ. ಮತ್ತು ನಿನ್ನ ಪಾದಕಮಲಗಳನ್ನೂ ಸೇವಿಸುತ್ತಾಳೆ.

೯೨. ಎಲೈ ನಾರದಮುನಿಯೇ! ಆ ಉದ್ಧವನು ಈಪ್ರಕಾರ ಹೇಳಿ ಬ್ರಹ್ಮನೇ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಡುತ್ತಿರುವ ಆ ರಾಧಿಕೆಯ ಪಾದಕಮಲಗಳಿಗೆ ನಮಸ್ಕಾರವನ್ನು ಮಾಡಿ ಮತ್ತೆ ಸುಮ್ಮನಾದನು.

೯೩. ಪತಿವ್ರತೆಯಾದ ರಾಧೆಯು ಉದ್ಧವನ ಮಾತನ್ನು ಕೇಳಿ ಮುಗುಳು ನಗೆಯನ್ನು ಬೀರುತ್ತ, ಆ ಉದ್ಧವನಿಗೆ ಬೆಲೆ ಬಾಳುವ ಶ್ರೇಷ್ಠವಾದ ರತ್ನಗಳಿಂದ ಮಾಡಿರುವಂಥಾ ಉತ್ತಮವಾದ ಉಂಗುರವನ್ನು ಕೊಟ್ಟಳು.

ಅಮೂಲ್ಯಂ ಸುಂದರಂ ರಮ್ಯಂ ವಿಶ್ವಕರ್ಮವಿನಿರ್ಮಿತಮ್ ।
ಮುಖಶೋಭಂ ಪೀತವರ್ಣಂ ಸುದೀಪ್ತಂ ಸುಪ್ರದೀಪವತ್ ॥ ೫೪ ॥

ಕೃಷ್ಣಾಯ ವಹ್ನಿನಾ ದತ್ತಮಪೂರ್ವಂ ರಾಸಮಂಡಲೇ ।
ಮಣಿಕುಂಡಲಯುಗ್ಮಂ ಚಾಮೂಲ್ಯರತ್ನವಿನಿರ್ಮಿತಮ್ ॥ ೫೫ ॥

ಅಮೂಲ್ಯರತ್ನನಿರ್ಮಾಣಂ ಸರ್ವಭೂಷಣಮೀಪ್ಸಿತಮ್ ।
ವಹ್ನಿಶುದ್ಧಾಂಶುಕಯುಗಂ ರತ್ನನಿರ್ಮಾಣನಾಯಕಮ್ ॥ ೫೬ ॥

ಹೀರಹಾರವಿನಿರ್ಮಾಣಂ ಹಾರಂ ಚ ಸುಮನೋಹರಮ್ ।
ಪುರಾ ದತ್ತಂ ಚ ಸುಪ್ರೀತ್ಯಾ ಕೃಷ್ಣಾಯ ವರುಣೇನ ಚ ॥ ೫೭ ॥

ಶ್ರೀಸೂರ್ಯೇಣ ಚ ಯದ್ದತ್ತಂ ಶ್ರೀಕೃಷ್ಣಾಯ ಸ್ಯಮಂತಕಮ್ ।
ಪ್ರದತ್ತಂ ಕೌತುಕಂ ತಸ್ಮೈ ಯದ್ದತ್ತಂ ಹರಿಣಾ ಪುರಾ ॥ ೫೮ ॥

---

೫೪. ಮತ್ತು ವಿಶ್ವಕರ್ಮನಿಂದ ಮಾಡಲ್ಪಟ್ಟ ಬೆಲೆಯುಳ್ಳ ಸುಂದರವಾದ ಹಳದಿಯ ಬಣ್ಣದ ದೊಡ್ಡ ದೀಪದಂತೆ ಪ್ರಕಾಶಮಾನವಾದ ಮುಖಾಲಂಕಾರವನ್ನು ಕೊಟ್ಟಳು.

೫೫. ಹಿಂದೆ ಅಗ್ನಿಯು ರಾಸಮಂಡಲದಲ್ಲಿ ಕೃಷ್ಣನಿಗೆ ಕೊಟ್ಟಿದ್ದ ಅಪೂರ್ವವಾದ ಬೆಲೆ ಬಾಳುವ ರತ್ನಗಳಿಂದ ಮಾಡಿರುವ ಎರಡು ರತ್ನಕುಂಡಲಗಳನ್ನು ಕೊಟ್ಟಳು.

೫೬–೫೭. ಮತ್ತು ಬೆಲೆ ಬಾಳುವ ರತ್ನಗಳಿಂದ ಮಾಡಿರುವ ಇಷ್ಟವಾದ ಎಲ್ಲ ಆಭರಣಗಳನ್ನೂ. ಅಗ್ನಿಯಂತೆ ಶುಭ್ರವಾದ ಎರಡು ವಸ್ತ್ರಗಳನ್ನೂ, ಮನೋಹರವಾದ ಹೀರವೆಂಬ ರತ್ನದ ಹಾರದಿಂದ ಕೂಡಿರುವ ಅತ್ಯಂತ ಆನಂದವನ್ನುಂಟು ಮಾಡುವ ದಿವ್ಯವಾದ ಮುತ್ತಿನ ಹಾರವನ್ನು ಹಿಂದೆ ವರುಣನು ಸಂತೋಷಗೊಂಡವನಾಗಿ ಕೃಷ್ಣನಿಗೆ ಕೊಟ್ಟಿದ್ದುದನ್ನು ಈಗ ಉದ್ಧವನಿಗೆ ಕೊಟ್ಟಳು.

೫೮. ಸೂರ್ಯನಿಂದ ಕೊಡಲ್ಪಟ್ಟುದಾಗಿ ಕೊನೆಗೆ ಜಾಂಬವಂತನ ಕೈಸೇರಿ, ಜಾಂಬವಂತನಿಂದ ಶ್ರೀ ಕೃಷ್ಣನಿಗೆ ಬಹುಮಾನವಾಗಿ ಕೊಡಲ್ಪಟ್ಟಿದ್ದ ಸ್ಯಮಂತಕವೆಂಬ ಶ್ರೇಷ್ಠವಾದ ಮಣಿಯನ್ನು ರಾಧೆಯು ಉದ್ಧವನಿಗೆ ಕೊಟ್ಟಳು.

ಯೆದ್ದತ್ತಂ ಚ ಮಹೇಂದ್ರೇಣ ರತ್ನಸಿಂಹಾಸನಂ ಪರಮ್ ।
ತತ್ಪ್ರದತ್ತಂ ಮುದಾ ದೇವ್ಯಾ ತಸ್ಮೈ ಪ್ರೀತ್ಯಾ ಚ ರಾಧಯಾ || ೫೯ ||

ಮಣೀಂದ್ರಸಾರನಿರ್ಮಾಣಂ ಛತ್ರರತ್ನಂ ಮನೋಹರಮ್ ।
ಮುಕ್ತಾಮಾಣಿಕ್ಯಸಾರೇಣ ಹೀರಹಾರಸಮನ್ವಿತಮ್ || ೬೦ ||

ವಿಚಿತ್ರರತ್ನಪದ್ಮೇನ ಚಿತ್ರಿತಂ ವಾರುಣಂ ಸದಾ ।
ಶೋಭಿತಂ ಪರಿತಶ್ಚಾನ್ಯೈ ರತ್ನನಿರ್ಮಾಣದರ್ಪಣೈಃ || ೬೧ ||

ಯೆದ್ದತ್ತಂ ಬ್ರಹ್ಮಣಾ ಪ್ರೀತ್ಯಾ ಹರಯೇ ರಾಸಮಂಡಲೇ ।
ಸುಪ್ರೀತ್ಯಾ ರಾಧಯಾ ತತ್ರ ಪ್ರದತ್ತಮುದ್ಧವಾಯ ಚ || ೬೨ ||

ಮಣಿಸಾರವಿನಿರ್ಮಾಣಂ ಮಣಿರಾಜವಿನಿರ್ಮಿತಮ್ ।
ಜಪಾಮಾಲ್ಯಂ ಸಂಸ್ಕೃತಂ ಚ ಯದ್ದತ್ತಂ ಶಂಭುನಾ ಪುರಾ || ೬೩ ||

ತದೇವ ದತ್ತಂ ತಸ್ಮೈ ಚಾಪ್ಯಮೂಲ್ಯಂ ಪುಣ್ಯದಂ ಶುಭಮ್ ।
ಜನ್ಮಮೃತ್ಯುಜರಾವ್ಯಾಧಿಹರಂ ಚಾತಿಮನೋಹರಮ್ || ೬೪ ||

---

೫೯. ಮಹೇಂದ್ರನು ಉತ್ತಮವಾದ ಯಾವ ರತ್ನಮಯವಾದ ಸಿಂಹಾಸನವನ್ನು ಪ್ರೀತಿಯಿಂದ ಕೊಟ್ಟಿದ್ದನೋ ಅದನ್ನು ರಾಧಾದೇವಿಯು ಉದ್ಧವನಿಗೆ ಕೊಟ್ಟಳು.

೬೦–೬೨. ಉತ್ತಮ ರತ್ನಗಳಿಂದ ಮಾಡಲ್ಪಟ್ಟು, ಮುತ್ತು ರತ್ನಗಳ ಜಾಲರಿಗಳಿಂದ ಕೂಡಿ ಕಂಗೊಳಿಸುತ್ತಿರುವ ಉತ್ತಮವಾದ ಛತ್ರರತ್ನವನ್ನು ಕೊಟ್ಟಳು. ಅದು ನಾನಾವಿಧವಾದ ರತ್ನಕಮಲಗಳಿಂದ ಚಿತ್ರಿಸಲ್ಪಟ್ಟುದಾಗಿಯೂ, ಸುತ್ತಲೂ ಹಾಕಿರುವ ರತ್ನಮಯವಾದ ಕನ್ನಡಿಗಳಿಂದ ಕಂಗೊಳಿಸುತ್ತಿರುವುದಾಗಿಯೂ, ರಾಸಮಂಡಲದಲ್ಲಿ ಸಂತೋಷಗೊಂಡ ಬ್ರಹ್ಮನಿಂದ ಕೃಷ್ಣನಿಗೆ ಕೊಡಲ್ಪಟ್ಟುದಾಗಿಯೂ ಇತ್ತು. ಅದನ್ನು ಸಂತೋಷದಿಂದ ರಾಧಿಕೆಯು ಉದ್ಧವನಿಗೆ ಕೊಟ್ಟಳು.

೬೩–೬೪. ಹಿಂದೆ ಈಶ್ವರನು ಕೊಟ್ಟಿದ್ದ ಮುಖ್ಯವಾದ ಮಣಿಗಳಿಂದ ಮಾಡಲ್ಪಟ್ಟು, ಶ್ರೇಷ್ಠ ರತ್ನಮಣಿಗಳಿಂದ ಕೂಡಿದ ಶುದ್ಧಿಗೊಳಿಸಲ್ಪಟ್ಟಿರುವ ಬಹಳ ಬೆಲೆಬಾಳುವುದಾದ, ಪುಣ್ಯಕರವೂ ಮಂಗಳಕರವೂ ಆದ, ಜಪಮಾಲಿಕೆಯನ್ನು ಉದ್ಧವನಿಗೆ ಕೊಟ್ಟಳು. ಮತ್ತು ಚಂದ್ರನು ಕೊಟ್ಟಿದ್ದ ಹುಟ್ಟು ಸಾವು ಮುಪ್ಪು ರೋಗಗಳನ್ನು ನಾಶಮಾಡುವ ಅತ್ಯಂತ ಮನೋಹರವಾದ ಮತ್ತು ಸುಂದರವಾದ ಶುದ್ಧವಾದ

ಚಂದ್ರಕಾಂತಮಣಿಂ ರಮ್ಯಂ ಚಂದ್ರದತ್ತಂ ಪರಿಷ್ಕೃತಮ್ ।
ಚಂದ್ರಾವಲೀಂ ದದೌ ತಸ್ಮೈ ಸುದೀಪ್ತಂ ಪೂರ್ಣಚಂದ್ರವತ್ ॥ ೬೫ ॥

ವಿಶುದ್ಧಂ ಮಧುಪರ್ಕಂ ಚ ಮಧುಪಾತ್ರಂ ಯದಕ್ಷಯಮ್ ।
ಧರ್ಮೇಣ ಯತ್ಪ್ರದತ್ತಂ ಚ ತದ್ದತ್ತಂ ಪ್ರಿಯಯಾ ಹರೇಃ ॥ ೬೬ ॥

ಜಲಭೋಜನಪಾತ್ರಂ ಚ ಶುದ್ಧಂ ಸ್ವರ್ಣವಿನಿರ್ಮಿತಮ್ ।
ಮಿಷ್ಟಾನ್ನಂ ಪರಮಾನ್ನಂ ಚ ದದೌ ಸುಸ್ವಾದುಮಿಷ್ಟಕಮ್ ॥ ೬೭ ॥

ಭೋಜನಂ ಕಾರಯಿತ್ವಾ ಚ ಕರ್ಪೂರಾದಿಸುವಾಸಿತಮ್ ।
ತಾಂಬೂಲಂ ಚ ದದೌ ಶೀಘ್ರಂ ಮಾಲ್ಯಂ ಸುಸ್ನಿಗ್ಧಚಂದನಮ್ ॥ ೬೮ ॥

ಶುಭಾಶಿಷಂ ಚ ಪ್ರದದೌ ವಾಂಛಿತಂ ಪ್ರವರಂ ವರಮ್ ।
ಜ್ಞಾನಂ ಕೃಷ್ಣೇನ ಯದ್ದತ್ತಂ ಗೋಲೋಕೇ ರಾಸಮಂಡಲೇ ॥ ೬೯ ॥

---

ಚಂದ್ರಕಾಂತಮಣಿಯನ್ನು ಕೊಟ್ಟಳು. ಮತ್ತು ಪೂರ್ಣ ಚಂದ್ರನಂತೆ ಪ್ರಕಾಶಮಾನವಾದ ಚಂದ್ರಾವಲಿಯೆಂಬ ಹಾರವನ್ನೂ ಕೊಟ್ಟಳು.

೬೬. ಪರಿಶುದ್ಧವಾದ ಮಧುಪರ್ಕವನ್ನೂ ಧರ್ಮನು ಪ್ರೀತಿಯಿಂದ ಕೃಷ್ಣನಿಗೆ ಕೊಟ್ಟಿದ್ದ ಅಕ್ಷಯವನ್ನುಂಟುಮಾಡುವ ಮಧುಪಾತ್ರೆಯನ್ನೂ ಶ್ರೀಕೃಷ್ಣಪ್ರಿಯಳಾದ ರಾಧಿಕೆಯು ಉದ್ಧವನಿಗೆ ಕೊಟ್ಟಳು.

೬೭. ಶುಭ್ರವಾದ ಚಿನ್ನದಿಂದ ಮಾಡಿರುವ ನೀರಿನ ಪಾತ್ರೆಯನ್ನೂ, ಊಟದ ಪಾತ್ರೆಯನ್ನೂ, ರುಚಿಕರವಾದ ಅನ್ನವನ್ನೂ, ಪರಮಾನ್ನವನ್ನೂ, ಅತ್ಯಂತ ರುಚಿಕರವಾದ ಮೃಷ್ಟಾನ್ನವನ್ನೂ ಉದ್ಧವನಿಗೆ ಕೊಟ್ಟಳು.

೬೮. ಹೀಗೆ ಊಟಮಾಡಿಸಿದನಂತರ ಪಚ್ಚಕರ್ಪೂರ ಮುಂತಾದುವುಗಳಿಂದ ಸುವಾಸನೆಯಾಗಿರುವ ತಾಂಬೂಲವನ್ನೂ, ಸುವಾಸನೆಯಾಗಿರುವ ಗಂಧವನ್ನೂ, ಹೂವನ್ನೂ ಕೊಟ್ಟಳು.

೬೯. ಅಪೇಕ್ಷಿಸಲ್ಪಟ್ಟುದಾಗಿಯೂ ಉತ್ತಮವಾಗಿಯೂ ಇರುವ ಆಶೀರ್ವಾದವನ್ನು ಮಾಡಿದಳು. ಗೋಲೋಕದಲ್ಲಿ ಕೃಷ್ಣನಿಂದ ಕೊಟಲ್ಪಟ್ಟ ದಿವ್ಯಜ್ಞಾನವನ್ನೂ ಕೊಟ್ಟಳು.

ಪುರುಷಾಣಾಂ ಶತಂ ಯೊವನ್ನಿಶ್ಚಲಾಂ ಕಮಲಾಂ ದದೌ ।
ವಿದ್ಯಾಂ ಯಶಸ್ಕರೀಂ ಶುದ್ಧಾಂ ಯಶಃ ಕೀರ್ತಿ ಸುನಿರ್ಮಲಾಮ್ ॥ ೭೦ ॥

ಸರ್ವಸಿದ್ಧಿಂ ಹರೇರ್ದಾಸ್ಯಂ ಹರಿಭಕ್ತಿಂ ಚ ನಿಶ್ಚಲಾಮ್ ।
ಪಾರ್ಷದಪ್ರವರತ್ವಂ ಚ ಪಾರ್ಷದಂ ಚ ಹರೇರಿತಿ ॥ ೭೧ ॥

ವರಂ ಪ್ರಸಾದಂ ದತ್ವಾ ಚ ಸಮುತ್ಥಾಯ ಮುದಾನ್ವಿತಮ್ ।
ವಹ್ನಿಶುದ್ಧಾಂಶುಕೇ ಧೃತ್ವಾ ಚಾಮೂಲ್ಯಂ ರತ್ನಭೂಷಣಮ್ ॥ ೭೨ ॥

ಹೀರಹಾರಂ ರತ್ನಮಾಲಾಂಪರಿಧಾಯ ಮನೋಹರಾಮ್ ।
ಸಿಂದೂರಂ ಕಜ್ಜಲಂ ಪುಷ್ಪಮಾಲ್ಯಂ ಸುಸ್ನಿಗ್ಧಚಂದನಮ್ ॥ ೭೩ ॥

ರತ್ನಸಿಂಹಾಸನಸ್ಥಂ ತಂ ಪೂಜಿತಾ ಪೂಜಿತಂ ಮುದಾ ।
ವೇಷ್ಟಿತಾ ಹರ್ಷನಿರತಂ ಗೋಪೀನಾಂ ಶತಕೋಟಿಭಿಃ ।
ತಪ್ತಕಾಂಚನವರ್ಣಾಭಾ ಶತಚಂಪ್ರಸಮಪ್ರಭಾ ॥ ೭೪ ॥

---

೭೦. ಒಂದುನೂರು ಮನುಷ್ಯರನ್ನು ಸೇವೆಗಾಗಿ ಕೊಟ್ಟಳು. ಮತ್ತು ಸ್ಥಿರವಾದ ಐಶ್ವರ್ಯವನ್ನೂ ಕೊಟ್ಟಳು. ಯಶಸ್ಸನ್ನುಂಟುಮಾಡುವ ವಿದ್ಯೆಯನ್ನೂ, ನಿರ್ಮಲವಾದ ಉತ್ತಮ ಕೀರ್ತಿಯನ್ನೂ ಕೊಟ್ಟಳು.

೭೧. ಸಕಲೇಷ್ಟಸಿದ್ಧಿಯನ್ನೂ, ಹರಿಯ ಸೇವಕತನವನ್ನೂ, ಸ್ಥಿರವಾದ ಹರಿಭಕ್ತಿಯನ್ನೂ, ಹರಿಯ ಕಿಂಕರರಲ್ಲಿ ಶ್ರೇಷ್ಠತ್ವವನ್ನೂ ಕೊಟ್ಟಳು.

೭೨–೭೪. ಈರೀತಿಯಾದ ವರವನ್ನೂ ಅನುಗ್ರಹವನ್ನೂ ಕೊಟ್ಟು, ಸಂತೋಷದಿಂದ ಮೇಲಕ್ಕೆ ಎದ್ದು, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನು ಧರಿಸಿಕೊಂಡು, ಅಮೂಲ್ಯವಾದ ರತ್ನಾಲಂಕಾರಗಳಿಂದ ಶೃಂಗಾರ ಮಾಡಿಕೊಂಡು, ರತ್ನಮಯವಾದ ಹಾರವನ್ನು ಧರಿಸಿಕೊಂಡು, ಚಂದ್ರವನ್ನೂ ಕಾಡಿಗೆಯನ್ನೂ ಸುವಾಸನೆಯುಳ್ಳ ಗಂಧವನ್ನೂ ಹೂವಿನ ಹಾರವನ್ನೂ ಧರಿಸಿ, ಕಾಯಿಸಿದ ಚಿನ್ನದಂತೆ ದಿವ್ಯವರ್ಣದಿಂದ ಕೂಡಿದವಳಾಗಿ, ನೂರು ಚಂದ್ರರಿಗೆ ಸಮನಾದ ಕಾಂತಿಯುಳ್ಳವಳಾಗಿ, ಸಂತೋಷಗೊಂಡಿರುವ ನೂರುಕೋಟಿ ಗೋಪಿಯರಿಂದ ಸುತ್ತುವರಿಯಲ್ಪಟ್ಟವಳಾಗಿ, ರತ್ನಸಿಂಹಾಸನದಲ್ಲಿ ಕುಳಿತಿರುವ ಆ ಉದ್ಧವನನ್ನು ಸಂತೋಷದಿಂದ ಪೂಜಿಸಿದಳು.

॥ ಶ್ರೀ ರಾಧಿಕೋವಾಚ ॥

ಸತ್ಯಮಾಯಾಸ್ಯತಿ ಹರಿಃ ಸತ್ಯಂ ನಿಷ್ಕಪಟಂ ವದ ॥ ೭೫ ॥

ವದ ತಥ್ಯಂ ಭಯಂ ತ್ಯಕ್ತ್ವಾ ಸತ್ಯಂ ಬ್ರೂಹಿ ಸುಸಂಸದಿ ।
ವರಂ ಕೂಪಶತಾದ್ವಾಪೀ ವರಂ ವಾಪೀ ಶತಾತ್ಕ್ರತುಃ ॥ ೭೬ ॥

ವರಂಕ್ರತುಶತಾತ್ಪುತ್ರಃ ಸತ್ಯಂ ಪುತ್ರಶತಾತ್ಕಿಲ ।
ನ ಹಿ ಸತ್ಯಾತ್ಪರೋ ಧರ್ಮೋ ನಾನೃತಾತ್ಪಾತಕಂ ಪರಮ್ ॥ ೭೭ ॥

॥ ಉದ್ಧವಉವಾಚ ॥

ಸತ್ಯಮಾಯಾಸ್ಯತಿ ಹರಿಃ ಸತ್ಯಂ ದ್ರಕ್ಷ್ಯಸಿ ಸುಂದರಿ ।
ಧ್ರುವಂ ತ್ಯಕ್ಷ್ಯಸಿ ಸಂತಾಪಂ ದೃಷ್ಟ್ವಾ ಚಂದ್ರಮುಖಂ ಹರೇಃ ॥ ೭೮ ॥

ಅಹಂ ಪ್ರಸ್ಥಾಪಯಾಸ್ಯಾಮಿ ಗತ್ವಾ ಮಧುಪುರೀಂ ಹರಿಮ್ ।
ವಿಧಾಯ ತತ್ಪ್ರಬೋಧಂ ಚ ಕಾರ್ಯಮನ್ಯತ್ಕರಿಷ್ಯತಿ ॥ ೭೯ ॥

---

೭೫–೭೭. ಶ್ರೀ ರಾಧಿಕೆಯು ಹೇಳುತ್ತಾಳೆ:— ನಿಜವಾಗಿಯೂ ಹರಿಯು ಬರುವನೇ? ವಂಚನೆಯಿಲ್ಲದೆ ಸತ್ಯವನ್ನು ಹೇಳು. ಹೆದರಿಕೆಯನ್ನು ಬಿಟ್ಟು ಸತ್ಯವನ್ನು ಹೇಳು. ಈ ಉತ್ತಮವಾದ ಸಭೆಯಲ್ಲಿ ನಿಜವನ್ನೇ ಹೇಳು. ಒಂದುನೂರು ಬಾವಿಗಳನ್ನು ತೋಡಿಸುವುದಕ್ಕಿಂತಲೂ ಒಂದು ಕೊಳವನ್ನು ಮಾಡಿಸುವುದು ಮೇಲು. ಒಂದುನೂರು ಕೊಳಗಳನ್ನು ತೋಡಿಸುವುದಕ್ಕಿಂತಲೂ ಒಂದು ಯಾಗವು ಮೇಲು. ಒಂದುನೂರು ಯಾಗಕ್ಕಿಂತಲೂ ಒಬ್ಬ ಮಗನು ಮೇಲು. ಒಂದುನೂರು ಮಕ್ಕಳಿಗಿಂತಲೂ ಸತ್ಯವಚನವನ್ನಾಡುವುದು ಮೇಲು. ಸತ್ಯಕ್ಕಿಂತಲೂ ಉತ್ತಮವಾದ ಧರ್ಮವು ಬೇರೊಂದಿಲ್ಲ. ಹಾಗೆಯೇ ಸುಳ್ಳಿಗಿಂತಲೂ ಘೋರವಾದ ಪಾಪವು ಬೇರೊಂದಿಲ್ಲ.

೭೮. ಉದ್ಧವನು ಹೇಳುತ್ತಾನೆ:— ಎಲೈ ಸುಂದರಿಯೇ! ಹರಿಯು ಸತ್ಯವಾಗಿಯೂ ಬರುತ್ತಾನೆ. ನೀನು ಅವನನ್ನು ಸತ್ಯವಾಗಿಯೂ ನೋಡುವೆ. ಚಂದ್ರನಂತಿರುವ ಹರಿಯ ಮುಖವನ್ನು ನೋಡಿ ಸತ್ಯವಾಗಿಯೂ ಸಂತಾಪವನ್ನು ಬಿಡುತ್ತೀಯೆ.

೭೯. ನಾನು ಮಧುರಾಪಟ್ಟಣಕ್ಕೆ ಹೋಗಿ, ವಿಷಯವನ್ನು ಹರಿಗೆ ತಿಳಿಸಿ, ಅವನನ್ನು ಇಲ್ಲಿಗೆ ಕಳುಹಿಸಿಕೊಡುತ್ತೇನೆ. ನನ್ನಿಂದ ಸಮಾಚಾರವನ್ನು ತಿಳಿದಮೇಲೆ ಅವನು ಬೇರೆ ಯಾವ ಕೆಲಸವನ್ನೂ ಮಾಡಲಾರನು.

ವಿದಾಯಂ ಕುರು ಮೇ ಮಾತರ್ಯಾಸ್ಯಾಮಿ ಹರಿಸಂನಿಧಿಮ್ ।
ಸರ್ವಂ ತಂ ಕಥಯಿಷ್ಯಾಮಿ ತವೃತ್ತಾಂತಂ ಯಥೋಚಿತಮ್ ॥ ೮೦ ॥

॥ ಶ್ರೀ ರಾಧಿಕೋವಾಚ ॥

ಗಮಿಷ್ಯಸಿ ಯದಾ ವತ್ಸ ಮಧುರಾಂ ಸುಮನೋಹರಾಮ್ ।
ಶೃಣು ದುಃಖಕಥಾಂ ಕಾಂಚಿತ್ತಿಷ್ಠ ವತ್ಸ ಸ್ಥಿರೋ ಭವ ॥ ೮೧ ॥

ಮಾಂ ವಿಸ್ಮೃತೋ ನ ಭವಸಿ ವಿರಹಜ್ವರಕಾತರಮ್ ।
ಕಥಯಿಷ್ಯಾಮಿ ಮತ್ಕಾಂತಂ ಧ್ರುವಂ ಪ್ರಸ್ಥಾಪಯಿಷ್ಯಸಿ ॥ ೮೨ ॥

ನಾರೀಣಾಂ ಮನಸೋ ವಾರ್ತಾಂ ಕೋ ವಾ ಜಾನಾತಿ ಪಂಡಿತಃ ।
ಕಿಂಚಿಚ್ಛಾಸ್ತ್ರಾನುಸಾರೇಣ ಪ್ರಕಾರೇತಿ ನಿರೂಪಣಮ್ ॥ ೮೩ ॥

ವೇದಾ ವಕ್ತುಂ ನ ಶಕ್ತಾಶ್ಚ ಶಾಸ್ತ್ರಾಣಿ ಕಿಂ ವದಂತಿ ಚ ।
ಕಥಯಿಷ್ಯಾಮಿ ತ್ವಾಂ ಸರ್ವಂ ಪುತ್ರ ಕೃಷ್ಣಂ ಚ ವಕ್ಷ್ಯಸಿ ॥ ೮೪ ॥

---

೮೦. ಎಲೈ ತಾಯಿಯೇ! ಹೇಳಬೇಕಾದ ಸಂದೇಶವನ್ನು ನನ್ನೊಡನೆ ಹೇಳು. ನಾನು ಹರಿಯ ಸನ್ನಿಧಿಗೆ ಹೋಗುವೆನು. ಅಲ್ಲಿಗೆ ಹೋಗಿ ನಿನ್ನ ಸಮಾಚಾರವೆಲ್ಲವನ್ನೂ ಯಥೋಚಿತವಾಗಿ ಆ ಹರಿಗೆ ಹೇಳುವೆನು.

೮೧–೮೨, ಶ್ರೀ ರಾಧಿಕೆಯು ಹೇಳುತ್ತಾಳೆ:— ಎಲೈ ಮಗುವೇ! ದುಃಖದ, ಕಥೆಯನ್ನು ಹೇಳುತ್ತೇನೆ. ಸ್ವಲ್ಪಹೊತ್ತು ಇದ್ದು ಸಾವಧಾನಮನಸ್ಕನಾಗಿ ಕೇಳು. ನೀನು ಅತ್ಯಂತ ಮನೋಹರವಾದ ಮಧುರಾಪಟ್ಟಣಕ್ಕೆ ಯಾವಾಗ ಹೋಗುವಿಯೋ ಆಗ ವಿರಹಜ್ವರದಿಂದ ಪೀಡಿತಳಾಗಿರುವ ನನ್ನನ್ನು ಮರೆಯಬೇಡ. ಹೇಳಬೇಕಾದ ವಿಷಯವನ್ನು ಹೇಳುತ್ತೇನೆ· ನನ್ನ ಪ್ರಿಯನನ್ನು ಖಂಡಿತವಾಗಿಯೂ ಕಳುಹಿಸಿ ಕೊಡುವವನಾಗು.

೮೩. ಯಾವ ನಿಪುಣನುತಾನೇ ಸ್ತ್ರೀಯರ ಮನಸ್ಸಿನ ಅಭಿಪ್ರಾಯವನ್ನು ತಿಳಿಯಲು ಸಮರ್ಥನಾಗುತ್ತಾನೆ? ಸ್ವಲ್ಪಮಟ್ಟಿಗೆ ಶಾಸ್ತ್ರದಲ್ಲಿ ಹೇಳುವುದನ್ನು ತಿಳಿದು ಕೊಂಡು ಅದರಂತೆ ಇರುವುದೆಂದು ಲೋಕದಲ್ಲಿ ಹೇಳುವುದು ವಾಡಿಕೆಯಾಗಿದೆ.

೮೪. ಸ್ತ್ರೀಯರ ಮನೋಭಿಪ್ರಾಯವನ್ನು ವೇದಗಳೇ ಹೇಳಲು ಸಾಮರ್ಥ್ಯ ವಿಲ್ಲದವುಗಳಾಗಿವೆ· ಹೀಗಿರಲು ಶಾಸ್ತ್ರಗಳು ಏನನ್ನುತಾನೆ ಹೇಳುತ್ತವೆ? ಎಲೈ ಮಗನೇ! ನಿನಗೆ ಎಲ್ಲ ಸಮಾಚಾರಗಳನ್ನೂ ಹೇಳುತ್ತೇನೆ· ಅದೆಲ್ಲವನ್ನೂ ಕೃಷ್ಣನಿಗೆ ನೀನು ಹೇಳುವವನಾಗು.

ಗೇಹೇ ವನೇ ನ ಭೇದೋ ಮೇ ಪಶ್ವಾದಿಷು ಯಥಾ ನೃಷು ।
ಕಿಂ ವಾ ಜಲಂ ಕಿಮು ಸ್ವಪ್ನಮಜ್ಞಾನಂ ಚ ದಿವಾನಿಶಮ್ ॥ ೮೫ ॥

ಆತ್ಮಾನಂ ಚ ನ ಜಾನಾಮಿ ಚೋದಯಂ ಚಂದ್ರಸೂರ್ಯಯೋಃ ।
ಕ್ಷಣಂ ಪ್ರಾಪ್ಯ ಹರೇ ರ್ವಾರ್ತಾಂ ಚೇತನಂ ಮೇ ಬಭೂವ ಹ ॥ ೮೬ ॥

ಕೃಷ್ಣಾಕೃತಿಂ ಚ ಪಶ್ಯಾಮಿ ಶೃಣೋಮಿ ಮುರಲೀಧ್ವನಿಮ್ ।
ಕುಲಂ ಲಜ್ಜಾಂ ಭಯಂ ತ್ಯಕ್ತ್ವಾ ಚಿಂತಯಾಮಿ ಹರೇಃ ಪದಮ್ ॥ ೮೭ ॥

ಸಂಪ್ರಾಪ್ಯ ಸರ್ವಜಗತಾಮೀಶ್ವರಂ ಪ್ರಕೃತೇಃ ಪರಮ್ ।
ನ ಜ್ಞಾನಂ ಮಾಯಯಾ ತಸ್ಯ ಜ್ಞಾತ್ವಾ ಗೋಪಪತೇರ್ಮಮ ॥ ೮೮ ॥

ಧ್ಯಾಯಂತೇ ಯತ್ಪದಾಂಭೋಜಂ ವೇದಾ ಬ್ರಹ್ಮಾದಯಃ ಸುರಾಃ ।
ಸ ಭರ್ತ್ಸಿತೋ ಮಯಾ ಕೋಪಾದ್ಧೃದಿ ಶಲ್ಯಮಿದಂ ಮಮ ॥ ೮೯ ॥

---

೮೫. ನನಗೆ ಇದು ಮನೆ, ಇದು ಕಾಡು ಎಂಬ ಭೇದವೇ ತಿಳಿಯದಾಗಿದೆ. ಹಾಗೆಯೇ ಪಶುಗಳು ಮನುಷ್ಯರು, ಇದು ನೀರು, ಇದು ಸ್ವಪ್ನ ಎಂಬುದೂ ತಿಳಿಯದಾಗಿದೆ. ಹಗಲು ರಾತ್ರಿಯೂ ಅಜ್ಞಾನವೆಂಬುದು ಆವರಿಸಿಕೊಂಡಿರುತ್ತದೆ.

೮೬. ನನ್ನನ್ನುಕೂಡ ನಾನು ತಿಳಿಯದವಳಾಗಿದ್ದೇನೆ. ಹಾಗೆಯೇ ಸೂರ್ಯ ಚಂದ್ರರ ಹುಟ್ಟುವಿಕೆಯನ್ನೂ ತಿಳಿಯದವಳಾಗಿದ್ದೇನೆ. ಒಂದು ಕ್ಷಣಕಾಲ ಆ ಹರಿಯ ಸಮಾಚಾರವನ್ನು ಕೇಳಿದುದರಿಂದ ನನಗೆ ಸ್ವಲ್ಪ ಪ್ರಜ್ಞೆಯು ಬಂದಿರುವುದು.

೮೭. ಎಲ್ಲೆಲ್ಲಿಯೂ ಕೃಷ್ಣನ ಆಕಾರವನ್ನೇ ನೋಡುತ್ತೇನೆ. ಕೃಷ್ಣನ ಮುರಳಿಯ ಧ್ವನಿಯನ್ನು ಕೇಳುತ್ತೇನೆ. ಕುಲಮರ್ಯಾದೆಯನ್ನೂ, ನಾಚಿಕೆಯನ್ನೂ, ಭಯವನ್ನೂ ಬಿಟ್ಟು ಹರಿಯ ಪಾದವನ್ನೇ ಯಾವಾಗಲೂ ಧ್ಯಾನಮಾಡುತ್ತಿರುವೆನು.

೮೮. ಸಕಲ ಪ್ರಪಂಚಗಳಿಗೂ ಪ್ರಭುವೂ, ಪ್ರಕೃತಿಗಿಂತಲೂ ಉತ್ತಮನೂ ಆದ ಶ್ರೀ ಕೃಷ್ಣನನ್ನು ಹೊಂದಿಯೂ ಕೂಡ ಗೋಪಪತಿಯಾದ ಅವನ ಮಾಯೆಯಿಂದ ನನಗೆ ಜ್ಞಾನವೆಂಬುದು ದೊರೆಯಲಿಲ್ಲ.

೮೯. ಯಾವ ಪರಮಾತ್ಮನ ಪಾದಕಮಲಗಳನ್ನು ವೇದಗಳೂ ಬ್ರಹ್ಮನೇ ಮೊದಲಾದ ದೇವತೆಗಳೂ ಧ್ಯಾನಮಾಡುತ್ತಾರೋ ಅಂತಹ ಪರಮಾತ್ಮನನ್ನು ನಾನು ಕೋಪದಿಂದ ಗದರಿಸಿಕೊಂಡೆನು- ಇದು ನನಗೆ ಮನಸ್ಸಿನಲ್ಲಿ ಮುಳ್ಳಿನಂತಾಗಿದೆ.

ತತ್ಪದಾಂಭೋಜಸೇವಾಭಿರ್ಗುಣಪ್ರಸ್ತಾವತೋಽಪಿ ವಾ ।
ತದ್ಭಕ್ತ್ಯಾ ಯತ್ಕ್ಷಣೋ ನೀತೋ ಧ್ಯಾನೇನ ಪೂಜಯಾಥ ವಾ ॥ ೯೦ ॥

ತತ್ರಾಪಿ ಮಂಗಲಂ ಸರ್ವಂ ಹರ್ಷಮಾಯುರ್ವ್ಯವಸ್ಥಿತಮ್ ।
ವಿಘ್ನಂ ಚ ಹೃದಿ ಸಂತಾಪಸ್ತದ್ವಿಚ್ಛೇದೇ ಸದೋದ್ಧವ ॥ ೯೧ ॥

ಕ್ರೀಡಾಪ್ರೀತಿರ್ನ ಭವಿತಾ ತಾದೃಶೀಷ್ವಾ ಪುನರ್ಮಮ ।
ತಾದೃಶಂ ಪ್ರೇಮಸೌಭಾಗ್ಯಂ ನಿರ್ಜನೇ ನ ಚ ಸಂಗಮಃ ॥ ೯೨ ॥

ವೃಂದಾವನಂ ನ ಯಾಸ್ಯಾಮಿ ತತ್ಸಂಗೇ ಪುನರುದ್ಧವ ।
ಚಂದನಂ ವಾನ ದಾಸ್ಯಾಮಿ ನಂದನಂದನವಕ್ಷಸಿ ॥ ೯೩ ॥

ಮಾಲಾಂ ತಸ್ಮೈ ನ ದಾಸ್ಯಾಮಿ ನ ದ್ರಕ್ಷ್ಯಾಮಿ ಮುಖಾಂಬುಜಮ್ ।
ಮಾಲತೀನಾಂ ಕೇತಕೀನಾಂ ಚಂಪಕಾನಾಂ ಚ ಕಾನನಮ್ ॥ ೯೪ ॥

ಪುನರೇವ ನ ಯಾಸ್ಯಾಮಿ ಸುಂದರಂ ರಾಸಮಂಡಲಮ್ ।
ಹರಿಸಂಗೇ ನ ಯಾಸ್ಯಾಮಿ ರಮ್ಯಂ ಚಂದನಕಾನನಮ್ ॥ ೯೫ ॥

---

೯೦–೯೧. ಆ ಪರಮಾತ್ಮನ ಪಾದಕಮಲಗಳನ್ನು ಸೇವಿಸುವಿಕೆಯಿಂದಲೂ, ಅವನ ಗುಣಗಾನವನ್ನು ಮಾಡುವುದರಿಂದಲೂ. ಅವನನ್ನು ಭಕ್ತಿಯಿಂದ ಮನಸ್ಸಿನಲ್ಲಿ ಧ್ಯಾನಮಾಡುವುದರಿಂದಲೂ, ಅವನನ್ನು ಪೂಜೆಮಾಡುವುದರಿಂದಲೂ ಎಷ್ಟು ಕಾಲವು ಕಳೆದುಹೋಗುತ್ತದೆಯೋ, ಆ ಕಾಲದಲ್ಲಿಯೇ ಮಂಗಳವೂ ಸಂತೋಷವೂ ಆಯುಸ್ಸೂ ಕೂಡ ಉಂಟಾಗುತ್ತದೆ. ಎಲೈ ಉದ್ಧವನೇ! ಅದನ್ನು ಬಿಟ್ಟವನಾದರೆ ಮಾಡಿದ ಕೆಲಸಗಳಲ್ಲಿ ತೊಂದರೆಯೂ, ಮನಸ್ಸಿನಲ್ಲಿ ಸಂಕಟವೂ ಕೂಡ ಯಾವಾಗಲೂ ಉಂಟಾಗುತ್ತದೆ.

೯೨. ಅಂತಹ ಮನೋಹರವಾದ ಸ್ಥಳಗಳಲ್ಲಿ ಆಟವಾಡಲು ನನಗೆ ಆಸಕ್ತಿಯುಂಟಾಗುವುದಿಲ್ಲವೇ? ಜನರಿಲ್ಲದ ಆ ಸ್ಥಳದಲ್ಲಿ ಆ ಹರಿಯ ಸಮಾಗಮರೂಪವಾದ ಪ್ರೇಮಸೌಭಾಗ್ಯವು ನನಗೆ ಮತ್ತೆ ದೊರಕುತ್ತದೆಯೇ?

೯೩. ಎಲೈ ಉದ್ಧವನೇ! ಆ ಹರಿಯ ಸಂಗದಲ್ಲಿ ವೃಂದಾವನಕ್ಕೆ ಮತ್ತೆ ನಾನು ಹೋಗಲಾರೆನೇ? ಆ ನಂದಕುಮಾರನ ಎದೆಗೆ ಚಂದನವನ್ನು ಹಚ್ಚಲಾರೆನೇ?

೯೪–೯೫. ಅವನಿಗೆ ಹೂಮಾಲೆಯನ್ನು ಒಪ್ಪಿಸಲಾರೆನೇ? ಅವನ ಮುಖಕಮಲವನ್ನು ನೋಡಲಾರೆನೇ? ಮತ್ತೆ ಮಾಲತಿ, ಕೇದಿಗೆ, ಸಂಪಿಗೆ ಈ ವನಗಳಿಗೂ

ಪುನರೇವ ನ ಯಾಸ್ಯಾಮಿ ಮಲಯಂ ರತ್ನಮಂದಿರೇ ।
ಮಾಧವೀನಾಂ ವನಂ ರಮ್ಯಂ ರಹಸ್ಯಂ ಮಧುಕಾನನಮ್ ॥ ೯೬ ॥

ಶ್ರೀಖಂಡಕಾನನಂ ರಮ್ಯಂ ಸ್ವಚ್ಛಂ ಚಂದ್ರಸರೋವರಮ್ ।
ವಿಸ್ಪಂದಿಕಂ ಸುರವನಂ ನಂದನಂ ಪುಷ್ಪಭದ್ರಕಮ್ ॥ ೯೭ ॥

ಭದ್ರಕಂ ಹರಿಣಾ ಸಾರ್ಧಂ ನ ಯಾಸ್ಯಾಮಿ ಪುನಃ ಪುನಃ ।
ಕ್ವ ಸಾ ರಮ್ಯಾ ವಿಕಸಿತಾ ಮಾಧವೇ ಮಾಲತೀಲತಾ ॥ ೯೮ ॥

ಕ್ವ ಗತಾ ಮಾಧವೀ ರಾತ್ರಿಃ ಕ್ವ ಮಧುಃ ಕ್ವಾಪಿ ಮಾಧವಃ ।
ಇತ್ಯೇವಮುಕ್ತ್ವಾ ಸಾ ರಾಧಾ ಧ್ಯಾತ್ವಾ ಕೃಷ್ಣಪದಾಂಬುಜಮ್ ॥ ೯೯ ॥

ಪುನರ್ಮೂರ್ಚ್ಛಾಂ ಚ ಸಂಪ್ರಾಪ್ಯ ರುದತೀ ಪುಲಕಾನ್ವಿತಾ ॥ ೧೦೦ ॥

---

ಸುಂದರವಾದ ರಾಸಮಂಡಲಕ್ಕೂ ಹೋಗಲಾರೆನೇ ? ಹರಿಯ ಜೊತೆಯಲ್ಲಿ ಮನೋಹರವಾದ ಗಂಧದ ವನಕ್ಕೆ ಹೋಗಲಾರೆನೇ ?

೯೬. ಮತ್ತೊಮ್ಮೆ ಮಲಯ ಪರ್ವತಕ್ಕೆ ಹೋಗಲಾರೆನೇ ? ಅಲ್ಲಿಯ ರತ್ನಮಯವಾದ ಮನೆಯಲ್ಲಿ ವಿಹರಿಸಲಾರೆನೇ ? ಮನೋಹರವಾದ ಮಾಧವೀ ವನಕ್ಕೂ, ಗುಪ್ತಸ್ಥಾನವಾಗಿರುವ ಮಧುವನಕ್ಕೂ ಮತ್ತೆ ಹೋಗಲಾರೆನೇ ?

೯೭–೯೮. ಮನೋಹರವಾದ ಶ್ರೀಖಂಡವನಕ್ಕೂ, ಶುಭ್ರವಾದ ಚಂದ್ರಸರೋವರಕ್ಕೂ, ವಿಸ್ಪಂದಿಕವೆಂಬ ವನಕ್ಕೂ, ಸುರವನಕ್ಕೂ, ನಂದನವನಕ್ಕೂ, ಪುಷ್ಪಭದ್ರಕವೆಂಬ ವನಕ್ಕೂ, ಭದ್ರಕವೆಂಬ ವನಕ್ಕೂ ಹರಿಯೊಂದಿಗೆ ಮತ್ತೆ ಮತ್ತೆ ಹೋಗಲಾರೆನೇ ? ವೈಶಾಖಮಾಸದಲ್ಲಿ ಅರಳಿ ಕಂಗೊಳಿಸುವ ಆ ಮಾಧವೀ ಲತೆಯು ಎಲ್ಲಿಹೋಯಿತು ?

೯೯–೧೦೦. ಆ ವೈಶಾಖಮಾಸದ ರಾತ್ರಿಯು ಎಲ್ಲಿಹೋಯಿತು ? ಮಧುವನವೆಲ್ಲಿಹೋಯಿತು ? ಮಾಧವನೆಲ್ಲಿಹೋದನು ? ಈಪ್ರಕಾರವಾಗಿ ಹೇಳುತ್ತ ಆ ರಾಧೆಯು ಕೃಷ್ಣನ ಪಾದಕಮಲಗಳನ್ನು ಧ್ಯಾನಮಾಡಿ, ರೋಮಾಂಚನವನ್ನು ಹೊಂದಿ, ಅಳುತ್ತ ಮತ್ತೆ ಮೂರ್ಛೆಯನ್ನು ಹೊಂದಿದಳು.

ಇತಿ ಶ್ರೀ ಬ್ರಹ್ಮವೈವರ್ತೆ ಮಹಾಪುರಾಣೇ ನಾರಾಯಣ ನಾರದ ಸಂವಾದೇ ಶ್ರೀಕೃಷ್ಣ ಜನ್ಮಖಂಡೇ ಉತ್ತರಾರ್ಧೇ ರಾಧೋದ್ಧವಸಂವಾದೇ ತ್ರಿನವತಿತಮೋಽಧ್ಯಾಯಃ.

---

ಇಂತು ಬ್ರಹ್ಮವೈವರ್ತ ಮಹಾಪುರಾಣದ ನಾರಾಯಣ ನಾರದಸಂವಾದದಲ್ಲಿ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ ರಾಧಾ ಉದ್ಧವ ಸಂವಾದದಲ್ಲಿ ತೊಂಭತ್ತಮೂರನೆಯ ಅಧ್ಯಾಯವು ಪೂರ್ತಿಯಾದುದು.



## ತೊಂಭತ್ತಮೂರನೆಯ ಅಧ್ಯಾಯದ ಸಾರಾಂಶ.

ಉದ್ಧವನ ಸ್ತುತಿಯನ್ನೂ, ಶ್ರೀಕೃಷ್ಣನ ದಿವ್ಯನಾಮುವನ್ನೂ ಕೇಳಿದ ರಾಧೆಯು ಚೇತನಗೊಂಡವಳಾಗಿ, ಉದ್ಧವನನ್ನು ಸ್ವಾಗತಿಸಿ, ಅವನಿಂದ ಶ್ರೀಕೃಷ್ಣನು ಉಪನಯನ ಸಮಯಕ್ಕೆ ಅಲ್ಲಿಗೆ ಬರುವನೆಂಬುದನ್ನು ತಿಳಿದು ಹರ್ಷಿತಳಾಗಿ, ಉದ್ಧವನಿಗೆ ಅನೇಕವಿಧವಾದ ಉಡುಗೊರೆಗಳನ್ನು ಕೊಟ್ಟಳು. ಮತ್ತು ಹಿಂದೆ ತಾನು ಶ್ರೀಕೃಷ್ಣನೊಡನೆ ಕ್ರೀಡಿಸಿದುದನ್ನೆಲ್ಲ ಸ್ಮರಿಸಿಕೊಂಡು ಪುನಃ ಅಂಥ ದಿವ್ಯಘಳಿಗೆಯು ಎಂದಿಗೆ ಬರುವುದೆಂದು ಉದ್ಧವನನ್ನು ಪ್ರಶ್ನಿಸಿದಳು.



|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಚತುರ್ನವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಉದ್ಧವೋ ವಿಸ್ಮಯಂ ಪ್ರಾಪ್ಯ ಭಯಂ ಚ ವಿಪುಲಂ ಮುನೇ ।
ಚೇತನಂ ಕಾರಯಾಮಾಸ ತಾಮುವಾಚ ಮೃತಾಮಿವ || ೧ ||

ತದ್ಭಕ್ತಿಂ ಸಮಭಿಜ್ಞಾಯ ಸ್ವಾತ್ಮಾನಂ ಭಕ್ತಸಂಜ್ಞಕಮ್ ।
ತುಚ್ಛಂ ಮೇನೇ ಜಗತ್ಸರ್ವಂ ದೃಷ್ಟ್ವಾ ಭಾಗ್ಯವತೀಂ ಸತೀಮ್ || ೨ ||

|| ಉದ್ಧವ ಉವಾಚ ||

ಚೇತನಂ ಕುರು ಕಲ್ಯಾಣಿ ಜಗನ್ಮಾತರ್ನಮೋಸ್ತು ತೇ ।
ತ್ವಮೇವ ಪ್ರಾಕ್ತನಂ ಸರ್ವಂ ಕೃಷ್ಣಂ ದ್ರಕ್ಷ್ಯಸಿ ಸಾಂಪ್ರತಮ್ || ೩ ||

---

### ತೊಂಭತ್ತನಾಲ್ಕನೆಯ ಅಧ್ಯಾಯವು.

೧–೨. ಶ್ರೀ ನಾರಾಯಣನು ಹೇಳುತ್ತಾನೆ:— ಎಲೈ ನಾರದಮುನಿಯೇ! ಉದ್ಧವನು ಆಶ್ಚರ್ಯವನ್ನೂ ಬಹಳ ಭಯವನ್ನೂ ಹೊಂದಿದವನಾಗಿ, ಸತ್ತವಳಂತಿರುವ ಆ ರಾಧಿಕೆಯನ್ನು ಎಚ್ಚರಗೊಳಿಸಿದನು. ಭಾಗ್ಯವತಿಯೂ ಪತಿವ್ರತೆಯೂ ಆದ ರಾಧಿಕೆಯನ್ನು ನೋಡಿ, ಅವಳ ಭಕ್ತಿಯನ್ನು ಚೆನ್ನಾಗಿ ತಿಳಿದುಕೊಂಡು, ಭಕ್ತನೆಂಬ ಸಂಜ್ಞೆಯುಳ್ಳ ತನ್ನನ್ನೂ, ಈ ಪ್ರಪಂಚವೆಲ್ಲವನ್ನೂ ತುಚ್ಛವೆಂಬುದಾಗಿ ಭಾವಿಸಿದನು. ಮತ್ತು ಆ ರಾಧಿಕೆಯನ್ನು ಕುರಿತು ಮಾತನಾಡಿದನು.

೩. ಉದ್ಧವನು ಹೇಳುತ್ತಾನೆ:— ಎಲೈ ಮಂಗಳಕರಳೇ! ಪ್ರಜ್ಞೆಯನ್ನು ಹೊಂದುವವಳಾಗು. ಎಲೈ ಪ್ರಪಂಚದ ತಾಯಿಯೇ! ನಿನಗೆ ನಮಸ್ಕಾರವು. ನೀನೇ ಪುರಾತನವಾದ ಸಕಲವೂ ಆಗಿರುವೆ. ಈಗಲೇ ನೀನು ಕೃಷ್ಣನನ್ನು ನೋಡುವಿ.

ತ್ವತ್ತೋ ವಿಶ್ವಂ ಪವಿತ್ರಂ ಚ ತ್ವತ್ಪಾದರಜಸಾ ಮಹೀ ।
ಸುಪವಿತ್ರಂ ತ್ವದ್ವದನಂ ಪುಣ್ಯವತ್ಯಶ್ಚ ಗೋಪಿಕಾಃ ॥ ೪ ॥

ಲೋಕಾಸ್ತ್ವಾಮೇವ ಗಾಯಂತಿ ಸಂಗೀತೈರ್ಮಂಗಲಸ್ತವೈಃ ।
ತ್ವತ್ಸುಕೀರ್ತಿಂ ಚ ದೇವಾಶ್ಚ ಸನಕಾದ್ಯಾಶ್ಚ ಸಂತತಮ್ ॥ ೫ ॥

ಕೃತಪಾಪಹರಾಂ ಪುಣ್ಯಾಂ ತೀರ್ಥಪೂಜಾಂ ಚ ನಿರ್ಮಲಾಮ್ ।
ಹರಿಭಕ್ತಿಪ್ರದಾಂ ಭದ್ರಾಂ ಸರ್ವವಿಘ್ನವಿನಾಶಿನೀಮ್ ॥ ೬ ॥

ತ್ವಮೇವ ರಾಧಾ ತ್ವಂ ಕೃಷ್ಣಸ್ತ್ವಂ ಪುಮಾನ್ಪ್ರಕೃತಿಃ ಪರಾ ।
ರಾಧಾಮಾಧವಯೋರ್ಭೇದೋ ನ ಪುರಾಣೇ ಶ್ರುತೌ ತಥಾ ॥ ೭ ॥

ರಾಧಿಕಾಂ ಮೂರ್ಛಿತಾಂ ದೃಷ್ಟ್ವಾ ಪಶ್ಚಾತ್ಕೃತ್ವಾ ತಮುದ್ಧವಂ ।
ಉವಾಚ ಮಾಧವೀ ಗೋಪೀ ರಾಧಾಯಾಃ ಪುರತಃ ಸ್ಥಿತಾ ॥ ೮ ॥

---

೪. ನಿನ್ನಿಂದ ಪ್ರಪಂಚವು ಪವಿತ್ರವಾಗಿರುತ್ತದೆ, ನಿನ್ನ ಕಾಲಿನ ಧೂಳಿನಿಂದ ಭೂಮಿಯು ಪವಿತ್ರವಾಗಿರುತ್ತದೆ. ನಿನ್ನ ಮುಖವು ಅತ್ಯಂತ ಪವಿತ್ರವಾದುದು. ಗೋಪಿಕಾಸ್ತ್ರೀಯರೆಲ್ಲರೂಕೂಡ ಪುಣ್ಯವತಿಯರು.

೫. ಎಲ್ಲ ಲೋಕದ ಜನರೂಕೂಡ ಸಂಗೀತಗಳಿಂದಲೂ, ಮಂಗಳಸ್ತೋತ್ರಗಳಿಂದಲೂ ನಿನ್ನನ್ನೇ ಹಾಡಿ ಹೊಗಳುತ್ತಾರೆ. ನಿನ್ನ ಉತ್ತಮವಾದ ಕೀರ್ತಿಯನ್ನು ಕೂಡ ದೇವತೆಗಳೂ ಸನಕಾದಿಗಳೂ ಯಾವಾಗಲೂ ಹಾಡುತ್ತಾರೆ.

೬. ಭಕ್ತರ ಪಾಪಗಳನ್ನು ಹರಣಮಾಡಿ ಪುಣ್ಯರೂಪಳೂ, ತೀರ್ಥರೂಪಳೂ, ನಿರ್ಮಲಸ್ವರೂಪಳೂ, ಮಂಗಳರೂಪಳೂ ಆಗಿ, ಹರಿಭಕ್ತಿಯನ್ನು ಕೊಡುವ ಸಮಸ್ತವಾದ ವಿಘ್ನಗಳನ್ನೂ ನಿವಾರಣೆಮಾಡುವ ನಿನ್ನನ್ನೇ ಸಕಲರೂ ಸ್ತೋತ್ರಮಾಡುತ್ತಾರೆ.

೭. ನೀನು ರಾಧೆಯು, ನೀನೇ ಕೃಷ್ಣನು. ನೀನೇ ಶ್ರೇಷ್ಠಳಾದ ಪ್ರಕೃತಿಯು ಮತ್ತು ಪುರುಷನೂ ನೀನೇ ಆಗಿರುವಿ ರಾಧಾ ಮಾಧವರಿಗೆ ಪರಸ್ಪರ ಭೇದವೆಂಬುದು ವೇದದಲ್ಲಾಗಲೀ ಪುರಾಣದಲ್ಲಾಗಲೀ ಇಲ್ಲವೇಇಲ್ಲ.

೮. ರಾಧಿಕೆಯು ಮೂರ್ಛೆ ಹೊಂದಿದುದನ್ನು ಕಂಡು ಮಾಧವಿಯೆಂಬ ಗೋಪಿಯು ಆ ಉದ್ಧವನನ್ನು ಹಿಂದೆ ಬಿಟ್ಟು, ತಾನು ರಾಧೆಯ ಮುಂಭಾಗದಲ್ಲಿ ಬಂದು ನಿಂತು ಅವಳನ್ನು ಕುರಿತು ಮಾತನಾಡತೊಡಗಿದಳು.

|| ಮಾಧವ್ಯುವಾಚ ||

ಕಿಂ ವಾ ಚೋರಸ್ಯ ಕೃಷ್ಣಸ್ಯ ರೂಪಂ ವಾ ವೇಷಮುತ್ತಮಮ್ ।
ಕಿಂ ಸುಖಂ ವಿಭವಂ ಕಿಂ ವಾ ಗೌರವಂ ಚಾಪ್ಯನುತ್ತಮಮ್ || ೯ ||

ಕಿಂ ವಾ ತದ್ವೀರ್ಯಮೈಶ್ವರ್ಯಂ ಶೌರ್ಯಂ ವಾ ದುರತಿಕ್ರಮಮ್ ।
ಕಿಂ ವಾ ಸಿದ್ಧಂ ಪ್ರಸಿದ್ಧಂ ವಾ ಕಿಂ ವಾ ತುಲ್ಯಂ ಗುಣೋತ್ತಮಮ್ ||೧೦||

ಇತೋ ವಾ ಕುತ ಆಯಾತಃ ಪುನರೇವ ಕುತೋ ಗತಃ ।
ಬಾಲಕೋ ಗೋಪವೇಷಶ್ಚ ನ ಹಿ ರಾಜಾತ್ಮಜಃ ಪುಮಾನ್ || ೧೧ ||

ತ್ವಂ ಕಿಂ ಸ್ಮರಸಿ ಕಲ್ಯಾಣಿ ಗೋಪಾಲಂ ನಂದನಂದನಮ್ ।
ಆತ್ಮಾನಂ ರಕ್ಷ ಯತ್ನೇನ ಕಃ ಪ್ರಿಯಃ ಸ್ವಾತ್ಮನಃ ಪರಃ || ೧೨ ||

---

೯. ಮಾಧವಿಯು ಹೇಳುತ್ತಾಳೆ:— ಚೋರನಾದ ಕೃಷ್ಣನ ವೇಷವಾಗಲಿ ರೂಪವಾಗಲಿ ಉತ್ತಮವಾದುದೇ? ಅವನಿಂದೇನು ಸುಖವು ದೊರೆಯುತ್ತದೆ? ಅವನಿಗೆ ಐಶ್ವರ್ಯವುತಾನೆ ಇದೆಯೇ? ಹೆಚ್ಚಾದ ಗೌರವವಾದರೂ ಇದೆಯೇ?

೧೦. ಅವನ ಶಕ್ತಿಯುತಾನೆ ಎಷ್ಟರದು? ಅವನ ಐಶ್ವರ್ಯವುತಾನೆ ಎಷ್ಟರದು? ಸಾಹಸವುತಾನೇ ಮೀರಲಸಾಧ್ಯವಾಗಿ ಅವನಲ್ಲಿದೆಯೇ? ಅವನಲ್ಲಿ ಯಾವುದಾದರೂ ಸಿದ್ಧಿಯಿರುವುದೇ? ಮತ್ತು ಅಷ್ಟು ಪ್ರಸಿದ್ಧನಾಗಿರುವನೇ? ಉತ್ತಮ ಗುಣಗಳಲ್ಲಿ ಸಮಾನತೆಯುಂಟೇ?

೧೧. ಅವನು ಇಲ್ಲಿಗೆ ಬಂದುದೇತಕ್ಕೆ? ಮತ್ತೆ ಇಲ್ಲಿಂದ ಹೊರಟುಹೋದುದೇತಕ್ಕೆ? ಅವನಿನ್ನೂ ಹುಡುಗನು. ಗೋಪರಂತೆ ವೇಷವನ್ನು ಧರಿಸಿರುವನು. ಆ ಪುರುಷನು ರಾಜನ ಮಗನು ಅಲ್ಲ.

೧೨. ಎಲೈ ಮಂಗಳಕರಳೇ! ಗೋವುಗಳನ್ನು ಕಾಯುತ್ತಿರುವ ಆ ನಂದ ಕುಮಾರನನ್ನು ನೀನು ಏತಕ್ಕಾಗಿ ಯೋಚಿಸುತ್ತಿದ್ದೀಯೆ? ತನಗೆ ತಾನೇ ಬಂಧುವೇ ಹೊರತು, ಬೇರೆಯವನಾವನೂ ಅಲ್ಲ. ಆದುದರಿಂದ ಪ್ರಯತ್ನಪೂರ್ವಕವಾಗಿ ಪ್ರಾಣವನ್ನು ರಕ್ಷಿಸಿಕೊ.

॥ ಮಾಲತ್ಯುವಾಚ ॥

ಧಿಕ್ತ್ವಾಂ ರಾಧೇತಿ ನಿರ್ಲಜ್ಜಾಂ ತವೈವ ಜೀವನಂ ವೃಥಾ ।
ಜಗತೋ ಯುವತೀನಾಂ ಚ ಕರೋಷಿ ಸುಯಶಃಕ್ಷಯಮ್ ॥ ೧೩ ॥

ನಾರೀಣಾಂ ಗೋಪನಂ ಕಾರ್ಯಂ ಸುವ್ಯಕ್ತೇ ಸ್ವಯಶಃಕ್ಷಯೇಮ್ ।
ಯತ್ನೇನ ಚಕ್ಷುಷೋ ವಾರ್ಹಂ ಸಖಿ ಸಂಚರಣಂ ಕುರು ।
ಅಂತರೇ ಪತಿಭಾವಂ ಚ ಸಂಗೋಪ್ಯ ಭಾವನಂ ಕುರು ॥ ೧೪ ॥

ನವೈ ಜಾತಿಶ್ಚ ಶತ್ರೂಣಾಂ ಮಿತ್ರಾಣಾಂ ಚ ಸುರೇಶ್ವರಿ ।
ಶತ್ರುಃ ಕಾರ್ಯವಶೇನೈವ ಮಿತ್ರಂ ಚ ಕರ್ಮಣಾ ಭವೇತ್ ॥ ೧೫ ॥

ಸ್ವಕಾರ್ಯಮುದ್ಧರೇತ್ಪ್ರಜ್ಞಾಃ ಕಾರ್ಯಧ್ವಂಸೇನ ಮೂರ್ಖತಾ ।
ಕಃ ಕಸ್ಯ ವಲ್ಲಭೋ ರಾಧೇ ಕಃ ಕಸ್ಯಾಪ್ರಿಯ ಏವ ಚ ॥ ೧೬ ॥

---

೧೩. ಮಾಲತಿಯು ಹೇಳುತ್ತಾಳೆ :—ಎಲೈ ರಾಧೆಯೇ ! ನಿನಗೆ ಧಿಕ್ಕಾರವು. ನೀನು ಸ್ವಲ್ಪವೂ ಲಜ್ಜೆಯಿಲ್ಲದವಳಾಗಿರುವಿ. ನಿನ್ನ ಜೀವನವೇ ವ್ಯರ್ಥವು. ನೀನು ಈ ಪ್ರಪಂಚದಲ್ಲಿರುವ ಸ್ತ್ರೀಯರ ಕೀರ್ತಿಗಳನ್ನೆಲ್ಲ ಹಾಳುಮಾಡುತ್ತಿರುವೆ.

೧೪. ಸ್ತ್ರೀಯರಿಗೆ ಅಪಕೀರ್ತಿಯೆಂಬುದು ಬರುವುದಕ್ಕೆ ಮುಂಚೆಯೇ ಕೀರ್ತಿಯನ್ನು ಕಾಪಾಡಿಕೊಳ್ಳಬೇಕಾದುದು ಮುಖ್ಯವು. ಪ್ರಯತ್ನಪಟ್ಟು ಕಣ್ಣಿಗೆ ಕಂಡು ಬರುವುದನ್ನೆಲ್ಲ ಗೋಪನಮಾಡಿಕೊಳ್ಳಬೇಕು. ಎಲೈ ಸಖಿಯೇ ! ನೀನು ಎದ್ದು ಸಂಚಾರಮಾಡು. ಪತಿಯೆಂಬ ಭಾವನೆಯನ್ನು ಹೃದಯದಲ್ಲಿಯೇ ಅಡಗಿಸಿಕೊಳ್ಳುವವಳಾಗು.

೧೫. ಎಲೈ ದೇವತೆಗಳ ಒಡೆಯಳೇ ! ಶತ್ರುಗಳೆಂಬ ಜಾತಿಯೊಂದಿಲ್ಲ. ಹಾಗೆಯೇ ಮಿತ್ರರೆಂಬುದೂ ಒಂದು ಜಾತಿಯಲ್ಲ. ತಮ್ಮ ಕೆಲಸಕ್ಕೆ ತಕ್ಕಂತೆ ಮಿತ್ರನಾಗುತ್ತಾನೆ. ಅಂತೆಯೇ ತಾನು ಮಾಡುವ ಕೆಲಸದಿಂದ ಶತ್ರುವಾಗುತ್ತಾನೆ.

೧೬. ಪ್ರಾಜ್ಞನಾದವನು ತನ್ನ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ವಿರುದ್ಧವಾದ ಎರಡು ಕೆಲಸಗಳನ್ನು ಮಾಡತೊಡಗುವುದು ಮೂರ್ಖತನವೇ ಸರಿ. ಎಲೈ ರಾಧೆಯೇ ! ಯಾವನು ಯಾವನಿಗೆ ಪ್ರಿಯನು ? ಯಾವನು ಯಾವನಿಗೆ ಅಹಿತನು ?

ಕಾರ್ಯಂ ಚ ಸಮಯಂ ಜ್ಞಾತ್ವಾ ಸಂತಃಕುರ್ವಂತಿ ಸಂತತಮ್ ।
ಶತ್ರುರ್ಧನಾಪಹಾರೀ ಚ ಪ್ರಾಣಹರ್ತಾ ತತಃ ಪರಃ ॥ ೧೭ ॥

ಕಟುವಕ್ತಾ ದುಃಖದಾತಾ ಶತ್ರೂಣಾಂ ಲಕ್ಷಣಂ ಶೃಣು ।
ಸ್ವಕುಲಾತ್ತ್ವಾಂ ಬಹಿಷ್ಕೃತ್ಯ ವಿಸೃಜ್ಯ ಶೋಕಸಾಗರೇ ॥ ೧೮ ॥

ಗೃಹೀತ್ವಾ ಚೇತನಂ ಪ್ರಾಣಾನ್ನಿಷ್ಠುರೋ ದಾರುಣೋ ಗತಃ ।
ಕಿಂ ಕಿಂ ಸ್ಮರಸಿ ಮೂಢೇ ಹಿ ತ್ಯಜ ಶೋಕಂ ಸುದಾರುಣಮ್ ॥ ೧೯ ॥

ಆತ್ಮಾನಂ ರಕ್ಷ ಯತ್ನೇನ ಕಃ ಪ್ರಿಯಃ ಸ್ವಾತ್ಮನಃ ಪರಃ ॥ ೨೦ ॥

॥ ಪದ್ಮಾವತ್ಯುವಾಚ ॥

ಭವತಾ ಕಥಿತಂ ಪೂರ್ವಂ ಯಮುನಾಜಲಸನ್ನಿಧೌ ।
ಅರಸಸ್ಯ ರತಿರ್ದೂರಂ ನಾರೀಣಾಂ ನ ಸುಖಂ ಪ್ರಿಯೇ ।
ವಿದ್ಯುಜ್ಜ್ವಾಲಾ ಜಲೇ ರೇಖಾ ಖಲಾನಾಂ ಪ್ರೀತಿರೇವ ಚ ॥ ೨೧ ॥

---

೧೭–೨೦. ಉತ್ತಮರಾದವರು ಸಮಯವನ್ನೂ ಕೆಲಸವನ್ನೂ ಯಾವಾಗಲೂ ವಿಚಾರಮಾಡಿ ಮುಂದುವರಿಯುತ್ತಾರೆ. ಶತ್ರುಗಳಿಗೆ ಗುರುತನ್ನು ಹೇಳುತ್ತೇನೆ ಕೇಳು. ಹಣವನ್ನು ಕದಿಯುವವನು, ಪ್ರಾಣವನ್ನು ತೆಗೆಯುವವನು, ಮತ್ತು ಕ್ರೂರವಾಗಿ ಮಾತನಾಡುವವನು, ದುಃಖವನ್ನು ಉಂಟುಮಾಡುವವನು ಇವರುಗಳೆಲ್ಲ ಶತ್ರುಗಳು. ನಿರ್ದಯನೂ ಭಯಂಕರನೂ ಆದ ಆ ಕೃಷ್ಣನು ನಿನ್ನನ್ನು ನಿನ್ನ ಕುಲದಿಂದ ಹೊರಪಡಿಸಿ, ದುಃಖವೆಂಬ ಸಮುದ್ರದಲ್ಲಿ ಮುಳುಗಿಸಿ, ನಿನ್ನ ಬುದ್ಧಿಯನ್ನೂ ಪ್ರಾಣಗಳನ್ನೂ ತೆಗೆದುಕೊಂಡು ಹೊರಟುಹೋದನು. ಎಲೈ ಮೂಢಳೇ! ಇದನ್ನೆಲ್ಲಾ ನೀನು ಜ್ಞಾಪಿಸಿಕೊಳ್ಳುತ್ತಿರುವೆಯೋ? ಘೋರವಾದ ಈ ದುಃಖವನ್ನು ಬಿಡು. ಪ್ರಯತ್ನಮಾಡಿ ಆತ್ಮರಕ್ಷಣೆ ಮಾಡಿಕೋ. ತನ್ನ ಆತ್ಮಕ್ಕಿಂತಲೂ ಹಿತವಾದುದು ಯಾವುದಿದೆ?

೨೧–೨೩. ಪದ್ಮಾವತಿಯು ಹೇಳುತ್ತಾಳೆ:— ಎಲೈ ಪ್ರಿಯ ಸಖಿಯೇ! ರಸಿಕನಲ್ಲದವನಿಗೆ ರತಿಯೆಂಬುದು ಇಲ್ಲವೇಇಲ್ಲ. ಅವನು ಸ್ತ್ರೀಯರಿಗೆ ಸುಖವನ್ನುಂಟುಮಾಡುವುದಿಲ್ಲವೆಂಬುದನ್ನು ಹಿಂದೆ ನೀನೇ ಯಮುನಾನದಿಯ ತೀರದಲ್ಲಿ ಹೇಳಿರುವಿ.

ನ ನೀತಿರ್ನಾತಿಶಾಸ್ತ್ರೇಷು ಸುವಿಶ್ವಾಸಃ ಖಲೇಷು ಚ ।
ಯದಾ ತಂ ಯಮುನಾಕೂಲೇ ಮುಖಂ ವೀಕ್ಷ್ಯ ಹರೇರಹೋ ॥ ೨೨ ॥

ಸಸ್ಮಿತಂ ಸುಕಟಾಕ್ಷಂ ಚ ಪುನಃಕೃತ್ವಾಸ್ಯ ಗೋಪನಮ್ ।
ಪುನಃಪುನಸ್ತ್ವಂ ಸಂವೀಕ್ಷ್ಯ ತ್ವಯಾ ತ್ಯಕ್ತಂ ಚ ಚೇತನಮ್ ॥ ೨೩ ॥

ಗೃಹಂ ತ್ಯಕ್ತ್ವಾ ಗುರುಭಯಂ ಸಖೀನಾಂ ವಚನಂ ಶುಭಮ್ ।
ಸಂತತಂ ಧ್ಯಾಯತೇ ಕೃಷ್ಣೋ ನಾಹಾರಂ ಜೀವನಂ ತಥಾ ॥ ೨೪ ॥

ಕ್ವ ಕೃಷ್ಣೋ ಮಥುರಾಯಾಂ ಚ ಕ್ವಾಪಿ ತ್ವಂ ಕದಲೀವನೇ ।
ತ್ವಂ ಯದಿ ತ್ಯಜಸಿ ಪ್ರಾಣಾನ್ನಾವಿರ್ಭವತಿ ಸೋಧುನಾ ।
ಕಾಲೇ ದ್ರಕ್ಷ್ಯಸಿ ಸ್ವಾತ್ಮಾನಂ ಯದಿ ರಕ್ಷಸಿ ಸುಂದರಿ ॥ ೨೫ ॥

---

ಮಿಂಚಿನ ಜ್ವಾಲೆಯೂ, ನೀರಿನ ಗೆರೆಯೂ, ದುಷ್ಟರ ಪ್ರೀತಿಯೂ ಶಾಸ್ತ್ರಗಳಲ್ಲಿ ಬಹಳ ವಿಶ್ವಾಸವೂ, ನೀಚರಲ್ಲಿ ಪ್ರೀತಿಯೂ ನೀತಿಸಮ್ಮತವಲ್ಲವು. ಯಾವಾಗ ನೀನು ಯಮುನಾನದಿಯ ತೀರದಲ್ಲಿ ಮುಗುಳುನಗೆಯಿಂದ ಕೂಡಿದ ಆ ಹರಿಯ ಮುಖವನ್ನು ನೋಡಿ, ಕಡೆಗಣ್ಣಿನ ನೋಟವನ್ನು ಬೀರಿ, ಮತ್ತೆ ಅದನ್ನು ಮುಚ್ಚುವವಳಾದೆಯೋ, ಆಗ ಮತ್ತೆಮತ್ತೆ ಅವನನ್ನು ನೋಡುತ್ತ ನೀನು ಸ್ವಾಧೀನವಿಲ್ಲದವಳಾದೆ.

೨೪. ಮತ್ತು ಮನೆಯನ್ನು ಬಿಟ್ಟು ಹಿರಿಯರೇನು ಹೇಳುವರೋ ಎಂಬ ಹೆದರಿಕೆಯನ್ನು ತೊರೆದು ಸಖಿಯರು ಹೇಳಿದ ಹಿತಕರವಾದ ಮಾತುಗಳನ್ನು ಕೇಳದೆ, ಆಹಾರವನ್ನೂ ಮತ್ತು ಜೀವನವನ್ನೂ ಲೆಕ್ಕಿಸದೆ ಯಾವಾಗಲೂ ಕೃಷ್ಣನನ್ನೇ ಧ್ಯಾನಿಸುತ್ತಿರುವಿ.

೨೫. ಮಥುರಾಪಟ್ಟಣದಲ್ಲಿರುವ ಕೃಷ್ಣನೆಲ್ಲಿ! ಬಾಳೆಯ ವನದಲ್ಲಿರುವ ನೀನೆಲ್ಲಿ! ಆ ಕೃಷ್ಣನು ನೀನು ಒಂದುವೇಳೆ ಪ್ರಾಣ ಕಳೆದುಕೊಂಡರೂ ಈಗ ಪ್ರತ್ಯಕ್ಷವಾಗುವುದಿಲ್ಲ. ಎಲೈ ಸುಂದರಿಯೇ! ನೀನು ನಿನ್ನನ್ನು ಕಾಪಾಡಿಕೊಂಡ ಪಕ್ಷದಲ್ಲಿ ಮುಂದೆ ಯಾವಾಗಲಾದರೊಂದುಕಾಲದಲ್ಲಿ ಅವನನ್ನು ನೋಡುವೆ.

|| ಚಂದ್ರಮುಖ್ಯುವಾಚ ||

ಪ್ರಾಕ್ತನೇನ ಶುಭಂ ಸರ್ವಂ ಸುಖಂ ಚ ವಿಭವಶ್ಚಿರಂ || ೨೬ ||

ದುಃಖಂ ಶೋಕೋ ಪ್ರಾಕ್ತನೇನ ವಿಪತ್ಸಂಪಚ್ಚ ಸಾಂಪ್ರತಮ್ |
ಭಾರತೇ ಪುಣ್ಯಭೂಮೌ ಚ ಸರ್ವೇಷಾಮೀಪ್ಸಿತೇ ವದೇ || ೨೭ ||

ಲಭೇತ್ಪತಿಂ ಹರಿಂ ಕಾಂತಂ ತಪಸಾ ಪ್ರಕೃತೇಃ ಪುರಮ್ |
ತಥಾ ವಿಪ್ರದಹೇದ್ಗಾತ್ರಂ ಕಾಮಬಾಣೇನ ಸಾಂಪ್ರತಮ್ || ೨೮ ||

ಅಸ್ಯಾಃ ಶತ್ರುಃ ಕಥಂ ಚಂದ್ರೋ ಮಧುರ್ವಾ ಮಧುಮಾಧವೌ |
ಶಂಕರೇಣ ಪ್ರದಗ್ಧೋಽಭೂತ್ಪುನರೇವ ಸ ಮನ್ಮಥಃ || ೨೯ ||

ಚಂದ್ರಂ ಭಕ್ಷತು ರಾಹುಶ್ಚ ಪುನಶ್ಚೋದ್ವಮನಂ ತಥಾ |
ಮಧುಶ್ಚ ಮಿತ್ರಶೋಕೇನ ಪ್ರಾಣಾಂಸ್ತ್ಯಕ್ತ್ವಾ ಯಯೌ ವನಮ್ || ೩೦ ||

---

೨೬. ಚಂದ್ರಮುಖಿಯು ಹೇಳುತ್ತಾಳೆ;— ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದಿಂದ ಸಮಸ್ತ ಮಂಗಳವೂ ಸುಖವೂ ಬಹುಕಾಲ ಅನುಭವಿಸಬಹುದಾದ ಐಶ್ವರ್ಯವೂ ಉಂಟಾಗುತ್ತದೆ.

೨೭. ಈ ಜನ್ಮದಲ್ಲಿ ಉಂಟಾಗುವ ದುಃಖವೂ, ವ್ಯಸನವೂ, ತೊಂದರೆಯೂ, ವಿಪತ್ತೂ ಕೂಡ ಹಿಂದಿನ ಜನ್ಮದ ಕರ್ಮದಿಂದುಂಟಾಗುತ್ತದೆ. ಪುಣ್ಯಭೂಮಿಯಾದ ಭಾರತದಲ್ಲಿ ಹುಟ್ಟಬೇಕೆಂಬುದು ಸಕಲರಿಗೂ ಇಷ್ಟವಾಗಿರುತ್ತದೆ.

೨೮. ಸುಂದರವಾದ, ಪ್ರಕೃತಿಗಿಂತಲೂ ಶ್ರೇಷ್ಠನಾದ ಹರಿಯನ್ನು ಗಂಡನನ್ನಾಗಿ ಪಡೆಯಲು ಬಹಳ ತಪಸ್ಸನ್ನು ಮಾಡಬೇಕು. ಹಾಗಿಲ್ಲದಿರುವಾಗ ಮನ್ಮಥನ ಬಾಣದಿಂದ ಶರೀರವು ಬೆಂದುಹೋಗುತ್ತದೆ.

೨೯–೩೦. ಇವಳಿಗೆ ಚಂದ್ರನೂ, ವಸಂತನೂ, ಚೈತ್ರ ವೈಶಾಖಮಾಸಗಳೂ ಶತ್ರುಗಳಾಗಿವೆಯಲ್ಲವೇ! ಮನ್ಮಥನನ್ನು ಈಶ್ವರನು ಹಣೆಗಣ್ಣಿನಿಂದ ಸುಟ್ಟಿದ್ದರೂ ಮತ್ತೆ ಅವನು ಪ್ರಸರಿಸುತ್ತಿರುವನು. ರಾಹುವು ಚಂದ್ರನನ್ನು ನುಂಗಿದರೂ ಮತ್ತೆ ಉಗುಳುತ್ತಾನೆ. ವಸಂತನು ತನ್ನ ಸ್ನೇಹಿತನಾದ ಮನ್ಮಥನ ಸಾವಿನ ದುಃಖದಿಂದ ಕಾಡಿಗೆ ಹೋಗಿ ಪ್ರಾಣವನ್ನು ಬಿಟ್ಟನು.

ಸುಧಾಸಿಂಧುಶ್ಚ ಚೇಂದುರ್ಯೋ ವಿಷಸಿಂಧುಶ್ಚ ಮಾಂ ಪ್ರತಿ ।
ಸುವೇಷಃ ಸ್ಯಾಜ್ಜ್ವಲಸ್ವಹ್ನಿಶ್ಚಂದನಂ ತತ್ ಘೃತಾಹುತಿಃ ॥ ೩೧ ॥

ಸತತಂ ಪ್ರದಹೇದ್ಗಾತ್ರಂ ಸುಗಂಧಿಶ್ಚ ಸಮೀರಣಃ ।
ತ್ಯಕ್ತಾಹಾರಾ ಮಮ ಸಖೀ ಪಶ್ಯ ಶ್ವಸಿತಜೀವತೀಮ್ ॥ ೩೨ ॥

ಪ್ರಶಂಸಾಂ ಕುರು ಕೃಷ್ಣಸ್ಯ ಮುಖೇನ ಕುರು ನಂದನ ।
ತನ್ನಾಮಸ್ಮೃತಿಮಾತ್ರೇಣ ತದ್ಗುಣ ಶ್ರವಣೇನ ಚ ।
ತದ್ವಾರ್ತಯಾ ಚ ಶುಭಯಾ ಸಹಸಾ ಚೇತನಂ ಭವೇತ್ ॥ ೩೩ ॥

॥ ಶಶಿಕಲೋವಾಚ ॥

ತ್ವಂ ಕಿಂ ಮಾಧವಿ ಜಾನಾಸಿ ಕೃಷ್ಣಮಾತ್ಮಾನಮೀಶ್ವರಮ್ ॥ ೩೪ ॥

ಯಂ ತಂ ಬ್ರಹ್ಮಾದಯೋ ದೇವಾ ವೇದಾಶ್ಚತ್ವಾರ ಏವ ಚ ।
ಧ್ಯಾಯಂತಿ ಸತತಂ ಸಂತಃ ಪಾದಪದ್ಮಂ ಸುರೇಪ್ಸಿತಮ್ ॥ ೩೫ ॥

---

೩೧. ಯಾವ ಚಂದ್ರನು ಅಮೃತಸಮುದ್ರವೆಂದು ಪ್ರಸಿದ್ಧನಾಗಿರುವನೋ ಅವನು ಈಗ ವಿಷಸಮುದ್ರನಾಗಿರುವನು. ಒಳ್ಳೆಯ ಅಲಂಕಾರವು ಉರಿಯುತ್ತಿರುವ ಬೆಂಕಿಯಂತಾಗಿದೆ. ಗಂಧವು ತುಪ್ಪದ ಆಹುತಿಯಂತಾಗಿದೆ.

೩೨. ಸುವಾಸನೆಯಾದ ಗಾಳಿಯೂಕೂಡ ಯಾವಾಗಲೂ ಶರೀರವನ್ನು ಸುಡುತ್ತಿರುವುದು. ನನ್ನ ಸಖಿಯು ಆಹಾರವನ್ನು ಬಿಟ್ಟು ನಿಟ್ಟುಸಿರನ್ನು ಮಾತ್ರ ಬಿಡುತ್ತ ಬದುಕಿರುವಳು, ನೋಡು.

೩೩. ಎಲೈ ಕುರುವಂಶಸಂಭೂತನೇ! ಬಾಯಿಯಿಂದ ಕೃಷ್ಣನ ಶ್ಲಾಘನೆಯನ್ನು ಮಾಡುವವನಾಗು. ಆ ಕೃಷ್ಣನ ಹೆಸರನ್ನು ಕೇಳುವುದರಿಂದಲೂ, ಅವನ ಗುಣಗಳನ್ನು ಕೇಳುವುದರಿಂಡಲೂ. ಅವನ ಶುಭಸಮಾಚಾರವನ್ನು ಕೇಳುವುದರಿಂದಲೂ ಕೂಡ ಜಾಗ್ರತೆಯಾಗಿ ರಾಧೆಯು ಎಚ್ಚರಗೊಳ್ಳಬಹುದು.

೩೪–೩೬. ಶಶಿಕಲೆಯು ಹೇಳುತ್ತಾಳೆ:— ಎಲೈ ಮಾಧವಿಯೇ! ಯಾವನನ್ನು ಬ್ರಹ್ಮನೇ ಮುಂತಾದ ದೇವತೆಗಳೂ, ನಾಲ್ಕು ವೇದಗಳೂ ಧ್ಯಾನಮಾಡುತ್ತಾರೋ, ಸತ್ಪುರುಷರಾದವರು ಯಾವಾಗಲೂ ದೇವತೆಗಳೂ ಅಪೇಕ್ಷಿಸುವ ಯಾವನ ಪಾದಕಮಲಗಳನ್ನು ಧ್ಯಾನಮಾಡುತ್ತಾರೋ, ಲಕ್ಷ್ಮಿಯೂ, ಸರಸ್ವತಿಯೂ,

ಪದ್ಮಾ ಸರಸ್ವತೀ ದುರ್ಗಾ ಸೋನಂತೋಪಿ ಮಹೇಶ್ವರಃ ।
ಯಂ ನ ಜಾನಂತಿ ಸಿದ್ಧೇಂದ್ರಾ ಮುನೀಂದ್ರಾ ಮನವಸ್ತಥಾ　　॥ ೩೬ ॥

ಸರ್ವಾತ್ಮನಃ ಕೃತೋ ರೂಪಂ ನಿರ್ಗುಣಸ್ಯ ಕೃತೋ ಗುಣಾಃ ।
ಸತ್ಯಮುಕ್ತಂ ಚ ಸತ್ಯಸ್ಯ ಯತ್ತದೇವ ಯಥೋಚಿತಮ್　　॥ ೩೭ ॥

ಧತ್ತೇ ಭಾರಾವತರಣೇ ಪೃಥಿವ್ಯಾಶ್ಚ ಮನೋರಥಮ್ ।
ಸುಖಮಾಹ್ಲಾದಕಂ ರಮ್ಯಂ ಭಕ್ತಾನುಗ್ರಹವಿಗ್ರಹಮ್　　॥ ೩೮ ॥

ಕಿಮನಿರ್ವಚನೀಯಂ ಚ ರೂಪಂ ಜನಮನೋಹರಮ್ ।
ಕೋಟಿಕಂದರ್ಪಲಾವಣ್ಯಂ ಲೀಲಾಧಾಮ ಶುಭಾಶ್ರಯಮ್　　॥ ೩೯ ॥

ಯತ್ಪಾದಪದ್ಮಮಧುರಂ ಮಧು ಮಂದಾಕಿನೀ ಜಲಮ್ ।
ದಧ್ರೇ ಶಿರಸಿ ಭಕ್ತ್ಯಾ ಚ ಸರ್ವೇಶಃ ಶಂಕರಃ ಪರಃ　　॥ ೪೦ ॥

---

ದುರ್ಗೆಯೂ, ಅನಂತನೂ, ಮಹೇಶ್ವರನೂ, ಸಿದ್ಧೇಂದ್ರರೂ, ಮುನೀಂದ್ರರೂ, ಮನುಗಳೂಕೂಡ ಯಾವನನ್ನು ತಿಳಿಯದವರಾಗಿರುತ್ತಾರೋ ಅಂಥಾ ಕೃಷ್ಣನನ್ನು ನೀನೇನು ತಿಳಿಯುವಿ.

೩೭. ಸಕಲ ಪ್ರಪಂಚರೂಪವನ್ನು ಹೊಂದಿರುವ ಪರಮಾತ್ಮನಿಗೆ ರೂಪವೆಲ್ಲಿಯದು? ನಿರ್ಗುಣಸ್ವರೂಪನಾದವನಿಗೆ ಗುಣಗಳು ಹೇಗೆ ಉಂಟಾಗುತ್ತವೆ? ಸತ್ಯಸ್ವರೂಪನೆಂಬುದಾಗಿ ಹೇಳಲ್ಪಟ್ಟಿರುವ ಅಂಶವೇನೇ ಉಚಿತವಾದುದು.

೩೮. ಭೂಮಿಯ ಭಾರವನ್ನಿಳುಹಲೋಸ್ಕರ ಮನೋಹರವೂ, ಸಂತೋಷಕರವೂ, ಸುಂದರವೂ ಆದ ಭಕ್ತರನ್ನು ಅನುಗ್ರಹಿಸಲು ಯೋಗ್ಯವಾದ ದೇಹವನ್ನು ಧರಿಸುತ್ತಾನೆ.

೩೯. ಆ ಪರಮಾತ್ಮನ ರೂಪವನ್ನು ವರ್ಣಿಸಲಸಾಧ್ಯವು. ಅದು ಜನರ ಮನಸ್ಸನ್ನು ಸೆಳೆಯತಕ್ಕುದು. ಒಂದುಕೋಟಿ ಮನ್ಮಥರ ಲಾವಣ್ಯಸಮಾನವಾದುದು. ವಿಲಾಸಗಳಿಗೆ ಆಶ್ರಯವಾಗಿಯೂ ಮಂಗಳಗಳಿಗೆ ಮನೆಯಾಗಿಯೂ ಇರುವುದು.

೪೦–೪೧. ಸರ್ವೇಶ್ವರನೂ ಶ್ರೇಷ್ಠನೂ ಆದ ಶಂಕರನು ಯಾವ ವಿಷ್ಣುವಿನ ಪಾದಕಮಲಗಳಲ್ಲಿ ಹುಟ್ಟುವುದರಿಂದ ಮಧುರವಾದ ಗಂಗಾಜಲವನ್ನು ಅತ್ಯಂತ ಭಕ್ತಿಯಿಂದ ತನ್ನ ತಲೆಯಮೇಲೆ ಹೊತ್ತುಕೊಂಡಿರುವನೊ, ಆ ವೈರಾಗ್ಯವಂತನಾದ

ಶಶ್ವತ್ಕರೋತಿ ವೈರಾಗೀ ತೀರ್ಥಕೀರ್ತೇಶ್ಚ ಕೀರ್ತನಮ್ ।
ಕ್ಷಣಂ ನೃತ್ಯತಿ ಭಕ್ತ್ಯಾ ಚ ಪಂಚವಕ್ತ್ರೇಣ ಗಾಯತಿ ॥ ೪೧ ॥

ಆಹಾರಂ ಭೂಷಣಂ ವಸ್ತ್ರಂ ಪರಿತ್ಯಜ್ಯ ದಿಗಂಬರಃ ।
ಬ್ರಹ್ಮಜ್ಯೋತಿಸ್ಸ್ವರೂಪಂ ಚ ಧ್ಯಾತ್ವಾ ಶುಭ್ರಂ ಸುನಿರ್ಮಲಮ್ ॥ ೪೨ ॥

ಬ್ರಹ್ಮಾ ಚ ತಪಸಾ ಜನ್ಮ ನಯತ್ಯೇವ ಹಿ ಸೇವಯಾ ।
ಶೇಷಃ ಸನತ್ಕುಮಾರಶ್ಚ ಸಿದ್ಧಸಂಘಶ್ಚ ಯೋಗವಿತ್ ॥ ೪೩ ॥

॥ ಸುಶೀಲೋವಾಚ ॥

ನಿರ್ಮಂಥನಾರ್ಹಂ ನ ಭವೇತ್ತಸ್ಯ ಕಾಮಶತಂ ಶತಮ್ ।
ಚಂದ್ರೋSಶ್ವಿನೀ ಕುಮಾರೋ ವಾ ರೂಪೇಷು ಕೇನ ಗಣ್ಯತೇ ॥ ೪೪ ॥

ಅಸಂಖ್ಯೇಷು ಚ ವಿಶ್ವೇಷು ಬ್ರಹ್ಮವಿಷ್ಣುಶಿವಾದಯಃ ।
ಮುನಯೋ ಮನವಃ ಸಿದ್ಧಾ ಭಕ್ತಾಃ ಸಂತಶ್ಚ ಸಂತತಂ ॥ ೪೫ ॥

---

ಈಶ್ವರನು ತೀರ್ಥಗಳಂತೆ ಪವಿತ್ರವಾದ ಕೀರ್ತಿಯುಳ್ಳ ಪರಮಾತ್ಮನನ್ನು ಮತ್ತೆಮತ್ತೆ ಸ್ತುತಿಸುತ್ತಾನೆ. ಮತ್ತು ಭಕ್ತಿಯಿಂದ ಕ್ಷಣಕಾಲ ನರ್ತನಮಾಡುತ್ತಾನೆ. ತನ್ನ ಐದು ಮುಖಗಳಿಂದಲೂಕೂಡ ಹಾಡುತ್ತಾನೆ-

೪೨. ಆಹಾರವನ್ನೂ ಆಭರಣವನ್ನೂ ಬಟ್ಟೆಯನ್ನೂ ಬಿಟ್ಟು, ಬೆತ್ತಲೆಯಾಗಿ ಬ್ರಹ್ಮಜ್ಯೋತಿರೂಪನಾದ, ಶುಭ್ರನೂ ನಿರ್ಮಲನೂ ಆದ ಪರಮಾತ್ಮನನ್ನು ಧ್ಯಾನಿಸುತ್ತಾನೆ.

೪೩. ಬ್ರಹ್ಮನೂಕೂಡ ತಪಸ್ಸಿನಿಂದಲೇ ತನ್ನ ಜನ್ಮವನ್ನು ಕಳೆಯುತ್ತಾನೆ, ಮತ್ತು ಅವನ ಸೇವೆಯಿಂದಲೇ ಕಾಲಕಳೆಯುತ್ತಾನೆ. ಶೇಷನೂ ಸನತ್ಕುಮಾರನೂ ಸಿದ್ಧರ ಸಮೂಹವೂಕೂಡ ಯೋಗವನ್ನು ತಿಳಿದು, ಆ ಮೂಲಕ ಪರಮಾತ್ಮನನ್ನು ಧ್ಯಾನಮಾಡುತ್ತಾರೆ.

೪೪. ಸುಶೀಲೆಯು ಹೇಳುತ್ತಾಳೆ:— ಆ ಕೃಷ್ಣನಿಗೆ ನೂರು ಮನ್ಮಥರೂ ಕೂಡ ಸಮನಾಗಲಾರರು. ರೂಪದಲ್ಲಿ ಚಂದ್ರನೋ ಅಶ್ವಿನೀ ಕುಮಾರನೋ ಯಾರೆಂದು ಹೋಲಿಸಬಹುದು.

೪೫.–೪೮. ಲೆಕ್ಕಮಾಡಲಸಾಧ್ಯವಾದ ಬ್ರಹ್ಮಾಂಡಗಳಲ್ಲಿ ಬ್ರಹ್ಮ ವಿಷ್ಣು ಶಿವ ಮುಂತಾದವರೂ, ಮುನಿಗಳೂ, ಸಿದ್ಧರೂ, ಭಕ್ತರೂ, ಸತ್ಪುರುಷರೂಕೂಡ

ಧ್ಯಾಯಂತೇ ಯತ್ಪದಾಂಭೋಜಂ ನಿರ್ಗುಣಸ್ಯಾತ್ಮನಶ್ಚ ವೈ ।
ವೇದಾಃ ಸ್ತೋತುಂ ನ ಶಕ್ತಾಶ್ಚ ಯಮೀಶಂ ಚ ಸರಸ್ವತೀ || ೪೬ ||

ಜಡೀಭೂತಾ ಚ ಭೀತಾ ಚ ಸ್ತವನೇನ ಕ್ಷಮಾಪಯೇತ್ ।
ಸಹಸ್ರವಕ್ತ್ರಃ ಸ್ತವನೇ ಕಂಪಿತಶ್ಚ ನಿರಂತರಮ್ || ೪೭ ||

ವೇದಾನಾಂ ಜನಕೋ ಬ್ರಹ್ಮಾ ಸ್ತೋತ್ರೇಣ ತಸ್ಯ ಈಶ್ವರಃ ।
ತಂ ಸತ್ಯಂ ನಿತ್ಯಮೀಶಂ ಚ ಮಾಧವೀ ಪರಿನಿಂದತಿ || ೪೮ ||

ಅಪವಿತ್ರಾ ಸಭಾ ಭೂತಾ ಗೋಪೀನಾಂ ಜೀವನಂ ವೃಥಾ ।
ತಾಸು ಪುಣ್ಯವತೀ ರಾಧಾ ಧ್ಯಾಯತೇ ಯಂ ದಿವಾನಿಶಮ್ || ೪೯ ||

ಯನ್ನಾಮಸ್ಮೃತಿಮಾತ್ರೇಣ ಕೋಟಿಜನ್ಮಾರ್ಜಿತಂ ಸಖಿ ।
ಕೃತಪಾಪಭಯಃ ಶೋಕಃ ಪ್ರಣಶ್ಯತಿ ನ ಸಂಶಯಃ || ೫೦ ||

---

ನಿರ್ಗುಣನೂ ಪರಮಾತ್ಮನೂ ಆದ ಯಾವನ ಪಾದಕಮಲಗಳನ್ನು ಯಾವಾಗಲೂ ಧ್ಯಾನಮಾಡುತ್ತಾರೋ, ಯಾವ ಪ್ರಭುವನ್ನು ವೇದಗಳೂ ಸರಸ್ವತಿಯೂ ಕೂಡ ಸ್ತೋತ್ರಮಾಡಲು ಸಾಮರ್ಥ್ಯವಿಲ್ಲದವರಾಗಿರುವರೋ, ಯಾವ ಸರಸ್ವತಿಯು ಮೂಢಳಾಗಿಯೂ ಹೆದರಿದವಳಾಗಿಯೂ, ಸ್ತೋತ್ರಮಾಡಲು ಸಾಧ್ಯವಾಗದೆ ಕ್ಷಮಾಪಣೆಯನ್ನು ಬೇಡುತ್ತಿರುವಳೋ, ಸಾವಿರ ಮುಖಗಳುಳ್ಳ ಆದಿಶೇಷನೂಕೂಡ ಸ್ತೋತ್ರಮಾಡಲಾರದೆ ಯಾವಾಗಲೂ ನಡುಗುತ್ತಿರುವನೋ, ವೇದಗಳನ್ನು ಸೃಷ್ಟಿಮಾಡಿದ ಬ್ರಹ್ಮನೂ ಯಾವನನ್ನು ಸ್ತೋತ್ರಮಾಡಲು ಅಸಮರ್ಥನಾಗಿರುವನೋ ಅಂತಹ ಸತ್ಯಸ್ವರೂಪನೂ ನಿತ್ಯನೂ ಆದ ಪರಮಾತ್ಮನನ್ನೂಕೂಡ ಮಾಧವಿಯು ನಿಂದಿಸುತ್ತಿರುವಳು.

೪೯–೫೦. ಈ ಸಭೆಯೇ ಅಶುದ್ಧವಾಯಿತು. ಗೋಪಿಯರ ಜೀವನವು ವ್ಯರ್ಥವಾಯಿತು. ಅವರ ಮಧ್ಯದಲ್ಲಿ ರಾಧೆಯೇ ಪುಣ್ಯವಂತಳು. ಯಾಕೆಂದರೆ– ಎಲೈ ಗೆಳತಿಯೇ! ಯಾವನ ಹೆಸರನ್ನು ಸ್ಮರಿಸುವ ಮಾತ್ರದಿಂದಲೇ ಮಾನವನು ಒಂದುಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳ ಭಯವೂ ದುಃಖವೂ ಸಂದೇಹವಿಲ್ಲದೆ ನಾಶವಾಗುತ್ತವೆಯೋ, ಅಂತಹ ಪರಮಾತ್ಮನನ್ನು ರಾಧೆಯು ಹಗಲು ರಾತ್ರಿಯೂ ಧ್ಯಾನಮಾಡುತ್ತಿರುವಳು.

|| ರತ್ನಮಾಲೋವಾಚ ||

ದಧಾರ ವಾಮಹಸ್ತೇನ ಶೈಲಂ ಗೋವರ್ಧನಂ ಹರಿಃ |
ತತಃ ಕಿಂ ತದ್ಯಶಃ ಶೌರ್ಯಂ ಜಗತಾಂ ಜನಕಸ್ಯ ಚ || ೫೧ ||

ಶೈಲಾನಾಂ ಚ ಸಹಸ್ರಂ ಯೋ ಭೇತ್ತುಂ ಶಕ್ತಶ್ಚ ದೈತ್ಯರಾಟ್ |
ಲೀಲಾಮಾತ್ರೇಣ ತೇಷಾಂ ಚ ಲಕ್ಷಂ ಹಂತುಂ ಕ್ಷಮೋ ಹರಿಃ || ೫೨ ||

ಯದಂಶಕಲಯಾಜಾತಃ ಸೂಕರೋ ವಿಷ್ಣುರೀಶ್ವರಃ |
ವಸುಧಾಂ ದಶನಾಗ್ರೇಣ ಚೋಽದ್ದಧಾರ ಚ ಲೀಲಯಾ || ೫೩ ||

ಶೈಲಾನಾಂ ಚ ಸಹಸ್ರಾಣಿ ಯತ್ರ ಸಂತಿ ಮಹೀತಲೇ |
ದೈತ್ಯಾಶ್ಚ ವಾಪ್ಯಸಂಖ್ಯಾಶ್ಚ ವೀರಾಃ ಶೂರಾಸ್ತಥೈವ ಚ || ೫೪ ||

ತೇನೈವ ಕರ್ಮಣಾ ತಸ್ಯ ನ ಶೌರ್ಯಂ ನ ಚ ಪೌರುಷಮ್ |
ನ ಯಶಾಶ್ಚ ಪ್ರಶಂಸಾ ವಾ ಸಖಿ ಸರ್ವಾತ್ಮನಾತ್ಮನಾ || ೫೫ ||

---

೫೧. ರತ್ನಮಾಲೆಯು ಹೇಳುತ್ತಾಳೆ:—ಆ ಹರಿಯು ತನ್ನ ಎಡದ ಕೈಯಿಂದ ಆಯಾಸವಿಲ್ಲದಂತೆ ಗೋವರ್ಧನವೆಂಬ ಬೆಟ್ಟವನ್ನೆತ್ತಿದನು. ಜಗತ್ತಿಗೆ ಕಾರಣನಾದ ಆ ಪರಮಾತ್ಮನ ಸಾಮರ್ಥ್ಯ ಮತ್ತು ಕೀರ್ತಿಯು ಇದಕ್ಕಿಂತ ಹೆಚ್ಚಿನದೇನಿದೆ.

೫೨. ರಾಕ್ಷಸಶ್ರೇಷ್ಠನು ಒಂದುಸಾವಿರ ಬೆಟ್ಟಗಳನ್ನು ಕೂಡ ಸೀಳಿ ಬಿಸುಡಲು ಸಾಮರ್ಥ್ಯವುಳ್ಳವನಾಗಿರುವನು. ಪರಮಾತ್ಮನಾದ ಹರಿಯು ಅಂತಹ ಲಕ್ಷಮಂದಿ ರಾಕ್ಷಸರನ್ನು ಕೊಲ್ಲಲು ಸಮರ್ಥನಾಗಿರುವನು.

೫೩. ಯಾವ ಪರಮಾತ್ಮನ ಕಲಾಂಶದಿಂದ ಹುಟ್ಟಿದ ವರಾಹರೂಪಿಯೂ, ಜಗದೀಶ್ವರನೂ ಆದ ವಿಷ್ಣುವು ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಸುಲಭವಾಗಿ ಮೇಲಕ್ಕೆತ್ತಿತಂದನು.

೫೪–೫೫. ಯಾವ ಭೂಮಿಯಲ್ಲಿ ಸಾವಿರಾರು ಬೆಟ್ಟಗಳಿವೆಯೋ, ಮತ್ತು ವೀರರೂ ಶೂರರೂ ಆದ ಲೆಕ್ಕವಿಲ್ಲದಷ್ಟು ರಾಕ್ಷಸರಿರುವರೋ, ಆ ಎಲ್ಲ ಬೆಟ್ಟಗಳನ್ನೆತ್ತಿದರೂ, ಆ ಎಲ್ಲ ರಾಕ್ಷಸರನ್ನು ನಾಶಮಾಡಿದರೂ ಕೂಡ ಸರ್ವಾತ್ಮನಾದ ಪರಮಾತ್ಮನ ಶೌರ್ಯ ಪೌರುಷ ಮತ್ತು ಕೀರ್ತಿಗಳು ಅಷ್ಟೆಯೆಂದು ತಿಳಿಯಲು ಸಾಧ್ಯವಿಲ್ಲವು.

॥ ಪಾರಿಜಾತೋವಾಚ ॥

ಸಪ್ತದ್ವೀಪಾ ಚ ವಸುಧಾ ಸಶೈಲವನಸಾಗರಾ ।
ಕಾಂಚನೀಭೂಮಿಸಹಿತಾ ಸರ್ವಾಧಾರಾ ಮನೋಹರಾ ॥ ೫೬ ॥

ಸಪ್ತಸ್ವರ್ಗಶ್ಚ ವಿವಿಧಾ ಬ್ರಹ್ಮಲೋಕಾವಧಿ ಪ್ರಿಯೇ ।
ವಿಚಿತ್ರಾಃ ಸುಂದರಾಶ್ಚೈವ ಪಾತಾಲಾನಾಂ ಚ ಸಪ್ತ ಚ ॥ ೫೭ ॥

ಏತೈಃ ಪರಿಮಿತಂ ವಿಶ್ವಂ ಬ್ರಹ್ಮಾಂಡಂ ಬ್ರಹ್ಮಣಾ ಕೃತಂ ।
ಮಹದ್ವಿಷ್ಣೋರ್ಲೋಮಕೂಪೇ ತದೇವಂ ಚಾಣುವಸ್ಥಿತಮ್ ॥ ೫೮ ॥

ತಸ್ಯ ಯಾವಂತಿ ಲೋಮಾನಿ ತಾನಿ ವಿಶ್ವಾನಿ ಸಂತಿ ಚ ।
ಸ ಏವ ಷೋಡಶಾಂಶಶ್ಚ ಕೃಷ್ಣಸ್ಯ ಪರಮಾತ್ಮನಃ ॥ ೫೯ ॥

ತಸ್ಯೈವ ಕಿಂ ಯಶಃ ಶೌರ್ಯಂ ಮಹಿಮಾನಮನೂಪಮಮ್ ।
ಯತ್ಸ್ಮರೀ ಗೋಪಕನ್ಯಾ ಚ ಕಿಂ ವಾ ಜಾನಾತಿ ಮಾಧವೀ ॥ ೬೦ ॥

---

೫೬. ಪಾರಿಜಾತೆಯು ಹೇಳುತ್ತಾಳೆ:— ಭೂಮಿಯು ಏಳು ದ್ವೀಪವಾಗಿ, ಬೆಟ್ಟಗಳು ಕಾಡುಗಳು ಸಮುದ್ರಗಳು ಇವುಗಳಿಂದ ಕೂಡಿದೆ. ಮತ್ತು ಚಿನ್ನದ ಭೂಮಿಯಿಂದ ಕೂಡಿದುದಾಗಿ ಸರ್ವರಿಗೂ ಆಶ್ರಯವಾಗಿ ಮನೋಹರವಾಗಿದೆ.

೫೭. ಬ್ರಹ್ಮಲೋಕಪರ್ಯಂತವಾಗಿ ನಾನಾವಿಧವಾದ ಏಳು ಸ್ವರ್ಗಗಳಿವೆ. ಮತ್ತು ವಿಚಿತ್ರವೂ ಸುಂದರವೂ ಆದ ಏಳು ಪಾತಾಳ ಲೋಕಗಳಿವೆ.

೫೮. ಇವುಗಳಿಂದ ಕೂಡಿದ ಪ್ರಪಂಚರೂಪವಾದ ಬ್ರಹ್ಮಾಂಡವನ್ನು ಬ್ರಹ್ಮನು ಮಾಡಿದನು. ಆ ಬ್ರಹ್ಮಾಂಡವು ಮಹಾ ವಿಷ್ಣುವಿನ ರೋಮಕೂಪದಲ್ಲಿ ಒಂದು ಅಣುವಿನಂತಿರುವುದು.

೫೯. ಆ ಮಹಾ ವಿಷ್ಣುವಿನ ದೇಹದಲ್ಲಿ ಎಷ್ಟು ರೋಮಕೂಪಗಳಿವೆಯೋ ಅಷ್ಟು ಪ್ರಪಂಚಗಳಿವೆ. ಆ ಮಹಾವಿಷ್ಣುವಾದ ಪರಮಾತ್ಮನ ಹದಿನಾರನೇ ಒಂದಂಶವೇ ಕೃಷ್ಣರೂಪವು.

೬೦. ಯಾವ ನನ್ನ ಗೋಪಕನ್ಯೆಯು ಯಾವಾಗಲೂ ಸ್ಮರಿಸುತ್ತಿರುವಳೋ ಆ ಕೃಷ್ಣನ ಕೀರ್ತಿಯನ್ನಾಗಲೀ, ಪರಾಕ್ರಮವನ್ನಾಗಲೀ, ಮಹಿಮೆಯನ್ನಾಗಲೀ ಈ ಮಾಧವಿಯು ತಿಳಿಯಲು ಸಮರ್ಥಳಾಗುತ್ತಾಳೆಯೇ ?

|| ಮಾಧವ್ಯುವಾಚ ||

ಮಯಾ ಯದುಕ್ತಂ ನ ಜ್ಞಾತ್ವಾ ಮೂಢಾ ಜಲ್ಪಂತಿ ಗೋಪಿಕಾಃ |
ಉದ್ಧವ ಶೃಣು ಮೇ ವಾಕ್ಯಂ ಯನ್ಮಯಾ ಕಥಿತಂ ಶುಭಮ್ || ೬೧ ||

ಸ್ವೇಚ್ಛಯಾ ಸುಗುಣೋ ವಿಷ್ಣುಃ ಸ್ವೇಚ್ಛಯಾ ನಿರ್ಗುಣೋ ಭವೇತ್ |
ಭುವೋ ಭಾರಾವತರಣೇ ಗೋಪವೇಷಃ ಶಿಶುರ್ವಿಭುಃ || ೬೨ ||

ಯದಿ ವೇದಾಃ ಪುರಾಣಾನಿ ಸಿದ್ಧಾಃ ಸಂತಶ್ಚ ಸಂತತಮ್ |
ಬ್ರಹ್ಮೇಶಶೇಷಭಕ್ತಾಶ್ಚ ನ ಜಾನಂತಿ ಯಮೀಶ್ವರಮ್ || ೬೩ ||

ತಂ ಕಿಂ ಜಾನಾಮಿ ಮೂಢಾಹಂ ಯತ್ಸ್ಮರೀ ಗೋಪಕನ್ಯಕಾ |
ತಥಾಪಿ ಮದ್ವಚಃ ಸತ್ಯಂ ಶ್ರೂಯತಾಂ ವತ್ಸ ತತ್ಕ್ಷಣಮ್ || ೬೪ ||

ಕಿಮನಿರ್ವಚನೀಯಂ ಚ ರೂಪಂ ಶೌರ್ಯಂ ಯಶೋ ಬಲಮ್ |
ವೀರ್ಯಂ ವೇಷಂ ಚ ಸಿದ್ಧಿಂ ಚಾಪ್ಯನ್ಯೋ ವಾ ಯೋ ಗುಣೋ ಹರೇಃ ||೬೫||

---

೬೧. ಮಾಧವಿಯು ಹೇಳುತ್ತಾಳೆ :—ಮೂಢರಾದ ಗೋಪಿಕೆಯರು ನಾನು ಹೇಳಿದುದೇನೆಂದು ತಿಳಿದುಕೊಳ್ಳದೆ ಸುಮ್ಮನೆ ಮಾತನಾಡುತ್ತಿದ್ದಾರೆ. ಎಲೈ ಉದ್ಧವನೇ! ನಾನು ಹೇಳಿದ ಮಂಗಳಕರವಾದ ಮಾತೇನೆಂಬುದನ್ನು ಹೇಳುತ್ತೇನೆ ಕೇಳುವವನಾಗು.

೬೨. ವಿಷ್ಣುವು ತನ್ನ ಇಷ್ಟದಿಂದ ಸಗುಣನೂ, ತನ್ನ ಇಷ್ಟದಿಂದಲೇ ನಿರ್ಗುಣನೂ ಆಗುತ್ತಾನೆ. ವಿಭುವಾದ ಆ ವಿಷ್ಣುವು ಭೂಮಿಯ ಭಾರವನ್ನು ಇಳುಹಲೋಸ್ಕರ ಗೋಪವೇಷವನ್ನು ಧರಿಸಿ, ಶಿಶುರೂಪವನ್ನೂ ಹೊಂದಿರುವನು.

೬೩–೬೪. ವೇದಗಳು, ಪುರಾಣಗಳು, ಸಿದ್ಧರು ಮತ್ತು ಸತ್ಪುರುಷರು, ಬ್ರಹ್ಮ, ಈಶ್ವರ, ಆದಿಶೇಷ, ಭಕ್ತರು ಇವರುಗಳು ಯಾವ ಈಶ್ವರನಾದ ಪರಮಾತ್ಮನನ್ನು ತಿಳಿಯದವರಾದಮೇಲೆ ಯಾವನನ್ನು ಗೋಪಕನ್ಯೆಯಾದ ರಾಧೆಯು ಸ್ಮರಿಸುತ್ತಿರುವಳೋ ಅಂತಹವನನ್ನು ಮೂಢಳಾದ ನಾನೆಂತು ತಿಳಿಯುವೆನು? ಆದಾಗ್ಯೂ ಕೂಡ ಎಲೈ ಉದ್ಧವಕುಮಾರನೇ! ನಾನು ಹೇಳುವ ಸತ್ಯವಾದ ಮಾತನ್ನು ಕ್ಷಣಕಾಲ ಕೇಳುವವನಾಗು.

೬೫–೬೬. ಆ ಪರಮಾತ್ಮನ ವೀರ್ಯವೂ, ರೂಪವೂ, ಕೀರ್ತಿಯೂ, ಶಕ್ತಿಯೂ, ಪರಾಕ್ರಮವೂ, ವೇಷವೂ, ಸಿದ್ಧಿಯೂ ಇನ್ನೂ ಅನೇಕವಾದ ಗುಣಗಳು ಯಾವುವಿ

ಸ್ವೇಚ್ಛಾಮಯಸ್ಯ ತಸ್ಯೈವ ಸಗುಣಸ್ಯ ಚ ಸಾಂಪ್ರತಂ ।
ಕಿಮನಿರ್ವಚನೀಯಂ ಚ ವರ್ತತೇ ತದ್ವಿಶೇಷಣಮ್ ॥ ೬೬ ॥

ನಿರ್ಗುಣಸ್ಯ ಚ ವಿಷ್ಣೋಶ್ಚ ದೇಹಹೀನಶ್ಚ ಸ್ವಾತ್ಮವಾನ್ ।
ವರ್ತತೇ ಚ ಕಿಮಾಖ್ಯೇಯಂ ತಸ್ಯ ರೂಪಾದಿಕಂ ಚ ಕಿಮ್ ॥ ೬೭ ॥

ಮಾಂ ನಿಂದತಿ ಮಹಾಮೂಢಾ ನ ಬುದ್ಧ್ವಾ ವಚನಂ ಮಮ ।
ಏಷಾ ಜಾನಾತಿ ಕಿಂ ಮೂಢಾ ತಂ ಸತ್ಯಂ ಪ್ರಕೃತೇಃ ಪರಮ್ ॥ ೬೮ ॥

ಜ್ಯೋತಿಃಸ್ವರೂಪಂ ಚ ಪರಂ ಪರಮಾತ್ಮಾನಮೀಶ್ವರಮ್ ।
ತಮನಿರ್ವಚನೀಯಂ ಚ ಭಕ್ತಾನುಗ್ರಹವಿಗ್ರಹಮ್ ॥ ೬೯ ॥

ಯತ್ಪಾದಪದ್ಮಂ ಪದ್ಮಾ ಸಾ ತ್ರೈಲೋಕ್ಯಜನನೀ ಪರಾ ।
ಸೇವತೇ ಕಲ್ಪಿತಾ ಭೀತಾ ದಾಸೀವತ್ಸತತಂ ಭಿಯಾ ॥ ೭೦ ॥

---

ವೆಯೋ ಅವುಗಳೆಲ್ಲವೂ ಅನಿರ್ವಚನೀಯಗಳೇ ? ಸ್ವೇಚ್ಛಾಮಯನೂ, ಸಗುಣನೂ, ಪ್ರಕೃತದಲ್ಲಿ ಶರೀರವನ್ನು ಹೊಂದಿರುವವನೂ ಆದ ಪರಮಾತ್ಮನ ಗುಣಗಳು ಅನಿರ್ವಚನೀಯಗಳೋ ? ಇವೆರಡಕ್ಕೂ ವಿಶೇಷವೇನಿದೆ ?

೬೭. ನಿರ್ಗುಣನೂ, ದೇಹಹೀನನೂ, ಸ್ವಾತ್ಮರೂಪನೂ ಆದ ವಿಷ್ಣುವಿಗೆ ಹೆಸರೇನಿದೆ ? ಅವನ ರೂಪವೇ ಮೊದಲಾದವುಗಳಾವುವು ?

೬೮–೬೯. ಈ ಮಹಾಮೂಢಳು ನನ್ನ ಮಾತನ್ನು ತಿಳಿದುಕೊಳ್ಳದೆ ನನ್ನನ್ನು ನಿಂದಿಸುತ್ತಿರುತ್ತಾಳೆ. ಈ ಮೂಢಳು ಸತ್ಯಸ್ವರೂಪನೂ, ಪ್ರಕೃತಿಗಿಂತಲೂ ಉತ್ತಮನೂ, ಜ್ಯೋತಿಸ್ಸ್ವರೂಪನೂ, ಸರ್ವೋತ್ತಮನೂ, ಪರಮಾತ್ಮನೂ, ಸಕಲ ಜಗತ್ತಿಗೂ ಈಶ್ವರನೂ, ಭಕ್ತರಿಗೆ ಅನುಗ್ರಹಮಾಡುವುದಕ್ಕಾಗಿಯೇ ದೇಹವನ್ನು ಹೊಂದಿದವನೂ, ಹೇಳಲಸಾಧ್ಯವಾದ ರೂಪವುಳ್ಳವನೂ ಆದ ಆ ಹರಿಯನ್ನು ತಿಳಿದುಕೊಂಡಿರುವಳೇ ?

೭೦–೭೧. ಯಾವ ಹರಿಯ ಪಾದಕಮಲವನ್ನು ಮೂರು ಲೋಕಗಳಿಗೂ ತಾಯಿಯೂ, ಉತ್ತಮಳೂ, ವಿಷ್ಣುಮಾಯೆಯೂ, ಮೂಲಪ್ರಕೃತಿಸ್ವರೂಪಿಣಿಯೂ, ನಾಶರಹಿತಳೂ, ಬ್ರಹ್ಮಸ್ವರೂಪಳೂ ಆದ ಆ ಲಕ್ಷ್ಮಿಯು ತನ್ನನ್ನು ದಾಸಿಯಂತೆ

ವಿಷ್ಣುಮಾಯಾ ಚ ಪ್ರಕೃತಿರ್ಮೂಲರೂಪಾ ಸನಾತನೀ ।
ಬ್ರಹ್ಮಸ್ವರೂಪಾ ಪರಮಾ ಭೀತಾ ದಕ್ಷಿಣಪಾರ್ಶ್ವತಃ ॥ ೭೦ ॥

ಸರಸ್ವತೀ ಜಡೀಭೂತಾ ಭೀತಾ ಚ ಪರಮೇಶ್ವರೀ ।
ಸ್ತೋತುಂ ನ ಶಕ್ತಾ ವೇದಾಃ ಕಿಂ ಸ್ತುವಂತಿ ಪರಮೇಶ್ವರಮ್ ॥ ೭೧ ॥

ತಾಸಾಂ ತದ್ವಚನಂ ಶ್ರುತ್ವಾ ಚೋದ್ಧವೋ ಭಕ್ತಿವಿಹ್ವಲಃ ।
ಪುಲಕಾಂಚಿತಸರ್ವಾಂಗೋ ರುರೋದ ಚ ಪಪಾತ ಚ ॥ ೭೨ ॥

ಮೂರ್ಛಾಂ ಸಂಪ್ರಾಪ್ಯ ಭಕ್ತ್ಯಾ ಚ ಧ್ಯಾತ್ವಾ ತಂ ಪರಮೇಶ್ವರಮ್ ।
ತುಚ್ಛಂ ಮೇನೇ ಸ ಚಾತ್ಮಾನಂ ಗೋಪೀಂ ಭಕ್ತ್ಯಾಪ್ಯುವಾಚ ಸಃ ॥ ೭೪ ॥

॥ ಉದ್ಧವ ಉವಾಚ ॥

ಧನ್ಯಂ ಯಶಸ್ಯಂ ದ್ವೀಪಾನಾಂ ಜಂಬೂದ್ವೀಪಂ ಮನೋಹರಮ್ ।
ಯತ್ರ ಭಾರತವರ್ಷಂ ಚ ಪುಣ್ಯದಂ ಶುಭದಂ ತಥಾ ॥ ೭೫ ॥

---

ಮಾಡಿಕೊಂಡು ಯಾನಾಗಲೂ ಬಲಭಾಗದಲ್ಲಿದ್ದುಕೊಂಡು ಅತ್ಯಂತ ಭಯದಿಂದ ಸೇವೆ ಮಾಡುತ್ತಿರುವಳೋ ಅಂಥಾ ಹರಿಯನ್ನು ಈ ಮೂಢಳು ತಿಳಿದುಕೊಂಡಿರುವಳೇ ?

೭೧. ಸರಸ್ವತಿಯು ಆ ಹರಿಯನ್ನು ಸ್ತೋತ್ರಮಾಡಲಾರದೆ ಮೂಕಳಾಗಿರುವಳು. ಪರಮೇಶ್ವರನ ಪತ್ನಿಯಾದ ಪಾರ್ವತಿಯೂಕೂಡ ಭಯಗೊಂಡವಳಾಗಿ ಸ್ತೋತ್ರಮಾಡಲು ಶಕ್ತಿಯಿಲ್ಲದವಳಾಗಿರುವಳು. ವೇದಗಳೂ ಕೂಡ ಮಹೇಶ್ವರನಾದ ಆ ದೇವನನ್ನು ಸ್ತೋತ್ರಮಾಡಲು ಸಮರ್ಥಗಳಾಗುತ್ತವೆಯೇ ?

೭೨–೭೪. ಅವರುಗಳಾಡಿದ ಮಾತನ್ನು ಕೇಳಿ ಭಕ್ತಿಪರವಶನಾದ ಮೈಯಲ್ಲಿ ರೋಮಾಂಚನವನ್ನು ಹೊಂದಿದ ಉದ್ಧವನು ಅಳುತ್ತ ಕೆಳಕ್ಕೆ ಬಿದ್ದನು. ಮೂರ್ಛೆಯನ್ನು ಹೊಂದಿದವನಾಗಿ ಮತ್ತೆ ಚೇತರಿಸಿಕೊಂಡು ಆ ಪರಮೇಶ್ವರನನ್ನು ಭಕ್ತಿಯಿಂದ ಧ್ಯಾನಮಾಡಿದವನಾಗಿ ತನ್ನನ್ನು ಅತ್ಯಂತ ಕೀಳುಮಟ್ಟದವನನ್ನಾಗಿ ಭಾವಿಸಿಕೊಂಡನು. ಮತ್ತು ಗೋಪಿಯನ್ನು ಕುರಿತು ಭಕ್ತಿಯಿಂದ ಕೂಡಿದವನಾಗಿ ಈ ಪ್ರಕಾರ ಹೇಳಿದನು.

೭೫. ಉದ್ಧವನು ಹೇಳುತ್ತಾನೆ :—ಯಾವೆಡೆಯಲ್ಲಿ ಭಾರತವರ್ಷವಿರುವುದೋ ಅಂಥಾ ಜಂಬೂದ್ವೀಪವು ಸಮಸ್ತ ದ್ವೀಪಗಳ ಮಧ್ಯದಲ್ಲಿ ಧನ್ಯವೂ, ಕೀರ್ತಿಶಾಲಿಯೂ, ಮನಸ್ಸಿಗೆ ಆನಂದವನ್ನುಂಟುಮಾಡುವುದೂ ಮತ್ತು ಪುಣ್ಯವನ್ನೂ ಮಂಗಳವನ್ನೂ ಉಂಟುಮಾಡುವುದೂ ಆಗಿರುತ್ತದೆ.

ವಣಿಜಾಂ ಚ ಪುಣ್ಯಕೃತಾಂ ವಾಣಿಜ್ಯಸ್ಥಲಮೀಪ್ಸಿತಮ್ ।
ಅತ್ರ ಕೃತ್ವಾ ಸುಪುಣ್ಯಂ ಚ ಭುಂಕ್ತೇಽನ್ಯತ್ರ ಶುಭಂ ಫಲಮ್ ॥ ೭೬ ॥

ಧನ್ಯಂ ಭರತವರ್ಷಂ ಚ ಪುಣ್ಯದಂ ಶುಭದಂ ವರಮ್ ।
ಗೋಪೀಪಾದಾಬ್ಜರಜಸಾ ಪೂತಂ ಪರಮನಿರ್ಮಲಮ್ ॥ ೭೭ ॥

ತತೋಽಪಿ ಗೋಪಿಕಾ ಧನ್ಯಾ ಮಾನ್ಯಾಯೋಷಿತ್ಸು ಭಾರತೇ ।
ನಿತ್ಯಂ ಪಶ್ಯಂತಿ ರಾಧಾಯಾಃ ಪಾದಪದ್ಮಂ ಸುಪುಣ್ಯದಮ್ ॥ ೭೮ ॥

ಷಷ್ಟಿವರ್ಷಸಹಸ್ರಾಣಿ ತಪಸ್ತಪ್ತಂ ಚ ಬ್ರಹ್ಮಣಾ ।
ರಾಧಿಕಾಪಾದಪದ್ಮಸ್ಯ ರೇಣೂನಾಮುಪಲಬ್ಧಯೇ ॥ ೭೯ ॥

ಗೋಲೋಕವಾಸಿನೀ ರಾಧಾ ಕೃಷ್ಣಪ್ರಾಣಾಧಿಕಾ ಪರಾ ।
ತತ್ರ ಶ್ರೀದಾಮಶಾಪೇನ ವೃಷಭಾನಸುತಾಧುನಾ ॥ ೮೦ ॥

---

೭೬. ಪುಣ್ಯವನ್ನು ಮಾಡಿದ ವ್ಯಾಪಾರಿಗಳಿಗೆ ಇದು ಅತ್ಯಂತ ಇಷ್ಟವಾದ ವ್ಯಾಪಾರಸ್ಥಳವಾಗಿರುತ್ತದೆ. ಇಲ್ಲಿ ಉತ್ತಮವಾದ ಪುಣ್ಯಕೆಲಸಗಳನ್ನು ಮಾಡಿ ಮಾನವನು ಬೇರೆಡೆಯಲ್ಲಿ ಶುಭಫಲವನ್ನನುಭವಿಸುತ್ತಾನೆ.

೭೭. ಗೋಪಿಯ ಪಾದಕಮಲಗಳ ಧೂಳಿಯಿಂದ ಪರಿಶುದ್ಧವೂ ಅತ್ಯಂತ ನಿರ್ಮಲವೂ ಆದ ಭಾರತ ವರ್ಷವು ಧನ್ಯವೂ, ಪುಣ್ಯವನ್ನೂ ಮಂಗಳವನ್ನೂ ಉಂಟುಮಾಡತಕ್ಕುದೂ ಉತ್ತಮವೂ ಆಗಿದೆ.

೭೮. ಅದಕ್ಕಿಂತಲೂ ಪುಣ್ಯವನ್ನುಂಟುಮಾಡುವ ರಾಧೆಯ ಪಾದಕಮಲ ಗಳನ್ನು ಯಾವಾಗಲೂ ನೋಡುತ್ತಿರುವ ಗೋಪಿಕೆಯು ಭಾರತದಲ್ಲಿ ಸ್ತ್ರೀಯರಲ್ಲೆಲ್ಲ ಧನ್ಯಳೂ ಮಾನ್ಯಳೂ ಆಗಿರುತ್ತಾಳೆ.

೭೯. ಬ್ರಹ್ಮನೂಕೂಡ ರಾಧಿಕೆಯ ಪಾದಕಮಲಗಳ ಧೂಳಿಗಳನ್ನು ಹೊಂದ ಬೇಕೆಂಬ ಅಪೇಕ್ಷೆಯಿಂದ ಅರವತ್ತುಸಾವಿರವರುಷಗಳವರೆಗೆ ತಪಸ್ಸನ್ನು ಮಾಡಿದನು.

೮೦. ಗೋಲೋಕದಲ್ಲಿ ವಾಸಮಾಡುತ್ತಿರುವ ರಾಧೆಯು ಕೃಷ್ಣನಿಗೆ ಅತ್ಯಂತ ಪ್ರಾಣಪ್ರಿಯಳಾಗಿರುವಳು. ಅವಳು ಅಲ್ಲಿ ಶ್ರೀದಾಮನ ಶಾಪದಿಂದ ವೃಷಭಾನನ ಮಗಳಾಗಿರುವಳು.

ಯೇ ಯೇ ಭಕ್ತಾಶ್ಚ ಕೃಷ್ಣಸ್ಯ ದೇವಾ ಬ್ರಹ್ಮಾದಯಸ್ತಥಾ ।
ರಾಧಾಯಾಶ್ಚಾಪಿ ಗೋಪೀನಾಂ ಕಲಾಂ ನಾರ್ಹಂತಿ ಷೋಡಶೀಮ್ ॥೮೧॥

ಕೃಷ್ಣಭಕ್ತಿಂ ವಿಜಾನಾತಿ ಯೋಗೀಂದ್ರಶ್ಚ ಮಹೇಶ್ವರಃ ।
ರಾಧಾ ಗೋಪ್ಯಶ್ಚ ಗೋಪ್ಯಶ್ಚ ಗೋಲೋಕವಾಸಿನಶ್ಚ ಯೇ ॥ ೮೨ ॥

ಕಿಂಚಿತ್ಸನತ್ಕುಮಾರಶ್ಚ ಬ್ರಹ್ಮಾ ಚೇದ್ವಿಷಯಿಾ ತಥಾ ।
ಕಿಂಚಿದೇವ ವಿಜಾನಂತಿ ಸಿದ್ಧಾ ಭಕ್ತಾಶ್ಚ ನಿಶ್ಚಿತಮ್ ॥ ೮೩ ॥

ಧನ್ಯೋಽಹಂ ಕೃತಕೃತ್ಯೋಽಹಮಾಗತೋ ಗೋಕುಲಂ ಯತಃ ।
ಗೋಪಿಕಾಭ್ಯೋ ಗುರುಭ್ಯಶ್ಚ ಹರಿಭಕ್ತಿಂ ಲಭೇಽಚಲಾಮ್ ॥ ೮೪ ॥

ಮಧುರಾಂ ಚ ನ ಯಾಸ್ಯಾಮಿ ತೀರ್ಥಕೀರ್ತೇಶ್ಚ ಕೀರ್ತನಮ್ ।
ಶ್ರೋಷ್ಯಾಮಿ ಕಿಂಕರೋ ಭೂತ್ವಾ ಗೋಪೀನಾಂ ಜನ್ಮಜನ್ಮನಿ ॥ ೮೫ ॥

---

೮೧. ಕೃಷ್ಣನ ಭಕ್ತರು ಯಾರುಯಾರಿದ್ದಾರೆಯೋ, ಮತ್ತು ಬ್ರಹ್ಮನೇ ಮುಂತಾದ ಯಾವ ಯಾವ ದೇವತೆಗಳಿದ್ದಾರೆಯೋ ಅವರೆಲ್ಲರೂ ರಾಧೆಯು ಮತ್ತು ಗೋಪಿಯರ ಹದಿನಾರನೆಯ ಒಂದುಭಾಗ ಕಲೆಯನ್ನು ಹೊಂದಲಾರರು.

೮೨. ಕೃಷ್ಣಭಕ್ತಿಯನ್ನು ಯೋಗಿಗಳಿಗೆಲ್ಲ ಶ್ರೇಷ್ಠನಾದ ಮಹೇಶ್ವರನು ತಿಳಿದುಕೊಂಡಿರುತ್ತಾನೆ. ರಾಧೆಯು ತಿಳಿದುಕೊಂಡಿರುವಳು. ಗೋಪಿಯರು ತಿಳಿದುಕೊಂಡಿರುವರು. ಮತ್ತು ಗೋಲೋಕದಲ್ಲಿ ಯಾರು ವಾಸಮಾಡುತ್ತಿರುವರೋ ಆ ಗೋಪರು ತಿಳಿದುಕೊಂಡಿರುವರು.

೮೩. ಸನತ್ಕುಮಾರನು ಸ್ವಲ್ಪಮಾತ್ರ ತಿಳಿದುಕೊಂಡಿರುವನು. ಬ್ರಹ್ಮನೂ ಕೂಡ ಸ್ವಲ್ಪ ತಿಳಿದಿರುವನು. ಸಿದ್ಧರೂ ಭಕ್ತರೂ ಕೂಡ ಸ್ವಲ್ಪಮಾತ್ರವೇ ತಿಳಿದಿರುವರು. ಇದು ನಿಶ್ಚಯವು.

೮೪. ನಾನು ಧನ್ಯನು ಮತ್ತು ಕೃತಕೃತ್ಯನು. ಯಾಕೆಂದರೆ - ಗೋಕುಲಕ್ಕೆ ಬಂದು ಗೋಪಿಕೆಯರಿಂದಲೂ ಗುರುಗಳಿಂದಲೂ ನಿಶ್ಚಲವಾದ ಹರಿಭಕ್ತಿಯನ್ನು ನಾನು ಹೊಂದಿರುವೆನು.

೮೫. ನಾನು ಮಧುರಾಪಟ್ಟಣಕ್ಕೆ ಹೋಗುವುದಿಲ್ಲ. ಪ್ರತಿಯೊಂದು ಜನ್ಮದಲ್ಲಿಯೂ ಗೋಪಿಯರ ಸೇವಕನಾಗಿದ್ದುಕೊಂಡು ಪವಿತ್ರವಾದ ಕೀರ್ತಿಯುಳ್ಳ ಪರಮಾತ್ಮನ ಗುಣಸಂಕೀರ್ತನೆಯನ್ನು ಕೇಳುತ್ತೇನೆ.

ನ ಗೋಪೀಭ್ಯಃ ಪರೋ ಭಕ್ತೋ ಹರೇಶ್ಚ ಪರಮಾತ್ಮನಃ ।
ಯಾದೃಶೀಂ ಲೇಭಿರೇ ಗೋಪ್ಯೋ ಭಕ್ತಿಂ ನಾನ್ಯೇ ಚ ತಾದೃಶೀಂ ॥ ೮೬ ॥

॥ ಕಲಾವತ್ಯುವಾಚ ॥

ಪಿತೃಣಾಂ ಮಾನಸೀ ಕನ್ಯಾ ಧನ್ಯಾ ಮೇನಾ ಕಲಾವತೀ ।
ವಯಂ ತಿಸ್ರೋ ಭಗಿನ್ಯಶ್ಚ ಭ್ರಮಾಮಃ ಪೃಥಿವೀತಲೇ ॥ ೮೭ ॥

ಧನ್ಯಾ ಜನಕಪತ್ನೀ ಚ ಸೀತಾಮಾತಾ ಪತಿವ್ರತಾ ।
ಅಯೋನಿಸಂಭವಾ ರಾಧಾ ಅಹಂ ಚಾಯೋನಿಸಂಭವಾ ॥ ೮೮ ॥

ರಾಧಾ ಶ್ರೀದಾಮಶಾಪೇನ ವೃಷಭಾನಸುತಾ ಭುವಿ ।
ಸನತ್ಕುಮಾರಶಾಪೇನ ವಯಮೇವ ಮಹೀತಲೇ ॥ ೮೯ ॥

ಕ್ಷೀರೋದಸಾಗರಂ ರಮ್ಯಂ ಶ್ವೇತದ್ವೀಪಂ ಮನೋಹರಮ್ ।
ತಿಸ್ರೋ ಭಗಿನ್ಯೋ ಭಕ್ತ್ಯಾ ಚ ವಿಷ್ಣುಂ ದ್ರಷ್ಟುಂ ಗತಾ ವಯಮ್ ॥೯೦॥

---

೮೬. ಪರಮಾತ್ಮನಾದ ಹರಿಯ ಭಕ್ತರಲ್ಲಿ ಗೋಪಿಯರಿಗಿಂತಲೂ ಶ್ರೇಷ್ಠರಾದ ಭಕ್ತರೇ ಇಲ್ಲ. ಗೋಪಿಯರು ಯಾವರೀತಿಯಾದ ಭಕ್ತಿಯನ್ನು ಹೊಂದಿರುವರೋ ಅಂಥಾ ಭಕ್ತಿಯನ್ನು ಇತರರು ಯಾರೂ ಹೊಂದಿಲ್ಲ.

೮೭. ಕಲಾವತಿಯು ಹೇಳುತ್ತಾಳೆ:— ಪಿತೃದೇವತೆಗಳ ಮಾನಸ ಕನ್ಯೆಯರಾದ ಧನ್ಯಾ, ಮೇನಾ, ಕಲಾವತಿಯೆಂಬ ನಾವು ಮೂವರು ಸಹೋದರಿಯರೂ ಭೂಮಿಯಲ್ಲಿ ತಿರುಗುತ್ತಿರುವೆವು.

೮೮. ಪತಿವ್ರತೆಯಾದ ಧನ್ಯೆಯು ಜನಕರಾಜನ ಪತ್ನಿಯೂ ಸೀತಾದೇವಿಯ ತಾಯಿಯೂ ಆಗಿರುವಳು. ರಾಧೆಯು ಯೋನಿಸಂಬಂಧವಿಲ್ಲದೆ ಹುಟ್ಟಿರುವಳು. ನಾನೂಕೂಡ ಯೋನಿಸಂಬಂಧವಿಲ್ಲದೆ ಹುಟ್ಟಿದವಳು.

೮೯. ರಾಧೆಯು ಶ್ರೀದಾಮನ ಶಾಪದಿಂದ ಭೂಮಿಯಲ್ಲಿ ವೃಷಭಾನನ ಮಗಳಾಗಿರುವಳು. ಸನತ್ಕುಮಾರಮುನಿಯ ಶಾಪದಿಂದ ನಾವೆಲ್ಲರೂಕೂಡ ಭೂಮಿಯಲ್ಲಿ ಜನಿಸಿರುವೆವು.

೯೦. ನಾವು ಮೂವರು ಸಹೋದರಿಯರೂ ಭಕ್ತಿಯಿಂದ ಕೂಡಿದವರಾಗಿ ವಿಷ್ಣುವನ್ನು ನೋಡಲಪೇಕ್ಷೆಯಿಂದ ಮನೋಹರವಾದ ಶ್ವೇತದ್ವೀಪದಲ್ಲಿರುವ ರಮಣೀಯವಾದ ಕ್ಷೀರಸಮುದ್ರವನ್ನು ಕುರಿತು ಹೊರಟೆವು.

ಅಭ್ಯುತ್ಥಾನಾದಿ ನ ಕೃತಂ ಕೋಪಾದಸ್ಮಾಞ್ಛಶಾಪ ಹ ।
ಸನತ್ಕುಮಾರೋ ಭಗವಾನ್ಯೋಗೀಂದ್ರಾಣಾಂ ಗುರುರ್ಗುರುಃ ॥ ೯೧ ॥

॥ ಸನತ್ಕುಮಾರ ಉವಾಚ ॥

ಮೂಢಾಸ್ತಿಷ್ಠತ ಭೂಮೌ ಚ ಪುನಃ ಸ್ವರ್ಗಂ ನ ಯಾಸ್ಯಥ ।
ಮರ್ತ್ಯಪ್ರಾಣಿಪ್ರಿಯಾ ಭೂತ್ವಾ ಚಾಹಂಕಾರೇಣ ಹೇತುನಾ ॥ ೯೨ ॥

ಪುನರ್ವರಂ ಚ ಪ್ರತ್ಯೇಕಂ ದದೌ ತುಷ್ಟೋ ದ್ವಿಜೇಶ್ವರಃ ।
ವಿಷ್ಣೋರ್ವಂಶಸ್ಯ ಶೈಲಸ್ಯ ಹಿಮಾಧಾರಸ್ಯ ಕಾಮಿನೀ ॥ ೯೩ ॥

ಜ್ಯೇಷ್ಠಾ ಭವತು ತ್ವತ್ಕನ್ಯಾ ಭವಿಷ್ಯತ್ಯೇವ ಪಾರ್ವತೀ ।
ಧನ್ಯಾ ಪ್ರಿಯಾ ತು ಭವತು ಯೋಗಿನೋ ಜನಕಸ್ಯ ಚ ॥ ೯೪ ॥

ತಸ್ಯ ಕನ್ಯಾ ಮಹಾಲಕ್ಷ್ಮೀಃ ಸೀತಾದೇವೀ ಭವಿಷ್ಯತಿ ।
ವೃಷಭಾನಸ್ಯ ವೈಶ್ಯಸ್ಯ ಯೋಗಿನಾಂ ಪ್ರವರಸ್ಯ ಚ ॥ ೯೫ ॥

---

೯೧. ನಾವು ಅಲ್ಲಿ ಸನತ್ಕುಮಾರಮುನಿಯನ್ನು ಕಂಡರೂ ಆತನಿಗೆ ನಮಸ್ಕಾರ ಮುಂತಾದ ಗೌರವವನ್ನು ತೋರಿಸಲಿಲ್ಲ. ಷಡ್ಗುಣೈಶ್ವರ್ಯಸಂಪನ್ನನೂ, ಯೋಗೀಂದ್ರರಿಗೆಲ್ಲಾ ಗುರುವೂ ಶ್ರೇಷ್ಠನೂ ಆದ ಸನತ್ಕುಮಾರಮುನಿಯು ಕೋಪಗೊಂಡವನಾಗಿ ನಮ್ಮನ್ನು ಶಪಿಸಿದನು.

೯೨. ಸನತ್ಕುಮಾರಮುನಿಯು ಹೇಳುತ್ತಾನೆ :—ಎಲೈ ಮೂರ್ಖರುಗಳಿರಾ! ನಿಮ್ಮ ಈ ಅಹಂಕಾರದ ಕಾರಣವಾಗಿ ಭೂಲೋಕದಲ್ಲಿರುವ ಪ್ರಾಣಿಗಳಿಗೆ ಪ್ರಿಯರಾಗಿ ಭೂಮಿಯಲ್ಲಿಯೇ ಇರುವವರಾಗಿರಿ. ಮತ್ತೆ ಸ್ವರ್ಗಕ್ಕೆ ಹೋಗಬೇಡಿರಿ ಎಂದು ಶಪಿಸಿದನು.

೯೩–೯೬. ಅನಂತರ ಸಂತೋಷಗೊಂಡ ಆ ಬ್ರಾಹ್ಮಣಶ್ರೇಷ್ಠನು ಮತ್ತೆ ಮೂವರಿಗೂ ಬೇರೆ ಬೇರೆ ವರವನ್ನು ಕೊಟ್ಟನು. ವಿಷ್ಣುವಿನ ವಂಶದಲ್ಲಿರುವ ಹಿಮವತ್ಪರ್ವತನಿಗೆ ಈ ದೊಡ್ಡವಳು ಪತ್ನಿಯಾಗಲಿ. ಪಾರ್ವತಿಯು ಅವಳಿಗೆ ಮಗಳಾಗುತ್ತಾಳೆ. ಈ ಧನ್ಯೆಯು ಯೋಗಿಯಾದ ಜನಕರಾಜನ ಪತ್ನಿಯಾಗಲಿ. ಮಹಾಲಕ್ಷ್ಮಿಯು ಸೀತಾದೇವಿಯೆಂಬ ಹೆಸರಿನಿಂದ ಜನಕರಾಜನ ಮಗಳಾಗುತ್ತಾಳೆ. ಕಿರಿಯವಳಾದ ಕಲಾವತಿಯು ದ್ವಾಪರಯುಗದ ಕೊನೆಯಲ್ಲಿ ಗೋಕುಲದಲ್ಲಿ ಯೋಗಿ

ದುರ್ವಾಸಸಶ್ಚ ಶಿಷ್ಯಸ್ಯ ಕನಿಷ್ಠಾ ಚ ಕಲಾವತೀ ।
ಭವಿಷ್ಯತಿ ಪ್ರಿಯಾ ಸಾಧ್ವೀ ದ್ವಾಪರಾಂತೇ ಚ ಗೋಕುಲೇ ॥ ೯೬ ॥

ಕಲಾವತೀಸುತಾ ರಾಧಾ ದೇವೀ ಗೋಲೋಕವಾಸಿನೀ ।
ಶ್ರೀದಾಮಗೋಪಶಾಪೇನ ಭವಿಷ್ಯತಿ ನ ಸಂಶಯಃ ॥ ೯೭ ॥

ಈಶೋ ಬ್ರಹ್ಮೇಶಶೇಷಾಣಾಂ ಭಾರಾವತರಣೇನ ಚ ।
ಆಗಮಿಷ್ಯತಿ ಪೃಥ್ವೀಂ ಚ ಪುಣ್ಯಕ್ಷೇತ್ರಂ ಚ ಭಾರತಮ್ ॥ ೯೮ ॥

ಕಲಾವತೀವೃಷಭಾನಃ ಕೌತುಕಾತ್ ಕನ್ಯಯಾ ಸಹ ।
ಜೀವನ್ಮುಕ್ತಶ್ಚ ಗೋಲೋಕಂ ಗಮಿಷ್ಯತಿ ನ ಸಂಶಯಃ ॥ ೯೯ ॥

ಧನ್ಯಾಶ್ಚ ಸೀತಯಾ ಸಾರ್ಧಂ ವೈಕುಂಠಂ ಚ ಗಮಿಷ್ಯತಿ ।
ಮೇನಕಾ ಯೋಗಿನೀ ಸಿದ್ಧಾ ಪಾರ್ವತ್ಯಾಶ್ಚ ವರೇಣ ಚ ॥ ೧೦೦ ॥

---

ಶ್ರೇಷ್ಠನೂ ದೂರ್ವಾಸಮುನಿಗಳ ಶಿಷ್ಯನೂ ಆದ ವೃಷಭಾನನೆಂಬ ವೈಶ್ಯನ ಪತಿವ್ರತೆಯಾದ ಪತ್ನಿಯಾಗುತ್ತಾಳೆ.

೯೭. ಗೋಲೋಕವಾಸಿನಿಯಾದ ರಾಧಾದೇವಿಯು ಶ್ರೀದಾಮನೆಂಬ ಗೋಪನ ಶಾಪದಿಂದ ಕಲಾವತಿಯ ಮಗಳಾಗುತ್ತಾಳೆ. ಇದರಲ್ಲಿ ಸಂಶಯವಿಲ್ಲ.

೯೮. ಬ್ರಹ್ಮ, ಈಶ್ವರ, ಆದಿಶೇಷನೇ ಮೊದಲಾದವರಿಗೆ ಒಡೆಯನಾದ ಪರಮಾತ್ಮನು ಭಾರವನ್ನು ಹೋಗಲಾಡಿಸುವಕಾರಣದಿಂದ ಭೂಲೋಕಕ್ಕೆ ಬರುತ್ತಾನೆ. ಆಗ ಪುಣ್ಯಕ್ಷೇತ್ರವಾದ ಭಾರತ ಭೂಮಿಗೂ ಬರುತ್ತಾನೆ.

೯೯. ಕಲಾವತಿಯು ಕುತೂಹಲದಿಂದ ಕೂಡಿದವಳಾಗಿ ವೃಷಭಾನನಿಂದಲೂ ತನ್ನ ಮಗಳಿಂದಲೂ ಕೂಡಿದವಳಾಗಿ ಜೀವನ್ಮುಕ್ತಳಾಗಿ ಗೋಲೋಕಕ್ಕೆ ಪ್ರಯಾಣ ಮಾಡುವವಳಾಗುತ್ತಾಳೆ. ಇದರಲ್ಲಿ ಸಂಶಯವಿಲ್ಲ.

೧೦೦–೧೦೧. ಧನ್ಯೆಯೂಕೂಡ ಸೀತೆಯಿಂದೊಡಗೂಡಿದವಳಾಗಿ ವೈಕುಂಠವನ್ನು ಕುರಿತು ಪ್ರಯಾಣ ಮಾಡುತ್ತಾಳೆ. ಯೋಗಿನಿಯೂ ಸಿದ್ಧಳೂ ಆದ ಮೇನಕೆಯು ಪಾರ್ವತಿಯ ವರದಿಂದ ಒಂದು ಕಲ್ಪದ ಕೊನೆಯಲ್ಲಿ ಬಹುಕಾಲಪರ್ಯಂತರ

ಕಲ್ಪಾಂತೇ ವಿಷ್ಣುಲೋಕೇ ಚ ಲಕ್ಷ್ಮೀವನ್ಮೋದತೇ ಚಿರಮ್ ।
ವಿನಾ ವಿಪತ್ತ್ಯಾ ಮಹಿಮಾ ಕೇಷಾಂ ಕುತ್ರ ಭವಿಷ್ಯತಿ ॥ ೧೦೧ ॥

ಕರ್ಮಣಾ ಚ ಗತೇ ದುಃಖೇ ಪ್ರಭವೇದ್ದುರ್ಲಭಂ ಸುಖಮ್ ।
ಪುರಾ ಪಿತೄಣಾಂ ಕನ್ಯಾಶ್ಚ ಸ್ವರ್ಗಭೋಗವಿಲಾಸಿಕಾಃ ॥ ೧೦೨ ॥

ಲಕ್ಷ್ಮೀಸಮಾ ವರೇಣಾಪಿ ವಿಪ್ರಸ್ಯ ವಿಷ್ಣುದರ್ಶನಾತ್ ।
ಕರ್ಮಕ್ಷಯಂ ಚಾಪ್ಯಸ್ಮಾಕಂ ಬಭೂವ ವಿಷ್ಣುದರ್ಶನಾತ್ ॥ ೧೦೩ ॥

ಪುಣ್ಯೇನ ತೇನ ತೀವ್ರೇಣ ಕುಮಾರಸ್ಯಾಪಿ ದರ್ಶನಮ್ ।
ಶ್ರುತಂ ತತ್ರ ಕುಮಾರಸ್ಯಾಜ್ಞಾನಂ ಪರಮದುರ್ಲಭಮ್ ॥ ೧೦೪ ॥

ಬ್ರಹ್ಮವಿಷ್ಣುಶಿವಾದೀನಾಂ ಸಿದ್ಧಾನಾಂ ಜಗತಾಮಪಿ ।
ಈಶ್ವರಃ ಪರಮಾತ್ಮಾ ಚ ಶ್ರೀಕೃಷ್ಣಃ ಪ್ರಕೃತೇಃ ಪರಃ ।
ನಿರ್ಗುಣಶ್ಚ ನಿರೀಹಶ್ಚ ಪರಃ ಸ್ವೇಚ್ಛಾಮಯೋ ವರಃ ॥ ೧೦೫ ॥

---

ವಿಷ್ಣುಲೋಕದಲ್ಲಿ ಲಕ್ಷ್ಮಿಯಂತೆ ಆನಂದವನ್ನನುಭವಿಸುತ್ತಾಳೆ. ಆಪತ್ತುಂಟಾಗದೆ ಯಾರ ಮಹಿಮೆಯು ಎಲ್ಲಿತಾನೆ ಉಂಟಾಗುತ್ತದೆ?

೧೦೨–೧೦೩. ಕರ್ಮದಿಂದ ದುಃಖವು ನಾಶವಾದಮೇಲೆ ಹೊಂದಲಸಾಧ್ಯವಾದ ಸುಖವುಂಟಾಗುವುದು. ಹಿಂದೆ ಪಿತೃಗಳ ಕನ್ಯೆಯರಾಗಿ ಸ್ವರ್ಗಸೌಖ್ಯಗಳಲ್ಲಿ ನಾವು ಆನಂದಿತರಾಗಿದ್ದೆವು. ಬ್ರಾಹ್ಮಣನ ವರದಿಂದಲೂ, ವಿಷ್ಣುವಿನ ದರ್ಶನದಿಂದಲೂ ಲಕ್ಷ್ಮಿದೇವಿಗೆ ಸಮಾನರಾದೆವು. ಆ ವಿಷ್ಣುವಿನ ದರ್ಶನದಿಂದ ನಮ್ಮ ಕರ್ಮಗಳೆಲ್ಲವೂ ನಾಶವಾದುವು.

೧೦೪–೧೦೫. ಆ ತೀವ್ರವಾದ ಪುಣ್ಯದಿಂದ ಕುಮಾರನ ದರುಶನವೂ ಉಂಟಾಯಿತು. ಅಲ್ಲಿ ಅತಿ ದುರ್ಲಭವಾದ ಕುಮಾರನ ಸಂಬಂಧವಾದ ಜ್ಞಾನವೂ ತಿಳಿಯಲ್ಪಟ್ಟಿತು. ಶ್ರೀ ಕೃಷ್ಣನು ಬ್ರಹ್ಮ, ವಿಷ್ಣು, ಶಿವನೇ ಮೊದಲಾದವರಿಗೂ, ಸಿದ್ಧರಿಗೂ, ಪ್ರಪಂಚಗಳಿಗೂ ಈಶ್ವರನೂ, ಪರಮಾತ್ಮನೂ ಪ್ರಕೃತಿಗಿಂತಲೂ ಶ್ರೇಷ್ಠನೂ, ಗುಣಸಂಬಂಧವಿಲ್ಲದವನೂ, ಆಶೆಯಿಲ್ಲದವನೂ, ಸ್ವೇಚ್ಛಾಮಯನೂ ಆಗಿರುವನು.

|| ತುಲಸ್ಯುವಾಚ ||

ಸರ್ವಪ್ರಾಣಿಷು ದೇವಾಶ್ಚ ತಿಷ್ಠಂತ್ಯೇವ ಪೃಥಕ್ಪೃಥಕ್ || ೧೦೬ ||

ಪ್ರಾಣೋ ವಿಷ್ಣುಶ್ಚ ವಿಷಯೀ ಮನೋ ಬ್ರಹ್ಮಾ ಚ ಚೇತನಾ |
ಪ್ರಕೃತಿರ್ಬುದ್ಧಿರೂಪಾ ಚ ಸರ್ವಶಕ್ತ್ಯಧಿದೇವತಾ || ೧೦೭ ||

ಜ್ಞಾನಸ್ವರೂಪಃ ಶಂಭುಶ್ಚ ಸ್ವಯಂ ಧರ್ಮಶ್ಚ ಪೂರುಷಃ |
ನಿರ್ಗುಣಃ ಪರಮಾತ್ಮಾ ಚ ತತ್ಪ್ರಹ್ಮ ಪ್ರಕೃತೇಃ ಪರಮ್ || ೧೦೮ ||

ಸ ಏವ ಕೃಷ್ಣಃ ಸಾಕ್ಷೀ ಚ ಕರ್ಮಣಾಂ ಜೀವಿನಾಮಪಿ |
ಭೋಕ್ತಾ ಚ ಸುಖದುಃಖಾನಾಂ ಜೀವಸ್ತತ್ಪ್ರತಿಬಿಂಬಕಃ || ೧೦೯ ||

ಚಕ್ಷುಷೋಶ್ಚಂಪ್ರಸೂರ್ಯೌ ಚ ಜಿಹ್ವಾಯಾಂ ಚ ಸರಸ್ವತೀ |
ವಸುಂಧರಾ ತ್ವಚಿ ಸದಾ ಬಾಹ್ವೋಸ್ತೇ ಲೋಕಪಾಲಕಾಃ || ೧೧೦ ||

---

೧೦೬. ತುಳಸಿಯು ಹೇಳುತ್ತಾಳೆ:— ಸಮಸ್ತ ಪ್ರಾಣಿಗಳಲ್ಲಿಯೂ ದೇವತೆಗಳು ಬೇರೆಬೇರೆಯಾಗಿ ಇದ್ದೇ ಇರುತ್ತಾರೆ.

೧೦೭–೧೦೮. ಪ್ರಾಣಸ್ವರೂಪನಾಗಿ ವಿಷ್ಣುವಿರುವನು. ವಿಷಯಿಯಾದ ಬ್ರಹ್ಮನು ಮನೋರೂಪವಾಗಿರುವನು. ಪ್ರಕೃತಿಯು ಚೇತನಾರೂಪಳಾಗಿ ಸರ್ವಶಕ್ತಿಗಳಿಗೂ ಅಧಿದೇವತೆಯಾಗಿರುವಳು. ಶಂಭುವು ಜ್ಞಾನಸ್ವರೂಪನಾಗಿರುವನು. ಧರ್ಮನು ತಾನೇ ಪುರುಷರೂಪನಾಗಿರುವನು. ನಿರ್ಗುಣನೂ ಪರಮಾತ್ಮನೂ ಪ್ರಕೃತಿಗಿಂತಲೂ ಶ್ರೇಷ್ಠನೂ ಆದ ಪರಮಾತ್ಮನೇ ಪರಬ್ರಹ್ಮಸ್ವರೂಪನು.

೧೦೯. ಅವನೇ ಕೃಷ್ಣನು. ಪ್ರಾಣಿಗಳ ಪಾಪಪುಣ್ಯಕರ್ಮಗಳಿಗೆ ಅವನೇ ಸಾಕ್ಷಿಯಾಗಿರುವನು. ಸುಖದುಃಖಗಳನ್ನನುಭವಿಸುವ ಜೀವನು ಆ ಪರಮಾತ್ಮನ ಪ್ರತಿಬಿಂಬವಾಗಿರುವನು.

೧೧೦. ಕಣ್ಣುಗಳಲ್ಲಿ ಸೂರ್ಯಚಂದ್ರರಿರುವರು. ನಾಲಗೆಯಲ್ಲಿ ಸರಸ್ವತಿಯಿರುವಳು. ಚರ್ಮದಲ್ಲಿ ಭೂದೇವಿಯಿರುವಳು. ತೋಳುಗಳಲ್ಲಿ ಯಾವಾಗಲೂ ಲೋಕಪಾಲಕರಿರುವರು.

ಆತ್ಮನಶ್ಚಾಪಿ ತೇ ಸರ್ವೇ ಪರಿಚಾರಕರೂಪಿಣಃ ।
ಆತ್ಮನ್ಯೇವ ಪ್ರಿಯಾಸ್ತೇ ಚ ಸರ್ವೇ ಗಚ್ಛಂತಿ ಜೀವಿನಃ ॥ ೧೧೧ ॥

ಯಥಾ ಸಂಸದಿ ಸಂಸಾರೇ ನರದೇಹಮಿವಾನುಗಾಃ ।
ತಸ್ಮಾತ್ಸರ್ವಾತ್ಮನಾತ್ಮಾನಂ ಭಜಂತಿ ಸಂತತಂ ಸದಾ ॥ ೧೧೨ ॥

ಸಂತಶ್ಚ ಪರಯಾ ಭಕ್ತ್ಯಾ ಧ್ಯಾಯಂತೇ ಯೋಗಿನೋ ಮುದಾ ।
ಕರ್ಮಿಣಾಂ ಕರ್ಮಣಾಂ ಸಾಕ್ಷೀ ಕೃತಃ ಕರ್ಮ ಚ ಗೋಪನಮ್ ।
ಅಂತರ್ಯಾಮೀ ಚ ಕೃಷ್ಣಶ್ಚ ಪ್ರಚಾರಂ ಕುರುತೇ ಮುದಾ ॥ ೧೧೩ ॥

॥ ಕಾಲಿಕೋವಾಚ ॥

ನರಾ ಬಾಲಾಶ್ಚ ವೃದ್ಧಾಶ್ಚ ಯುವಾನಸ್ತ್ರಿವಿಧಾಸ್ತಥಾ ॥ ೧೧೪ ॥

ದೇವಾದಯಶ್ಚ ಯೇ ಸಿದ್ಧಾಃ ಸರ್ವೇ ಜಾನಂತಿ ತಂ ಪರಮ್ ।
ಸಾಂಪ್ರತಂ ಮೂರ್ಚ್ಛಿತಾಂ ರಾಧಾಂ ಯುಕ್ತೋ ಬೋಧಯಿತುಂ ಬುಧಃ ॥
॥ ೧೧೫ ॥
ಅತ್ರ ಯುಕ್ತಿಃ ಪ್ರಧಾನಾ ಚ ತಾಂ ಪ್ರಬೋಧಯ ಚೋದ್ಧವ ।

---

೧೧೧–೧೧೨. ಅವರೆಲ್ಲರೂಕೂಡ ಆತ್ಮನ ಸೇವಕರೂಪದಿಂದಿರುವರು. ಅವರೆಲ್ಲರೂ ಆತನಲ್ಲಿ ಪ್ರೀತಿಯಿಂದಿರುತ್ತಾರೆ. ಮತ್ತು ಅವರೆಲ್ಲರೂ ಸಂಸಾರದಲ್ಲಿ ಮನುಷ್ಯದೇಹವನ್ನು ಹೊಂದಿ, ಒಂದು ಸಭೆಯಲ್ಲಿ ಒಂದೆಡೆಯಲ್ಲಿ ಸೇರಿರುವಂತೆ ಜೀವಿಗಳನ್ನನುಸರಿಸಿರುತ್ತಾರೆ. ಆದುದರಿಂದ ಸರ್ವವಿಧದಿಂದಲೂ ಯಾವಾಗಲೂ ಬಿಡದೆ ಆತನನ್ನು ಸೇವಿಸುತ್ತಾರೆ.

೧೧೩. ಸತ್ಪುರುಷರಾದ ಯೋಗಿಗಳು ಉತ್ತಮವಾದ ಭಕ್ತಿಯಿಂದ ಆನಂದದಿಂದ ಕೂಡಿದವರಾಗಿ ಆ ಪರಮಾತ್ಮನನ್ನು ಧ್ಯಾನಮಾಡುತ್ತಾರೆ.

೧೧೪. ಕಾಲಿಕೆಯು ಹೇಳುತ್ತಾಳೆ:— ಮಾನವರು ಬಾಲಕರು, ವೃದ್ಧರು, ಯುವಕರು ಎಂದು ಮೂರುವಿಧವಾಗಿದ್ದಾರೆ. ದೇವತೆಗಳೇ ಮೊದಲಾದ ಸಿದ್ಧಪುರುಷರಾರಿರುವರೋ ಅವರೆಲ್ಲರೂ ಆ ಪರಮಾತ್ಮನನ್ನು ತಿಳಿದಿರುತ್ತಾರೆ.

೧೧೫–೧೧೬. ಪ್ರಕೃತ ಸಂದರ್ಭದಲ್ಲಿ ಮೂರ್ಚ್ಛೆಹೊಂದಿರುವ ರಾಧೆಯನ್ನು ಎಚ್ಚರುಗೊಳಿಸುವುದು ನ್ಯಾಯವಾಗಿದೆ. ಈ ವಿಷಯದಲ್ಲಿ ಯುಕ್ತಿಯು ಮುಖ್ಯವಾದುದು. ಎಲೈ ಉದ್ಧವನೇ! ಮೂರ್ಚ್ಛಿತಳಾದ ರಾಧೆಯನ್ನೆಚ್ಚರಗೊಳಿಸು.

|| ಉದ್ಧವ ಉವಾಚ ||

ಚೇತನಂ ಕುರು ಕಲ್ಯಾಣಿ ಜಗನ್ಮಾತರ್ನಿಬೋಧ ಮಾಂ || ೧೧೬ ||

ಉದ್ಧವಂ ಕೃಷ್ಣಭಕ್ತಸ್ಯ ಕಿಂಕರಸ್ಯಾಪಿ ಕಿಂಕರಮ್ ।
ಪ್ರಸಾದಂ ಕುರು ಮಾತರ್ಮಾಂ ಯಾಸ್ಯಾಮಿ ಮಥುರಾಂ ಪುನಃ || ೧೧೭ ||

ನ ಸರ್ವತ್ರ ಪರಾಧೀನೋ ಯೋಷಾ ದಾರುಮಯೀ ಯಥಾ ।
ಯಥಾ ವೃಷೋ ವಶೀಭೂತೋ ವೃಷವಾಹಸ್ಯ ಸಂತತಮ್ || ೧೧೮ ||

ಇತಿ ಶ್ರೀ ಬ್ರಹ್ಮವೈವರ್ತಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣ ನಾರದ ಸಂವಾದೇ
ರಾಧೋದ್ಧವಸಂವಾದೇ
ಚತುರ್ನವತಿತಮೋಽಧ್ಯಾಯಃ.

---

ಉದ್ಧವನು ಹೇಳುತ್ತಾನೆ:— ಎಲೈ ಮಂಗಳಕರಳೇ! ಜಗನ್ಮಾತೆಯೇ! ಎಚ್ಚರಗೊಳ್ಳುವವಳಾಗು. ಉದ್ಧವನಾದ ನನ್ನನ್ನು ಕೃಷ್ಣನ ಭಕ್ತರ ಸೇವಕರ ಸೇವಕನೆಂದು ತಿಳಿ. ಎಲೈ ತಾಯಿಯೇ! ನನ್ನನ್ನು ಅನುಗ್ರಹಿಸು. ನಾನು ಮತ್ತೆ ಮಥುರಾಪಟ್ಟಣಕ್ಕೆ ಹೋಗುತ್ತೇನೆ, ಮರದಿಂದ ಮಾಡಿದ ಸ್ತ್ರೀಪ್ರತಿಮೆಯು ಹೇಗೆ ಪರಾಧೀನವಾಗಿರುತ್ತದೋ, ಎತ್ತು ಹೇಗೆ ಗಾಡಿ ಹೊಡೆಯುವವನಿಗೆ ಯಾವಾಗಲೂ ಅಧೀನವಾಗಿರುತ್ತದೋ ಹಾಗೆ ನಾನೂ ಯಾವಾಗಲೂ ಪರಾಧೀನನಾಗಿರುವೆನು.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಶ್ರೀ ಕೃಷ್ಣಜನ್ಮಖಂಡದ
ಉತ್ತರಾರ್ಧದ ನಾರದ ನಾರಾಯಣ ಸಂವಾದದಲ್ಲಿನ
ರಾಧೋದ್ಧವಸಂವಾದದಲ್ಲಿ
ತೊಂಭತ್ತನಾಲ್ಕನೇ ಅಧ್ಯಾಯವು ಸಮಾಪ್ತವು



## ತೊಂಭತ್ತನಾಲ್ಕನೆಯ ಅಧ್ಯಾಯದ ಸಾರಾಂಶ.

ಕೃಷ್ಣನ ದಿವ್ಯನಾಮಸಂಕೀರ್ತನದಿಂದ ಆವನ ಹಿಂದಿನ ಕ್ರೀಡಾವಿಲಾಸಗಳನ್ನೆಲ್ಲ ಸ್ಮರಿಸಿಕೊಂಡ ರಾಧೆಯು ಪುನಃ ವಿರಹಕಾತರಳಾಗಿ ಮೂರ್ಚೆಹೋದಳು. ಅವಳ ಅಸದೃಶ ಪ್ರೇಮವನ್ನು ಅರಿತುಕೊಂಡ ಉದ್ಧವನು ರಾಧೆಯನ್ನು ಹೊಗಳಿ, ಅವಳನ್ನು ಸಚೇತನಗೊಳಿಸಲುದ್ಯುಕ್ತನಾದನು. ಆಗ ರಾಧೆಯ ಗೆಳತಿಯರಾದ ಮಾಧವಿ ಮುಂತಾದ ಕೆಲವರು ಕೃಷ್ಣನ ಮಾಹಾತ್ಮ್ಯವನ್ನು ವರ್ಣಿಸಿದರು. ಆಗ ಉದ್ಧವನು ಮಾನವರೂಪದಿಂದಿರುವ ಕೃಷ್ಣನಲ್ಲಿ ಕೆಲವು ಲೋಪದೋಷಗಳು ಕಂಡುಬಂದರೂ, ಅವನು ನಿಜವಾಗಿಯೂ ನಿರ್ಗುಣ ನಿರಾಕಾರ ಮತ್ತು ನಿರ್ಲಿಪ್ತನಾದ ಪರಮಾತ್ಮನೆಂಬುದನ್ನು ತಿಳಿಸಿದನು. ಆಗ ರಾಧೆಯ ತಾಯಿಯಾದ ಕಲಾವತಿಯೂಕೂಡ ಶ್ರೀ ಕೃಷ್ಣನ ಮಾಹಾತ್ಮ್ಯವನ್ನು ಬಣ್ಣಿಸಿದಳು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಪಂಚನವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಉದ್ಧವಸ್ಯ ವಚಃ ಶ್ರುತ್ವಾ ಚೇತನಂ ಪ್ರಾಪ್ಯ ರಾಧಿಕಾ ।
ಸಾ ಚೋವಾಚ ಸಮುತ್ಥಾಯ ರತ್ನಸಿಂಹಾಸನೇ ವರೇ || ೧ ||

ಉವಾಚ ಮಧುರಂ ದೇವೀ ಹೃದಯೇನ ವಿದೂಯತಾ ।
ಗೋಪೀಭಿಃ ಸಪ್ತಭಿರ್ಭಕ್ತ್ಯಾ ಸೇವಿತಾ ಶ್ವೇತಚಾಮರೈಃ || ೨ ||

|| ಶ್ರೀ ರಾಧಿಕೋವಾಚ ||

ಮಧುರಾಂ ಗಚ್ಛ ವತ್ಸ ತ್ವಂ ಮಾಂ ಚ ವಿಸ್ಮರ ಸಂಪದಾ ।
ಅತೋಽಪ್ಯಧರ್ಮೋ ನಾಸ್ತ್ಯೇವ ಭವತೋ ಭವಸಾಗರೇ || ೩ ||

---

### ತೊಂಭತ್ತೈದನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ :—ಉದ್ಧವನಾಡಿದ ಮಾತನ್ನು ಕೇಳಿ ರಾಧೆಯು ಎಚ್ಚರಗೊಂಡು ಮೇಲಕ್ಕೆದ್ದು, ಉತ್ತಮವಾದ ರತ್ನಸಿಂಹಾಸನದ ಮೇಲೆ ಕುಳಿತುಕೊಂಡಳು.

೨. ಆ ದೇವಿಯು ಏಳುಮಂದಿ ಗೋಪಿಯರಿಂದ ಬಿಳಿಯ ಚಾಮರಗಳಿಂದ ಬೀಸಲ್ಪಡುತ್ತಿರುವವಳಾಗಿ, ವ್ಯಥೆಯಿಂದ ಕೂಡಿದ ಮನಸ್ಸುಳ್ಳವಳಾಗಿ ಮಧುರವಾಗಿ ಮಾತನಾಡಿದಳು.

೩. ಶ್ರೀ ರಾಧಿಕೆಯು ಹೇಳುತ್ತಾಳೆ :—ಎಲೈ ಕುಮಾರನಾದ ಉದ್ಧವನೇ! ನೀನು ಮಧುರಾಪಟ್ಟಣಕ್ಕೆ ಹೋಗಿ, ಅಲ್ಲಿನ ಸುಖಸಂಪತ್ತಿನಿಂದ ನನ್ನನ್ನು ಮರೆತು ಬಿಟ್ಟರೆ, ಈ ಸಂಸಾರ ಸಮುದ್ರದಲ್ಲಿ ಇದಕ್ಕಿಂತಲೂ ನಿನ್ನ ಅಧರ್ಮ ಕಾರ್ಯವು ಮತ್ತೊಂದಿರುವುದಿಲ್ಲ.

ಮದೀಯಂ ವಚನಂ ಸರ್ವಂ ಗತ್ವಾ ಕಥಯ ಸಾಂಪ್ರತಮ್ ।
ಶ್ರೀಕೃಷ್ಣಂ ಪರಮಾನಂದಂ ಶೀಘ್ರಮಾನಯ ಮತ್ಪ್ರಭುಮ್ ॥ ೪ ॥

ಯೋಷಿಜ್ಜನ್ಮನಿ ಯೋಷಿತ್ಸು ಸಂಪ್ರಾಪ್ಯ ತಾದೃಶಂ ಪತಿಮ್ ।
ಭೇದೋ ಬಭೂವ ಕಸ್ಯಾ ವಾ ಮದನ್ಯಾ ಕಾಪಿ ದುಃಖಿನಾ ॥ ೫ ॥

ಕಿಂ ದದಾಸಿ ಪ್ರಬೋಧಂ ಮೇ ನಾಸ್ತಿ ಮೇ ಬೋಧಮೌಚಿತಮ್ ।
ನಿಷ್ಫಲೋ ದೇಹಿನಾಂ ದೇಹೋ ವಿನಾತ್ಮಾನಂ ಸದೋದ್ಧವ ॥ ೬ ॥

ಸಂಪ್ರೀತ್ಯಾ ಸಹ ಸೌಭಾಗ್ಯಂ ಗೌರವಂ ನಿತ್ಯನೂತನಮ್ ।
ಅತೀವ ದುರ್ಲಭಂ ಪ್ರೇಮ ರಹಸ್ಯಂ ನವಸಂಗಮಮ್ ॥ ೭ ॥

ಸ್ಮರಾಮಿ ಮನಸಾ ಶಶ್ವನ್ನಾನ್ಯೋ ಮನಸಿ ವರ್ತತೇ ।
ರಾತ್ರೌ ನಿದ್ರಾಂ ಪರಿತ್ಯಜ್ಯ ಸ್ಮರಣಂ ಶೋಕವರ್ಧನಮ್ ॥ ೮ ॥

---

೪. ನೀನು ಮಧುರೆಗೆ ಹೋಗಿ ಈಗ ನಾನು ಹೇಳುವ ಮಾತನ್ನು ಹೇಳುವವನಾಗು. ಆ ನನ್ನ ಪ್ರಭುವಾದ ಪರಮಾನಂದರೂಪನಾದ ಶ್ರೀ ಕೃಷ್ಣನನ್ನು ಜಾಗ್ರತೆಯಾಗಿ ಇಲ್ಲಿಗೆ ಕರೆದುಕೊಂಡು ಬರುವವನಾಗು.

೫. ಸ್ತ್ರೀಜನ್ಮವನ್ನು ಪಡೆದು, ಸ್ತ್ರೀಯರ ಮಧ್ಯದಲ್ಲಿ ಅಂಥಾ ಉತ್ತಮನಾದ ಪತಿಯನ್ನು ಪಡೆದೂಕೂಡ ಅವನಿಂದ ವಿರಹಿತಳಾಗಬೇಕಾದರೆ ಯಾರಿಗೆ ಭೇದವನ್ನು ಮಾಡಿದ್ದೆನೋ? ನನಗಿಂತಲೂ ದುಃಖಿತಳಾದವಳು ಯಾವಳಿದ್ದಾಳೆ?

೬. ಎಲೈ ಉದ್ಧವನೇ! ನನಗೆ ತಿಳಿವಳಿಕೆಯನ್ನು ಏತಕ್ಕೆ ಕೊಡುವೆ? ನನಗೆ ತಿಳಿವಳಿಕೆಯನ್ನು ಕೊಡುವುದು ಯೋಗ್ಯವಲ್ಲ. ಶರೀರಿಗಳ ಶರೀರವು ಆತ್ಮಜ್ಞಾನವಿಲ್ಲದಪಕ್ಷದಲ್ಲಿ ಯಾವಾಗಲೂ ವ್ಯರ್ಥವಾದುದೇಸರಿ.

೭–೮. ಉತ್ತಮವಾದ ಪ್ರೀತಿಯಿಂದ ಕೂಡಿದ ಸೌಭಾಗ್ಯವನ್ನೂ, ಗೌರವವನ್ನೂ, ಯಾವಾಗಲೂ ಹೊಸದಾಗಿರುವ ಅತ್ಯಂತ ದುರ್ಲಭವಾದ ಪ್ರೇಮವನ್ನೂ ರಹಸ್ಯವಾದ ಹೊಸ ಸಮಾಗಮವನ್ನೂ ಮತ್ತೆಮತ್ತೆ ಮನಸ್ಸಿನಿಂದ ಸ್ಮರಿಸಿಕೊಳ್ಳುತ್ತಿರುವೆನು. ಬೇರೆ ಯಾವ ವಿಚಾರವೂ ನನ್ನ ಮನಸ್ಸಿನಲ್ಲಿರುವುದಿಲ್ಲ. ರಾತ್ರಿಕಾಲದಲ್ಲಿ ನಿದ್ರೆಯನ್ನು ಬಿಟ್ಟು, ಮೇಲೆ ಹೇಳಿದ ವಿಷಯಗಳನ್ನು ಸ್ಮರಿಸಿಕೊಳ್ಳುವುದರಿಂದ ದುಃಖವು ಮತ್ತಷ್ಟು ಹೆಚ್ಚಾಗುತ್ತದೆ.

ಮಾಮುದ್ಧರ ಧ್ರುವಂ ವತ್ಸ ನಿಮಗ್ನಾಂ ಶೋಕಸಾಗರೇ ।
ಜೀವಾಭಯಪ್ರದಾನೇನ ತೀರ್ಥೇ ಸ್ನಾನಫಲಂ ನೃಣಾಮ್ ॥ ೯ ॥

ಪ್ರಬೋಧಿತುಂ ನ ಶಕ್ನೋಮಿ ದುರ್ನಿವಾರಂ ಚ ಮಾನಸಂ ।
ಚಿಂತಯೇ ಚರಣಾಂಭೋಜಂ ಕೃಷ್ಣಸ್ಯ ಪರಮಾತ್ಮನಃ ॥ ೧೦ ॥

ತದ್ಗುಣಂ ಮಹಿಮಾನಂ ಚ ಪ್ರೀತಿಂ ಚ ಪ್ರೇಮಸಾಗರಮ್ ।
ಸ್ಮಾರಂಸ್ಮಾರಂ ಚ ಸೌಭಾಗ್ಯಂ ಮನೋ ಮೇ ನ ಸ್ಥಿರಂ ಚಿರಮ್ ॥ ೧೧ ॥

ಜಗತಾಂ ಯುವತೀನಾಂ ಚ ಕಾಸಾಂ ವಾ ದುಃಖಮೀದೃಶಮ್ ।
ಶ್ರೀಕೃಷ್ಣಭೇದದುಃಖಂ ಚ ಕಾ ವಾ ಜಾನಾತಿ ಮಾಂ ವಿನಾ ॥ ೧೨ ॥

ಕಿಂಚಿಜ್ಜಾನಾತಿ ಸೀತಾ ಸಾಪ್ಯಹಂ ಚ ವಿಧಿಬೋಧಿತಮ್ ।
ಮತ್ಪರಾದುಃಖಿನೀ ನಾಸ್ತಿ ಕಾಮಿನೀಷು ಜಗತ್ರಯೇ ॥ ೧೩ ॥

---

೯. ಎಲೈ ಉದ್ಧವನೇ! ದುಃಖಸಮುದ್ರದಲ್ಲಿ ಮುಳುಗಿರುವ ನನ್ನನ್ನು ನಿಜವಾಗಿಯೂ ಉದ್ಧಾರಮಾಡುವವನಾಗು. ಪ್ರಾಣಾಭಯದಾನಮಾಡುವುದರಿಂದ ಮಾನವರಿಗೆ ಉತ್ತಮ ತೀರ್ಥದಲ್ಲಿ ಸ್ನಾನಮಾಡಿದ ಫಲವು ದೊರಕುತ್ತದೆ.

೧೦. ತಡೆಯಲಸಾಧ್ಯವಾದ ಈ ಮನಸ್ಸನ್ನು ಎಚ್ಚರಗೊಳಿಸಲು ಅಸಮರ್ಥಳಾಗಿರುವೆನು. ಪರಮಾತ್ಮನಾದ ಶ್ರೀಕೃಷ್ಣನ ಪಾದಕಮಲಗಳನ್ನು ಧ್ಯಾನಿಸುತ್ತಿರುವೆನು.

೧೧. ಅವನ ಗುಣವನ್ನೂ, ಅವನ ಮಹಿಮೆಯನ್ನೂ, ಪ್ರೀತಿಯನ್ನೂ, ಪ್ರೇಮಸಮುದ್ರವನ್ನೂ, ಸೌಭಾಗ್ಯವನ್ನೂ ಕೂಡ ಸ್ಮರಿಸುತ್ತ ಸ್ಮರಿಸುತ್ತ, ಚಂಚಲವಾದ ನನ್ನ ಮನಸ್ಸು ಸ್ಥಿರವಾಗಲೊಲ್ಲದು.

೧೨. ಪ್ರಪಂಚದಲ್ಲಿ ಸ್ತ್ರೀಯರ ಮಧ್ಯದಲ್ಲಿ ಯಾರಿಗೆತಾನೆ ಈ ರೀತಿಯಾದ ದುಃಖವುಂಟಾಗಿರುತ್ತದೆ? ಶ್ರೀ ಕೃಷ್ಣನ ಅಗಲುವಿಕೆಯಿಂದುಂಟಾದ ದುಃಖವನ್ನು ನನ್ನನ್ನು ಬಿಟ್ಟು ಮತ್ತಾವ ಸ್ತ್ರೀಯು ತಿಳಿದಿರುವಳು?

೧೩. ಸೀತಾದೇವಿಯು ಸ್ವಲ್ಪಮಾತ್ರ ತಿಳಿದಿರುವಳು. ಅವಳೂ ನಾನೂ ಸಹ ಅದೃಷ್ಟದಿಂದ ತಿಳಿಸಲ್ಪಟ್ಟವರಾಗಿದ್ದೇವೆ. ಮೂರು ಲೋಕಗಳಲ್ಲಿಯೂ ಸ್ತ್ರೀಯರಲ್ಲಿ ನನಗಿಂತಲೂ ಹೆಚ್ಚು ದುಃಖಪಡುವವರಿಲ್ಲ.

ಕಾ ವಾ ಯಾತಿ ಪ್ರತೀತಿಂ ಮೇ ಶ್ರುತ್ವಾ ಚ ಮಾನಸೀಂ ವ್ಯಥಾ ।
ಕಾಸಾಂ ವಾ ಮತ್ಸಮಂ ದುಃಖಂ ಯುವತೀನಾಂ ಸುತೋದ್ಧವ ॥ ೧೪ ॥

ರಾಧಿಕಾಸದೃಶೀ ಸ್ತ್ರೀಷು ನ ಭೂತಾ ನ ಭವಿಷ್ಯತಿ ।
ದುಃಖಿನೀ ವಿರಹಾತಪ್ತಾ ಸುಖಸೌಭಾಗ್ಯವರ್ಜಿತಾ ॥ ೧೫ ॥

ಸಂಪ್ರಾಪ್ಯ ಕಲ್ಪವೃಕ್ಷಂ ಚ ಪತಿಂ ಚ ಜಗತಾಂ ಪತಿಮ್ ।
ವಂಚಿತಾಹಂ ವಿಧಾತ್ರಾ ಚ ನಿರ್ದಯೇನ ಚ ಪಾಪಿನಾ ॥ ೧೬ ॥

ಜೀವನಂ ಸಫಲಂ ಜನ್ಮ ಸುಸ್ನಿಗ್ಧಂ ಚಕ್ಷುಷೀ ಮನಃ ।
ತತ್ಪಾದಪದ್ಮವಕ್ತ್ರೇಂದುರೂಪವೇಷಪ್ರದರ್ಶನಾತ್ ॥ ೧೭ ॥

ಯನ್ನಾಮಶ್ರುತಿಮಾತ್ರೇಣ ಪಂಚ ಪ್ರಾಣಾಃ ಪ್ರಹರ್ಷಿತಾಃ ।
ಸ್ಮೃತಿಮಾತ್ರಾತ್ಪ್ರಫುಲ್ಲ್ಯಂತೇ ಆತ್ಮಾ ಸುಸ್ನಿಗ್ಧ ಏವ ಚ ॥ ೧೮ ॥

---

೧೪. ಯಾವ ಸ್ತ್ರೀಯು ತಾನೆ ನನ್ನ ಸಮಾಚಾರವನ್ನು ಕೇಳಿ ಮನೋವ್ಯಥೆಯನ್ನು ಹೊಂದುವುದಿಲ್ಲ? ಎಲೈ ಮಗನಾದ ಉದ್ಧವನೇ! ಸ್ತ್ರೀಯರಲ್ಲಿ ಯಾರಿಗೆ ತಾನೆ ನನ್ನ ದುಃಖಕ್ಕೆ ಸಮನಾದ ದುಃಖವಿರುತ್ತದೆ?

೧೫. ಸ್ತ್ರೀಯರಲ್ಲಿ ರಾಧೆಗೆ ಸರಿಯಾದ ದುಃಖಿತಳೂ, ವಿರಹದಿಂದ ಸಂತಾಪಗೊಂಡವಳೂ, ಸುಖಸೌಭಾಗ್ಯಹೀನಳೂ ಆದ ಸ್ತ್ರೀಯು ಹಿಂದಿರಲಿಲ್ಲ. ಮುಂದೆ ಹುಟ್ಟುವುದಿಲ್ಲ.

೧೬. ಜಗತ್ತಿಗೆ ಒಡೆಯನಾದ ಕಲ್ಪವೃಕ್ಷದಂತಿರುವ ಪತಿಯನ್ನು ಪಡೆದಿದ್ದರೂ ನಾನು ದಯಾರಹಿತನೂ ಪಾಪಿಯೂ ಆದ ವಿಧಿಯಿಂದ ಮೋಸಗೊಳಿಸಲ್ಪಟ್ಟಿರುವೆನು.

೧೭. ಆ ಪರಮಾತ್ಮನ ಪಾದಕಮಲಗಳ, ಮುಖಚಂದ್ರನ, ರೂಪವೇಷಗಳ, ನೋಟದಿಂದ ಮಾನವನ ಜೀವನವು ಸಫಲವಾಗುತ್ತದೆ; ಜನ್ಮವೂ ಸಫಲವಾಗುತ್ತದೆ, ಕಣ್ಣುಗಳು ಮತ್ತು ಮನಸ್ಸು ಕೂಡ ಸ್ನೇಹಮಯವಾಗುತ್ತವೆ.

೧೮. ಯಾವ ಪರಮಾತ್ಮನ ನಾಮವನ್ನು ಕೇಳಿದ ಮಾತ್ರದಿಂದಲೇ ಪಂಚಪ್ರಾಣಗಳೂ ಆನಂದಗೊಳ್ಳುತ್ತವೆ. ಅವನನ್ನು ಸ್ಮರಿಸುವ ಮಾತ್ರದಿಂದಲೇ ಅಂತರಾತ್ಮವು ವಿಕಾಸವನ್ನು ಹೊಂದಿ ಸ್ನೇಹಮಯವಾಗುತ್ತದೆ.

ಯಶ್ಚ ಪಸ್ಪರ್ಶ ಸುರತಾ ಯಶಸ್ತ್ರಿಭುವನೇಷ್ವಪಿ ।
ಕಯಾ ವಾ ಸಂಪದಾ ವತ್ಸ ವಿಸ್ಮರಾಮಿ ತಮೀಶ್ವರಮ್ ॥ ೧೯ ॥

ತ್ರೈಲೋಕ್ಯವಿಜಯಂ ರೂಪಂ ಗುಣಮೇವ ಬಿಭರ್ತಿ ಯತ್ ।
ನ ನಿರ್ಮಿತೋ ಯೋ ವಿಧಿನಾ ತೇನೈವ ನಿರ್ಮಿತೋ ವಿಧಿಃ ॥ ೨೦ ॥

ತಂ ವಿಧೇಶ್ಚ ವಿಧಾತಾರಂ ದಾತಾರಂ ಸರ್ವಸಂಪದಾಮ್ ।
ಕಲ್ಪವೃಕ್ಷಾತ್ಪರಂ ಶಾಂತಂ ಲಕ್ಷ್ಮೀಕಾಂತಂ ಮನೋಹರಮ್ ॥ ೨೦ ॥

ಸರ್ವೇಷಾಂ ಸರ್ವಬೀಜಂ ಚ ಪರಮಾತ್ಮಾನಮೀಶ್ವರಮ್ ।
ಕಯಾ ವಾ ಸಂಪದಾ ತಾತ ವಿಸ್ಮರಾಮಿ ಚ ತಂ ಪತಿಮ್ ॥ ೨೨ ॥

ಯಸ್ಯ ನಿರ್ಮಥನಾರ್ಹಂ ಚ ನ ಚಂದ್ರೋ ನ ಚ ಮನ್ಮಥಃ ।
ನೈವಾಶ್ವಿನೀಕುಮಾರಶ್ಚ ಗುಣಸಾಮ್ಯಂ ನ ವಿಶ್ವತಃ ॥ ೨೩ ॥

ಧ್ಯಾಯಂತೇ ಯತ್ಪದಾಂಭೋಜಂ ಬ್ರಹ್ಮೇಶಶೇಷಸಂಜ್ಞಕಾಃ ।
ಕಯಾ ವಾ ಸಂಪದಾ ತಾತ ವಿಸ್ಮರಾಮಿ ಚ ತಂ ಪ್ರಭುಮ್ ॥ ೨೪ ॥

---

೧೯. ಯಾವನು ಸುರತಕಾಲದಲ್ಲಿ ನನ್ನನ್ನು ಸ್ಪರ್ಶಮಾಡಿರುವನೋ, ಯಾವನ ಕೀರ್ತಿಯು ಮೂರುಲೋಕಗಳಲ್ಲಿಯೂ ಹರಡಿರುವುದೋ ಅಂಥಾ ಜಗದೀಶನನ್ನು ಎಲೈ ಉದ್ಧವನೇ! ನಾನು ಯಾವ ಐಶ್ವರ್ಯಮದದಿಂದ ಮರೆಯಲಿ?

೨೦–೨೨. ಮೂರುಲೋಕವನ್ನೂ ಜಯಿಸುವ, ರೂಪವನ್ನೂ ಗುಣವನ್ನೂ ಹೊಂದಿರುವ ಯಾವ ಪರಮಾತ್ಮನು ಬ್ರಹ್ಮನಿಂದ ಸೃಷ್ಟಿಸಲ್ಪಡದವನಾಗಿ ತಾನೇ ಬ್ರಹ್ಮನನ್ನು ಸೃಷ್ಟಿಮಾಡಿರುವನೋ ಅಂಥಾ ಬ್ರಹ್ಮನಿಗೂ ಕಾರಣನಾದ, ಸಕಲ ಸಂಪತ್ತುಗಳನ್ನೂ ಕೊಡುವವನಾದ, ಕಲ್ಪವೃಕ್ಷಕ್ಕಿಂತಲೂ ಶ್ರೇಷ್ಠನೂ, ಶಾಂತನೂ, ಲಕ್ಷ್ಮೀಪತಿಯೂ, ಮನೋಹರನೂ, ಸಕಲರಿಗೂ ಕಾರಣನೂ, ಈಶ್ವರನೂ ಆದ, ಪರಮಾತ್ಮನಾದ ಆ ಪತಿಯನ್ನು ಯಾವ ಐಶ್ವರ್ಯಮದದಿಂದ ಮರೆಯಲಿ?

೨೩–೨೪. ಯಾವ ಪರಮಾತ್ಮನ ಮಹಿಮೆಯನ್ನು ಮನನಮಾಡಿದರೂ ಚಂದ್ರನೂ ಮನ್ಮಥನೂ ಸರಿದೂಗಲಾರರೋ, ಅಶ್ವಿನೀಕುಮಾರನೂ ಸಮನಾಗಲಾರನೋ, ಪ್ರಪಂಚದಲ್ಲಿಯೇ ಅವನ ಗುಣಕ್ಕೆ ಸದೃಶವಾದುದಿಲ್ಲವೋ, ಯಾವನ ಪಾದ ಕಮಲಗಳನ್ನು ಬ್ರಹ್ಮನೂ ಈಶ್ವರನೂ ಶೇಷನೂ ಧ್ಯಾನಿಸುತ್ತಿರುವರೋ, ಅಂಥಾ ಪ್ರಭುವನ್ನು ನಾನು ಯಾವ ಸಂಪತ್ತಿನ ಮದದಿಂದ ಮರೆಯಲಿ?

ಸ್ವಪ್ನೇ ಪಶ್ಯಂತಿ ರೂಪಮತುಲಂ ಚ ಮನೋಹರಮ್ ।
ತೇಽಪಿ ಸರ್ವಂ ಪರಿತ್ಯಜ್ಯ ಧ್ಯಾಯಂತೇ ತಮಹರ್ನಿಶಮ್ ॥ ೨೫ ॥

ಗುಣೇನ ಶೈಲಃ ಸಲಿಲಂ ಶುಷ್ಕಕಾಷ್ಠಂ ದ್ರವೇದಿತಿ ।
ಮೃದುವಕ್ಷೋ ಮುಕುಲಿತಃ ಸ್ತಂಭಿತಶ್ಚ ಸಮೀರಣಃ ॥ ೨೬ ॥

ಸೂರ್ಯಶ್ಚ ಜಲಧಿಶ್ಚೈವ ಸ್ಥಗಿತೋ ಭಕ್ತಿಭಾವತಃ ।
ಕಯಾ ವಾ ಸಂಪದಾ ಪುತ್ರ ವಿಸ್ಮರಾಮಿ ಚ ತಂ ಪ್ರಿಯಮ್ ॥ ೨೭ ॥

ಯದ್ಭಯಾದ್ವಾತಿವಾತೋಽಯಂ ಸೂರ್ಯಸ್ತಪತಿ ಯದ್ಭಯಾತ್ ।
ವರ್ಷತೀಂದ್ರೋ ದಹತ್ಯಗ್ನಿರ್ಮೃತ್ಯುಶ್ಚರತಿ ಜಂತುಷು ॥ ೨೮ ॥

ಯದ್ಭಯಾತ್ಫಲಿತಾ ವೃಕ್ಷಾಃ ಪುಷ್ಪಿತಾಃ ಸಮಯೇಽಪಿ ಚ ।
ಸಮುದ್ರಾಃ ಸ್ವಾತ್ಮವಿಷಯೇ ಗ್ರಹಾಶ್ಚ ಮುನಯಃ ಸುರಾಃ ॥ ೨೯ ॥

---

೨೫. ಸ್ವಪ್ನದಲ್ಲಿಯೂ ಕೂಡ ಅವನ ಎಣೆಯಿಲ್ಲದ ರೂಪವನ್ನು ಯಾರು ನೋಡುತ್ತಾರೋ, ಅವರೂ ಕೂಡ ಸಮಸ್ತವನ್ನೂ ಬಿಟ್ಟು, ಹಗಲೂ ರಾತ್ರಿಯೂ ಅವನನ್ನು ಧ್ಯಾನಿಸುತ್ತಾರೆ.

೨೬. ಅವನ ಗುಣದಿಂದ ಬೆಟ್ಟವೂ ನೀರಾಗುತ್ತದೆ ಒಣಗಿದ ಕಟ್ಟಿಗೆಯೂ ಕೂಡ ಕರಗುತ್ತದೆ. ಸತ್ತುಹೋದ ಮರವು ಚಿಗುರುತ್ತದೆ ಗಾಳಿಯು ಸ್ತಬ್ಧವಾಗುತ್ತದೆ.

೨೭. ಸೂರ್ಯನೂ ಸಮುದ್ರವೂ ಭಕ್ತಿಭಾವದಿಂದ ಮರೆಯಾಗುತ್ತವೆ. ಎಲೈ ಉದ್ಧವನೇ! ಅಂಥಾ ಪರಮಾತ್ಮನನ್ನು ನಾನು ಯಾವ ಐಶ್ವರ್ಯದ ಮದದಿಂದ ಮರೆಯಲಿ?

೨೮–೩೧. ಯಾವನ ಭಯದಿಂದ ಈ ಗಾಳಿಯು ಬೀಸುತ್ತದೆಯೋ, ಯಾವನ ಭಯದಿಂದ ಸೂರ್ಯನು ತಪಿಸುತ್ತಾನೆಯೋ, ಇಂದ್ರನು ಮಳೆಗರೆಯುತ್ತಾನೆಯೋ ಬೆಂಕಿಯು ಸುಡುತ್ತದೆಯೋ, ಮೃತ್ಯುವು ಪ್ರಾಣಿಗಳಲ್ಲಿ ಸಂಚಾರಮಾಡುತ್ತದೆಯೋ, ಯಾವನ ಭಯದಿಂದ ಮರಗಳು ಆಯಾಯ ಕಾಲಗಳಲ್ಲಿ ಹೂವುಗಳನ್ನು ಬಿಟ್ಟು ಹಣ್ಣುಗಳನ್ನು ಬಿಡುತ್ತವೆಯೋ, ಸಮುದ್ರಗಳು ತಮ್ಮ ಮೇರೆಯನ್ನು ಮೀರುವುದಿಲ್ಲವೋ, ಗ್ರಹಗಳೂ ಮುನಿಗಳೂ ದೇವತೆಗಳೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿರುವರೋ, ಕಾಲಕ್ಕೆ ಕಾಲರೂಪನಾಗಿ ಪ್ರಳಯಸ್ವರೂಪನೂ, ಜಗತ್ಸಂಹಾರ

ಕಾಲಸ್ಯ ಕಾಲಃ ಸಂವರ್ತಃ ಸಂಹರ್ತಾ ಸ್ರಷ್ಟುರೀಶ್ವರಃ ।
ಸ್ವಾಧೀನಶ್ಚ ಸ್ವತಂತ್ರಶ್ಚ ಸ್ವಯಮೇವಾತ್ಮಸಂಜ್ಞಕಃ ॥ ೩೦ ॥

ಕಯಾ ವಾ ಸಂಪದಾ ಭಕ್ತ ವಿಸ್ಮರಾಮಿ ಚ ತಂ ಪ್ರಭುಮ್ ।
ಪ್ರಬೋಧೋ ನಾಸ್ತಿ ತದ್ಭೇದೇ ಯೇನ ಮಾಂ ಬೋಧಯೇದ್ಬುಧಃ ॥೩೧॥

ಮಾಂ ಚ ಬೋಧಯಿತುಂ ಶಕ್ತಾ ನ ಸಾವಿತ್ರೀ ಸರಸ್ವತೀ ।
ನ ವೇದಾ ನ ಚ ವೇದಾಂಗಾಃ ಕೇ ವಾ ಸಂತಶ್ಚ ಕೇ ಸುರಾಃ ॥ ೩೨ ॥

ಸಹಸ್ರವಕ್ತ್ರೋಽನಂತಶ್ಚ ವೇದಾನಾಂ ಜನಕೋ ವಿಧಿಃ ।
ನ ಶಂಭುರ್ನ ಗಣೇಶಶ್ಚ ಯೋಗೀಂದ್ರಾಣಾಂ ಗುರೋರ್ಗುರುಃ ॥ ೩೩ ॥

ಸ್ಥಿತೇರ್ಗತಿಶ್ಚಿಂತನೀಯಾ ಮಾರ್ಗ ಶೂನ್ಯೇ ಕುತೋಗತಿಃ ।
ಕಾಲಸಾಧ್ಯಂ ಚ ಸರ್ವಂ ಚ ಸುಖಂ ದುಃಖಂ ಶುಭಾಶುಭಮ್ ॥ ೩೪ ॥

---

ಕನೂ, ಬ್ರಹ್ಮನಿಗೂ ಅಧಿಪತಿಯೂ, ಸಕಲವನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿರುವವನೂ, ತಾನು ಮಾತ್ರ ಸ್ವತಂತ್ರನೂ, ತಾನೇ ಆತ್ಮನೆಂಬ ಹೆಸರನ್ನು ಹೊಂದಿರುವವನೂ ಆದ ಆ ಪರಮಾತ್ಮನನ್ನು ಎಲೈ ಭಕ್ತನಾದ ಉದ್ಧವನೇ! ನಾನು ಯಾವ ಸಂಪತ್ತಿನಿಂದ ಮತ್ತಳಾಗಿ ಮರೆಯಲಿ? ಆ ಪರಮಾತ್ಮನ ಅಗಲುವಿಕೆಯುಂಟಾದರೆ ಆದರಿಂದ ಎಚ್ಚರಗೊಳಿಸಲು ಸಾಧ್ಯವಿಲ್ಲವು, ಹಾಗಿದ್ದಿದ್ದರೆ ತಿಳಿದವನು ನನ್ನನ್ನು ಎಚ್ಚರಿಸಬಹುದಾಗಿತ್ತು.

೩೨. ನನ್ನನ್ನು ಎಚ್ಚರುಗೊಳಿಸಲು ಸಾವಿತ್ರಿಯಾಗಲೀ ಸರಸ್ವತಿಯಾಗಲೀ ಸಮರ್ಥರಾಗಲಾರರು. ವೇದಗಳಾಗಲಿ ವೇದಾಂಗಗಳಾಗಲಿ ಸತ್ಪುರುಷರುಗಳಾರಿರುವರೋ ಅವರುಗಳಾಗಲೀ ಯಾವ ದೇವತೆಗಳಾಗಲೀ ಸಮರ್ಥರಲ್ಲ.

೩೩. ಸಾವಿರ ಮುಖಗಳುಳ್ಳ ಅನಂತನಾಗಲೀ, ವೇದಗಳನ್ನು ಸೃಷ್ಟಿಮಾಡಿದ ಬ್ರಹ್ಮನಾಗಲೀ, ಈಶ್ವರನಾಗಲೀ, ಗಣೇಶನಾಗಲೀ, ಯೋಗಿಶ್ರೇಷ್ಠರಿಗೂ ಗುರುವಾದವನಾವನೋ ಅವನಿಗೂ ಗುರುವಾದವನಾಗಲೀ ಸಮರ್ಥರಲ್ಲ.

೩೪. ಇರುವುದಕ್ಕೆ ಮಾರ್ಗವನ್ನು ಯೋಚಿಸಬೇಕು. ಮಾರ್ಗವೇ ಇಲ್ಲದಿದ್ದರೆ ಮುಂದೆ ಗತಿಯೇನು? ಸುಖವೂ ದುಃಖವೂ, ಒಳ್ಳೆಯದೂ ಕೆಟ್ಟುದೂ, ಎಲ್ಲವೂಕೂಡ ಕಾಲದಿಂದ ಹೊಂದತಕ್ಕವುಗಳಾಗಿರುತ್ತವೆ.

ದುರ್ನಿವಾರಃ ಸ ಕಾಲಶ್ಚ ಕಾಲಸಾಧ್ಯಂ ಜಗತ್ಸು ಚ ।
ಉತ್ತಿಷ್ಠ ಮಧುರಾಂ ಗಚ್ಛ ಸುಖಂ ವತ್ಸ ಮನೋಹರಮ್ ॥ ೩೫ ॥

ವ್ರಜವಾಸಂ ಪರಿತ್ಯಜ್ಯ ಭವಾಂಶ್ಚ ಗಮನೋತ್ಸುಕಃ ।
ಸುಚಿರಂ ಕೃಷ್ಣವಿಚ್ಛೇದೋ ದುಃಖಾಯ ನ ಸುಖಾಯ ಚ ॥ ೩೬ ॥

ಪಶ್ಯ ಚಂದ್ರಮುಖಂ ತಸ್ಯ ಜನ್ಮಮೃತ್ಯುಜರಾಪಹಮ್ ।
ರಾಧಿಕಾವಚನಂ ಶ್ರುತ್ವಾ ರುರೋದ ಭೃಶಮುದ್ಧವಃ ।
ರುದತೀಂ ರಾಧಿಕಾಂ ದೃಷ್ಟ್ವಾ ಬಂಧುವಿಚ್ಛೇದಕಾತರಾಮ್ ॥ ೩೭ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಭಾಗೇ ನಾರಾಯಣ ನಾರದ ಸಂವಾದೇ
ರಾಧೋದ್ಧವಸಂವಾದೇ
ಪಂಚನವತಿತಮೋಽಧ್ಯಾಯಃ

---

೩೫. ಆ ಕಾಲವನ್ನು ನಿವಾರಿಸುವಂತಿಲ್ಲ, ಪ್ರಪಂಚದಲ್ಲಿ ಎಲ್ಲವೂ ಕಾಲದಿಂದಲೇ ಸಿದ್ಧಿಸತಕ್ಕುದಾಗಿದೆ. ಎಲೈ ಉದ್ಧವನೇ! ಮೇಲೇಳು. ಸುಖವಾಗಿ ಮನೋಹರವಾದ ಮಧುರಾಪಟ್ಟಣಕ್ಕೆ ಹೋಗುವವನಾಗು

೩೬. ನೀನಾದರೋ ಈ ಗೋಕುಲವಾಸವನ್ನು ಬಿಟ್ಟುಹೋಗಲು ಕುತೂಹಲವುಳ್ಳವನಾಗಿರುತ್ತೀಯೆ. ಬಹಳಕಾಲದವರೆಗೆ ಕೃಷ್ಣನ ಅಗಲುವಿಕೆಯುಂಟಾದರೆ ದುಃಖವಾಗುತ್ತದೆಯೇ ಹೊರತು ಸುಖವಾಗುವುದಿಲ್ಲ.

೩೭. ಹುಟ್ಟು ಸಾವು ಮುಪ್ಪುಗಳನ್ನು ನಾಶಮಾಡುವವನಾದ ಆ ಕೃಷ್ಣನ ಚಂದ್ರನಂತೆ ಸಂತೋಷವನ್ನುಂಟುಮಾಡುವ ಮುಖವನ್ನು ನೋಡುವವನಾಗು. ಈಪ್ರಕಾರವಾದ ರಾಧೆಯ ಮಾತನ್ನು ಕೇಳಿ, ಬಂಧುವಿನ ಅಗಲುವಿಕೆಯಿಂದ ದುಃಖಿತಳಾಗಿ ಅಳುತ್ತಿರುವ ರಾಧೆಯನ್ನು ನೋಡಿ ಉದ್ಧವನೂ ಕೂಡ ಬಹಳ ಅತ್ತನು.

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ
ನಾರಾಯಣ ನಾರದಸಂವಾದದಲ್ಲಿನ ರಾಧೋದ್ಧವಸಂವಾದದಲ್ಲಿ
ತೊಂಭತ್ತೈದನೆಯ ಅಧ್ಯಾಯವು ಸಮಾಪ್ತವಾದುದು.

## ತೊಂಭತ್ತೈದನೆಯ ಅಧ್ಯಾಯದ ಸಾರಾಂಶ.

ಉದ್ಧವನು ವರ್ಣಿಸಿದ ಶ್ರೀ ಕೃಷ್ಣನ ಮಾಹಾತ್ಮ್ಯವನ್ನು ಕೇಳಿದ ರಾಧೆಯು ಚೇತನಗೊಂಡು, ಶ್ರೀ ಕೃಷ್ಣನ ಸಮಾಗಮ ಸುಖವನ್ನು ಮತ್ತೆಮತ್ತೆ ಸ್ಮರಿಸಿಕೊಂಡು ವ್ಯಥೆಪಡುತ್ತಾ, ಬೇಗ ಮಥುರಾಪಟ್ಟಣಕ್ಕೆ ಹೋಗಿ ಶ್ರೀಕೃಷ್ಣನನ್ನು ಕರೆತರಬೇಕೆಂದು ಉದ್ಧವನಿಗೆ ಹೇಳಿದಳು, ಅಲ್ಲದೆ, ಶ್ರೀ ಕೃಷ್ಣನ ವಿರಹದಿಂದ ತಾನು ಅನುಭವಿಸುತ್ತಿರುವ ದುಃಖವು ಪ್ರಪಂಚದಲ್ಲಿ ಮತ್ತಾರಿಂದಲೂ ಅನುಭವಿಸಲ್ಪಟ್ಟಿಲ್ಲವೆಂದು ಹೇಳಿ ತನ್ನ ಜನ್ಮಾಂತರ ಕರ್ಮಕ್ಕೆ ಪರಿತಪಿಸಿದಳು. ರಾಧೆಯ ದುಃಖವನ್ನು ನೋಡಿ ಉದ್ಧವನೂ ಸಹ ವ್ಯಥೆಗೊಂಡನು.



|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಷಣ್ಣವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಶ್ರೀಕೃಷ್ಣಸ್ಮರಣಂ ಕೃತ್ವಾ ಗಮನೋನ್ಮುಖಮುದ್ಧವಂ ।
ನತಂ ರಾಧಾಪದಾಂಭೋಜೇ ಶಿರಸಾ ಪುಲಕಾಂಚಿತಂ || ೧ ||

ಉವಾಚ ಮಾಧವೀ ಗೋಪೀ ರುದಂತೀ ಪ್ರೇಮವಿಹ್ವಲಾ ।
ಭಕ್ತಂ ರುದಂತಮುಚ್ಚೈಶ್ಚ ರಾಧಾವಿಚ್ಛೇದಕಾತರಂ || ೨ ||

|| ಮಾಧವ್ಯುವಾಚ ||

ಉದ್ಧವ ಶೃಣು ವಕ್ಷ್ಯಾಮಿ ಕ್ಷಣಂ ತಿಷ್ಠ ಯಥೋಚಿತಂ ।
ನಿಗೂಢಂ ಪರಮಂ ಜ್ಞಾನಂ ಯತ್ತೇ ಮನಸಿ ವಾಂಛಿತಂ || ೩ ||

---

ತೊಂಭತ್ತಾರನೆಯ ಅಧ್ಯಾಯವು.

೧–೨. ಶ್ರೀ ನಾರಾಯಣನು ಹೇಳುತ್ತಾನೆ:— ಶ್ರೀ ಕೃಷ್ಣನನ್ನು ಸ್ಮರಣೆ ಮಾಡುತ್ತ ಹೊರಡಲು ಸಿದ್ಧನಾಗಿರುವ ರಾಧೆಯ ಪಾದಕಮಲಗಳಿಗೆ ತಲೆಬಾಗಿ ನಮಸ್ಕಾರಮಾಡಿದ ರೋಮಾಂಚನವನ್ನು ಹೊಂದಿರುವ ರಾಧೆಯ ಅಗಲುವಿಕೆಗಾಗಿ ವ್ಯಥೆಗೊಂಡು ಗಟ್ಟಿಯಾಗಿ ಅಳುತ್ತಿರುವ ಭಕ್ತನಾದ ಉದ್ಧವನನ್ನು ಕುರಿತು ಮಾಧವಿಯೆಂಬ ಗೋಪಿ ಪ್ರೀತಿಯಿಂದ ಕೂಡಿದವಳಾಗಿ ಅಳುತ್ತ ಈರೀತಿಯಾಗಿ ಹೇಳಿದಳು.

೩–೪. ಮಾಧವಿಯು ಹೇಳುತ್ತಾಳೆ:—ಎಲೈ ಉದ್ಧವನೇ! ಮಹಾತ್ಮನೇ! ಕ್ಷಣಕಾಲ ಇಲ್ಲಿ ನಿಲ್ಲು; ಉಚಿತವಾದ ಮಾತನ್ನು ಹೇಳುತ್ತೇನೆ ಕೇಳುವವನಾಗು. ಪುರಾಣಗಳಲ್ಲಿಯೂ ವೇದಗಳಲ್ಲಿಯೂ ಗೋಪ್ಯವಾಗಿರುವ ಹೊಂದಲಸಾಧ್ಯವಾದ

ಸುದುರ್ಲಭಂ ಪುರಾಣೇಷು ವೇದೇಷು ಗೋಪನೀಯಕಂ ।
ಪ್ರಶ್ನಂ ಕುರು ಮಹಾಭಾಗ ರಾಧಿಕಾಂ ತ್ರಿಜಗತ್ಪ್ರಸೂಂ ॥ ೪ ॥

ಇತ್ಯುಕ್ತ್ವಾ ಸಾ ಚ ಗೋಪೀಶಾ ಸಮುವಾಸ ಸುಸಂಸದಿ ।
ಉವಾಚ ಮಧುರಂ ಶಾಂತಾಮುದ್ಧವಶ್ಚಾಪಿ ರಾಧಿಕಾಂ ॥ ೫ ॥

॥ ಉದ್ಧವ ಉವಾಚ ॥

ಏಕಾಕೀ ಭವಮಾಯಾತಿ ಯಾತ್ಯೇಕಾಕೀ ಪುನಃಪುನಃ ।
ಪ್ರಾಣೀ ಕರ್ಮಾನುರೋಧೇನ ಸ್ವಕರ್ಮಫಲಭುಕ್ಪುಮಾನ್ ॥ ೬ ॥

ಕರ್ಮಣಾ ಜಾಯತೇ ಜಂತುಃ ಕರ್ಮಣ್ಯೈವ ಪ್ರಲೀಯತೇ ।
ಸುಖಂ ದುಃಖಂ ಭಯಂ ಶೋಕಂ ಕರ್ಮಣ್ಯೈವಾಭಿಪದ್ಯತೆ ॥ ೭ ॥

ಜಂತುರ್ಭೋಗಾವಶೇಷೇಣ ಭೋಗಂ ಭುಂಕ್ತೇ ಭವೇಷು ಚ ।
ಪುನಶ್ಚ ಕರ್ಮಣೋ ಭೋಗಾತ್ಸಮಾಯಾತಿ ಚ ಯಾತಿ ಚ ॥ ೮ ॥

---

ಮತ್ತು ರಹಸ್ಯವಾದ ದಿವ್ಯಜ್ಞಾನ ವಿಷಯವು ಯಾವುದು ನಿನ್ನ ಮನಸ್ಸಿನಲ್ಲಿರುವುದೋ ಅದರ ವಿಷಯದಲ್ಲಿ ಜಗಜ್ಜನನಿಯಾದ ರಾಧೆಯನ್ನು ಕೇಳುವವನಾಗು.

೫. ಈಪ್ರಕಾರವಾಗಿ ಹೇಳಿ ಮಾಧವಿಯೆಂಬ ಗೋಪಿಯು ಸಮೀಪದಲ್ಲಿ ಬಂದು ನಿಂತಳು. ಉದ್ಧವನೂ ಕೂಡ ಶಾಂತಳಾದ ರಾಧೆಯನ್ನು ಕುರಿತು ಮಧುರವಾಗಿ ಮಾತನಾಡಿದನು.

೬. ಉದ್ಧವನು ಹೇಳುತ್ತಾನೆ:—ಪ್ರಾಣಿಯು ತನ್ನ ಕರ್ಮಕ್ಕನುಸಾರವಾಗಿ ಮತ್ತೆಮತ್ತೆ ಒಬ್ಬನೇ ಈ ಸಂಸಾರಕ್ಕೆ ಬರುತ್ತಾನೆ. ಒಬ್ಬನೇ ಮತ್ತೆಮತ್ತೆ ಹೋಗುತ್ತಾನೆ. ಮಾನವನು ತನ್ನ ಕರ್ಮದ ಫಲವನ್ನನುಭವಿಸುತ್ತಾನೆ.

೭. ಪ್ರಾಣಿಯು ಕರ್ಮವಶದಿಂದ ಹುಟ್ಟುತ್ತಾನೆ. ಕರ್ಮವಶದಿಂದಲೇ ಸಾಯುತ್ತಾನೆ. ಸುಖ, ದುಃಖ, ಭಯ, ವ್ಯಸನ ಇವುಗಳೆಲ್ಲವೂ ಕರ್ಮದಿಂದಲೇ ಉಂಟಾಗುತ್ತವೆ.

೮. ಪ್ರಾಣಿಯು ಹಿಂದಿನ ಜನ್ಮದಲ್ಲಿ ಅನುಭವಿಸಿ ಉಳಿದಿರುವ ಕರ್ಮದಿಂದ ಮುಂದಿನ ಜನ್ಮಗಳಲ್ಲಿ ಭೋಗಗಳನ್ನನುಭವಿಸುತ್ತಾನೆ. ಮತ್ತೆ ಕರ್ಮಫಲವನ್ನನುಭವಿಸಿ ಹೋಗುತ್ತಾನೆ. ಮತ್ತೆ ಬರುತ್ತಾನೆ.

ರತ್ನಾದಿಕಂ ಚ ಯತ್ಕಿಂಚಿನ್ಮಹ್ಯಂ ದತ್ತಂ ತ್ವಯಾ ಸತಿ ।
ಮಯಾ ಸಾರ್ಧಂ ನ ಯಾತ್ಯೇವ ತೇನ ಮೇ ಕಿಂ ಪ್ರಯೋಜನಂ ॥ ೯ ॥

ಭವಾಬ್ಧಿತಾರಣೇ ದೇವೀ ಭವತೀ ತರಣಿರ್ವರ ।
ಕರ್ಣಧಾರಃ ಸ್ವಯಂ ಕೃಷ್ಣಃ ಸರ್ವೇಷಾಂ ಪಾರಕಾರಕಃ ॥ ೧೦ ॥

ಕಿಂಚಿದ್ದಾನಂ ದೇಹಿ ಮಹ್ಯಂ ಭವಾಬ್ಧಿಪಾರಕಾರಣಂ ।
ಪ್ರಾಪ್ಯ ಪ್ರಸಾದಂ ಯಾಸ್ಯಾಮಿ ಮಥುರಾಂ ಕೃಷ್ಣಮೂಲಕಂ ॥ ೧೧ ॥

ಯಾಂಯಾಂ ಕಾಲಗತಿಂ ಮಾತಃ ಸುರಾಣಾಂ ಚ ನೃಣಾಮಪಿ ।
ಪಿತೄಣಾಂ ಬ್ರಹ್ಮಲೋಕಸ್ಯ ತದೂರ್ಧ್ವಸ್ಯ ಚ ತಾಂ ವದ ॥ ೧೨ ॥

ತಾಮೇವ ದುಸ್ತರಾಂ ಘೋರಾಂ ತೀರ್ತ್ವಾ ಯಾಮಿ ಹರೇಃ ಪದಂ ।
ಏವಂಭೂತಮುಪಾಯಂ ಚ ದೇಹಿ ಮೇ ಕಮಲಾಲಯೇ ॥ ೧೩ ॥

---

೯. ಎಲೈ ಪತಿವ್ರತೆಯೇ! ನೀನು ನನಗೆ ರತ್ನ ಮುಂತಾದುವುಗಳನ್ನೇನು ಕೊಟ್ಟಿರುವೆಯೋ ಅವುಗಳಾವುವೂ ನನ್ನ ಜೊತೆಯಲ್ಲಿ ಬರುವುದೇ ಇಲ್ಲ. ಅದರಿಂದ ನನಗೇನುಪ್ರಯೋಜನ?

೧೦. ದೇವಿಯಾದ ನೀನು ಸಂಸಾರವೆಂಬ ಸಮುದ್ರವನ್ನು ದಾಟಿಸುವುದರಲ್ಲಿ ಉತ್ತಮವಾದ ದೋಣಿಯಂತಿರುವೆ. ಕೃಷ್ಣನು ತಾನೇ ಆ ದೋಣಿಯನ್ನು ನಡೆಸುವ ಅಂಬಿಗನಂತಿದ್ದು, ಎಲ್ಲರನ್ನೂ ಸಂಸಾರ ಸಮುದ್ರದ ಆಚೆಯ ದಡವನ್ನು ಸೇರಿಸುವವನು.

೧೧. ಸಂಸಾರವೆಂಬ ಸಮುದ್ರವನ್ನು ದಾಟಲು ಕಾರಣವಾದ ದಾನವನ್ನು ನನಗೆ ಸ್ವಲ್ಪ ಕೊಡುವವಳಾಗು. ನಿನ್ನ ಅನುಗ್ರಹವನ್ನು ಪಡೆದುಕೊಂಡು, ಆಮೇಲೆ ಕೃಷ್ಣನೇ ಮುಖ್ಯವಾಗಿರುವ ಮಥುರಾಪುರಿಗೆ ಹೋಗುವೆನು.

೧೨. ಎಲೈ ತಾಯಿಯೇ! ದೇವತೆಗಳಿಗೂ, ಮಾನವರಿಗೂ, ಪಿತೃಗಳಿಗೂ ಬ್ರಹ್ಮಲೋಕಕ್ಕೂ ಮತ್ತು ಅದಕ್ಕೂ ಮೇಲಿರುವ ಲೋಕಕ್ಕೂ ಕಾಲಪ್ರಮಾಣವು ಯಾವಯಾವ ರೀತಿಯಲ್ಲಿದೆಯೆಂಬುದನ್ನು ಹೇಳುವವಳಾಗು.

೧೩. ಆ ದಾಟಲಸಾಧ್ಯವೂ ಭಯಂಕರವೂ ಆದ ಕಾಲಗತಿಯನ್ನು ದಾಟಿ, ಹರಿಯ ಪಾದವನ್ನು ಕುರಿತು ತೆರಳುವೆನು. ಎಲೈ ಕಮಲದಲ್ಲಿ ವಾಸಿಸುವವಳೇ! ಆಪ್ರಕಾರವಾದ ಉಪಾಯವನ್ನು ನನಗೆ ತೋರಿಸಿಕೊಡುವವಳಾಗು.

ದೂರತೋ ಯತ್ಪದಾಂಭೋಜಂ ಧ್ಯಾಯಂತೇ ಚ ದಿವಾನಿಶಂ ।
ದೇವಾ ಬ್ರಹ್ಮೇಶಶೇಷಾದ್ಯಾಸ್ತ್ವಂ ತದ್ವಕ್ಷಃಸ್ಥಲಸ್ಥಿತಾ　　॥ ೧೪ ॥

ಉದ್ಧವಸ್ಯ ವಚಃ ಶ್ರುತ್ವಾ ಜಹಾಸ ಕಮಲಾಲಯಾ ।
ವಾಸಸಾ ನೇತ್ರ ನೀರಂಚ ಸಂಮಾರ್ಜ್ಯ ತಮುವಾಚ ಸಾ　　॥ ೧೫ ॥

॥ ಶ್ರೀ ರಾಧೋವಾಚ ॥

ಮಾಧವೀವಚನೇನೈವ ಕರೋಷಿ ಪ್ರಶ್ನಮುದ್ಧವ ।
ಸ್ತ್ರೀಜಾತಿರಬಲಾ ಲೋಕೇ ಕಿಂ ವಾ ಜ್ಞಾನಂ ವದಾಮಿ ತೇ　　॥ ೧೬ ॥

ಶುದ್ಧಾಂ ಕಾಲಗತಿಂ ವತ್ಸ ಜಾನಾತಿ ಭಗವಾನ್ ಹರಿಃ ।
ಬ್ರಹ್ಮಾ ಮಹೇಶಃ ಶೇಷಶ್ಚ ವೇದಾಶ್ಚತ್ವಾರ ಏವ ಚ　　॥ ೧೭ ॥

ಕಿಂಚಿದ್ವೇದಾನುಸಾರೇಣ ಸಂತೋ ಜಾನಂತಿ ಪುತ್ರಕ ।
ಶ್ರೂಯತಾಂ ಕೃಷ್ಣವಕ್ತ್ರೇಣ ಗೋಲೋಕೇ ರಾಸಮಂಡಲೇ　　॥ ೧೮ ॥

---

೧೪. ಬ್ರಹ್ಮ, ಈಶ್ವರ, ಆದಿಶೇಷನೇ ಮೊದಲಾದ ದೇವತೆಗಳೂಕೂಡ ದೂರ ದಿಂದಲೇ ಯಾವ ಹರಿಯ ಪಾದಕಮಲಗಳನ್ನು ಹಗಲು ರಾತ್ರಿಗಳಲ್ಲಿಯೂ ಧ್ಯಾನಿಸು ತ್ತಾರೋ ಅಂಥಾ ಹರಿಯ ವಕ್ಷಸ್ಥಳದಲ್ಲಿ ನೀನು ವಾಸಮಾಡುತ್ತಿರುವೆ.

೧೫. ಉದ್ಧವನಾಡಿದ ಮಾತನ್ನು ಕೇಳಿ ಕಮಲವಾಸಿನಿಯಾದ ರಾಧೆಯು ನಕ್ಕಳು- ಮತ್ತು ವಸ್ತ್ರದಿಂದ ಕಣ್ಣೀರನ್ನು ವರೆಸಿಕೊಂಡು ಅವನನ್ನು ಕುರಿತು ಇಂತೆಂದಳು.

೧೬. ಶ್ರೀ ರಾಧೆಯು ಹೇಳುತ್ತಾಳೆ:— ಎಲೈ ಉದ್ಧವನೇ! ನೀನು ಮಾಧ ವಿಯ ಮಾತಿನಿಂದ ಈ ಪ್ರಶ್ನೆಯನ್ನು ಮಾಡುತ್ತಿರುವೆ. ಲೋಕದಲ್ಲಿ ಸ್ತ್ರೀಜಾತಿಯು ದುರ್ಬಲವಾದುದು. ನಿನಗೆ ನಾನೇನು ಜ್ಞಾನವನ್ನುಪದೇಶಿಸಲಿ?

೧೭. ಎಲೈ ಮಗುವಾದ ಉದ್ಧವನೇ! ಶುದ್ಧವಾದ ಕಾಲದ ಗತಿಯನ್ನು ಪೂಜ್ಯನಾದ ಹರಿಯು ತಿಳಿದಿರುವನು. ಬ್ರಹ್ಮನೂ ಮಹೇಶ್ವರನೂ ಆದಿಶೇಷನೂ ನಾಲ್ಕು ವೇದಗಳೂ ತಿಳಿದಿರುವರು.

೧೮–೨೦. ಎಲೈ ಮಗನೇ! ವೇದದಲ್ಲಿ ಹೇಳಿರುವಂತೆ ಸ್ವಲ್ಪಮಟ್ಟಿಗೆ ಸತ್ಪುರುಷರಾದವರು ತಿಳಿದಿರುತ್ತಾರೆ. ಗೋಲೋಕದಲ್ಲಿ ರಾಸಮಂಡಲದಲ್ಲಿ ಶ್ರೀ

ಗೋಲೋಕೇ ಚಾಪಿ ವೈಕುಂಠೇ ಬ್ರಹ್ಮಲೋಕೇ ಚ ಸಾಂಪ್ರತಂ ।
ಯಾ ಚ ದೃಷ್ಟಾ ಕಾಲಗತಿಸ್ತಾಮೇವ ಕಥಯಾಮಿ ತೇ ॥ ೧೯ ॥

ನೃಣಾಂ ಪಿತ್ರೃಣಾಂ ದೇವಾನಾಂ ಬ್ರಹ್ಮಲೋಕಾದಿಕಸ್ಯ ಚ ।
ಬಹಿರ್ಲೋಕಸ್ಯ ಬ್ರಹ್ಮಾಂಡಾತ್ಪಾತಾಲಾನಾಂ ಚ ನಿಶ್ಚಿತಂ ॥ ೨೦ ॥

ಮರತ್ಯಯಾಂ ಕಾಲಗತಿಂ ಯೇನೋಪಾಯೇನ ಪಂಡಿತಾಃ ।
ನಿಸ್ತರಂತಿ ಬುಧಶ್ರೇಷ್ಠಾ ಕಥಯಾಮಿ ನಿಶಾಮಯ ॥ ೨೧ ॥

ಭಜಂತಿ ಜಗತಾಂ ನಾಥಂ ಕಾಲಕಾಲಂ ಜಗದ್ಗುರುಂ ।
ನಿರ್ಗುಣಂ ಚ ನಿರೀಹಂ ಚ ಪರಮಾತ್ಮಾನಮೀಶ್ವರಂ ॥ ೨೨ ॥

ಸದ್ಯಃ ಪತತಿ ದೇಹೋಽಯಂ ವಿನಾ ಯೇನ ಸದಾತ್ಮನಾ ।
ತಂ ನಿಷೇವ್ಯ ಕಾಲಗತಿಂ ತರತ್ಯೇವ ಹಿ ಕೇವಲಂ ॥ ೨೩ ॥

---

ಕೃಷ್ಣನ ಬಾಯಿಯಿಂದ ಯಾವರೀತಿಯಲ್ಲಿ ಕೇಳಿರುವೆನೋ, ಬ್ರಹ್ಮಲೋಕದಲ್ಲಿಯೂ ಗೋಲೋಕದಲ್ಲಿಯೂ ವೈಕುಂಠದಲ್ಲಿಯೂ ಯಾವ ಕಾಲಗತಿಯು ನನ್ನಿಂದ ನೋಡಲ್ಪಟ್ಟಿರುವುದೋ ಅದನ್ನೇ ಈಗ ನಿನಗೆ ಹೇಳುತ್ತೇನೆ, ಸಾವಧಾನವಾಗಿ ಕೇಳು. ಮಾನವರ ಪಿತೃಗಳ ದೇವತೆಗಳ ಬ್ರಹ್ಮಲೋಕ ಮುಂತಾದುವುಗಳ ಬ್ರಹ್ಮಾಂಡದ ಹೊರಭಾಗದಲ್ಲಿರುವ ಲೋಕಗಳ ಮತ್ತು ಪಾತಾಲಗಳ ಕಾಲಗತಿಯನ್ನು ನಿಶ್ಚಯವಾಗಿ ಹೇಳುವೆನು.

೨೧. ಮೀರಲಸಾಧ್ಯವಾದ ಕಾಲಗತಿಯನ್ನು ಜ್ಞಾನವಂತರಾದ ವಿದ್ವಾಂಸರುಗಳು ಯಾವ ಉಪಾಯದಿಂದ ದಾಟುತ್ತಾರೋ ಅದನ್ನು ಹೇಳುತ್ತೇನೆ ಕೇಳುವವನಾಗು.

೨೨. ವಿದ್ವಾಂಸರಾದವರು ಜಗತ್ತಿಗೆ ಒಡೆಯನೂ, ಕಾಲನಿಗೂ ಕಾಲನೂ, ಜಗತ್ತಿಗೆ ಗುರುವೂ, ನಿರ್ಗುಣನೂ, ಇಚ್ಛೆಯಿಲ್ಲದವನೂ, ಈಶ್ವರನೂ ಆದ ಪರಮಾತ್ಮನನ್ನು ಸೇವಿಸುತ್ತಾರೆ.

೨೩. ಯಾವ ಆತ್ಮನಿಲ್ಲದೇಹೋದಪಕ್ಷದಲ್ಲಿ ಈ ದೇಹವು ಕೂಡಲೆ ಬಿದ್ದು ಹೋಗುತ್ತದೆಯೋ, ಅಂಥಾ ಆತ್ಮನನ್ನು ಮುಖ್ಯವಾಗಿ ಸೇವಿಸಿ ಕಾಲಗತಿಯಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಆಯುರ್ಹರತಿ ಸರ್ವೇಷಾಂ ಪ್ರಾಣಿನಾಂ ರವಿರೇವ ಚ ।
ಶ್ರೀಹರೇಃ ಶುದ್ಧಭಕ್ತಾನಾಂ ಸತಾಂ ಪುಣ್ಯವತಾಂ ವಿನಾ　　|| ೨೪ ||

ವಿಧೇರ್ಮಾನಸಿಕಾನ್ಪುತ್ರಾಂಶ್ಚತುರಃ ಪಶ್ಯ ಪುತ್ರಕ ।
ಸನಕಾದೀನ್ಭಾಗವತಾನ್ಯೇಷಾಂ ಚ ಸುಸ್ಥಿರಂ ವಯಃ　　|| ೨೫ ||

ರುದ್ರಾದ್ಯಾನ್ಸಯಸಾದಿತ್ಯಾನ್ ಜ್ಞಾನಿನಾಂ ಚ ಗುರೋರ್ಗುರೂನ್ ।
ಬಾಲಾನನುಪನೀತಾಂಶ್ಚ ಪಂಚವರ್ಷಶಿಶೂನ್ಯಥಾ　　|| ೨೬ ||

ಅಭ್ಯಂತರೇ ಮಹಾಸ್ಮೇತಾನ್ಸಸ್ಮಿತಾಂಶ್ಚ ದಿಗಂಬರಾನ್ ।
ಶ್ರೀಕೃಷ್ಣಧ್ಯಾನಪೂತಾಂಶ್ಚ ತೀರ್ಥಪೂತಾಂಶ್ಚ ವೈಷ್ಣವಾನ್　　|| ೨೭ ||

ವೇದವೇದಾಂಗಶಾಸ್ತ್ರಾಣಾಂ ಚಿಂತಾಹೀನಾನ್ಪ್ರಫುಲ್ಲಿತಾನ್ ।
ಭಕ್ತ್ಯಾ ದಿವಾನಿಶಂ ಶಶ್ವದ್ಧರಿಭಾವೇನ ತತ್ಪರಾನ್　　|| ೨೮ ||

---

೨೪. ಸೂರ್ಯನು ಶ್ರೀ ಹರಿಯಲ್ಲಿ ಶುದ್ಧವಾದ ಭಕ್ತಿಯನ್ನು ಹೊಂದಿರುವ ಸತ್ಪುರುಷರಾದ ಪುಣ್ಯವಂತರನ್ನು ಬಿಟ್ಟು, ಉಳಿದೆಲ್ಲ ಪ್ರಾಣಿಗಳ ಆಯುಸ್ಸನ್ನೂ ಅಪಹರಿಸುತ್ತಾನೆ.

೨೫–೩೧. ಎಲೈ ಪುತ್ರನಾದ ಉದ್ಧವನೇ! ಬ್ರಹ್ಮನ ಮಾನಸಪುತ್ರರಾದ ಸನಕನೇ ಮೊದಲಾದ ನಾಲ್ಕುಮಂದಿ ಭಗವದ್ಭಕ್ತರನ್ನು ನೋಡುವವನಾಗು. ಯಾವ ಸನಕಾದಿಗಳ ವಯಸ್ಸು ಸ್ಥಿರವಾಗಿರುವುದೋ ತಮ್ಮ ವಯಸ್ಸಿನಿಂದ ರುದ್ರರೇ ಮೊದಲಾದವರನ್ನೂ ಆದಿತ್ಯರನ್ನೂ ಮೀರಿರುವರೋ, ಜ್ಞಾನಿಗಳಾದವರಿಗೂ ಗುರುವಾದವರಿಗೂ ಗುರುವಾಗಿರುವರೋ, ಬಾಲಕರೂ ಅನುಪನೀತರೂ ಆಗಿರುವರೋ, ಐದು ವರುಷದ ಮಕ್ಕಳಂತಿರುವರೋ, ಶುದ್ಧವಾದ ಅಂತರಂಗವುಳ್ಳವರಾಗಿರುವರೋ, ಮಂದಹಾಸದಿಂದ ಕೂಡಿರುವವರಾಗಿಯೂ ದಿಗಂಬರರಾಗಿಯೂ ಇರುವರೋ, ಶ್ರೀ ಕೃಷ್ಣನ ಧ್ಯಾನದಿಂದ ಪರಿಶುದ್ಧರಾಗಿಯೂ ತೀರ್ಥಯಾತ್ರೆಯಿಂದ ಶುದ್ಧರಾಗಿಯೂ ವಿಷ್ಣುಭಕ್ತರಾಗಿಯೂ ಇರುವರೋ, ವೇದಗಳ ಮತ್ತು ವೇದಾಂಗಗಳ ಚಿಂತೆಯಿಲ್ಲದೆ ಸಂತೋಷಗೊಂಡಿರುವರೋ, ಭಕ್ತಿಯಿಂದ ಹಗಲು ರಾತ್ರಿಯೂ ಮತ್ತೆಮತ್ತೆ ಹರಿಯಲ್ಲಿ ನಟ್ಟ ಮನಸ್ಸಿನಿಂದ ಅವನಲ್ಲೇ ಆಸಕ್ತರಾಗಿರುವರೋ, ಮತ್ತು ಬಾಹ್ಯವಾದ ಪೂಜೆಯನ್ನು ಬಿಟ್ಟು ಮಾನಸ ಪೂಜೆಯನ್ನು ಮಾಡುತ್ತ ಪವಿತ್ರರಾಗಿರುವರೋ, ಮೃತ್ಯುವನ್ನು ಜಯಿಸಿದವರಾಗಿಯೂ ಮಹಾತ್ಮರಾಗಿಯೂ ಕಾಲವೆಂಬ ಸರ್ಪವನ್ನು ಜಯಿಸಿ

ಬಾಹ್ಯಪೂಜಾವಿಹೀನಾಂಶ್ಚ ಪೂತಾನ್ಮಾನಸಿಕಾಂಸ್ತಥಾ ।
ಮೃತ್ಯುಂಜಯೋನ್ಮಹಾಭಾಗಾನ್ಕಾಲವ್ಯಾಲಜಿತಸ್ತಥಾ ॥ ೨೯ ॥

ಸನಕಂ ಚ ಸನಂದಂ ಚ ತೃತೀಯಂ ಚ ಸನಾತನಂ ।
ಪರಂ ಸನತ್ಕುಮಾರಂ ಚ ಯೇ ಸ್ಮರಂತಿ ಚ ಸರ್ವಶಃ ॥ ೩೦ ॥

ತೀರ್ಥಸ್ನಾನಫಲಂ ಲಬ್ಧ್ವಾ ಮುಚ್ಯಂತೇ ಕೃತಪಾತಕಾತ್ ।
ಹರಿಭಕ್ತಿರ್ಭವತ್ಯೇಷಾಂ ಹರಿದಾಸ್ಯಂ ಲಭಂತಿ ಚ ॥ ೩೧ ॥

ಮೃಕಂಡುಬಾಲಕಂ ಪಶ್ಯ ಕರ್ಮಣಾ ಚ ದ್ವಿಜೋತ್ತಮಂ ।
ದಶವರ್ಷಾಯುತಂ ತೀವ್ರಂ ಜ್ವಲಂತಂ ಬ್ರಹ್ಮತೇಜಸಾ ॥ ೩೨ ॥

ಹರಿಮೇವಮತಃ ಪಶ್ಚಾತ್ಸಪ್ತಕಲ್ಪಾಂತಜೀವಿನಂ ।
ವೋಢುಂ ಪಂಚಶಿಖಂ ಪಶ್ಯ ಲೋಮಕಂ ಚಾಸುರಿಂ ತಥಾ ॥ ೩೩ ॥

ಸರ್ವಕರ್ಮವಿಹೀನಂ ಚ ಹರಿಸೇವನತತ್ಪರಂ ।
ಶತಕಲ್ಪಾಯುಷಂ ಚೈವ ಧ್ಯಾಯಮಾನಂ ಹರೇಃ ಪದಂ ॥ ೩೪ ॥

---

ದವರಾಗಿರುವರೋ, ಅಂಥಾ ಸನಕನನ್ನೂ ಸನಂದನನ್ನೂ ಮೂರನೆಯವನಾದ ಸನಾತನನನ್ನೂ ಶ್ರೇಷ್ಠನಾದ ಸನತ್ಕುಮಾರನನ್ನೂ ಯಾರು ಯಾವಾಗಲೂ ಸಕಲ ವಿಧದಿಂದಲೂ ಸ್ಮರಣೆ ಮಾಡುತ್ತಾರೋ ಅವರು ಉತ್ತಮ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವನ್ನು ಪಡೆದು, ತಾವು ಮಾಡಿದ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ. ಅವರುಗಳಿಗೆ ಹರಿಭಕ್ತಿಯು ದೊರಕುತ್ತದೆ. ಮತ್ತು ಹರಿಯ ದಾಸತನವನ್ನು ಹೊಂದುತ್ತಾರೆ.

೩೨–೩೪. ಮೃಕಂಡುಮುನಿಯ ಮಗನನ್ನು ನೋಡು. ಅವನು ಕರ್ಮಠನಾದ ಬ್ರಾಹ್ಮಣ ಶ್ರೇಷ್ಠನಾಗಿರುವನು. ಹತ್ತುವರುಷ ಆಯುಸ್ಸುಳ್ಳವನಾಗಿ ಹರಿಯನ್ನೇ ನಂಬಿ ಬ್ರಹ್ಮತೇಜಸ್ಸಿನಿಂದ ಅತ್ಯಂತವಾಗಿ ಪ್ರಕಾಶಿಸುತ್ತ, ಅನಂತರ ಏಳು ಕಲ್ಪಗಳ ಕೊನೆಯವರೆಗೂ ಬದುಕಿರುವವನಾಗಿರುವನು. ವೋಢುವನ್ನೂ, ಪಂಚಶಿಖನನ್ನೂ, ಲೋಮಕನನ್ನೂ, ಆಸುರಿಯನ್ನೂ ನೋಡು. ಇವರೆಲ್ಲರೂ ಸಕಲ ಕರ್ಮಗಳನ್ನೂ ಬಿಟ್ಟು, ಹರಿಸೇವೆಯಲ್ಲಿಯೇ ನಿರತರಾಗಿ, ಹರಿಯ ಪಾದಗಳನ್ನು ಧ್ಯಾನಿಸುತ್ತ ಮೂರುಕಲ್ಪಗಳವರೆಗೆ ಆಯುಸ್ಸುಳ್ಳವರಾಗಿರುವರು.

ಜಮದಗ್ನೇಃ ಸುತಂ ಪಶ್ಯ ರಾಮಂ ತಂ ಚಿರಜೀವಿನಂ ।
ಹನುಮಂತಂ ಬಲಿಂ ವ್ಯಾಸಮಶ್ವತ್ಥಾಮಾನಮೇವ ಚ　　|| ೩೫ ||

ವಿಭೀಷಣಂ ಕೃಪಂ ವಿಪ್ರಂ ಜಾಂಬವಂತಂಚ ಭಲ್ಲುಕಂ ।
ಹರಿಭಾವನಯಾ ಚೈತೇ ಶುದ್ಧಾಃ ಸುಚಿರಜೀವಿನಃ　　|| ೩೬ ||

ಸಿದ್ಧೇಂದ್ರೇಷು ಮುನೀಂದ್ರೇಷು ನರೇಷ್ವನ್ಯೇಷು ಚೋದ್ಧವ ।
ಹರಿಭಾವೇನ ಶುದ್ಧಾಶ್ಚ ಸರ್ವೇ ತೇ ಚಿರಜೀವಿನಃ　　|| ೩೭ ||

ಪ್ರಹ್ಲಾದಂ ಪಶ್ಯ ದೈತ್ಯೇಷು ಹಿರಣ್ಯಕಶಿಪೋಃ ಸುತಂ ।
ಹರಿದ್ವಿಷೋ ದುರಂತಸ್ಯ ಹರಿಭಾವನತತ್ಪರಂ　　|| ೩೮ ||

ಚಿರಾಯುಷಂ ಕಾಲಜಿತಂ ಪಶ್ಯಾನ್ಯಂ ಚಾಪ್ಯಸಂಜ್ಞಕಂ ।
ಅನೇಕಜನ್ಮತಪಸಾ ಲಬ್ಧ್ವಾ ಜನ್ಮ ಚ ಭಾರತೇ　　|| ೩೯ ||

---

೩೫. ಜಮದಗ್ನಿಯ ಮಗನಾದ ಪರಶುರಾಮನನ್ನು ನೋಡು ಅವನು ಚಿರಂಜೀವಿಯಾಗಿರುವನು ಮತ್ತು ಚಿರಂಜೀವಿಗಳಾದ ಹನುಮಂತ, ಬಲಿ, ವ್ಯಾಸ, ಅಶ್ವತ್ಥಾಮ ಇವರುಗಳನ್ನೂ ಕೂಡ ನೋಡುವವನಾಗು.

೩೬. ವಿಭೀಷಣನನ್ನೂ ಬ್ರಾಹ್ಮಣನಾದ ಕೃಪನನ್ನೂ ಕರಡಿಯಾದ ಜಾಂಬವಂತನನ್ನೂ ನೋಡುವವನಾಗು- ಇವರೆಲ್ಲರೂ ಹರಿಯನ್ನು ಧ್ಯಾನ ಮಾಡುವುದರಿಂದ ಪರಿಶುದ್ಧರೂ ಚಿರಜೀವಿಗಳೂ ಆಗಿರುವರು.

೩೭. ಎಲೈ ಉದ್ಧವನೇ! ಸಿದ್ಧೇಂದ್ರರಲ್ಲಿಯೂ ಮುನೀಂದ್ರರಲ್ಲಿಯೂ ಮನುಷ್ಯರಲ್ಲಿಯೂ ಇತರರಲ್ಲಿಯೂ ಯಾರು ಹರಿಧ್ಯಾನದಿಂದ ಶುದ್ಧರಾಗಿರುವರೋ ಅವರೆಲ್ಲರೂ ಚಿರಜೀವಿಗಳಾಗಿರುವರು.

೩೮. ದೈತ್ಯರಲ್ಲಿ ಹರಿಯನ್ನು ದ್ವೇಷಿಸುವವನೂ ದುರಂತನೂ ಆದ ಹಿರಣ್ಯಕಶಿಪುವಿನ ಮಗನಾದ ಹರಿಧ್ಯಾನನಿರತನಾದ ಪ್ರಹ್ಲಾದನನ್ನು ನೋಡು.

೩೯—೪೪ ಕಾಲವನ್ನು ಜಯಿಸಿದ ಚಿರಾಯುವಾದ ಅಪ್ಯನೆಂಬ ಮತ್ತೊಬ್ಬನನ್ನೂ ನೋಡು. ಅನೇಕ ಜನ್ಮಗಳಲ್ಲಿ ಮಾಡಿದ ತಪಸ್ಸಿನ ಪ್ರಭಾವದಿಂದ ಭಾರತದಲ್ಲಿ ಜನ್ಮವನ್ನು ಪಡೆದು ಆ ಹರಿಯನ್ನು ಯಾರು ಭಜನೆಮಾಡುವುದಿಲ್ಲವೋ ಆ ಮೂಢರು

ಯೋ ಹರಿಂ ತಂ ನ ಸೇವಂತೇ ತೇ ಮೂಢಾಃ ಕೃತಪಾಪಿನಃ ।
ವಾಸುದೇವಂ ಪರಿತ್ಯಜ್ಯ ವಿಷಯೇ ನಿರತೋ ಜನಃ ॥ ೪೦ ॥

ತ್ಯಕ್ತ್ವಾಮೃತಂ ಮಹಾಮೂಢೋ ವಿಷಂ ಭುಂಕ್ತೇ ನಿಜೇಚ್ಛಯಾ ।
ಕಸ್ಯ ಸ್ತ್ರೀ ಕಸ್ಯ ವಾ ಪುತ್ರಃ ಕಸ್ಯ ವಾ ಬಾಂಧವಾಸ್ತಥಾ ॥ ೪೧ ॥

ಕಃ ಕಸ್ಯ ಬಂಧುರ್ವಿಪದಿ ಶ್ರೀಕೃಷ್ಣೇನ ವಿನಾ ಭುವಿ ।
ತಸ್ಮಾತ್ಸಂತಃ ಸದಾ ಕೃಷ್ಣಂ ಭಜಂತ್ಯೇವ ದಿವಾನಿಶಂ ॥ ೪೨ ॥

ಜನ್ಮಮೃತ್ಯುಜರಾವ್ಯಾಧಿಹರಂ ಸರ್ವಹರಂ ಪರಂ ।
ಕಾಲಸ್ಯ ತರಣೋಪಾಯಂ ಭಜನಂ ಪರಮಾತ್ಮನಃ ॥ ೪೩ ॥

ಆನಂದನಂದನಸ್ಯೈವ ಪರಿಪೂರ್ಣತಮಸ್ಯ ಚ ।
ಶೃಣು ಕಾಲಗತಿಂ ವತ್ಸ ಮದೀಯಜ್ಞಾನಗೋಚರಾಂ ॥ ೪೪ ॥

ನರಾಣಾಂ ಚ ಪಿತೃಣಾಂ ಚ ಸುರಾಣಾಂ ಚಾಪಿ ಬ್ರಹ್ಮಣಃ ।
ನಾಗಾನಾಂ ರಾಕ್ಷಸಾದೀನಾಂ ತತ್ಪರೇಷಾಂ ಚ ಪುತ್ರಕ ॥ ೪೫ ॥

---

ಪಾಪ ಮಾಡಿದವರಾಗಿರುತ್ತಾರೆ. ವಾಸುದೇವನನ್ನು ಬಿಟ್ಟು ಯಾವ ಮಾನವನು ವಿಷಯ ಸುಖಗಳಲ್ಲಿಯೇ ಆಸಕ್ತನಾಗಿರುವನೋ ಅಂಥಾ ಮಹಾ ಮೂಢನು ಅಮೃತ ವನ್ನು ಬಿಟ್ಟು ತನ್ನ ಇಚ್ಛೆಯಿಂದಲೇ ವಿಷವನ್ನು ಕುಡಿಯುತ್ತಾನೆ. ಹೆಂಡತಿಯು ಯಾರು? ಮಗನು ಯಾರು? ಮತ್ತು ಬಂಧುವು ಯಾರು? ಈ ಭೂಲೋಕದಲ್ಲಿ ಆಪತ್ಕಾಲದಲ್ಲಿ ಶ್ರೀಕೃಷ್ಣನನ್ನು ಬಿಟ್ಟು ಯಾವನು ಯಾವನಿಗೆ ಬಂಧುವಾಗುತ್ತಾನೆ? ಆದುದರಿಂದ ಸತ್ಪುರುಷರಾದವರು ಹುಟ್ಟು, ಸಾವು, ಮುಪ್ಪು ಮತ್ತು ರೋಗವನ್ನು ನಾಶಮಾಡುವವನೂ ಸಕಲರ ಪಾಪಗಳನ್ನೂ ನಾಶಮಾಡುವವನೂ ಉತ್ತಮನೂ ಆದ ಕೃಷ್ಣನನ್ನು ಹಗಲು ರಾತ್ರಿ ಯಾವಾಗಲೂ ಭಜನೆ ಮಾಡುತ್ತಿರುವರು. ಕಾಲ ವನ್ನು ದಾಟುವ ಉಪಾಯವೆಂದರೆ ಆ ನಂದನಂದನನಾದ ಸರ್ವಪರಿಪೂರ್ಣನಾದ ಪರಮಾತ್ಮನ ಭಜನೆಯೊಂದೆ. ಎಲೈ ಕುಮಾರನೆ ಕಾಲದ ಗತಿಯನ್ನು ನನ್ನ ಬುದ್ಧಿಗೆ ತಿಳಿದಮಟ್ಟಿಗೆ ಹೇಳುತ್ತೇನೆ. ಕೇಳುವವನಾಗು.

೪೫—೪೭. ಮಾನವರ ಪಿತೃಗಳ, ದೇವತೆಗಳ, ಬ್ರಹ್ಮನ, ನಾಗರ, ರಾಕ್ಷಸರೇ ಮೊದಲಾದವರ ಮತ್ತು ಅವರಿಗಿಂತಲೂ ಮಿಗಿಲಾದವರ ಕಾಲಗತಿಯನ್ನು ಹೇಳುವೆನು.

ಕಥಯಾಮಿ ನಿಗೂಡಾರ್ಥಂ ಸಾವಧಾನಂ ನಿಶಾಮಯ ।
ಸರ್ವಸ್ಮಾಚ್ಚ ಪರಸ್ಥಾನಂ ಸರ್ವಾಧಾರೋ ಮಹಾನ್ವಿರಾಟ್ ॥ ೪೬ ॥

ಯಸ್ಯ ಲೋಮಸು ವಿಶ್ವಾನಿ ಚಾಽಸಂಖ್ಯಾನಿ ಚ ತಾನಿ ಚ ।
ಸರ್ವಸ್ಮಾಚ್ಚ ಪರಂ ಸೂಕ್ಷ್ಮಂ ಪರಮಾಣುಂ ನಿಶಾಮಯ ।
ಕಾಲಾರಂಭಾತ್ಮಕಂ ಸರ್ವಮನೂಹಂ ಪರಮೀಪ್ಸಿತಂ ॥ ೪೭ ॥

ಪರಮಃ ಸದ್ವಿಶೇಷಾಣಾಮನೇಕೋಽಸಂಯುತಃ ಸದಾ ।
ಪರಮಾಣುಃ ಸ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ ॥ ೪೮ ॥

ಪರಮಾಣುದ್ವಯೇನಾಣುಸ್ತ್ರಸರೇಣುಸ್ತು ತೇ ತ್ರಯಃ ।
ತ್ರಸರೇಣುತ್ರಿಕೇಣಾಪಿ ತ್ರುಟಿರುಕ್ತಾ ಮುನೀಷಿಭಿಃ ॥ ೪೯ ॥

---

ಎಲೈ ಕುಮಾರನಾದ ಉದ್ಧವನೇ! ಸಾವಧಾನ ಮನಸ್ಸುಳ್ಳವನಾಗಿ ಕೇಳು. ಪ್ರಪಂಚದಲ್ಲಿ ಎಲ್ಲದಕ್ಕೂ ಶ್ರೇಷ್ಠವಾದ ಸ್ಥಾನವೆಂದರೆ ಸರ್ವಾಧಾರನೂ ಮಹತ್ಪರಿಮಾಣನೂ ಆಗಿರುವ ವಿರಾಟ್ ಪುರುಷನು. ಯಾವ ವಿರಾಟ್ಪುರುಷನ ರೋಮಗಳಲ್ಲಿ, ಲೆಖ್ಖ ಮಾಡಲಸಾಧ್ಯವಾದಷ್ಟು ಪ್ರಪಂಚಗಳು ವಾಸಮಾಡುತ್ತವೆ. ಎಲ್ಲದಕ್ಕಿಂತಲೂ ಉತ್ಕೃಷ್ಟವಾಗಿಯೂ ಸೂಕ್ಷ್ಮವಾಗಿಯೂ ಇರುವುದು ಪರಮಾಣುವೆಂದು ತಿಳಿದುಕೊಳ್ಳುವವನಾಗು. ಆ ಪರಮಾಣುವು ಕಾಲಕ್ಕೂ ಕೂಡ ಕಾರಣವಾದುದು. ಸರ್ವಕ್ಕೂ ಕಾರಣವಾದುದು ಮತ್ತು ಊಹಿಸುವುದಕ್ಕೂ ಸಾಧ್ಯವಿಲ್ಲದುದು. ಸಕಲಕ್ಕೂ ಅಪೇಕ್ಷಿತವಾದುದು.

೪೮. ಉತ್ತಮವಾದ ವಿಶೇಷ ಪದಾರ್ಥಗಳಿಗೆಲ್ಲ ಉತ್ಕೃಷ್ಟವಾದುದಲ್ಲದೆ ಅನೇಕವಾಗಿದ್ದು ಯಾವಾಗಲೂ ಒಂದಕ್ಕೊಂದು ಸೇರಿಕೊಳ್ಳದೇ ಇರತಕ್ಕುದಾಗಿರುತ್ತದೆ. ಅದನ್ನೇ ಪರಮಾಣುವೆಂದು ತಿಳಿದುಕೊಳ್ಳಬೇಕು. ಮಾನವರಿಗೆ ಪದಾರ್ಥ ವಿಷಯದಲ್ಲಿ ಒಂದೆಂಬ ಭ್ರಾಂತಿಯಿರುತ್ತದೆ.

೪೯. ಇಂಥಾ ಪರಮಾಣುಗಳು ಎರಡು ಸೇರಿದರೆ ಅದು ಅಣುವೆನಿಸಿಕೊಳುತ್ತದೆ. ಆ ಅಣುಗಳು ಮೂರು ಸೇರಿದರೆ ಒಂದು ತ್ರಸರೇಣುವೆನಿಸುತ್ತಧೆ. ಮೂರು ತ್ರಸರೇಣುಗಳು ಸೇರಿ ಒಂದು ತ್ರುಟಿಯೆನಿಸುತ್ತದೆಂದು ವಿದ್ವಾಂಸರುಗಳಿಂದ ಹೇಳಲ್ಪಟ್ಟದೆ.

ವೇಧಸ್ತ್ರುಟಿಶತೇನೈವ ತ್ರಿವೇಧೇನ ಲವಸ್ತಥಾ ।
ತ್ರಿಲವೇನ ನಿಮೇಷಶ್ಚ ತ್ರಿನಿಮೇಷೇಣ ಚ ಕ್ಷಣಃ ॥ ೫೦ ॥

ಕಾಷ್ಠಾ ಪಂಚಕ್ಷಣೇನೈವ ಲಘುಶ್ಚ ದಶಕಾಷ್ಠಯಾ ।
ಲಘುಪಂಚದಶಂ ದಂಡಸ್ತತ್ಪ್ರಮಾಣಂ ನಿಶಾಮಯ ॥ ೫೧ ॥

ದ್ವಾದಶಾರ್ಧಪಲೋನ್ಮಾನಂ ಚತುರ್ಭಿಶ್ಚತುರಂಗುಲೈಃ ।
ಸ್ವರ್ಣಮಾಷೈಃ ಕೃತಚ್ಛಿದ್ರಂ ಯಾವತ್ಪ್ರಸ್ಥಜಲಪ್ಲುತಂ ॥ ೫೨ ॥

ದಂಡದ್ವಯೇ ಮುಹೂರ್ತಃ ಸ್ಯಾತ್ಷಷ್ಟಿದಂಡಾತ್ಮಿಕಾ ತಿಥಿಃ ।
ತದಷ್ಟಭಾಗಃ ಪ್ರಹರಃ ಪ್ರಮಾಣಂ ಚ ನಿರೂಪಣಂ ॥ ೫೩ ॥

ಚತುರ್ಭಿಃ ಪ್ರಹರೈಃ ರಾತ್ರಿಶ್ಚತುರ್ಭಿರ್ದಿನಮುಚ್ಯತೇ ।
ತಿಥಿಪಂಚದಶೇನೈವ ಪಕ್ಷಮಾನಂ ಪ್ರಕೀರ್ತಿತಂ ॥ ೫೪ ॥

---

೫೦. ಇಂಥಾ ತ್ರುಟಿಯು ಒಂದುನೂರು ಸೇರಿದರೆ ಒಂದು ವೇಧವೆನಿಸುವುದು. ಮೂರು ವೇಧಗಳು ಸೇರಿದರೆ ಒಂದು ಲವವಾಗುವುದು. ಮೂರು ಲವಗಳಿಂದ ಒಂದು ನಿಮೇಷವೂ, ಮೂರು ನಿಮೇಷಗಳಿಂದ ಒಂದು ಕ್ಷಣವೂ ಆಗುವುವು.

೫೧. ಐದು ಕ್ಷಣಗಳು ಸೇರಿ ಒಂದು ಕಾಷ್ಠವಾಗುವುದು. ಹತ್ತು ಕಾಷ್ಠಗಳು ಸೇರಿದರೆ ಒಂದು ದಂಡವೆನಿಸುವುದು. ಆ ದಂಡ ಪ್ರಮಾಣವನ್ನು ಹೇಳುತ್ತೇನೆ ಕೇಳು.

೫೨. ಹದಿನೆಂಟು ಪಲವೆಂದರೆ ನಲವತ್ತನಾಲ್ಕು ರೂಪಾಯಿನ ತೂಕವುಳ್ಳದ್ದಾಗಿಯೂ ನಾಲ್ಕು ಅಂಗುಲ ಉದ್ದವುಳ್ಳದ್ದಾಗಿ ನಾಲ್ಕು ಚಿನ್ನದ ಉದ್ದಿನಕಾಳಿನಷ್ಟು ರಂಧ್ರವುಳ್ಳದಾಗಿಯೂ ಒಂದು ಬಳ್ಳ ನೀರು ಹಿಡಿಯುವುದಾಗಿಯೂ ಇರುವುದು.

೫೩. ಎರಡು ದಂಡಗಳು ಸೇರಿದರೆ ಒಂದು ಮುಹೂರ್ತವೆನಿಸುವುದು. ಆರು ದಂಡಗಳು ಸೇರಿದರೆ ಒಂದು ತಿಥಿಯೆನಿಸುವುದು. ಅದರ ಎಂಟನೆಯ ಒಂದುಭಾಗಕ್ಕೆ ಪ್ರಹರವೆಂದು ಹೆಸರು. ಇದು ಕಾಲವನ್ನು ವಿಚಾರ ಮಾಡಲು ಪ್ರಮಾಣವಾಗಿರುತ್ತದೆ.

೫೪. ನಾಲ್ಕು ಪ್ರಹರಗಳಿಂದ ಒಂದು ರಾತ್ರಿಯಾಗುವುದು. ಅದೇ ನಾಲ್ಕು ಪ್ರಹರಗಳಿಂದಲೇ ಹಗಲಾಗುವುದೆಂದು ಹೇಳಲ್ಪಡುತ್ತದೆ. ಹದಿನೈದು ತಿಥಿಗಳಿಂದ ಒಂದು ಪಕ್ಷವೆಂಬುದಾಗಿ ಹೇಳಲ್ಪಟ್ಟಿದೆ.

ಪಕ್ಷದ್ವಯೇನ ಮಾಸಃ ಸ್ಯಾಚ್ಛುಕ್ಲಕೃಷ್ಣಾಭಿಧೇನ ಚ ।
ಋತುರ್ಮಾಸದ್ವಯೇನೈವ ತತ್ಷಟ್ಕೇ ನೈವ ವತ್ಸರಃ　　|| ೫೫ ||

ವಸಂತಗ್ರೀಷ್ಮವರ್ಷಾಶ್ಚ ಶರದ್ಧೇಮಂತಶೀತಕಾಃ ।
ವರ್ಷಾಃ ಪಂಚವಿಧಾ ಜ್ಞೇಯಾಃ ಕಾಲವಿದ್ಭಿರ್ನಿರೂಪಿತಾಃ　　|| ೫೬ ||

ಸಂವತ್ಸರಃ ಪ್ರವತ್ಸರ ಇಲಾವತ್ಸರ ಏವ ಚ ।
ಅನುವತ್ಸರೋ ವತ್ಸರೋಽಯಮಿತಿ ಕಾಲವಿದೋ ವಿಷ.ಃ　　|| ೫೭ ||

ಅಬ್ದೋ ದ್ವಿಷಟ್ಕಮಾಸೈಶ್ಚ ತನ್ನಾಮ ಶೃಣು ಚೋದ್ಧವ ।
ವೈಶಾಖೋ ಜ್ಯೇಷ್ಠ ಆಷಾಢಃ ಶ್ರಾವಣೋ ಭಾದ್ರ ಏವ ಚ　　|| ೫೮ ||

ಆಶ್ವಿನಃ ಕಾರ್ತಿಕೋ ಮಾರ್ಗಃ ಪೌಷೋ ಮಾಘಸ್ತು ಫಾಲ್ಗುನಃ ।
ಚೈತ್ರಸ್ತು ಚರಮೋ ಜ್ಞೇಯೋ ವರ್ಷಶೇಷೋ ನಿರೂಪಿತಃ　　|| ೫೯ ||

---

೫೫. ಶುಕ್ಲ ಮತ್ತು ಕೃಷ್ಣ ಎಂಬ ಎರಡು ಪಕ್ಷಗಳಿಂದ ಒಂದು ಮಾಸವಾಗು ವುದು. ಇಂಥಾ ಎರಡು ಮಾಸಗಳು ಸೇರಿ ಒಂದು ಋತುವೆಂದೂ ಆರು ಋತುಗಳು ಸೇರಿದರೆ ಒಂದು ಸಂವತ್ಸರವೆಂದೂ ಪರಿಗಣಿಸಲ್ಪಟ್ಟಿದೆ.

೫೬—೫೭. ವಸಂತರ್ತು, ಗ್ರೀಷ್ಮರ್ತು, ವರ್ಷರ್ತು, ಶರದೃತು, ಹೇಮಂತ ಋತು, ಶಿಶಿರರ್ತು, ಎಂಬಿವುಗಳು ಆರು ಋತುಗಳು. ಕಾಲವನ್ನು ಬಲ್ಲವರಿಂದ ವರ್ಷ ಗಳು ಐದು ವಿಧವಾದುವುಗಳೆಂದು ನಿರ್ಧರಿಸಲ್ಪಟ್ಟಿವೆ. ಸಂವತ್ಸರ, ಪರಿವತ್ಸರ, ಇಲಾವತ್ಸರ, ಅನುವತ್ಸರ, ವತ್ಸರ ಹೀಗೆಂಬುದಾಗಿ ಕಾಲವನ್ನು ತಿಳಿದಿರುವ ಜ್ಞಾನಿ ಗಳು ಹೇಳಿರುವರು.

೫೮—೫೯. ಹನ್ನೆರಡು ಮಾಸಗಳಿಂದ ಒಂದು ವರ್ಷವಾಗುವುದು. ಎಲೈ ಉದ್ಧವನೇ! ಆ ಮಾಸಗಳ ಹೆಸರುಗಳನ್ನು ಕೇಳುವವನಾಗು. ವೈಶಾಖ, ಜ್ಯೇಷ್ಠ, ಆಷಾಡ, ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತೀಕ, ಮಾರ್ಗ, ಪೌಷ, ಮಾಘ, ಫಾಲ್ಗುಣ ಮತ್ತು ಚೈತ್ರ ಈ ಪ್ರಕಾರವಾಗಿ ಹನ್ನೆರಡು ಮಾಸಗಳು ವರ್ಷದ ಅಂಗ ವಾಗಿ ಹೇಳಲ್ಪಟ್ಟಿವೆ.

ವಸಂತೆಶ್ಚೈತ್ರವೈಶಾಖಮಾಸಯುಗ್ಮೇನ ಕೀರ್ತಿತಃ ।
ಜ್ಯೇಷ್ಠಾಷಾಢದ್ವಯೇನೈವ ಗ್ರೀಷ್ಮಸ್ತು ಪರಿಕೀರ್ತಿತಃ ॥ ೬೦ ॥

ವರ್ಷಾ ಶ್ರಾವಣಭಾದ್ರೇ ಚ ಹ್ಯಾಶ್ವಿನೇ ಕಾರ್ತಿಕೇ ಶರತ್ ।
ಮಾರ್ಗೇ ಪೌಷೇ ಚ ಹೇಮಂತಃ ಶಿಶಿರೋ ಮಾಘಫಾಲ್ಗುನೇ ॥ ೬೧ ॥

ಅಬ್ದಸ್ತು ಚಾಯನೇ ದ್ವೆ ವೈ ಚೋತ್ತರೇ ದಕ್ಷಿಣಾಯನೇ ।
ಮಾಘಾದಿಷಡ್ಭಿರ್ನಿರ್ಮಿತಮುತ್ತರಾಯಣಮೀಪ್ಸಿತಂ ॥ ೬೨ ॥

ಶ್ರಾವಣಾದಿಮಾಸಷಟ್ಕಂ ದಕ್ಷಿಣಾಯನಮೇವ ಚ ॥ ೬೩ ॥

ನಕ್ತವೃದ್ಧಿಃ ಶ್ರಾವಣಾಚ್ಚ ಪೌಷಪರ್ಯಂತಮೇವ ಚ ।
ಪ್ರತಿಪತ್ಪೂರ್ಣಿಮಾಂತಸ್ಯ ಶುಕ್ಲಪಕ್ಷಃ ಪ್ರಕೀರ್ತಿತಃ ॥ ೬೪ ॥

---

೬೦–೬೧. ಚೈತ್ರ ಮತ್ತು ವೈಶಾಖ ಈ ಎರಡು ಮಾಸಗಳು ಸೇರಿ ವಸಂತರ್ತುವೆಂದೆನಿಸುತ್ತದೆ. ಜ್ಯೇಷ್ಠ ಮತ್ತು ಆಷಾಢ ಈ ಎರಡು ಮಾಸಗಳು ಸೇರಿ ಗ್ರೀಷ್ಮರ್ತುವೆನಿಸುವುದು. ಶ್ರಾವಣ ಮತ್ತು ಭಾದ್ರಪದ ಈ ಎರಡು ಮಾಸಗಳು ಸೇರಿ ವರ್ಷರ್ತುವೆನಿಸುತ್ತದೆ. ಆಶ್ವಿನ ಮತ್ತು ಕಾರ್ತಿಕ ಈ ಎರಡು ಮಾಸಗಳು ಸೇರಿ ಶರದೃತುವೆನಿಸುತ್ತದೆ. ಮಾರ್ಗಶಿರ ಮತ್ತು ಪೌಷ ಈ ಎರಡು ಮಾಸಗಳು ಸೇರಿ ಹೇಮಂತರ್ತುವೆನಿಸುವುದು ಮಾಘ ಮತ್ತು ಫಾಲ್ಗುಣ ಮಾಸಗಳು ಸೇರಿದರೆ ಶಿಶಿರರ್ತುವೆನಿಸುವುದು.

೬೨. ಉತ್ತರಾಯಣ ಮತ್ತು ದಕ್ಷಿಣಾಯನವೆಂಬ ಎರಡು ಅಯನಗಳಿಂದ ಕೂಡಿ ಒಂದು ವರ್ಷವಾಗುತ್ತದೆ. ಮಾಘಮಾಸ ಮೊದಲ್ಗೊಂಡು ಆರು ಮಾಸಗಳು ಉತ್ತರಾಯಣವೆನಿಸುವುವು.

೬೩. ಶ್ರಾವಣಮಾಸ ಮೊದಲ್ಗೊಂಡು ಆರುಮಾಸಗಳು ದಕ್ಷಿಣಾಯನವೆನಿಸುವುವು.

೬೪. ಶ್ರಾವಣಮಾಸ ಮೊದಲ್ಗೊಂಡು ಪುಷ್ಯ ಮಾಸದವರೆಗೆ ರಾತ್ರಿಕಾಲವು ಹೆಚ್ಚುತ್ತ ಬರುತ್ತದೆ. ಪಾಡ್ಯ ಮೊದಲ್ಗೊಂಡು ಪೂರ್ಣಿಮಾ ದಿನದವರೆಗೆ ಶುಕ್ಲಪಕ್ಷವೆಂಬುದಾಗಿ ಪರಿಗಣಿಸಲ್ಪಟ್ಟಿದೆ.

ಪೂರ್ಣಿಮಾಯಾಃ ಪ್ರತಿಪದಶ್ಚಾಮಾವಾಸ್ಯಾಂತ ಏವ ಚ ।
ಕೃಷ್ಣಪಕ್ಷಸ್ತು ವಿಜ್ಞೇಯೋ ವೇದವಿದ್ಭಿರ್ನಿರೂಪಿತಃ ॥ ೬೫ ॥

ದ್ವಿತೀಯಾ ಚ ತೃತೀಯಾ ಚ ಚತುರ್ಥೀ ಪಂಚಮೀ ತಥಾ ।
ಷಷ್ಠೀ ಚ ಸಪ್ತಮೀ ಚೈವ ಹ್ಯಷ್ಟಮೀ ನವಮೀ ತಥಾ ॥ ೬೬ ॥

ದಶಮ್ಯೇಕಾದಶೀ ಚಾಪಿ ದ್ವಾದಶೀ ಚ ತ್ರಯೋದಶೀ ।
ಚತುರ್ದಶೀ ಕುಹೂರ್ಯಾವದ್ದಿನಂ ತು ಗಣನಂ ಸ್ಮೃತಂ ॥ ೬೭ ॥

ಅಶ್ವಿನೀ ಭರಣೀ ಚಾಪಿ ಕೃತ್ತಿಕಾ ರೋಹಿಣೀ ತಥಾ ।
ಮೃಗಶಿರಸ್ತಥಾರ್ದ್ರಾ ಚ ನಕ್ಷತ್ರೇ ದ್ವೇ ಪುನರ್ವಸೂ ॥ ೬೮ ॥

ಪುಷ್ಯಾಶ್ಲೇಷೇ ಮಘಾ ಚೈವ ಪೂರ್ವಾ ಚೋತ್ತರಫಾಲ್ಗುನೀ ।
ಹಸ್ತಚಿತ್ರೇ ತಥಾ ಸ್ವಾತೀ ವಿಶಾಖಾ ಚಾನುರಾಧಿಕಾ ॥ ೬೯ ॥

ಜ್ಯೇಷ್ಠಾ ಮೂಲಂ ತಥಾ ಜ್ಞೇಯಾ ಪೂರ್ವಾಷಾಢೋತ್ತರಾ ತಥಾ ।
ಶ್ರವಣಾಭಿಜಿತೀ ಚೈವ ಧನಿಷ್ಠಾ ಚ ಪ್ರಕೀರ್ತಿತಾ ॥ ೭೦ ॥

ತತಃ ಶತಭಿಷಾ ಜ್ಞೇಯಾ ಪೂರ್ವಾಭಾದ್ರಪದಾ ತಥಾ ।
ತಥೋತ್ತರಾ ತು ವಿಜ್ಞೇಯಾ ರೇವತೀ ಚರಮಾ ಸ್ಮೃತಾ ॥ ೭೧ ॥

---

೬೫. ಪೂರ್ಣಿಮೆಯನಂತರ ಬರುವ ಪಾಡ್ಯ ಮೊದಲ್ಗೊಂಡು ಅಮಾವಾಸ್ಯೆಯವರೆಗೆ ಕೃಷ್ಣಪಕ್ಷವೆಂದು ವೇದವನ್ನು ಬಲ್ಲವರಿಂದ ನಿರ್ಧರಿಸಲ್ಪಟ್ಟದೆಯೆಂದು ತಿಳಿದುಕೊಳ್ಳಬೇಕು.

೬೬. ಬಿದಿಗೆ, ತದಿಗೆ, ಚೌತಿ, ಪಂಚಮೀ, ಷಷ್ಠೀ, ಸಪ್ತಮೀ, ಅಷ್ಟಮೀ, ನವಮೀ, ದಶಮೀ, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶೀ, ಕುಹೂ ಎಂಬುದಾಗಿ ದಿನಗಣನೆಯು ಹೇಳಲ್ಪಟ್ಟದೆ.

೬೭–೭೧. ಅಶ್ವಿನಿ ಭರಣಿ ಕೃತ್ತಿಕೆ ರೋಹಿಣಿ ಮೃಗಶಿರೆ ಆರ್ದ್ರೆ ಪುನರ್ವಸು ಪುಷ್ಯ ಆಶ್ಲೇಷೆ ಮಘೆ ಪೂರ್ವಾಫಲ್ಗುನಿ ಉತ್ತರಾಫಲ್ಗುನಿ ಹಸ್ತ ಚಿತ್ತೆ ಸ್ವಾತಿ ವಿಶಾಖೆ ಅನೂರಾಧೆ ಜ್ಯೇಷ್ಠೆ ಮೂಲ ಪೂರ್ವಾಷಾಢ ಉತ್ತರಾಷಾಢ ಶ್ರವಣ (ಅಭಿಜಿತ್) ಧನಿಷ್ಠೆ ಶತಭಿಷೆ ಪೂರ್ವಾಭಾದ್ರೆ ಉತ್ತರಾಭಾದ್ರೆ ಕೊನೆಯ

ಅಷ್ಟಾವಿಂಶತಿ ನಕ್ಷತ್ರಂ ಕಲತ್ರಂ ಶಶಿನಸ್ತಥಾ ।
ಕ್ರಮೇಣ ತಾಭಿಃ ಸಾರ್ಧಂ ಚ ಚಂದ್ರಸ್ತಿಷ್ಠತಿ ನಿತ್ಯಶಃ ॥ ೭೨ ॥

ಸಪ್ತವಿಂಶತಿನಕ್ಷತ್ರಂ ಕಲತ್ರಂ ಚ ಶ್ರುತೌ ಶ್ರುತಂ ।
ಅಭಿಜಿಚ್ಛ್ರವಣಚ್ಛಾಯಾ ತೇನಾಷ್ಟಾವಿಂಶತಿಸ್ಮೃತಾ ॥ ೭೩ ॥

ಏಕದಾ ಚ ಮಧೌ ಚಂದ್ರೋ ರೋಹಿಣ್ಯಾವಾಮಯಾ ಸಹ ।
ರೇಮೇ ದಿವಾನಿಶಂ ನಿತ್ಯಂ ಶ್ರವಣಾ ಚ ಚುಕೋಪ ಸಾ ॥ ೭೪ ॥

ಛಾಯಾಂ ಚ ದತ್ವಾ ಚಂದ್ರಾಯ ಯಯೌ ತಾತಾಂತಿಕಂ ಭಿಯಾ ।
ತತಃ ಪಿತರಮಾದಾಯ ಸಾ ಚಕ್ರೇ ಚ ವಿಭಾಗಕಂ ॥ ೭೫ ॥

ಬಭೂವ ತೇನ ನಕ್ಷತ್ರಮಭಿಜಿನ್ನಾಮಕಂ ಪುರಾ ।
ಏತಚ್ಛ್ರುತ್ವಾ ಕೃಷ್ಣಮುಖಾಚ್ಛತಶೃಂಗೇ ಚ ಪರ್ವತೇ ॥ ೭೬ ॥

---

ದಾಗಿ ರೇವತಿ ಈ ಪ್ರಕಾರ ಇಪ್ಪತ್ತೆಂಟು ನಕ್ಷತ್ರಗಳು ಚಂದ್ರನ ಪತ್ನಿಯರಾಗಿರುತ್ತಾರೆ. ದಿನಕ್ರಮದಲ್ಲಿ ಚಂದ್ರನು ಅವರೊಂದಿಗೆ ಪ್ರತಿದಿನವೂ ಇರುತ್ತಾನೆ.

೭೩. ವೇದದಲ್ಲಿ ನಕ್ಷತ್ರಗಳು ಇಪ್ಪತ್ತೇಳೆಂದೂ ಅವು ಚಂದ್ರನ ಪತ್ನಿಯರೆಂದೂ ಹೇಳಿರುತ್ತದೆ. ಅಭಿಜಿತ್ ಎಂಬುದು ಶ್ರವಣದ ಛಾಯೆಯು. ಅದನ್ನೂ ಸೇರಿಸಿಕೊಂಡು ಇಪ್ಪತ್ತೆಂಟೆಂದು ಹೇಳಲ್ಪಟ್ಟದೆ.

೭೪. ಒಂದಾನೊಂದುಸಾರಿ ವಸಂತಮಾಸದಲ್ಲಿ ಚಂದ್ರನು ತನ್ನ ಪತ್ನಿಯಾದ ರೋಹಿಣಿಯೊಡನೆ ಪ್ರತಿದಿನವೂ ಹಗಲುರಾತ್ರಿಗಳಲ್ಲಿಯೂ ವಿಹರಿಸುತ್ತಿದ್ದನು. ಶ್ರವಣೆಯು ಇದನ್ನು ಕಂಡು ಕೋಪಗೊಂಡಳು.

೭೫. ಅವಳು ತನ್ನ ನೆರಳನ್ನು ಚಂದ್ರನಿಗೆ ಕೊಟ್ಟು ಭಯದಿಂದ ತಂದೆಯ ಸಮೀಪಕ್ಕೆ ಹೋದಳು. ಅನಂತರ ತಂದೆಯನ್ನು ಕರೆದುಕೊಂಡು ಬಂದು ತನ್ನನ್ನು ವಿಭಾಗ ಮಾಡಿಕೊಂಡಳು.

೭೬. ಆದರಿಂದ ಅಭಿಜಿತ್ ಎಂಬ ಹೆಸರಿನ ನಕ್ಷತ್ರವು ಹಿಂದಿನ ಕಾಲದಲ್ಲಿಯೇ ಆಯಿತು. ಈ ವಿಚಾರವನ್ನು ಶತಶೃಂಗವೆಂಬ ಪರ್ವತದಲ್ಲಿ ಕೃಷ್ಣನ ಬಾಯಿಂದಲೇ ಕೇಳಿರುವೆನು.

ನಕ್ಷತ್ರಂ ಕಥಿತಂ ವತ್ಸ ತಿಥ್ಯಾ ಭ್ರಮತಿ ನಿತ್ಯಶಃ ।
ಯೋಗಂ ಚ ಕರಣಂ ಚೈವ ಮದ್ವಕ್ತ್ರೇಣ ನಿಶಾಮಯ ॥ ೭೭ ॥

ವಿಷ್ಕಂಭಃ ಪ್ರೀತಿರಾಯುಷ್ಮಾನ್ಸೌಭಾಗ್ಯಃ ಶೋಭನ ಸ್ತಥಾ ।
ಅತಿಗಂಡಃ ಸುಕರ್ಮಾ ಚ ಧೃತಿಃ ಶೂಲಸ್ತಥೈವ ಚ ॥ ೭೮ ॥

ಗಂಡೋ ವೃದ್ಧಿರ್ಧ್ರುವಶ್ಚೈವ ವ್ಯಾಘಾತೋ ಹರ್ಷಣಸ್ತಥಾ ।
ವಜ್ರಂ ಸಿದ್ಧಿರ್ವ್ಯತೀಪಾತೋ ವರೀವಾನ್ಪರಿಘಃ ಶಿವಃ ॥ ೭೯ ॥

ಸಿದ್ಧಿಃ ಸಾಧ್ಯಃ ಶುಭಃ ಶುಕ್ಲೋ ಬ್ರಹ್ಮೈಂದ್ರೌ ವೈಧೃತಿಸ್ತಥಾ ।
ಕೀರ್ತಿತಸ್ತೇ ಯೋಗಗಣೋ ಕರಣಂ ಶ್ರೂಯತಾಮಿತಿ ॥ ೮೦ ॥

ಬವಶ್ಚ ಬಾಲವಶ್ಚೈವ ಕೌಲವಸ್ತೈತಿಲಸ್ತಥಾ ।
ಗರಶ್ಚ ವಣಿಜಶ್ಚಾಪಿ ವಿಷ್ಟಿಶ್ಚ ಶಕುನಿಸ್ತಥಾ ॥ ೮೧ ॥

ಚತುಷ್ಪಾಚ್ಚಾಪಿ ನಾಗಶ್ಚ ಕಿಂಸ್ತುಘ್ನ ಇತಿ ಕೀರ್ತಿತಂ ।
ನರಾಣಾಂ ಚಾಪಿ ಮಾಸೇನ ಪಿತೄಣಾಂ ಚ ದಿವಾನಿಶಂ ॥ ೮೨ ॥

---

೭೭. ಎಲೈ ಮಗನೇ! ನಕ್ಷತ್ರಗಳನ್ನು ತಿಳಿಸಿರುವೆನು. ಈ ನಕ್ಷತ್ರಗಳು ತಿಥಿಗಳೊಂದಿಗೆ ಪ್ರತಿದಿನವೂ ಸುತ್ತುತ್ತವೆ- ಯೋಗ ಮತ್ತು ಕರಣ ಇವುಗಳನ್ನು ನನ್ನಿಂದ ಕೇಳುವವನಾಗು,

೭೮–೮೦. ವಿಷ್ಕಂಬ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿಶೂಲ ಗಂಡ ವೃದ್ಧಿ ಧ್ರುವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತೀಪಾತ ವರೀಯಾನ್ ಪರಿಘ ಶಿವ ಸಿದ್ಧಿ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿ ಈಪ್ರಕಾರ ಯೋಗಗಳ ಸಮೂಹವನ್ನು ಹೇಳಿರುವೆನು. ಕರಣಗಳನ್ನು ಕೇಳುವವನಾಗು.

೮೧–೮೨. ಬವ, ಬಾಲವ, ಕೌಲವ, ತೈತಿಲ, ಗರ, ವಣಿಜ, ವಿಷ್ಟಿ, ಶಕುನಿ, ಚತುಷ್ಪಾತ್ ನಾಗ ಕಿಂಸ್ತುಘ್ನ ಈ ಪ್ರಕಾರ ಕರಣಗಳು ಹೇಳಲ್ಪಟ್ಟಿವೆ. ಮಾನವರ ಒಂದು ಮಾಸದಿಂದ ಪಿತೃಗಳಿಗೆ ಹಗಲು ಮತ್ತು ರಾತ್ರಿಗಳಾಗುತ್ತವೆ.

ಶುಕ್ಲೇ ಚಾಪಿ ದಿನಂ ತೇಷಾಂ ಕೃಷ್ಣೇ ನಕ್ತಂ ಪ್ರಕೀರ್ತಿತಂ ।
ವತ್ಸರೇಣ ನರಾಣಾಂ ಚ ಸುರಾಣಾಂ ಚ ದಿವಾನಿಶಂ ॥ ೮೩ ॥

ದಿನಂ ತೇಷಾಮುತ್ತರೇ ಚ ನಕ್ತಂ ಚ ದಕ್ಷಿಣಾಯನೇ ।
ಮನ್ವಂತರಂತು ದಿವ್ಯಾನಾಂ ಯುಗಾನಾಮೇಕಸಪ್ತತಿಃ ॥ ೮೪ ॥

ಮನೋರಾಯುಃಪರಿಮಿತಂ ಶಕ್ರಸ್ಯಾಯುಃ ಪ್ರಕೀರ್ತಿತಂ ।
ಪಂಚವಿಂಶತ್ಸಹಸ್ರಂ ಚ ತಥಾ ಪಂಚಶತಂ ಪರಂ ॥ ೮೫ ॥

ತತ್ರ ಸೂರ್ಯಗತಿರ್ನಾಸ್ತಿ ಶಕ್ರಪಾತಾನುಸಾರತಃ ।
ದಿವಾನಿಶಂ ಚ ಜಾನಂತಿ ಬ್ರಹ್ಮಲೋಕನಿವಾಸಿನಃ ॥ ೮೬ ॥

ದಂಡದ್ವಯಂ ನರಪಲಂ ಶಕ್ರಪಾತೇನ ತತ್ಪಲಂ ।
ಏವಂ ತ್ರಿಂಶದ್ದಿನೇನೈವ ಧಾತುರ್ಮಾಸಃ ಪ್ರಕೀರ್ತಿತಃ ॥ ೮೭ ॥

---

೮೩. ಪಿತೃಗಳಿಗೆ ಮಾನವನ ಶುಕ್ಲಪಕ್ಷದಲ್ಲಿ ಹಗಲೆಂದೂ ಕೃಷ್ಣಪಕ್ಷದಲ್ಲಿ ರಾತ್ರಿಯೆಂದೂ ಹೇಳಲ್ಪಟ್ಟದೆ. ಮಾನವನ ಒಂದು ವರುಷದಿಂದ ದೇವತೆಗಳಿಗೆ ಒಂದು ಹಗಲು ರಾತ್ರಿಗಳಾಗುತ್ತವೆ.

೮೪-೮೫. ಆ ದೇವತೆಗಳಿಗೆ ಮಾನವನ ಉತ್ತರಾಯಣದಲ್ಲಿ ಹಗಲೂ ದಕ್ಷಿಣಾಯನದಲ್ಲಿ ರಾತ್ರಿಯೂ ಆಗುತ್ತದೆ. ದೈವಮಾನದ ಎಪ್ಪತ್ತೊಂದು ಯುಗಗಳಾದರೆ ಒಂದು ಮನ್ವಂತರವಾಗುವುದು. ಈ ಕಾಲವು ಮನುವಿನ ಆಯಸ್ಸಿನ ಪರಿಮಾಣವು. ಇಪ್ಪತ್ತೈದುಸಾವಿರದ ಐನೂರು ದೇವಮಾನದ ವರುಷಗಳು ಇಂದ್ರನ ಆಯುಃ ಪ್ರಮಾಣವೆಂದು ಹೇಳಲ್ಪಟ್ಟದೆ.

೮೬. ಬ್ರಹ್ಮಲೋಕದಲ್ಲಿ ಸೂರ್ಯನ ಸಂಚಾರವಿಲ್ಲ. ಆ ಬ್ರಹ್ಮಲೋಕದಲ್ಲಿ ವಾಸಮಾಡುವವರು ಇಂದ್ರನ ಪತನದಿಂದ ಹಗಲು ರಾತ್ರಿಗಳನ್ನು ತಿಳಿಯುತ್ತಾರೆ.

೮೭. ಎರಡು ದಂಡಗಳಾದರೆ ಮಾನವಮಾನದಲ್ಲಿ ಒಂದು ಪಲವಾಗುವುದು, ಒಬ್ಬ ಇಂದ್ರನ ಪತನವಾದರೆ ಬ್ರಹ್ಮಮಾನದಲ್ಲಿ ಒಂದು ಪಲವಾಗುವುದು. ಈ ರೀತಿಯಿಂದ ಮೂವತ್ತು ದಿನಗಳಾದರೆ ಬ್ರಹ್ಮನಿಗೆ ಒಂದು ಮಾಸವಾಗುವುದು.

ಅಬ್ದೋ ದ್ವಾದಶಭಿರ್ಮಾಸೈರೇವಂ ತಸ್ಯ ಶತಾಯುಷಃ ।
ಬ್ರಹ್ಮಣಃ ಪತನೇನೈವ ನಿಮೇಷಾಚ್ಛ್ರೀಹರೇರಪಿ || ೮೮ ||

ಧಾತುಃ ಪಾತಾನುಸಾರೇಣ ವೈಕುಂಠೇ ನ ದಿವಾನಿಶಂ ।
ತತ್ರ ಸೂರ್ಯಗತಿರ್ನಾಸ್ತಿ ಚೈವಂ ಗೋಲೋಕತಃ ಸ್ಮೃತಂ || ೮೯ ||

ವೈಕುಂಠವಾಸಿನಃ ಸರ್ವೇ ನ ವೈ ಜಾನಂತ್ಯಹರ್ನಿಶಂ ।
ಚಂದ್ರಸ್ಯಾಪಿ ಗ್ರಹಾಣಾಂ ಚ ಗತಿರ್ನಾಸ್ತಿ ಚ ತತ್ರ ವೈ || ೯೦ ||

ಚಕ್ರಂ ನೈವ ಭ್ರಮತ್ಯೇವ ರಾಶೀನಾಮಿಚ್ಛಯಾ ಹರೇಃ ।
ದಿನಂ ಚ ತೇಜಸಾ ದೀಪ್ತಂ ಕೃಷ್ಣಸ್ಯ ಪರಮಾತ್ಮನಃ || ೯೧ ||

ನಕ್ತಂ ತೇಜೋವಿಹೀನಂ ಚ ಹರೌ ಚ ಮಂದಿರಂ ಗತೇ ।
ಏವಂ ಕಾಲಗತಿಸ್ತತ್ರ ವಿಷ್ಣುಲೋಕೇಽಸ್ತಿ ಸಂತತಂ || ೯೨ ||

ಕಾಲಸ್ವರೂಪೋ ಭಗವಾನ್ಪರಮಾತ್ಮಾ ನಿರಾಕೃತಿಃ ।
ಚಂದ್ರಸೂರ್ಯಗತಿರ್ನಾಸ್ತಿ ಪಾತಾಲೇಷು ಚ ಸಪ್ತಸು || ೯೩ ||

---

೮೮–೮೯. ಇಂಥಾ ಹನ್ನೆರಡು ಮಾಸಗಳು ಕಳೆದರೆ ಒಂದು ವರ್ಷವಾಗುತ್ತದೆ. ಈಪ್ರಕಾರವಾದ ಒಂದುನೂರು ವರುಷಗಳು ಬ್ರಹ್ಮನ ಆಯು:ಪರಿಮಾಣವು ಬ್ರಹ್ಮನ ಪತನಕ್ಕನುಸಾರವಾಗಿ ಶ್ರೀಹರಿಗೆ ನಿಮಿಷಗಳಾಗುತ್ತವೆ. ಬ್ರಹ್ಮನ ಪತನಕ್ಕನುಸಾರವಾಗಿ ವೈಕುಂಠದಲ್ಲಿ ಹಗಲು ರಾತ್ರಿಗಳಾಗುವುದಿಲ್ಲ. ಅಲ್ಲಿ ಸೂರ್ಯನ ಸಂಚಾರವೇ ಇಲ್ಲ. ಇದೇ ರೀತಿಯಾಗಿ ಗೋಲೋಕದಲ್ಲಿಯೂ ಇರುತ್ತದೆ.

೯೦–೯೨. ವೈಕುಂಠದಲ್ಲಿ ವಾಸಮಾಡುವವರೆಲ್ಲರೂ ಹಗಲು ರಾತ್ರಿಗಳನ್ನು ತಿಳಿಯಲಾರರು. ಅಲ್ಲಿ ಚಂದ್ರನ ಮತ್ತು ಗ್ರಹಗಳ ಸಂಚಾರವೇ ಇರುವುದಿಲ್ಲ. ಆ ಪರಮಾತ್ಮನ ಇಚ್ಛೆಯಿಂದ ರಾಶಿಗಳ ಚಕ್ರವು ಸುತ್ತುವುದೇ ಇಲ್ಲ. ಹಗಲೆಂಬುದು ಪರಮಾತ್ಮನಾದ ಕೃಷ್ಣನ ತೇಜಸ್ಸಿನಿಂದ ಹರಡಲ್ಪಟ್ಟಿರುತ್ತದೆ. ರಾತ್ರಿಯೆಂಬುದು ಹರಿಯು ಮನೆಯನ್ನು ಸೇರಿದಾಗ ಕಾಂತಿಹೀನವಾಗಿರುತ್ತದೆ. ಈ ರೀತಿಯಾಗಿ ಆ ವಿಷ್ಣುಲೋಕದಲ್ಲಿ ಯಾವಾಗಲೂ ಕಾಲಗತಿಯಿರುತ್ತದೆ.

೯೩–೯೫. ನಿರಾಕಾರನಾದ ಭಗವಂತನಾದ ಪರಮಾತ್ಮನೇ ಕಾಲಸ್ವರೂಪನಾಗಿರುವನು. ಏಳು ಪಾತಾಳಗಳಲ್ಲಿಯೂ ಕೂಡ ಸೂರ್ಯ ಮತ್ತು ಚಂದ್ರ, ಇವರ

ತದ್ವಾಸಿನಶ್ಚ ಜಾನಂತಿ ಶಂಕಂತೇ ನ ದಿವಾನಿಶಂ ।
ದಿನೇ ಚ ಮೂರ್ಧ್ನಿ ನಾಗಾನಾಂ ಮಣಿರ್ಜ್ವಲತಿ ನಿತ್ಯಶಃ ॥ ೯೪ ॥

ಸಂಧ್ಯಾಯಾಂ ದೀಪ್ತಮಗ್ನಿಶ್ಚ ರಾತ್ರಿಶ್ಚ ತಮಸಾವೃತಾ ।
ಕಾಲಂ ತಾಮ್ರಪ್ರಮಾಣೇನ ಜಾನಂತಿ ತನ್ನಿವಾಸಿನಃ ॥ ೯೫ ॥

ಯಥಾ ಭುವಿ ತಥಾ ತತ್ರ ಪರಿಮಾಣಂ ಪ್ರಕೀರ್ತಿತಂ ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಂ ॥ ೯೬ ॥

ದಿವ್ಯೈ ದ್ವಾದಶಸಾಹಸ್ರೈರ್ವತ್ಸರೈಶ್ಚಾಪಿ ತನ್ಮಿತಂ ।
ಅಷ್ಟೌ ಶತಾನ್ಯಪ್ಯಧಿಕಂ ಸಹಸ್ರಾಣಾಂ ಚತುಷ್ಟಯಂ ॥ ೯೭ ॥

ದಿವ್ಯೈರ್ವರ್ಷೈಃ ಕೃತಯುಗಂ ಕಾಲವಿದ್ಭಿರ್ನಿರೂಪಿತಂ ।
ಅಷ್ಟಾವಿಂಶತ್ಸಹಸ್ರಾಣ್ಯಪ್ಯಧಿಕಂ ಪರಿಮಾಣಕಂ ॥ ೯೮ ॥

ಲಕ್ಷಾಣಾಂ ಚ ಸಪ್ತದಶಂ ನೃಮಾನಂ ಪರಿಕೀರ್ತಿತಂ ।
ಅಧಿಕಂ ಷಟ್ಶತಾನ್ಯೇವ ಸಹಸ್ರಾಣಾಂ (ಶತಂ) ತ್ರಯಂ ತಥಾ ॥ ೯೯ ॥

ದಿವ್ಯೈರ್ವರ್ಷೈಶ್ಚ ತ್ರೇತೇತಿ ವತ್ಸಕಾಲವಿದೋ ವಿದುಃ ।
ಷಣ್ಣವತಿಸಹಸ್ರಾಣಿ ಲಕ್ಷೈರ್ದ್ವಾದಭಿಃ ಸಹ ॥ ೧೦೦ ॥

---

ಸಂಚಾರವಿರುವುದಿಲ್ಲ. ಅಲ್ಲಿಯ ಜನರು ಹಗಲು ರಾತ್ರಿಗಳನ್ನು ಊಹಿಸಿ ತಿಳಿದು ಕೊಳ್ಳುತ್ತಾರೆ. ಪ್ರತಿದಿನವೂ ಹಗಲಿನಲ್ಲಿ ಸರ್ಪಗಳ ಹೆಡೆಯಮೇಲಿರುವ ಮಣಿಯು ಪ್ರಕಾಶಿಸುತ್ತಿರುತ್ತದೆ. ಸಂಧ್ಯಾಕಾಲದಲ್ಲಿ ಅಗ್ನಿಯು ಪ್ರಕಾಶವಾಗಿರುತ್ತದೆ. ರಾತ್ರಿಯು ಕತ್ತಲೆಯಿಂದ ಆವರಿಸಲ್ಪಟ್ಟಿರುತ್ತದೆ. ಅಲ್ಲಿ ವಾಸಮಾಡುವವರು ಜಾಗಟೆಯ ಆಧಾರದಮೇಲೆ ಕಾಲವನ್ನು ತಿಳಿದುಕೊಳ್ಳುತ್ತಾರೆ.

೯೬–೧೦೫. ಭೂಲೋಕದಲ್ಲಿ ಹೇಗೋ ಅಲ್ಲಿಯೂ ಕಾಲದ ಪ್ರಮಾಣವಿರುವುದೆಂದು ಹೇಳಲ್ಪಟ್ಟಿದೆ. ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳು. ಅವುಗಳ ಪರಿಮಾಣವು ದೈವಮಾನದ ಹನ್ನೆರಡು ಸಾವಿರ ವರುಷಗಳು. ನಾಲ್ಕು ಸಾವಿರದ ಎಂಟುನೂರು ದೈವಮಾನದ ವರುಷಗಳು ಕೃತಯುಗ ಪ್ರಮಾಣವೆಂದು ಕಾಲವನ್ನು ಬಲ್ಲವರು ನಿರ್ಧರಿಸಿರುವರು. ಮಾನವಮಾನದಲ್ಲಿ ಹದಿನೇಳು

ನೃಣಾಂ ವರ್ಷೈಶ್ಚ ತ್ರೇತೇತಿ ಕಾಲವಿದ್ಭಿಃ ಪ್ರಕೀರ್ತಿತಃ ।
ಚತುಷ್ಟಯಂ ಶತಾನಾಂ ಚಾಪ್ಯಧಿಕಂ ದ್ವಿ ಸಹಸ್ರಕಂ ॥ ೧೦೧ ॥

ವರ್ಷಂ ದಿವ್ಯಂ ದ್ವಾಪರಂ ಚ ಕಾಲಜ್ಞೈಃ ಪರಿಕೀರ್ತಿತಂ ।
ಚತುಃಷಷ್ಟಿಸಹಸ್ರಾಣಿ ಲಕ್ಷೈರಷ್ಟಭಿರೇವ ಚ ॥ ೧೦೨ ॥

ನೃಣಾಂ ವರ್ಷೈರ್ದ್ವಾಪರಂ ಚ ಕಾಲಜ್ಞೈಃ ಪರಿಕೀರ್ತಿತಂ ।
ಅಧಿಕಂ ದ್ವಿಶತಂ ಚೈವ ದಿವ್ಯಂ ವರ್ಷಸಹಸ್ರಕಂ ॥ ೧೦೩ ॥

ಏವಂ ಮಿತಂ ಕಲಿಯುಗಂ ವತ್ಸ ಪ್ರಾಜ್ಞೈರ್ನಿರೂಪಿತಂ ।
ದ್ವಾತ್ರಿಂಶಚ್ಚ ಸಹಸ್ರಂ ಚ ಚತುರ್ಲಕ್ಷಂ ನೃಮಾನಕಂ ॥ ೧೦೪ ॥

ವರ್ಷಂ ಚೇತಿ ಕಲಿಯುಗೇ ಚಕಾರ ಕಾಲಕೋವಿದಃ ।
ಲಕ್ಷೈಸ್ತ್ರಿಚತ್ವಾರಿಂಶದ್ಭಿಃ ಸಹ ವಿಂಶತ್ಸಹಸ್ರಕೈಃ ।
ನೃಮಾನವರ್ಷೈಃ ಕಾಲಜ್ಞೈರ್ವ್ಯಕ್ತಮೇವ ಚತುರ್ಯುಗಂ ॥ ೧೦೫ ॥

---

ಲಕ್ಷದ ಇಪ್ಪತ್ತೆಂಟುಸಾವಿರ ವರುಷಗಳು ಕೃತಯುಗ ಪ್ರಮಾಣವಾಗುತ್ತದೆ. ಎಲೈ ಉದ್ಧವನೇ! ಮೂರು ಸಾವಿರದ ಆರುನೂರು ದೈವಮಾನ ವರುಷಗಳು ತ್ರೇತಾ ಯುಗ ಪ್ರಮಾಣವೆಂದು ಕಾಲವನ್ನು ಬಲ್ಲವರು ಹೇಳುತ್ತಾರೆ. ಮಾನವ ಮಾನದ ಹನ್ನೆರಡುಲಕ್ಷದ ತೊಂಭತ್ತಾರುಸಾವಿರ ವರುಷಗಳು ತ್ರೇತಾಯುಗ ಪ್ರಮಾಣವೆಂದು ಕಾಲವನ್ನು ತಿಳಿದವರು ಹೇಳಿರುವರು. ದೈವಮಾನದ ಎರಡುಸಾವಿರದ ನಾನೂರು ವರುಷಗಳು ದ್ವಾಪರಯುಗ ಪ್ರಮಾಣವೆಂದು ಕಾಲಜ್ಞರು ಹೇಳಿರುವರು. ಮಾನವ ಮಾನದ ಎಂಟುಲಕ್ಷದ ಅರವತ್ತನಾಲ್ಕುಸಾವಿರ ವರುಷಗಳು ದ್ವಾಪರಯುಗ ಪ್ರಮಾಣವೆಂದು ಕಾಲವನ್ನು ಬಲ್ಲವರು ಹೇಳಿರುವರು. ದೈವಮಾನದ ಒಂದು ಸಾವಿರದ ಇನ್ನೂರು ವರುಷಗಳು ಕಲಿಯುಗ ಪ್ರಮಾಣವೆಂದು ಕಾಲಜ್ಞರು ಹೇಳಿರುವರು. ಮಾನವಮಾನದ ನಾಲ್ಕುಲಕ್ಷದ ಮುವ್ವತ್ತೆರಡುಸಾವಿರ ವರ್ಷಗಳು ಕಲಿ ಯುಗ ಪ್ರಮಾಣವೆಂದು ಕಾಲವನ್ನು ಬಲ್ಲವರು ಹೇಳಿರುವರು. ಮಾನವಮಾನದ ನಲವತ್ತಮೂರುಲಕ್ಷದ ಇಪ್ಪತ್ತುಸಾವಿರ ವರುಷಗಳು ನಾಲ್ಕುಯುಗಗಳ ಪ್ರಮಾಣ ವೆಂದು ಕಾಲವನ್ನು ಬಲ್ಲವರು ಪ್ರಕಟಪಡಿಸಿರುವರು.

ಇತಿ ತೇ ಕಥಿತಂ ವತ್ಸ ಕಾಲಸಂಖ್ಯಾನಿರೂಪಣಂ ।
ಯಥಾಶ್ರುತಂ ಯಥಾಜ್ಞಾನಂ ಗಚ್ಛ ವತ್ಸ ಹರೇಃ ಪುರಂ ॥ ೧೦೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಭಾಗೇ ನಾರಾಯಣ ನಾರದಸಂವಾದೇ ರಾಧೋದ್ಧವ
ಸಂವಾದೇ ಕಾಲನಿರೂಪಣಂ ನಾಮ
ಷಣ್ಣವತಿತಮೋಽಧ್ಯಾಯಃ.

---

೧೦೬. ಎಲೈ ಉದ್ಧವಕುಮಾರನೇ ! ಈ ಪ್ರಕಾರವಾಗಿ ಕಾಲದ ಗಣನೆಯ ವಿವರವನ್ನು ನನಗೆ ತಿಳಿದಮಟ್ಟಿಗೆ ನಾನು ಕೇಳಿದಷ್ಟನ್ನು ನಿನಗೆ ಹೇಳಿರುವೆನು. ಎಲೈ ಉದ್ಧವಕುಮಾರನೇ ! ಹರಿಯ ಪಟ್ಟಣವಾದ ಮಧುರಾಪುರಕ್ಕೆ ಹೋಗುವವನಾಗು.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರದ ನಾರಾಯಣ ಸಂವಾದದಲ್ಲಿನ ರಾಧೋದ್ಧವ
ಸಂವಾದದಲ್ಲಿ ಕಾಲನಿರೂಪಣವೆಂಬ
ತೊಂಭತ್ತಾರನೆಯ ಅಧ್ಯಾಯವು ಸಮಾಪ್ತವಾದುದು.

## ತೊಂಭತ್ತಾರನೆಯ ಅಧ್ಯಾಯದ ಸಾರಾಂಶ.

ರಾಧೆಯ ಅನುಮತಿಯನ್ನು ಪಡೆದು ಅವಳಿಗೆ ವಂದಿಸಿ ಮಧುರಾಪಟ್ಟಣಕ್ಕೆ ತೆರಳುವುದರಲ್ಲಿದ್ದ ಉದ್ಧವನನ್ನು ಕುರಿತು ರಾಧಾಸಖಿಯಾದ ಮಾಧವಿಯು ಇಂತೆಂದಳು. "ಎಲೈ ಉದ್ಧವನೇ, ವೇದಗಳಲ್ಲಿಯೂ, ಪುರಾಣಗಳಲ್ಲಿಯೂ ಗೋಪ್ಯವಾಗಿರುವ ದಿವ್ಯಜ್ಞಾನವನ್ನು ಜಗಜ್ಜನನಿಯಾದ ರಾಧೆಯಿಂದ ಪಡೆದುಕೊಂಡು ಹೋಗು" ಈ ಮಾತನ್ನು ಕೇಳಿದ ಉದ್ಧವನು ಸಂಸಾರಸಮುದ್ರವನ್ನು ದಾಟಲು ಬೇಕಾದ ದಿವ್ಯಜ್ಞಾನವನ್ನು ಅನುಗ್ರಹಿಸಬೇಕೆಂದು ರಾಧೆಯನ್ನು ಬೇಡಿದನು. ಆಗ ರಾಧೆಯು ಶ್ರೀಕೃಷ್ಣನಿಂದ ತಾನು ಅರಿತಿದ್ಧ ಶುದ್ಧವಾದ ಕಾಲದ ಗತಿಯನ್ನು ಉದ್ಧವನಿಗೆ ವಿವರಿಸಿದಳು. ಅನಂತರ ಉದ್ಧವನನ್ನು ಕುರಿತು ಮಧುರೆಗೆ ಹೋಗೆಂದು ಹೇಳಿದಳು

|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಸಪ್ತನವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಗಚ್ಛಂತಮುದ್ಧವಂ ದೃಷ್ಟ್ವಾ ಸಂತ್ರಸ್ತಾ ಶ್ರೀಹರೇಃ ಪ್ರಿಯಾ ।
ಸಮುತ್ತಸ್ಥಾಯಾಸನಾಚ್ಛೀಘ್ರಂ ಹೃದಯೇನ ವಿದೂಯತಾ || ೧ ||

ಗೋಪೀಭಿಃ ಸಹಿತಾ ಶೀಘ್ರಂ ಸಮುದ್ವಿಗ್ನಾ ಮಹಾಸತೀ ।
ದದೌ ಶುಭಾಶಿಷಂ ತಸ್ಮೈ ತಸ್ಯ ಮೂರ್ಧ್ನಿ ಕರಂ ತಥಾ || ೨ ||

ಸ್ನಿಗ್ಧದೂರ್ವಾಕ್ಷತಂ ಶುಕ್ಲಧಾನ್ಯಂ ಪುಷ್ಪಂ ಚ ಮಂಗಲಂ ।
ಪ್ರೇರಯಾಮಾಸ ಲಾಜಾಂಶ್ಚ ಫಲಂ ಪರ್ಣಂ ತಥಾ ದಧಿ || ೩ ||

---

### ತೊಂಭತ್ತೇಳನೇ ಅಧ್ಯಾಯವು.

೧-೨. ಶ್ರೀ ನಾರಾಯಣನು ಹೇಳುತ್ತಾನೆ :— ಹೊರಟಿರುವ ಉದ್ಧವನನ್ನು ಕಂಡು ಶ್ರೀಹರಿಯ ಪ್ರಿಯಳೂ ಮಹಾ ಪತಿವ್ರತೆಯೂ ಆದ ರಾಧೆಯು ವ್ಯಥೆಯಿಂದ ಕೂಡಿದ ಮನಸ್ಸುಳ್ಳವಳಾಗಿ ಶೀಘ್ರವಾಗಿ ಆಸನವನ್ನು ಬಿಟ್ಟು ಮೇಲಕ್ಕೆದ್ದು ಗೋಪಿಯರಿಂದೊಡಗೂಡಿದವಳಾಗಿ ಆ ಉದ್ಧವನಿಗೆ ಮಂಗಳಕರವಾದ ಆಶೀರ್ವಾದಗಳನ್ನು ಮಾಡಿದಳು ಮತ್ತು ಅವನ ತಲೆಯ ಮೇಲೆ ತನ್ನ ಕೈಯ್ಯನ್ನಿಟ್ಟಳು.

೩. ಮೃದುವಾದ ದೂರ್ವೆ ಮತ್ತು ಅಕ್ಷತೆ ಇವುಗಳನ್ನೂ ಬಿಳಿಯದಾದ ಧಾನ್ಯವನ್ನೂ, ಹೂವನ್ನೂ, ಹಣ್ಣನ್ನೂ, ಪತ್ರೆಗಳನ್ನೂ, ಅರಳನ್ನೂ, ಮೊಸರನ್ನೂ ಮುಂದಕ್ಕೆ ತಂದಿಟ್ಟಳು.

ದರ್ಪಣಂ ದರ್ಶಯಾಮಾಸ ಪೂರ್ಣಕುಂಭಂ ಸಪಲ್ಲವಂ ।
ಸಫಲಂ ಗಂಧಸಿಂಧೂರಕಸ್ತೂರೀಚಂದನಾನ್ವಿತಂ ॥ ೪ ॥

ಪುಷ್ಪಮಾಲ್ಯಂ ಪ್ರದೀಪಂ ಚ ರಕ್ತಗಂಧಂ ದ್ವಿಜೋತ್ತಮ ।
ಪತಿಪುತ್ರವತೀಂ ಸಾಧ್ವೀಂ ಕಾಂಚನಂ ರಜತಂ ತಥಾ ॥ ೫ ॥

ತಮುವಾಚ ಮಹಾಸಾಧ್ವೀ ಹಿತಂ ಸತ್ಯಂ ಚ ಮಂಗಲಂ ।
ಸಂಗೋಪ್ಯ ಸಾಶ್ರುನೇತ್ರಂ ಚ ಪತಿತಂ ದುಃಖಿತಾ ಹೃದಿ ॥ ೬ ॥

ಶುಭಂ ಭವತು ಮಾರ್ಗಸ್ತೇ ಕಲ್ಯಾಣಮಸ್ತು ಸಂತತಂ ।
ಜ್ಞಾನಂ ಲಭ ಹರೇಃ ಸ್ಥಾನಾತ್ಕೃಷ್ಣಸ್ಯ ಸುಪ್ರಿಯೋ ಭವ ॥ ೭ ॥

ಕೃಷ್ಣಭಕ್ತಿಃ ಕೃಷ್ಣದಾಸ್ಯಂ ವರೇಷು ಚ ವರಂ ವರಂ ।
ಶ್ರೇಷ್ಠಾ ಪಂಚವಿಧಾ ಮುಕ್ತೇರ್ಹರಿಭಕ್ತಿರ್ಗರೀಯಸೀ ॥ ೮ ॥

---

೪. ಕನ್ನಡಿಯನ್ನು ಮುಂದೆ ಹಿಡಿದಳು. ಮಾವಿನ ಚಿಗುರಿನಿಂದ ಕೂಡಿದ ಪೂರ್ಣಕಲಶವನ್ನಿದಿರಿಗೆ ತಂದಳು. ಹಣ್ಣುಗಳಿಂದ ಕೂಡಿದ ಗಂಧ, ಚಂದ್ರ, ಕಸ್ತೂರಿ, ಕೇಸರಿ ಇವುಗಳನ್ನು ತಂದಿಟ್ಟಳು.

೫. ಎಲೈ ಬ್ರಾಹ್ಮಣೋತ್ತಮನಾದ ನಾರದನೇ! ಹೂವಿನ ಮಾಲಿಕೆಯನ್ನೂ ಉತ್ತಮವಾದ ದೀಪವನ್ನೂ, ಕೆಂಪು ಗಂಧವನ್ನೂ ಅವನ ಮುಂದೆ ತಂದಿಟ್ಟಳು. ಮತ್ತು ಸುಮಂಗಲಿಯೂ, ಪುತ್ರವತಿಯೂ ಆದ ಹೆಂಗಸನ್ನು ಮುಂದೆ ನಿಲ್ಲಿಸಿದಳು. ಚಿನ್ನವನ್ನೂ ಬೆಳ್ಳಿಯನ್ನೂ ತಂದಿಟ್ಟಳು.

೬. ಮಹಾ ಪತಿವ್ರತೆಯಾದ ರಾಧೆಯು ಕೆಳಕ್ಕೆ ಬೀಳುತ್ತಿರುವ ಕಣ್ಣೀರನ್ನು ತಡೆಮಕೊಂಡು, ಮನಸ್ಸಿನಲ್ಲಿಯೇ ಅತ್ಯಂತ ದುಃಖಗೊಂಡವಳಾಗಿ ಆ ಉದ್ಧವನನ್ನು ಕುರಿತು ಹಿತವೂ ಸತ್ಯವೂ ಮಂಗಳಕರವೂ ಆದ ಮಾತನ್ನಾಡಿದಳು.

೭. ನಿನಗೆ ದಾರಿಯಲ್ಲಿ ಮಂಗಳವುಂಟಾಗಲಿ. ಯಾವಾಗಲೂ ನಿನಗೆ ಶುಭ ಶಕುನಗಳಾಗಲಿ. ಆ ಹರಿಯ ವಾಸಸ್ಥಾನವನ್ನು ಸೇರಿ ಉತ್ತಮವಾದ ಜ್ಞಾನವನ್ನು ಹೊಂದುವವನಾಗು ಮತ್ತು ಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರನಾಗು.

೮. ಕೃಷ್ಣನಲ್ಲಿ ಭಕ್ತಿಯೂ ಕೃಷ್ಣನ ಸೇವಕತನವೂ ಕೂಡ ಉತ್ತಮವಾದವುಗಳಲ್ಲಿ ಉತ್ತಮವಾದುದೂ ಶ್ರೇಷ್ಠವಾದುದೂ ಆಗಿರುತ್ತದೆ. ಮುಕ್ತಿಯನ್ನು ಪಡೆಯಲು ಹರಿಯ ಶ್ರೇಷ್ಠವಾದ ಐದು ವಿಧವಾದ ಭಕ್ತಿಯು ಉತ್ತಮವಾದುದು.

ಬ್ರಹ್ಮತ್ವಾದಪಿ ದೇವತ್ವಾದಿಂದ್ರತ್ವಾದಮರಾದಪಿ ।
ಅಮೃತಾತ್ಸಿದ್ಧಿಲಾಭಾಚ್ಚ ಹರಿದಾಸ್ಯಂ ಸುದುರ್ಲಭಂ ॥ ೯ ॥

ಅನೇಕಜನ್ಮತಪಸಾ ಸಂಭೂಯ ಭಾರತೇ ದ್ವಿಜಃ ।
ಹರಿಭಕ್ತಿರ್ಯದಿ ಲಭೇತ್ತಸ್ಯ ಜನ್ಮ ಸುದುರ್ಲಭಂ ॥ ೧೦ ॥

ಸಫಲಂ ಜೀವನಂ ತಸ್ಯ ಕುರ್ವತಃ ಕರ್ಮಣಃ ಕ್ಷಯಂ ।
ಪಿತೄಣಾಂ ಚ ಸಹಸ್ರಾಣಿ ಸ್ವಸ್ಯ ಮಾತುಶ್ಚ ನಿಶ್ಚಿತಂ ॥ ೧೧ ॥

ಮಾತಾಮಹಾನಾಂ ಪುಂಸಾಂ ಚ ಶತಾನಾಂ ಸೋದರಸ್ಯ ಚ ।
ಬಾಂಧವಸ್ಯಾಪಿ ಪತ್ನ್ಯಾಶ್ಚ ಗುರೂಣಾಂ ಶಿಷ್ಯಭೃತ್ಯಯೋಃ ॥ ೧೨ ॥

ತತ್ಕರ್ಮ ಶೋಭನಂ ವತ್ಸ ಯಚ್ಚ ಕೃಷ್ಣೇ ಸಮರ್ಪಣಂ ।
ತತ್ಕರ್ಮ ಶೋಭನಂ ಶುದ್ಧಂ ಕೃಷ್ಣಸಂತೋಷಣಂ ಯತಃ ॥ ೧೩ ॥

---

೯. ಬ್ರಹ್ಮಪದವಿಗಿಂತಲೂ, ದೇವಪದವಿಗಿಂತಲೂ, ಇಂದ್ರಪದವಿಗಿಂತಲೂ, ಮರಣವಿಲ್ಲದಿರುವಿಕೆಗಿಂತಲೂ, ಅಮೃತವನ್ನು ಹೊಂದುವಿಕೆಗಿಂತಲೂ ಸಕಲ ಸಿದ್ಧಿಯನ್ನು ಪಡೆಯುವಿಕೆಗಿಂತಲೂ ಹರಿಯ ಸೇವಕತನವೆಂಬುದು ಹೊಂದಲಸಾಧ್ಯವಾದುದು.

೧೦. ಬಹಳ ಜನ್ಮಗಳಲ್ಲಿ ಮಾಡಿದ ತಪಸ್ಸಿನ ಪ್ರಭಾವದಿಂದ ಭರತ ಭೂಮಿಯಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಹರಿಭಕ್ತಿಯೆಂಬುದನ್ನು ಹೊಂದಿದುದೇ ಆದರೆ ಅವನ ಜನ್ಮವು ಸಾಮಾನ್ಯರಿಂದ ಹೊಂದಲಸಾಧ್ಯವಾದುದು.

೧೧–೧೨. ಅಂಥವನ ಜೀವನವೇ ಸಫಲವಾದುದು, ಅವನು ತಂದೆಯ ವಂಶದಲ್ಲಿ ಸಾವಿರ ಮಂದಿಗಳ, ತನ್ನ ತಾಯಿಯ ವಂಶದಲ್ಲಿ ಸಾವಿರಮಂದಿಗಳ, ತಾಯಿಯ ತಂದೆಯ ವಂಶದಲ್ಲಿ ನೂರು ಮಂದಿಗಳ, ಸೋದರರುಗಳ, ಬಂಧುಗಳ, ತನ್ನಪತ್ನಿಯ, ಗುರುಗಳ, ಶಿಷ್ಯರುಗಳ ಮತ್ತು ಸೇವಕರುಗಳ ಕರ್ಮಗಳನ್ನು ಕೂಡ ನಾಶಮಾಡುವವನಾಗುತ್ತಾನೆ.

೧೩. ಎಲೈ ಉದ್ಧವ ಕುಮಾರನೇ! ಯಾವ ಕರ್ಮವು ಶ್ರೀಕೃಷ್ಣನಲ್ಲಿ ಅರ್ಪಿಸಲ್ಪಡುತ್ತದೆಯೋ ಆ ಕರ್ಮವು ಉತ್ತಮವಾದುದು. ಯಾವ ಕರ್ಮವು ಕೃಷ್ಣನಿಗೆ ಸಂತೋಷವನ್ನುಂಟುಮಾಡುತ್ತದೆಯೋ ಆ ಕರ್ಮವು ಶುದ್ಧವೂ ಉತ್ತಮವೂ ಆದುದು.

ಸಂಕಲ್ಪಸಾಧನಂ ಕರ್ಮ ಸಂಪ್ರೀತಿವಿಧಿಪೂರ್ವಕಂ ।
ತದೇವ ಮಂಗಲಂ ಧನ್ಯಂ ಪರಿಣಾಮಸುಖಾವಹಂ || ೧೪ ||

ತದ್ವ್ರತಂ ತತ್ತಪಃ ಸತ್ಯಂ ತದ್ಭಕ್ತಿಃ ಪೂಜನಂ ತಥಾ ।
ತದುದ್ದೇಶ್ಯಮನಶನಂ ಕೇವಲಂ ದಾಸ್ಯಕಾರಣಂ || ೧೫ ||

ಸಮಸ್ತಪೃಥಿವೀದಾನಂ ಪ್ರಾದಕ್ಷಿಣ್ಯಂ ಭುವಸ್ತಥಾ ।
ಸಮಸ್ತತೀರ್ಥಸ್ನಾನಂ ಚ ಸಮಸ್ತಂ ಚ ವ್ರತಂ ತಪಃ || ೧೬ ||

ಸಮಸ್ತಯಜ್ಞಕರಣಂ ಸರ್ವದಾನಫಲಂ ತಥಾ ।
ಸಮಸ್ತವೇದವೇದಾಂಗಪಠನಂ ಪಾಠನಂ ತಥಾ || ೧೭ ||

ಭೀತಸ್ಯ ರಕ್ಷಣಂ ಚೈವ ಜ್ಞಾನದಾನಂ ಸುದುರ್ಲಭಂ ।
ಅತಿಥೀನಾಂ ಪೂಜನಂ ಚ ಶರಣಾಗತರಕ್ಷಣಂ || ೧೮ ||

---

೧೪. ಇಷ್ಟಾರ್ಥಕ್ಕೆ ಸಾಧನವಾದ ಕರ್ಮವನ್ನು ಪ್ರೀತಿಯಿಂದ ನಿಯಮಕ್ಕನುಸಾರವಾಗಿ ಮಾಡಿದುದೇ ಆದರೆ ಅದೇ ಮಂಗಲವನ್ನುಂಟು ಮಾಡತಕ್ಕುದೂ ಧನ್ಯನನ್ನಾಗಿ ಮಾಡತಕ್ಕುದೂ ಕೊನೆಯಲ್ಲಿ ಸೌಖ್ಯವನ್ನುಂಟುಮಾಡತಕ್ಕದೂ ಆಗಿರುತ್ತದೆ.

೧೫. ಆ ಹರಿಯ ವ್ರತವನ್ನು ಮಾಡುವುದು ಅವನನ್ನು ಕುರಿತು ತಪಸ್ಸನ್ನು ಮಾಡುವುದು. ಸತ್ಯವಚನವನ್ನಾಡುವುದು, ಅವನಲ್ಲಿ ಭಕ್ತಿಯನ್ನಿಡುವುದು, ಅವನನ್ನು ಪೂಜೆಮಾಡುವುದು, ಅವನನ್ನುದ್ದೇಶಿಸಿ ಉಪವಾಸಮಾಡುವುದು ಇವೆಲ್ಲವೂ ಕೂಡ ಮುಖ್ಯವಾಗಿ ಆ ಪರಮಾತ್ಮನ ದಾಸಭಾವವನ್ನು ಹೊಂದಲು ಕಾರಣವಾದವುಗಳು.

೧೬–೨೦. ಸಮಸ್ತ ಭೂಮಂಡಲವನ್ನು ದಾನಮಾಡುವುದು, ಭೂಮಂಡಲವನ್ನು ಪ್ರದಕ್ಷಿಣೆ ಮಾಡುವುದು, ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡುವುದು ಸಮಸ್ತ ವ್ರತಗಳನ್ನು ಮಾಡುವುದು, ತಪಸ್ಸನ್ನು ಮಾಡುವುದು, ಸಮಸ್ತ ವೇದಗಳನ್ನೂ, ವೇದಾಂಗಗಳನ್ನೂ ತಾನು ಕಲಿತು ಅನ್ಯರಿಗೆ ಕಲಿಸುವುದು, ಭಯಗೊಂಡವರನ್ನು ಕಾಪಾಡುವುದು, ಅತಿ ದುರ್ಲಭವಾದ ಜ್ಞಾನವನ್ನು ಉಪದೇಶಮಾಡುವುದು ಅತಿಥಿಗಳನ್ನು ಪೂಜೆಮಾಡುವುದು, ನಮಸ್ಕರಿಸುವುದು, ಸಮಸ್ತ ಮಂತ್ರಗಳನ್ನೂ ಪುರ

ಸರ್ವದೇವಾರ್ಚನಂ ಚೈವ ವಂದನಂ ಜಪನಂ ಮನೋಃ ।
ಭೋಜನಂ ವಿಪ್ರದೇವಾನಾಂ ಪುರಶ್ಚರಣಪೂರ್ವಕಂ ॥ ೧೯ ॥

ಗುರುಶುಶ್ರೂಷಣಂ ಚೈವ ಪಿತ್ರೋರ್ಭಕ್ತಿಶ್ಚ ಪೋಷಣಂ ।
ಸರ್ವಂ ಶ್ರೀಕೃಷ್ಣದಾಸ್ಯಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೨೦ ॥

ತಸ್ಮಾದುದ್ಧವ ಯತ್ನೇನ ಭಜ ಕೃಷ್ಣಂ ಪರಾತ್ಪರಂ ।
ನಿರ್ಗುಣಂ ಚ ನಿರೀಹಂ ಚ ಪರಮಾತ್ಮಾನಮೀಶ್ವರಂ ॥ ೨೧ ॥

ನಿತ್ಯಂ ಸತ್ಯಂ ಪರಂ ಬ್ರಹ್ಮ ಪ್ರಕೃತೇಃ ಪರಮೀಶ್ವರಂ ।
ಪರಿಪೂರ್ಣತಮಂ ಶುದ್ಧಂ ಭಕ್ತಾನುಗ್ರಹವಿಗ್ರಹಂ ॥ ೨೨ ॥

ಕರ್ಮಿಣಾಂ ಕರ್ಮಣಾಂ ಸಾಕ್ಷ್ಯಪ್ರದಂ ನಿರ್ಲಿಪ್ತಮೇವ ಚ ।
ಜ್ಯೋತಿಃಸ್ವರೂಪಂ ಪರಮಂ ಕಾರಣಾನಾಂ ಚ ಕಾರಣಂ ॥ ೨೩ ॥

ಸರ್ವಸ್ವರೂಪಂ ಸರ್ವೇಶಂ ಸರ್ವಸಂಪತ್ಪ್ರದಂ ಶುಭಂ ।
ಭಕ್ತಿದಂ ದಾಸ್ಯದಂ ಸ್ವಸ್ಯ ನಿಜಸಂಪತ್ಪದಪ್ರದಂ ॥ ೨೪ ॥

---

ಶ್ಚರಣಪೂರ್ವಕವಾಗಿ ಜಪಮಾಡುವುದು ದೇವರ ಮತ್ತು ಬ್ರಾಹ್ಮಣರ ಸಂತರ್ಪಣೆಯನ್ನು ಮಾಡುವುದು ಗುರುಗಳನ್ನು ಸೇವಿಸುವುದು, ತಂದೆ ತಾಯಿಯರಲ್ಲಿ ಭಕ್ತಿಯನ್ನಿಟ್ಟುಕೊಂಡು ಅವರನ್ನು ಕಾಪಾಡುವುದು ಇವೆಲ್ಲವೂ ಕೂಡ ಶ್ರೀಕೃಷ್ಣನ ದಾಸತನದ ಹದಿನಾರನೆ ಒಂದುಭಾಗಕ್ಕೆ ಸಮನಾಗಲಾರದು.

೨೧-೨೪. ಆದಕಾರಣ ಎಲೈ ಉದ್ಧವನೇ ! ಪರಾತ್ಪರನೂ, ನಿರ್ಗುಣನೂ, ಇಚ್ಛೆಯಿಲ್ಲದವನೂ, ಪರಮಾತ್ಮನೂ, ಅನಶ್ವರನೂ, ನಿತ್ಯನೂ, ಸತ್ಯಸ್ವರೂಪನೂ, ಪರಬ್ರಹ್ಮನೂ, ಪ್ರಕೃತಿಗಿಂತಲೂ ಉತ್ತಮನೂ, ಪರಿಪೂರ್ಣನೂ, ಶುದ್ಧನೂ, ಭಕ್ತರಿಗೆ ಅನುಗ್ರಹ ಮಾಡುವುದಕ್ಕಾಗಿ ಶರೀರವನ್ನು ಧರಿಸಿದವನೂ, ಕರ್ಮನಿರತರಾದವರು ಮಾಡುವ ಕರ್ಮಗಳಿಗೆ ಸಾಕ್ಷಿಯೂ, ನಿರ್ಲಿಪ್ತನೂ, ಜ್ಯೋತಿಸ್ವರೂಪನೂ, ಶ್ರೇಷ್ಠನೂ, ಸಕಲ ಕಾರಣಗಳಿಗೂ ಕಾರಣನೂ ಸರ್ವಸ್ವರೂಪನೂ, ಸಕಲಕ್ಕೂ ಅಧಿಪತಿಯೂ, ಸಕಲ ಸಂಪತ್ತನ್ನೂ ಭಕ್ತರಿಗೆ ಕೊಡುವವನೂ, ಮಂಗಳಕರನೂ, ತನ್ನಭಕ್ತಿಯನ್ನೂ, ತನ್ನ ದಾಸತನವನ್ನೂ, ತನ್ನ ಸಂಪತ್ಪದವಿಯನ್ನೂ ಕೊಡುವವನಾದ ಆ ಕೃಷ್ಣನನ್ನು ಸೇವಿಸುವವನಾಗು.

ವಿಸೃಜ್ಯ ಜ್ಞಾತಿಬುದ್ಧಿಂ ಚ ಮಾತ್ಸರ್ಯಮಶುಭಪ್ರದಂ ।
ಭಜ ತಂ ಪರಮಾನಂದಂ ಸಾನಂದಂ ನಂದನಂದನಂ ॥ ೨೫ ॥

ವೇದೇ ಕೌಥುಮಿಶಾಖಾಯಾಂ ತಸ್ಯ ನಾಮ್ನಾಂ ಸಹಸ್ರಕಂ ।
ನಂದನಂದನನಾಮೋಕ್ತಂ ಕೃತವಿಘ್ನಸುದುರ್ಲಭಂ ॥ ೨೬ ॥

ಉದ್ಧವಃ ಸರ್ವಮಾಕರ್ಣ್ಯ ಪರಮಂ ವಿಸ್ಮಯಂ ಯಯೌ ।
ಜ್ಞಾನಂ ಸಂಪ್ರಾಪ್ಯ ಸಂಪೂರ್ಣಂ ಪರಿಪೂರ್ಣೋ ಬಭೂವ ಹ ॥ ೨೭ ॥

ಸ್ವವಸ್ತ್ರಂ ಚ ಗಲೇ ಬದ್ಧ್ವಾ ದಂಡವತ್ಪ್ರಣನಾಮ ತಾಂ ।
ಮೂರ್ಧ್ನಃ ಕೇಶೈಶ್ಚ ತತ್ಪಾದಂ ನಿಬಧ್ಯ ಚ ಪುನಃ ಪುನಃ ॥ ೨೮ ॥

ಪುಲಕಾಂಚಿತಸರ್ವಾಂಗಃ ಸಾಶ್ರುನೇತ್ರಶ್ಚ ಭಕ್ತಿತಃ ।
ತದ್ವಿಚ್ಛೇದಶುಚಾ ಪ್ರೇಮ್ಣಾ ರುರೋದೋಚ್ಚೈಶ್ಚ ನಾರದ ॥ ೨೯ ॥

---

೨೫. ಇವನು ನನ್ನ ಜ್ಞಾತಿಯು ಎಂಬ ಬುದ್ಧಿಯನ್ನೂ, ಅಶುಭವನ್ನುಂಟು ಮಾಡುವುದಾದ ಹೊಟ್ಟೆಕಿಚ್ಚನ್ನೂ ಬಿಟ್ಟು ಪರಮಾನಂದರೂಪನೂ, ನಂದ ಕುಮಾರನೂ ಆದ ಶ್ರೀಕೃಷ್ಣನನ್ನು ಆನಂದದಿಂದ ಸೇವಿಸುವವನಾಗು.

೨೬. ವೇದದಲ್ಲಿ ಕೌಥುಮೀಶಾಖೆಯಲ್ಲಿ ಆ ನಂದಕುಮಾರನ ಸಹಸ್ರನಾಮವು ಹೇಳಲ್ಪಟ್ಟಿದೆ. ಅದು ವಿಘ್ನಪೀಡಿತರಾದವರಿಗೆ ದೊರೆಯಲಾರದು.

೨೭. ಇದೆಲ್ಲವನ್ನೂ ಕೇಳಿ ಉದ್ಧವನು ಬಹಳ ಆಶ್ಚರ್ಯವನ್ನು ಹೊಂದಿದವನಾದನು. ಸಂಪೂರ್ಣ ಜ್ಞಾನವನ್ನು ಪಡೆದುಕೊಂಡವನಾಗಿ ಪರಿಪೂರ್ಣನಾದನು.

೨೮–೨೯. ತನ್ನ ವಸ್ತ್ರವನ್ನು ಕತ್ತಿಗೆಕಟ್ಟಿಕೊಂಡು ದಂಡದಂತೆ ಆ ರಾಧಿಕೆಗೆ ನಮಸ್ಕರಿಸಿದನು ಮತ್ತು ತನ್ನ ತಲೆಯ ಕೂದಲುಗಳಿಂದ ಆ ರಾಧಿಕೆಯ ಕಾಲುಗಳನ್ನು ಮತ್ತೆ ಮತ್ತೆ ಕಟ್ಟಿಕೊಳ್ಳುತ್ತ ಸರ್ವಾಂಗಗಳಲ್ಲಿಯೂ ರೋಮಾಂಚನವನ್ನು ಹೊಂದಿದವನಾಗಿ ಭಕ್ತಿವಶದಿಂದ ಕಣ್ಣಿನಲ್ಲಿ ನೀರುತುಂಬಿದವನಾಗಿ ಎಲೈ ನಾರದನೇ! ಆ ರಾಧಿಕೆಯ ಅಗಲುವಿಕೆಯ ದುಃಖದಿಂದಲೂ, ಪ್ರೀತಿಯಿಂದಲೂ ಗಟ್ಟಿಯಾಗಿ ಅತ್ತನು.

ರುರೋದ ರಾಧಾ ತತ್ಪ್ರೇಮ್ಣಾ ರುರೋದ ಬಲ್ಲವೀಗಣಃ ।
ಉದ್ಧವಸ್ಯ ಗಲಂ ಧೃತ್ವಾ ಸ್ಥಾಪಯಾಮಾಸ ಲೋಭತಃ ॥ ೩೦ ॥

ಉದ್ಧವಂ ಮೂರ್ಛಿತಂ ದೃಷ್ಟ್ವಾ ಜೃಂಭಿತಂ ತ್ಯಕ್ತಚೇತನಂ ।
ಶೀಘ್ರಮುತ್ಥಾಪಯಾಮಾಸ ರಾಧಿಕಾ ಕೃಷ್ಣಮಾನಸಂ ॥ ೩೧ ॥

ಚೇತನಂ ಕಾರಯಾಮಾಸ ಜಲಂ ದತ್ವಾ ಮುಖಾಂಬುಜೇ ।
ಶುಭಾಶಿಷಂ ಚ ಪ್ರದದೌ ವತ್ಸ ಜೀವೇತಿ ನಾರದ ॥ ೩೨ ॥

ಉದ್ಧವಶ್ಚೇತನಾಂ ಪ್ರಾಪ್ಯ ತಾಮುವಾಚ ಸುಸಂಸದಿ ।
ರುದತೀನಾಂ ಚ ಗೋಪೀನಾಂ ಪುರತಃ ಪರಮಾರ್ಥದಂ ॥ ೩೩ ॥

॥ ಉದ್ಧವ ಉವಾಚ ॥

ಧನ್ಯೋ ಯಶಸ್ಯೋ ದ್ವೀಪಾನಾಂ ಜಂಬೂದ್ವೀಪಃ ಸುದುರ್ಲಭಃ ।
ಯತ್ರ ಭಾರತವರ್ಷಂ ತು ಸರ್ವೇಷಾಮೀಪ್ಸಿತಂ ವರಂ ॥ ೩೪ ॥

---

೩೦. ರಾಧೆಯೂ ಕೂಡ ಆ ಉದ್ಧವನ ಮೇಲಿನ ಪ್ರೀತಿಯಿಂದ ಅತ್ತಳು. ಗೋಪಿಯರೂ ಕೂಡ ಅತ್ತರು. ಉದ್ಧವನ ಕತ್ತನ್ನು ಹಿಡಿದುಕೊಂಡು ಅವನು ಹೋಗದಂತೆ ತಡೆದು ನಿಲ್ಲಿಸಿದಳು.

೩೧. ಉದ್ಧವನು ಮೂರ್ಛೆಹೊಂದಿ ಚೈತನ್ಯಶೂನ್ಯನಾಗಿರುವುದನ್ನು ಕಂಡು ರಾಧಿಕೆಯು ಕೃಷ್ಣನಲ್ಲಿಯೇನಟ್ಟಮನಸ್ಸುಳ್ಳ ಆ ಉದ್ಧವನನ್ನು ಜಾಗ್ರತೆಯಾಗಿ ಮೇಲಕ್ಕೆತ್ತಿದಳು.

೩೨. ಎಲೈ ನಾರದನೇ! ರಾಧೆಯು ಉದ್ಧವನ ಮುಖದಲ್ಲಿ ನೀರನ್ನು ಹಾಕಿ ಅವನಿಗೆ ಜ್ಞಾನಬರುವಂತೆ ಮಾಡಿದಳು ಮತ್ತು ಎಲೈ ಕುಮಾರನೇ! ಚಿರಕಾಲ ಜೀವಿಸುವವನಾಗು ಎಂದು ಮಂಗಳಕರವಾದ ಆಶೀರ್ವಾದವನ್ನು ಮಾಡಿದಳು.

೩೩. ಉದ್ಧವನು ಚೈತನ್ಯವನ್ನು ಹೊಂದಿದವನಾಗಿ ಸಭೆಯ ಮಧ್ಯದಲ್ಲಿ ಅಳುತ್ತಿರುವ ಗೋಪಿಯರ ಎದುರಿನಲ್ಲಿ ಆ ರಾಧಿಕೆಯನ್ನು ಕುರಿತು ಪರಮಪ್ರಯೋಜನವನ್ನುಂಟುಮಾಡುವ ಮಾತನ್ನಾಡಿದನು.

೩೪. ಉದ್ಧವನು ಹೇಳುತ್ತಾನೆ:— ದ್ವೀಪಗಳಲ್ಲೆಲ್ಲ ಜಂಬೂದ್ವೀಪವು ಧನ್ಯವೂ, ಕೀರ್ತಿಯುತವೂ, ದುರ್ಲಭವೂ ಆದುದು. ಯಾಕೆಂದರೆ ಉತ್ತಮವೂ ಸಕಲರಿಗೂ ಇಷ್ಟವೂ ಆದ ಭಾರತವರ್ಷವು ಈ ಜಂಬೂದ್ವೀಪದಲ್ಲಿರುವುದು.

ಅಹೋ ಭಾರತವರ್ಷೇ ತು ಪುಣ್ಯಂ ವೃಂದಾವನಂ ವನಂ ।
ರಾಧಾಪಾದಾಬ್ಜಸಂಸ್ಪರ್ಶರಜಃಪೂತಂ ಸುರೇಪ್ಸಿತಂ ॥ ೩೫ ॥

ಧನ್ಯಾ ಮಾನ್ಯಾ ಚ ಪೃಥಿವೀ ತ್ರಿಷು ಲೋಕೇಷು ಪೂಜಿತಾ ।
ರಾಧಾಯಾಸ್ತೀರ್ಥಪೂತಾಯಾ ಪಾದಾಬ್ಜರಜಸಾ ವರಾ ॥ ೩೬ ॥

ಷಷ್ಟಿವರ್ಷಸಹಸ್ರಾಣಿ ದಿವ್ಯಾನಿ ಪುಷ್ಕರೇ ಪುರಾ ।
ಬ್ರಹ್ಮಣಾ ಚ ತಪಸ್ತಪ್ತಂ ವೇದೋಕ್ತಂ ಭಕ್ತಿಪೂರ್ವಕಂ ॥ ೩೭ ॥

ಗೋಲೋಕೇ ರಾಧಿಕಾಕೃಷ್ಣದರ್ಶನಾರ್ಥಂ ಮನೋರಥಾತ್ ।
ಗೋಲೋಕೇ ರಾಧಿಕಾಕೃಷ್ಣೋ ನ ದೃಷ್ಟಃ ಸ್ವಪ್ನತಸ್ತದಾ ॥ ೩೮ ॥

ಶ್ರುತಾ ತೇನಾಕಾಶವಾಣೀ ಸತ್ಯರೂಪಾ ಚ ಲೀಲಯಾ ।
ವಾರಾಹೇ ಭಾರತೇ ವರ್ಷೇ ಪುಣ್ಯೇ ವೃಂದಾವನೇ ವನೇ ॥ ೩೯ ॥

---

೩೫. ಭಾರತವರ್ಷದಲ್ಲಿಯೂ ಕೂಡ ರಾಧೆಯ ಪಾದಕಮಲಗಳ ಧೂಳಿಯಿಂದ ಪವಿತ್ರವಾಗಿ ದೇವತೆಗಳಿಂದಲೂ ಅಪೇಕ್ಷಿಸಲ್ಪಡುತ್ತಿರುವುದಾಗಿರುವ ವೃಂದಾವನವೆಂಬ ವನವು ಅತ್ಯಂತ ಪುಣ್ಯಕರವಾದುದು.

೩೬. ಸಕಲ ತೀರ್ಥಗಳಿಗಿಂತಲೂ ಪವಿತ್ರಳಾಗಿರುವ ರಾಧೆಯ ಪಾದಕಮಲಗಳ ಧೂಳಿನಿಂದ ಭೂಮಿದೇವಿಯು ಧನ್ಯಳೂ, ಮಾನ್ಯಳೂ, ಮೂರುಲೋಕಗಳಲ್ಲಿಯೂ ಪೂಜಿತಳೂ ಶ್ರೇಷ್ಠಳೂ ಆಗಿರುವಳು.

೩೭–೩೮. ಹಿಂದೆ ಬ್ರಹ್ಮನು ಗೋಲೋಕದಲ್ಲಿ ರಾಧಾಕೃಷ್ಣರ ಸಂದರ್ಶನವನ್ನು ಮಾಡಬೇಕೆಂಬ ಬಯಕೆಯಿಂದ ಪುಷ್ಕರಕ್ಷೇತ್ರದಲ್ಲಿ ದೇವಮಾನದ ಅರವತ್ತು ಸಾವಿರವರುಷಗಳವರೆಗೆ ವೇದದಲ್ಲಿ ಹೇಳಿರುವಂತೆ ಭಕ್ತಿ ಪೂರ್ವಕವಾಗಿ ತಪಸ್ಸನ್ನು ಮಾಡಿದನು. ಆದರೆ ಆ ಸಮಯದಲ್ಲಿ ಗೋಲೋಕದಲ್ಲಿ ರಾಧಾಸಮೇತನಾದ ಕೃಷ್ಣನ ಸಂದರ್ಶನವು ಸ್ವಪ್ನದಲ್ಲಿಯೂ ಕೂಡ ಆಗಲಿಲ್ಲ.

೩೯–೪೦. ಅವನಿಗೆ ಸತ್ಯರೂಪವಾದ ಆಕಾಶವಾಣಿಯು ಸುಲಭವಾಗಿ ಕೇಳಿಸಿತು ಅದೇನೆಂದರೆ :— "ವಾರಾಹಕಲ್ಪದಲ್ಲಿ ಭಾರತವರ್ಷದಲ್ಲಿ ಪುಣ್ಯಕರವಾದ ವೃಂದಾವನವೆಂಬ ವನದಲ್ಲಿ ಅತ್ಯಂತ ಮನೋಹರವಾದ ರಾಸಮಂಡಲದಲ್ಲಿ ರಾಸೋ

ರಾಸೋತ್ಸವೇ ಮಹಾರಮ್ಯೇ ತತ್ರೈವ ರಾಸಮಂಡಲೇ ।
ದ್ರಕ್ಷ್ಯಸೀತಿ ಚ ದೇವಾನಾಂ ಮಧ್ಯೇ ಸುಸ್ಥೋ ನ ಸಂಶಯಃ ॥ ೪೦ ॥

ಶ್ರುತ್ವಾ ಚ ವಿರತೋ ಬ್ರಹ್ಮಾ ತಪಸಃ ಸ್ವಗೃಹಂ ಗತಃ ।
ಕೃಷ್ಣೋ ದೃಷ್ಟಶ್ಚ ಹೃಷ್ಟಶ್ಚ ಪರಿಪೂರ್ಣಮನೋರಥಃ ॥ ೪೧ ॥

ಗೋಪಾನಾಂ ಗೋಪಿಕಾನಾಂ ಚ ಸಫಲಂ ಜನ್ಮ ಜೀವನಂ ।
ನಿತ್ಯಂ ಪಶ್ಯಂತಿ ತೇ ಪಾದಪದ್ಮಂ ಬ್ರಹ್ಮಾದಿದುರ್ಲಭಂ ॥ ೪೨ ॥

ಮಾನಿನೀಂ ರಾಧಿಕಾಂ ಸಂತಃ ಸದಾ ಸೇವಂತಿ ನಿತ್ಯಶಃ ।
ಯೋಗೀಂದ್ರಾಶ್ಚ ಮುನೀಂದ್ರಾಶ್ಚ ಸಿದ್ಧೇಂದ್ರಾ ವೈಷ್ಣವಾಸ್ತಥಾ ॥ ೪೩ ॥

ಸತೀಂ ಪುಣ್ಯಾಂ ತೀರ್ಥಪೂತಾಂ ಸ್ವತಃಶುದ್ಧಾಂ ಸುದುರ್ಲಭಾಂ ।
ಸುಲಭಂ ಯತ್ಪದಾಂಭೋಜಂ ಬ್ರಹ್ಮಾದೀನಾಂ ಸುದುರ್ಲಭಂ ॥ ೪೪ ॥

---

ತ್ಸವ ಸಮಯದಲ್ಲಿ ದೇವತೆಗಳ ಮಧ್ಯದಲ್ಲಿ ಸುಖದಿಂದ ಕುಳಿತಿರುವವನಾಗಿ ರಾಧಾ ಸಮೇತನಾದ ಕೃಷ್ಣನನ್ನು ನೀನು ನೋಡುವೆ ಇದಕ್ಕೆ ಸಂಶಯವಿಲ್ಲ" ಎಂದು

೪೧. ಬ್ರಹ್ಮನು ಆಕಾಶವಾಣಿಯನ್ನು ಕೇಳಿ ತಪಸ್ಸನ್ನು ಬಿಟ್ಟು ಮನೆಗೆ ಹೋದನು. ಕೃಷ್ಣನನ್ನೂ ಕೂಡ ನೋಡಿ ಸಂತೋಷಗೊಂಡು ಸಂಪೂರ್ಣವಾದ ತನ್ನ ಮನೋರಥವುಳ್ಳವನಾದನು.

೪೨. ಗೋಪರೂ, ಗೋಪಿಯರೂ ಕೂಡ ಬ್ರಹ್ಮನೇ ಮೊದಲಾದವರಿಗೂ ದುರ್ಲಭವಾದ ಯಾವ ನಿನ್ನ ಪಾದಕಮಲವನ್ನು ನಿತ್ಯವೂ ನೋಡುತ್ತಿರುವರಾದ ಕಾರಣ ಅವರ ಜನ್ಮವೂ, ಜೀವನವೂ ಸಫಲವಾದುದು.

೪೩–೪೪. ಯಾವಳ ಪಾದಕಮಲವು ಬ್ರಹ್ಮಾದಿಗಳಿಗೂ ದುರ್ಲಭವೋ, ಭಕ್ತರಿಗೆ ಮಾತ್ರ ಸುಲಭವೋ ಅಂಥಾ ಮಾನಿನಿಯೂ, ಪತಿವ್ರತೆಯೂ, ಪುಣ್ಯವತಿಯೂ, ತೀರ್ಥಗಳಿಂದ ಪವಿತ್ರಳೂ, ಸ್ವಯಂಪರಿಶುದ್ಧಳೂ, ಭಕ್ತರಲ್ಲದವರಿಗೆ ದುರ್ಲಭಳೂ ಆದ ರಾಧೆಯನ್ನು ಯೋಗಿಶ್ರೇಷ್ಠರೂ, ಮುನಿಶ್ರೇಷ್ಠರೂ, ಸಿದ್ಧಶ್ರೇಷ್ಠರೂ, ವಿಷ್ಣುಭಕ್ತರೂ ಆದ ಸತ್ಪುರುಷರು ನಿತ್ಯವೂ ಬಿಡದೆ ಭಜನೆ ಮಾಡುತ್ತಾರೆ.

ಯತ್ಪಾದಪದ್ಮನಖರಂ ಕೃತಂ ಯಾವಕಚಿಹ್ನಿತಂ ।
ಸರ್ವೇಶ್ವರೇಶ್ವರೇಣೈವ ಕೃಷ್ಣೇನ ಪರಮಾತ್ಮನಾ ॥ ೪೫ ॥

ಚಕಾರ ಯಸ್ಯಾಃ ಪೂಜಾಂ ಚ ಸ್ತೋತ್ರರಾಜಂ ಸುದುರ್ಲಭಂ ।
ಶತಶೃಂಗೇ ಸ್ವಯಂ ಕೃಷ್ಣೋ ಗೋಲೋಕೇ ರಾಸಮಂಡಲೇ ॥ ೪೬ ॥

ಪಾರಿಜಾತಪ್ರಸೂನಾನಾಮಂಜಲಿಂ ಗಂಧಚಂದನಂ ।
ದದೌ ದೂರ್ವಾಕ್ಷತಂ ಸ್ನಿಗ್ಧಂ ಯಸ್ಯಾಃ ಪಾದಾರವಿಂದಯೋಃ ॥ ೪೭ ॥

ತ್ರಿಂಶತ್ಸಹಸ್ರಕೋಟೀನಾಂ ಗೋಪೀನಾಮೀಶ್ವರೀ ಚ ಯಾ ।
ತತ್ಸಾತ್ತ್ರಿಂಶತ್ಸಖೀನಾಂ ಚ ಈಶ್ವರೀ ರಾಧಿಕಾಭಿದಾ ॥ ೪೮ ॥

ಯೇ ವಾ ದ್ವಿಷಂತಿ ನಿಂದಂತಿ ಪಾಪಿನಶ್ಚ ಹಸಂತಿ ಚ ।
ಕೃಷ್ಣಪ್ರಾಣಾಧಿಕಾಂ ದೇವದೇವೀಂ ಚ ರಾಧಿಕಾಂ ವರಂ ॥ ೪೯ ॥

---

೪೫. ಯಾವ ಆ ರಾಧೆಯ ಪಾದಕಮಲಗಳ ಉಗುರುಗಳಿಗೆ, ಪರಮಾತ್ಮನೂ ಸರ್ವೇಶ್ವರನಿಗೂ ಈಶ್ವರನೂ ಆದ ಕೃಷ್ಣನು ಅರಗಿನರಸವನ್ನು ಹಚ್ಚಿ ಅಲಂಕಾರ ವನ್ನು ಮಾಡುವವನಾಗುತ್ತಾನೆ.

೪೬. ಮತ್ತು ಶ್ರೀಕೃಷ್ಣನು ಶತಶೃಂಗದಲ್ಲಿ, ಗೋಲೋಕದಲ್ಲಿ, ರಾಸಮಂಡಲ ದಲ್ಲಿ ತಾನೇ ಆ ರಾಧಿಕೆಯನ್ನು ಪೂಜೆಮಾಡಿ ಅತಿದುರ್ಲಭವಾದ ಸ್ತೋತ್ರಗಳಿಂದ ಸ್ತುತಿಮಾಡಿರುವನು.

೪೭. ಅಲ್ಲದೆ ಕೋಮಲವಾದ ದೂರ್ವೆ ಅಕ್ಷತೆ ಪರಮಳದಿಂದ ಕೂಡಿರುವ ಗಂಧ ಪಾರಿಜಾತದ ಹೂವಿನ ಬೊಗಸೆ ಇವುಗಳನ್ನು ಆ ರಾಧೆಯ ಪಾದಕಮಲಗಳ ಮೇಲೆ ಅರ್ಪಿಸುವವನಾಗಿರುವನು.

೪೮. ಯಾವಳು ಮೂವತ್ತುಸಾವಿರ ಕೋಟಿ ಗೋಪಿಯರಿಗೆ ತಾನೇ ಯಜ ಮಾನಿಯಾಗಿರುವಳೋ ಮೂವತ್ತುಲಕ್ಷ ಸಖಿಯರಿಗೂ ಸ್ವಾಮಿನಿಯಾಗಿರುವಳೋ ಅಂಥಾ ರಾಧಿಕೆಯನ್ನು ಶ್ರೀಕೃಷ್ಣನು ಪೂಜೆಮಾಡಿರುವನು.

೪೯–೫೧. ಯಾವ ಪಾಪಿಗಳು ಕೃಷ್ಣನ ಪ್ರಾಣಕ್ಕಿಂತಲೂ ಪ್ರಿಯಳಾದ ದೇವತೆಗಳಿಗೂ ದೇವಿಯಾದ ಮತ್ತು ಶ್ರೇಷ್ಠಳಾದ ರಾಧಿಕೆಯನ್ನು ದ್ವೇಷಿಸುತ್ತಾರೋ

ಬ್ರಹ್ಮಹತ್ಯಾ ಶತಂ ತೇ ಚ ಲಭಂತೇ ನಾತ್ರ ಸಂಶಯಃ ।
ತತ್ಪಾಪೇನ ಚ ಪಚ್ಯಂತೇ ಕುಂಭೀಪಾಕೇ ಚ ರೌರವೇ ॥ ೫೦ ॥

ತಪ್ತತೈಲೇ ಮಹಾಘೋರೇ ಧ್ವಾಂತೇ ಕೀಟೇ ಚ ಯಂತ್ರಕೇ ।
ಚತುರ್ದಶೇಂದ್ರಾವಚ್ಛಿನ್ನಂ ಪಿತೃಭಿಃ ಸಪ್ತಭಿಃ ಸಹ ॥ ೫೧ ॥

ತತಃ ಪರಂ ಚ ಜಾಯೇತ ಜನ್ಮೈಕಂ ಲೋಕಜನ್ಮತಃ ।
ದಿವ್ಯಂ ವರ್ಷಸಹಸ್ರಂ ಚ ವಿಷ್ಠಾಕೀಟಾಶ್ಚ ಪಾಪತಃ ॥ ೫೨ ॥

ಪುಂಶ್ಚಲೀನಾಂ ಯೋನಿಕೀಟಾಸ್ತದ್ರಕ್ತಮಲಭಕ್ಷಕಾಃ ।
ಮಲಕೀಟಾಶ್ಚ ತನ್ಮಾನವರ್ಷಂ ಚ ಪೂಯಭಕ್ಷಕಾಃ ॥ ೫೩ ॥

ವೇದೇ ಚ ಕಾಣ್ವಶಾಖಾಯಾಮಿತ್ಯಾಹ ಕಮಲೋದ್ಭವಃ ।
ಇತ್ಯುಕ್ತವಂತಂ ತಂ ಯಾಂತಮುವಾಚ ರಾಧಿಕಾ ಪುನಃ ।
ರುದಂತಂ ಚ ರುದಂತೀ ಸಾ ಕೃಷ್ಣವಿಚ್ಛೇದಕಾತರಾ ॥ ೫೪ ॥

---

ನಿಂದಿಸುತ್ತಾರೊ, ನೋಡಿ ನಗುತ್ತಾರೋ ಅವರು ಒಂದುನೂರು ಬ್ರಹ್ಮಹತ್ಯೆಯನ್ನು ಮಾಡಿದ ಪಾತಕವನ್ನು ಹೊಂದುತ್ತಾರೆಂಬುದರಲ್ಲಿ ಸಂಶಯವಿಲ್ಲ. ಆ ಪಾಪದಿಂದ ಕುಂಭೀಪಾಕ, ರೌರವ, ತಪ್ತತೈಲ ಭಯಂಕರವಾದ ಧ್ವಾಂತ, ಕೀಟ, ಯಂತ್ರ ಮುಂತಾದ ನರಕಗಳಲ್ಲಿ ತಮ್ಮ ಪಿತೃಗಳ ಏಳು ತಲೆಗಳೊಡನೆ ಹದಿನಾಲ್ಕು ಜನ ಇಂದ್ರರ ಕಾಲಗಳವರೆಗೆ ಯಾತನೆಗಳನ್ನನುಭವಿಸುತ್ತಾರೆ.

೫೨–೫೪. ಅನಂತರ ಒಂದುಜನ್ಮದಲ್ಲಿ ಲೋಕದಲ್ಲಿ ಹುಟ್ಟುತ್ತಾರೆ. ತಮ್ಮ ಪಾಪಕರ್ಮದ ದೆಸೆಯಿಂದ ದೈವಮಾನದ ಒಂದುಸಾವಿರ ವರುಷಗಳವರೆಗೆ ಅಮೇಧ್ಯದ ಹುಳುವಾಗಿ ಜನಿಸುತ್ತಾರೆ ಮತ್ತು ಜಾರಿಣಿಯರಾದ ಸ್ತ್ರೀಯರ ಯೋನಿಯಲ್ಲಿ ಹುಳುವಾಗಿ ಹುಟ್ಟಿ ಆ ರಕ್ತವನ್ನೂ ಅಮೇಧ್ಯವನ್ನೂ ತಿನ್ನುವವರಾಗುತ್ತಾರೆ. ಮತ್ತು ಒಂದು ಸಾವಿರ ವರುಷಗಳವರೆಗೆ ಅಮೇಧ್ಯದ ಹುಳುವಾಗಿ ಕೀವು ಮುಂತಾದ ಕೊಳೆಯನ್ನು ತಿನ್ನುತ್ತಿರುವರು. ವೇದದಲ್ಲಿ ಕಾಣ್ವಶಾಖೆಯಲ್ಲಿ ಬ್ರಹ್ಮನು ಈ ಪ್ರಕಾರವಾಗಿ ಹೇಳಿರುವನು. ಈ ಪ್ರಕಾರ ಹೇಳಿ ಅಳುತ್ತಿರುವ ಹೊರಡಲುಸಿದ್ಧನಾಗಿರುವ ಆ ಉದ್ಧವನನ್ನು ಕುರಿತು ಕೃಷ್ಣನ ಅಗಲುವಿಕೆಯಿಂದ ಕಾತರಳಾಗಿ ಅಳುತ್ತಿರುವ ಆ ರಾಧಿಕೆಯು ಮತ್ತೆ ಇಂತೆಂದಳು.

|| ರಾಧಿಕೋವಾಚ ||

ಗಚ್ಛ ವತ್ಸ ಮಧುಪುರೀಂ ಸರ್ವಂ ಬೋಧಯ ಮಾಧವಂ || ೫೫ ||

ಯಥಾ ಪಶ್ಯಾಮಿ ಗೋವಿಂದಂ ಪ್ರಯತ್ನೇನ ತಥಾ ಕುರು ।
ನಿಷ್ಫಲಂ ಚ ಗತಂ ಜನ್ಮ ಗಚ್ಛ ಮಿಥ್ಯಾದುರಾಶಯಾ || ೫೬ ||

ಆಶಾ ಹಿ ಪರಮಂ ದುಃಖಂ ನೈರಾಶ್ಯಂ ಪರಮಂ ಸುಖಂ ।
ಪಶ್ಚಾದ್ವಿಚಿಂತ್ಯ ಗೋವಿಂದಂ ಜೀವನ್ಮುಕ್ತಾ ಬಭೂವ ಸಾ || ೫೭ ||

ಇತ್ಯುಕ್ತ್ವಾ ರಾಧಿಕಾ ತತ್ರ ರುರೋದ ಚ ಭೃಶಂ ಪುನಃ ।
ಪ್ರಣಮ್ಯ ತಾಂ ರುದಂತೀಂ ಚ ಯಶೋದಾಭವನಂ ಯಯೌ || ೫೮ ||

ಅಥೋದ್ಧವೇ ಗತೇ ರಾಧಾ ಮೂರ್ಚ್ಛಾಂ ಸಂಪ್ರಾಪ ನಾರದ ।
ತತ್ಯಾಜ ಚೇತನಾಂ ಶಶ್ವದ್ಬಭೂವ ಧ್ಯಾನತತ್ಪರಾ || ೫೯ ||

---

೫೫. ರಾಧಿಕೆಯು ಹೇಳುತ್ತಾಳೆ:— ಎಲೈ ಉದ್ಧವಕುಮಾರನೇ! ಮಧುರಾ ಪಟ್ಟಣಕ್ಕೆ ಹೋಗುವವನಾಗು. ಮಾಧವನನ್ನು ಕುರಿತು ಇಲ್ಲಿಯ ವಿಷಯಗಳನ್ನೆಲ್ಲವನ್ನೂ ತಿಳಿಸುವವನಾಗು.

೫೬. ನಾನು ಯಾವರೀತಿಯಿಂದ ಗೋವಿಂದನನ್ನು ನೋಡುವೆನೋ ಆ ರೀತಿಯಲ್ಲಿ ಪ್ರಯತ್ನಮಾಡು. ದುರಾಶೆಯಿಂದ ಕೂಡಿದ ಜನ್ಮವು ವ್ಯರ್ಥವಾಗಿ ಹೋಯಿತು.

೫೭. ಆಶೆಯೆಂಬುದು ಮಹಾದುಃಖಕರವಾದುದು. ನಿರಾಶೆಯೆಂಬುದು ಅತ್ಯಂತ ಸುಖಕರವು. ಕೊನೆಗಾಲದಲ್ಲಿಯೂ ಕೂಡ ಗೋವಿಂದನನ್ನು ಸ್ಮರಣೆಮಾಡಿ ಆ ಮೂಲಕ ಸ್ತ್ರೀಯು ಕೂಡ ಜೀವನ್ಮುಕ್ತಳಾಗಿರುವಳು.

೫೮. ಈ ಪ್ರಕಾರ ಹೇಳಿ ರಾಧಿಕೆಯು ಮತ್ತೆ ಬಹಳವಾಗಿ ಅತ್ತಳು. ಉದ್ಧವನು ಅಳುತ್ತಿರುವ ಆ ರಾಧೆಗೆ ನಮಸ್ಕಾರಮಾಡಿ ಯಶೋದೆಯ ಮನೆಗೆ ಹೋದನು.

೫೯. ಎಲೈ ನಾರದನೇ! ಅನಂತರ ಉದ್ಧವನು ಹೊರಟುಹೋಗಲು ರಾಧೆಯು ಮೂರ್ಚ್ಛೆಯನ್ನು ಹೊಂದಿದಳು. ಜ್ಞಾನಶೂನ್ಯಳಾಗಿ ಮತ್ತೆ ಮತ್ತೆ ಧ್ಯಾನತತ್ಪರಳಾದಳು.

ಪಂಕಸ್ಥೇ ಪಂಕಜದಲೇ ಸಜಲೇ ಶಯನೇ ಮುನೇ ।
ಗೋಪ್ಯಸ್ತಾಂ ಸ್ಥಾಪಯಾಮಾಸುಃ ಸಾಶ್ರುನೇತ್ರೋತ್ಪಲಾ ವರಾಃ ॥ ೬೦ ॥

ತತ್ಸ್ಪರ್ಶಮಾತ್ರಾಚ್ಛಯನಂ ಭಸ್ಮೀಭೂತಂ ಬಭೂವ ಹ ।
ಪುನಃ ಸ್ನಿಗ್ಧಸ್ಥಲೇ ಸ್ನಿಗ್ಧನಿಚೋಲೇ ಚಂದನಾಂತಿಕೇ ॥ ೬೧ ॥

ಪುನಸ್ತಾಂ ಸ್ಥಾಪಯಾಮಾಸುರ್ವಿರಹಜ್ವರಕಾತರಾಂ ।
ಸಹಸಾ ಶುಷ್ಕತಾಂ ಪ್ರಾಪ ಸುಗಂಧಿ ಚಂದನೋದಕಂ ॥ ೬೨ ॥

ನಿಮೇಷೇಣ ಶತಯುಗಂ ತದ್ಬಭೂವೋದ್ಧವಂ ವಿನಾ ।
ಹಾಹೋದ್ಧವೋದ್ಧವ ಹರಿಂ ಶೀಘ್ರಂ ಗತ್ವಾ ವದೇತಿ ಚ ॥ ೬೩ ॥

ಸಮಾನಯ ಹರಿಂ ಶೀಘ್ರಂ ಮತ್ಪ್ರಾಣೇಶ್ವರಮಿತ್ಯಪಿ ।
ಇತ್ಯುಕ್ತವಚನಾಂ ದೀನಾಂ ಸಂತಾಪಹೃತಚೇತಸಾಂ ॥ ೬೪ ॥

---

೬೦. ಗೋಪಿಯರು ಕಣ್ಣೀರು ಸುರಿಸುತ್ತಾ ಆ ರಾಧೆಯನ್ನು ನೀರಿನ ಮೇಲೆ ಕಮಲದೆಲೆಗಳಿಂದ ಮಾಡಿದ ಹಾಸಿಗೆಯ ಮೇಲೆ ಮಲಗಿಸಿದರು.

೬೧. ಅವಳ ಸ್ಪರ್ಶಮಾತ್ರದಿಂದ ಆ ಹಾಸಿಗೆಯು ಬೂದಿಯಾಯಿತು ಮತ್ತೆ ತಣ್ಣಗಿರುವ ಸ್ಥಳದಲ್ಲಿ ತಣ್ಣಗಿರುವ ಮೇಲುಹಾಸಿಗೆಯ ಮೇಲೆ ಚಂದನಗಳಿಂದ ಪರಿಷ್ಕರಿಸಿರುವ ಹಾಸಿಗೆಯ ಮೇಲೆ ಮಲಗಿಸಿದರು.

೬೨. ವಿರಹಜ್ವರದಿಂದ ಭಯಗೊಂಡಿರುವ ಆ ರಾಧೆಯನ್ನು ಆ ಪ್ರಕಾರವಾದ ಹಾಸಿಗೆಯಲ್ಲಿ ಮಲಗಿಸಲು ಆ ಹಾಸಿಗೆಯ ಮೇಲೆ ಹಾಕಿದ್ದ ಗಂಧದ ನೀರೆಲ್ಲವೂ ಜಾಗ್ರತೆಯಾಗಿ ಒಣಗಿಹೋಯಿತು.

೬೩-೬೪. ಉದ್ಧವನ ಅಗಲುವಿಕೆಯಿಂದ ರಾಧೆಗೆ ಒಂದು ನಿಮಿಷ ಕಾಲವು ನೂರು ಯುಗಗಳಾಗಿ ಪರಿಣಮಿಸಿತು. ಹಾ ಹಾ ಉದ್ಧವ ! ಉದ್ಧವ ಜಾಗ್ರತೆಯಾಗಿ ಹೋಗಿ ಆ ಹರಿಗೆ ಸಕಲ ಸಮಾಚಾರಗಳನ್ನೂ ಹೇಳುವವನಾಗು. ಮತ್ತು ಆ ನನ್ನ ಪ್ರಾಣೇಶ್ವರನಾದ ಶ್ರೀಹರಿಯನ್ನು ಶೀಘ್ರವಾಗಿ ಇಲ್ಲಿಗೆ ಕರೆದುಕೊಂಡುಬಾ. ಈ ಪ್ರಕಾರವಾಗಿ ಮಾತನಾಡುತ್ತಿರುವ ದುಃಖಿತಳಾದ ವಿರಹಸಂತಾಪದಿಂದ ಜ್ಞಾನವಿಲ್ಲ

**ರುರುದುರ್ಗೋಪಿಕಾಃ ಸರ್ವಾ ರಾಧಾಂ ಕೃತ್ವಾ ಸ್ವವಕ್ಷಸಿ ।**
**ಚೇತನಾಂ ಕಾರಯಾಮಾಸುರ್ಬೋಧಯಾಮಾಸುರೀಪ್ಸಿತಂ ॥ ೬೫ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ**
**ಉತ್ತರಾರ್ಧೇ ನಾರಾಯಣ ನಾರದ ಸಂವಾದೇ**
**ರಾಧೋದ್ಧವಸಂವಾದೇ**
**ಸಪ್ತನವತಿತಮೋಽಧ್ಯಾಯಃ.**

---

ದವಳಾದ ರಾಧೆಯನ್ನು ಎದೆಗೆ ಅಪ್ಪಿಕೊಂಡವರಾಗಿ ಅತ್ತರು ಮತ್ತು ಅವಳಿಗೆ ಇಷ್ಟವಾದ ಮಾತುಗಳನ್ನು ಹೇಳುತ್ತ ಅವಳನ್ನು ಎಚ್ಚರಗೊಳಿಸಿದರು.

ಇಂತು ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿನ ನಾರಾಯಣ ನಾರದ ಸಂವಾದದಲ್ಲಿನ
ರಾಧೋದ್ಧವ ಸಂವಾದದಲ್ಲಿ ತೊಂಭತ್ತೇಳನೆಯ
ಅಧ್ಯಾಯವು ಸಮಾಪ್ತವಾದುದು.



## ತೊಂಭತ್ತೇಳನೆಯ ಅಧ್ಯಾಯದ ಸಾರಾಂಶ.

ಮಧುರಾಪಟ್ಟಣವನ್ನು ಕುರಿತು ಹೊರಟ ಉದ್ಧವನಿಗೆ ಸಕಲ ಸತ್ಕಾರಗಳನ್ನು ಮಾಡಿದ ರಾಧೆಯು ಮತ್ತೊಮ್ಮೆ ಶ್ರೀಕೃಷ್ಣಪರಮಾತ್ಮನ ಮಹಾತ್ಮ್ಯವನ್ನು ವರ್ಣಿಸಿ ಹೇಳಿದಳು. ಆನಂದಬಾಷ್ಪದಿಂದ ತೊಯ್ದು ಹೋದ ಉದ್ಧವನು ರಾಧಾ ಮಾಧವರ ಮಹಿಮೆಯನ್ನೂ ಅವರಿಂದ ವೃಂದಾವನಕ್ಕೆ ಒದಗಿದ ಮಹಾತ್ಮ್ಯವನ್ನೂ ಸ್ಮರಿಸಿಕೊಂಡು ಅಲ್ಲಿಂದ ಯಶೋದೆಯ ಮಂದಿರಕ್ಕೆ ತೆರಳಿದನು. ಉದ್ಧವನು ಹೊರಟ ನಂತರ ರಾಧೆಯು, ಶ್ರೀಕೃಷ್ಣನ ವಿರಹದಿಂದ ಕಾತರಳಾಗಿ ಗೋಳಾಡತೊಡಗಿದಳು. ಆಗ ಗೋಪಿಯರೆಲ್ಲರೂ ರಾಧೆಯನ್ನು ಸಮಾಧಾನಗೊಳಿಸಿದರು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಷ್ಟನವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಅಥೋದ್ಧವೋ ಯಶೋದಾಂ ಚ ಪ್ರಣಮ್ಯ ತ್ವರಯಾ ಮುದಾ ।
ಖರ್ಜೂರಕಾನನಂ ವಾಮೇ ಕೃತ್ವಾ ಚ ಯಮುನಾಂ ಯಯೌ || ೧ ||

ಸ್ನಾತ್ವಾ ಭುಕ್ತ್ವಾ ಚ ತತ್ರೈವ ಜಗಾಮ ಮಥುರಾಂ ಪುನಃ ।
ದದರ್ಶ ವಟಮೂಲೇ ಚ ಗೋವಿಂದಂ ರಹಸಿ ಸ್ಥಿತಂ || ೨ ||

ಪ್ರಫುಲ್ಲೋಽಪ್ಯುದ್ಧವಂ ದೃಷ್ಟ್ವಾ ಸಸ್ಮಿತಂ ತಮುವಾಚ ಸಃ ।
ರುದಂತಂ ಶೋಕದಗ್ಧಂ ಚ ಸಾಶ್ರುನೇತ್ರಂ ಚ ಕಾತರಂ || ೩ ||

---

### ತೊಂಭತ್ತೆಂಟನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ:— ಅನಂತರ ಉದ್ಧವನು ಯಶೋದೆಗೆ ನಮಸ್ಕಾರವನ್ನು ಮಾಡಿದವನಾಗಿ ಖರ್ಜೂರವನ್ನು ತನ್ನ ಎಡಭಾಗಕ್ಕೆ ಬಿಟ್ಟುಕೊಂಡವನಾಗಿ ಯಮುನಾನದಿಗೆ ಹೊರಟನು

೨. ಅಲ್ಲಿ ಅವನು ಸ್ನಾನಮಾಡಿ ಭೋಜನವನ್ನೂ ಮಾಡಿದವನಾಗಿ ಮಥುರಾ ಪಟ್ಟಣವನ್ನು ಕುರಿತು ಹೊರಟನು. ಅಲ್ಲಿ ಆಲದಮರದ ಬುಡದಲ್ಲಿ ಏಕಾಂತದಲ್ಲಿರುವ ಗೋವಿಂದನನ್ನು ನೋಡಿದನು.

೩. ಉದ್ಧವನನ್ನು ಕಂಡು ಸಂತೋಷಗೊಂಡ ಗೋವಿಂದನು, ದುಃಖದಿಂದ ಸಂತಪ್ತನಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅಳುತ್ತ ಕಾತರನಾಗಿರುವ ಆ ಉದ್ಧವನನ್ನು ಕುರಿತು ಮಂದಹಾಸಪೂರ್ವಕವಾಗಿ ಮಾತನಾಡಿದನು.

॥ ಶ್ರೀ ಭಗವಾನುವಾಚ ॥

ಆಗಚ್ಛೋದ್ಧವ ಕಲ್ಯಾಣ ರಾಧಾ ಜೀವತಿ ಜೀವತಿ ।
ಕಲ್ಯಾಣಯುಕ್ತಾ ಗೋಪ್ಯಶ್ಚ ಜೀವಂತಿ ವಿರಹಜ್ವರಾತ್ ॥ ೪ ॥

ಶುಭಂ ಗೋಪಶಿಶೂನಾಂ ಚ ವತ್ಸಾನಾಂ ಚ ಗವಾಮಪಿ ।
ಮಾತಾ ಮೇ ಪುತ್ರವಿರಹಾದ್ಯಶೋದಾ ಕೀದೃಶೀ ಚ ಸಾ ॥ ೫ ॥

ಮಮ ಬಂಧೋ ಯಥಾರ್ಥಂ ತತ್ತ್ವಂ ದೃಷ್ಟ್ವಾ ಕಿಮುವಾಚ ಸಾ ।
ತ್ವಯೋಕ್ತಾ ಜನನೀ ಕಿಂ ವಾ ಪುನಃ ಸಾ ಕಿಮುವಾಚ ಮಾಂ ॥ ೬ ॥

ದೃಷ್ಟಂ ತದ್ಯಮುನಾಕೂಲಂ ಪುಣ್ಯಂ ವೃಂದಾವನಂ ವನಂ ।
ನಿರ್ಜನೋಪವನಾಘೈಶ್ಚ ಸುರಮ್ಯಂ ರಾಸಮಂಡಲಂ ॥ ೭ ॥

ರಮ್ಯಂ ಕುಂಜಕುಟೀರೌಘಂ ರಮ್ಯಂ ಕ್ರೀಡಾಸರೋವರಂ ।
ಪುಷ್ಪೋದ್ಯಾನಂ ವಿಕಸಿತಂ ಸಂಕುಲಂ ಚ ಮಧುವ್ರತೈಃ ॥ ೮ ॥

---

೪. ಶ್ರೀ ಭಗವಂತನು ಹೇಳುತ್ತಾನೆ :— ಎಲೈ ಮಂಗಳಕರನಾದ ಉದ್ಧವನೇ! ಇತ್ತ ಬರುವವನಾಗು. ರಾಧೆಯು ಜೀವದಿಂದಿದ್ದಾಳೆಯೇ? ಮಂಗಳಗಳಿಂದ ಕೂಡಿದ ಗೋಪಿಯರು ವಿರಹಜ್ವರಯುಕ್ತರಾಗಿ ಜೀವಿಸಿರುತ್ತಾರೆಯೇ ?

೫. ಗೋಪಬಾಲಕರೆಲ್ಲರೂ ಸುಖದಿಂದಿರುವರೇ? ಗೋವುಗಳೂ, ಕರುಗಳೂ ಕೂಡ ಸುಖದಿಂದಿವೆಯೇ ? ನನ್ನ ತಾಯಿಯಾದ ಯಶೋದೆಯು ಮಗನ ಅಗಲುವಿಕೆಯಿಂದ ಏನಾಗಿರುವಳು ?

೬. ನನ್ನ ತಾಯಿಯು ನಿನ್ನನ್ನು ನೋಡಿ ಏನೆಂದು ಹೇಳಿದಳು? ನಿನ್ನಿಂದ ಉತ್ತರಹೇಳಲ್ಪಟ್ಟವಳಾಗಿ ನನ್ನನ್ನು ಕುರಿತು ಮತ್ತೆ ಏನನ್ನು ಹೇಳಿದಳು? ಎಲೈ ಬಾಂಧವನೇ! ಯಥಾರ್ಥವಾದ ವಿಷಯಗಳನ್ನು ನನಗೆ ತಿಳಿಸುವವನಾಗು.

೭. ಆ ಯಮುನಾ ನದಿಯ ದಡವನ್ನೂ ಪುಣ್ಯಕರವಾದ ವೃಂದಾವನವೆಂಬ ವನವನ್ನೂ ನೋಡಿದೆಯೋ? ಮತ್ತು ಜನರಹಿತವಾದ ಉದ್ಯಾನವನಗಳ ಗುಂಪಿನಿಂದ ಕೂಡಿರುವ ಮನೋಹರವಾದ ರಾಸಮಂಡಲವನ್ನೂ ನೋಡಿದೆಯೋ ?

೮. ಮನೋಹರವಾದ ಕುಂಜವನದ ಮನೆಗಳ ಗುಂಪನ್ನೂ ರಮಣೀಯವಾದ ಆಟದ ಸರೋವರಗಳನ್ನೂ ನೋಡಿದೆಯೋ? ಅರಳಿದ ಹೂಗಳುಳ್ಳದ್ದಾಗಿ ದುಂಬಿಗಳಿಂದ ನಿಬಿಡವಾದ ಹೂವಿನ ತೋಟವನ್ನು ನೋಡಿದೆಯೋ?

ಭಾಂಡೀರಾಖ್ಯೋ ವಟೋ ದೃಷ್ಟಃ ಸುಸ್ನಿಗ್ಧೋ ಬಾಲಕಾನ್ವಿತಃ ।
ದೃಷ್ಟೋ ಗೋಷ್ಠೋ ಗವಾಂ ದೃಷ್ಟಂ ಗೋಕುಲಂ ಗೋಕುಲವ್ರಜಂ ॥೯॥

ಯದಿ ಜೀವತಿ ರಾಧಾ ಸಾ ದೃಷ್ಟ್ವಾ ತ್ವಾಂ ಕಿಮುವಾಚ ಮಾಂ ।
ತತ್ಸರ್ವಂ ವದ ಹೇ ಬಂಧೋ ಚಾಂದೋಲಯತಿ ಮೇ ಮನಃ ॥ ೧೦ ॥

ಕಿಮೂಚುರ್ಗೋಪಿಕಾಃ ಸರ್ವಾಃ ಕಿಮೂಚುರ್ಗೋಪಬಾಲಕಾಃ ।
ಗೋಪಾಶ್ಚ ವೃದ್ಧಾಃ ಕಿಂವೋಚುರ್ವಯಸ್ಯಾ ಜನಕಸ್ಯ ಮೇ ॥ ೧೧ ॥

ಬಲದೇವಸ್ಯ ಜನನೀ ಕಿಮೂಚೇ ರೋಹಿಣೀ ಸತೀ ।
ಕಿಮೂಚುರಪರಾಸ್ತಾತ ಬಂಧುವಲ್ಲಭಬಲ್ಲವಾಃ ॥ ೧೨ ॥

ಕಿಂ ಭುಕ್ತಂ ಕಿಮಪೂರ್ವಂ ವಾ ದತ್ತಂ ಮಾತ್ರಾ ಚ ರಾಧಯಾ ।
ಕೀದೃಗ್ವಾಕ್ಯಂ ಸುಮಧುರಂ ಸಂಭಾಷಾ ಕೀದೃಶೀತಿ ಚ ॥ ೧೩ ॥

---

೯. ಅತ್ಯಂತ ಕೋಮಲವಾಗಿ ಬಾಲಕರಿಂದ ಕೂಡಿರುವ ಭಾಂಡೀರವೆಂಬ ಹೆಸರಿನ ಆಲದಮರವನ್ನು ನೋಡಿದೆಯೋ ? ಗೋವುಗಳ ಕೊಟ್ಟಿಗೆಯನ್ನು ನೋಡಿದೆಯೋ ? ಗೋಕುಲವನ್ನೂ ಗೋಕುಲದ ವ್ರಜವನ್ನೂ ನೋಡಿದೆಯೋ ?

೧೦. ರಾಧೆಯು ಬದುಕಿರುವವಳಾದರೆ ನಿನ್ನನ್ನು ನೋಡಿ ನನ್ನ ವಿಷಯವನ್ನೇನೆಂದು ಹೇಳಿದಳು ? ಎಲೈ ಬಾಂಧವನೇ ! ಅದೆಲ್ಲವನ್ನೂ ನನಗೆ ಹೇಳುವವನಾಗು- ನನ್ನ ಮನಸ್ಸು ಉಯ್ಯಾಲೆಯಂತೆ ತೂಗುತ್ತಲಿದೆ.

೧೧. ಗೋಪಿಯರೆಲ್ಲರೂ ಏನನ್ನು ಹೇಳಿದರು ? ಗೋಪಬಾಲಕರು ಏನೆಂದು ಹೇಳಿದರು ? ನನ್ನ ತಂದೆಯ ಸ್ನೇಹಿತರಾದ ವೃದ್ಧಗೋಪರು ಏನನ್ನು ಹೇಳಿದರು ?

೧೨. ಬಲದೇವನ ತಾಯಿಯೂ ಪತಿವ್ರತೆಯೂ ಆದ ರೋಹಿಣೀದೇವಿಯು ಏನನ್ನು ನುಡಿದಳು ? ಎಲೈ ಉದ್ಧವನೇ ಇನ್ನೂ ಉಳಿದ ಬಂಧುಪ್ರಿಯರಾದ ಬಲ್ಲವರು ಏನೆಂದು ಮಾತನಾಡಿದರು ?

೧೩. ನೀನು ಅಲ್ಲಿ ಏನನ್ನು ಊಟಮಾಡಿದೆ ! ನನ್ನ ತಾಯಿಯಾದ ಯಶೋದೆಯು ನಿನಗೆ ಅಪೂರ್ವದಾದುದನ್ನೇನನ್ನು ಕೊಟ್ಟಳು ? ನಿಮ್ಮ ಮಾತುಕತೆಗಳು ಎಂಥವುಗಳಾಗಿದ್ದುವು ? ಎಷ್ಟು ಮಧುರವಾಗಿದ್ದುವು ? ಎಂಥಾ ವಾಕ್ಯಗಳನ್ನು ಮಾತನಾಡಿದಿರಿ ? ಈ ವಿಷಯಗಳನ್ನು ತಿಳಿಸುವವನಾಗು.

ಗೋಪಾನಾಂ ಗೋಪಿಕಾನಾಂ ಚ ಶಿಶೂನಾಂ ಮಾತುರೇವ ಚ ।
ರಾಧಾಯಾಶ್ಚಾಪಿ ಕೀದೃಗ್ವಾ ಮಯಿ ಪ್ರೇಮೋದ್ಧವಾಧಿಕಂ ॥ ೧೪ ॥

ಮಾಂ ಚ ಸ್ಮರತಿ ಮಾತಾ ಮೇ ಮಾಂ ಚ ಸ್ಮರತಿ ರೋಹಿಣೀ ।
ಮಾಂ ಚ ಸ್ಮರತಿ ಸಾ ರಾಧಾ ಮತ್ಪ್ರೇಮವಿರಹಾಕುಲಾ ॥ ೧೫ ॥

ಮಾಂ ಚ ಸ್ಮರಂತಿ ಗೋಪ್ಯಶ್ಚ ಗೋಪಾಶ್ಚ ಗೋಪಬಾಲಕಾಃ ।
ಭಾಂಡೀರೇ ವಟಮೂಲೇ ಚ ಬಾಲಾಃ ಕ್ರೀಡಂತಿ ಮಾಂ ವಿನಾ ॥ ೧೬ ॥

ದತ್ತಮನ್ನಂ ಬ್ರಾಹ್ಮಣೀಭಿರ್ಯತ್ರ ಭುಕ್ತಂ ಸುಧೋಪಮಂ ।
ಪ್ರಮುದಾ ಬಾಲಕೈಃ ಸಾರ್ಧಂ ಯತ್ತದ್ದೃಷ್ಟಂ ಪರೀಪ್ಸಿತಂ ॥ ೧೭ ॥

ಇಂದ್ರಯಾಗಸ್ಥಲಂ ದೃಷ್ಟಂ ದೃಷ್ಟೋ ಗೋವರ್ಧನೋ ವರಃ ।
ಬ್ರಹ್ಮಣಾ ಚ ಹೃತಾ ಗಾವೋ ಯತ್ರ ತದ್ದೃಷ್ಟಮುತ್ತಮಂ ॥ ೧೮ ॥

---

೧೪. ಎಲೈ ಉದ್ಧವನೇ : ಗೋಪರುಗಳಿಗೂ, ಗೋಪಿಯರಿಗೂ ಮಕ್ಕಳುಗಳಿಗೂ ತಾಯಿಯರಿಗೂ ರಾಧೆಗೂ ಕೂಡ ನನ್ನ ಮೇಲೆ ಎಷ್ಟರಮಟ್ಟಿಗೆ ಪ್ರೀತಿಯಿರುವುದು ?

೧೫. ನನ್ನ ತಾಯಿಯು ನನ್ನನ್ನು ಜ್ಞಾಪಿಸಿಕೊಳ್ಳುತ್ತಾಳೆಯೇ ? ರೋಹಿಣೀದೇವಿಯು ನನ್ನನ್ನು ಜ್ಞಾಪಿಸಿಕೊಳ್ಳುತ್ತಾಳೆಯೇ ? ನನ್ನ ಪ್ರೇಮದ ಅಗಲುವಿಕೆಯಿಂದ ದುಃಖಗೊಂಡಿರುವ ಆ ರಾಧೆಯು ನನ್ನನ್ನು ಜ್ಞಾಪಿಸಿಕೊಳ್ಳುತ್ತಾಳೆಯೇ ?

೧೬. ಗೋಪಿಯರೂ ಗೋಪರೂ ಗೋಪಬಾಲಕರೂ ಕೂಡ ನನ್ನನ್ನು ಜ್ಞಾಪಿಸಿಕೊಳ್ಳುತ್ತಾರೆಯೇ ? ಹುಡುಗರು ನನ್ನನ್ನು ಬಿಟ್ಟು ಭಾಂಡೀರವೆಂಬ ಆಲದ ಮರದ ತಳಭಾಗದಲ್ಲಿ ಆಟವನ್ನಾಡುತ್ತಾರೆಯೇ ?

೧೭. ಬ್ರಾಹ್ಮಣ ಸ್ತ್ರೀಯರಿಂದ ಕೊಡಲ್ಪಟ್ಟ ಅಮೃತದಂತಿದ್ದ ಅನ್ನವನ್ನು ನಾವು ಯಾವ ಸ್ಥಳದಲ್ಲಿ ಸ್ತ್ರೀಯರಿಂದಲೂ ಹುಡುಗರಿಂದಲೂ ಕೂಡಿದವರಾಗಿ ಊಟ ಮಾಡಿದ್ದೆವೋ ಆ ಇಷ್ಟವಾದ ಸ್ಥಳವನ್ನು ನೋಡಿದೆಯೋ ?

೧೮. ಇಂದ್ರನು ಯಾಗಮಾಡಿದ ಸ್ಥಳವನ್ನು ನೋಡಿದೆಯೋ ? ಶ್ರೇಷ್ಠವಾದ ಗೋವರ್ಧನವೆಂಬ ಬೆಟ್ಟವನ್ನು ನೋಡಿದೆಯೋ ? ಯಾವ ಸ್ಥಳದಲ್ಲಿ ಬ್ರಹ್ಮನಿಂದ ಗೋವುಗಳು ಅಪಹರಿಸಲ್ಪಟ್ಟಿದ್ದುವೋ ಆ ಉತ್ತಮ ಪ್ರದೇಶವನ್ನು ನೋಡಿದೆಯೋ ?

ಶ್ರೀಕೃಷ್ಣಸ್ಯ ವಚಃ ಶ್ರುತ್ವಾ ಶೋಕೋಕ್ತಂ ಮಧುರಾನ್ವಿತಂ ।
ಉದ್ಧವಃ ಸಮುವಾಚೇದಂ ಭಗವಂತಂ ಸನಾತನಂ ॥ ೧೯ ॥

॥ ಉದ್ಧವ ಉವಾಚ ॥

ಯದ್ಯದುಕ್ತಂ ತ್ವಯಾ ನಾಥ ಸರ್ವಂ ದೃಷ್ಟಂ ಯಥೇಪ್ಸಿತಂ ।
ಸಫಲಂ ಜೀವನಂ ಜನ್ಮ ಕೃತಮತ್ರೈವ ಭಾರತೇ ॥ ೨೦ ॥

ದೃಷ್ಟಂ ಭಾರತಸಾರಂ ಚ ಪುಣ್ಯಂ ವೃಂದಾವನಂ ವನಂ ।
ತತ್ಸಾರಂ ವ್ರಜಭೂಮೌ ಚ ಸುರಮ್ಯಂ ರಾಸಮಂಡಲಂ ॥ ೨೧ ॥

ತತ್ಸಾರಭೂತಾ ಗೋಲೋಕವಾಸಿನ್ಯೋ ಗೋಪಿಕಾ ವರಾಃ ।
ದೃಷ್ಟ್ವಾ ತತ್ಸಾರಭೂತಾ ಚ ರಾಧಾ ರಾಸೇಶ್ವರೀ ಪರಾ ॥ ೨೨ ॥

ಕದಲೀವನಮಧ್ಯೇ ಚ ನಿರ್ಜನೇ ಸುಹೃದಸ್ಥಲೇ ।
ಪಂಕಸ್ಥೇ ಪಂಕಜದಲೇ ಸಜಲೇ ಚಂದನಾರ್ಚಿತೇ ॥ ೨೩ ॥

---

೧೯. ಉದ್ಧವನು ಶ್ರೀಕೃಷ್ಣನ ದುಃಖದಿಂದ ಹೇಳಲ್ಪಟ್ಟ ಮಧುರವಾದ ಮಾತನ್ನು ಕೇಳಿ ಸನಾತನನಾದ ಭಗವಂತನನ್ನು ಕುರಿತು ಇಂತೆಂದನು.

೨೦. ಉದ್ಧವನು ಹೇಳುತ್ತಾನೆ:— ಎಲೈ ಪ್ರಭುವೇ ! ನಿನ್ನಿಂದ ಹೇಳಲ್ಪಟ್ಟುದಾವುದೋ ಅದೆಲ್ಲವನ್ನೂ ಇಷ್ಟದಿಂದ ನೋಡಿದೆನು. ಈ ಭಾರತ ಭೂವಿಯಲ್ಲಿಯೇ ನನ್ನ ಜನ್ಮವನ್ನು ಸಫಲವಾದುದನ್ನಾಗಿ ಮಾಡಿಕೊಂಡಿರುವೆನು.

೨೧. ಭಾರತದ ಸಾರಭೂತವಾದ ಪುಣ್ಯಕರವಾದ ವೃಂದಾವನವೆಂಬ ವನವನ್ನು ನೋಡಿದೆನು ಅದರಲ್ಲಿಯೂ ಸಾರಭೂತವಾದ ಗೋಕುಲದಲ್ಲಿರುವ ಮನೋಹರವಾದ ರಾಸಮಂಡಲವನ್ನೂ ನೋಡಿದೆನು.

೨೨. ಆ ರಾಸಮಂಡಲದಲ್ಲಿಯೂ ಸಾರಭೂತರಾದ ಗೋಲೋಕದಲ್ಲಿ ವಾಸಮಾಡುವವರೂ ಶ್ರೇಷ್ಠರೂ ಆದ ಗೋಪಿಕೆಯರನ್ನು ನೋಡಿದೆನು. ಅವರಲ್ಲಿಯೂ ಸಾರಭೂತಳಾದ ರಾಸೇಶ್ವರಿಯೂ ಉತ್ತಮಳೂ ಆದ ರಾಧೆಯನ್ನೂ ಕೂಡ ನೋಡಿದೆನು.

೨೩–೨೫. ಆ ರಾಧೆಯು ಬಾಳೆಯ ತೋಟದ ಮಧ್ಯದಲ್ಲಿ ನಿರ್ಜನವಾಗಿಯೂ ಗೆಳತಿಯರಿಂದ ಕೂಡಿದುದೂ ಆಗಿರುವ ಪ್ರದೇಶದಲ್ಲಿ ಕೆಸರಿನಲ್ಲಿರುವ ಕಮಲದ ದಳ

ಶಯನೇತಿವಿಷಣ್ಣಾ ಸಾ ರತ್ನಭೂಷಣವರ್ಜಿತಾ ।
ಅತೀವ ಮಲಿನಾ ಕ್ಷೀಣಾಚ್ಛಾದಿತಾ ಶುಕ್ಲವಾಸಸಾ ॥ ೨೪ ॥

ಸೇವಿತಾ ಸಖಿಭಿಸ್ತತ್ರ ಸತತಂ ಶ್ವೇತಚಾಮರೈಃ ।
ಕೃಶೋದರೀ ನಿರಾಹಾರಾ ಕ್ಷಣಂ ಶ್ವಸಿತಿ ಚ ಕ್ಷಣಂ ॥ ೨೫ ॥

ಕ್ಷಣಂ ಜೀವತಿ ಕಿಂ ಸಾ ವಾ ವಿರಹಜ್ವರಪೀಡಿತಾ ।
ಕಿಂ ವಾ ಜಲಂ ಸ್ಥಲಂ ಕಿಂ ವಾ ನಕ್ತಂ ಕಿಂ ವಾ ದಿನಂ ಹರೇ ॥ ೨೬ ॥

ಪರಂ ಪಶುಂ ನ ಜಾನಾತಿ ಕಿಂ ಪರಂ ಕಃ ಸುಬಾಂಧವಃ ।
ಬಾಹ್ಯಜ್ಞಾನವಿರಹಿತಾ ಧ್ಯಾಯಮಾನಾ ಪದಂ ತವ ॥ ೨೭ ॥

ತ್ರೈಲೋಕ್ಯೇ ಯಶಸಾ ಭಾತಿ ತಸ್ಮೃತ್ಯುರ್ಯಶಸಂಭವಃ ।
ಸ್ತ್ರೀಹತ್ಯಾಂ ನೈವ ವಾಂಛಂತಿ ಜ್ಞಾನಹೀನಾಶ್ಚ ದಸ್ಯವಃ ॥ ೨೮ ॥

---

ಗಳನ್ನು ತಂದು ಗಂಧದ ನೀರಿನಲ್ಲಿ ಅದ್ದಿ ಹಾಸಿರುವ ಹಾಸಿಗೆಯ ಮೇಲೆ ಮಲಗಿಕೊಂಡು ವ್ಯಥೆಪಡುತ್ತಿರುವಳು. ರತ್ನಾಭರಣಗಳನ್ನು ತೆಗೆದುಹಾಕಿರ.ವಳು. ಬಹಳ ಮಲಿನವಾಗಿರುವಳಲ್ಲದೆ ಕ್ಷೀಣವಾಗಿರುವಳು. ಬಿಳಿಯ ಬಟ್ಟೆಯನ್ನು ಧರಿಸಿರುವಳು. ಅಲ್ಲಿ ಸಖಿಯರಿಂದ ಬಿಳಿಯ ಚಾಮರವನ್ನು ಹಿಡಿದು ಯಾವಾಗಲೂ ಬೀಸಲ್ಪಡುತ್ತಿರುವವಳಾಗಿ ಆಹಾರವಿಲ್ಲದೆ ಕೃಶವಾದ ಹೊಟ್ಟೆಯಿಂದ ಕೂಡಿ ಕ್ಷಣಕ್ಷಣದಲ್ಲಿಯೂ ನಿಟ್ಟುಸಿರನ್ನು ಬಿಡುತ್ತಿರುವಳು.

೨೬–೨೭. ವಿರಹಜ್ವರದಿಂದ ಪೀಡಿತಳಾದ ಆ ರಾಧೆಯು ಒಂದು ಕ್ಷಣಕಾಲ ಬದುಕುತ್ತಾಳೆಯೋ ಇಲ್ಲವೋ ತಿಳಿಯುವುದಿಲ್ಲ. ಎಲೈ ಹರಿಯೇ ! ಯಾವುದು ನೀರು ಯಾವುದು ಸ್ಥಳವು, ಯಾವುದು ರಾತ್ರಿ ಯಾವುದು ಹಗಲು, ಯಾವುದು ಪಶುವು ಯಾರು ಮನುಷ್ಯರು ಎಂಬುದನ್ನು ಕೂಡ ಅವಳು ತಿಳಿದುಕೊಳ್ಳಲಾರಳು ಮತ್ತು ಯಾರು ಬಂಧುಗಳು ಯಾರು ಪರರು ಎಂಬುದನ್ನೂ ಕೂಡ ಅರಿಯದವಳಾಗಿರುತ್ತಾಳೆ. ಹೊರಗಿನ ಪ್ರಪಂಚದ ಜ್ಞಾನವೇ ಇಲ್ಲದವಳಾಗಿ ನಿನ್ನ ಪಾದವನ್ನೇ ಯಾವಾಗಲೂ ಧ್ಯಾನಿಸುತ್ತಿರುವಳು.

೨೮. ಅವಳಿಗೆ ಮೃತ್ಯುವೆಂಬುದು ಮೂರು ಲೋಕದಲ್ಲಿಯೂ ಶ್ರೇಷ್ಠವಾಗಿ ಪ್ರಕಾಶಿಸುತ್ತಿದೆ. ಜ್ಞಾನವಿಲ್ಲದವರೂ ಶತ್ರುಗಳೂ ಕೂಡ ಸ್ತ್ರೀಹತ್ಯೆಯನ್ನು ಅಪೇಕ್ಷಿಸುವವರಾಗಿರುವುದಿಲ್ಲ.

ಗಚ್ಛ ಶೀಘ್ರಂ ಜಗನ್ನಾಥ ಕದಲೀವನಮೀಪ್ಸಿತಂ ।
ಬಹಿರ್ಭೂತಾ ನ ಜಗತಾಂ ಸಾ ರಾಧಾ ತ್ವತ್ಪರಾಯಣಾ ॥ ೨೯ ॥

ಅತೀವ ಭಕ್ತಾ ನ ತ್ಯಾಜ್ಯಾ ಪ್ರಭುಣಾ ರಕ್ಷಿತಾ ಸದಾ ।
ನ ಹಿ ರಾಧಾಪರಾ ಭಕ್ತಾ ನ ಭೂತಾ ನ ಭವಿಷ್ಯತಿ ॥ ೩೦ ॥

ಮನ್ಮಥಃ ಶಂಕರಾದ್ಭೀತೋ ಭವಾಂಶ್ಚ ತತ್ಪುರಃ ಸರಃ ।
ಭವದ್ವಿಧಂ ಪತಿಂ ಪ್ರಾಪ್ಯ ಕಾಮದಗ್ಧಾ ಚ ರಾಧಿಕಾ ॥ ೩೧ ॥

ತಸ್ಮಾತ್ಸರ್ವಪರಂ ಕರ್ಮ ತಚ್ಚ ಕೇನಾಪಿ ವಾರ್ಯತೇ ।
ಮಧುರ್ದಹತಿ ಚಂದ್ರಶ್ಚ ಸತತಂ ಕಿರಣೇನ ಚ ॥ ೩೨ ॥

ಶಶ್ವತ್ಸುಗಂಧಿವಾಯುಶ್ಚಾಪ್ಯನಾಥಾ ಸರ್ವಪೀಡಿತಾ ।
ತಪ್ತಕಾಂಚನವರ್ಣಾಭಾ ಸಾಽಧುನಾ ಕಜ್ಜಲೋಪಮಾ ॥ ೩೩ ॥

---

೨೯. ಎಲೈ ಜಗನ್ನಾಥನೇ! ನೀನು ಜಾಗ್ರತೆಯಾಗಿ ನಿನಗೆ ಇಷ್ಟವಾದ ಬಾಳೆಯವನವನ್ನು ಕುರಿತು ಹೊರಡುವವನಾಗು. ನಿನ್ನನ್ನೇ ಧ್ಯಾನಿಸುತ್ತಿರುವ ರಾಧೆಯು ಈ ಪ್ರಪಂಚದಿಂದ ಬೇರ್ಪಡದಿರಲಿ.

೩೦. ನಿನ್ನಿಂದಲೇ ರಕ್ಷಿಸಲ್ಪಟ್ಟಿರುವ ಯಾವಾಗಲೂ ನಿನ್ನ ಭಕ್ತಳಾದ ರಾಧೆಯು ನಿನ್ನಿಂದ ಬಿಡಲ್ಪಡತಕ್ಕವಳಲ್ಲ. ರಾಧೆಯಂತೆ ಅತ್ಯಂತ ಭಕ್ತಳಾದವಳು ಹಿಂದೆ ಇರಲಿಲ್ಲ ಮುಂದೆ ಹುಟ್ಟುವುದಿಲ್ಲ.

೩೧. ಮನ್ಮಥನು ಶಂಕರನ ದೆಸೆಯಿಂದ ಹೆದರಿದವನಾಗಿದ್ದಾನೆ. ನೀನಾದರೊ ಆ ಶಂಕರನಿಗೆ ಮುಂದಾಳಾಗಿರುವೆ. ನಿನ್ನಂಥಾ ಪತಿಯನ್ನು ಹೊಂದಿಯೂ ಕೂಡ ರಾಧೆಯು ಕಾಮಪೀಡಿತಳಾಗಿರುವಳು.

೩೨. ಆ ಮನ್ಮಥನ ದೆಸೆಯಿಂದ ಸಕಲವಿಧವಾದ ಕಾರ್ಯಗಳೂ ನಡೆಸಲ್ಪಡುತ್ತವೆ. ಆ ಮನ್ಮಥನನ್ನು ತಡೆಯುವವರಾರಿದ್ದಾರೆ. ವಸಂತಮಾಸವು ಆ ರಾಧೆಯನ್ನು ಸುಡುತ್ತಲಿದೆ ಮತ್ತು ಚಂದ್ರನು ಯಾವಾಗಲೂ ತನ್ನ ಕಿರಣದಿಂದ ಸುಡುತ್ತಲಿರುವನು.

೩೩. ಮತ್ತೆ ಮತ್ತೆ ಪರಿಮಳದಿಂದ ಕೂಡಿದ ಗಾಳಿಯು ಬೀಸುತ್ತಿದ್ದರೂ ಅನಾಥಳಂತೆ ಸರ್ವದಾ ತೊಂದರೆಗೊಳಿಸಲ್ಪಡುತ್ತಿರುವಳು. ಕರಗಿಸಿದ ಚಿನ್ನದ ಬಣ್ಣದಂತೆ ಕಾಂತಿಯುಳ್ಳ ಆ ರಾಧೆಯು ಈಗ ಕಾಡಿಗೆಗೆ ಸಮನಾಗಿರುವಳು.

ಸುವರ್ಣವರ್ಣಕೇಶೀ ಚ ವಾಸೋವೇಷವಿವರ್ಜಿತಾ ।
ಸ್ವಯಂ ವಿಧಾತಾ ತ್ವದ್ಭಕ್ತಃ ಸುರಾಣಾಂ ಪ್ರವರೋ ವಿಭುಃ ।
ತ್ವದ್ಭಕ್ತಃ ಶಂಕರೋ ದೇವೋ ಯೋಗೀಂದ್ರಾಣಾಂ ಗುರೋರ್ಗುರುಃ ॥ ೩೪ ॥

ಸನತ್ಕುಮಾರಸ್ತ್ವದ್ಭಕ್ತೋ ಗಣೇಶೋ ಜ್ಞಾನಿನಾಂ ವರಃ ।
ಮುನೀಂದ್ರಾಶ್ಚ ಕತಿವಿಧಾಸ್ತ್ವದ್ಭಕ್ತಾ ಧರಣೀತಲೇ ॥ ೩೫ ॥

ತ್ವದ್ಭಕ್ತಾ ಯಾದೃಶೀ ರಾಧಾ ನ ಭಕ್ತಸ್ತಾದೃಶೋಽಪರಃ ।
ಧ್ಯಾಯತೇ ಯಾದೃಶೀ ರಾಧಾ ಸ್ವಯಂ ಲಕ್ಷ್ಮೀರ್ನ ತಾದೃಶೀ ॥ ೩೬ ॥

ಹರಿರಾಯಾತಿ ಚೇತ್ಯೇವಂ ರಾಧಾಗ್ರೇ ಸ್ವೀಕೃತಾ ಮಯಾ ।
ಶೀಘ್ರಂ ಗಚ್ಛ ಮಹಾಭಾಗ ತದೇವ ಸಾರ್ಥಕಂ ಕುರು ॥ ೩೭ ॥

ಉದ್ಧವಸ್ಯ ವಚಃ ಶ್ರುತ್ವಾ ಜಹಾಸೋವಾಚ ಮಾಧವಃ ।
ವೇದೋಕ್ತಂ ಕಥಯಾಮಾಸ ಸಹಿತಂ ಸತ್ಯಸುವ್ರತಂ ॥ ೩೮ ॥

---

೩೪. ಚಿನ್ನದ ಬಣ್ಣದಂತಿರುವ ತಲೆಗೂದಲುಳ್ಳ ರಾಧೆಯು ಉತ್ತಮವಾದ ವಸ್ತ್ರಾಲಂಕಾರಗಳನ್ನು ತೊರೆದಿರುವಳು. ದೇವತೆಗಳಿಗೆಲ್ಲ ಮುಖ್ಯನಾದ ಬ್ರಹ್ಮನು ತಾನೇ ನಿನ್ನ ಭಕ್ತನಾಗಿರುವನು. ಯೋಗಿಶ್ರೇಷ್ಠರಿಗೂ ಗುರುಗಳಿಗೂ ಗುರುವೂ ದೇವನೂ ಆದ ಶಂಕರನು ನಿನ್ನಭಕ್ತನಾಗಿರುವನು.

೩೫. ಸನತ್ಕುಮಾರನು ನಿನ್ನ ಭಕ್ತನಾಗಿರುವನು. (ಜ್ಞಾನವಂತರಲ್ಲಿ ಶ್ರೇಷ್ಠನಾದ ಗಣೇಶನು ನಿನ್ನ ಭಕ್ತನಾಗಿರುವನು). ಭೂಲೋಕದಲ್ಲಿ ನಿನ್ನ ಭಕ್ತರಾದ ಮುನಿಶ್ರೇಷ್ಠರು ಎಷ್ಟೋ ಮಂದಿ ಇರುವರು.

೩೬. ರಾಧೆಯು ಯಾವರೀತಿಯಲ್ಲಿ ನಿನ್ನ ಭಕ್ತಳಾಗಿರುವಳೋ ಅಂಥಾ ಭಕ್ತರು ಬೇರೆ ಯಾರೂ ಇರುವುದಿಲ್ಲ. ರಾಧೆಯು ಯಾವ ರೀತಿಯಲ್ಲಿ ನಿನ್ನನ್ನು ಧ್ಯಾನಿಸುತ್ತಾಳೋ ಆ ರೀತಿಯಲ್ಲಿ ಸಾಕ್ಷಾಲ್ಲಕ್ಷ್ಮಿಯೂ ಕೂಡ ಧ್ಯಾನಿಸುವುದಿಲ್ಲ.

೩೭. ನಾನು ರಾಧೆಯ ಮುಂದೆ ಹರಿಯು ಬರುತ್ತಾನೆಂದು ಪ್ರಮಾಣವನ್ನು ಮಾಡಿರುವೆನು. ಎಲೈ ಮಹಾತ್ಮನೇ ನೀನು ಜಾಗ್ರತೆಯಾಗಿ ಅಲ್ಲಿಗೆ ಹೋಗು ಆ ನನ್ನ ಮಾತನ್ನು ಸಾರ್ಥಕವನ್ನಾಗಿ ಮಾಡುವವನಾಗು.

೩೮. ಉದ್ಧವನಾಡಿದ ಮಾತನ್ನು ಕೇಳಿ ಮಾಧವನು ನಕ್ಕನು ಮತ್ತು ಅವನನ್ನು ಕುರಿತು ವೇದದಲ್ಲಿ ಹೇಳಿದ ಹಿತದಿಂದ ಕೂಡಿದ ಸತ್ಯವಾದ ನಿಯಮದಿಂದ ಕೂಡಿದ ಮಾತನ್ನಿಂತೆಂದನು.

|| ಶ್ರೀ ಭಗವಾನುವಾಚ ||

ಸ್ತ್ರೀಷು ನರ್ಮವಿವಾಹೇಷು ವೃತ್ತ್ಯರ್ಥೇ ಪ್ರಾಣಸಂಕಟೇ |
ಗವಾಮರ್ಥೇ ಬ್ರಾಹ್ಮಣಾರ್ಥೇ ನಾನೃತಂ ಸ್ಯಾಜ್ಜುಗುಪ್ಸಿತಂ || ೩೯ ||

ತತ್ಸ್ವೀಕಾರವಿಹೀನೇನ ಕುತಸ್ತ್ವಂ ನರಕಃ ಕುತಃ |
ಗೋಲೋಕಂ ಯಾತಿ ಮದ್ಭಕ್ತೋ ನರಕಂ ನ ಹಿ ಪಶ್ಯತಿ || ೪೦ ||

ತ್ವದಂಗೀಕಾರಸಾಫಲ್ಯಂ ಕರಿಷ್ಯಾಮಿ ತಥಾಪಿ ಚ |
ಯಾಸ್ಯಾಮಿ ಸ್ವಪ್ನೇ ತನ್ಮೂಲಂ ಗೋಪೀನಾಂ ಮಾತುರೇವ ಚ || ೪೧ ||

ಇತ್ಯಾಕರ್ಣ್ಯ ಯಯೌ ಗೇಹಮುದ್ಧವಶ್ಚ ಮಹಾಯಶಾಃ |
ಹರಿರ್ಜಗಾಮ ಸ್ವಪ್ನೇ ಚ ಗೋಕುಲಂ ವಿರಹಾಕುಲಂ || ೪೨ ||

ಸ್ವಪ್ನೇ ರಾಧಾಂ ಸಮಾಶ್ವಾಸ್ಯ ದತ್ವಾ ಜ್ಞಾನಂ ಸುದುರ್ಲಭಂ |
ಸಂತೋಷ್ಯ ಕ್ರೀಡಯಾ ತಾಂ ಚ ಗೋಪಿಕಾಶ್ಚ ಯಥೋಚಿತಂ || ೪೩ ||

---

೩೯. ಶ್ರೀ ಭಗವಂತನು ಹೇಳುತ್ತಾನೆ :— ಹೆಂಗಸರಲ್ಲಿಯೂ ಪರಿಹಾಸ್ಯ ಸಂದರ್ಭದಲ್ಲಿಯೂ ಮದುವೆಗಳಲ್ಲಿಯೂ ಜೀವಿಕೆಗೋಸ್ಕರವಾಗಿಯೂ ಪ್ರಾಣಾಪಾಯವು ಸಂಭವಿಸಿದಾಗಲೂ, ಗೋವುಗಳ ರಕ್ಷಣೆಗಾಗಿಯೂ, ಬ್ರಾಹ್ಮಣ ರಕ್ಷಣೆಗಾಗಿಯೂ ಸುಳ್ಳನ್ನು ಹೇಳಿದರೆ ಅದು ಪಾತಕವಲ್ಲ.

೪೦. ಆದುದರಿಂದ ನೀನು ಆಡಿದ ಮಾತಿಗೆ ತಪ್ಪಿದರೂ ನೀನೆಲ್ಲಿ? ನರಕವೆಲ್ಲಿ ? ಯಾಕೆಂದರೆ ನನ್ನ ಭಕ್ತನಾದವನು ಗೋಲೋಕಕ್ಕೆ ಹೋಗುತ್ತಾನೆ. ಅವನು ನರಕವನ್ನು ನೋಡುವುದೂ ಕೂಡ ಇಲ್ಲ.

೪೧. ಆದಾಗ್ಯೂ ಕೂಡ ನೀನು ಒಪ್ಪಿಕೊಂಡಿರುವ ಮಾತು ಸಫಲವಾಗುವಂತೆ ಮಾಡುವೆನು. ಸ್ವಪ್ನದಲ್ಲಿ ಆ ರಾಧೆಯ ಸಮೀಪಕ್ಕೂ ಗೋಪಿಯರ ಸಮೀಪಕ್ಕೂ ತಾಯಿಯ ಸಮೀಪಕ್ಕೂ ಹೋಗುವೆನು.

೪೨. ಹರಿಯು ಹೇಳಿದ ಈ ಪ್ರಕಾರವಾದ ಮಾತನ್ನು ಕೇಳಿ ಮಹಾಕೀರ್ತಿವಂತನಾದ ಉದ್ಧವನು ತನ್ನ ಮನೆಗೆ ಹೊರಟನು. ಹರಿಯೂ ಕೂಡ ವಿರಹದಿಂದ ಶೋಕಗೊಂಡಿರುವ ಗೋಕುಲವನ್ನು ಸ್ವಪ್ನದಲ್ಲಿ ಪ್ರವೇಶಿಸಿದನು.

೪೩–೪೪. ಸ್ವಪ್ನದಲ್ಲಿ ರಾಧೆಯನ್ನು ಸಮಾಧಾನಪಡಿಸಿ ಹೊಂದಲಸಾಧ್ಯವಾದ ಜ್ಞಾನವನ್ನು ಉಪದೇಶಮಾಡಿ ಕ್ರೀಡೆಯಿಂದ ಅವಳನ್ನೂ ಯಥೋಚಿತವಾಗಿ

**ಬೋಧಯಿತ್ವಾ ಯಶೋದಾಂ ಚ ಸ್ತನಂ ಪೀತ್ವಾ ಚ ನಿದ್ರಿತಾಂ ।**
**ಗೋಪಾನ್ಗೋಪಶಿಶೂಂಶ್ಚೈವ ಬೋಧಯಿತ್ವಾ ಯಯೌ ಪುನಃ ॥ ೪೪ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ**
**ಉತ್ತರಾರ್ಧೇ ನಾರಾಯಣ ನಾರದ ಸಂವಾದೇ**
**ಅಷ್ಟನವತಿತಮೋಽಧ್ಯಾಯಃ.**

---

ಗೋಪಿಯರನ್ನೂ ಸಂತೋಷಗೊಳಿಸಿ ನಿದ್ರೆಮಾಡುತ್ತಿರುವ ಯಶೋದೆಯ ಸ್ತನ್ಯ ಪಾನವನ್ನು ಮಾಡಿ ಅವಳಿಗೂ ಉಪದೇಶಮಾಡಿ ಗೋಪರಿಗೂ ಗೋಪಬಾಲಕರಿಗೂ ಜ್ಞಾನವನ್ನು ಬೋಧಿಸಿ ಮತ್ತೆ ಮಥುರಾಪಟ್ಟಣಕ್ಕೆ ಹೊರಟು ಹೋದನು.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಶ್ರೀ ಕೃಷ್ಣಜನ್ಮಖಂಡದ
ಉತ್ತರಾರ್ಧದ ನಾರದ ನಾರಾಯಣ ಸಂವಾದದಲ್ಲಿ
ತೊಂಭತ್ತೆಂಟನೇ ಅಧ್ಯಾಯವು ಸಮಾಪ್ತವು.

## ತೊಂಭತ್ತೆಂಟನೆಯ ಅಧ್ಯಾಯದ ಸಾರಾಂಶ.

ಯಶೋದೆಯ ಸಂದರ್ಶನ ಮಾಡಿ ಅಲ್ಲಿಂದ ಹೊರಟ ಉದ್ಧವನು ಮಧುರಾ ಪಟ್ಟಣಕ್ಕೆ ಬಂದು ಶ್ರೀಕೃಷ್ಣನನ್ನು ಕಂಡನು. ಶ್ರೀಕೃಷ್ಣನು ಕುತೂಹಲದಿಂದ ಯಶೋದೆ, ನಂದ, ರಾಧೆ ಮುಂತಾದವರ ಕುಶಲಪ್ರಶ್ನೆ ಮಾಡಿದನು. ಆಗ ಉದ್ಧವನು ಎಲ್ಲರ ಕುಶಲ ಸಮಾಚಾರವನ್ನೂ ತಿಳಿಸಿ ರಾಧೆಯು ಶ್ರೀಕೃಷ್ಣನ ವಿರಹದಿಂದ ವ್ಯಥೆ ಪಡುತ್ತಿರುವುದನ್ನು ವಿವರಿಸಿ ಖಂಡಿತವಾಗಿಯೂ ರಾಧೆಗೆ ಸಂದರ್ಶನ ಕೊಡಬೇಕೆಂದು ಶ್ರೀಕೃಷ್ಣನಿಗೆ ಹೇಳಿದನು. ಶ್ರೀಕೃಷ್ಣನು ಸ್ವಪ್ನದಲ್ಲಿ ಯಶೋದೆ, ರಾಧೆ ಮುಂತಾದವರಿಗೆ ಕಾಣಿಸಿಕೊಂಡು ಅವರಿಗೆ ತತ್ವೋಪದೇಶ ಮಾಡಿ ಮಧುರಾಪಟ್ಟಣಕ್ಕೆ ಹಿಂತಿರುಗಿದನು.



|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ನವನವತಿತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಏತಸ್ಮಿನ್ನಂತರೇ ಗರ್ಗೋ ವಸುದೇವಾಶ್ರಮಂ ಯಯೌ ।
ದಂಡೀ ಛತ್ರೀ ಚ ಜಟಿಲೋ ದೀಪ್ತಶ್ಚ ಬ್ರಹ್ಮತೇಜಸಾ ॥ ೧ ॥

ಶುಕ್ಲಯಜ್ಞೋಪವೀತೀ ಚ ತಪಸ್ವೀ ಸಂಯತಃ ಸದಾ ।
ಶುಕ್ಲದಂತಃ ಶುಕ್ಲವಾಸಾ ಯದೋಃ ಕುಲಪುರೋಹಿತಃ ॥ ೨ ॥

ತಂ ದೃಷ್ಟ್ವಾ ಸಹಸೋತ್ಥಾಯ ದೇವಕೀ ಪ್ರಣನಾಮ ಚ ।
ವಸುದೇವಶ್ಚ ಭಕ್ತ್ಯಾ ಚ ರತ್ನಸಿಂಹಾಸನಂ ದದೌ ॥ ೩ ॥

---

### ತೊಂಭತ್ತೊಂಭತ್ತನೆಯ ಅಧ್ಯಾಯವು.

೧–೨. ಶ್ರೀ ನಾರಾಯಣನು ಹೇಳುತ್ತಾನೆ:— ಈ ಮಧ್ಯದಲ್ಲಿ ಯದುಕುಲ ಪುರೋಹಿತನಾದ ದಂಡ ಮತ್ತು ಛತ್ರಿಯನ್ನು ಹಿಡಿದುಕೊಂಡಿರುವ ಜಟೆಯನ್ನು ಧರಿಸಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಶುಭ್ರವಾದ ಜನಿವಾರವನ್ನು ಧರಿಸಿರುವ ಯಾವಾಗಲೂ ಜಿತೇಂದ್ರಿಯನಾದ ಶುಭ್ರವಾದ ಹಲ್ಲುಗಳುಳ್ಳ ಶುಭ್ರವಾದ ಬಟ್ಟೆಗಳನ್ನು ಧರಿಸಿರುವ ತಪೋನಿರತನಾದ ಗರ್ಗಮುನಿಯು ವಸುದೇವನ ಮನೆಯನ್ನು ಕುರಿತು ಬಂದನು.

೩. ಅವನನ್ನು ನೋಡಿ ದೇವಕಿಯು ಬೇಗನೆ ಮೇಲಕ್ಕೆದ್ದು ಆ ಮುನಿಗೆ ನಮಸ್ಕಾರವನ್ನು ಮಾಡಿದಳು. ವಸುದೇವನೂ ಕೂಡ ನಮಸ್ಕಾರಮಾಡಿ ಭಕ್ತಿಪೂರ್ವಕವಾಗಿ ರತ್ನಸಿಂಹಾಸನವನ್ನು ಕೊಟ್ಟನು.

ಮಧುಪರ್ಕಂ ಕಾಮಧೇನುಂ ವಹ್ನಿಶುದ್ಧಾಂಶುಕಂ ತಥಾ ।
ದತ್ವಾ ಗಂಧಂ ಪುಷ್ಪಮಾಲ್ಯಂ ಪೂಜಯಾಮಾಸ ಭಕ್ತಿತಃ ॥ ೪ ॥

ಮಿಷ್ಟಾನ್ನಂ ಪರಮಾನ್ನಂ ಚ ಪಿಷ್ಟಕಂ ಮಧುರಂ ಮಧು ।
ಭೋಜಯಾಮಾಸ ಯತ್ನೇನ ತಾಂಬೂಲಂ ವಾಸಿತಂ ದದೌ ॥ ೫ ॥

ಪ್ರಣಮ್ಯ ಕೃಷ್ಣಂ ಮನಸಾ ಸಬಲಂ ತಂ ವಿಲೋಕ್ಯ ಚ ।
ಉವಾಚ ವಸುದೇವಂ ಚ ದೇವಕೀಂ ಚ ಪತಿವ್ರತಾಂ ॥ ೬ ॥

॥ ಗರ್ಗ ಉವಾಚ ॥

ವಸುದೇವ ನಿಬೋಧೇದಂ ಸಬಲಂ ಪಶ್ಯ ಪುತ್ರಕಂ ।
ಉಪನೀತೋಚಿತಂ ಶುದ್ಧಂ ವಯಸಾ ಸಾಂಪ್ರತಂ ವರಂ ॥ ೭ ॥

---

೪. ಮಧುಪರ್ಕವನ್ನೂ ಕಾಮಧೇನುವನ್ನೂ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನೂ ಗಂಧವನ್ನೂ ಹೂವಿನ ಮಾಲಿಕೆಯನ್ನೂ ಕೊಟ್ಟು ಭಕ್ತಿಯಿಂದ ಕೂಡಿದವನಾಗಿ ಪೂಜೆಮಾಡಿದನು.

೫. ರುಚಿಕರವಾದ ಅನ್ನವನ್ನೂ ಪಾಯಸವನ್ನೂ ಸಿಹಿಯಾದ ಹೋಳಿಗೆ, ಉರಿಉಪ್ಪು, ದೋಸೆ ಮುಂತಾದುವುಗಳನ್ನೂ ಜೇನುತುಪ್ಪವನ್ನೂ ಮಾಡಿಸಿ ಭೋಜನವನ್ನು ಮಾಡಿಸಿದನು. ಸುವಾಸನೆಯಿಂದ ಕೂಡಿದ ತಾಂಬೂಲವನ್ನೂ ಕೊಟ್ಟನು.

೬. ಆ ಮುನಿಯು ಮನಸ್ಸಿನಲ್ಲಿಯೇ ಕೃಷ್ಣನಿಗೆ ನಮಸ್ಕಾರವನ್ನು ಮಾಡಿದವನಾಗಿ ಬಲರಾಮನಿಂದೊಡಗೂಡಿದ ಆ ಕೃಷ್ಣನನ್ನು ನೋಡಿ ವಸುದೇವನನ್ನೂ ಮತ್ತು ಪತಿವ್ರತೆಯಾದ ದೇವಕಿಯನ್ನೂ ಕುರಿತು ಇಂತೆಂದನು.

೭. ಗರ್ಗಮುನಿಯು ಹೇಳುತ್ತಾನೆ :— ಎಲೈ ವಸುದೇವನೇ! ಬಲದೇವ ಸಹಿತನಾದ ನಿನ್ನ ಮಗನನ್ನು ನೋಡು, ಈಗ ಇವನು ಉಪನಯನಕ್ಕೆ ಯೋಗ್ಯವಾದ ವಯಸ್ಸನ್ನು ಹೊಂದಿರುವನು. ಈಗ ಉಪನಯನವನ್ನು ಮಾಡುವುದು ಯೋಗ್ಯವಾಗಿದೆ, ಈ ವಿಷಯವನ್ನು ಯೋಚಿಸುವವನಾಗು.

|| ವಸುದೇವ ಉವಾಚ ||

ಶುಭಕ್ಷಣಂ ಕುರು ಗುರೋ ಯದೂನಾಂ ಪೂಜ್ಯ ದೈವತ |
ಉಪನೀತೋಚಿತಂ ಶುದ್ಧಂ ಪ್ರಶಸ್ಯಂ ಚ ಸತಾಮಪಿ || ೮ ||

|| ಗರ್ಗ ಉವಾಚ ||

ಸರ್ವೇಭ್ಯೋ ಬಾಂಧವೇಭ್ಯೋಽಪಿ ದೇಹ್ಯಾಮಂತ್ರಣಪತ್ರಿಕಾಂ |
ಸಂಭಾರಂ ಕುರು ಯತ್ನೇನ ವಸುದೇವ ವಸೂಪಮ || ೯ ||

ಪರಶ್ವಃ ಶುಭವೇವಾಸ್ತಿ ಚೋಪನೇತುಮಿಹಾರ್ಹಸಿ |
ದಿನಂ ಸತಾಮಪಿ ಮತಂ ವಿಶುದ್ಧಂ ಚಂದ್ರತಾರಯೋಃ || ೧೦ ||

ಗರ್ಗಸ್ಯ ವಚನಂ ಶ್ರುತ್ವಾ ವಸುದೇವೋ ವಸೂಪಮಃ |
ಪ್ರಸ್ಥಾಪಯಾಮಾಸ ಸರ್ವಾನ್ಬಂಧೂನ್ಮಂಗಲಪತ್ರಿಕಾಂ || ೧೧ ||

---

೮. ವಸುದೇವನು ಹೇಳುತ್ತಾನೆ:— ಎಲೈ ಯದುಗಳಿಗೆ ಪೂಜ್ಯದೇವತೆಯಾದ ಗುರುವೇ! ಉಪನಯನಕ್ಕೆ ಯೋಗ್ಯವಾದ ಸತ್ಪುರುಷರ ಮನಸ್ಸಿಗೂ ಪ್ರಶಸ್ತವೆಂದೆನಿಸುವ ಶುದ್ಧವಾದ ಶುಭ ಮುಹೂರ್ತವನ್ನು ನಿರ್ಧರಿಸುವವನಾಗು.

೯. ಗರ್ಗಮುನಿಯು ಹೇಳುತ್ತಾನೆ:— ವಸುಗಳಿಗೆ ಸಮಾನನಾದ ಎಲೈ ವಸುದೇವನೇ! ನಿನ್ನ ಸಮಸ್ತ ಬಂಧುಗಳಿಗೂ ಆಹ್ವಾನಪತ್ರಿಕೆಯನ್ನು ಕಳುಹಿಸುವವನಾಗು, ಉಪನಯನಕ್ಕೆ ಬೇಕಾಗುವ ಸಕಲ ಸಾಮಗ್ರಿಗಳನ್ನೂ ಪ್ರಯತ್ನಪೂರ್ವಕವಾಗಿ ಸಿದ್ಧಗೊಳಿಸುವವನಾಗು.

೧೦. ನಾಡಿದ್ದು ದಿನವು ಶುದ್ಧವಾಗಿಯೂ ಸತ್ಪುರುಷರ ಮನಸ್ಸಿಗೆ ಒಪ್ಪಿಗೆಯಾಗುವಂತೆ ಚಂದ್ರ ತಾರಾಬಲಯುಕ್ತವಾಗಿಯೂ ಶುಭವಾಗಿಯೂ ಇರುವುದು ಈ ಮುಹೂರ್ತದಲ್ಲಿ ಉಪನಯನವನ್ನು ಮಾಡುವವನಾಗು.

೧೧. ಗರ್ಗಮುನಿಯ ಮಾತನ್ನು ಕೇಳಿ ವಸುಗಳಿಗೆ ಸಮಾನನಾದ ವಸುದೇವನು ತನ್ನ ಎಲ್ಲ ಬಂಧುಗಳಿಗೂ ಉಪನಯನ ಮಹೋತ್ಸವಾಹ್ವಾನ ಪತ್ರಿಕೆಯನ್ನು ಕಳುಹಿಸಿಕೊಟ್ಟನು.

ಘೃತಕುಲ್ಯಾಂ ಮುಗ್ಧಕುಲ್ಯಾಂ ದಧಿಕುಲ್ಯಾಂ ಮನೋಹರಾಂ ।
ಮಧುಕುಲ್ಯಾಂ ಗುಡಕುಲ್ಯಾಂ ಪ್ರಚಕಾರ ಸಮನ್ವಿತಃ ॥ ೧೨ ॥

ರಾಶಿಂ ನಾನೋಪಹಾರಾಣಾಂ ಮಣಿರತ್ನಂ ಸುವರ್ಣಕಂ ।
ನಾನಾಲಂಕಾರವಸ್ತ್ರಂ ಚ ಮುಕ್ತಾಮಾಣಿಕ್ಯಹೀರಕಂ ॥ ೧೩ ॥

ಶ್ರೀಕೃಷ್ಣೋ ದೇವವರ್ಗಾಂಶ್ಚ ಮುನೀಂದ್ರಸಿದ್ಧಪುಂಗವಾನ್ ।
ಸಸ್ಮಾರ ಮನಸಾ ಭಕ್ತ್ಯಾ ಭಕ್ತಶ್ಚ ಭಕ್ತವತ್ಸಲಃ ॥ ೧೪ ॥

ಶುಭೇ ದಿನೇ ಚ ಸಂಪ್ರಾಪ್ತೇ ತೇ ಚ ಸರ್ವೇ ಸಮಾಯಯುಃ ।
ಮುನೀಂದ್ರಾ ಬಾಂಧವಾ ದೇವಾ ರಾಜಾನೋ ಬಹುಶಸ್ತಥಾ ॥ ೧೫ ॥

ದೇವಕನ್ಯಾ ನಾಗಕನ್ಯಾ ರಾಜಕನ್ಯಾಶ್ಚ ಸರ್ವಶಃ ।
ವಿದ್ಯಾಧರ್ಯಶ್ಚ ಗಂಧರ್ವಾಶ್ಚಾಯಯುರ್ವಾದ್ಯಭಾಂಡಕಾಃ ॥ ೧೬ ॥

---

೧೨. ತುಪ್ಪದ ಕಾಲುವೆಯನ್ನೂ, ಹಾಲಿನ ಕಾಲುವೆಯನ್ನೂ, ಮನೋಹರವಾದ ಮೊಸರಿನ ಕಾಲುವೆಯನ್ನೂ, ಜೇನುತುಪ್ಪದ ಕಾಲುವೆಯನ್ನೂ, ಬೆಲ್ಲದ ಕಾಲುವೆಯನ್ನೂ ಕೂಡ ಎಲ್ಲೆಡೆಯಲ್ಲಿಯೂ ಮಾಡಿದನು.

೧೩. ನಾನಾವಿಧವಾದ ಹಾರಗಳ ರಾಶಿಯನ್ನೂ, ರತ್ನಮಣಿಗಳನ್ನೂ, ಚಿನ್ನವನ್ನೂ, ಅನೇಕವಿಧವಾದ ಅಲಂಕಾರ ಸಾಮಗ್ರಿಗಳನ್ನೂ, ಬಟ್ಟೆಗಳನ್ನೂ, ಮುತ್ತು ಮಾಣಿಕ್ಯ ಹೀರಕ ಮುಂತಾದುವುಗಳನ್ನೂ ಸಿದ್ಧಗೊಳಿಸಿದನು.

೧೪. ಭಕ್ತರಲ್ಲಿ ಪ್ರೀತಿಯುಳ್ಳ ಶ್ರೀಕೃಷ್ಣನು ದೇವತೆಗಳ ಗುಂಪನ್ನೂ ಮಹರ್ಷಿಶ್ರೇಷ್ಠರನ್ನೂ, ಸಿದ್ಧಶ್ರೇಷ್ಠರನ್ನೂ, ಭಕ್ತರನ್ನೂ ಭಕ್ತಿಯಿಂದ ಮನಸ್ಸಿನಲ್ಲಿಯೇ ಸ್ಮರಿಸಿದನು.

೧೫. ಮಂಗಳಕಾರ್ಯದ ದಿನವು ಬರಲು ಆ ಎಲ್ಲ ಮುನಿಶ್ರೇಷ್ಠರೂ ಬಂಧುಜನರೂ ದೇವತೆಗಳೂ ಅನೇಕಮಂದಿ ರಾಜರುಗಳೂ ಕೂಡ ಎಲ್ಲೆಡೆಗಳಿಂದಲೂ ಬಂದರು.

೧೬. ಎಲ್ಲೆಡೆಗಳಿಂದಲೂ ದೇವಕನ್ಯೆಯರು ನಾಗಕನ್ಯೆಯರು ರಾಜಕನ್ಯೆಯರು ವಿದ್ಯಾಧರಸ್ತ್ರೀಯರೂ ಗಂಧರ್ವರೂ ವಾದ್ಯಸಾಮಗ್ರಿಗಳನ್ನು ತೆಗೆದುಕೊಂಡು ಬಂದರು.

ಬ್ರಾಹ್ಮಣಾ ಭಿಕ್ಷುಕಾ ಭಟ್ಟಾ ಯತಯೋ ಬ್ರಹ್ಮಚಾರಿಣಃ ।
ಸನ್ಯಾಸಿನಶ್ಚಾವಧೂತಾ ಯೋಗಿನಶ್ಚ ಸಮಾಯಯುಃ ॥ ೧೭ ॥

ಸ್ತ್ರೀಬಾಂಧವಾಃ ಸ್ವಬಂಧೂನಾಂ ವರ್ಗಾ ಮಾತಾಮಹಸ್ಯ ಚ ।
ಬಂಧೂನಾಂ ಬಾಂಧವಾಃ ಸರ್ವೇ ಸ್ವಾಯಯುಃ ಶುಭಕರ್ಮಣಿ ॥ ೧೮ ॥

ಭೀಷ್ಮೋ ದ್ರೋಣಶ್ಚ ಕರ್ಣಶ್ಚಾಪ್ಯಶ್ವತ್ಥಾಮಾ ಕೃಪೋ ದ್ವಿಜಃ ।
ಸಪುತ್ರೋ ಧೃತರಾಷ್ಟ್ರಶ್ಚ ಸಭಾರ್ಯಶ್ಚ ಸಮಾಯಯೌ ॥ ೧೯ ॥

ಕುಂತೀ ಸಪುತ್ರಾ ವಿಧವಾ ಹರ್ಷಶೋಕಸಮಾಪ್ಲುತಾ ।
ನಾನಾದೇಶೋದ್ಭವಾ ಯೋಗ್ಯಾ ರಾಜಾನೋ ರಾಜಪುತ್ರಕಾಃ ॥ ೨೦ ॥

ಅತ್ರಿರ್ವಸಿಷ್ಠಶ್ಚ್ಯವನೋ ಭರದ್ವಾಜೋ ಮಹಾತಪಾಃ ।
ಯಾಜ್ಞ್ಯವಲ್ಕ್ಯಶ್ಚ ಭೀಮಶ್ಚ ಗಾರ್ಗ್ಯೋ ಗರ್ಗೋ ಮಹಾತಪಾಃ ॥ ೨೧ ॥

ವತ್ಸಃ ಸಪುತ್ರಶ್ಚ ಧರ್ಮೋ ಜೈಗೀಷವ್ಯಃ ಪರಾಶರಃ ।
ಪುಲಹಶ್ಚ ಪುಲಸ್ತ್ಯಶ್ಚಾಪ್ಯಗಸ್ತ್ಯಶ್ಚಾಪಿ ಸೌಭರಿಃ ॥ ೨೨ ॥

---

೧೭. ಬ್ರಾಹ್ಮಣರೂ ಭಿಕ್ಷುಕರೂ ಭಟ್ಟರೂ ಯತಿಗಳೂ ಬ್ರಹ್ಮಚಾರಿಗಳೂ ಸನ್ಯಾಸಿಗಳೂ ಅವಧೂತರೂ ಯೋಗಿಗಳೂ ಬಂದರು.

೧೮. ಸ್ತ್ರೀಯರಾದ ಬಂಧುಜನರೂ ತನ್ನ ತಾಯಿತಂದೆಯ ಕಡೆಯ ಬಂಧುಗಳೂ ತನ್ನ ಬಂಧುಗಳ ಬಂಧುಗಳೂ ಎಲ್ಲರೂ ಈ ಶುಭಕರ್ಮಕ್ಕೋಸ್ಕರವಾಗಿ ಬಂದರು.

೧೯. ಭೀಷ್ಮನೂ ದ್ರೋಣಾಚಾರ್ಯನೂ ಕರ್ಣನೂ ಅಶ್ವತ್ಥಾಮನೂ ಕೃಪನೆಂಬ ಬ್ರಾಹ್ಮಣನೂ ಮಕ್ಕಳುಗಳಿಂದಲೂ ಪತ್ನಿಯಿಂದಲೂ ಕೂಡಿದ ಧೃತರಾಷ್ಟ್ರನೂ ಕೂಡ ಬಂದರು.

೨೦. ವಿಧವೆಯಾದ ಕುಂತಿಯು ತನ್ನ ಮಕ್ಕಳೊಂದಿಗೆ ದುಃಖದಿಂದಲೂ ಸಂತೋಷದಿಂದಲೂ ಕೂಡಿದವಳಾಗಿ ಬಂದಳು. ನಾನಾದೇಶಗಳಲ್ಲಿ ಹುಟ್ಟಿದ ಯೋಗ್ಯರಾದ ರಾಜರೂ ರಾಜರಮಕ್ಕಳೂ ಕೂಡ ಬಂದರು.

೨೧—೨೯. ಅತ್ರಿಯೂ ವಸಿಷ್ಠನೂ ಚ್ಯವನನೂ ಮಹಾತಪಸ್ವಿಯಾದ ಭರದ್ವಾಜನೂ ಯಾಜ್ಞ್ಯವಲ್ಕ್ಯನೂ ಭೀಮನೂ ಗಾರ್ಗ್ಯನೂ ಮಹಾತಪಸ್ವಿಯಾದ

ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ।
ಸನತ್ಕುಮಾರೋ ಭಗವಾನ್ವೋಢುಃ ಪಂಚಶಿಖಸ್ತಥಾ ॥ ೨೩ ॥

ದುರ್ವಾಸಾಶ್ಚಾಂಗಿರೋ ವ್ಯಾಸೋ ವ್ಯಾಸಪುತ್ರಃ ಶುಕಸ್ತಥಾ ।
ಕುಶಿಕಃ ಕೌಶಿಕೋ ರಾಮ ಋಷ್ಯಶೃಂಗೋ ವಿಭಾಂಡಕಃ ॥ ೨೪ ॥

ಶೃಂಗೀ ಚ ವಾಮದೇವಶ್ಚ ಗೌತಮಶ್ಚ ಗುಣಾರ್ಣವಃ ।
ಕ್ರತುರ್ಯತಿಶ್ಚಾರುಣಿಶ್ಚ ಶುಕ್ರಾಚಾರ್ಯೋ ಬೃಹಸ್ಪತಿಃ ॥ ೨೫ ॥

ಅಷ್ಟಾವಕ್ರೋ ವಾಮನಶ್ಚ ವಾಲ್ಮೀಕಿಃ ಪಾರಿಭದ್ರಕಃ ।
ಪೈಲೋ ವೈಶಂಪಾಯನಶ್ಚ ಪ್ರಚೇತಾಃ ಪುರುಜಿತ್ತಥಾ ॥ ೨೬ ॥

ಭೃಗುರ್ಮರೀಚಿರ್ಮಧುಜಿತ್ಕಶ್ಯಪಶ್ಚ ಪ್ರಜಾಪತಿಃ ।
ಅದಿತಿ ರ್ದೇವಮಾತಾ ಚ ದಿತಿರ್ದೈತ್ಯಪ್ರಸೂಸ್ತಥಾ ॥ ೨೭ ॥

ಸುಮಂತುಶ್ಚ ಸುಭಾನುಶ್ಚ ಏಕಃ ಕಾತ್ಯಾಯನಸ್ತಥಾ ।
ಮಾರ್ಕಂಡೇಯೋ ಲೋಮಶಶ್ಚ ಕಪಿಲಶ್ಚ ಪರಾಶರಃ ॥ ೨೮ ॥

ಪಾಣಿನಿಃ ಪಾರಿಯಾತ್ರಶ್ಚ ಪಾರಿಭದ್ರಶ್ಚ ಪುಂಗವಃ ।
ಸಂವರ್ತಶ್ಚಾಪ್ಯುತಥ್ಯಶ್ಚ ನರೋಽಹಂ ಚಾಪಿ ನಾರದ ॥ ೨೯ ॥

---

ಗರ್ಗನೂ ಪುತ್ರಸಮೇತನಾದ ವತ್ಸನೂ ಧರ್ಮನೂ ಜೈಗೀಷವ್ಯನೂ ಪರಾಶರನೂ ಪುಲಹನೂ ಪುಲಸ್ತ್ಯನೂ ಅಗಸ್ತ್ಯನೂ ಸೌಭರಿಯೂ ಸನಕನೂ ಸನಂದನೂ ಮೂರನೆಯವನಾದ ಸನಾತನನೂ ಸನತ್ಕುಮಾರನೂ ಪೂಜ್ಯನಾದ ವೋಢುವೂ ಮತ್ತು ಪಂಚಶಿಖನೂ ದೂರ್ವಾಸನೂ ಅಂಗಿರನೂ ವ್ಯಾಸನೂ ವ್ಯಾಸಪುತ್ರನಾದ ಶುಕನೂ ಕುಶಿಕನೂ ಕೌಶಿಕನೂ ಪರಶುರಾಮನೂ ಋಷ್ಯಶೃಂಗನೂ ವಿಭಾಂಡಕನೂ ಶೃಂಗಿಯೂ ವಾಮದೇವನೂ ಗುಣಸಮುದ್ರನಾದ ಗೌತಮನೂ ಕ್ರತುವೂ ಯತಿಯೂ ಆರುಣಿಯೂ ಶುಕ್ರಾಚಾರ್ಯನೂ ಬೃಹಸ್ಪತಿಯೂ ಅಷ್ಟಾವಕ್ರನೂ ವಾಮನನೂ ವಾಲ್ಮೀಕಿಯೂ ಪಾರಿಭದ್ರನೂ ಪೈಲನೂ ವೈಶಂಪಾಯನನೂ ಪ್ರಚೇತನೂ ಪುರುಜಿತುವೂ ಭೃಗುವೂ ಮರೀಚಿಯೂ ಮಧುಜಿತುವೂ ಕಶ್ಯಪಬ್ರಹ್ಮನೂ ದೇವತೆಗಳ ತಾಯಿಯಾದ ಆದಿತಿಯೂ ದೈತ್ಯರ ತಾಯಿಯಾದ ದಿತಿಯೂ ಸುಮಂತುವೂ ಸುಭಾನುವೂ ಕಾತ್ಯಾಯನನೂ ಮಾರ್ಕಂಡೇಯನೂ ಲೋಮಶನೂ ಕಪಿಲನೂ ಪರಾಶರನೂ ಪಾಣಿನಿಯೂ ಪಾರಿಯಾತ್ರನೂ ಪುರುಷಶ್ರೇಷ್ಠನಾದ ಪಾರಿಭದ್ರನೂ ಸಂವರ್ತನೂ ಉತಥ್ಯನೂ ನರನೂ ಬಂದರು. ಎಲೈ ನಾರದನೇ! ನಾನೂ ಕೂಡ ಬಂದೆನು.

ವಿಶ್ವಾಮಿತ್ರಃ ಶತಾನಂದೋ ಜಾಬಾಲಿಸ್ತೈತಿಲಸ್ತಥಾ ।
ಸಾಂದೀಪಿನಿಶ್ಚ ಬ್ರಹ್ಮಾಂಶೋ ಯೋಗಿನಾಂ ಜ್ಞಾನಿನಾಂ ಗುರುಃ ॥ ೩೦ ॥

ಉಪಮನ್ಯುರ್ಗೌರಮುಖೋ ಮೈತ್ರೇಯಶ್ಚ ಶ್ರುತಶ್ರವಾಃ ।
ಕಠಃ ಕಚಶ್ಚ ಕರಖೋ ಭರದ್ವಾಜಶ್ಚ ಧರ್ಮವಿತ್ ॥ ೩೧ ॥

ಸಶಿಷ್ಯಾ ಮುನಯಃ ಸರ್ವೇ ವಸುದೇವಾಶ್ರಮಂ ಯಯುಃ ।
ವಸುದೇವಶ್ಚ ತಾನ್ದೃಷ್ಟ್ವಾ ವವಂದೇ ದಂಡವದ್ಭುವಿ ॥ ೩೨ ॥

ಅಥಾಸ್ಮಿನ್ನಂತರೇ ಬ್ರಹ್ಮಾ ಸಸ್ಮಿತೋ ಹಂಸವಾಹನಃ ।
ರತ್ನನಿರ್ಮಾಣಯಾನೇನ ಪಾರ್ವತ್ಯಾ ಸಹ ಶಂಕರಃ ॥ ೩೩ ॥

ನಂದೀ ಸ್ವಯಂ ಮಹಾಕಾಲೋ ವೀರಭದ್ರಃ ಸುಭದ್ರಕಃ ।
ಮಣಿಭದ್ರಃ ಪಾರಿಭದ್ರಃ ಕಾರ್ತಿಕೇಯೋ ಗಣೇಶ್ವರಃ ॥ ೩೪ ॥

ಗಜೇಂದ್ರೇಣ ಮಹೇಂದ್ರಶ್ಚ ಧರ್ಮಶ್ಚಂದ್ರೋ ರವಿಸ್ತಥಾ ।
ಕುಬೇರೋ ವರುಣಶ್ಚೈವ ಪವನೋ ವಹ್ನಿರೇವ ಚ ॥ ೩೫ ॥

---

೩೦–೩೨. ಮತ್ತು ವಿಶ್ವಾಮಿತ್ರನೂ ಶತಾನಂದನೂ ಜಾಬಾಲಿಯೂ ತೈತಿಲನೂ ಬ್ರಹ್ಮಾಂಶದಿಂದ ಉತ್ಪನ್ನನಾದ ಯೋಗಿಗಳಿಗೂ ಜ್ಞಾನಿಗಳಿಗೂ ಗುರುವಾದ ಸಾಂದೀಪನಿಯೂ ಉಪಮನ್ಯುವೂ ಗೌರಮುಖ್ಯನೂ ಮೈತ್ರೇಯನೂ ಶ್ರುತಶ್ರವನೂ ಕಠನೂ ಕಚನೂ ಕರಖನೂ ಧರ್ಮವನ್ನು ತಿಳಿದಂಥ ಭರದ್ವಾಜನೂ ಇವರೆಲ್ಲ ಮುನಿಗಳೂ ಶಿಷ್ಯರಿಂದೊಡಗೂಡಿದವರಾಗಿ ವಸುದೇವನ ಮನೆಗೆ ಬಂದರು. ವಸುದೇವನು ಅವರನ್ನು ನೋಡಿದವನಾಗಿ ನೆಲದ ಮೇಲೆ ದಂಡದಂತೆ ಅವರುಗಳಿಗೆ ನಮಸ್ಕಾರಮಾಡಿದನು.

೩೩. ಈ ಮಧ್ಯದಲ್ಲಿ ಬ್ರಹ್ಮನೂ ಹಂಸವಾಹನನಾಗಿ ಮಂದಹಾಸವನ್ನು ಮಾಡುತ್ತ ಬಂದನು. ಶಂಕರನು ರತ್ನಗಳಿಂದ ಮಾಡಿದ ವಿಮಾನದಿಂದ ಪಾರ್ವತಿಯೊಡನೆ ಬಂದನು.

೩೪. ನಂದಿಯೂ ಮಹಾಕಾಲನೂ ವೀರಭದ್ರನೂ ಸುಭದ್ರಕನೂ ಮಣಿಭದ್ರನೂ ಪಾರಿಭದ್ರನೂ ಕಾರ್ತಿಕೇಯನೂ ಗಣಪತಿಯೂ ಬಂದರು

೩೫–೩೮. ಮಹೇಂದ್ರನು ಐರಾವತವನ್ನೇರಿ ಬಂದನು. ಧರ್ಮನೂ ಚಂದ್ರನೂ ಸೂರ್ಯನೂ ಕುಬೇರನೂ ವರುಣನೂ ವಾಯುವೂ ಅಗ್ನಿಯೂ

ಯಮಃ ಸಂಯಮಿನೀನಾಥೋ ಜಯಂತೋ ನಲಕೂಬರಃ ।
ಸರ್ವೇ ಗ್ರಹಾಶ್ಚ ವಸವೋ ರುದ್ರಾಶ್ಚ ಸಗಣಾಸ್ತಥಾ ॥ ೩೬ ॥

ಆದಿತ್ಯಾಶ್ಚ ತಥಾ ಶೇಷೋ ನಾನಾದೇವಾಃ ಸಮಾಯಯುಃ ।
ವಸುದೇವಶ್ಚ ಭಕ್ತ್ಯಾ ಚ ವವಂದೇ ಶಿರಸಾ ಭುವಿ ॥ ೩೭ ॥

ತುಷ್ಟಾವ ಪರಯಾ ಭಕ್ತ್ಯಾ ದೇವೇಂದ್ರಾಂಶ್ಚ ತಥಾ ಸುರಾನ್ ।
ಭಕ್ತಿನಮ್ರಾತ್ಮಮೂರ್ಧಾ ಚ ಪುಲಕಾಂಚಿತವಿಗ್ರಹಃ ॥ ೩೮ ॥

॥ ವಸುದೇವ ಉವಾಚ ॥

ಪರಂ ಬ್ರಹ್ಮ ಪರಂ ಧಾಮ ಪರಮೇಶಃ ಪರಾತ್ಪರಃ ।
ಸ್ವಯಂ ವಿಧಾತಾ ಮದ್ಗೇಹೇ ಜಗತಾಂ ಪರಿಪಾಲಕಃ ॥ ೩೯ ॥

ವೇದಾನಾಂ ಜನಕಃ ಸ್ರಷ್ಟಾ ಸೃಷ್ಟಿಹೇತುಃ ಸನಾತನಃ ।
ಸುರಾಣಾಂ ಚ ಮುನೀಂದ್ರಾಣಾಂ ಸಿದ್ಧೇಂದ್ರಾಣಾಂ ಗುರೋರ್ಗುರುಃ ॥ ೪೦ ॥

ಸ್ವಪ್ನೇ ಯತ್ಪಾದಪದ್ಮಂ ಚ ಕ್ಷಣಂ ದ್ರಷ್ಟುಂ ಸುದುರ್ಲಭಂ ।
ಶಿವಸ್ಮರಣಮಾತ್ರೇಣ ಸರ್ವಾನಿಷ್ಟಾಃ ಪಲಾಯಿತಾಃ ॥ ೪೧ ॥

---

ಸಂಯಮಿನೀ ಪಟ್ಟಣದ ದೊರೆಯಾದ ಯಮನೂ ಜಯಂತನೂ ನಲಕೂಬರನೂ ಸಕಲಗ್ರಹಗಳೂ ವಸುಗಳೂ ತಮ್ಮಗಣಗಳಿಂದ ಕೂಡಿದ ರುದ್ರರೂ ಆದಿತ್ಯರೂ ಶೇಷನೂ ನಾನಾದೇವತೆಗಳೂ ಬಂದರು. ವಸುದೇವನು ತಲೆಬಾಗಿ ಭಕ್ತಿಯಿಂದ ನೆಲದಮೇಲೆ ನಮಸ್ಕಾರ ಮಾಡಿದನು ಮತ್ತು ರೋಮಾಂಚಗೊಂಡ ಶರೀರವುಳ್ಳವನಾಗಿ ಅತ್ಯಂತ ಭಕ್ತಿಯಿಂದ ತನ್ನ ತಲೆಯನ್ನು ಬಾಗಿಸಿಕೊಂಡು ದೇವಶ್ರೇಷ್ಠರನ್ನೂ ಮತ್ತು ದೇವತೆಗಳನ್ನೂ ಸ್ತೋತ್ರಮಾಡಿದನು.

೩೯–೪೧. ವಸುದೇವನು ಹೇಳುತ್ತಾನೆ :— ಪರಬ್ರಹ್ಮನೂ ಪರಮಪದನೂ ಪರಮೇಶನೂ ಪರಾತ್ಪರನೂ ಜಗತ್ಪಾಲಕನೂ ವೇದಗಳಿಗೆ ಜನಕನೂ ಪ್ರಪಂಚವನ್ನು ಸೃಷ್ಟಿಮಾಡುವವನೂ ಸೃಷ್ಟಿಗೆ ಕಾರಣನೂ ನಾಶರಹಿತನೂ ಆದ ಬ್ರಹ್ಮನು ತಾನಾಗಿಯೇ ನನ್ನ ಮನೆಗೆ ಬಂದಿರುವನು. ದೇವಶ್ರೇಷ್ಠರಿಗೂ ಮುನಿಶ್ರೇಷ್ಠರಿಗೂ ಸಿದ್ಧಶ್ರೇಷ್ಠರಿಗೂ ಗುರುಗಳಿಗೂ ಗುರುವಾಗಿರುವ ಯಾವನ ಪಾದಕಮಲವನ್ನು ಒಂದು ಕ್ಷಣಕಾಲ ಸ್ವಪ್ನದಲ್ಲಿಯೂ ಕೂಡ ನೋಡಲಸಾಧ್ಯವೋ ಯಾವನನ್ನು

ಸರ್ವಸಂಕಟಮುತ್ತೀರ್ಯ ಕಲ್ಯಾಣಂ ಲಭತೇ ನರಃ ।
ಸರ್ವಾಗ್ರೇ ಪೂಜನಂ ಯಸ್ಯ ದೇವಾನಾಮುಗ್ರಣೀಃ ಪರಃ ॥ ೪೨ ॥

ಘಟೇಷು ಮಂಗಲಂ ಮಂತ್ರೈರ್ಭಕ್ತ್ಯಾ ಚಾವಾಹನೇನ ಚ ।
ಸ್ವಯಂ ಗಣೇಶೋ ಭಗವಾನ್ ಸಾಕ್ಷಾದ್ವಿಘ್ನವಿನಾಶಕಃ ॥ ೪೩ ॥

ಕಾರ್ತಿಕೇಯಶ್ಚ ಭಗವಾನ್ದೇವಾದೀನಾಂ ಚ ಪೂಜಿತಃ ।
ದೇವಾನಾಂ ಪ್ರವರಾ ಪೂಜ್ಯಾ ಮಹಾಲಕ್ಷ್ಮೀಃ ಪರಾತ್ಪರಾ ॥ ೪೪ ॥

ಮದ್ಗೇಹೇ ಪಾರ್ವತೀ ಮಾತಾ ಜಗತಾಮಾದಿರೂಪಿಣೀ ।
ಸರ್ವಶಕ್ತಿಸ್ವರೂಪಾ ಚ ಮೂಲಪ್ರಕೃತಿರೀಶ್ವರೀ ॥ ೪೫ ॥

ಪರಾಪರಾಣಾಂ ಪರಮಾ ಪರಬ್ರಹ್ಮಸ್ವರೂಪಿಣೀ ।
ಯಸ್ಯಾಃ ಪಾದೌ ಸಮಾರಾಧ್ಯ ವಾಂಛಿತಂ ಲಭತೇ ನರಃ ॥ ೪೬ ॥

---

ಸ್ಮರಿಸಿದ ಮಾತ್ರದಿಂದ ಸಕಲ ಅನಿಷ್ಟಗಳೂ ಓಡಿಹೋಗುವುವೋ ಅಂಥಾ ಈಶ್ವರನು ತಾನೇ ನನ್ನ ಮನೆಗೆ ಬಂದಿರುವನು.

೪೨–೪೩. ಯಾವನನ್ನು ಎಲ್ಲರಿಗಿಂತಲೂ ಮೊದಲು ಪೂಜೆಮಾಡುತ್ತಾರೆಯೋ ಕಲಶಗಳಲ್ಲಿ ಮಂಗಳಕರವಾದ ಮಂತ್ರಗಳಿಂದ ಭಕ್ತಿಪೂರ್ವಕವಾಗಿ ಆವಾಹನೆಯನ್ನು ಮಾಡುವುದರಿಂದ ಮಾನವನು ಸಕಲ ಸಂಕಟಗಳನ್ನೂ ದಾಟಿ ಮಂಗಳವನ್ನು ಹೊಂದುತ್ತಾನೆಯೋ ಅಂಥಾ ಪೂಜ್ಯನೂ ವಿಘ್ನಗಳನ್ನು ನಾಶಮಾಡುವವನೂ ಆದ ಗಣೇಶನು ತಾನಾಗಿಯೇ ನನ್ನ ಮನೆಗೆ ಬಂದಿರುವನು.

೪೪. ದೇವತೆಗಳೇ ಮುಂತಾದವರಿಂದ ಪೂಜಿತನಾದ ಮಹಾತ್ಮನಾದ ಷಣ್ಮುಖನು ನನ್ನ ಮನೆಗೆ ಬಂದಿರುವನು. ದೇವತೆಗಳಿಗೆ ಮುಖ್ಯಳೂ ಪೂಜ್ಯಳೂ ಪರಾತ್ಪರಳೂ ಆದ ಮಹಾಲಕ್ಷ್ಮೀಯು ನನ್ನ ಮನೆಗೆ ಬಂದಿರುವಳು.

೪೫. ಜಗತ್ತಿಗೆ ಆದಿಯಾದ ತಾಯಿಯಾದ ಸಕಲ ಶಕ್ತಿಸ್ವರೂಪಳೂ ಮೂಲ ಪ್ರಕೃತಿಯೂ ಈಶ್ವರಿಯೂ ಆದ ಪಾರ್ವತಿಯು ನನ್ನ ಮನೆಗೆ ಬಂದಿರುವಳು.

೪೬–೪೭. ಪರಾಪರ ವಸ್ತುಗಳಿಗಿಂತಲೂ ಉತ್ಕೃಷ್ಟಳಾದ ಪರಬ್ರಹ್ಮರೂಪಿಣಿಯಾದ ಯಾವಳ ಪಾದಕಮಲಗಳನ್ನು ಪೂಜೆ ಮಾಡಿ ಮಾನವನು ಇಷ್ಟವನ್ನು ಹೊಂದುತ್ತಾನೆಯೋ ಶರತ್ಕಾಲದಲ್ಲಿ ಭಕ್ತಿಯಿಂದ ಯಾವಳು ಪೂಜಿಸಲ್ಪಡುತ್ತಾಳೆಯೋ

ಶರತ್ಕಾಲೇ ಚ ಭಕ್ತ್ಯಾ ಚ ಸಾ ಸಾಕ್ಷಾನ್ಮಮಮಂದಿರೇ ।
ಸರ್ವದೇವೈಶ್ಚ ಸಹಿತಾ ಸಗಣಾ ಭಕ್ತವತ್ಸಲಾ　　|| ೪೭ ||

ಕೃಪಾಮಯೀ ಚ ಕೃಪಯಾ ಚಾವಿರ್ಭೂತಾ ಚ ಭಾರತೇ ।
ಧನ್ಯೋಽಹಂ ಕೃತಕೃತ್ಯೋಽಹಂ ಸಫಲಂ ಜೀವನಂ ಮಮ　　|| ೪೮ ||

ಆಗತಾಸಿ ಯತೋ ದುರ್ಗೇ ಪರಮಾದ್ಯಾ ಚ ಮದ್ಗೃಹಂ ।
ಏವಂ ಸರ್ವಾಂಶ್ಚ ತುಷ್ಟಾವ ಕ್ರಮೇಣ ಚ ಪರಸ್ಪರಂ　　|| ೪೯ ||

ಸರ್ವಾನ್ಮುನೀಂದ್ರಾನ್ವಿಪ್ರಾಂಶ್ಚ ಗಲೇ ಬದ್ಧ್ವಾಂಶುಕಂ ಮುದಾ ।
ಪ್ರತ್ಯೇಕಂ ವಾಸಯಾಮಾಸ ರತ್ನಸಿಂಹಾಸನೇ ವರೇ　　|| ೫೦ ||

ಪೂಜಯಾಮಾಸ ವಿಧಿವತ್ಕ್ರಮೇಣ ಚ ಪೃಥಕ್ಪೃಥಕ್ ।
ಪ್ರತ್ಯೇಕಂ ವರಯಾಮಾಸ ಬ್ರಹ್ಮಾದೀಂಶ್ಚ ಸುರಾನಪಿ　　|| ೫೧ ||

---

ಅಂಥಾ ಭಕ್ತರಲ್ಲಿ ಪ್ರೀತಿಯುಳ್ಳ ಪಾರ್ವತಿಯು ಸಕಲ ದೇವತೆಗಳಿಂದಲೂ ತನ್ನ ಗಣಗಳಿಂದಲೂ ಸಮೇತಳಾಗಿ ನನ್ನ ಮನೆಗೆ ಬಂದಿರುವಳು.

೪೮–೪೯. ಕೃಪಾಮಯಳಾದ ದೇವಿಯು ಭಕ್ತರಮೇಲಿನ ದಯೆಯಿಂದ ಭಾರತಭೂಮಿಯಲ್ಲಿ ಅವತರಿಸಿರುವಳು. ಎಲೈ ದುರ್ಗಿಯೇ! ಎಲ್ಲದಕ್ಕಿಂತಲೂ ಮೊದಲಿಗಳಾದ ನೀನು ನನ್ನ ಮನೆಗೆ ಬಂದಿರುವ ಕಾರಣ ನಾನು ಧನ್ಯನೂ ಕೃತಕೃತ್ಯನೂ ಆದೆನು. ನನ್ನ ಜೀವನವು ಸಫಲವಾಯಿತು. ಈ ಪ್ರಕಾರವಾಗಿ ಕ್ರಮವಾಗಿ ಎಲ್ಲರನ್ನೂ ಸ್ತೋತ್ರಮಾಡಿದನು.

೫೦. ತನ್ನ ವಸ್ತ್ರವನ್ನು ಕುತ್ತಿಗೆಗೆ ಕಟ್ಟಿಕೊಂಡು ಸಂತೋಷದಿಂದ ಪ್ರತ್ಯೇಕ ಪ್ರತ್ಯೇಕವಾಗಿ ಉತ್ತಮವಾದ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದನು.

೫೧–೫೨. ಕ್ರಮವಾಗಿ ನಿಯಮಾನುಸಾರ ಬೇರೆ ಬೇರೆಯಾಗಿ ಪೂಜೆ ಮಾಡಿದನು. ಬ್ರಹ್ಮನೇ ಮುಂತಾದ ದೇವತೆಗಳನ್ನು ಬೇರೆಬೇರೆಯಾಗಿ ವರಣ ಮಾಡಿದನು. ಮುನಿಗಳ ಗುಂಪನ್ನೂ, ಬ್ರಾಹ್ಮಣರನ್ನೂ ವರಣಮಾಡಿದನು.

ಮುನಿವರ್ಗಾನ್ಬ್ರಾಹ್ಮಣಾಂಶ್ಚ ಭಕ್ತ್ಯಾ ಗರ್ಗಂ ಪುರೋಹಿತಂ ।
ರತ್ನೈಃ ಪ್ರವಾಲೈರ್ಮಣಿಭಿರ್ಮುಕ್ತಾಮಾಣಿಕ್ಯಹೀರಕೈಃ ॥ ೫೨ ॥

ಭೂಷಣೈರ್ವಸನೈಶ್ಚೈವ ಮಾಲ್ಯೈಶ್ಚ ಗಂಧಚಂದನೈಃ ।
ರತ್ನಸಿಂಹಾಸನೇ ರಮ್ಯೇ ಸರ್ವೇಷಾಂ ಮಧ್ಯದೇಶತಃ ॥ ೫೩ ॥

ಗಣೇಶಂ ವರಯಾಮಾಸ ಪೂಜಾರ್ಥಂ ಶುಭಕರ್ಮಣಿ ।
ಸಪ್ತತೀರ್ಥೋದಕೇನೈವ ಸುವರ್ಣಕಲಶೇನ ಚ ॥ ೫೪ ॥

ಪುಷ್ಪಚಂದನಯುಕ್ತೇನ ಶೀತೇನ ವಾಸಿತೇನ ಚ ।
ಸ್ವರ್ಗಗಂಗಾಜಲೇನೈವ ಪುಷ್ಕರೋದಕಪುಣ್ಯತಃ ॥ ೫೫ ॥

ಪಂಚಾಮೃತೇನ ಶುದ್ಧೇನ ಪಂಚಗವ್ಯೇನ ಭಕ್ತಿತಃ ।
ಹೇರಂಬಂ ಸ್ನಾಪಯಾಮಾಸ ಸಮುದ್ರೋದೇನ ಮಂತ್ರತಃ ॥ ೫೬ ॥

ವಾರಯಾಮಾಸ ಮಾಲ್ಯೇನ ಪಾರಿಜಾತಸ್ಯ ನಾರದ ।
ರತ್ನೇಂದ್ರಭೂಷಣೇನೈವ ವಹ್ನಿಶುದ್ಧೇನ ವಾಸಸಾ ॥ ೫೭ ॥

---

ಮತ್ತು ಭಕ್ತಿಯಿಂದ ಪುರೋಹಿತನಾದ ಗರ್ಗಮುನಿಯನ್ನು ವರಣಮಾಡಿದನು. ಮತ್ತು ಎಲ್ಲರನ್ನೂ ರತ್ನಗಳಿಂದಲೂ, ಹವಳಗಳಿಂದಲೂ, ಮಣಿಗಳಿಂದಲೂ ಮತ್ತು ಮುತ್ತು ಮಾಣಿಕ್ಯ ಹೀರಕ ಇವುಗಳಿಂದಲೂ, ಆಭರಣಗಳಿಂದಲೂ, ವಸ್ತ್ರಗಳಿಂದಲೂ ಪೂಜಿಸಿದನು. ಎಲ್ಲರ ಮಧ್ಯದಲ್ಲಿ ಮನೋಹರವಾದ ರತ್ನಸಿಂಹಾಸನದಲ್ಲಿ ಉಪನಯನ ಶುಭಕರ್ಮಕ್ಕಾಗಿ ಗಣೇಶನನ್ನು ಪೂಜೆ ಮಾಡುವುದಕ್ಕೋಸ್ಕರ ಪ್ರಾರ್ಥಿಸಿದನು. ಚಿನ್ನದ ಬಿಂದಿಗೆಗಳಲ್ಲಿರುವ ಏಳು ತೀರ್ಥಗಳ ನೀರಿನಿಂದಲೂ, ಹೂವು ಗಂಧಗಳಿಂದ ಕೂಡಿ ಸುವಾಸನೆಯಾಗಿಯೂ, ತಣ್ಣಗೂ ಇರುವ ಸ್ವರ್ಗಗಂಗೆಯ ನೀರಿನಿಂದಲೂ, ಪುಷ್ಕರತೀರ್ಥದ ಪುಣ್ಯಕರವಾದ ನೀರಿನಿಂದಲೂ, ಶುದ್ಧವಾದ ಪಂಚಾಮೃತದಿಂದಲೂ ಪಂಚಗವ್ಯದಿಂದಲೂ, ಸಮುದ್ರದ ನೀರಿನಿಂದಲೂ ಭಕ್ತಿಪೂರ್ವಕವಾಗಿ ಮಂತ್ರವನ್ನು ಹೇಳುತ್ತ ಗಣೇಶನನ್ನು ಅಭಿಷೇಕಮಾಡಿದನು.

೫೭–೫೮. ಎಲೈ ನಾರದನೇ! ಪಾರಿಜಾತದ ಹೂವಿನ ಸರಗಳಿಂದಲೂ ಶ್ರೇಷ್ಠವಾದ ರತ್ನಾಭರಣಗಳಿಂದಲೂ, ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳಿಂದಲೂ, ಸುವಾಸನೆಯಾದ ಹೂವುಗಳಿಂದಲೂ, ರತ್ನಹಾರಗಳಿಂದಲೂ, ಉಂಗುರಗಳಿಂದಲೂ

ಗಂಧಚಂದನಪುಷ್ಪೈಶ್ಚ ರತ್ನಮಾಲ್ಯಾಂಗುಲೀಯಕಂ ।
ತುಷ್ಟಾವ ಪಾರ್ವತೀಪುತ್ರಂ ಸರ್ವದೈವಾಧಿಪಂ ಶುಭಂ ।
ವಿಘ್ನವಿಘ್ನಕರಂ ಶಾಂತಂ ಭಗವಂತಂ ಸನಾತನಂ || ೫೮ ||

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣ ನಾರದ ಸಂವಾದೇ
ಭಗವದುಪನಯನೇ ಗಣೇಶಾಭಿಷೇಕೇ
ನವನವತಿತಮೋಽಧ್ಯಾಯಃ.

---

ಪೂಜಿಸಿದನು. ಮತ್ತು ಪಾರ್ವತಿಯ ಮಗನೂ ಸಕಲ ದೇವತೆಗಳಿಗೂ ಯಜಮಾನನೂ ಮಂಗಳಕರನೂ ವಿಘ್ನಗಳಿಗೆ ವಿಘ್ನವನ್ನುಂಟುಮಾಡುವವನೂ ಶಾಂತನೂ ನಾಶರಹಿತನೂ ಪೂಜ್ಯನೂ ಆದ ಆ ಗಣೇಶನನ್ನು ಸ್ತೋತ್ರಮಾಡಿದನು.

ಇಂತು ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿನ
ನಾರಾಯಣ ನಾರದ ಸಂವಾದದಲ್ಲಿನ ಭಗವಂತನ ಉಪನಯನದಲ್ಲಿ
ಗಣೇಶಾಭಿಷೇಕದಲ್ಲಿ ತೊಂಭತ್ತೊಂಭತ್ತನೆಯ ಅಧ್ಯಾಯವು
ಸಮಾಪ್ತವಾದುದು.

## ತೊಂಭತ್ತೊಂಭತ್ತನೆಯ ಅಧ್ಯಾಯದ ಸಾರಾಂಶ

ಯದುಕುಲ ಪುರೋಹಿತನಾದ ಗರ್ಗ ಮಹರ್ಷಿಯು ವಸುದೇವನ ಮನೆಗೆ ಬಂದು ಕುಶಲಪ್ರಶ್ನೆ ಮಾಡಿ, ಶ್ರೀಕೃಷ್ಣ ಬಲರಾಮರನ್ನು ನೋಡಿ ಅವರಿಗೆ ಶುಭ ಮುಹೂರ್ತದಲ್ಲಿ ಉಪನಯನ ನಡೆಸಲು ಸಕಾಲವಾಗಿದೆ ಎಂದು ವಸುದೇವನಿಗೆ ಅರುಹಿದನು. ಪುರೋಹಿತನ ಅಪ್ಪಣೆಯಂತೆ ವಸುದೇವನು ಬ್ರಹ್ಮಾದಿ ಸಕಲ ದೇವತೆಗಳಿಗೂ ಉಪನಯನ ಮಹೋತ್ಸವಕ್ಕೆ ಆಹ್ವಾನವಿತ್ತನು. ಬ್ರಹ್ಮ, ಶಂಕರ, ಗಣೇಶ ಮುಂತಾದ ಸಕಲದೇವತೆಗಳೂ ಮಹೋತ್ಸವಕ್ಕೆ ಆಗಮಿಸಿದರು. ವಸುದೇವನು ಅವರೆಲ್ಲರನ್ನೂ ಸ್ವಾಗತಿಸಿ ಅವರಿಗೆ ಉಚಿತ ವಸತಿಗಳನ್ನು ಕಲ್ಪಿಸಿಕೊಟ್ಟು ಶುಭಮುಹೂರ್ತದಲ್ಲಿ ಉಪನಯನದ ಅಂಗವಾಗಿ ಗಣಪತಿಯನ್ನು ಭಕ್ತಿಯಿಂದ ಪೂಜಿಸಿದನು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಅಥಾದಿತಿರ್ದಿತಿಶ್ಚೈವ ದೇವಕೀ ರೋಹಿಣೀ ರತಿಃ ।
ಸರಸ್ವತೀ ಚ ಸಾವಿತ್ರೀ ಯಶೋದಾ ಚ ಪತಿವ್ರತಾ || ೧ ||

ಲೋಪಾಮುದ್ರಾರುಂಧತೀ ಚ ಅಹಲ್ಯಾ ತಾರಕಾ ತಥಾ ।
ಯಯುಸ್ತಾಃ ಪಾರ್ವತೀಂ ದೃಷ್ಟ್ವಾ ವೇಗೇನ ಮಂದಿರಾದಪಿ || ೨ ||

ಪರಸ್ಪರಂ ಚ ಸಂಭಾಷ್ಯ ಸಮಾಶ್ಲಿಷ್ಯ ಪುನಃಪುನಃ ।
ಪ್ರಣಮ್ಯ ವೇಶಯಾಮಾಸುರ್ಮಂದಿರಂ ರತ್ನನಿರ್ಮಿತಂ || ೩ ||

---

### ನೂರನೆಯ ಅಧ್ಯಾಯವು.

೧-೨. ಶ್ರೀ ನಾರಾಯಣನು ಹೇಳುತ್ತಾನೆ:— ಅನಂತರ ಅದಿತಿಯೂ ದಿತಿಯೂ ದೇವಕಿಯೂ ರೋಹಿಣಿಯೂ ರತಿಯೂ ಸರಸ್ವತಿಯೂ ಸಾವಿತ್ರಿಯೂ ಪತಿವ್ರತೆಯಾದ ಯಶೋದೆಯೂ ಲೋಪಾಮುದ್ರೆಯೂ ಅರುಂಧತಿಯೂ ಅಹಲ್ಯೆಯೂ ತಾರಕೆಯೂ ಎಲ್ಲರೂ ಪಾರ್ವತಿಯನ್ನು ನೋಡಿದವರಾಗಿ ಜಾಗ್ರತೆಯಾಗಿ ತಮ್ಮ ಮನೆಯಿಂದ ಹೊರಟರು.

೩. ಒಬ್ಬರಿಗೊಬ್ಬರು ಮಾತನಾಡುತ್ತ ಮತ್ತೆ ಮತ್ತೆ ಆಲಿಂಗನೆಮಾಡಿಕೊಂಡು ನಮಸ್ಕಾರವನ್ನು ಮಾಡಿ ರತ್ನಗಳಿಂದ ಮಾಡಲ್ಪಟ್ಟ ಮನೆಗೆ ಪ್ರವೇಶ ಮಾಡಿಸಿದರು.

ರತ್ನಸಿಂಹಾಸನೇ ರಮ್ಯೇ ವಾಸಯಾಮಾಸುರೀಶ್ವರೀಂ ।
ವರಯಾಮಾಸ ಮಾಲ್ಯೇನ ವಾಸಸಾ ರತ್ನಭೂಷಣೈಃ ॥ ೪ ॥

ಪಾರಿಜಾತಸ್ಯ ಪುಷ್ಪಂ ಚ ಶಕ್ರಾನೀತಂ ಮನೋಹರಂ ।
ದದೌ ತತ್ಪಾದಪದ್ಮೇ ಚ ದೇವಕೀ ಭಕ್ತಿಪೂರ್ವಕಂ ॥ ೫ ॥

ಸಿಂದೂರಬಿಂದುಂ ಸೀಮಂತೇ ಭಾಲೇ ಚಂದನಬಿಂದುಕಂ ।
ಕಸ್ತೂರೀಕುಂಕುಮಾದೀಂಶ್ಚ ಪ್ರದದೌ ಪರಿತಸ್ತಯೋಃ ॥ ೬ ॥

ಮಿಷ್ಟಾನ್ನಂ ಭೋಜಯಾಮಾಸ ಶೀತತೋಯಂ ಸುವಾಸಿತಂ ।
ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿಸುವಾಸಿತಂ ॥ ೭ ॥

ಅಲಕ್ತಕಂ ಚ ಪ್ರದದೌ ನಖೇಷು ಪಾದಪದ್ಮಯೋಃ ।
ಕುಂಕುಮಸ್ಯಾಪಿ ರಾಗಂ ಚ ಸಿಷೇವೇ ಶ್ವೇತಚಾಮರೈಃ ॥ ೮ ॥

---

೪. ಆ ದೇವಿಯನ್ನು ಮನೋಹರವಾದ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದರು. ಹೂವಿನ ಮಾಲಿಕೆಯಿಂದಲೂ ವಸ್ತ್ರಗಳಿಂದಲೂ ರತ್ನಮಯವಾದ ಆಭರಣಗಳಿಂದಲೂ ಪೂಜಿಸಿದರು.

೫. ದೇವಕಿಯು ಭಕ್ತಿಪೂರ್ವಕವಾಗಿ ಆ ಪಾರ್ವತಿಯ ಪಾದಕಮಲಗಳ ಮೇಲೆ ಇಂದ್ರನಿಂದ ತರಲ್ಪಟ್ಟಿದ್ದ ಮನೋಹರವಾದ ಪಾರಿಜಾತದ ಹೂವುಗಳನ್ನು ಪೂಜೆಮಾಡಿದಳು.

೬. ಬೈತಲೆಯಪ್ರದೇಶದಲ್ಲಿ ಚಂದ್ರದ ಬೊಟ್ಟುಗಳನ್ನೂ ಹಣೆಯಲ್ಲಿ ಗಂಧದ ಬೊಟ್ಟನ್ನೂ ಅದರ ಸುತ್ತಲೂ ಕಸ್ತೂರಿ ಮತ್ತು ಕೇಸರಿಯನ್ನೂ ಇಟ್ಟಳು.

೭. ರುಚಿಕರವಾದ ಅನ್ನದಿಂದ ಭೋಜನವನ್ನು ಮಾಡಿಸಿದಳು. ತಣ್ಣಗಿರುವ ಸುವಾಸನೆಯಾದ ನೀರನ್ನು ಕೊಟ್ಟಳು. ಪಚ್ಚಕರ್ಪೂರವೇ ಮೊದಲಾದವುಗಳಿಂದ ಸುವಾಸನೆಯಾಗಿರುವ ಉತ್ತಮವೂ ಮನೋಹರವೂ ಆಗಿರುವ ತಾಂಬೂಲವನ್ನು ಕೊಟ್ಟಳು.

೮. ಪಾದಕಮಲಗಳ ಉಗುರುಗಳಿಗೆ ಅರಗಿನ ರಸವನ್ನೂ ಕೇಸರಿಯ ಬಣ್ಣವನ್ನೂ ಹಚ್ಚಿದಳು. ಬಿಳಿಯ ಚಾಮರಗಳಿಂದ ಸೇವಿಸಿದಳು.

ಸಂಪೂಜ್ಯ ಪಾರ್ವತೀಂ ದೇವೀಂ ಮುನಿಪತ್ನೀಃ ಕ್ರಮೇಣ ಚ ।
ಪೂಜಯಾಮಾಸ ವಿಧಿವತ್ಪತಿಪುತ್ರವತೀಃ ಸತೀಃ ॥ ೯ ॥

ರಾಜಕನ್ಯಾ ದೇವಕನ್ಯಾ ನಾಗಕನ್ಯಾ ಮನೋಹರಾಃ ।
ಮುನಿಕನ್ಯಾ ಬಂಧುಕನ್ಯಾಃ ಪೂಜಯಾಮಾಸ ಸುವ್ರತ ॥ ೧೦ ॥

ವಾದ್ಯಂ ನಾನಾವಿಧಂ ರಮ್ಯಂ ವಾದಯಾಮಾಸ ಕೌತುಕಾತ್ ।
ಮಂಗಲಂ ಕಾರಯಾಮಾಸ ಭೋಜಯಾಮಾಸ ಬ್ರಾಹ್ಮಣಾನ್ ॥ ೧೧ ॥

ಭೈರವೀಂ ಪೂಜಯಾಮಾಸ ಮಥುರಾಗ್ರಾಮದೇವತಾಂ ।
ಉಪಚಾರೈಃ ಷೋಡಶಭಿಃ ಷಷ್ಠೀಂ ಮಂಗಲಚಂಡಿಕಾಂ ॥ ೧೨ ॥

ಪುಣ್ಯಂ ಸ್ವಸ್ತ್ಯಯನಂ ಶುದ್ಧಂ ಕಾರಯಾಮಾಸ ಮಂಗಲಂ ।
ವೇದಾಂಶ್ಚ ಪಾಠಯಾಮಾಸ ವಸುದೇವಸ್ಯ ವಲ್ಲಭಾ ॥ ೧೩ ॥

---

೯. ಪಾರ್ವತೀದೇವಿಯನ್ನು ಪೂಜೆಮಾಡಿ ಕ್ರಮವಾಗಿ ಮುನಿಪತ್ನಿಯರನ್ನೂ ಪತಿವ್ರತೆಯಾದ ಪತಿಪುತ್ರವತಿಯರಾದ ಸ್ತ್ರೀಯರನ್ನೂ ನಿಯಮದಿಂದ ಪೂಜಿಸಿದಳು.

೧೦. ಎಲೈ ಸುವ್ರತನಾದ ನಾರದನೇ! ಅನಂತರ ರಾಜಕನ್ಯೆಯರನ್ನೂ ದೇವಕನ್ಯೆಯರನ್ನೂ ಮನೋಹರರಾದ ನಾಗಕನ್ಯೆಯರನ್ನೂ ಮುನಿಕನ್ಯೆಯರನ್ನೂ ಬಂಧುಕನ್ಯೆಯರನ್ನೂ ಪೂಜೆಮಾಡಿದಳು.

೧೧. ನಾನಾವಿಧವಾದ ವಾದ್ಯಗಳನ್ನು ಕುತೂಹಲದಿಂದ ಮೊಳಗಿಸಿದಳು. ಮಂಗಳವನ್ನು ಮಾಡಿಸಿದಳು ಮತ್ತು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದಳು.

೧೨. ಮಥುರಾಪಟ್ಟಣದ ಗ್ರಾಮದೇವತೆಯಾದ ಭೈರವಿಯನ್ನು ಪೂಜೆ ಮಾಡಿದಳು. ಷಷ್ಠೀದೇವಿಯನ್ನೂ ಮಂಗಲ ಚಂಡಿಕೆಯನ್ನೂ ಷೋಡಶೋಪಚಾರ ಗಳಿಂದ ವಿಧಿಪೂರ್ವಕವಾಗಿ ಪೂಜಿಸಿದಳು.

೧೩. ವಸುದೇವನ ವಲ್ಲಭಳಾದ ದೇವಕಿಯು ಪುಣ್ಯಕರವೂ ಮಂಗಲಕರವೂ ಶುದ್ಧಿಕರವೂ ಆದ ಸ್ವಸ್ತಿವಾಚನವನ್ನು ಮಾಡಿಸಿದಳು. ವೇದಗಳ ಪಾರಾಯಣ ವನ್ನೂ ಮಾಡಿಸಿದಳು.

ಸ್ವರ್ಗಂಗಾಸುಜಲೇನೈವ ಸುವರ್ಣಕಲಶೇನ ಚ ।
ಸ್ನಾಪಯಾಮಾಸ ಸಬಲಂ ಶ್ರೀಕೃಷ್ಣಂ ಪುತ್ರವತ್ಸಲಾ ॥ ೧೪ ॥

ವಸ್ತ್ರಚಂದನಮಾಲ್ಯೈಶ್ಚ ತಯೋರ್ವೇಷಂ ಚಕಾರ ಸಾ ।
ರತ್ನೇಂದ್ರಸಾರನಿರ್ಮಾಣಭೂಷಣೈಶ್ಚ ಮನೋಹರೈಃ ॥ ೧೫ ॥

ಮಾತೃಭೂಷಣಭೂಷಾಢ್ಯಃ ಸಬಲಃ ಕೃಷ್ಣ ಏವ ಚ ।
ಆಯಯೌ ಚ ಸಭಾಂ ದೇವಮುನೀಂದ್ರಾಣಾಂ ಚ ನಾರದ ॥ ೧೬ ॥

ದೃಷ್ಟ್ವಾ ತಂ ಜಗತಾಂ ನಾಥಮುತ್ತಸ್ಥೌ ಪ್ರಜವೇನ ಚ ।
ಸ್ವಯಂ ವಿಧಾತಾ ಶಂಭುಶ್ಚ ಶೇಷೋ ಧರ್ಮಶ್ಚ ಭಾಸ್ಕರಃ ॥ ೧೭ ॥

ದೇವಾಶ್ಚ ಮುನಯಶ್ಚೈವ ಕಾರ್ತಿಕೇಯೋ ಗಣೇಶ್ವರಃ ।
ಪೃಥಕ್ಪೃಥಕ್ ಕ್ರಮೇಣೈವ ತುಷ್ಟಾವ ಪರಮೇಶ್ವರಂ ॥ ೧೮ ॥

---

೧೪. ಚಿನ್ನದ ಕಲಶದಿಂದ ದೇವಗಂಗೆಯ ನೀರಿನಿಂದ ಪುತ್ರಪ್ರೀತಿಯುಳ್ಳ ದೇವಕಿಯು ಬಲದೇವಸಹಿತನಾದ ಶ್ರೀ ಕೃಷ್ಣನಿಗೆ ಸ್ನಾನವನ್ನು ಮಾಡಿಸಿದಳು.

೧೫. ಆ ದೇವಕಿಯು ಬಲದೇವಕೃಷ್ಣರಿಗೆ ವಸ್ತ್ರಗಳಿಂದಲೂ ಗಂಧದಿಂದಲೂ ಹೂವಿನ ಮಾಲಿಕೆಗಳಿಂದಲೂ ದಿವ್ಯರತ್ನಗಳ ಆಭರಣಗಳಿಂದಲೂ ಅಲಂಕಾರ ಮಾಡಿದಳು.

೧೬. ಎಲೈ ನಾರದನೇ! ಬಲದೇವನಿಂದೊಡಗೂಡಿದ ಆ ಕೃಷ್ಣನು ತಾಯಿಯು ಮಾಡಿದ ಅಲಂಕಾರದಿಂದ ಕಂಗೊಳಿಸುತ್ತಿರುವವನಾಗಿ ದೇವತೆಗಳಿಂದಲೂ ಮುನಿಶ್ರೇಷ್ಠರಿಂದಲೂ ಕೂಡಿರುವ ಸಭಾಮಂದಿರಕ್ಕೆ ಬಂದನು.

೧೭–೧೮. ಜಗದೊಡೆಯನಾದ ಆ ಕೃಷ್ಣನನ್ನು ನೋಡಿದವರಾಗಿ ಬ್ರಹ್ಮನೂ ಶಂಕರನೂ ಆದಿಶೇಷನೂ ಧರ್ಮನೂ ಸೂರ್ಯನೂ ದೇವತೆಗಳೂ ಮುನಿಗಳೂ ಷಣ್ಮುಖನೂ ಗಣಪತಿಯೂ ಶೀಘ್ರವಾಗಿ ಮೇಲಕ್ಕೆದ್ದರು. ಎಲ್ಲರೂ ಆ ಪರಮೇಶ್ವರನನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕ್ರಮದಿಂದ ಸ್ತೋತ್ರಮಾಡಿದರು.

|| ಬ್ರಹ್ಮೋವಾಚ ||

ನಾಥಾನಿರ್ವಚನೀಯೋಽಸಿ ಭಕ್ತಾನುಗ್ರಹವಿಗ್ರಹಃ ।
ವೇದಾನಿರ್ವಚನೀಯಂ ಚ ಕಸ್ತ್ವಾಂ ಸ್ತೋತುಮಿಹೇಶ್ವರಃ || ೧೯ ||

|| ಶ್ರೀ ಮಹಾದೇವ ಉವಾಚ ||

ದೇಹೇಷು ದೇಹಿನಂ ಶಶ್ವತ್ಸ್ಥಿತಂ ನಿರ್ಲಿಪ್ತಮೇವ ಚ ।
ಕರ್ಮಿಣಾಂ ಕರ್ಮಣಾಂ ಶುದ್ಧಂ ಸಾಕ್ಷಿಣಂ ಸಾಕ್ಷತಂ ವಿಭುಂ ।
ಕಿಂ ಸ್ತೌಮಿ ರೂಪಶೂನ್ಯಂ ಚ ಗುಣಶೂನ್ಯಂ ಚ ನಿರ್ಗುಣಂ || ೨೦ ||

|| ಅನಂತ ಉವಾಚ ||

ಕಿಂ ವಾ ಜಾನಾಮ್ಯಹಂ ನಾಥ ತ್ವಾಮಜ್ಞೋಽನಂತಮೀಶ್ವರಂ || ೨೧ ||

ಅನಂತಕೋಟಿಬ್ರಹ್ಮಾಂಡಕಾರಣಂ ದುಃಖಕಾರಣಂ ।
ಮಹಾವಿಷ್ಣೋಶ್ಚ ಲೋಮ್ನಾಂ ಚ ವಿವರೇಷು ಜಲೇಷು ಚ || ೨೨ ||

---

೧೯. ಬ್ರಹ್ಮನು ಹೇಳುತ್ತಾನೆ :— ಎಲೈ ಪ್ರಭುವೇ ನೀನು ಮಾತಿನಿಂದ ಹೇಳಲಸಾಧ್ಯನಾಗಿರುವಿ ಮತ್ತು ಭಕ್ತರಿಗೆ ಅನುಗ್ರಹ ಮಾಡುವುದಕ್ಕೋಸ್ಕರವೇ ಶರೀರವನ್ನು ಧರಿಸಿರುವವನಾಗಿರುವಿ. ವೇದಗಳಿಗೂ ಹೇಳಲಸಾಧ್ಯನಾದ ನಿನ್ನನ್ನು ಇಲ್ಲಿ ಸ್ತೋತ್ರಮಾಡಲು ಯಾವನು ಸಮರ್ಥನಾಗಿರುತ್ತಾನೆ?

೨೦. ಶ್ರೀ ಮಹಾದೇವನು ಹೇಳುತ್ತಾನೆ ;— ಪ್ರಾಣಿಗಳ ದೇಹದಲ್ಲಿ ಯಾವಾಗಲೂ ವಾಸಮಾಡುವವನಾಗಿಯೂ ನಿರ್ಲಿಪ್ತನಾಗಿಯೂ ಕರ್ಮಿಷ್ಠರ ಕರ್ಮಗಳಿಗೆ ಸಾಕ್ಷಿಭೂತನೂ ಶುದ್ಧನೂ ನಾಶರಹಿತನೂ ವ್ಯಾಪಕನೂ ರೂಪಶೂನ್ಯನೂ ನಿರ್ಗುಣನೂ ಆದ ಪರಮಾತ್ಮನನ್ನು ನಾನು ಏನೆಂದು ಸ್ತೋತ್ರಮಾಡಲಿ ?

೨೧–೨೯. ಅನಂತನು ಹೇಳುತ್ತಾನೆ :— ಎಲೈ ಪ್ರಭುವೇ! ಅಜ್ಞನಾದ ನಾನು ಅನಂತನೂ ಈಶ್ವರನೂ ಅನಂತಕೋಟಿ ಬ್ರಹ್ಮಾಂಡಗಳಿಗೆ ಕಾರಣನೂ ದುಃಖಗಳನ್ನು ನಿವಾರಿಸುವವನೂ ಆದ ನಿನ್ನನ್ನು ಹೇಗೆ ತಿಳಿದುಕೊಳ್ಳಲಿ? ಮಹಾವಿಷ್ಣುವಿನ ರೋಮವಿವರಗಳಲ್ಲಿರುವ ನೀರುಗಳಲ್ಲಿ ವಿಚಿತ್ರಗಳೂ ಕೃತ್ರಿಮಗಳೂ ಆದ ಲೆಖ್ಖಮಾಡಲಸಾಧ್ಯವಾದಷ್ಟು ಪ್ರಪಂಚಗಳು ವಾಸವಾಗಿವೆ. ನಿನ್ನ ಅಂಶ ಸಂಭೂತರಾದ ಬ್ರಹ್ಮವಿಷ್ಣುಮಹೇಶ್ವರರೂ ಮತ್ತು ತೀರ್ಥಗಳೂ ಭಾರತಭೂಮಿಯೂ ನಿನ್ನ ಪ್ರತಿಬಿಂಬರೂಪಗಳಾಗಿವೆ. ನಾನು ಸೂಕ್ಷ್ಮವಾದ ಸರ್ಪಸ್ವರೂಪನಾಗಿ

ಸಂತಿ ವಿಶ್ವಾನ್ಯಸಂಖ್ಯಾನಿ ಚಿತ್ರಾಣಿ ಕೃತ್ರಿಮಾಣಿ ಚ ।
ಸಂತಿ ಸಂತಶ್ಚ ದೇವಾಶ್ಚ ಬ್ರಹ್ಮವಿಷ್ಣುಶಿವಾತ್ಮಕಾಃ ॥ ೨೩ ॥

ತ್ವದಂಶಾಃ ಪ್ರತಿಬಿಂಬೇಷು ತೀರ್ಥಾನಿ ಭಾರತಂ ತಥಾ ।
ಬ್ರಹ್ಮಾಂಡೈಕಸ್ಥಿತೋಽಹಂ ಚ ಸೂಕ್ಷ್ಮನಾಗಸ್ವರೂಪಕಃ ॥ ೨೪ ॥

ಸ್ಥಾಪಿತಶ್ಚ ತಯಾ ಕೂರ್ಮೇ ಗಜೇಂದ್ರೇ ಮಶಕೋ ಯಥಾ ।
ಪರಮಾಣುಪರಂ ಸೂಕ್ಷ್ಮಂ ವಿಶ್ವೇಷು ನಾಸ್ತಿ ಕುತ್ರಚಿತ್ ॥ ೨೫ ॥

ಮಹಾವಿಷ್ಣೋಃ ಪರಂ ಸ್ಥೂಲಂ ಸಮೋ ನಾಸ್ತಿ ಚ ಕುತ್ರಚಿತ್ ।
ಮಹಾವಿಷ್ಣೋಃ ಪರಸ್ತ್ವಂ ಚ ತ್ವತ್ಪರೋ ನಾಸ್ತಿ ಕಶ್ಚನ ॥ ೨೬ ॥

ಸ್ಥೂಲಾತ್ಸ್ಥೂಲತರೋ ದೇವಃ ಸೂಕ್ಷ್ಮಾತ್ಸೂಕ್ಷ್ಮತಮೋ ಮಹಾನ್ ।
ಆಧಾರಶ್ಚ ಮಹಾವಿಷ್ಣೋ ಜಲರೂಪೋ ಭವಾನ್ಸ್ವಯಂ ॥ ೨೭ ॥

ಜಲಾಧಾರೋ ಹಿ ಗೋಲೋಕಸ್ತ್ವಂ ಚ ಸ್ಥಾವರರೂಪಧೃಕ್ ।
ಸರ್ವಾಧಾರೋ ಮಹಾನ್ವಾಯುಃ ಶ್ವಾಸನಿಶ್ವಾಸರೂಪಕಃ ॥ ೨೮ ॥

ಭಕ್ತಾನುಗ್ರಹದೇಹಸ್ಯ ನಿತ್ಯಸ್ಯ ಭವತೋ ವಿಭೋ ।
ವಕ್ತ್ರೈರ್ಬಹುತರೈರ್ನಾಥ ತ್ವಯಾ ದತ್ತೈಃ ಪುರೈವ ಚ ।

---

ಬ್ರಹ್ಮಾಂಡದ ಮೂಲೆಯೊಂದರಲ್ಲಿರುವೆನು. ಕೂರ್ಮನನ್ನು ನೀನೇ ಆನೆಯಮೇಲೆ ಸೊಳ್ಳೆಯನ್ನಿಟ್ಟಂತೆ ಸ್ಥಾಪಿಸಿರುವಿ. ಪರಮಾಣುವಿಗಿಂತಲೂ ಸೂಕ್ಷ್ಮವಾದ ವಸ್ತುವು ಪ್ರಪಂಚಗಳಲ್ಲಿ ಎಲ್ಲಿಯೂ ಇಲ್ಲ. ಮಹಾವಿಷ್ಣುವಿಗೆ ಸಮನಾಗಿಯೂ ಉತ್ಕೃಷ್ಟವಾಗಿಯೂ ಇರುವ ವಸ್ತುವು ಎಲ್ಲಿಯೂ ಇಲ್ಲ. ಮಹಾವಿಷ್ಣುವಿಗಿಂತಲೂ ಉತ್ತಮನಾದವನು ನೀನು. ನಿನಗಿಂತಲೂ ಉತ್ತಮನಾದವನು ಯಾವನೂ ಇಲ್ಲ. ಎಲೈ ಮಹಾವಿಷ್ಣುವೇ! ದೇವನಾದ ನೀನು ದೊಡ್ಡವಸ್ತುಗಳಿಗೆಲ್ಲ ಅತಿ ದೊಡ್ಡವನೂ ಚಿಕ್ಕ ವಸ್ತುಗಳಿಗೆಲ್ಲ ಅತಿ ಚಿಕ್ಕವನೂ ಜಲರೂಪನಾಗಿ ಜಗತ್ತಿಗೆ ಆಧಾರಸ್ವರೂಪನಾಗಿರುವಿ. ಗೋಲೋಕವು ನೀರೇ ಆಧಾರವಾಗಿ ಉಳ್ಳದು. ನೀನೂ ಕೂಡ ಸ್ಥಾವರರೂಪವನ್ನು ಧರಿಸಿರುವಿ. ಸಕಲರಿಗೂ ಆಧಾರವಾಗಿ ಉಸಿರನ್ನು ಬಿಡುವುದು ಎಳೆದುಕೊಳ್ಳುವುದು ಈ ರೂಪನಾದ ವಾಯುವು ನೀನಾಗಿರುವಿ. ಎಲೈ ಪ್ರಭುವೇ! ಭಕ್ತರಿಗೆ ಅನುಗ್ರಹ ಮಾಡುವುದಕ್ಕಾಗಿಯೇ ದೇಹವನ್ನು ಧರಿಸಿರುವ ನಿತ್ಯನಾದ ನಿನ್ನನ್ನು ನಿನ್ನಿಂದಲೇ ಈ

ಸ್ತೋತುಮಿಚ್ಛಾಮಿ ತ್ವದ್ಯೋಗಂ ನ ದತ್ತಂ ಜ್ಞಾನಮೈಶ್ವರಂ ॥ ೨೯ ॥

॥ ದೇವಾ ಊಚುಃ ॥

ತ್ವಾಮನಂತಂ ಯದಿ ಸ್ತೋತುಂ ದೇವೋಽನಂತೋ ನ ಹೀಶ್ವರಃ ॥ ೩೦ ॥

ನ ಹಿ ಸ್ವಯಂ ವಿಧಾತಾ ಚ ನ ಹಿ ಜ್ಞಾನಾತ್ಮಕಃ ಶಿವಃ ।
ಸರಸ್ವತೀ ಜಡೀಭೂತಾ ಕಿಂ ಕುರ್ಮಃ ಸ್ತವನಂ ತವ ॥ ೩೧ ॥

॥ ಮುನೀಂದ್ರಾ ಊಚುಃ ॥

ವೇದಾ ನ ಶಕ್ತಾಃ ಸ್ತೋತುಂ ಚೇತ್ತ್ವಾಂ ಚೈವ ಜ್ಞಾತುಮೀಶ್ವರಂ ।
ವಯಂ ವೇದವಿದಃ ಸಂತಃ ಕಿಂ ಕುರ್ಮಃ ಸ್ತವನಂ ತವ ॥ ೩೨ ॥

ಇದಂ ಸ್ತೋತ್ರಂ ಮಹಾಪುಣ್ಯಂ ದೇವೈಶ್ಚ ಮುನಿಭಿಃ ಕೃತಂ ।
ಯಃ ಪಠೇತ್ಸಂಯತಃ ಶುದ್ಧಃ ಪೂಜಾಕಾಲೇ ಚ ಭಕ್ತಿತಃ ॥ ೩೩ ॥

---

ಮೊದಲು ಕೊಡಲ್ಪಟ್ಟ ಅನೇಕಮುಖಗಳಿಂದ ಸ್ತೋತ್ರಮಾಡಲು ಅಪೇಕ್ಷಿಸು ತ್ತಿರುವೆನು. ಆದರೆ ಅದಕ್ಕೆ ಯೋಗ್ಯವಾದ ಉತ್ತಮಜ್ಞಾನವು ನನಗೆ ನಿನ್ನಿಂದ ಕೊಡಲ್ಪಟ್ಟಿಲ್ಲ.

೩೦–೩೧. ದೇವತೆಗಳು ಹೇಳುತ್ತಾರೆ :— ಅನಂತನಾದ ನಿನ್ನನ್ನು ಸ್ತೋತ್ರ ಮಾಡಲು ದೇವನಾದ ಅನಂತನೂ ಬ್ರಹ್ಮನೂ ಜ್ಞಾನಸ್ವರೂಪನಾದ ಶಿವನೂ ಅಸಮರ್ಥರಾಗಿರುವರು. ಸರಸ್ವತಿಯು ಮೂಕಳಾಗಿರುವಳು. ಹೀಗಿರಲು ನಾವು ನಿನ್ನನ್ನು ಏನೆಂದು ಸ್ತೋತ್ರಮಾಡೋಣ ?

೩೨. ಮುನೀಂದ್ರರು ಹೇಳುತ್ತಾರೆ :— ಈಶ್ವರನಾದ ನಿನ್ನನ್ನು ಸ್ತೋತ್ರ ಮಾಡಲು ಮತ್ತು ತಿಳಿದುಕೊಳ್ಳಲು ವೇದಗಳೂ ಕೂಡ ಅಸಮರ್ಥಗಳಾಗಿವೆಯೆಂದ ಮೇಲೆ ವೇದಗಳನ್ನು ತಿಳಿದುಕೊಂಡವರಾದ ನಾವು ನಿನ್ನ ಸ್ತೋತ್ರವನ್ನು ಏನೆಂದು ಮಾಡೋಣ ?

೩೩–೩೪. ಮಹಾಪುಣ್ಯಕರವಾದ ದೇವತೆಗಳಿಂದಲೂ ಮುನಿಗಳಿಂದಲೂ ಮಾಡಲ್ಪಟ್ಟಿರುವ ಈ ಸ್ತೋತ್ರವನ್ನು ಯಾವಾಗಲೂ ಜಿತೇಂದ್ರಿಯನೂ ಪರಿಶುದ್ಧನೂ

**ಇಹ ಲೋಕೇ ಸುಖಂ ಭುಕ್ತ್ವಾ ಲಬ್ಧ್ವಾ ಜ್ಞಾನಂ ನಿರಂಜನಂ ।**
**ರತ್ನಯಾನಂ ಸಮಾರುಹ್ಯ ಗೋಲೋಕಂ ಸ ಚ ಗಚ್ಛತಿ ॥ ೩೪ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ**
**ಉತ್ತರಾರ್ಧೇ ನಾರಾಯಣ ನಾರದಸಂವಾದೇ**
**ಭಗವದುಪನಯನೇ ಶತತಮೋಽಧ್ಯಾಯಃ.**

---

ಆಗಿ ದೇವಪೂಜಾಕಾಲದಲ್ಲಿಯೂ ಭಕ್ತಿಯಿಂದ ಯಾರು ಹೇಳುತ್ತಾರೋ ಅವರು ಈ ಲೋಕದಲ್ಲಿ ಸುಖವನ್ನನುಭವಿಸಿ ಶುದ್ಧಜ್ಞಾನವನ್ನು ಪಡೆದು ರತ್ನಮಯವಾದ ವಿಮಾನದಲ್ಲಿ ಕುಳಿತುಕೊಂಡು ಗೋಲೋಕಕ್ಕೆ ಹೋಗುತ್ತಾರೆ.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರದನಾರಾಯಣ ಸಂವಾದದಲ್ಲಿನ
ಭಗವದುಪನಯನದಲ್ಲಿ
ನೂರನೆಯ ಅಧ್ಯಾಯವು ಸಮಾಪ್ತವಾದುದು.

## ನೂರನೆಯ ಅಧ್ಯಾಯದ ಸಾರಾಂಶ.

ದೇವಕಿಯು ಪಾರ್ವತಿಯನ್ನು ಭಕ್ತಿಪೂರ್ವಕವಾಗಿ ಪೂಜಿಸಿ ಕ್ರಮವಾಗಿ ಉಳಿದ ದೇವಿಯರನ್ನೂ ಗ್ರಾಮದೇವತೆಯನ್ನೂ ಪೂಜಿಸಿ ಸ್ವಸ್ತಿವಾಚನ ಮಾಡಿಸಿದಳು. ಅನಂತರ ಬಲರಾಮನಿಗೂ ಶ್ರೀ ಕೃಷ್ಣನಿಗೂ ಮಂಗಳಸ್ನಾನ ಮಾಡಿಸಿ ದಿವ್ಯವಾದ ವಸ್ತ್ರಾಲಂಕಾರಗಳನ್ನು ತೊಡಿಸಿದಳು. ಅನಂತರ ಬ್ರಹ್ಮಾದಿ ಸಕಲ ದೇವತೆಗಳೂ ಪರಮಾತ್ಮನಾದ ಶ್ರೀ ಕೃಷ್ಣನನ್ನು ಪ್ರತ್ಯೇಕ ಪ್ರತ್ಯೇಕವಾಗಿ ಸ್ತುತಿಸಿದರು. ಮಹಾ ಪುಣ್ಯಕರವಾದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವವರು ದಿವ್ಯಜ್ಞಾನಿಗಳಾಗಿ ಗೋಲೋಕಕ್ಕೆ ತೆರಳುವರು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಏಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಸಂಸ್ತೂಯ ದೇವಾ ಮುನಯೋ ವಿರೇಮುಶ್ಚೈವ ಮಾನಸೇ ।
ದದೃಶುಃ ಪ್ರಾಂಗಣೇ ಕೃಷ್ಣಂ ಶೋಭಿತಂ ಪೀತವಾಸಸಾ || ೧ ||

ಯಥಾ ಸೌದಾಮಿನೀಯುಕ್ತಂ ನವೀನಜಲದಂ ಮುನೇ ।
ಬಕಪಂಕ್ತಿಯುತಂ ಚೈವ ಮಾಲತೀಮಾಲಯಾ ತಥಾ || ೨ ||

ಕಪಾಲೇ ಮಂಡಲಾಕಾರ ಕಸ್ತೂರೀಯುಕ್ತಚಂದನಂ ।
ಸಕಲಂಕಂ ಮೃಗಾಂಕಂ ಚ ಶೋಭಿತಂ ಜಲದೇ ತಥಾ || ೩ ||

---

### ನೂರೊಂದನೆಯ ಅಧ್ಯಾಯವು.

೧–೫. ಶ್ರೀ ನಾರಾಯಣನು ಹೇಳುತ್ತಾನೆ :— ದೇವತೆಗಳೂ ಮುನಿಗಳೂ ಕೂಡ ಈ ಪ್ರಕಾರ ಸ್ತೋತ್ರಮಾಡಿದವರಾಗಿ ಸುಮ್ಮನಾದರು. ಎಲೈ ನಾರದ ಮುನಿಯೇ! ಅವರು ಸಭಾಂಗಣದಲ್ಲಿ ಪೀತಾಂಬರದಿಂದ ಕಂಗೊಳಿಸುತ್ತಿರುವ ಮಿಂಚಿನಿಂದ ಕೂಡಿದ ಹೊಸಮೋಡದಂತಿರುವ ಮಾಲತೀಪುಷ್ಪದ ಮಾಲೆಯನ್ನು ಧರಿಸಿರುವುದರಿಂದ ಬಕಪಕ್ಷಿಗಳ ಸಾಲಿನಿಂದ ಕೂಡಿರುವಂತೆ ಕಂಗೊಳಿಸುತ್ತಿರುವ ಕಪಾಲ ಪ್ರದೇಶದಲ್ಲಿ ಮಂಡಲಾಕಾರವಾಗಿ ಕಸ್ತೂರಿಯಿಂದ ಕೂಡಿದ ಗಂಧವನ್ನು ಧರಿಸಿ ಮೋಡದ ಮಧ್ಯದಲ್ಲಿ ಕಲಂಕದಿಂದ ಕೂಡಿದ ಚಂದ್ರನಂತೆ ಕಂಗೊಳಿಸುತ್ತಿರುವ ಎರಡುತೋಳುಳ್ಳವನೂ ಶ್ಯಾಮಲವರ್ಣನೂ ಸುಂದರನೂ ರಾಧಾಪ್ರಿಯನೂ ಮನೋ

ದ್ವಿಭುಜಂ ಶ್ಯಾಮಲಂ ಕಾಂತಂ ರಾಧಾಕಾಂತಂ ಮನೋಹರಂ ।
ಈಷದ್ಧಾಸ್ಯಪ್ರಸನ್ನಾಸ್ಯಂ ಭಕ್ತಾನುಗ್ರಹವಿಗ್ರಹಂ ॥ ೪ ॥

ರತ್ನಕೇಯೂರವಲಯರತ್ನಮಂಜೀರರಂಜಿತಂ ।
ರುದಂತಂ ಪಿತುರುತ್ಸಂಗೇ ಬಲೇನ ಸಹಿತಂ ಪರಂ ॥ ೫ ॥

ಅಥ ಮಂಗಲಕಾಲೇ ಚ ಶುಭಲಗ್ನೇ ಮನೋಹರೇ ।
ಸಂವೀಕ್ಷಿತೇ ಗ್ರಹೈಃ ಸೌಮ್ಯೈರ್ಜಾಗ್ರಲ್ಲಗ್ನಾಧಿಪೇ ಸ್ಥಿತೇ ॥ ೬ ॥

ಅಸದ್ಗ್ರಹೈರದೃಷ್ಟೇ ಚ ಸದ್ಗ್ರಹೇಕ್ಷಿತ ಏವ ಚ ।
ಶುಭಕರ್ಮಸಮಾರಂಭಂ ಸ್ವಸ್ತಿವಾಚನಪೂರ್ವಕಂ ॥ ೭ ॥

ಚಕಾರ ವಸುದೇವಶ್ಚಾಪ್ಯಾಜ್ಞಯಾ ಸುರವಿಪ್ರಯೋಃ ।
ದತ್ವಾ ಸುವರ್ಣಶತಕಂ ಬ್ರಾಹ್ಮಣಾಯ ಚ ಸಾದರಂ ॥ ೮ ॥

ದೇವೇಂದ್ರಾಂಶ್ಚ ಮುನೀಂದ್ರಾಂಶ್ಚ ನಮಸ್ಕೃತ್ಯ ಪುರೋಹಿತಂ ।
ಗಣೇಶಂ ಚ ದಿನೇಶಂ ಚ ವಹ್ನಿಂ ಚ ಶಂಕರಂ ಶಿವಂ ॥ ೯ ॥

---

ಹರನೂ ಮುಗುಳ್ನಗೆಯಿಂದ ಗಂಭೀರವಾದ ಮುಖವುಳ್ಳವನೂ ಭಕ್ತರಿಗೆ ಅನುಗ್ರಹ ಮಾಡುವುದಕ್ಕೋಸ್ಕರವಾಗಿ ಶರೀರವನ್ನು ಧರಿಸಿರುವವನೂ ರತ್ನಮಯವಾದ ಭುಜ ಕೀರ್ತಿಯನ್ನೂ ಬಳೆಯನ್ನೂ ರತ್ನಮಯವಾದ ಕಾಲುಕಡಗವನ್ನೂ ಧರಿಸಿರುವವನೂ ಆದ ತಂದೆಯ ತೊಡೆಯ ಮೇಲೆ ಮಲಗಿ ಅಳುವವನೂ ಬಲದೇವಸಹಿತನೂ ಆದ ಶ್ರೀಕೃಷ್ಣನನ್ನು ನೋಡಿದರು.

೬–೧೪. ಅನಂತರ ವಸುದೇವನು ಸೌಮ್ಯಗ್ರಹಗಳಿಂದ ನೋಡಲ್ಪಡುತ್ತಿರುವ ಲಗ್ನಾಧಿಪತಿಯು ಉದಯನಾಗಿರುವ ಉತ್ತಮಗ್ರಹಗಳಿಂದ ನೋಡಲ್ಪಟ್ಟು ನೀಚಗ್ರಹ ಗಳಿಂದ ನೋಡಲ್ಪಡದಿರುವ ಮನೋಹರವಾದ ಶುಭಲಗ್ನದ ಮಂಗಳೋತ್ಸವ ಸಮಯದಲ್ಲಿ ದೇವತೆಗಳು ಮತ್ತು ಬ್ರಾಹ್ಮಣರು ಇವರುಗಳ ಅಪ್ಪಣೆಯನ್ನು ಪಡೆದು ಸ್ವಸ್ತಿವಾಚನಪೂರ್ವಕವಾಗಿ ಶುಭಕರ್ಮವನ್ನು ಆರಂಭಮಾಡಿದನು. ಬ್ರಾಹ್ಮಣರಿಗೆ ನೂರು ಸುವರ್ಣನಾಣ್ಯಗಳನ್ನು ಆದರಪೂರ್ವಕವಾಗಿ ಕೊಟ್ಟು ದೇವಶ್ರೇಷ್ಠರನ್ನೂ ಮುನಿಶ್ರೇಷ್ಠರನ್ನೂ ಪುರೋಹಿತರನ್ನೂ ನಮಸ್ಕರಿಸಿ ಗಣೇಶನನ್ನೂ ಸೂರ್ಯನನ್ನೂ ಅಗ್ನಿಯನ್ನೂ ಶಂಕರನನ್ನೂ ಪಾರ್ವತಿಯನ್ನೂ ದೇವತೆಗಳ ಎದುರಿನಲ್ಲಿ ಅಕ್ಷತೆ

ಸಂಪೂಜ್ಯ ದೇವಷಟ್ಕಂ ಚ ಸಾಕ್ಷತ್ತೈರ್ದೇವಸಂಸದಿ ।
ಉಪಚಾರೈಃ ಷೋಡಶಭಿಃ ಸಂಯತೋ ಭಕ್ತಿಪೂರ್ವಕಂ ॥ ೧೦ ॥

ಪುತ್ರಾಧಿವಾಸನಂ ಚಕ್ರೇ ವೇದಮಂತ್ರೇಣ ಸಂಸದಿ ।
ಸಂಪೂಜ್ಯ ನಾನಾದೇವಾಂಶ್ಚ ದಿಕ್ಪಾಲಾಂಶ್ಚ ನವಗ್ರಹಾನ್ ॥ ೧೧ ॥

ದತ್ವಾ ಪಂಚೋಪಚಾರಾಂಶ್ಚ ಭಕ್ತ್ಯಾ ಷೋಡಶ ಮಾತೃಕಾಃ ।
ದತ್ವಾ ಚ ವಸುಧಾರಾಂ ಚ ಸಪ್ತವಾರಾನ್ಘೃತೇನ ಚ ॥ ೧೨ ॥

ಚೇದಿರಾಜಂ ವಸುಂ ನತ್ವಾ ಸಂಪೂಜ್ಯ ಪ್ರಯಯೌ ಪುನಃ ।
ವೃದ್ಧಿಶ್ರಾದ್ಧಂ ಸುನಿರ್ವಾಪ್ಯ ಯತ್ಕಿಂಚಿದ್ದೈವಿಕಂ ತಥಾ ॥ ೧೩ ॥

ಯಜ್ಞಂ ಕೃತ್ವಾ ತು ವೇದೋಕ್ತಂ ಯಜ್ಞಸೂತ್ರಂ ದದೌ ಮುದಾ ।
ಬಲದೇವಾಗ್ರಜಾಯೈವ ಕೃಷ್ಣಾಯ ಪರಮಾತ್ಮನೇ ॥ ೧೪ ॥

ಗಾಯತ್ರೀಂ ಚ ದದೌ ತಾಭ್ಯಾಂ ಮುನಿಃ ಸಂದೀಪಿನಿಸ್ತಥಾ ।
ಭಿಕ್ಷಾಂ ದದೌ ಚ ಪ್ರಥಮಂ ಪಾರ್ವತೀ ಪರಮಾದರಾತ್ ॥ ೧೫ ॥

---

ಗಳಿಂದ ಷೋಡಶೋಪಚಾರಗಳಿಂದ ಸ್ಥಿರಮನಸ್ಸುಳ್ಳವನಾಗಿ ಭಕ್ತಿಪೂರ್ವಕವಾಗಿ ಪೂಜೆಮಾಡಿ ಮಕ್ಕಳಿಗೆ ಗುಗ್ಗುಲಧೂಪವನ್ನು ವೇದಮಂತ್ರಪುರಸ್ಸರವಾಗಿ ಹಾಕಿ ಸಭೆಯಲ್ಲಿ ನಾನಾದೇವತೆಗಳನ್ನೂ ದಿಕ್ಪಾಲಕರನ್ನೂ ನವಗ್ರಹಗಳನ್ನೂ ಪೂಜೆಮಾಡಿ ಹದಿನಾರುಮಂದಿ ಮಾತೃಕೆಯರಿಗೆ ಭಕ್ತಿಪೂರ್ವಕವಾಗಿ ಪಂಚೋಪಚಾರ ಪೂಜೆ ಯನ್ನುಮಾಡಿ ಏಳುಸಾರಿ ತುಪ್ಪದಿಂದ ವಸುಧಾರೆಯನ್ನು ಕೊಟ್ಟು ಚೇದಿರಾಜನಾದ ವಸುವನ್ನು ನಮಸ್ಕರಿಸಿ ಮತ್ತು ಪೂಜೆಮಾಡಿ ಮತ್ತೆ ಸಭಾಮಂಟಪಕ್ಕೆ ಬಂದನು. ದೈವಿಕವಾದ ವೃದ್ಧಿಶ್ರಾದ್ಧವನ್ನೂ ಇನ್ನೂ ಮಾಡಬೇಕಾದ ಇತರ ಕಾರ್ಯಗಳನ್ನೂ ನೆರವೇರಿಸಿದವನಾಗಿ ಅಣ್ಣನಾದ ಬಲರಾಮನಿಗೂ ಪರಮಾತ್ಮನಾದ ಶ್ರೀಕೃಷ್ಣನಿಗೂ ವೇದೋಕ್ತವಾದ ಯಜ್ಞವನ್ನು ಮಾಡಿದನಂತರ ಸಂತೋಷದಿಂದ ಕೂಡಿದವನಾಗಿ ಜನಿವಾರವನ್ನು ಹಾಕಿದನು.

೧೫-೧೮. ಸಂದೀಪಿನಿಮುನಿಯು ಬಲರಾಮ ಕೃಷ್ಣರಿಬ್ಬರಿಗೂ ಗಾಯತ್ರಿ ಮಂತ್ರವನ್ನುಪದೇಶಮಾಡಿದನು. ಪಾರ್ವತೀದೇವಿಯು ಅತ್ಯಂತ ವಿಶ್ವಾಸಪೂರ್ವಕವಾಗಿ ಮೊದಲು ಬಿಕ್ಷೆಯನ್ನಿಕ್ಕಿದಳು. ಅಮೂಲ್ಯವಾದ ರತ್ನದಪಾತ್ರೆಯಲ್ಲಿರುವ

ಅಮೂಲ್ಯರತ್ನಪಾತ್ರಸ್ಥಂ ಮುಕ್ತಾಮಾಣಿಕ್ಯಹೀರಕಂ ।
ಹೀರಸಾರವಿನಿರ್ಮಾಣಂ ಪಿತ್ರಾ ದತ್ತಂ ಚ ಹಾರಕಂ ॥ ೧೬ ॥

ಶುಭಾಶಿಷಂ ಚ ಪ್ರದದೌ ಶುಕ್ಲಪುಷ್ಪೇಣ ದೂರ್ವಯಾ ।
ತತೋಽದಿತಿರ್ದಿತಿಶ್ಚೈವ ಮುನಿಪತ್ನ್ಯಶ್ಚ ದೇವಕೀ ॥ ೧೭ ॥

ಯಶೋದಾ ರೋಹಿಣೀ ಹೃಷ್ಟಾ ಸಾವಿತ್ರೀ ಚ ಸರಸ್ವತೀ ।
ಪ್ರತ್ಯೇಕಂ ಪ್ರದದೌ ಭಿಕ್ಷಾಂ ಮಣಿಕಾಂಚನಭೂಷಿತಾಂ ॥ ೧೮ ॥

ದೇವಕನ್ಯಾ ನಾಗಕನ್ಯಾ ರಾಜಕನ್ಯಾಃ ಪತಿವ್ರತಾಃ ।
ಕಾಮಿನ್ಯೋ ಬಾಂಧವಾನಾಂ ಚ ಸಸ್ಮಿತಾಃ ಸ್ನಿಗ್ಧಲೋಚನಾಃ ॥ ೧೯ ॥

ಇಂದ್ರಾಣೀ ವರುಣಾನೀ ಚ ಪವನಾನೀ ಚ ರೋಹಿಣೀ ।
ಕುಬೇರಪತ್ನೀ ಸ್ವಾಹಾ ಚ ರತಿಃ ಕಾಮಸ್ಯ ಕಾಮಿನೀ ॥ ೨೦ ॥

ಪ್ರತ್ಯೇಕಂ ಪ್ರದದೌ ಭಿಕ್ಷಾಂ ರತ್ನಭೂಷಣಭೂಷಿತಾಂ ।
ಭಿಕ್ಷಾಂ ಗೃಹೀತ್ವಾ ಭಗವಾನ್ಸಬಲೋ ಭಕ್ತಿಪೂರ್ವಕಂ ॥ ೨೧ ॥

---

ಮುತ್ತು ಮಾಣಿಕ್ಯ ಹೀರಕಗಳನ್ನೂ ಹೀರಸಾರದಿಂದ ಮಾಡಿದ ವಸುದೇವನಿಂದ ಕೊಡಲ್ಪಟ್ಟ ಹಾರವನ್ನೂ ಭಿಕ್ಷೆಯಿಕ್ಕಿದಳು. ಬಿಳಿಯ ಹೂವಿನಿಂದಲೂ ದೂರ್ವೆಯಿಂದಲೂ ಮಂಗಳಾಶೀರ್ವಾದವನ್ನು ಮಾಡಿದಳು. ಅನಂತರ ಅದಿತಿಯೂ ದಿತಿಯೂ ಮುನಿಪತ್ನಿಯರೂ ದೇವಕಿಯೂ ಯಶೋದೆಯೂ ರೋಹಿಣಿಯೂ ಸಾವಿತ್ರಿಯೂ ಸರಸ್ವತಿಯೂ ಸಂತೋಷಗೊಂಡವರಾಗಿ ರತ್ನಮಣಿಗಳಿಂದಲೂ ಚಿನ್ನದಿಂದಲೂ ಶೋಭಿಸುತ್ತಿರುವ ಭಿಕ್ಷೆಯನ್ನು ಪ್ರತ್ಯೇಕವಾಗಿ ಕೊಟ್ಟರು.

೧೯. ದೇವಕನ್ಯೆಯರೂ ನಾಗಕನ್ಯೆಯರೂ ಪತಿವ್ರತೆಯರೂ ರಾಜಕನ್ಯೆಯರೂ ಬಾಂಧವಸ್ತ್ರೀಯರೂ ಮುಂದಹಾಸಯುಕ್ತರಾಗಿ ಸ್ನೇಹಪೂರ್ಣವಾದ ನೋಟವುಳ್ಳವರಾಗಿ ಭಿಕ್ಷೆಯನ್ನಿಕ್ಕಿದರು.

೨೦–೨೧. ಇಂದ್ರಾಣಿಯೂ ವರುಣನಪತ್ನಿಯೂ ವಾಯುಪತ್ನಿಯೂ ಚಂದ್ರನಪತ್ನಿಯಾದ ರೋಹಿಣಿಯೂ ಕುಬೇರನಪತ್ನಿಯೂ ಸ್ವಾಹಾದೇವಿಯೂ ಕಾಮನ ಪತ್ನಿಯಾದ ರತಿದೇವಿಯೂ ಪ್ರತ್ಯೇಕವಾಗಿ ರತ್ನಾಭರಣಗಳಿಂದ ಶೋಭಿಸುತ್ತಿರುವ ಭಿಕ್ಷೆಯನ್ನಿತ್ತರು. ಬಲದೇವಸಹಿತನಾದ ಶ್ರೀಕೃಷ್ಣನು ಭಕ್ತಿಪೂರ್ವಕ

ಕಿಂಚಿದ್ದದೌ ಚ ಗರ್ಗಾಯ ಕಿಂಚಿತ್ಸ್ವಗುರವೇ ತಥಾ ।
ವೈದಿಕಂ ಕರ್ಮ ನಿರ್ವಾಪ್ಯ ಗರ್ಗಾಯ ದಕ್ಷಿಣಾಂ ದದೌ ॥ ೨೨ ॥

ದೇವಾಂಶ್ಚ ಭೋಜಯಾಮಾಸ ಬ್ರಾಹ್ಮಣಾಂಶ್ಚಾಪಿ ಸಾದರಂ ।
ಯೇಯೇ ಸಮಾಯಯುರ್ಯಜ್ಞೇ ತೇ ಚ ದತ್ವಾ ಶುಭಾಶಿಷಂ ॥ ೨೩ ॥

ಕೃಷ್ಣಾಯ ಬಲದೇವಾಯ ಪ್ರಹೃಷ್ಟಾಃ ಪ್ರಯಯುರ್ಗೃಹಂ ।
ನಂದಃ ಸಭಾರ್ಯೋ ನಿರ್ವಾಪ್ಯ ಶುಭಕರ್ಮ ಸುತಸ್ಯ ವೈ ॥ ೨೪ ॥

ಕ್ರೋಡೇ ಕೃತ್ವಾ ಬಲಂ ಕೃಷ್ಣಂ ಚುಚುಂಬ ವದನಂ ತಯೋಃ ।
ಉಚ್ಚೈಃ ರುರೋದ ನಂದಶ್ಚ ಯಶೋದಾ ಚ ಪತಿವ್ರತಾ ।
ಶ್ರೀಕೃಷ್ಣಸ್ತಂ ಸಮಾಶ್ವಾಸ್ಯ ಬೋಧಯಾಮಾಸ ಯತ್ನತಃ ॥ ೨೫ ॥

॥ ಶ್ರೀ ಕೃಷ್ಣ ಉವಾಚ ॥

ಸಾನಂದಂ ಗಚ್ಛ ಹೇ ಮಾತರ್ಯಶೋದೇ ತಾತ ಸತ್ವರಂ ।
ತ್ವಮೇವ ಮಾತಾ ಪೋಷ್ಟ್ರೀ ತ್ವಂ ಪಿತಾ ಚ ಪರಮಾರ್ಥತಃ ॥ ೨೬ ॥

---

ವಾಗಿ ಭಿಕ್ಷೆಯನ್ನು ತೆಗೆದುಕೊಂಡು ಸ್ವಲ್ಪಭಾಗವನ್ನು ಗರ್ಗಮುನಿಗೆ ಕೊಟ್ಟನು. ಮತ್ತೆ ಸ್ವಲ್ಪಭಾಗವನ್ನು ತನ್ನ ಗುರುವಿಗೆ ಕೊಟ್ಟನು. ವೇದೋಕ್ತವಾದ ಕರ್ಮಗಳೆಲ್ಲ ವನ್ನೂ ಮುಗಿಸಿ ಗರ್ಗಮುನಿಗೆ ದಕ್ಷಿಣೆಯನ್ನು ಕೊಟ್ಟನು.

೨೩–೨೫. ದೇವತೆಗಳಿಗೂ ಬ್ರಾಹ್ಮಣರಿಗೂ ಆದರಪೂರ್ವಕವಾಗಿ ಭೋಜನ ವನ್ನು ಮಾಡಿಸಿದನು. ಈ ಮಂಗಲಯಜ್ಞಕ್ಕೆ ಯಾರು ಯಾರು ಬಂದಿದ್ದರೋ ಅವರೆಲ್ಲರೂ ಬಲದೇವನಿಗೂ ಕೃಷ್ಣನಿಗೂ ಮಂಗಲಾಶೀರ್ವಾದವನ್ನು ಮಾಡಿ ಸಂತೋಷಗೊಂಡವರಾಗಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ನಂದನು ಪತ್ನಿ ಯಿಂದೊಡಗೂಡಿದವನಾಗಿ ಮಗನ ಉಪನಯನ ಶುಭಕರ್ಮವನ್ನು ಮುಗಿಸಿ ದವನಾಗಿ ಬಲರಾಮನನ್ನೂ ಕೃಷ್ಣನನ್ನೂ ಅಪ್ಪಿಕೊಂಡು ಅವರ ಮುಖಗಳಲ್ಲಿ ಮುತ್ತಿ ಟ್ಟನು. ಪತಿವ್ರತೆಯಾದ ಯಶೋದೆಯೂ ನಂದನೂ ಕೂಡ ಗಟ್ಟಿಯಾಗಿ ಅತ್ತರು. ಶ್ರೀಕೃಷ್ಣನು ಅವನನ್ನು ಸಮಾಧಾನಮಾಡಿ ಪ್ರಯತ್ನಪೂರ್ವಕವಾಗಿ ಬೋಧಿಸ ತೊಡಗಿದನು.

೨೬–೩೦. ಶ್ರೀಕೃಷ್ಣನು ಹೇಳುತ್ತಾನೆ :— ಎಲೈ ತಾಯಿಯಾದ ಯಶೋ ದೆಯೇ ! ಎಲೈ ತಂದೆಯೇ ! ಸಂತೋಷದಿಂದ ಊರಿಗೆ ಹೋಗಿರಿ. ನೀನೇ ನನ್ನನ್ನು

ಅವಂತಿನಗರಂ ತಾತ ಯಾಸ್ಯಾಮಿ ಸಬಲೋಧುನಾ ।
ಮುನೇಃ ಸಾಂದೀಪಿನೇಃ ಸ್ಥಾನಂ ವೇದಪಾಠಾರ್ಥಮೀಪ್ಸಿತಂ　　॥ ೨೭ ॥

ತತ ಆಗತ್ಯ ಸುಚಿರಂ ಕಾಲೇ ಭವತಿ ದರ್ಶನಂ ।
ಕಾಲಃ ಕರೋತಿ ಕಲನಂ ಸ ಚ ಭೇದಂ ಕರೋತಿ ಚ　　॥ ೨೮ ॥

ಸರ್ವಂ ಕಾಲಕೃತಂ ಮಾತರ್ಭೇದಂ ಸಂಮಿಲನಂ ನೃಣಾಂ ।
ಸುಖಂ ದುಃಖಂ ಚ ಹರ್ಷಂ ಚ ಶೋಕಂ ಚ ಮಂಗಲಾಲಯಂ ॥ ೨೯ ॥

ಮಯಾ ದತ್ತಂ ಚ ತತ್ತ್ವಂ ಚ ಯೋಗಿನಾಮಪಿ ದುರ್ಲಭಂ ।
ಸರ್ವಂ ನಂದಶ್ಚ ಸಾನಂದಂ ತ್ವಾಮೇವ ಕಥಯಿಷ್ಯತಿ　　॥ ೩೦ ॥

ಇತ್ಯುಕ್ತ್ವಾ ಜಗತಾಂ ನಾಥೋ ವಸುದೇವ ಸಭಾಂ ಯಯೌ ।
ತದಾಜ್ಞಯಾ ಕ್ಷಣಂ ಸ್ಥಿತ್ವಾ ಯಯೌ ಸಾಂದೀಪಿನೇರ್ಗೃಹಂ　॥ ೩೧ ॥

ವಸುದೇವಂ ದೇವಕೀಂ ಚ ಸಂಭಾಷ್ಯ ವಿನಯೇನ ಚ ।
ನಂದಃ ಸಭಾರ್ಯಃ ಪ್ರಯಯೌ ಹೃದಯೇನ ವಿದೂಯತಾ　　॥ ೩೨ ॥

---

ಪೋಷಿಸಿದ ತಾಯಿಯು. ನೀನೇ ನನ್ನ ನಿಜವಾದ ತಂದೆಯು. ಎಲೈ ತಂದೆಯೇ ! ನಾನು ಇಂದು ಬಲದೇವಸಹಿತನಾಗಿ ಇಷ್ಟವಾದ ವೇದಾಧ್ಯಯನವನ್ನು ಮಾಡಲೋಸ್ಕರ ಸಾಂದೀಪನ ಮುನಿಯ ಮನೆಯಿರುವ ಅವಂತಿ ನಗರಕ್ಕೆ ಹೋಗುತ್ತೇನೆ. ಕೆಲ ಕಾಲವು ಕಳೆದನಂತರ ಅಲ್ಲಿಂದ ಬಂದು ನಿಮ್ಮ ದರ್ಶನವನ್ನು ಮಾಡುತ್ತೇನೆ. ಕಾಲವೆಂಬುದು ಸಂಬಂಧವನ್ನುಂಟು ಮಾಡುತ್ತದೆ. ಅದೇ ಕಾಲವೇ ಅಗಲುವಿಕೆಯನ್ನೂ ಉಂಟುಮಾಡುತ್ತದೆ. ಎಲೈ ತಾಯಿಯೇ! ಅಗಲುವಿಕೆಯೂ ಒಟ್ಟುಸೇರುವಿಕೆಯೂ ಎಲ್ಲವೂ ಮಾನವರಿಗೆ ಕಾಲದಿಂದಲೇ ಮಾಡಲ್ಪಟ್ಟುದಾಗಿರುತ್ತದೆ. ಸುಖವೂ ದುಃಖವೂ ಸಂತೋಷವೂ ಶೋಕವೂ ಮಂಗಲವೂ ಗೃಹವೂ ಎಲ್ಲವೂ ಕಾಲಾಧೀನವಾದುವು. ನನ್ನಿಂದ ಹೇಳಲ್ಪಟ್ಟ ತತ್ವೋಪದೇಶವು ಯೋಗಿಗಳಿಗೂ ದುರ್ಲಭವಾದುದು. ಎಲ್ಲವನ್ನೂ ನಂದನು ಸಂತೋಷವಾಗಿ ನಿನಗೆ ಹೇಳುತ್ತಾನೆ.

೩೧. ಜಗನ್ನಾಥನಾದ ಶ್ರೀ ಕೃಷ್ಣನು ಈಪ್ರಕಾರ ಹೇಳಿದವನಾಗಿ ವಸುದೇವನ ಸಭೆಗೆ ಹೋದನು. ಅವನ ಅಪ್ಪಣೆಯಿಂದ ಅಲ್ಲಿ ಸ್ವಲ್ಪಕಾಲ ಕುಳಿತಿದ್ದು ಅನಂತರ ಸಾಂದೀಪನ ಮುನಿಯ ಮನೆಯನ್ನು ಕುರಿತು ಹೊರಟನು.

೩೨. ನಂದನು ಪತ್ನೀಸಮೇತನಾಗಿ ವಸುದೇವನನ್ನೂ ದೇವಕಿಯನ್ನೂ ವಿನಯಪೂರ್ವಕವಾಗಿ ಮಾತನಾಡಿಸಿ ದುಃಖಗೊಂಡ ಮನಸ್ಸಿನಿಂದ ಹೊರಟನು.

ಮುಕ್ತಾಮಣಿಂ ಸುವರ್ಣಂ ಚ ಮಾಣಿಕ್ಯಹೀರಕಂ ತಥಾ ।
ವಹ್ನಿಶುದ್ಧಾಂಶುಕಂ ರತ್ನಂ ನಂದಾಯ ದೇವಕೀ ದದೌ ॥ ೩೩ ॥

ಶ್ವೇತಾಶ್ವಂ ಚ ಗಜೇಂದ್ರಂ ಚ ಸುವರ್ಣರಥಮುತ್ತಮಂ ।
ನಂದಾಯ ಕೃಷ್ಣಃ ಪ್ರದದೌ ವಸುದೇವಶ್ಚ ಸಾದರಂ ॥ ೩೪ ॥

ತಯೋರನುವ್ರಜನ್ವಿಪ್ರಾ ದೇವಕೀಪ್ರಮುಖಾಃ ಸ್ತ್ರಿಯಃ ।
ವಸುದೇವಸ್ತಥಾಕ್ರೂರೋಽಪ್ಯುದ್ಧವಶ್ಚ ಯಯೌ ಮುದಾ ॥ ೩೫ ॥

ಕಾಲಿಂದೀನಿಕಟಂ ಗತ್ವಾ ತೇ ಸರ್ವೇ ರುರುದುಃ ಶುಚಾ ।
ಪರಸ್ಪರಂ ಚ ಸಂಭಾಷ್ಯ ತೇ ಸರ್ವೇ ಸ್ವಾಲಯಂ ಯಯುಃ ॥ ೩೬ ॥

ಕುಂತೀ ಸಪುತ್ರಾ ವಿಧವಾ ವಸುದೇವಾಜ್ಞಯಾ ಮುನೇ ।
ನಾನಾರತ್ನಮಣಿಂ ಪ್ರಾಪ್ಯ ಪ್ರಯಯೌ ಸ್ವಾಲಯಂ ಮುದಾ ॥ ೩೭ ॥

---

೩೩. ದೇವಕಿಯು ನಂದನಿಗೆ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನೂ ರತ್ನವನ್ನೂ ಮುತ್ತಿನಮಣಿಯನ್ನೂ ಚಿನ್ನವನ್ನೂ ಮಾಣಿಕ್ಯವನ್ನೂ ಹೀರಕವನ್ನೂ ಕೊಟ್ಟಳು.

೩೪. ಕೃಷ್ಣನೂ ವಸುದೇವನೂ ನಂದನಿಗೆ ವಿಶ್ವಾಸಪೂರ್ವಕವಾಗಿ ಬಿಳಿಯ ಕುದುರೆಯನ್ನೂ ಆನೆಯನ್ನೂ ಉತ್ತಮವಾದ ಚಿನ್ನದ ರಥವನ್ನೂ ಕೊಟ್ಟರು.

೩೫–೩೬. ಅನೇಕ ಮಂದಿ ಬ್ರಾಹ್ಮಣರೂ ದೇವಕಿಯೇ ಮುಂತಾದ ಸ್ತ್ರೀಯರೂ ಅವರನ್ನು ಹಿಂಬಾಲಿಸಿ ಹೋದರು. ವಸುದೇವನೂ ಅಕ್ರೂರನೂ ಉದ್ಧವನೂ ಕೂಡ ಸಂತೋಷದಿಂದ ಹೊರಟರು. ಕಾಲಿಂದೀ ನದಿಯವರೆಗೆ ಹೋಗಿ ಅವರೆಲ್ಲರೂ ದುಃಖದಿಂದ ಅತ್ತರು. ಅನಂತರ ಒಬ್ಬರನ್ನೊಬ್ಬರು ಮಾತನಾಡಿಸಿ ಅವರೆಲ್ಲರೂ ತಮ್ಮ ಮನೆಗೆ ಹೋದರು.

೩೭ ಎಲೈ ನಾರದಮುನಿಯೇ! ವಿಧವೆಯಾದ ಕುಂತಿಯು ಮಕ್ಕಳಿಂದೊಡಗೂಡಿದವಳಾಗಿ ನಾನಾವಿಧವಾದ ರತ್ನಗಳನ್ನೂ ಮಣಿಗಳನ್ನೂ ಪಡೆದವಳಾಗಿ ವಸುದೇವನ ಅಪ್ಪಣೆಯನ್ನು ಪಡೆದುಕೊಂಡು ಆನಂದದಿಂದ ತನ್ನ ಮನೆಗೆ ಹೊರಟಳು.

ವಸುದೇವೋ ದೇವಕೀ ಚ ಪುತ್ರಕಲ್ಯಾಣಹೇತವೇ ।
ನಾನಾರತ್ನಮಣಿಂ ವಸ್ತ್ರಂ ಸುವರ್ಣಂ ರಜತಂ ತಥಾ ॥ ೩೮ ॥

ಮುಕ್ತಾಮಾಣಿಕ್ಯಹಾರಂ ಚ ಮಿಷ್ಟಾನ್ನಂ ಚ ಸುಧೋಪಮಂ ।
ಭಟ್ಟೇಭ್ಯೋ ಬ್ರಾಹ್ಮಣೇಭ್ಯಶ್ಚ ಪ್ರದದೌ ಸಾದರಂ ಮುದಾ ॥ ೩೯ ॥

ಮಹೋತ್ಸವಂ ವೇದಪಾಠಂ ಹರೇರ್ನಾಮೈಕಮಂಗಲಂ ।
ವಿಪ್ರಾಣಾಂ ಭೋಜನಂ ಚೈವ ಕಾರಯಾಮಾಸ ಯತ್ನತಃ ॥ ೪೦ ॥

ಜ್ಞಾತೀನಾಂ ಬಾಂಧವಾನಾಂ ಚ ಪುರಸ್ಕಾರಂ ಯಥೋಚಿತಂ ।
ಚಕಾರ ಮಣಿಮಾಣಿಕ್ಯಮುಕ್ತಾವಸ್ತ್ರೈರ್ಮನೋಹರೈಃ ॥ ೪೧ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತಭಾಗೇ ನಾರಾಯಣನಾರದಸಂವಾದೇ ಭಗವದುಪನಯನಂ
ನಾಮೈಕಶತತಮೋಽಧ್ಯಾಯಃ.

---

೩೮–೩೯. ವಸುದೇವನೂ ದೇವಕಿಯೂ ಕೂಡ ಮಕ್ಕಳ ಉಪನಯನ ಮಂಗಳ ನಿಮಿತ್ತವಾಗಿ ಭಟರಿಗೂ ಬ್ರಾಹ್ಮಣರಿಗೂ ನಾನಾರತ್ನಮಣಿಗಳನ್ನೂ ವಸ್ತ್ರಗಳನ್ನೂ ಚಿನ್ನವನ್ನೂ ಬೆಳ್ಳಿಯನ್ನೂ ಮುತ್ತು ಮಾಣಿಕ್ಯಗಳಹಾರಗಳನ್ನೂ ಅಮೃತಕ್ಕೆ ಸಮಾನವಾದ ಮೃಷ್ಟಾನ್ನವನ್ನೂ ಸಂತೋಷದಿಂದಲೂ ಆದರದಿಂದಲೂ ಕೊಟ್ಟರು.

೪೦. ಮಹೋತ್ಸವವನ್ನೂ ವೇದಪಾರಾಯಣವನ್ನೂ ಪರಮಾತ್ಮನ ಮಂಗಲಕರವಾದ ನಾಮ ಪಾರಾಯಣವನ್ನೂ ಬ್ರಾಹ್ಮಣಭೋಜನವನ್ನೂ ಪ್ರಯತ್ನಪೂರ್ವಕವಾಗಿ ಮಾಡಿಸಿದರು.

೪೧. ಜ್ಞಾತಿಗಳಿಗೂ ಬಾಂಧವರಿಗೂ ಕೂಡ ಅವರವರಿಗೆ ತಕ್ಕಂತೆ ಮನೋಹರವಾದ ಮಣಿಗಳು ಮಾಣಿಕ್ಯಗಳು ಮುತ್ತಿನಸರಗಳು ಇವುಗಳಿಂದ ಮರ್ಯಾದೆ ಮಾಡಿದರು.

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಭಾಗದಲ್ಲಿನ
ನಾರಾಯಣನಾರದಸಂವಾದದಲ್ಲಿ ಭಗವದುಪನಯನವೆಂಬ
ನೂರೊಂದನೆಯ ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ದ್ವ್ಯಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಕೃಷ್ಣಃ ಸಾಂದೀಪಿನೇರ್ಗೇಹಂ ಗತ್ವಾ ಚ ಸಬಲೋ ಮುದಾ ।
ನಮಶ್ಚಕಾರ ಸ್ವಗುರುಂ ಗುರುಪತ್ನೀಂ ಪತಿವ್ರತಾಂ || ೧ ||

ಶುಭಾಶಿಷಂ ಗೃಹೀತ್ವಾ ಚ ದತ್ವಾ ರತ್ನಮಣಿಂ ಹರಿಃ ।
ಗುರವೇ ತಸ್ಯ ಭಾರ್ಯಾಯೈ ತಮುವಾಚ ಯಥೋಚಿತಂ || ೨ ||

|| ಶ್ರೀ ಕೃಷ್ಣ ಉವಾಚ ||

ತ್ವತ್ತೋ ವಿದ್ಯಾಂ ಲಭಿಷ್ಯಾಮಿ ವಾಂಛಿತಾಂ ವಾಂಛಿತಂ ಮಮ ।
ಕೃತ್ವಾ ಶುಭಕ್ಷಣಂ ವಿಪ್ರ ಮಾಂ ಪಾಠಯ ಯಥೋಚಿತಂ || ೩ ||

---

### ನೂರ ಎರಡನೇ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ :— ಶ್ರೀಕೃಷ್ಣನು ಸಾಂದೀಪಿನಿಯ ಮನೆಗೆ ಬಲದೇವನೊಡನೆ ಹೋಗಿ ಸಂತೋಷದಿಂದ ತನ್ನ ಗುರುವನ್ನೂ ಪತಿವ್ರತೆಯಾದ ಗುರುಪತ್ನಿಯನ್ನೂ ನಮಸ್ಕರಿಸಿದನು.

೨. ಶ್ರೀಹರಿಯು ಗುರುವಿಗೂ ಗುರುಪತ್ನಿಗೂ ರತ್ನಮಣಿಗಳನ್ನು ಕೊಟ್ಟು ಅವರಿಂದ ಮಂಗಳಾಶೀರ್ವಾದವನ್ನು ಪಡೆದು ಆ ಗುರುವನ್ನು ಕುರಿತು ಸಮಯಕ್ಕೆ ಉಚಿತವಾದ ಮಾತನಾಡಿದನು.

೩. ಶ್ರೀ ಕೃಷ್ಣನು ಹೇಳುತ್ತಾನೆ :— ಎಲೈ ಬ್ರಾಹ್ಮಣನೇ ! ನಿನ್ನಿಂದ ಅವಶ್ಯವಾಗಿಯೂ ನನಗೆ ಇಷ್ಟವಾಗಿಯೂ ಇರುವ ವಿದ್ಯೆಯನ್ನು ಕಲಿಯಲಪೇಕ್ಷಿಸುತ್ತೇನೆ. ಶುಭಮುಹೂರ್ತವನ್ನು ನೋಡಿ ಯಥಾ ಯೋಗ್ಯವಾಗಿ ನನಗೆ ಪಾಠವನ್ನು ಹೇಳಿಕೊಡುವವನಾಗು.

ಓಮಿತ್ಯುಕ್ತ್ವಾ ಮುನಿಶ್ರೇಷ್ಠಃ ಪೂಜಯಾಮಾಸ ತಂ ಮುದಾ ।
ಮಧುಪರ್ಕಪ್ರಾಶನೇನ ಗವಾ ವಸ್ತ್ರೇಣ ಚಂದನೈಃ ॥ ೪ ॥

ಮಿಷ್ಟಾನ್ನಂ ಭೋಜಯಾಮಾಸ ತಾಂಬೂಲಂ ಚ ಸುವಾಸಿತಂ ।
ಸುಪ್ರಿಯಂ ಕಥಯಾಮಾಸ ತುಷ್ಟಾವ ಪರಮೇಶ್ವರಂ ॥ ೫ ॥

॥ ಸಾಂದೀಪಿನಿರುವಾಚ ॥

ಪರಂ ಬ್ರಹ್ಮ ಪರಂ ಧಾಮ ಪರಮೇಶ ಪರಾತ್ಪರ ।
ಸ್ವೇಚ್ಛಾಮಯ ಸ್ವಯಂಜ್ಯೋತಿರ್ನಿರ್ಲಿಪ್ತೈಕೋ ನಿರಂಕುಶಃ ॥ ೬ ॥

ಭಕ್ತೈಕನಾಥ ಭಕ್ತೇಷ್ಟ ಭಕ್ತಾನುಗ್ರಹವಿಗ್ರಹ ।
ಭಕ್ತವಾಂಛಾಕಲ್ಪತರೋ ಭಕ್ತಾನಾಂ ಪ್ರಾಣವಲ್ಲಭ ॥ ೭ ॥

ಮಾಯಯಾ ಬಾಲರೂಪೋಸಿ ಬ್ರಹ್ಮೇಶ ಶೇಷವಂದಿತಃ ।
ಮಾಯಯಾ ಭುವಿ ಭೂಪಾಲ ಭುವೋ ಭಾರಕ್ಷಯಾಯ ಚ ॥ ೮ ॥

---

೪. ಮುನಿಶ್ರೇಷ್ಠನಾದ ಸಾಂದೀಪಿನಿಯು ಹಾಗೆ ಆಗಲೆಂದೊಪ್ಪಿಕೊಂಡು ಆ ಕೃಷ್ಣನನ್ನು ಮಧುಪರ್ಕದಿಂದಲೂ ಗೋವಿನಿಂದಲೂ ವಸ್ತ್ರಗಳಿಂದಲೂ ಗಂಧಗಳಿಂದಲೂ ಸಂತೋಷದಿಂದ ಕೂಡಿದವನಾಗಿ ಪೂಜೆಮಾಡಿದನು.

೫. ರುಚಿಕರವಾದ ಅನ್ನವನ್ನು ಬಡಿಸಿ ಭೋಜನವನ್ನು ಮಾಡಿಸಿದನು. ಸುವಾಸನೆಯಿಂದ ಕೂಡಿದ ತಾಂಬೂಲವನ್ನು ಕೊಟ್ಟನು. ಒಳ್ಳೆಯ ಮಾತುಗಳನ್ನಾಡಿದನು ಮತ್ತು ಆ ಪರಮೇಶ್ವರನನ್ನು ಸ್ತೋತ್ರಮಾಡಲುಪಕ್ರಮಿಸಿದನು.

೬–೮. ಸಾಂದೀಪಿನಿಯು ಹೇಳುತ್ತಾನೆ :— ಪರಬ್ರಹ್ಮರೂಪನೂ ಉತ್ತಮವಾದ ಗಮ್ಯಸ್ಥಾನನೂ ಪರಮೇಶ್ವರನೂ ಉತ್ತಮೋತ್ತಮನೂ ಸ್ವೇಚ್ಛಾಮಯನೂ ಸ್ವಯಂಪ್ರಕಾಶನೂ ನಿರ್ಲಿಪ್ತನೂ ಒಬ್ಬನೇ ಒಬ್ಬನೂ ಮತ್ತೊಬ್ಬರ ಆಜ್ಞೆಗೆ ಒಳಪಡದವನೂ ಭಕ್ತರಿಗೆ ಮುಖ್ಯ ಒಡೆಯನೂ ಭಕ್ತರಿಗೆ ಇಷ್ಟನೂ ಭಕ್ತರಿಗೆ ಅನುಗ್ರಹಮಾಡುವುದಕ್ಕೋಸ್ಕರವಾಗಿ ಶರೀರವನ್ನು ಧರಿಸಿದವನೂ ಭಕ್ತರ ಅಪೇಕ್ಷೆಗೆ ಕಲ್ಪವೃಕ್ಷದಂತಿರುವವನೂ ಭಕ್ತರಿಗೆ ಪ್ರಾಣಕ್ಕಿಂತಲೂ ಪ್ರಿಯನೂ ಆದ ಪರಮಾತ್ಮನೇ! ಬ್ರಹ್ಮ ಈಶ್ವರ ಶೇಷ ಇವರುಗಳಿಂದ ವಂದಿತನಾದ ನೀನು ಮಾಯೆಯಿಂದ ಕೂಡಿದವನಾಗಿ ಭೂಮಿಯ ಭಾರವನ್ನು ನಾಶಮಾಡಲೋಸ್ಕರ ಭೂಮಿಯಲ್ಲಿ ಅವತಾರ ಮಾಡಿರುವಿ.

ಯೋಗಿನೋ ಯಂ ವಿಪಂತ್ಯೇವಂ ಬ್ರಹ್ಮಜ್ಯೋತಿಃ ಸನಾತನಂ ।
ಧ್ಯಾಯಂತೇ ಭಕ್ತನಿವಹಾ ಜ್ಯೋತಿರಭ್ಯಂತರೇ ಮುದಾ ॥ ೯ ॥

ದ್ವಿಭುಜಂ ಮುರಲೀಹಸ್ತಂ ಸುಂದರಂ ಶ್ಯಾಮರೂಪಕಂ ।
ಚಂದನೋಕ್ಷಿತಸರ್ವಾಂಗಂ ಸಸ್ಮಿತಂ ಭಕ್ತವತ್ಸಲಂ ॥ ೧೦ ॥

ಪೀತಾಂಬರಧರಂ ದೇವಂ ವನಮಾಲಾವಿಭೂಷಿತಂ ।
ಲೀಲಾಪಾಂಗತರಂಗೈಶ್ಚ ನಿಂದಿತಾನಂಗಮೂರ್ಚ್ಛಿತಂ ॥ ೧೧ ॥

ಅಲಕ್ತಭವನಂ ತಪ್ಯತ್ಪಾಪಪದ್ಮಂ ಸುಶೋಭನಂ ।
ಕೌಸ್ತುಭೋದ್ಭಾಸಿತಾಂಗಂ ಚ ದಿವ್ಯಮೂರ್ತಿಮನೋಹರಂ ॥ ೧೨ ॥

ಈಷದ್ಧಾಸ್ಯಪ್ರಸನ್ನಂ ಚ ಸುವೇಷಂ ಪ್ರಸ್ತುತಂ ಸುರೈಃ ।
ದೇವದೇವಂ ಜಗನ್ನಾಥಂ ತ್ರೈಲೋಕ್ಯಮೋಹನಂ ಪರಂ ॥ ೧೩ ॥

---

೬-೧೬. ಯೋಗಿಗಳು ಯಾವನನ್ನು ಬ್ರಹ್ಮಜ್ಯೋತಿಸ್ವರೂಪನೆಂದೂ ಸನಾತನನೆಂದೂ ತಿಳಿದುಕೊಂಡು ಭಕ್ತಿಯಿಂದ ಕೂಡಿರುವವರಾಗಿ ಹೃದಯಾಂತರಾಳದಲ್ಲಿ ಜ್ಯೋತಿರೂಪನನ್ನು ಸಂತೋಷದಿಂದ ಧ್ಯಾನಮಾಡುತ್ತಾರೆಯೋ ಎರಡು ತೋಳುಳ್ಳವನೂ ಮುರಳಿಯನ್ನು ಕೈಯಲ್ಲಿ ಧರಿಸಿರುವವನೂ ಸುಂದರನೂ ಕಪ್ಪುಬಣ್ಣವುಳ್ಳವನೂ ಗಂಧದಿಂದ ಬಳಿಯಲ್ಪಟ್ಟ ಸಕಲಶರೀರವುಳ್ಳವನೂ ಮುಗುಳುನಗೆಯುಳ್ಳವನೂ ಭಕ್ತರಲ್ಲಿ ಪ್ರೀತಿಯುಳ್ಳವನೂ ಪೀತಾಂಬರವನ್ನುಟ್ಟಿರುವವನೂ ವನಮಾಲೆಯಿಂದ ಅಲಂಕೃತನೂ ವಿಲಾಸಯುಕ್ತವಾದ ಕಡೆಗಣ್ಣಿನ ನೋಟದ ಪ್ರಭಾವದಿಂದ ಮನ್ಮಥನನ್ನೂ ತಿರಸ್ಕರಿಸುವವನೂ ಪಾದಕಮಲಗಳ ಅರಗಿನ ರಸದಿಂದ ಅತ್ಯಂತ ಪ್ರಕಾಶಿಸುತ್ತಿರುವವನೂ ಕೌಸ್ತುಭದಿಂದ ಬೆಳಗುತ್ತಿರುವ ಅವಯವವುಳ್ಳವನೂ ರಮಣೀಯವಾದ ದಿವ್ಯದೇಹವನ್ನು ಧರಿಸಿದವನೂ ಸ್ವಲ್ಪನಗೆಯಿಂದ ಗಂಭೀರವಾದ ಮುಖವುಳ್ಳವನೂ ಉತ್ತಮವಾದ ವೇಷವುಳ್ಳವನೂ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟವನೂ ದೇವರಿಗೂ ದೇವನೂ ಪ್ರಪಂಚಕ್ಕೆ ಒಡೆಯನೂ ಮೂರುಲೋಕವನ್ನೂ ಮೋಹಗೊಳಿಸುವವನೂ ಶ್ರೇಷ್ಠನೂ ಕೋಟಿಮನ್ಮಥರ ವಿಲಾಸದಿಂದ ಕಂಗೊಳಿಸುವವನೂ ಕಮನೀಯನೂ ಮತ್ತೊಬ್ಬರ ಯಜಮಾನ್ಯವಿಲ್ಲದವನೂ ಬೆಲೆಕಟ್ಟಲಸಾಧ್ಯವಾದ ರತ್ನಗಳಿಂದ ಮಾಡಿದ ಆಭರಣಗಳ ಸಮೂಹದಿಂದ ಅಲಂಕರಿಸಿಕೊಂಡಿರುವವನೂ

ಕೋಟಿಕಂದರ್ಪಲೀಲಾಭಂ ಕಮನೀಯಮನೀಶ್ವರಂ ।
ಅಮೂಲ್ಯರತ್ನನಿರ್ಮಾಣಭೂಷಣೌಘೇನ ಭೂಷಿತಂ　　॥ ೧೪ ॥

ವರಂ ವರೇಣ್ಯಂ ವರದಂ ವರದಾನಾಮಭೀಪ್ಸಿತಂ ।
ಚತುರ್ಣಾಮಪಿ ವೇದಾನಾಂ ಕಾರಣಾನಾಂ ಚ ಕಾರಣಂ　　॥ ೧೫ ॥

ಪಾಠಾರ್ಥಂ ಮತ್ಪ್ರಿಯೇಸ್ಥಾನಮಾಗತೋಽಸಿ ಚ ಮಾಯಯಾ ।
ಪಾಠಂ ತೇ ಲೋಕಶಿಕ್ಷಾರ್ಥಂ ರಮಣಂ ಗಮನಂ ರಣಂ ।
ಸ್ವಾತ್ಮಾರಾಮಸ್ಯ ಚ ವಿಭೋಃ ಪರಿಪೂರ್ಣತಮಸ್ಯ ಚ　　॥ ೧೬ ॥

॥ ಗುರುಪತ್ನ್ಯುವಾಚ ॥

ಅದ್ಯ ಮೇ ಸಫಲಂ ಜನ್ಮ ಸಫಲಂ ಜೀವನಂ ಮಮ ।
ಪಾತಿವ್ರತ್ಯಂ ಚ ಸಫಲಂ ಸಫಲಂ ಚ ತಪೋವನಂ　　॥ ೧೭ ॥

ಮದ್ದಕ್ಷಹಸ್ತಃ ಸಫಲೋ ದತ್ತಂ ಯೇನಾನ್ನಮೀಪ್ಸಿತಂ ।
ತದಾಶ್ರಮಂ ತೀರ್ಥಪರಂ ತೀರ್ಥಪಾದಪದಾಂಕಿತಂ　　॥ ೧೮ ॥

---

ಶ್ರೇಷ್ಠನೂ ವರವನ್ನು ಕೊಡುವವರಿಗೂ ಅಪೇಕ್ಷಿತವಾದ ವರವನ್ನು ಕೊಡುವವನೂ ನಾಲ್ಕುವೇದಗಳಿಗೂ ಕಾರಣರಾದವರಿಗೂ ಕಾರಣನೂ ಆದ ನೀನು ಮಾಯೆಯಿಂದ ಕೂಡಿದವನಾಗಿ ಪಾಠವನ್ನು ಕಲಿಯುವುದಕ್ಕೋಸ್ಕರ ನನ್ನಲ್ಲಿಗೆ ಬಂದಿರುವವ ನಾಗಿರುವಿ. ಆತ್ಮಾರಾಮನೂ ವಿಭುವೂ ಪರಿಪೂರ್ಣನೂ ಆದ ನಿನಗೆ ಪಾಠವನ್ನು ಕಲಿಯುವುದೆಂಬುದು ಜನರಿಗೆ ಮಾರ್ಗದರ್ಶನಾರ್ಥವಾದುದು.

೧೭. ಗುರುಪತ್ನಿಯು ಹೇಳುತ್ತಾಳೆ :— ಇಂದು ನನ್ನ ಜನ್ಮವು ಸಫಲ ವಾಯಿತು. ನನ್ನ ಜೀವನವೂ ಸಫಲವಾಯಿತು. ನನ್ನ ಪಾತಿವ್ರತ್ಯವೂ ಸಫಲ ವಾಯಿತು. ನಮ್ಮ ಈ ತಪೋವನವೂ ಕೂಡ ಸಫಲವಾಯಿತು.

೧೮. ಯಾವ ನನ್ನ ಬಲಗೈಯಿಂದ ಇಷ್ಟವಾದ ಅನ್ನವು ಕೊಡಲ್ಪಟ್ಟಿತೋ ಅಂಥಾ ಬಲದ ಕೈಯೂ ಕೂಡ ಸಫಲವಾಯಿತು. ತೀರ್ಥರೂಪವಾದ ಪಾದಗಳುಳ್ಳ ಪರಮಾತ್ಮನ ಪಾದಗಳಿಂದ ಗುರುತು ಮಾಡಲ್ಪಟ್ಟ ನಮ್ಮ ಆಶ್ರಮವು ತೀರ್ಥಗಳಂತೆ ಶ್ರೇಷ್ಠವಾಯಿತು.

ತೆತ್ಪಾದರಜಸಾ ಪೂತಾಗೃಹಾಃ ಪ್ರಾಂಗಣಮುತ್ತಮಂ ।
ಯಸ್ಯ ತ್ವತ್ಪಾದಪದ್ಮಂ ಚೈವಾವಯೋರ್ಜನ್ಮಖಂಡನಂ ॥ ೧೯ ॥

ತಾವದ್ದುಃಖಂ ಚ ಶೋಕಶ್ಚ ತಾವದ್ಭೋಗಶ್ಚ ರೋಗಕಃ ।
ತಾವಜ್ಜನ್ಮಾನಿ ಕರ್ಮಾಣಿ ಕ್ಷುತ್ಪಿಪಾಸಾದಿಕಾನಿ ಚ ।
ಯಾವತ್ತ್ವತ್ಪಾದಪದ್ಮಸ್ಯ ಭಜನಂ ನಾಸ್ತಿ ದರ್ಶನಂ ॥ ೨೦ ॥

ಹೇ ಕಾಲಕಾಲ ಭಗವನ್ಸ್ರಷ್ಟುಃ ಸಂಹರ್ತುರೀಶ್ವರ ।
ಕೃಪಾಂಕುರು ಕೃಪಾನಾಥ ಮಾಯಾಮೋಹನಿಕೃಂತನ ॥ ೨೧ ॥

ಇತ್ಯುಕ್ತ್ವಾ ಸಾಶ್ರುನೇತ್ರಾ ಸಾ ಕ್ರೋಢೇ ಕೃತ್ವಾ ಹರಿಂ ಪುನಃ ।
ಸ್ವಸ್ತನಂ ಪಾಯಯಾಮಾಸ ಪ್ರೇಮ್ಣಾ ಚ ದೇವಕೀ ಯಥಾ ॥ ೨೨ ॥

---

೧೯. ನಿನ್ನ ಪಾದಕಮಲಗಳ ಧೂಳಿನಿಂದ ನಮ್ಮ ಮನೆಯೂ ಆ ಪ್ರದೇಶವೂ ಪವಿತ್ರವಾಯಿತು. ಮತ್ತು ಉತ್ತಮವಾಯಿತು. ಯಾವ ನಿನ್ನ ಪಾದಕಮಲಗಳು ನಮ್ಮಿರ್ವರಿಗೂ ಜನ್ಮವನ್ನು ಹೋಗಲಾಡಿಸತಕ್ಕುದಾಗಿವೆ.

೨೦. ಎಲ್ಲಿಯವರೆಗೆ ನಿನ್ನ ಪಾದಕಮಲಗಳ ದರ್ಶನವೂ ಭಜನೆಯೂ ಇರುವುದಿಲ್ಲವೋ ಅಲ್ಲಿಯವರೆಗೆ ದುಃಖವೂ ಶೋಕವೂ ಅಲ್ಲಿಯವರೆಗೆ ಭೋಗವೂ ರೋಗವೂ ಅಲ್ಲಿಯವರೆಗೆ ಜನ್ಮಗಳೂ ಕರ್ಮಗಳೂ ಹಸಿವು ಬಾಯಾರಿಕೆ ಮುಂತಾದುವುಗಳೂ ಇರುತ್ತವೆ.

೨೧. ಎಲೈ ಮೃತ್ಯುವಿಗೂ ಮೃತ್ಯುರೂಪನಾದ ಭಗವಂತನೇ! ಬ್ರಹ್ಮ ರುದ್ರರಿಗೂ ಈಶ್ವರನೇ! ಕೃಪಾನಾಥನೇ! ಮಾಯೆಯಿಂದುಂಟಾದ ಅಜ್ಞಾನವನ್ನು ನಾಶ ಮಾಡುವವನೇ! ನಮ್ಮ ಮೇಲೆ ದಯೆಯನ್ನು ತೋರಿಸುವವನಾಗು.

೨೨. ಆ ಗುರುಪತ್ನಿಯು ಈ ಪ್ರಕಾರ ಹೇಳಿದವಳಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಂಡವಳಾಗಿ ಹರಿಯನ್ನು ಮತ್ತೆ ತೊಡೆಯಮೇಲೆ ಕುಳ್ಳಿರಿಸಿಕೊಂಡು ದೇವಕಿಯಂತೆ ಪ್ರೀತಿಯಿಂದ ತನ್ನ ಸ್ತನ್ಯಪಾನವನ್ನು ಮಾಡಿಸಿದಳು.

|| ಶ್ರೀ ಕೃಷ್ಣ ಉವಾಚ ||

ಮಾತಸ್ತ್ವಂ ಮಾಂ ಕಥಂ ಸ್ತೌಷಿ ಬಾಲಂ ದುಗ್ಧಮುಖಂ ಸುತಂ |
ಗಚ್ಛ ಗೋಲೋಕಮಿಷ್ಟಂ ಚ ಸ್ವಾಮಿನಾ ಸಹ ಸಾಂಪ್ರತಂ || ೨೩ ||

ತ್ಯಕ್ತ್ವಾ ಪ್ರಾಕೃತಿಕಂ ಮಿಥ್ಯಾ ನಶ್ವರಂ ಚ ಕಲೇಬರಂ |
ವಿಧಾಯ ನಿರ್ಮಲಂ ದೇಹಂ ಜನ್ಮಮೃತ್ಯುಜರಾಹರಂ || ೨೪ ||

ಇತ್ಯುಕ್ತ್ವಾ ಚತುರೋ ವೇದಾನ್ಪಠಿತ್ವಾ ಮುನಿಪುಂಗವಾತ್ |
ಮಾಸೇನ ಪರಯಾ ಭಕ್ತ್ಯಾ ದತ್ವಾ ಪುತ್ರಂ ಮೃತಂ ಪುರಾ || ೨೫ ||

ರತ್ನಾನಾಂ ಚ ತ್ರಿಲಕ್ಷಂ ಚ ಮಣೀನಾಂ ಪಂಚಲಕ್ಷಕಂ |
ಹೀರಕಾಣಾಂ ಚತುರ್ಲಕ್ಷಂ ಮುಕ್ತಾನಾಂ ಪಂಚಲಕ್ಷಕಂ || ೨೬ ||

ಮಾಣಿಕ್ಯಾನಾಂ ದ್ವಿಲಕ್ಷಂ ಚ ವಸ್ತ್ರಂ ತ್ರೈಲೋಕ್ಯದುರ್ಲಭಂ |
ಹಾರಂ ಚ ದುರ್ಗಯಾ ದತ್ತಂ ಹಸ್ತರತ್ನಾಂಗುಲೀಯಕಂ || ೨೭ ||

---

೨೩. ಶ್ರೀಕೃಷ್ಣನು ಹೇಳುತ್ತಾನೆ :— ಎಲೈ ತಾಯಿಯೇ! ಹಾಲು ಕುಡಿಯುವ ಮಗುವಾದ ನನ್ನನ್ನು ನೀನು ಏಕೆ ಇಷ್ಟೊಂದು ಹೊಗಳುತ್ತಿರುವಿ ? ನೀನು ಈಗ ನಿನ್ನ ಪತಿಯೊಡನೆ ಮಿಥ್ಯಾಭೂತವಾದ ನಶಿಸಿಹೋಗುವ ಪ್ರಕೃತಿಸಂಬಂಧವಾದ ಈ ಶರೀರವನ್ನು ಬಿಟ್ಟು ಜನನಮರಣ ಮುಪ್ಪುಗಳಿಲ್ಲದ ಪರಿಶುದ್ಧವಾದ ಶರೀರವನ್ನು ಪಡೆದುಕೊಂಡು ನಿನಗೆ ಅಪೇಕ್ಷಿತವಾದ ಗೋಲೋಕಕ್ಕೆ ಹೋಗುವವಳಾಗು.

೨೪–೩೦. ಈ ಪ್ರಕಾರವಾಗಿ ಹೇಳಿ ಮುನಿಶ್ರೇಷ್ಠನಾದ ಸಾಂದೀಪಿನಿಯ ದೆಸೆಯಿಂದ ಒಂದು ತಿಂಗಳಿನಲ್ಲಿ ನಾಲ್ಕು ವೇದಗಳನ್ನೂ ಭಕ್ತಿಯಿಂದ ಅಧ್ಯಯನ ಮಾಡಿ ಹಿಂದೆಯೇ ಮೃತನಾಗಿದ್ದ ಸಾಂದೀಪಿನಿಯ ಮಗನನ್ನು ಅವನಿಗೆ ತಂದು ಕೊಟ್ಟು ಮೂರುಲಕ್ಷ ರತ್ನಗಳನ್ನೂ ಐದುಲಕ್ಷ ಮಣಿಗಳನ್ನೂ ನಾಲ್ಕುಲಕ್ಷ ಹೀರಕಗಳನ್ನೂ ಐದುಲಕ್ಷ ಮುತ್ತುಗಳನ್ನೂ ಎರಡುಲಕ್ಷ ಮಾಣಿಕ್ಯಗಳನ್ನೂ ಮೂರು ಲೋಕಗಳಲ್ಲಿಯೂ ಹೊಂದಲಸಾಧ್ಯವಾದ ವಸ್ತ್ರಗಳನ್ನೂ ದುರ್ಗಾದೇವಿಯಿಂದ ಕೊಡಲ್ಪಟ್ಟಿದ್ದ ಹಾರವನ್ನೂ ಕೈಬಳೆಗಳನ್ನೂ ರತ್ನಮಯವಾದ ಉಂಗುರವನ್ನೂ ಹತ್ತು ಕೋಟಿ ಸುವರ್ಣಗಳನ್ನೂ ಗುರುವಿಗೆ ದಕ್ಷಿಣೆಯಾಗಿ ಕೊಟ್ಟನು. ಬೆಲೆಕಟ್ಟಲಸಾಧ್ಯವಾದ ರತ್ನಗಳಿಂದ ಮಾಡಿದ ಸ್ತ್ರೀಯರು ಧರಿಸುವ ಸಕಲಾಂಗಗಳ ಆಭರಣಗಳನ್ನೂ

ದಶಕೋಟಿಂ ಸುವರ್ಣಾನಾಂ ಗುರವೇ ದಕ್ಷಿಣಾಂ ದದೌ ।
ಅಮೂಲ್ಯರತ್ನನಿರ್ಮಾಣಂ ನಾರೀ ಸರ್ವಾಂಗಭೂಷಣಂ ॥ ೨೮ ॥

ಗುರುಪ್ರಿಯಾಯೈ ಪ್ರದದೌ ವಹ್ನಿಶುದ್ಧಾಂಶುಕಂ ವರಂ ।
ಮುನೀರ್ದತ್ವಾ ಚ ಪುತ್ರಾಯ ತತ್ಸರ್ವಂ ಪ್ರಿಯಯಾ ಸಹ ॥ ೨೯ ॥

ಸದ್ರತ್ನರಥಮಾರುಹ್ಯ ಯಯೌ ಗೋಲೋಕಮುತ್ತಮಂ ।
ತಮದ್ಭುತಂ ಹರಿಂ ದೃಷ್ಟ್ವಾ ಪ್ರಯಯೌ ಸ್ವಾಲಯಂ ಮುದಾ ॥ ೩೦ ॥

ಏವಂ ಬ್ರಾಹ್ಮಣ್ಯದೇವಸ್ಯ ಚರಿತ್ರಂ ಶೃಣು ನಾರದ ।
ಇದಂ ಸ್ತೋತ್ರಂ ಮಹಾಪುಣ್ಯಂ ಯಃ ಪಠೇದ್ಭಕ್ತಿಪೂರ್ವಕಂ ॥ ೩೧ ॥

ಶ್ರೀಕೃಷ್ಣೇ ನಿಶ್ಚಲಾಂ ಭಕ್ತಿಂ ಲಭತೇ ನಾತ್ರ ಸಂಶಯಃ ।
ಅಸ್ಪಷ್ಟಕೀರ್ತಿಃ ಸುಯಶಾ ಮೂರ್ಖೋ ಭವತಿ ಪಂಡಿತಃ ॥ ೩೨ ॥

---

ಅಗ್ನಿಯಂತೆ ಪರಿಶುದ್ಧವೂ ಉತ್ತಮವೂ ಆದ ವಸ್ತ್ರವನ್ನೂ ಗುರುಪತ್ನಿಗೆ ಕೊಟ್ಟನು. ಮುನಿಯು ಅದೆಲ್ಲವನ್ನೂ ಮಗನಿಗೆ ಕೊಟ್ಟು ತನ್ನ ಪತ್ನಿಯಿಂದೊಡಗೂಡಿದವನಾಗಿ ಉತ್ತಮರತ್ನಮಯವಾದ ವಿಮಾನವನ್ನು ಹತ್ತಿಕೊಂಡು ಶ್ರೇಷ್ಠವಾದ ಗೋಲೋಕಕ್ಕೆ ತೆರಳಿದನು. ಈ ಆಶ್ಚರ್ಯವನ್ನು ನೋಡಿ ಹರಿಯೂ ಸಂತೋಷದಿಂದ ತಮ್ಮ ಮನೆಗೆ ತೆರಳಿದನು.

೩೧–೩೨. ಎಲೈ ನಾರದನೇ! ಕೇಳು ದೇವನಾದ ಶ್ರೀಕೃಷ್ಣನ ಚರಿತ್ರೆಯು ಈಪ್ರಕಾರವಾದುದು. ಮಹಾ ಪುಣ್ಯಕರವಾದ ಈ ಸ್ತೋತ್ರವನ್ನು ಯಾವನು ಭಕ್ತಿ ಪೂರ್ವಕವಾಗಿ ಹೇಳುತ್ತಾನೆಯೋ ಅವನು ಶ್ರೀಕೃಷ್ಣನಲ್ಲಿ ಸ್ಥಿರವಾದ ಭಕ್ತಿಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ಕೀರ್ತಿಯನ್ನು ಪಡೆಯದವನು ಉತ್ತಮ ಕೀರ್ತಿವಂತನಾಗುತ್ತಾನೆ. ಮೂರ್ಖನಾದವನು ಪಂಡಿತನಾಗುತ್ತಾನೆ. ಈ ಲೋಕದಲ್ಲಿ ಸುಖಗಳನ್ನನುಭವಿಸಿ ಈ ಶರೀರವನ್ನು ಬಿಟ್ಟನಂತರ ಶ್ರೀಹರಿಯಸ್ಥಾನ

ಇಹ ಲೋಕೇ ಸುಖಂ ಪ್ರಾಪ್ಯ ಯಾತ್ಯಂತೇ ಶ್ರೀಹರೇಃ ಪದಂ ।
ತತ್ರ ನಿತ್ಯಂ ಹರೇರ್ದಾಸ್ಯಂ ಲಭತೇ ನಾತ್ರ ಸಂಶಯಃ ॥ ೩೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀ ಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಮುನಿಪತ್ನೀಸ್ತೋತ್ರಂ ನಾಮ
ದ್ವ್ಯಧಿಕಶತತಮೋಽಧ್ಯಾಯಃ.

---

ವನ್ನು ಹೊಂದುತ್ತಾನೆ. ಅಲ್ಲಿಯೂ ಯಾವಾಗಲೂ ಶ್ರೀಹರಿಯ ದಾಸತನವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಶ್ರೀ ಕೃಷ್ಣಜನ್ಮಖಂಡದ
ಉತ್ತರಾರ್ಧದ ನಾರದ ನಾರಾಯಣ ಸಂವಾದದಲ್ಲಿ ಮುನಿಪತ್ನೀ ಸ್ತೋತ್ರವೆಂಬ
ನೂರೆರಡನೆಯ ಅಧ್ಯಾಯವು ಸಮಾಪ್ತವು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ತ್ರ್ಯಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಅಥಾಗತ್ಯ ಮಧುಪುರೀಂ ಪ್ರಣಮ್ಯ ಪಿತರಂ ವಿಭುಃ |
ಸಬಲೋ ವಟಮೂಲೇ ಚ ಸಸ್ಮಾರ ಗರುಡಂ ಹರಿಃ || ೧ ||

ಸಾದರಂ ಲವಣೋದಂ ಚ ವಿಶ್ವಕರ್ಮಾಣಮೀಪ್ಸಿತಂ |
ತತ್ಯಾಜ ಗೋಪವೇಷಂ ಚ ನೃಪವೇಷಂ ದಧಾರ ಸಃ || ೨ ||

ಏತಸ್ಮಿನ್ನಂತರೇ ಚಕ್ರಮಾಜಗಾಮ ಹರಿಂ ಸ್ವಯಂ |
ಪರಂ ಸುದರ್ಶನಂ ನಾಮ ಸೂರ್ಯಕೋಟಿಸಮಪ್ರಭಂ || ೩ ||

---

ನೂರಮೂರನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ :— ಅನಂತರ ಪ್ರಭುವಾದ ಶ್ರೀಕೃಷ್ಣನು ಬಲರಾಮಸಹಿತನಾಗಿ ಮಧುರಾಪಟ್ಟಣಕ್ಕೆ ಬಂದು ತಾಯಿತಂದೆಗಳಿಗೆ ನಮಸ್ಕಾರ ಮಾಡಿದವನಾಗಿ ಆಲದಮರದ ಬುಡದಲ್ಲಿ ಕುಳಿತು ಗರುಡನನ್ನು ಸ್ಮರಿಸಿಕೊಂಡನು.

೨. ಆದರಪೂರ್ವಕವಾಗಿ ಸಮುದ್ರನನ್ನೂ ಪ್ರಿಯನಾದ ವಿಶ್ವಕರ್ಮನನ್ನೂ ಸ್ಮರಿಸಿಕೊಂಡನು ಮತ್ತು ಅವನು ಗೋಪರವೇಷವನ್ನು ತೊರೆದು ರಾಜವೇಷವನ್ನು ಧರಿಸಿದನು.

೩–೪. ಈ ಸಂದರ್ಭದಲ್ಲಿ ಕೋಟಿಸೂರ್ಯರಿಗೆ ಸಮನಾದ ಕಾಂತಿಯುಳ್ಳ ತೇಜಸ್ಸಿನಲ್ಲಿ ಶ್ರೀಹರಿಗೆ ಸಮನಾದ ಶತ್ರುಗಳನ್ನು ಸಂಪೂರ್ಣನಾಶಗೊಳಿಸುವ ಅಸ್ತ್ರ

ತೇಜಸಾ ಹರಿಣಾ ತುಲ್ಯಂ ಪರಂ ವೈರಿವಿಮರ್ದನಂ ।
ಅವ್ಯರ್ಥಮಸ್ತ್ರಮಸ್ತ್ರಾಣಾಂ ಪ್ರವರಂ ಪರಮಂ ಪರಂ ॥ ೪ ॥

ರತ್ನಯಾನಂ ಪುರಃ ಕೃತ್ವಾ ಗರುಡೋ ಹರಿಸನ್ನಿಧಿಂ ।
ವಿಶ್ವಕರ್ಮಾ ಸಶಿಷ್ಯಶ್ಚ ಜಲಧಿಃ ಕಂಪಿತಸ್ತಥಾ ॥ ೫ ॥

ಹರಿಂ ಪ್ರಣೇಮುಸ್ತೇ ಸರ್ವೇ ಮೂರ್ಧ್ನಾ ಚ ಭಕ್ತಿಪೂರ್ವಕಂ ।
ಸಸ್ಮಿತಂ ಸಾದರಂ ಯತ್ನಾತ್ತಾನುವಾಚ ಕ್ರಮಾದ್ವಿಭುಃ ॥ ೬ ॥

॥ ಶ್ರೀ ಕೃಷ್ಣ ಉವಾಚ ॥

ಹೇ ಸಮುದ್ರ ಮಹಾಭಾಗ ಸ್ಥಲಂ ಚ ಶತಯೋಜನಂ ।
ದೇಹಿ ಮೇ ನಗರಾರ್ಥಂ ಚ ಪಶ್ಚಾದ್ದಾಸ್ಯಾಮಿ ನಿಶ್ಚಿತಂ ॥ ೭ ॥

ನಗರಂ ಕುರು ಹೇ ಕಾರೋ ತ್ರಿಷುಲೋಕೇಷು ದುರ್ಲಭಂ ।
ರಮಣೀಯಂ ಚ ಸರ್ವೇಷಾಂ ಕಮನೀಯಂ ಚ ಯೋಷಿತಾಂ ॥ ೮ ॥

---

ಗಳಲ್ಲೆಲ್ಲ ಶ್ರೇಷ್ಠವೆನಿಸಿ ಮೊದಲನೆಯದಾದ ಯಾವತ್ತೂ ವ್ಯರ್ಥವಾಗದ ಸುದರ್ಶನವೆಂದು ಪ್ರಸಿದ್ಧವಾದ ಚಕ್ರವು ಹರಿಯಸನ್ನಿಧಿಗೆ ತಾನಾಗಿಯೇ ಬಂದಿತು.

೫. ಗರುಡನು ರತ್ನಮಯವಾದ ರಥವನ್ನು ಮುಂದಿಟ್ಟುಕೊಂಡು ಶ್ರೀಹರಿಯ ಸನ್ನಿಧಿಗೆ ಬಂದನು. ವಿಶ್ವಕರ್ಮನು ತನ್ನ ಶಿಷ್ಯರುಗಳಿಂದೊಡಗೂಡಿದವನಾಗಿ ಬಂದನು. ಸಮುದ್ರನು ನಡುಗುತ್ತ ಶ್ರೀಹರಿಯಮುಂದೆ ಬಂದು ನಿಂತನು.

೬. ಅವರೆಲ್ಲರೂ ಭಕ್ತಿಪೂರ್ವಕವಾಗಿ ತಲೆಬಾಗಿ ಶ್ರೀಹರಿಗೆ ನಮಸ್ಕಾರ ಮಾಡಿದರು. ವಿಭುವಾದ ಹರಿಯು ಮುಗುಳುನಗೆ ನಗುತ್ತ ವಿಶ್ವಾಸಪೂರ್ವಕವಾಗಿ ಅವರುಗಳನ್ನು ಕುರಿತು ಕ್ರಮವಾಗಿ ಇಂತೆಂದನು.

೭. ಶ್ರೀಕೃಷ್ಣನು ಹೇಳುತ್ತಾನೆ :— ಎಲೈ ಮಹಾತ್ಮನಾದ ಸಮುದ್ರನೇ! ನೀನು ನನಗೆ ಪಟ್ಟಣವನ್ನು ನಿರ್ಮಾಣಮಾಡುವುದಕ್ಕೋಸ್ಕರ ಒಂದುನೂರು ಯೋಜನ ಜಾಗವನ್ನು ಕೊಡುವವನಾಗು. ಅನಂತರ ಅದನ್ನು ನಿಶ್ಚಯವಾಗಿಯೂ ನಿನಗೇ ಕೊಡುವೆನು.

೮-೯. ಎಲೈ ಶಿಲ್ಪಿಯೇ! ಮೂರು ಲೋಕದಲ್ಲೆಲ್ಲಿಯೂ ಇಲ್ಲದಿರುವಂಥಾ ಎಲ್ಲರಿಗೂ ಮನೋಹರವಾಗಿರುವ ಸ್ತ್ರೀಯರಿಗೆ ಅಪೇಕ್ಷಿತವಾಗುವಂತಿರುವ ಭಕ್ತರು

ವಾಂಛಿತಂ ಚಾಪಿ ಭಕ್ತಾನಾಂ ವೈಕುಂಠಸಪೃಶಂ ಪರಂ ।
ಸರ್ವೇಷಾಮಪಿ ಸ್ವರ್ಗಾಣಾಂ ಪರಂ ಪಾರಮಭೀಪ್ಸಿತಂ ॥ ೯ ॥

ದಿವಾನಿಶಂ ಖಗಶ್ರೇಷ್ಠ ಸನ್ನಿಧೌ ವಿಶ್ವಕರ್ಮಣಃ ।
ಸ್ಥಿತಿಂ ಕುರು ಮಹಾಭಾಗ ಯಾವನ್ನಿರ್ಮಾತಿ ದ್ವಾರಕಾಂ ॥ ೧೦ ॥

ದಿವಾನಿಶಂ ಚ ಮತ್ಪಾರ್ಶ್ವೇ ಚಕ್ರಶ್ರೇಷ್ಠ ಸ್ಥಿತಿಂ ಕುರು ।
ಓಮಿತ್ಯುಕ್ತ್ವಾತು ಪ್ರಯಯುಃ ಸರ್ವೇ ಚಕ್ರಂ ವಿನಾ ಮುನೇ ॥ ೧೧ ॥

ಕಂಸಸ್ಯ ಪಿತರಂ ಭದ್ರಮುಗ್ರಸೇನಂ ಮಹಾಬಲಂ ।
ನೃಪಂ ಚಕಾರ ನಗರೇ ಕ್ಷತ್ರಿಯಾಣಾಂ ಸತಾಮಪಿ ॥ ೧೨ ॥

ವಿಜಿತ್ಯ ಚ ಜರಾಸಂಧಂ ನಿಹತ್ಯ ಯವನಂ ತಥಾ ।
ಉಪಾಯೇನ ಮಹಾಭಾಗ ನಿರ್ಮಾಣಕ್ರಮಮೀಶ್ವರಃ ॥ ೧೩ ॥

---

ಗಳಿಗೂ ಅಪೇಕ್ಷಿತವಾಗಿ ವೈಕುಂಠಕ್ಕೆ ಸಮಾನವಾಗಿರುವ ಉತ್ತಮವಾಗಿರುವ ಸಕಲ ಸ್ವರ್ಗಗಳಿಗಿಂತಲೂ ಪರಮೋತ್ಕೃಷ್ಟವೆನಿಸಿ ಸಕಲರಿಗೂ ಅಪೇಕ್ಷಿತವಾಗುವಂತಿರುವ ನಗರವನ್ನು ನೀನು ನಿರ್ಮಾಣಮಾಡುವವನಾಗು.

೧೦. ಎಲೈ ಪಕ್ಷಿಶ್ರೇಷ್ಠನಾದ ಗರುಡನೇ ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡುವವರೆಗೆ ನೀನು ವಿಶ್ವಕರ್ಮನ ಜೊತೆಯಲ್ಲಿ ಹಗಲು ರಾತ್ರಿಗಳಲ್ಲಿಯೂ ಇರುವವನಾಗು.

೧೧. ಎಲೈ ಮಹಾತ್ಮನಾದ ಚಕ್ರಶ್ರೇಷ್ಠನೇ! ನೀನು ಹಗಲು ರಾತ್ರಿಗಳಲ್ಲಿಯೂ ನನ್ನ ಸಮೀಪದಲ್ಲಿಯೇ ಇರುವವನಾಗು. ಎಲೈ ನಾರದ ಮುನಿಯೇ! ಸುದರ್ಶನಚಕ್ರವನ್ನು ಬಿಟ್ಟು ಎಲ್ಲರೂ ಹಾಗೆ ಆಗಲೆಂದು ಹೇಳಿ ಹೊರಟುಹೋದರು.

೧೨. ಕಂಸನ ತಂದೆಯೂ ಕ್ಷತ್ರಿಯರಲ್ಲಿ ಬಲಿಷ್ಠನೂ ಮಂಗಳಕರನೂ ಸತ್ಪುರುಷರಿಗೆ ಶ್ರೇಷ್ಠನೂ ಆದ ಉಗ್ರಸೇನನನ್ನು ಮಧುರಾಪಟ್ಟಣಕ್ಕೆ ರಾಜನನ್ನಾಗಿ ಮಾಡಿದನು.

೧೩. ಎಲೈ ಮಹಾತ್ಮನಾದ ನಾರದನೇ! ಈಶ್ವರನಾದ ಹರಿಯು ಉಪಾಯದಿಂದ ಜರಾಸಂಧನನ್ನು ಜಯಿಸಿ ಮತ್ತು ಯವನನನ್ನು ಕೊಂದು ನಗರ ನಿರ್ಮಾಣ ಕ್ರಮವನ್ನು ಹೇಳತೊಡಗಿದನು.

|| ಶ್ರೀ ಭಗವಾನುವಾಚ ||

ಶತಯೋಜನಪರ್ಯಂತಂ ನಗರಂ ಸುಮನೋಹರಂ ।
ಪದ್ಮರಾಗೈರ್ಮರಕತೈರಿಂದ್ರನೀಲೈರನುತ್ತಮೈಃ || ೧೪ ||

ರುಚಿಕೈಃ ಪಾರಿಭದ್ರೈಶ್ಚ ಪಲಂಕೈಶ್ಚ ಸ್ಯಮಂತಕೈಃ ।
ಗಂಧಕೈರ್ಗಾಲಿಮೈಶ್ಚೈವ ಚಂದ್ರಕಾಂತಾದಿಭಿಸ್ತಥಾ || ೧೫ ||

ಸೂರ್ಯಕಾಂತಾದಿಭಿಶ್ಚೈವ ಪುತ್ರೈಶ್ಚ ಸ್ಫಟಿಕಾಕೃತೈಃ ।
ಹರಿತ್ಸವರ್ಣೈಶ್ಚ ಮಣಿಭಿಃ ಶ್ಯಾಮೈರ್ಗೌರಮುಖೈಶ್ಚಷೈಃ || ೧೬ ||

ಗೋರೋಚನಾಭಿಃ ಪೀತೈಶ್ಚ ದಾಡಿಮೀಬೀಜರೂಪಕೈಃ ।
ಪದ್ಮಬೀಜನಿಭೈಶ್ಚೈವ ನೀಲೈಃ ಕಮಲವರ್ಣಕೈಃ || ೧೭ ||

ಮಣಿಭಿಃ ಕಜ್ಜಲಾಕಾರೈರುಜ್ವಲೈಶ್ಚ ಪರಿಷ್ಕೃತೈಃ ।
ಶ್ವೇತಚಂಪಕವರ್ಣಾಭೈಸ್ತಪ್ತಕಾಂಚನಸನ್ನಿಭೈಃ || ೧೮ ||

ಸ್ವರ್ಣಮೂಲ್ಯಶತಗುಣೈರೀಷತ್ಪ್ರಕೃತೈಃ ಸುಶೋಭನೈಃ ।
ಗರಿಷ್ಠೈಶ್ಚ ವರಿಷ್ಠೈಶ್ಚ ಮಣಿಶ್ರೇಷ್ಠೈಶ್ಚ ಪೂಜಿತೈಃ || ೧೯ ||

ಯಥಾವಿಧಾನಂ ಯದ್ಯೋಗಂ ಯತ್ರಯನ್ಮುಕ್ತಮೀಪ್ಸಿತಂ ।
ಮಣೀನಾಂ ಹರಣಂ ಚೈವ ಯಕ್ಷಸಂಘಾ ಹಿಮಾಲಯಾತ್ || ೨೦ ||

---

೧೪–೨೭. ಶ್ರೀ ಭಗವಂತನು ಹೇಳುತ್ತಾನೆ:— ನೂರು ಯೋಜನದ ವರೆಗೂ ಅತ್ಯಂತ ಮನೋಹರವಾದ ನಗರವನ್ನು ಮಾಡುವವನಾಗು. ಶ್ರೇಷ್ಠವಾದ ಪದ್ಮರಾಗಗಳಿಂದಲೂ ಮರಕತಗಳಿಂದಲೂ ಇಂದ್ರನೀಲಗಳಿಂದಲೂ ಮನೋಹರವಾದ ಪಾರಿಜಾತವೃಕ್ಷಗಳಿಂದಲೂ ಶ್ಯಮಂತಕ ಮಣಿಗಳ ಮಂಚಗಳಿಂದಲೂ ಗಂಧಕಗಳಿಂದಲೂ ಗಾಲಿಮಗಳಿಂದಲೂ ಚಂದ್ರಕಾಂತ ಮುಂತಾದುವುಗಳಿಂದಲೂ ಸೂರ್ಯಕಾಂತಾದಿಗಳಿಂದಲೂ ಪುತ್ರಶಿಲೆಗಳಿಂದಲೂ ಸ್ಫಟಿಕ ಶಿಲೆಗಳಿಂದಲೂ ಹಸುರು ಬಣ್ಣದ ಮಣಿಗಳಿಂದಲೂ ಕರಿಯ ಬಣ್ಣದ ಕಲ್ಲುಗಳಿಂದಲೂ ಹಳದಿಯ ಬಣ್ಣದ ಕಲ್ಲುಗಳಿಂದಲೂ ಗೋರೋಚನಗಳಿಂದಲೂ ಹಳದಿಯ ಬಣ್ಣದ ದಾಳಿಂಬೆಯ ಬೀಜದಂತಿರುವ ಕಲ್ಲುಗಳಿಂದಲೂ ತಾವರೆಯ ಬೀಜದಂತಿರುವ ಕಪ್ಪುಕಮಲದ ಬಣ್ಣದ ಮಣಿಗಳಿಂದಲೂ ಕಾಡಿಗೆಯಂತೆ ಬಣ್ಣವುಳ್ಳ ಪ್ರಕಾಶಮಾನವಾದ ಸಜ್ಜುಗೊಳಿಸಿದ

ದಿವಾನಿಶಂ ಕರಿಷ್ಯಂತಿ ಯಾವನ್ನಿರ್ಮಾಣಪೂರ್ವಕಂ ।
ಯಕ್ಷೈಶ್ಚ ಸಪ್ತಭಿರ್ಲಕ್ಷೈಃ ಕುಬೇರಪ್ರೇರಿತೈರಪಿ ॥ ೨೦ ॥

ವೇತಾಲಲಕ್ಷೈಃ ಕೂಷ್ಮಾಂಡಲಕ್ಷೈಃ ಶಂಕರಯೋಜಿತೈಃ ।
ದಾನವೈರ್ಬ್ರಹ್ಮರಕ್ಷೋಭಿಃ ಶೈಲಕನ್ಯಾನಿಯೋಜಿತೈಃ ॥ ೨೧ ॥

ಕುರು ದಿವ್ಯಂ ಚ ಪತ್ನೀನಾಂ ಸಹಸ್ರಾಣಾಂ ಚ ಷೋಡಶ ।
ಅನ್ಯಪತ್ನೀಜನಸ್ಯಾಪಿ ಚಾಷ್ಟಾಧಿಕಶತಸ್ಯ ಚ ॥ ೨೨ ॥

ಶಿಬಿರಂ ಪರಿಖಾಯುಕ್ತಮುಚ್ಚೈಃ ಪ್ರಾಕಾರವೇಷ್ಟಿತಂ ।
ಯುಕ್ತದ್ವಾದಶಶಾಲಂ ಚ ಸಿಂಹದ್ವಾರಪರಿಷ್ಕೃತಂ ॥ ೨೩ ॥

ಯುಕ್ತಂ ಚಿತ್ರೈರ್ವಿಚಿತ್ರೈಶ್ಚ ಕೃತ್ರಿಮೈಶ್ಚ ಕಪಾಟಕೈಃ ।
ನಿಷಿದ್ಧವೃಕ್ಷರಹಿತಂ ಪ್ರಸಿದ್ಧೈಶ್ಚ ಪರಿಷ್ಕೃತಂ ॥ ೨೪ ॥

---

ಮಣಿಗಳಿಂದಲೂ ಬಿಳಿಯಸಂಪಿಗೆಯಂತೆ ವರ್ಣವುಳ್ಳ ಪುಟವಿಟ್ಟ ಚಿನ್ನದಂತೆ ಕಂಗೊಳಿಸುವ ಮಣಿಗಳಿಂದಲೂ ಚಿನ್ನದ ಬೆಲೆಗಿಂತಲೂ ನೂರರಷ್ಟು ಬೆಲೆಯುಳ್ಳ ಸ್ವಲ್ಪಕೆಂಪಾದ ಅತ್ಯಂತಮಂಗಳಕರವಾದ ಶ್ರೇಷ್ಠವಾದ ಮಣಿಗಳಿಂದ ಅಲಂಕೃತ ವಾದ ನಗರವನ್ನು ನಿಯಮಕ್ಕನುಸಾರವಾಗಿ ಯಾವ ಯಾವ ಸ್ಥಳಗಳಲ್ಲಿ ಯಾವ ಯಾವ ಪದಾರ್ಥಗಳನ್ನು ಹಾಕಬೇಕೋ ಆ ಪ್ರಕಾರ ನಿರ್ಮಾಣಮಾಡುವವನಾಗು. ಯಕ್ಷರಗುಂಪುಗಳು ಹಿಮಾಲಯ ಪರ್ವತದಿಂದ ನಗರನಿರ್ಮಾಣಕ್ಕೆ ಬೇಕಾಗುವ ಮಣಿಗಳನ್ನು ಹಗಲುರಾತ್ರಿಗಳಲ್ಲಿಯೂ ತಂದುಹಾಕುತ್ತಾರೆ. ಕುಬೇರನಿಂದ ಕಳು ಹಿಸಲ್ಪಟ್ಟ ಏಳುಲಕ್ಷ ಯಕ್ಷರಿಂದಲೂ, ಶಂಕರನಿಂದ ಕಳುಹಿಸಲ್ಪಟ್ಟ ಒಂದುಲಕ್ಷ ಬೇತಾಳಗಳಿಂದಲೂ, ಒಂದುಲಕ್ಷ ಕೂಷ್ಮಾಂಡಗಳಿಂದಲೂ, ಪಾರ್ವತಿಯಿಂದ ಕಳುಹಿ ಸಲ್ಪಟ್ಟ ದಾನವರಿಂದಲೂ, ಬ್ರಹ್ಮರಾಕ್ಷಸರುಗಳಿಂದಲೂ ಕೂಡಿದವನಾಗಿ, ಹದಿನಾರು ಸಾವಿರಮಂದಿ ಪತ್ನಿಯರಿಗೂ ಮತ್ತು ಒಂದುನೂರಎಂಟು ಮಂದಿ ಇತರ ಪತ್ನಿಯ ರಿಗೂ ದಿವ್ಯವಾಗಿರುವ ಕಂದಕಗಳಿಂದಲೂ ಎತ್ತರವಾದ ಗೋಡೆಗಳಿಂದಲೂ ಯೋಗ್ಯ ವಾದ ಹನ್ನೆರಡು ಶಾಲೆಗಳಿಂದಕೂಡಿದ ಸಿಂಹದ ಬಾಗಿಲಿನಿಂದ ಪರಿಷ್ಕರಿಸಲ್ಪಟ್ಟಿರುವ ನಾನಾ ವಿಧವಾದ ಚಿತ್ರಗಳಿಂದ ಕೂಡಿದ ಕೃತ್ರಿಮವಾದ ಬಾಗಿಲುಗಳಿಂದ ಶೋಭಿಸುವ ನಿಷಿದ್ಧವಾದ ಮರಗಳಿಲ್ಲದ ಪ್ರಸಿದ್ಧವಾದವುಗಳಿಂದ ಕೂಡಿದ ಉತ್ತಮ ಲಕ್ಷಣವುಳ್ಳ ಚಂದ್ರವೇಧೆಯುಳ್ಳ ಪ್ರಾಕಾರದಿಂದ ಕೂಡಿದ ಶಿಬಿರಗಳನ್ನು ಮಾಡುವವ

ಸುಲಕ್ಷಣಂ ಚಂದ್ರವೇಧಂ ಪ್ರಾಂಗಣಂ ಚ ತಥೈವ ಚ ।
ಯದೂನಾಮಾಶ್ರಮಂ ದಿವ್ಯಂ ಕಿಂಕರಾಣಾಂ ತಥೈವ ಚ　　॥ ೨೬ ॥

ಸರ್ವತ್ರ ಸಿದ್ಧಂ ನಿಲಯಮುಗ್ರಸೇನಸ್ಯ ಭೂಭೃತಃ ।
ಆಶ್ರಮಂ ಸರ್ವತೋಭದ್ರಂ ವಸುದೇವಸ್ಯ ಮತ್ಪಿತುಃ　　॥ ೨೭ ॥

॥ ವಿಶ್ವಕರ್ಮೋವಾಚ ॥

ಕೇ ತೇ ವೃಕ್ಷಾಃ ಪ್ರಶಸ್ತಾಶ್ಚ ನಿಷಿದ್ಧಾಶ್ಚಾಪಿ ಕೇಚನ ।
ಭದ್ರಾಭದ್ರಪ್ರದಾಶ್ಚಾಪಿ ತಾನ್ವದಸ್ವ ಜಗದ್ಗುರೋ　　॥ ೨೮ ॥

ಕೇಷಾಮಸ್ಥಿನಯುಕ್ತಂ ಚ ಶಿಬಿರಂ ಚ ಶುಭಾಶುಭಂ ।
ದಿಶಿ ಕುತ್ರ ಜಲಂ ಭದ್ರಮಭದ್ರಂ ಚ ವದ ಪ್ರಭೋ　　॥ ೨೯ ॥

ಭದ್ರಪ್ರದಶ್ಚ ಕೋ ವೃಕ್ಷೋ ದಿಶಿ ಕುತ್ರ ಪ್ರವರ್ತತೇ ।
ಕಿಂ ಪ್ರಮಾಣಂ ಗೃಹಾಣಾಂ ಚ ಪ್ರಾಂಗಣಾನಾಂ ಸುರೇಶ್ವರ　　॥ ೩೦ ॥

---

ನಾಗು. ಯದುಗಳ ದಿವ್ಯವಾದ ಮನೆಗಳನ್ನೂ ಸೇವಕರ ಮನೆಗಳನ್ನೂ ಉಗ್ರಸೇನನೆಂಬ ರಾಜನಿಗೆ ಎಲ್ಲೆಡೆಯುಲ್ಲಿಯೂ ಎಲ್ಲ ಸೌಕರ್ಯಗಳಿಂದ ಕೂಡಿದ ಮನೆಯನ್ನೂ ನನ್ನ ತಂದೆಯಾದ ವಸುದೇವನಿಗೆ ಎಲ್ಲ ವಿಧದಲ್ಲಿಯೂ ಮಂಗಳಕರವಾದ ಮನೆಯನ್ನೂ ನಿರ್ಮಾಣ ಮಾಡುವವನಾಗು.

೨೮. ವಿಶ್ವಕರ್ಮನು ಹೇಳುತ್ತಾನೆ;— ಎಲೈ ಜಗದ್ಗುರುವೇ! ಪ್ರಶಸ್ತವಾದ ಮರಗಳಾವುವು? ನಿಷಿದ್ಧಗಳಾದ ಮರಗಳಾವುವು? ಮಂಗಳಕರಗಳೂ ಅಮಂಗಳಕರಗಳೂ ಆದವುಗಳಾವುವು? ಅವುಗಳನ್ನೆಲ್ಲ ಹೇಳುವವನಾಗು.

೨೯. ಯಾವುಗಳ ಅಸ್ತಿಯಿಂದಮಾಡಿದ ಮನೆಗಳು ಶುಭಕರಗಳೂ ಅಶುಭಕರಗಳೂ ಆಗಿರುತ್ತವೆ? ಯಾವದಿಕ್ಕಿನಲ್ಲಿ ನೀರಿದ್ದರೆ ಶುಭವಾಗುತ್ತದೆ ಮತ್ತು ಅಶುಭವಾಗುತ್ತದೆ? ಎಲೈ ಪ್ರಭುವೇ! ಈ ವಿಚಾರಗಳನ್ನು ತಿಳಿಸುವವನಾಗು.

೩೦. ಯಾವ ಮರವು ಮಂಗಳವನ್ನುಂಟುಮಾಡುತ್ತದೆ? ಯಾವ ದಿಕ್ಕಿನಲ್ಲಿ ಬೆಳೆಸಬೇಕು? ಮನೆಗಳು ಯಾವಪ್ರಮಾಣದಲ್ಲಿರಬೇಕು? ಚೌಕಿಯು ಯಾವಪ್ರಮಾಣದಲ್ಲಿರಬೇಕು? ಎಲೈ ದೇವತೆಗಳ ಒಡೆಯನೇ! ಇವೆಲ್ಲವನ್ನೂ ಹೇಳುವವನಾಗು.

ಮಂಗಲಂ ಕುಸುಮೋದ್ಯಾನಂ ದಿಶಿ ಕುತ್ರ ತರೋಸ್ತಥಾ ।
ಪ್ರಾಕಾರಾಣಾಂ ಕಿಂ ಪ್ರಮಾಣಂ ಪರಿಖಾಣಾಂ ಸುರೇಶ್ವರ ॥ ೩೧ ॥

ದ್ವಾರಾಣಾಂ ಚ ಗೃಹಾಣಾಂ ಚ ಪ್ರಾಕಾರಾಣಾಂ ಪ್ರಮಾಣಕಂ ।
ಕಸ್ಯ ಕಸ್ಯ ತರೋಃ ಕಾಷ್ಠಂ ಪ್ರಶಸ್ತಂ ಶಿಬಿರೇ ಪ್ರಭೋ ॥ ೩೨ ॥

ಅಮಂಗಲಂ ವಾ ಕೇಷಾಂ ಚ ಸರ್ವಂ ಮಾಂ ವಕ್ತುಮರ್ಹಸಿ ॥ ೩೩ ॥

॥ ಶ್ರೀ ಭಗವಾನುವಾಚ ॥

ಅಶ್ರಮೋ ನಾರಿಕೇಲಶ್ಚ ಗೃಹಿಣಾಂ ಚ ಧನಪ್ರದಃ ।
ಶಿಬಿರಸ್ಯ ಯದೀಶಾನೇ ಪೂರ್ವೇ ಪುತ್ರಪ್ರದಸ್ತರುಃ ॥ ೩೪ ॥

ಸರ್ವತ್ರ ಮಂಗಲಾರ್ಹಶ್ಚ ತರುರಾಜೋ ಮನೋಹರಃ ।
ರಸಾಲವೃಕ್ಷಃ ಪೂರ್ವಸ್ಮಿನ್ನೃಣಾಂ ಸಂಪತ್ಪ್ರದಸ್ತಥಾ ॥ ೩೫ ॥

---

೩೧. ಯಾವದಿಕ್ಕಿನಲ್ಲಿ ಹೂವಿನ ತೋಟವನ್ನೂ ಗಿಡಗಳನ್ನೂ ಬೆಳೆಸಿದರೆ ಶುಭ ಕರವಾಗುತ್ತದೆ ? ಮತ್ತು ಕೋಟೆಗಳೂ ಕಂದಕಗಳೂ ಯಾವ ಪ್ರಮಾಣದಲ್ಲಿರ ಬೇಕು ? ಎಲೈ ದೇವೇಶ್ವರನೇ ! ಈ ವಿಚಾರಗಳನ್ನು ತಿಳಿಸುವವನಾಗು.

೩೨–೩೩. ಬಾಗಿಲುಗಳ ಮನೆಗಳ ಕೋಟೆಗಳ ಪ್ರಮಾಣಗಳನ್ನೂ ಮನೆ ಯನ್ನು ಕಟ್ಟಲು ಯಾವ ಯಾವ ಮರದ ತೊಲೆಗಳು ಉತ್ತಮವಾದುವುಗಳು ? ಮತ್ತು ಯಾವ ಯಾವುದು ಅಮಂಗಲಕರಗಳು ? ಇವೆಲ್ಲವನ್ನೂ ನೀನು ನನಗೆ ದಯ ಮಾಡಿ ಹೇಳುವವನಾಗು.

೩೪. ಶ್ರೀ ಭಗವಂತನು ಹೇಳುತ್ತಾನೆ :— ಗೃಹಸ್ಥರ ಮನೆಯಲ್ಲಿ ಮನೆಯ ಈಶಾನ್ಯದಿಕ್ಕಿನಲ್ಲಿ ತೆಂಗಿನಮರವಿದ್ದರೆ ಧನವನ್ನು ಕೊಡುತ್ತದೆ. ಪೂರ್ವ ದಿಕ್ಕಿನಲ್ಲಿದ್ದುದೇ ಆದರೆ ಪುತ್ರರನ್ನು ಕೊಡತಕ್ಕುದಾಗುತ್ತದೆ.

೩೫. ಮಾವಿನಮರವು ಎಲ್ಲೆಡೆಯಲ್ಲಿಯೂ ಮಂಗಲಯೋಗ್ಯವಾಗಿಯೂ ಮರಗಳಲ್ಲಿ ಉತ್ತಮವಾಗಿಯೂ ಮನೋಹರವಾಗಿಯೂ ಇರುತ್ತದೆ. ಈ ಮರವು ಮನೆಯ ಪೂರ್ವದಿಕ್ಕಿನಲ್ಲಿರುವುದಾದರೆ ಮಾನವರಿಗೆ ಸಂಪತ್ತನ್ನುಂಟು ಮಾಡುತ್ತದೆ.

ಶುಭಪ್ರದಶ್ಚ ಸರ್ವತ್ರ ಸುರಕಾರೋ ನಿಶಾಮಯ ।
ಬಿಲ್ವಶ್ಚ ಪನಸಶ್ಚೈವ ಜಂಬೀರೋ ಬದರೀ ತಥಾ ॥ ೩೬ ॥

ಪ್ರಜಾಪ್ರದಶ್ಚ ಪೂರ್ವಸ್ಮಿನ್ದಕ್ಷಿಣೇ ಧನದಸ್ತಥಾ ।
ಸಂಪತ್ಪ್ರದಶ್ಚ ಸರ್ವತ್ರ ಯತೋ ಹಿ ವರ್ಧತೇ ಗೃಹೀ ॥ ೩೭ ॥

ಜಂಬೂವೃಕ್ಷಶ್ಚ ದಾಡಿಂಬಃ ಕದಲ್ಯಾಮ್ರಾತಕಸ್ತಥಾ ।
ಬಂಧುಪ್ರದಶ್ಚ ಪೂರ್ವಸ್ಮಿನ್ದಕ್ಷಿಣೇ ಮಿತ್ರದಸ್ತಥಾ ॥ ೩೮ ॥

ಸರ್ವತ್ರ ಶುಭದಶ್ಚೈವ ಧನಪುತ್ರ ಶುಭಪ್ರದಃ ।
ಹರ್ಷಪ್ರದೋ ಸುವಾಕಶ್ಚ ದಕ್ಷಿಣೇ ಪಶ್ಚಿಮೇ ತಥಾ ॥ ೩೯ ॥

ಈಶಾನ್ಯೇ ಸುಖದಶ್ಚೈವ ಸರ್ವತ್ರೈವ ನಿಶಾಮಯ ।
ಸರ್ವತ್ರ ಚಂಪಕಃ ಶುದ್ಧೋ ಭುವಿ ಭದ್ರಪ್ರದಸ್ತಥಾ ॥ ೪೦ ॥

---

೩೬–೩೭. ಬಿಲ್ವದಮರವೂ ಹಲಸಿನಮರವೂ ನಿಂಬೆಯಮರವೂ ಬದರೀ ಮರವೂ ದೇವತಾಕಾರವಾದುವುಗಳಾದುದರಿಂದ ಎಲ್ಲೆಡೆಯಲ್ಲಿಯೂ ಸಂಪತ್ತನ್ನುಂಟು ಮಾಡುತ್ತವೆ. ಈ ಮರಗಳಿರುವುದರಿಂದ ಗೃಹಸ್ಥನು ಅಭಿವೃದ್ಧಿಯನ್ನು ಹೊಂದುತ್ತಾನೆ.

೩೮. ನೇರಿಲೆಯಮರವೂ ದಾಳಿಂಬೆಯಮರವೂ ಬಾಳೆಯಮರವೂ ಅಮಟೆಯಮರವೂ ಕೂಡ ಪೂರ್ವದಿಕ್ಕಿನಲ್ಲಿದ್ದರೆ ಬಂಧುಗಳನ್ನುಂಟುಮಾಡುತ್ತವೆ. ದಕ್ಷಿಣದಿಕ್ಕಿನಲ್ಲಿದ್ದರೆ ಮಿತ್ರರನ್ನುಂಟುಮಾಡುತ್ತದೆ.

೩೯–೪೦. ಸುವಾಕವೆಂಬವೃಕ್ಷವು ಎಲ್ಲೆಡೆಯಲ್ಲಿಯೂ ಶುಭವನ್ನುಂಟುಮಾಡತಕ್ಕುದಾಗಿರುತ್ತದೆ ಮತ್ತು ಧನ ಪುತ್ರರು ಶುಭ ಇವುಗಳನ್ನುಂಟುಮಾಡುತ್ತದೆ. ದಕ್ಷಿಣದಿಕ್ಕಿನಲ್ಲಿಯೂ ಪಶ್ಚಿಮದಿಕ್ಕಿನಲ್ಲಿಯೂ ಈಶಾನ್ಯದಿಕ್ಕಿನಲ್ಲಿಯೂ ಇರುವುದಾದರೆ ಸಂತೋಷವನ್ನು ಕೊಡತಕ್ಕುದಾಗಿಯೂ ಎಲ್ಲೆಡೆಯಲ್ಲಿಯೂ ಸುಖವನ್ನುಂಟುಮಾಡತಕ್ಕುದಾಗಿಯೂ ಇರುತ್ತದೆಂದು ತಿಳಿ. ಸಂಪಿಗೆಯಮರವು ಎಲ್ಲೆಡೆಯಲ್ಲಿಯೂ ಶುದ್ಧವಾಗಿರುತ್ತದೆ ಮತ್ತು ಭೂಮಿಯಲ್ಲಿ ಮಂಗಳವನ್ನುಂಟುಮಾಡುತ್ತದೆ.

ಅಲಾಬುಶ್ಚಾತಿಕೂಷ್ಮಾಂಡಮಾಯೊಂಬುಶ್ಚ ಸಕಿಂಶುಕಃ ।
ಖರ್ಜೂರೀ ಕರ್ಕಟೀ ಚಾಪಿ ಶಿಬಿರೇ ಮಂಗಲಪ್ರದಾ ॥ ೪೧ ॥

ವಾಸ್ತೂಕಕಾರಬಿಲ್ವಶ್ಚ ವಾರ್ತಾಕಶ್ಚ ಶುಭಪ್ರದಃ ।
ಲತಾಫಲಂ ಚ ಶುಭದಂ ಸರ್ವಂ ಸರ್ವತ್ರ ನಿಶ್ಚಿತಂ ॥ ೪೨ ॥

ಪ್ರಶಸ್ತಂ ಕಥಿತಂ ಕಾರೋ ನಿಷಿದ್ಧಂ ಚ ನಿಶಾಮಯ ।
ವನ್ಯವೃಕ್ಷೋ ನಿಷಿದ್ಧಶ್ಚ ಶಿಬಿರೇ ನಗರೇಽಪಿ ಚ ॥ ೪೩ ॥

ವಟೋ ನಿಷಿದ್ಧಃ ಶಿಬಿರೇ ನಿತ್ಯಂ ಚೋರಭಯಂ ಯತಃ ।
ನಗರೇಷು ಪ್ರಸಿದ್ಧಶ್ಚ ದರ್ಶನಾತ್ಪುಣ್ಯದಸ್ತಥಾ ॥ ೪೪ ॥

ನಿಷಿದ್ಧಃ ಶಾಲ್ಮಲಿಶ್ಚೈವ ಶಿಬಿರೇ ನಗರೇ ಪುರೇ ।
ದುಃಖಪ್ರದಶ್ಚ ಸತತಂ ಭೂಮಿಪಾನಾಂ ಸದಾಪಿ ಚ ॥ ೪೫ ॥

---

೪೧. ಸೋರೇಕಾಯಿಗಿಡವೂ ಕುಂಬಳದಗಿಡವೂ ಆಯೊಂಬುವೂ ಮುತ್ತಗದ ಗಿಡವೂ ಖರ್ಜೂರದಗಿಡವೂ ಕರ್ಕಟೀಗಿಡವೂ ಮನೆಯಲ್ಲಿ ಮಂಗಳವನ್ನುಂಟು ಮಾಡತಕ್ಕವುಗಳಾಗಿರುತ್ತದೆ.

೪೨. ಚಕವರ್ತಿಸೊಪ್ಪಿನಗಿಡವೂ ಬಿಲ್ವದಮರವೂ ಬದನೆಯಗಿಡವೂ ಮಂಗಲಕರವಾದುವುಗಳು. ಎಲ್ಲ ವಿಧವಾದ ಬಳ್ಳಿಗಳೂ ಕೂಡ ಯಾವಾಗಲೂ ಎಲ್ಲೆಡೆಯಲ್ಲಿಯೂ ಕೂಡ ಮಂಗಳವನ್ನುಂಟುಮಾಡತಕ್ಕುದಾಗಿರುತ್ತವೆ.

೪೩. ಎಲೈ ಶಿಲ್ಪಿಯೇ! ಪ್ರಶಸ್ತವಾದುದನ್ನು ಹೇಳಿರುವೆನು. ಇನ್ನು ನಿಷಿದ್ಧ ವಾದುವುಗಳನ್ನು ಹೇಳುತ್ತೇನೆ ತಿಳಿದುಕೊಳ್ಳುವವನಾಗು. ಕಾಡುಮರವು ಮನೆ ಯಲ್ಲಿಯೂ ನಗರದಲ್ಲಿಯೂ ನಿಷಿದ್ಧವಾದುದು.

೪೪. ಮನೆಯಲ್ಲಿ ಆಲದಮರವು ನಿಷಿದ್ಧವು, ಏಕೆಂದರೆ ಆಲದಮರವಿದ್ದಲ್ಲಿ ಕಳ್ಳರಭಯವಿರುವುದು. ಪಟ್ಟಣಗಳಲ್ಲಿ ಅದು ಪ್ರಸಿದ್ಧವಾಗಿರುವುದಲ್ಲದೆ ನೋಡಿದ ಮಾತ್ರದಿಂದಲೆ ಪುಣ್ಯವನ್ನುಂಟುಮಾಡತಕ್ಕುದಾಗಿರುತ್ತದೆ.

೪೫–೪೬. ಬೂರುಗದಮರವು ಮನೆಯಲ್ಲಿಯೂ ನಗರದಲ್ಲಿಯೂ ಪಟ್ಟಣ ದಲ್ಲಿಯೂ ಕೂಡ ನಿಷಿದ್ಧವಾದುದು. ಅದು ಯಾವಾಗಲೂ ದುಃಖವನ್ನುಂಟು ಮಾಡತಕ್ಕುದು ಮತ್ತು ರಾಜರಿಗೆ ಯಾವಾಗಲೂ ದುಃಖವನ್ನುಂಟುಮಾಡತಕ್ಕು

ನ ನಿಷಿದ್ಧಃ ಪ್ರಸಿದ್ಧಶ್ಚ ಗ್ರಾಮೇಷು ನಗರೇಷು ಚ ।
ವಿದ್ಯಾಮತಿನಿಷಿದ್ಧಸ್ತು ಸತತಂ ದುಃಖದಸ್ತದಾ ॥ ೪೬ ॥

ಹೇ ಕಾರೋ ತಿಂತಿಡೀವೃಕ್ಷೋ ಯತ್ನಾತ್ತಂ ಪರಿವರ್ಜಯೇತ್ ।
ಶತೇನ ಧನಹಾನಿಃ ಸ್ಯಾತ್ಪ್ರಜಾಹಾನಿರ್ಭವೇದ್ಧ್ರುವಂ ॥ ೪೭ ॥

ಶಿಬಿರೇತಿನಿಷಿದ್ಧಶ್ಚ ನಗರೇ ಕಿಂಚಿದೇವ ಚ ।
ನ ನಿಷಿದ್ಧಃ ಪ್ರಸಿದ್ಧಶ್ಚ ಗ್ರಾಮೇಷು ನಗರೇಷು ಚ ॥ ೪೮ ॥

ವಿದ್ಯಾವತಿನಿಷಿದ್ಧಶ್ಚ ಪ್ರಾಜ್ಞಸ್ತಂ ಪರಿವರ್ಜಯೇತ್ ।
ಖರ್ಜೂರಶ್ಚ ಗಹುಶ್ಚೈವ ನಿಷಿದ್ಧಃ ಶಿಬಿರೇ ತಥಾ ॥ ೪೯ ॥

ನ ನಿಷಿದ್ಧಃ ಪ್ರಸಿದ್ಧಶ್ಚ ಗ್ರಾಮೇಷು ನಗರೇಷು ಚ ।
ವೃಕ್ಷಶ್ಚ ಚಣಕಾದೀನಾಂ ಧಾನ್ಯಂ ಚ ಮಂಗಲಪ್ರದಂ ॥ ೫೦ ॥

ಗ್ರಾಮೇಷು ನಗರೇ ಚಾಪಿ ಶಿಬಿರೇ ಚ ತಥೈವ ಚ ।
ಇಕ್ಷುವೃಕ್ಷಶ್ಚ ಶುಭದಃ ಸಂತತಂ ಶುಭದಸ್ತಥಾ ॥ ೫೧ ॥

---

ದಾಗಿಯೂ ಇರುತ್ತದೆ. ಗ್ರಾಮಗಳಲ್ಲಿ ನಿಷಿದ್ಧವಾಗಿಯೂ ನಗರಗಳಲ್ಲಿ ಅಪ್ರಸಿದ್ಧವಾಗಿಯೂ ವಿದ್ಯಾವಂತರಿರುವ ಸ್ಥಳದಲ್ಲಿ ನಿಷಿದ್ಧವಾಗಿಯೂ ಯಾವಾಗಲೂ ದುಃಖವನ್ನುಂಟುಮಾಡತಕ್ಕದಾಗಿಯೂ ಇರುತ್ತದೆ.

೪೭–೫೧. ಹುಣಿಸೆಯಮರವು ನಿಂದಿತವಾದುದು ಅದನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು. ನೂರುಹಸ್ತಪ್ರಮಾಣದೊಳಗಿದ್ದರೆ ಧನಹಾನಿಯೂ ಪ್ರಜಾಹಾನಿಯೂ ನಿಶ್ಚಯವಾಗಿಯೂ ಉಂಟಾಗುತ್ತದೆ. ಮನೆಯಲ್ಲಿ ಅತಿನಿಂದಿತವು. ನಗರದಲ್ಲಿಸ್ವಲ್ಪನಿಂದಿತವು. ಗ್ರಾಮಗಳಲ್ಲಿಯೂ ನಗರಗಳಲ್ಲಿಯೂ ನಿಷಿದ್ಧವೂ ಅಲ್ಲ ಪ್ರಸಿದ್ಧವೂ ಅಲ್ಲ. ವಿದ್ಯಾವಂತರಿರುವ ಸ್ಥಳದಲ್ಲಿ ನಿಷಿದ್ಧವು. ತಿಳಿದವರು ಅದನ್ನು ಪರಿತ್ಯಾಗಮಾಡಬೇಕು. ಖರ್ಜೂರವೂ ಗಹುವೂ ಮನೆಯಲ್ಲಿ ನಿಷಿದ್ಧವು. ಗ್ರಾಮಗಳಲ್ಲಿಯೂ ನಗರಗಳಲ್ಲಿಯೂ ನಿಷಿದ್ಧಗಳಲ್ಲ ಪ್ರಸಿದ್ಧಗಳೂ ಅಲ್ಲ. ಕಡಲೆಯೇ ಮೊದಲಾದ ಧಾನ್ಯಗಳ ವೃಕ್ಷಗಳು ಗ್ರಾಮಗಳಲ್ಲಿಯೂ ನಗರಗಳಲ್ಲಿಯೂ ಮನೆಯಲ್ಲಿಯೂ ಮಂಗಳಕರಗಳಾಗಿರುತ್ತವೆ. ಮಂಗಳವನ್ನುಂಟುಮಾಡುವ ಕಬ್ಬು ಯಾವಾಗಲೂ ಶುಭಕರವಾದುದು.

ಅಶೋಕಶ್ಚ ಶಿರೀಷಶ್ಚ ಕದಂಬಶ್ಚ ಶುಭಪ್ರದಃ ।
ಕಶ್ಚಿದ್ಧರಿದ್ರಾ ಶುಭದಾ ಶುಭದಶ್ಚಾರ್ದ್ರಕಸ್ತಥಾ ॥ ೫೨ ॥

ಹರೀತಕೀ ಚ ಶುಭದಾ ಗ್ರಾಮೇಷು ನಗರೇಷು ಚ ।
ನವಾದ್ಯಾ ಭದ್ರದಾ ನಿತ್ಯಂ ತಥಾ ಚಾಮಲಿಕೀ ಧ್ರುವಂ ॥ ೫೩ ॥

ಗಜಾನಾಮಸ್ಥಿ ಶುಭದಮಶ್ವಾನಾಂ ಚ ತಥೈವ ಚ ।
ಕಲ್ಯಾಣಮುಚ್ಚೈಃಶ್ರವಸಾಂ ವಾಸ್ತ್ವಸ್ಥಾಪನಕಾರಿಣಾಂ ॥ ೫೪ ॥

ನ ಶುಭಪ್ರದಮನ್ಯೇಷಾಮುಚ್ಛಿನ್ನಕಾರಣಂ ಪರಂ ।
ವಾನರಾಣಾಂ ನರಾಣಾಂ ಚ ಗರ್ದಭಾನಾಂ ಗವಾಮಪಿ ॥ ೫೫ ॥

ಕುಕ್ಕುಟಾನಾಂ ಶೃಗಾಲಾನಾಂ ಮಾರ್ಜಾರಾಣಾಮಭದ್ರಕಂ ।
ಭೇಟಿಕಾನಾಂ ಸೂಕರಾಣಾಂ ಸರ್ವೇಷಾಂ ಚ ಶುಭಪ್ರದಂ ॥ ೫೬ ॥

---

೫೨. ಅಶೋಕದ ಮರವೂ ಬಾಗೇಮರವೂ ಈಚಲಮರವೂ ಮಂಗಳವನ್ನುಂಟುಮಾಡತಕ್ಕವುಗಳು. ಅರಿಶಿನವು ಸ್ವಲ್ಪಮಟ್ಟಿಗೆ ಉತ್ತಮವು. ಶುಂಠಿಯ ಗಿಡವು ಮಂಗಳಕರವು.

೫೩. ಅಳಲೇಕಾಯಿಯಮರವು ಗ್ರಾಮಗಳಲ್ಲಿಯೂ ನಗರಗಳಲ್ಲಿಯೂ ಮಂಗಳಕರವು. ಮೊದಲು ಹೇಳಿರುವ ಒಂಭತ್ತುಮರಗಳು ಯಾವಾಗಲೂ ಶುಭಕರಗಳು ಮತ್ತು ನೆಲ್ಲಿಯ ಗಿಡವೂ ಕೂಡ ಶುಭಕರವಾದುದು.

೫೪. ಆನೆಯಮೂಳೆಯೂ ಕುದುರೆಯಮೂಳೆಯೂ ಮಂಗಳಕರಗಳು. ವಾಸ್ತುಸ್ಥಾಪನೆಗೆ ಮುಖ್ಯಗಳಾದ ಉಚ್ಚೈಃಶ್ರವಸ್ಸುಗಳ ಮೂಳೆಯು ಮಂಗಳಕರಗಳಾಗಿರುತ್ತವೆ.

೫೫–೫೬. ಇತರ ಪ್ರಾಣಿಗಳ ಮೂಳೆಯು ಮಂಗಳಕರವಲ್ಲ ಮತ್ತು ವಿನಾಶಕಾರಿಯಾದುದು. ಕಪಿಗಳ ಮನುಷ್ಯರ ಕತ್ತೆಗಳ ಗೋವುಗಳ ಕೋಳಿಗಳ ಮತ್ತು ನರಿಗಳ ಬೆಕ್ಕುಗಳ ಮೂಳೆಗಳು ಅಮಂಗಳಕರಗಳು. ಎಲ್ಲ ಪಕ್ಷಿಗಳ ಮತ್ತು ಹಂದಿಗಳ ಮೂಳೆಗಳು ಮಂಗಳಕರಗಳು.

ಈಶಾನೇ ಚಾಪಿ ಪೂರ್ವಸ್ಮಿನ್ನುತ್ತರೇ ಚ ತಥೋತ್ತಮೇ ।
ಶಿಬಿರಸ್ಯ ಜಲಂ ಭದ್ರಮನ್ಯತ್ರಾಶುಭಮೇವ ಚ　　|| ೫೭ ||

ದೀರ್ಘೇ ಪ್ರಸ್ಥೇ ಸಮಾಸಂ ಚ ನ ಕುರ್ಯಾನ್ಮಂದಿರಂ ಬುಧಃ ।
ಚತುರಸ್ರೇ ಗೃಹೇ ಕಾರ್ಯೇ ಗೃಹಿಣಾಂ ಧನನಾಶನಂ　　|| ೫೮ ||

ದೀರ್ಘಪ್ರಸ್ಥಃ ಪರಿಮಿತೋ ನೇತ್ರಾಂಕೇನಾಪಿ ಸಂಸ್ಕೃತಂ ।
ಶೂನ್ಯೇನ ರಹಿತಂ ಭದ್ರಂ ಶೂನ್ಯಂ ಶೂನ್ಯಪ್ರದಂ ನೃಣಾಂ　　|| ೫೯ ||

ಪ್ರಸ್ಥೇ ಹಸ್ತದ್ವಯೋತ್ಪೂರ್ವಂ ದೀರ್ಘಂ ಹಸ್ತತ್ರಯಂ ತಥಾ ।
ಗೃಹಾಣಾಂ ಶುಭದಂ ದ್ವಾರಂ ಪ್ರಾಕಾರಸ್ಯ ಗೃಹಸ್ಯ ಚ　　|| ೬೦ ||

ನ ಮಧ್ಯದೇಶೇ ಕರ್ತವ್ಯಂ ಕಿಂಚಿನ್ನ್ಯೂನಾಧಿಕೇ ಶುಭಂ ।
ಚತುರಸ್ರಂ ಚಂದ್ರವೇಧಂ ಶಿಬಿರಂ ಮಂಗಲಪ್ರದಂ　　|| ೬೧ ||

---

೫೭. ಮನೆಯ ಈಶಾನ್ಯದಿಕ್ಕಿನಲ್ಲಾಗಲೀ ಪೂರ್ವದಿಕ್ಕಿನಲ್ಲಾಗಲೀ ಉತ್ತರ ದಿಕ್ಕಿನಲ್ಲಾಗಲೀ ನೀರಿರುವುದು ಮಂಗಳಕರವು. ಬೇರೆಯ ದಿಕ್ಕಿನಲ್ಲಿರುವುದಾದರೆ ಅಮಂಗಳಕರವಾದುದು.

೫೮. ಪ್ರಾಜ್ಞನಾದವನು ಉದ್ದ ಮತ್ತು ಎತ್ತರ ಇವೆರಡೂ ಒಂದೇ ಅಳತೆಯಾಗಿರುವಂತೆ ಮನೆಯನ್ನು ಕಟ್ಟಬಾರದು. ಎಲೈ ಶಿಲ್ಪಿಯೇ! ಮನೆಯು ಸಮನಾಗಿದ್ದರೆ ಗೃಹಸ್ಥನಿಗೆ ಧನನಾಶವುಂಟಾಗುತ್ತದೆ.

೫೯. ಉದ್ದ ಮತ್ತು ಎತ್ತರಗಳು ಪರಿಮಿತವಾಗಿದ್ದು ಗವಾಕ್ಷಗಳಿಂದ ಕೂಡಿ ಶೂನ್ಯಪ್ರದೇಶರಹಿತವಾಗಿ ನಿರ್ಮಿಸಲ್ಪಟ್ಟ ಮನೆಯು ಶುಭಕರವಾದುದು. ಶೂನ್ಯಯುಕ್ತವಾಗಿದ್ದರೆ ಮಾನವರಿಗೆ ಶೂನ್ಯಫಲವನ್ನುಂಟುಮಾಡುತ್ತದೆ.

೬೦-೬೧. ಎರಡುಹಸ್ತಪ್ರಮಾಣ ಎತ್ತರದಲ್ಲಿ ಮೂರುಹಸ್ತಪ್ರಮಾಣದೀರ್ಘವುಳ್ಳ ಬಾಗಿಲನ್ನು ಮಾಡಿದರೆ ಮನೆಗೆ ಮಂಗಳವು. ಪ್ರಾಕಾರದ ಮತ್ತು ಮನೆಯ ಮಧ್ಯಪ್ರದೇಶದಲ್ಲಿ ಸ್ವಲ್ಪವೂ ಹೆಚ್ಚುಕಡಿಮೆ ಮಾಡಕೂಡದು. ಹಾಗಿದ್ದರೆ ಶುಭಕರವು. ಚತುರಸ್ರಾಕಾರವಾಗಿ ಚಂದ್ರವೇಧೆಯಿಂದ ಕೂಡಿರುವ ಮನೆಯು ಮಂಗಲ

ಅಭದ್ರದಂ ಸೂರ್ಯವೇಧಂ ಶಿಬಿರಂ ಮಂಗಲಪ್ರದಂ ।
ಅಭದ್ರಂ ಸೂರ್ಯವೇಧಂ ಪ್ರಾಂಗಣಂ ಚ ತಥೈವ ಚ ॥ ೨೨ ॥

ಶಿಬಿರಾಭ್ಯಂತರೇ ಭದ್ರಾ ಸ್ಥಾಪಿತಾ ತುಲಸೀ ನೃಣಾಂ ।
ಧನಪುತ್ರಪ್ರದಾತ್ರೀ ಚ ಪುಣ್ಯದಾ ಹರಿಭಕ್ತಿದಾ ॥ ೬೩ ॥

ಪ್ರಭಾತೇ ತುಲಸೀಂ ದೃಷ್ಟ್ವಾ ಸ್ವರ್ಣದಾನಫಲಂ ಲಭೇತ್ ।
ಮಾಲತೀ ಯೂಥಿಕಾ ಕುಂದಂ ಮಾಧವೀ ಕೇತಕೀ ತಥಾ ॥ ೬೪ ॥

ನಾಗೇಶ್ವರಂ ಮಲ್ಲಿಕಾಂ ಚ ಕಾಂಚನಂ ಬಕುಲಂ ಶುಭಂ ।
ಅಪರಾಜಿತಾ ಚ ಶುಭದಾ ತೇಷಾಮುದ್ಯಾನಮೀಪ್ಸಿತಂ ॥ ೬೫ ॥

ಪೂರ್ವೇ ಚ ದಕ್ಷಿಣೇ ಚೈವ ಶುಭದಂ ನಾತ್ರ ಸಂಶಯಃ ।
ಊರ್ಧ್ವಂ ಷೋಡಶಹಸ್ತೇಭ್ಯೋ ನೈವಕುರ್ಯಾದ್ಗೃಹಂ ಗೃಹೀ ॥ ೬೬ ॥

---

ಕರವು. ಸೂರ್ಯವೇಧೆಯಿಂದ ಕೂಡಿರುವ ಮನೆಯು ಅಮಂಗಳಕರವು. ಮತ್ತು ಸೂರ್ಯವೇಧೆಯಿಂದ ಕೂಡಿದ ಮನೆಯ ಮುಂಭಾಗದ ಅಂಗಳವೂ ಕೂಡ ಅಮಂಗಲಕರವು.

೬೩. ಮನೆಯ ಮಧ್ಯಭಾಗದಲ್ಲಿ ಮಂಗಳಕರವಾದ ತುಲಸೀಗಿಡವನ್ನು ನೆಟ್ಟರೆ ಅದು ಮಾನವರಿಗೆ ಧನವನ್ನೂ ಪುತ್ರರನ್ನೂ ಪುಣ್ಯವನ್ನೂ ಹರಿಭಕ್ತಿಯನ್ನೂ ಕೊಡುತ್ತದೆ.

೬೪–೬೬. ಪ್ರಾತಃಕಾಲದಲ್ಲಿ ತುಲಸಿಯನ್ನು ದರುಶನ ಮಾಡುವುದರಿಂದ ಚಿನ್ನವನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ. ಮಾಲತೀ ಯೂಥಿಕಾ ಕುಂದ ಮಾಧವಿ ಕೇದಿಗೆ ನಾಗೇಶ್ವರ ಮಲ್ಲಿಗೆ ಮತ್ತು ನಾಗಸಂಪಿಗೆ ಬಕುಲ ಈ ಹೂವುಗಳು ಶುಭಕರಗಳು. ಅಪರಾಜಿತವೂಕೂಡ ಶುಭಕರವು. ಅವುಗಳ ತೋಟವನ್ನು ಮಾಡುವುದು ಯೋಗ್ಯವು. ಆ ತೋಟವು ಮನೆಯ ಪೂರ್ವದಿಕ್ಕಿನಲ್ಲಾಗಲೀ ದಕ್ಷಿಣದಿಕ್ಕಿನಲ್ಲಾಗಲೀ ಇದ್ದರೆ ಶುಭಕರಗಳಾಗುತ್ತವೆ. ಗೃಹಸ್ಥನು ಹದಿನಾರುಹಸ್ತ ಪರಿಮಾಣಕ್ಕಿಂತಲೂ ಮೇಲೆ ಮನೆಯನ್ನು ಕಟ್ಟಬಾರದು.

ಊರ್ಧ್ವಂ ವಿಂಶತಿಹಸ್ತೇಭ್ಯಃ ಪ್ರಾಕಾರಂ ನ ಶುಭಪ್ರದಂ ।
ಸೂತ್ರಧಾರಂ ತೈಲಕಾರಂ ಸ್ವರ್ಣಕಾರಂ ಚ ಹೀರಕಂ ॥ ೬೭ ॥

ವಾಟೀಮೂಲೇ ಗ್ರಾಮಮಧ್ಯೇ ನ ಕುರ್ಯಾತ್ಸ್ಥಾಪನಂ ಬುಧಃ ।
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ತಚ್ಛೂದ್ರಂ ಗಣಕಂ ಶುಭಂ ॥ ೬೮ ॥

ಭಟ್ಟಂ ವೈದ್ಯಂ ಪುಷ್ಪಕಾರಂ ಸ್ಥಾಪಯೇಚ್ಚಿಭಿರಾಂತಿಕೇ ।
ಪ್ರಸ್ಥೇ ಚ ಪರಿಖಾಮಾನಂ ಶತಹಸ್ತಂ ಪ್ರಶಸ್ತಕಂ ॥ ೬೯ ॥

ಪರಿತಃ ಶಿಬಿರಾಣಾಂ ಚ ಗಂಭೀರಂ ದಶಹಸ್ತಕಂ ।
ಸಂಕೇತಪೂರ್ವಕಂ ಚೈವ ಪರಿಖಾದ್ವಾರಮೀಪ್ಸಿತಂ ॥ ೭೦ ॥

ಶತ್ರೋರಗಮ್ಯಂ ಮಿತ್ರಸ್ಯ ಗಮ್ಯಮೇವ ಸುಖೇನ ಚ ।
ಶಾಲ್ಮಲೀನಾಂ ತಿಂತಿಡೀನಾಂ ಹಿಂತಾಲಾನಾಂ ತಥೈವ ಚ ॥ ೭೧ ॥

ನಿಂಬಾನಾಂ ಸಿಂಧುವಾರಾಣಾಮುಡುಂಬರಾಣಾಮಭದ್ರಕಂ ।
ದತ್ತೂರಾಣಾಂ ವಟಾನಾಂ ಚಾಪ್ಯೇರಂಡಾನಾಮವಾಂಛಿತಂ ॥ ೭೨ ॥

---

೬೭–೭೦. ಇಪ್ಪತ್ತುಹಸ್ತಕ್ಕಿಂತಲೂ ಮೇಲೆ ಪ್ರಾಕಾರವನ್ನು ಮಾಡಿದರೆ ಅದು ಮಂಗಳಕರವಲ್ಲ. ಸೂತ್ರಧಾರನನ್ನೂ, ಎಣ್ಣೆಮಾಡುವವನನ್ನೂ, ಅಕ್ಕಸಾಲಿಗನನ್ನೂ, ರತ್ನವ್ಯಾಪಾರಿಯನ್ನೂ ಗ್ರಾಮ ಮಧ್ಯದಲ್ಲಿಯೂ ದಾರಿಯ ಮಧ್ಯದಲ್ಲಿಯೂ ಇರಿಸಬಾರದು. ಬ್ರಾಹ್ಮಣನನ್ನೂ ಕ್ಷತ್ರಿಯನನ್ನೂ ಉತ್ತಮ ಶೂದ್ರನನ್ನೂ ಜ್ಯೋತಿಷ್ಕನನ್ನೂ ಇರಿಸುವುದು ಉತ್ತಮವು ಭಟ್ಟನನ್ನೂ ವೈದ್ಯನನ್ನೂ ಹೂವಾಡಿಗನನ್ನೂ ಮನೆಯ ಸಮೀಪದಲ್ಲಿರಿಸಬೇಕು. ಮನೆಯ ಸುತ್ತಲೂ ಮಾಡತಕ್ಕ ಕಂದಕದ ಆಳತೆಯು ನೂರುಹಸ್ತ ಪ್ರಮಾಣವುಳ್ಳದ್ದಾಗಿಯೂ, ಹತ್ತುಹಸ್ತ ಆಳವುಳ್ಳದ್ದಾಗಿಯೂ ಇರುವುದು ಪ್ರಶಸ್ತವು. ಕಂದಕದ ಬಾಗಿಲು ಸಂಕೇತಪೂರ್ವವಾಗಿರಬೇಕು.

೭೧–೭೨. ಆ ಕಂದಕವು ಶತ್ರುಗಳಿಗೆ ಪ್ರವೇಶಿಸಲಸಾಧ್ಯವೂ, ಮಿತ್ರರಿಗೆ ಸುಖವಾಗಿ ಪ್ರವೇಶಿಸಲು ಯೋಗ್ಯವೂ ಆಗಿರಬೇಕು. ಬೂರುಗದ ಮರದ, ಹುಣಿಸೆಯ ಮರದ, ಕಿರತಾಳೇಗಿಡದ, ಬೇವಿನ ಮರದ, ಲಕ್ಕಿಯ ಮರದ, ಆಲದ ಮರದ, ಅತ್ತಿಯ ಮರದ ತೊಳೆ ಮುಂತಾದುವುಗಳು ಅಮಂಗಲಕರಗಳು. ಮತ್ತು ಅನಿಷ್ಟಗಳು.

ಏತೇಷಾಮತಿರಿಕ್ತಾನಾಂ ಶಿಬಿರೇ ಕಾಷ್ಠಮಿಷ್ಯತೇ ।
ವೃಕ್ಷಂ ಚ ವಜ್ರಹಸ್ತಂ ಚ ಭೂಧರೋ ವರ್ಜಯೇದಧಃ ॥ ೭೩ ॥

ಪುತ್ರದಾರಧನಂ ಹನ್ತ್ಯಾದಿತ್ಯಾಹ ಕಮಲೋದ್ಭವಃ ।
ಕಥಿತಂ ಲೋಕಶಿಕ್ಷಾರ್ಥಂ ಕುರು ಕಾಷ್ಠಂ ವಿನಾ ಪುರೀಂ ॥ ೭೪ ॥

ಶುಭಕ್ಷಣಂ ಚಾಪ್ಯಧುನಾ ಗಚ್ಛ ವತ್ಸ ಯಥಾಸುಖಂ ।
ವಿಶ್ವಕರ್ಮಾ ಹರಿಂ ನತ್ವಾ ಜಗಾಮ ಪಕ್ಷಿಣಾ ಸಹ ॥ ೭೫ ॥

ಸಮುದ್ರಸ್ಯ ಸಮೀಪಂ ಚ ವಟಮೂಲಂ ಮನೋಹರಂ ।
ಸುಷ್ವಾಪ ತತ್ರ ನಕ್ತಂ ಚ ಕಾರುಶ್ಚ ಪಕ್ಷಿಣಾ ಸಹ ॥ ೭೬ ॥

ಸ್ವಪ್ನೇ ದ್ವಾರವತೀಂ ರಮ್ಯಾಂ ದದರ್ಶ ಗರುಡಸ್ತಥಾ ।
ಯತ್ಕಿಂಚಿತ್ಕಥಿತಂ ಕಾರುಂ ಕೃಷ್ಣೇನ ಪರಮಾತ್ಮನಾ ॥ ೭೭ ॥

ತದೇವ ಲಕ್ಷಣಂ ಸರ್ವಂ ದದರ್ಶ ನಗರೇ ಮುನೇ ।
ಕಾರುಂ ಹಸಂತಿ ಸ್ವಪ್ನೇ ಚ ಸರ್ವೇತೇ ಶಿಲ್ಪಕಾರಿಣಃ ॥ ೭೮ ॥

---

೭೩–೭೬. ಇವುಗಳನ್ನು ಬಿಟ್ಟು ಉಳಿದಮರಗಳು ಮನೆಗೆ ಹಿತವಾದುವುಗಳು. ರಾಜನಾದವನು ಮನೆಯ ಕೆಳಭಾಗಕ್ಕೆ ಮರವನ್ನೂ ವಜ್ರಹಸ್ತವನೂ ಹಾಕಬಾರದು. ಹಾಗೆ ಮಾಡಿದರೆ ಅದು ಮಕ್ಕಳನ್ನೂ ಪತ್ನಿಯನ್ನೂ ಧನವನ್ನೂ ನಾಶಮಾಡುತ್ತದೆಯೆಂದು ಬ್ರಹ್ಮನು ಹೇಳಿರುವನು. ಇವೆಲ್ಲವನ್ನೂ ಲೋಕದ ಜನರ ತಿಳಿವಳಿಕೆಗಾಗಿ ಹೇಳಿರುವೆನು. ನೀನು ಮರದ ಸಂಬಂಧವಿಲ್ಲದೆಯೇ ಪಟ್ಟಣವನ್ನು ನಿರ್ಮಾಣಮಾಡು. ಈಗ ಉತ್ತಮವಾದ ಮುಹೂರ್ತವಾಗಿರುವುದು. ಈಗ ನೀನು ಸುಖವಾಗಿಹೋಗು. ವಿಶ್ವಕರ್ಮನು ಗರುಡನೊಡನೆ ಹರಿಗೆ ನಮಸ್ಕಾರ ಮಾಡಿ ಸಮುದ್ರದ ಸಮೀಪದಲ್ಲಿರುವ ಸುಂದರವಾದ ಆಲದಮರದ ಬುಡಕ್ಕೆ ಹೋದನು. ಅಲ್ಲಿ ಆ ರಾತ್ರಿಯಲ್ಲಿ ಗರುಡನೊಡನೆ ಮಲಗಿ ನಿದ್ರಿಸಿದನು.

೭೭–೮೧. ಗರುಡನು ಸ್ವಪ್ನದಲ್ಲಿ ಪರಮಾತ್ಮನಾದ ಕೃಷ್ಣನು ವಿಶ್ವಕರ್ಮನನ್ನು ಕುರಿತು ಯಾವರೀತಿಯಲ್ಲಿ ಹೇಳಿದ್ದನೋ ಆ ಎಲ್ಲ ಲಕ್ಷಣಗಳಿಂದಲೂ ಕೂಡಿರುವ ಮನೋಹರವಾದ ದ್ವಾರವತೀಪಟ್ಟಣವನ್ನು ಕಂಡನು. ಎಲೈ ನಾರದ ಮುನಿಯೇ! ಸ್ವಪ್ನದಲ್ಲಿಯೇ ಇತರ ಶಿಲ್ಪಿಗಳೆಲ್ಲರೂ ವಿಶ್ವಕರ್ಮನನ್ನು ಹಾಸ್ಯಮಾಡು

ಗರುಡಂ ಗರುಡಾಶ್ಚಾನ್ಯೇ ಬಲವಂತಶ್ಚ ಪಕ್ಷಿಣಃ ।
ಬುದ್ಧ್ವೋ ದದರ್ಶ ಗರುಡೋ ವಿಶ್ವಕರ್ಮಾ ಚ ಲಜ್ಜಿತಃ ॥ ೭೯ ॥

ಅತೀವ ದ್ವಾರಕಾಂ ರಮ್ಯಾಂ ಶತಯೋಜನವಿಸ್ತೃತಾಂ ।
ಬ್ರಹ್ಮಾದೀನಾಂ ಚ ನಗರಂ ವಿಜಿತ್ಯ ಚ ವಿರಾಜಿತಾಂ ॥ ೮೦ ॥

ತೇಜಸಾಚ್ಛಾದಿತಂ ಸೂರ್ಯಂ ರತ್ನಾನಾಂ ಚ ಪರಿಷ್ಕೃತಾಂ ॥ ೮೧ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣ ನಾರದಸಂವಾದೇ
ದ್ವಾರಕಾನಿರ್ಮಾಣಾರಂಭೇ
ತ್ರ್ಯಧಿಕಶತತಮೋಽಧ್ಯಾಯಃ.

---

ತ್ತಿದ್ದರು. ಇತರ ಗರುಡಗಳೂ ಬಲಿಷ್ಠವಾದ ಪಕ್ಷಿಗಳೂ ಗರುಡನನ್ನು ಹಾಸ್ಯ ಮಾಡುತ್ತಿದ್ದುವು. ಗರುಡನೂ ವಿಶ್ವಕರ್ಮನೂ ಎಚ್ಚರಗೊಂಡವರಾಗಿ ಅತ್ಯಂತ ಮನೋಹರವಾದ ನೂರುಯೋಜನ ವಿಸ್ತಾರವುಳ್ಳ ಬ್ರಹ್ಮನೇ ಮೊದಲಾದವರ ನಗರಗಳನ್ನು ಜಯಿಸಿ ಪ್ರಕಾಶಿಸುತ್ತಿರುವ ತನ್ನ ಕಾಂತಿಯಿಂದ ಸೂರ್ಯನನ್ನು ಮುಚ್ಚಿರುವ ಅನೇಕ ರತ್ನಗಳಿಂದ ಪರಿಷ್ಕರಿಸಲ್ಪಟ್ಟಿರುವ ದ್ವಾರಕಾ ಪಟ್ಟಣವನ್ನು ನೋಡಿ ನಾಚಿಕೊಂಡರು.

ಇಂತು ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿನ
ನಾರಾಯಣ ನಾರದ ಸಂವಾದದಲ್ಲಿ ದ್ವಾರಕಾನಿರ್ಮಾಣವೆಂಬ
ನೂರಮೂರನೆಯ ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಚತುರಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಏತಸ್ಮಿನ್ನಂತರೇ ಬ್ರಹ್ಮಾ ಭವಾನ್ಯಾ ಚ ಭವಃ ಸ್ವಯಂ ।
ಅನಂತಶ್ಚಾಪಿ ಧರ್ಮಶ್ಚ ಭಾಸ್ಕರಶ್ಚ ಹುತಾಶನಃ || ೧ ||

ಕುಬೇರೋ ವರುಣಶ್ಚೈವ ಪವನಶ್ಚ ಯಮಸ್ತಥಾ ।
ಮಹೇಂದ್ರಶ್ಚಾಪಿ ಚಂದ್ರಶ್ಚ ರುದ್ರಾಶ್ಚೈಕಾದಶೈವ ತೇ || ೨ ||

ಅನ್ಯೇ ದೇವಾಶ್ಚ ಮುನಯೋ ವಸವಃ ಸಪ್ತ ಏವ ಚ ।
ಆದಿತ್ಯಾಶ್ಚಾಪಿ ದೈತ್ಯಾಶ್ಚ ಗಂಧರ್ವಾಃ ಕಿನ್ನರಾಸ್ತಥಾ || ೩ ||

ಆಯಯುರ್ದ್ವಾರಕಾಂ ದ್ರಷ್ಟುಂ ಶ್ರೀಕೃಷ್ಣಂ ಚ ಬಲಂ ತಥಾ ।
ಆಗಚ್ಛಂತಂ ಚ ಸಹಸಾ ವಟಮೂಲಂ ಮನೋಹರಂ || ೪ ||

---

### ನೂರನಾಲ್ಕನೆಯ ಅಧ್ಯಾಯವು.

೧–೬. ಶ್ರೀ ನಾರಾಯಣನು ಹೇಳುತ್ತಾನೆ :— ಇದೇ ಸಮಯದಲ್ಲಿ ಬ್ರಹ್ಮನೂ ಭವಾನಿಯೊಡನೆ ಈಶ್ವರನೂ ಅನಂತನೂ ಧರ್ಮನೂ ಸೂರ್ಯನೂ ಅಗ್ನಿಯೂ ಕುಬೇರನೂ ವರುಣನೂ ವಾಯುವೂ ಯಮನೂ ಮಹೇಂದ್ರನೂ ಚಂದ್ರನೂ ಹನ್ನೊಂದುಮಂದಿ ರುದ್ರರೂ ಇನ್ನೂ ಇತರ ದೇವತೆಗಳೂ ಸಪ್ತ ಋಷಿಗಳೂ ವಸುಗಳೂ ಆದಿತ್ಯರೂ ದೈತ್ಯರೂ ಗಂಧರ್ವರೂ ಕಿನ್ನರರೂ ಕೂಡ ದ್ವಾರಕೆಯನ್ನೂ ಬಲರಾಮಸಹಿತನಾದ ಶ್ರೀಕೃಷ್ಣನನ್ನೂ ನೋಡುವುದಕ್ಕಾಗಿ ಬಂದರು. ಆಲದಮರದ ಬುಡವನ್ನು ಕುರಿ ು ಬರುತ್ತಿರುವ ಪುರುಷೋತ್ತಮನನ್ನು

ದೃಷ್ಟ್ವಾ ಚ ದೇವತಾಃ ಸರ್ವಾಸ್ತುಷ್ಟುವುಃ ಪುರುಷೋತ್ತಮಂ ।
ಆಕಾಶಾಚ್ಚ ವಿಮಾನೈಶ್ಚ ಸಂಪ್ರಾಪ್ಯ ವಟಮೂಲಕಂ ॥ ೫ ॥

ದದೃಶುರ್ದ್ವಾರಕಾಂ ರಮ್ಯಾಮತೀವ ಸುಮನೋಹರಾಂ ।
ಮುಕ್ತಾಮಾಣಿಕ್ಯಹೀರೇಣ ರತ್ನರಾಜಿವಿರಾಜಿತಾಂ ॥ ೬ ॥

ಪರಿತಶ್ಚತುರಸ್ರಾಂ ಚ ಶತಯೋಜನಸಮ್ಮಿತಾಂ ।
ಸಪ್ತಭಿಃ ಪರಿಖಾಭಿಶ್ಚ ಗಂಭೀರಾಭಿಶ್ಚ ವೇಷ್ಟಿತಾಂ ॥ ೭ ॥

ಪ್ರಾಕಾರೈರ್ನವಭಿರ್ಯುಕ್ತಾಂ ಲಕ್ಷೈಃ ಕ್ರೀಡಾಸರೋವರೈಃ ।
ಮನೋಹರೈಃ ಸಪದ್ಮೈಶ್ಚ ಸಹಿತೈಶ್ಚ ಮಧುವ್ರತೈಃ ॥ ೮ ॥

ಶೋಭಿತಾಂ ಸರ್ವತೋಭದ್ರೈಃ ಪುಷ್ಪೋದ್ಯಾನತ್ರಿಲಕ್ಷಕೈಃ ।
ಪ್ರಫುಲ್ಲಪುಷ್ಪೈಃ ಪವನೈಃ ಸರ್ವತ್ರ ಸುರಭೀಕೃತಾಂ ॥ ೯ ॥

ಆಮೋದಿತಾಂ ಚ ಶೀತೇನ ಮಂದಚಂದನವಾಯುನಾ ।
ತರುಭಿರ್ನಾರಿಕೇರಾಣಾಂ ಶೋಭಿತಾಂ ಶತಕೋಟಭಿಃ ॥ ೧೦ ॥

---

ನೋಡಿದವರಾಗಿ ಎಲ್ಲ ದೇವತೆಗಳೂ ಸ್ತೋತ್ರಮಾಡಿದರು. ಆಕಾಶದಲ್ಲಿ ವಿಮಾನವನ್ನೇರಿ ವಟವೃಕ್ಷದ ಬುಡಕ್ಕೆ ಬಂದು ಮುತ್ತು ಮಾಣಿಕ್ಯಗಳಿಂದಲೂ ಹೀರಕರತ್ನದಿಂದಲೂ ರತ್ನಸಮೂಹಗಳಿಂದಲೂ ಕಂಗೊಳಿಸುತ್ತಿರುವ ಅತ್ಯಂತ ಸುಂದರವಾದ ಮನಸ್ಸನ್ನು ಸೆಳೆಯುವ ದ್ವಾರಕಾಪಟ್ಟಣವನ್ನು ನೋಡಿದರು.

೭–೧೬. ಸುತ್ತಲೂ ಸಮಚೌಕವಾದ ನೂರುಯೋಜನ ಪರಿಮಾಣವುಳ್ಳ ಆಳವಾದ ಏಳುಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವ ಒಂಭತ್ತು ಕೋಟೆಗಳಿಂದ ಕೂಡಿದ ಒಂದುಲಕ್ಷ ಆಟದ ಕೊಳಗಳಿಂದ ಕೂಡಿರುವ ಮನೋಹರವಾದ ದುಂಬಿಗಳಿಂದಕೂಡಿದ ತಾವರೆಗಳಿಂದ ಕಂಗೊಳಿಸುತ್ತಿರುವ ಅರಳಿದಹೂವುಗಳಿಂದ ಕೂಡಿದ ಮೂರುಲಕ್ಷ ಹೂತೋಟಗಳಿಂದ ಪ್ರಕಾಶಿಸುತ್ತಿರುವ ಗಾಳಿಯಿಂದ ಎಲ್ಲೆಡೆಯಲ್ಲಿಯೂ ಸುವಾಸನೆಯನ್ನುಂಟುಮಾಡುತ್ತಿರುವ ತಣ್ಣಗಿರುವ ಮಂದವಾಗಿಬೀಸುತ್ತಿರುವ ಗಾಳಿಯಿಂದ ಸುಗಂಧಯುಕ್ತವಾದ ನೂರುಕೋಟಿ ತೆಂಗಿನಮರಗಳಿಂದ ಕಂಗೊಳಿಸುತ್ತಿರುವ ಅದರ ನಾಲ್ಕರಷ್ಟು ಅಡಿಕೆಯ ಮರಗಳಿಂದ ಅಲಂಕೃತವಾದ ಅಡಿಕೆಯಮರದ ನಾಲ್ಕರಷ್ಟು ಮಾವಿನಮರಗಳಿಂದ ಕೂಡಿದ ಮಾವಿನಮರದಷ್ಟೇ ತಾಳೆಯಮರ

ಗುವಾಕಾನಾಂ ಚ ವೃಕ್ಷೈಶ್ಚ ಭೂಷಿತಾಂ ತಚ್ಚತುರ್ಗುಣೈಃ ।
ಚತುರ್ಗುಣೈರ್ಗುವಾಕಾನಾಂ ಯುಕ್ತಾಮಾಮ್ರಮಹೀರುಹೈಃ ॥ ೧೧ ॥

ಪರೀತಾಂ ಪನಸಾನಾಂ ಚ ವೃಕ್ಷೈರಾಮ್ರಸಮೈರ್ಮುನೇ ।
ಸುಶೋಭಿತಾಂ ಚ ತಾಲಾನಾಂ ದ್ರುಮೈರಾಮ್ರಸಮೈರ್ಮುನೇ ॥ ೧೨ ॥

ಅಶ್ವತ್ಥೈರ್ಬದರೀಭಿಶ್ಚ ಬಿಲ್ವೈರಾಮ್ರಾತಕೈರ್ವಟೈಃ ।
ಶಾಲ್ಮಲೀಭಿಶ್ಚ ಜಂಬೂಭಿಃ ಕದಂಬೈಶ್ಚಾಪಿ ಶೋಭಿತಾಂ ॥ ೧೩ ॥

ವಂಶೈಶ್ಚ ತಿಂತಿಡೀಭಿಶ್ಚ ಚಂಪಕೈರ್ಬಕುಲೈಸ್ತಥಾ ।
ನಾಗೇಶ್ವರೈರ್ನಾಗರಂಗೈರ್ಜಂಬೀರೈರ್ದಾಡಿಮೈರ್ಯುತಾಂ ॥ ೧೪ ॥

ಖರ್ಜೂರೈರರ್ಜುನೈಃ ಪಿಷ್ಟೈರಿಕ್ಷುಭಿಃ ಕಾಂಚನೈರಪಿ ।
ಹರೀತಕೀಭಿರ್ಧಾತ್ರೀಭಿರಿಂದುಭಿಃ ಪರಿತಃ ಪ್ಲುತಾಂ ॥ ೧೫ ॥

ಶಾಲೈಃ ಪ್ರಿಯಾಲೈರ್ಹಿಂತಾಲೈಃ ಶಿಶಿರೈಃ ಸಪ್ತಪರ್ಣಕೈಃ ।
ಅನ್ಯೈರ್ನಾನಾದ್ರುಮೈರಿಷ್ಟೈರಿಷ್ಟಾಂ ಯುಕ್ತಾಂ ಪರಿಪ್ಲುತಾಂ ॥ ೧೬ ॥

---

ಗಳಿಂದ ಕಂಗೊಳಿಸುತ್ತಿರುವ ಅಶ್ವತ್ಥಮರಗಳಿಂದಲೂ ಬದರೀಮರಗಳಿಂದಲೂ ಬಿಲ್ವ ಮರಗಳಿಂದಲೂ ಅಮಟೆಯಮರಗಳಿಂದಲೂ ಆಲದಮರಗಳಿಂದಲೂ ಬೂರುಗದ ಮರಗಳಿಂದಲೂ ನೇರಳೆಯಮರಗಳಿಂದಲೂ ಈಚಲಮರಗಳಿಂದಲೂ ಕಂಗೊಳಿಸುತ್ತಿರುವ ಬಿದಿರುಗಳಿಂದಲೂ ಹುಣಿಸೆಯಮರಗಳಿಂದಲೂ ಸಂಪಿಗೆಯ ಮರಗಳಿಂದಲೂ ಬಕುಳಮರಗಳಿಂದಲೂ ನಾಗೇಶ್ವರಮರಗಳಿಂದಲೂ ಹೇರಳೆಯಗಿಡಗಳಿಂದಲೂ ನಿಂಬೆಯಗಿಡಗಳಿಂದಲೂ ದಾಳಿಂಬೇಗಿಡಗಳಿಂದಲೂ ಕೂಡಿರುವ ಖರ್ಜೂರದ ಮರಗಳಿಂದಲೂ ಶಮೀಮರಗಳಿಂದಲೂ ಕಬ್ಬುಗಳಿಂದಲೂ ನಾಗಸಂಪಿಗೆಯಮರಗಳಿಂದಲೂ ಅಳಲೆಯಕಾಯಿಮರಗಳಿಂದಲೂ ನೆಲ್ಲಿಯಮರಗಳಿಂದಲೂ ಅಮೃತಬಳ್ಳಿಗಳಿಂದಲೂ ಸುತ್ತುವರಿಯಲ್ಪಟ್ಟಿರುವ ಸರ್ಜೀಮರಗಳಿಂದಲೂ ಮೊರಟೀಗಿಡಗಳಿಂದಲೂ ಕಿರತಾಳೇ ಗಿಡಗಳಿಂದಲೂ ಶ್ರೀಗಂಧದ ಮರಗಳಿಂದಲೂ ಏಳೆಲೇಬಾಳೇ ಗಿಡಗಳಿಂದಲೂ ಇನ್ನೂ ಮನಸ್ಸಿಗೆ ಹಿತಕರವಾದ ನಾನಾವಿಧವಾದ ಗಿಡಮರಗಳಿಂದ ಸುತ್ತುವರಿಯಲ್ಪಟ್ಟ ದ್ವಾರಕಾಪಟ್ಟಣವನ್ನು ನೋಡಿದರು.

೧೭–೨೨. ಮನೋಹರವಾದ ಬಹಳಎತ್ತರವಾದ ಉತ್ತಮವಾದ ರತ್ನಸಾರಗಳಿಂದ ನಿರ್ಮಿಸಲ್ಪಟ್ಟಿರುವ ಮಾಣಿಕ್ಯ ಮತ್ತು ಹೀರಕಗಳ ಚಿತ್ರಗಳಿಂದ ಕೂಡಿದ

ಅಸಂಖ್ಯೈರ್ಮಂದಿರೈ ರಮ್ಯೈರತ್ಯುಚ್ಚೈರಪಿ ಸಂಸ್ಕೃತಾಂ ।
ರತ್ನೇಂದ್ರಸಾರನಿರ್ಮಾಣೈರ್ಮುಕ್ತಾಮಾಣಿಕ್ಯಭೂಷಿತೈಃ ॥ ೧೭ ॥

ಮಾಣಿಕ್ಯಹೀರಕೈಶ್ಚಿತ್ರೈಃ ಸದ್ರತ್ನಕಲಶಾನ್ವಿತೈಃ ।
ಮಣಿಭಿರ್ನಿರ್ಮಿತೈರಿಷ್ಟೈಃ ಸೋಪಾನನಿಕರೈರ್ವರೈಃ ॥ ೧೮ ॥

ಕಪಾಟೈಃ ಕಠಿನೈರ್ದಿವ್ಯೈರರ್ಗಲಾಕೀಲಕೈರ್ಯುತಾಂ ।
ಹರಿನ್ಮಣೀನಾಂ ಸ್ತಂಭಾನಾಂ ಕದಂಬೈರಪಿ ಸಂಯುತೈಃ ॥ ೧೯ ॥

ನಾನಾಚಿತ್ರೈರ್ವಿಚಿತ್ರೈಶ್ಚ ಸುಚಿತ್ರೈಶ್ಚ ಪರಿಷ್ಕೃತೈಃ ।
ದರ್ಪಣೈಃ ಸೂಕ್ಷ್ಮವಸ್ತ್ರೈಶ್ಚ ಶೋಭಿತೈಃ ಶ್ವೇತಚಾಮರೈಃ ॥ ೨೦ ॥

ಪ್ರಾಂಗಣೈಃ ಪದ್ಮರಾಗಾದ್ಯೈರಿಂದ್ರನೀಲಪರಿಷ್ಕೃತಾಂ ।
ವೀಥೀಭಿಃ ರತ್ನಖಚಿತೈ ರಾಜಮಾರ್ಗೈಃ ಸಮನ್ವಿತಾಂ ॥ ೨೧ ॥

ಗ್ರೀಷ್ಮಮಧ್ಯಾಹ್ನಸೂರ್ಯಾಭಾಂ ಜ್ವಲಿತಾಂ ರತ್ನತೇಜಸಾ ।
ಗವಾಕ್ಷಲಕ್ಷೈಃ ಸಂಯುಕ್ತಾಂ ವಾಜಿಶಾಲಾಪರಿಷ್ಕೃತಾಂ ॥ ೨೨ ॥

---

ಉತ್ತಮವಾದ ರತ್ನಕಲಶಗಳಿಂದ ಕೂಡಿದ ರತ್ನಮಣಿಗಳಿಂದ ಮಾಡಲ್ಪಟ್ಟ ಶ್ರೇಷ್ಠ ವಾದ ಮೆಟ್ಟಲುಗಳ ಸಮೂಹದಿಂದ ಕೂಡಿರುವ ಅನೇಕ ಮಣಿಗಳಿಂದ ಕೂಡಿದ ಗಟ್ಟಿಯಾಗಿಯೂ ಉತ್ತಮವಾಗಿಯೂ ಇರುವ ಅಗುಳಿಚಿಲುಕಗಳಿಂದ ಕೂಡಿದ ಬಾಗಿಲುಗಳಿಂದ ಶೋಭಿಸುತ್ತಿರುವ ಇಂದ್ರನೀಲಮಣಿಗಳ ಕಂಬಗಳಿಂದ ಕೂಡಿದ ನಾನಾವಿಧವಾದ ಚಿತ್ರವಿಚಿತ್ರಗಳಿಂದ ಪರಿಷ್ಕರಿಸಲ್ಪಟ್ಟಿರುವ ಕನ್ನಡಿಗಳಿಂದಲೂ ಸೂಕ್ಷ್ಮವಾದ ವಸ್ತ್ರಗಳಿಂದಲೂ ಬಿಳಿಯಚಾಮರಗಳಿಂದಲೂ ಪ್ರಕಾಶಮಾನವಾದ ಪದ್ಮರಾಗಗಳಿಂದಲೂ ಇಂದ್ರನೀಲಮಣಿಗಳಿಂದಲೂ ಪರಿಷ್ಕರಿಸಲ್ಪಟ್ಟ ಅಂಗಗಳುಳ್ಳ ರತ್ನಖಚಿತವಾದ ಬೀದಿಗಳಿಂದಲೂ ರಾಜಮಾರ್ಗಗಳಿಂದಲೂ ಕೂಡಿದ ಗ್ರೀಷ್ಮಕಾಲದ ಮಧ್ಯಾಹ್ನಸಮಯದ ಸೂರ್ಯನಂತೆ ಪ್ರಕಾಶಿಸುತ್ತಿರುವ ರತ್ನಗಳ ಕಾಂತಿಗಳಿಂದ ಪ್ರಜ್ವಲಿಸುತ್ತಿರುವ ಒಂದುಲಕ್ಷ ಗವಾಕ್ಷಗಳಿಂದ ಕೂಡಿರುವ ಕುದುರೆಯ ಲಾಯ ಗಳಿಂದ ಕೂಡಿರುವ ದ್ವಾರಕಾಪಟ್ಟಣವನ್ನು ನೋಡಿದರು.

ದೃಷ್ಟ್ವಾ ಚ ದ್ವಾರಕಾಂ ರಮ್ಯಾಂ ತೇ ದೇವಾ ವಿಸ್ಮಯಂ ಯಯುಃ ।
ಪ್ರಸನ್ನವದನೋ ದೇವೋ ಲಾಂಗಲೀ ಭಗವಾನಜಃ ॥ ೨೩ ॥

ಸಸ್ಮಾರ ಯದುವಂಶಾನಾಂ ಸಮೂಹಮುಗ್ರಸೇನಕಂ ।
ವಸುದೇವಂ ದೇವಕೀಂ ಚ ಪಾಂಡವಾಂಶ್ಚ ಸಮಾತೃಕಾನ್ ॥ ೨೪ ॥

ನಂದಂ ಯಶೋದಾಂ ಗೋಪಾಲಾನ್ರಾಜೇಂದ್ರಮುನಿಪುಂಗವಾನ್ ।
ಗಂಧರ್ವಾನ್ಕಿನ್ನರಾಂಶ್ಚೈವ ಸಹಿತೋ ಯದುಪುಂಗವೈಃ ॥ ೨೫ ॥

ನಂದೋ ಯಶೋದಾ ಗೋಪಾಶ್ಚ ಜನನ್ಯಾ ಸಹ ಪಾಂಡವಾಃ ।
ಗಂಧರ್ವಾಃ ಕಿನ್ನರಾಶ್ಚೈವ ವಿದ್ಯಾಧರ್ಯಶ್ಚ ನಾರದ ॥ ೨೬ ॥

ಕಿನ್ನರ್ಯಶ್ಚಾಪಿ ನರ್ತಕ್ಯೋ ಗಾಯಕಾ ವಾದ್ಯಭಾಂಡಕಾಃ ।
ಭಿಕ್ಷುಕಾ ಭಾಂಡಕಾಶ್ಚೈವ ಭಟ್ಟಾಶ್ಚ ಗಣಕಾಸ್ತಥಾ ॥ ೨೭ ॥

ನಾನಾದೇಶೋದ್ಭವಾ ಭೂಪಾ ವೈದ್ಯಾಶ್ಚಾನ್ಯೇ ಚ ಮಾನವಾಃ ।
ಸನ್ಯಾಸಿನಶ್ಚ ಯತಯೋಽವಧೂತಾ ಬ್ರಹ್ಮಚಾರಿಣಃ ॥ ೨೮ ॥

---

೨೩–೨೫. ಆ ದೇವತೆಗಳು ಮನೋಹರವಾದ ದ್ವಾರಕಾಪಟ್ಟಣವನ್ನು ನೋಡಿ ಆಶ್ಚರ್ಯಗೊಂಡರು. ಅಜನೂ ದೇವನೂ ಆದ ಭಗವಂತನು ಬಲಭದ್ರನೊಡನೆ ಪ್ರಸನ್ನವಾದ ಮುಖವುಳ್ಳವನಾಗಿ ಯದುವಂಶದ ಸಮೂಹವನ್ನೂ ಉಗ್ರಸೇನನನ್ನೂ ವಸುದೇವನನ್ನೂ ದೇವಕಿಯನ್ನೂ ತಾಯಿಯಿಂದೊಡಗೂಡಿದ ಪಾಂಡವರನ್ನೂ ನಂದನನ್ನೂ ಯಶೋದೆಯನ್ನೂ ಗೋಪಾಲಕರನ್ನೂ ಮುನಿಶ್ರೇಷ್ಠರನ್ನೂ ಯದುಶ್ರೇಷ್ಠರಿಂದಸಹಿತರಾದ ಗಂಧರ್ವರನ್ನೂ ಕಿನ್ನರರನ್ನೂ ಸ್ಮರಿಸಿಕೊಂಡನು.

೨೬–೩೦. ನಂದನೂ ಯಶೋದೆಯೂ ಗೋಪನೂ ತಾಯಿಯಿಂದೊಡಗೂಡಿದ ಪಾಂಡವರೂ ಗಂಧರ್ವರೂ ಕಿನ್ನರರೂ ವಿದ್ಯಾಧರರೂ ಎಲೈ ನಾರದನೇ ! ಕಿನ್ನರಿಯರೂ ನರ್ತಕಿಯರೂ ಗಾಯಕರೂ ವಾದ್ಯಭಾಂಡಗಳನ್ನು ತಂದಿರುವವರೂ ಭಿಕ್ಷುಕರೂ ಭಾಂಡಗಳನ್ನು ತಂದವರೂ ಭಟ್ಟರುಗಳೂ ಜ್ಯೋತಿಷ್ಕರೂ ನಾನಾ ದೇಶದ ರಾಜರುಗಳೂ ವೈದ್ಯರೂ ಇನ್ನೂ ಅನೇಕಮಂದಿ ಮನುಷ್ಯರೂ ಸನ್ಯಾಸಿಗಳೂ

ಆಯಯುರ್ಮುನಯಃ ಸರ್ವೇ ಸಶಿಷ್ಯಾಃ ಸಿದ್ಧಪುಂಗವಾಃ ।
ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ || ೨೯ ||

ಸನತ್ಕುಮಾರೋ ಭಗವಾನ್ಜ್ಞಾನಿನಾಂ ಚ ಗುರೋರ್ಗುರುಃ ।
ಶಿಷ್ಯೈಸ್ತ್ರಿಕೋಟಿಭಿಃ ಸಾರ್ಧಂ ಪಂಚವರ್ಷೋ ದಿಗಂಬರಃ || ೩೦ ||

ಶಿಷ್ಯೈಸ್ತ್ರಿಲಕ್ಷೈಃ ಸಹಿತೋ ದುರ್ವಾಸಾ ಭಗವಾನಜಃ ।
ಲಕ್ಷಶಿಷ್ಯೈಃ ಕಶ್ಯಪಶ್ಚ ವಾಲ್ಮೀಕಿಶ್ಚ ತ್ರಿಲಕ್ಷಕೈಃ || ೩೧ ||

ಲಕ್ಷಶಿಷ್ಯೈರ್ಗೌತಮಶ್ಚ, ಕೋಟಿಭಿಶ್ಚ ಬೃಹಸ್ಪತಿಃ ।
ಶುಕ್ರಸ್ತ್ರಿಕೋಟಿಭಿಃ ಸಾರ್ಧಂ ಭರದ್ವಾಜಶ್ಚ ಲಕ್ಷಕೈಃ || ೩೨ ||

ಶಿಷ್ಯೈಸ್ತ್ರಿಕೋಟಿಭಿಃ ಸಾರ್ಧಮಂಗಿರಾ ಭಗವಾನಜಃ ।
ವಸಿಷ್ಠಃ ಕೋಟಿಭಿಃ ಶಿಷ್ಯೈಃ ಪ್ರಚೇತಾಃ ಕೋಟಿಭಿಸ್ತಥಾ || ೩೩ ||

ತ್ರಿಲಕ್ಷೈಶ್ಚ ಪುಲಸ್ತ್ಯಶ್ಚಾಪ್ಯಗಸ್ತ್ಯಃ ಕೋಟಿಭಿಃ ಸಹ ।
ಪುಲಹೋ ಲಕ್ಷಶಿಷ್ಯೈಶ್ಚ ಕ್ರತುರ್ಲಕ್ಷೈಸ್ತಥೈವ ಚ || ೩೪ ||

ಅತ್ರಿಸ್ತ್ರಿಕೋಟಿಭಿಃ ಸಾರ್ಧಂ ಭೃಗುಶ್ಚ ಪಂಚಕೋಟಿಭಿಃ ।
ತ್ರಿಕೋಟಿಭಿರ್ಮರೀಚಿಶ್ಚ ಶತಾನಂದಃ ಸಹಸ್ರಕೈಃ || ೩೫ ||

---

ಯತಿಗಳೂ ಅವಧೂತರೂ ಬ್ರಹ್ಮಚಾರಿಗಳೂ ಶಿಷ್ಯರಿಂದೊಡಗೂಡಿದ ಎಲ್ಲ ಮುನಿಗಳೂ ಸಿದ್ಧಶ್ರೇಷ್ಠರೂ ಸನಕನೂ ಸನಂದನೂ ಮೂರನೆಯವನಾದ ಸನಾತನನೂ ಪೂಜ್ಯನೂ ಜ್ಞಾನಿಗಳಿಗೂ ಗುರುಗಳಿಗೂ ಗುರುವಾದ ಐದುವರ್ಷದವನೂ ದಿಗಂಬರನೂ ಆದ ಸನತ್ಕುಮಾರನೂ ಮೂರುಕೋಟಿ ಶಿಷ್ಯರೊಡನೆ ಬಂದರು.

೩೧–೩೯. ಪೂಜ್ಯನೂ ಬ್ರಹ್ಮಸಮಾನನೂ ಆದ ದೂರ್ವಾಸನು ಮೂರುಲಕ್ಷ ಶಿಷ್ಯರೊಡನೆಯೂ ಒಂದು ಲಕ್ಷ ಶಿಷ್ಯರೊಡನೆ ಕಶ್ಯಪನೂ ಮೂರುಲಕ್ಷ ಶಿಷ್ಯರೊಡನೆ ವಾಲ್ಮೀಕಿಯೂ ಒಂದುಲಕ್ಷ ಶಿಷ್ಯರೊಡನೆ ಗೌತಮನೂ ಕೋಟಿಶಿಷ್ಯರೊಡನೆ ಬೃಹಸ್ಪತಿಯೂ ಮೂರುಕೋಟಿ ಶಿಷ್ಯರೊಡನೆ ಶುಕ್ರಾಚಾರ್ಯನೂ ಒಂದುಲಕ್ಷ ಶಿಷ್ಯರೊಡನೆ ಭರದ್ವಾಜಮುನಿಯೂ ಮೂರುಕೋಟಿ ಶಿಷ್ಯರೊಡನೆ ಪೂಜ್ಯನೂ ಬ್ರಹ್ಮಸದೃಶನೂ ಆದ ಅಂಗಿರೋಮುನಿಯೂ ಕೋಟಿ ಶಿಷ್ಯರೊಡನೆ ವಸಿಷ್ಠನೂ ಕೋಟಿ

ಸಾರ್ಧಂ ತ್ರಿಕೋಟಿಭಿಃ ಶಿಷ್ಯೈರ್ಋಷ್ಯಶೃಂಗೋ ವಿಭಾಂಡಕಃ ।
ಪಾಣಿನಿಃ ಕೋಟಿಭಿಃ ಶಿಷ್ಯೈರ್ಲಕ್ಷ್ಯೈಃ ಕಾತ್ಯಾಯನಸ್ತಥಾ ॥ ೩೬ ॥

ಯಾಜ್ಞವಲ್ಕ್ಯಃ ಸಹಸ್ರೈಶ್ಚ ವ್ಯಾಸಃ ಶಿಷ್ಯತ್ರಿಕೋಟಿಭಿಃ ।
ಶಿಷ್ಯೈರ್ಲಕ್ಷ್ಯೈಶ್ಚ ಸಹಿತೋ ಗರ್ಗಃ ಕುಲಪುರೋಹಿತಃ ॥ ೩೭ ॥

ಗಾಲವಶ್ಚ ಸಹಸ್ರೈಶ್ಚ ಸಹಸ್ರೈಃ ಸೌಭರಿಸ್ತಥಾ ।
ತ್ರಿಕೋಟಿಭಿರ್ಲೋಮಶ್ಚಮಾರ್ಕಂಡೇಯಸ್ತ್ರಿಕೋಟಿಭಿಃ ॥ ೩೮ ॥

ಸಾಂದೀಪಿನಿರ್ದೇವಲಶ್ಚ ಸಚ್ಛಿಷ್ಯೈಶ್ಚ ತ್ರಿಕೋಟಿಭಿಃ ॥ ೩೯ ॥

ವೋಢುಃ ಶಿಷ್ಯೈಃ ಕೋಟಿಭಿಶ್ಚ ಲಕ್ಷ್ಯೈಃ ಪಂಚಶಿಖಸ್ತಥಾ ।
ಅಹಂ ನಾರಾಯಣಶ್ಚೈವ ನರೋ ಮಮ ಸಹೋದರಃ ॥ ೪೦ ॥

---

ಶಿಷ್ಯರೊಡನೆ ಪ್ರಚೇತನೂ ಮೂರುಲಕ್ಷ ಶಿಷ್ಯರೊಡನೆ ಪುಲಸ್ತ್ಯನೂ ಕೋಟಿ ಶಿಷ್ಯರೊಡನೆ ಅಗಸ್ತ್ಯನೂ ಒಂದುಲಕ್ಷ ಶಿಷ್ಯರೊಡನೆ ಪುಲಹನೂ ಒಂದುಲಕ್ಷ ಶಿಷ್ಯರೊಡನೆ ಕ್ರತುವೂ ಮೂರುಕೋಟಿ ಶಿಷ್ಯರೊಡನೆ ಅತ್ರಿಯೂ ಐದುಕೋಟಿ ಶಿಷ್ಯರೊಡನೆ ಭೃಗುವೂ ಮೂರುಕೋಟಿ ಶಿಷ್ಯರೊಡನೆ ಮರೀಚಿಯೂ ಒಂದುಸಾವಿರ ಶಿಷ್ಯರೊಡನೆ ಯಾಜ್ಞವಲ್ಕ್ಯನೂ ಮೂರುಕೋಟಿ ಶಿಷ್ಯರೊಡನೆ ಋಷ್ಯಶೃಂಗನೂ ವಿಭಾಂಡಕನೂ ಕೋಟಿ ಶಿಷ್ಯರೊಡನೆ ಪಾಣಿನಿಯೂ ಒಂದುಲಕ್ಷ ಶಿಷ್ಯರೊಡನೆ ಕಾತ್ಯಾಯನನೂ ಒಂದುಸಾವಿರ ಶಿಷ್ಯರೊಡನೆ ಯಾಜ್ಞವಲ್ಕ್ಯನೂ ಮೂರುಕೋಟಿ ಶಿಷ್ಯರೊಡನೆ ವ್ಯಾಸಮುನಿಯೂ ಒಂದುಲಕ್ಷ ಶಿಷ್ಯರೊಡನೆ ಕುಲ ಪುರೋಹಿತನಾದ ಗರ್ಗಮುನಿಯೂ ಸಾವಿರ ಶಿಷ್ಯರೊಡನೆ ಗಾಲವನೂ ಸಾವಿರಶಿಷ್ಯರೊಡನೆ ಸೌಭರಿಯೂ ಮೂರುಕೋಟಿ ಶಿಷ್ಯರೊಡನೆ ಲೋಮಶನೂ ಮೂರುಕೋಟಿ ಶಿಷ್ಯರೊಡನೆ ಮಾರ್ಕಂಡೇಯನೂ ಮೂರುಕೋಟಿ ಉತ್ತಮ ಶಿಷ್ಯರಿಂದ ಕೂಡಿದ ಸಾಂದೀಪಿನಿ ಮತ್ತು ದೇವಲ ಇವರುಗಳೂ ಬಂದರು.

೪೦. ಒಂದುಕೋಟಿ ಶಿಷ್ಯರೊಡನೆ ವೋಢುವೂ ಒಂದುಲಕ್ಷ ಶಿಷ್ಯರೊಡನೆ ಪಂಚಶಿಖನೂ ನಾರಾಯಣನಾದ ನಾನೂ ನನ್ನ ಸಹೋದರನಾದ ನರನೂ ಬಂದೆವು.

ಶಿಷ್ಯೈಸ್ತ್ರಿಕೋಟಿಭಿಃ ಸಾರ್ಧಂ ವಿಶ್ವಾಮಿತ್ರಶ್ಚ ಕೋಟಿಭಿಃ ।
ತ್ರಿಕೋಟಿಭಿರ್ಜರತ್ಕಾರುರಾಸ್ತೀಕಶ್ಚ ತ್ರಿಕೋಟಿಭಿಃ　॥ ೪೧ ॥

ತ್ರಿಕೋಟಿಭಿಃ ಪರ್ಶುರಾಮೋ ವತ್ಸೋ ಲಕ್ಷೈಶ್ಚ ಶಿಷ್ಯಕೈಃ ।
ದಕ್ಷಸ್ತ್ರಿಲಕ್ಷೈಃ ಶಿಷ್ಯೈಶ್ಚ ಕಪಿಲಃ ಪಂಚಕೋಟಿಭಿಃ　॥ ೪೨ ॥

ಸಂವರ್ತಶ್ಚ ತ್ರಿಲಕ್ಷೈಶ್ಚಾಪ್ಯುತಥ್ಯಶ್ಚ ತಥೈವ ।
ಸಹಸ್ರೈರ್ಜೈಮಿನಿಶ್ಚೈವ ಪೌಲೋ ಲಕ್ಷೈಸ್ತಥೈವ ಚ　॥ ೪೩ ॥

ಸುವರ್ಣಶ್ಚ ಸಹಸ್ರೈಶ್ಚ ವೈಶಂಪಾಯನ ಏವ ಚ ।
ಶಿಷ್ಯೈರ್ಲಕ್ಷೈಃ ಸಮೇತಶ್ಚ ವ್ಯಾಸಶಿಷ್ಯಃ ಪುರೋಗಮಃ　॥ ೪೪ ॥

ಲಕ್ಷೈಃ ಶಿಷ್ಯೈಸ್ತಥಾ ಶೃಂಗೀ ಚೋಪಮನ್ಯುಸ್ತಥೈವ ಚ ।
ಸಹಸ್ರೈಶ್ಚ ಗೌರಮುಖಃ ಕಚೋ ಲಕ್ಷೈರ್ಗುರೋಃ ಸುತಃ　॥ ೪೫ ॥

ಅಶ್ವತ್ಥಾಮಾ ತಥಾ ದ್ರೋಣಃ ಕೃಪಾಚಾರ್ಯಃ ಸಶಿಷ್ಯಕಃ ।
ಭೀಷ್ಮಃ ಕರ್ಣಶ್ಚ ಶಕುನೀ ರಾಜಾ ದುರ್ಯೋಧನಸ್ತಥಾ ।
ನೃಪಸ್ಯ ಭ್ರಾತರಃ ಸರ್ವೇ ಚಾನ್ಯೇ ಭೂಪಾ ಜಗದ್ಗುರುಂ　॥ ೪೬ ॥

---

೪೧-೪೮. ಮೂರು ಕೋಟಿ ಶಿಷ್ಯರೊಡನೆ ವಿಶ್ವಾಮಿತ್ರನೂ ಮೂರು ಕೋಟಿ ಶಿಷ್ಯರೊಡನೆ ಜರತ್ಕಾರುವೂ ಮೂರು ಕೋಟಿ ಶಿಷ್ಯರೊಡನೆ ಆಸ್ತಿಕನೂ ಮೂರು ಕೋಟಿ ಶಿಷ್ಯರೊಡನೆ ಪರಶುರಾಮನೂ ಒಂದು ಲಕ್ಷ ಶಿಷ್ಯರೊಡನೆ ವತ್ಸನೂ ಮೂರುಲಕ್ಷ ಶಿಷ್ಯರೊಡನೆ ದಕ್ಷನೂ ಐದು ಕೋಟಿ ಶಿಷ್ಯರೊಡನೆ ಕಪಿಲನೂ ಮೂರು ಲಕ್ಷ ಶಿಷ್ಯರೊಡನೆ ಸಂವರ್ತನೂ ಮೂರುಲಕ್ಷ ಶಿಷ್ಯರೊಡನೆ ಉತಥ್ಯನೂ ಸಾವಿರ ಶಿಷ್ಯರೊಡನೆ ಜೈಮಿನಿಯೂ ಲಕ್ಷಶಿಷ್ಯರೊಡನೆ ಪೌಲನೂ ಸಾವಿರ ಶಿಷ್ಯರೊಡನೆ ಸುವರ್ಣನೂ ಮತ್ತು ವೈಶಂಪಾಯನನೂ ವ್ಯಾಸಶಿಷ್ಯನು ಒಂದುಲಕ್ಷ ಶಿಷ್ಯರಿಂದೊಡಗೂಡಿದವನಾಗಿಯೂ ಒಂದುಲಕ್ಷ ಶಿಷ್ಯರೊಡನೆ ಶೃಂಗಿಯೂ ಮತ್ತು ಉಪಮನ್ಯುವೂ ಸಾವಿರ ಶಿಷ್ಯರೊಡನೆ ಗೌರಮುಖನೂ ಗುರುಪುತ್ರನಾದ ಕಚನು ಒಂದುಲಕ್ಷ ಶಿಷ್ಯರೊಡನೆಯೂ ಶಿಷ್ಯರೊಡನೆ ಅಶ್ವತ್ಥಾಮನೂ ದ್ರೋಣನೂ

|| ಶ್ರೀ ಭಗವಾನುವಾಚ ||

ಶುಭಕರ್ಮಣಿ ನಿಷ್ಪನ್ನೇ ಯಾಸ್ಯಂತಿ ಯೇ ಸಮಾಗತಾಃ ।
ಶಿವಬ್ರಹ್ಮಾದಯೋ ದೇವಾ ಮುನಯಶ್ಚ ತಥಾಪರೇ || ೪೭ ||

ಭವಾಂಶ್ಚ ಯಾದವೈಃ ಸಾರ್ಧಂ ಪ್ರವಿಶ ದ್ವಾರಕಾಂ ಪುರೀಂ ।
ಮತ್ಪಿತ್ರಾ ಮಾತೃಭಿಃ ಸಾರ್ಧಂ ಮಹೇಂದ್ರೇ ಚ ಕ್ಷಣೇ ನೃಪಃ || ೪೮ ||

ಅಪರೇ ಯದವೋನ್ಯೇ ಚ ಯಾಸ್ಯಂತಿ ಮಥುರಾಂ ಪುರೀಂ ।
ಶ್ರುತ್ವೇತಿ ವಿರಸೋ ರಾಜಾ ತಮುವಾಚ ಭಯಾಕುಲಃ || ೪೯ ||

|| ಉಗ್ರಸೇನ ಉವಾಚ ||

ವಾಸುದೇವ ನ ಯಾಸ್ಯಾಮಿ ಭೂಮಿಂ ತಾಂ ಪೈತೃಕೀಂ ಪುನಃ ।
ಸರ್ವತೀರ್ಥಪರಾಂ ಶುದ್ಧಾಂ ದೈವೇ ಕರ್ಮಣಿ ಪೈತೃಕೇ || ೫೦ ||

---

ಕೃಪಾಚಾರ್ಯನೂ ಭೀಷ್ಮನೂ ಕರ್ಣನೂ ಶಕುನಿಯೂ ರಾಜನಾದ ದುರ್ಯೋಧನನೂ ದುರ್ಯೋಧನ ರಾಜನ ಸಹೋದರರೂ ಇನ್ನೂ ಬೇರೆ ಬೇರೆ ರಾಜರುಗಳೂ ಜಗದ್ಗುರುವನ್ನು ನೋಡಲು ಬಂದರು.

೪೭–೪೯. ಶ್ರೀ ಭಗವಂತನು ಹೇಳುತ್ತಾನೆ :— ಈಗ ಇಲ್ಲಿಗೆ ಬಂದಿರುವ ಶಿವ ಬ್ರಹ್ಮ ಮುಂತಾದ ದೇವತೆಗಳೂ ಮುನಿಗಳೂ ಇತರರೂ ಕೂಡ ಶುಭಕಾರ್ಯವು ನೆರವೇರಿದನಂತರ ತಮ್ಮ ಸ್ಥಳಗಳಿಗೆ ಹೋಗುತ್ತಾರೆ. ಎಲೈ ರಾಜನೇ! ನೀನು ಯಾದವರೊಡನೆಯೂ ನನ್ನ ತಂದೆಯೊಡನೆಯೂ ತಾಯಿಯರೊಡನೆಯೂ ಮಹೇಂದ್ರನಾಮಕವಾದ ಕ್ಷಣದಲ್ಲಿ ದ್ವಾರಕಾ ಪಟ್ಟಣವನ್ನು ಪ್ರವೇಶಮಾಡುವವನಾಗು ಉಳಿದ ಯದುಗಳೂ ಇತರರೂ ಮಥುರಾಪಟ್ಟಣಕ್ಕೆ ಹೋಗುತ್ತಾರೆ. ಉಗ್ರಸೇನರಾಜನು ಈ ಪ್ರಕಾರವಾದ ತನಗೆ ಹಿತವಾಗದಿರುವ ಮಾತನ್ನು ಕೇಳಿ ಭಯಗೊಂಡವನಾಗಿ ಆ ಕೃಷ್ಣನನ್ನು ಕುರಿತು ಹೇಳಿದನು.

೫೦–೫೭. ಉಗ್ರಸೇನನು ಹೇಳುತ್ತಾನೆ :— ಎಲೈ ವಾಸುದೇವನೇ! ಆ ನನ್ನ ಪಿತ್ರಾರ್ಜಿತವಾದ ಭೂಮಿಗೆ ಮತ್ತೆ ನಾನು ಹೋಗಲಾರೆನೇ! ಆ ಭೂಮಿಯು ಸಕಲ ತೀರ್ಥಗಳಿಗಿಂತಲೂ ಶ್ರೇಷ್ಠವಾದುದು ಮತ್ತು ದೇವಕಾರ್ಯ ಪಿತೃಕಾರ್ಯಗಳಿಗೆ

ಪಾವಕೇ ಭೂಮಿದೇಶೇ ಚ ಪಿತೄಣಾಂ ನಿರ್ವಪೇತ್ತು ಯಃ ।
ಮಹ್ಪೂಭಿಃ ಸ್ವಾಮಿಪಿತೃಭಿಃ ಶ್ರಾದ್ಧಕರ್ಮಣಿ ಹನ್ಯತೇ ॥ ೫೧ ॥

ಪಿತೄಣಾಂ ನಿಷ್ಫಲಂ ಶ್ರಾದ್ಧಂ ದೇವಾನಾಮಪಿ ಪೂಜನಂ ।
ಕಿಂಚಿತ್ಫಲಪ್ರದಂ ಚೈವ ಸಂಪೂರ್ಣಂ ಪೈತೃಕೇ ಸ್ಥಲೇ ॥ ೫೨ ॥

ಪುತ್ರಪೌತ್ರಕಲತ್ರೇಭ್ಯಃ ಪ್ರಾಣೇಭ್ಯಃ ಪ್ರೇಯಸೀ ಸದಾ ।
ದುರ್ಲಭಾ ಪೈತೃಕೀ ಭೂಮಿಃ ಪಿತುರ್ಮಾತುರ್ಗರೀಯಸೀ ॥ ೫೩ ॥

ತತ್ಸತ್ಯಂ ಚ ಪವಿತ್ರಂ ಚ ದೈವೇ ಕರ್ಮಣಿ ಪೈತೃಕೇ ।
ಕ್ರೀಡಾಂ ಚ ದತ್ತೇ ದಾನಂ ಚ ಪರದತ್ತಮಶುದ್ಧಕಂ ॥ ೫೪ ॥

ಮ್ರಿಯತೇ ಪೈತೃಕೀ ಭೂಮ್ಯಾಂ ತೀರ್ಥತುಲ್ಯಫಲಂ ಲಭೇತ್ ।
ಗಂಗಾಜಲಸಮಂ ಪೂತಂ ಪಿತೃಖಾತೋದಕಂ ಹರೇ ॥ ೫೫ ॥

ತತ್ರ ಸ್ನಾತ್ವಾ ಜಲೇ ಪೂತೇ ಗಂಗಾಸ್ನಾನಫಲಂ ಲಭೇತ್ ।
ಪಿತೄಣಾಂ ತರ್ಪಣಂ ತತ್ರ ಪವಿತ್ರಂ ದೇವಪೂಜನಂ ॥ ೫೬ ॥

---

ಅತ್ಯಂತ ಪರಿಶುದ್ಧವಾದುದು. ಪರಿಶುದ್ಧವಾದ ಭೂಮಿಯಲ್ಲಿ ಯಾವನು ಪಿತೃಗಳಿಗೆ ಪಿಂಡದಾನವನ್ನು ಮಾಡುತ್ತಾನೋ ಅದು ಅತ್ಯಂತ ಪುಣ್ಯಫಲವನ್ನು ಕೊಡುತ್ತದೆ. ಇತರ ಪ್ರದೇಶದಲ್ಲಿ ಶ್ರಾದ್ಧಕರ್ಮವನ್ನು ಮಾಡಿದರೆ ಅದು ನಿಷ್ಫಲವಾಗುತ್ತದೆ. ಆ ಪ್ರದೇಶದಲ್ಲಿ ಮಾಡಿದ ಶ್ರಾದ್ಧವು ಪಿತೃಗಳಿಗೆ ಉತ್ತಮ ಫಲವನ್ನು ಕೊಡಲಾರದು. ಆ ಪ್ರದೇಶದಲ್ಲಿ ಮಾಡಿದ ದೇವತಾರ್ಚನೆಯೂ ನಿಷ್ಫಲವು ಅಥವಾ ಅಲ್ಪವಾದ ಫಲ ವನ್ನುಂಟುಮಾಡುತ್ತದೆ. ಪಿತ್ರಾರ್ಜಿತವಾದ ಪ್ರದೇಶದಲ್ಲಾದರೆ ಸಂಪೂರ್ಣ ಫಲ ವನ್ನುಂಟುಮಾಡುತ್ತದೆ. ಆ ಪ್ರದೇಶವು ಮಕ್ಕಳು ಮೊಮ್ಮಕ್ಕಳು ಪತ್ನಿ ತನ್ನ ಪ್ರಾಣ ಇವುಗಳೆಲ್ಲದಕ್ಕಿಂತಲೂ ಶ್ರೇಷ್ಠವಾದುದು. ತಾಯಿತಂದೆಗಳಿಗಿಂತಲೂ ಶ್ರೇಷ್ಠವಾದ ಪಿತ್ರಾರ್ಜಿತವಾದ ಭೂಮಿಯು ದುರ್ಲಭವಾದುದು. ಆದುದರಿಂದ ಸತ್ಯವಾಗಿಯೂ ದೇವಕಾರ್ಯಗಳಿಗೂ ಪಿತೃಕಾರ್ಯಗಳಿಗೂ ಅತ್ಯಂತ ಪವಿತ್ರವಾದುದು. ಆ ಪ್ರದೇಶ ದಲ್ಲಿ ಮಾಡಲ್ಪಟ್ಟ ದಾನವು ಸಂತೋಷವನ್ನುಂಟುಮಾಡುತ್ತದೆ. ಪರಭೂಮಿಯಲ್ಲಿ ಮಾಡಿದ ದಾನವು ಅಶುದ್ಧವಾದುದು. ಪಿತ್ರಾರ್ಜಿತವಾದ ಭೂಮಿಯಲ್ಲಿ ಮರಣವನ್ನು ಹೊಂದಿದುದಾದರೆ ತೀರ್ಥದಲ್ಲಿ ಮರಣ ಹೊಂದಿದುದಕ್ಕೆ ಸಮನಾದ ಫಲವನ್ನು ಹೊಂದುತ್ತಾನೆ. ಎಲೈ ಹರಿಯೇ! ಪಿತೃಗಳಿಂದ ಮಾಡಲ್ಪಟ್ಟ ಕೊಳವೇ ಮುಂತಾ

ಪೈತೃಕೀ ಜನ್ಮಭೂಮಿಶ್ಚೇದ್ದ್ವಿಗುಣಂ ತತ್ಫಲಂ ಲಭೇತ್ ।
ಪೈತೃಕೀಭೂಮಿತುಲ್ಯಾ ಚ ದಾನಭೂಮಿಃ ಸತಾಮಪಿ ॥ ೫೭ ॥

॥ ವಾಸುದೇವ ಉವಾಚ ॥

ಭೋಗಾಸ್ತೇ ವಚನಂ ಕಿಂ ವಾ ನಿಷೇಕಃ ಕೇನ ವಾರ್ಯತೇ ।
ಪೈತೃಕೀತೀರ್ಥತುಲ್ಯಾ ಸಾ ಕಿಂ ತೀರ್ಥಂ ದ್ವಾರಕಾಪರಂ ॥ ೫೮ ॥

ಸರ್ವತೀರ್ಥಪರಾ ಶ್ರೇಷ್ಠಾ ದ್ವಾರಕಾ ಬಹುಪುಣ್ಯದಾ ।
ಯಸ್ಯಾಃ ಪ್ರವೇಶಮಾತ್ರೇಣ ನರಾಣಾಂ ಜನ್ಮಖಂಡನಂ ॥ ೫೯ ॥

ದಾನಂ ಚ ದ್ವಾರಕಾಯಾಂ ಚ ಶ್ರಾದ್ಧಂ ಚ ದೇವಪೂಜನಂ ।
ಚತುರ್ಗುಣಂ ಚ ತೀರ್ಥಾನಾಂ ಗಂಗಾದೀನಾಂ ಚ ಭೂಮಿಪ ॥ ೬೦ ॥

---

ದವುಗಳ ನೀರು ಗಂಗಾನದಿಯ ನೀರಿನಂತೆ ಪವಿತ್ರವಾದುದು. ಆ ಪವಿತ್ರವಾದ ನೀರಿನಲ್ಲಿ ಸ್ನಾನಮಾಡಿದರೆ ಗಂಗಾನದಿಯ ನೀರಿನಲ್ಲಿ ಸ್ನಾನಮಾಡಿದ ಫಲವನ್ನು ಮಾನವನು ಪಡೆಯುತ್ತಾನೆ. ಅಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಡುವುದು ಮತ್ತು ದೇವಪೂಜೆಯನ್ನು ಮಾಡುವುದು ಇವುಗಳು ಅತ್ಯಂತ ಪವಿತ್ರವಾದುವುಗಳು. ಆ ಭೂಮಿಯು ತಂದೆಯ ಜನ್ಮಭೂಮಿಯಾಗಿದ್ದರೆ ಎರಡರಷ್ಟು ಫಲವನ್ನು ಪಡೆಯುತ್ತಾನೆ. ಸತ್ಪುರುಷರಿಗೆ ದಾನಮಾಡಿದ ಪ್ರದೇಶವೂ ಕೂಡ ಪಿತ್ರಾರ್ಜಿತವಾದ ಭೂಮಿಗೆ ಸಮಾನವಾದುದು.

೫೮. ವಾಸುದೇವನು ಹೇಳುತ್ತಾನೆ :— ನೀನು ಹೇಳುವ ಮಾತು ಸರಿಯೆ ಆದರೂ ಋಣಾನುಬಂಧವನ್ನು ತಡೆಯುವವರಾರು ? ಪಿತ್ರಾರ್ಜಿತ ಪ್ರದೇಶವು ತೀರ್ಥ ಸದೃಶವಾದುದೇನೋ ನಿಜವು ಆದರೆ ದ್ವಾರಕಿಗಿಂತಲೂ ಶ್ರೇಷ್ಠವಾದ ತೀರ್ಥವು ಯಾವುದು ?

೫೯. ದ್ವಾರಕಿಯು ಸಕಲ ತೀರ್ಥಗಳಿಗಿಂತಲೂ ಉತ್ತಮವೂ ಶ್ರೇಷ್ಠವೂ ಹೆಚ್ಚು ಪುಣ್ಯವನ್ನುಂಟುಮಾಡತಕ್ಕುದೂ ಆಗಿರುತ್ತದೆ ಮತ್ತು ಮಾನವನು ದ್ವಾರಕಿಯನ್ನು ಪ್ರವೇಶಮಾಡುವ ಮಾತ್ರದಿಂದಲೇ ಪುನರ್ಜನ್ಮವಿಲ್ಲದವನಾಗುತ್ತಾನೆ.

೬೦. ಎಲೈ ರಾಜನೇ ! ದ್ವಾರಕಿಯಲ್ಲಿ ಮಾಡಿದ ದಾನವೂ ಶ್ರಾದ್ಧವೂ ದೇವಪೂಜೆಯೂ ಕೂಡ ಗಂಗೆಯೇ ಮೊದಲಾದ ತೀರ್ಥಗಳಲ್ಲಿ ಮಾಡಿದುದಕ್ಕಿಂತಲೂ ನಾಲ್ಕರಷ್ಟು ಫಲವನ್ನು ಕೊಡತಕ್ಕುದಾಗುತ್ತವೆ.

ಗಚ್ಛ ಬ್ರಹ್ಮಾದಿಭಿಃ ಸಾರ್ಧಂ ಮುನಿಭಿರ್ಯಾದವೈಃ ಸಹ ।
ರಾಜೇಂದ್ರಭವನಂ ತತ್ರ ಗೃಹಾಣಾಂ ಸಾದರಂ ಪುನಃ ॥ ೬೧ ॥

ಕರೋತಿ ಶಶ್ವನ್ನ್ಯಕ್ಕಾರಂ ಮಹೇಂದ್ರಸ್ಯಾಮರಾವತೀಂ ।
ನಿವಸ ತ್ವಂ ಸುಧರ್ಮಾಯಾಂ ಮಹೇಂದ್ರೇ ಚ ಕ್ಷಣೇ ನೃಪ ॥ ೬೨ ॥

ಜಂಬೂದ್ವೀಪಸ್ಥಿತಾ ಭೂಪಾ ರಾಜೇಂದ್ರಮಂಡಲೇಶ್ವರಾಃ ।
ಕರಂ ದಾಸ್ಯಂತಿ ತುಭ್ಯಂ ಚ ಮಹೇಂದ್ರಾಯ ಸುರಾ ಯಥಾ ॥ ೬೩ ॥

ಭೂಯಾಜ್ಜಿತಃ ಕುಬೇರಶ್ಚ ಧನೇನ ಧನಸಂಪದಾ ।
ತೇಜಸಾ ಭಾಸ್ಕರಶ್ಚಾಪಿ ಮಹೇಂದ್ರಃ ಸಂಪದಾ ತಥಾ ॥ ೬೪ ॥

ದೇವಾ ಜಿತಾ ರಣೇನೈವ ಪುಣ್ಯೇನ ಮುನಯೋ ಜಿತಾಃ ।
ತಪಸ್ವಿನಶ್ಚ ತಪಸಾ ವ್ರತಿನಶ್ಚ ವ್ರತೇನ ಚ ॥ ೬೫ ॥

---

೬೧–೬೨ ಬ್ರಹ್ಮನೇ ಮೊದಲಾದವರೊಡನೆಯೂ ಮುನಿಗಳೊಡನೆಯೂ ಯಾದವರೊಡನೆಯೂ ರಾಜೇಂದ್ರಭವನಕ್ಕೆ ಹೋಗುವವನಾಗು. ಅಲ್ಲಿರುವ ಮನೆಗಳು ಬಾರಿಬಾರಿಗೂ ಮಹೇಂದ್ರನ ಅಮರಾವತಿಯನ್ನು ತಿರಸ್ಕರಿಸುವುವು. ನೀನು ಮಹೇಂದ್ರಕ್ಷಣದಲ್ಲಿ ಹೋಗಿ ದೇವಸಭೆಗೆ ಸಮಾನವಾದ ಸಭೆಯಲ್ಲಿ ವಾಸಮಾಡುವವನಾಗು.

೬೩. ಜಂಬೂದ್ವೀಪದಲ್ಲಿರುವ ರಾಜರುಗಳೂ ರಾಜೇಂದ್ರರೂ ಮಂಡಲಾಧಿಪತಿಗಳೂ ಕೂಡ ದೇವತೆಗಳು ಮಹೇಂದ್ರನಿಗೆ ಕಪ್ಪವನ್ನು ಕೊಟ್ಟಂತೆ ನಿನಗೆ ಕಪ್ಪವನ್ನು ಕೊಡುತ್ತಾರೆ.

೬೪. ಧನದಿಂದಲೂ ಧನಸಂಪತ್ತಿನಿಂದಲೂ ನೀನು ಕುಬೇರನನ್ನು ಜಯಿಸುವವನಾಗು. ತೇಜಸ್ಸಿನಿಂದ ಸೂರ್ಯನನ್ನೂ ಮತ್ತು ಸಂಪತ್ತಿನಿಂದ ಮಹೇಂದ್ರನನ್ನೂ ಜಯಿಸುವವನಾಗು.

೬೫. ಯುದ್ಧದಿಂದ ದೇವತೆಗಳು ಜಯಿಸಲ್ಪಟ್ಟರು. ಪುಣ್ಯದಿಂದ ಮುನಿಗಳು ಜಯಿಸಲ್ಪಟ್ಟಿರುವರು. ತಪಸ್ಸಿನಿಂದ ತಪಸ್ವಿಗಳೂ ವ್ರತದಿಂದ ವ್ರತಿಗಳೂ ಜಯಿಸಲ್ಪಟ್ಟರು.

ಉಗ್ರಸೇನಸಮೋ ರಾಜಾ ನ ಭೂತೋ ನ ಭವಿಷ್ಯತಿ ।
ಸಭಾಯಾಂ ಯಸ್ಯ ಭಗವಾನ್ಬಲದೇವೋ ಮಹಾಬಲಃ ॥ ೬೬ ॥

ವಿಶ್ವಂ ಚ ಯಸ್ಯ ಶಿರಸಾಂ ಸಹಸ್ರಾಣಾಂ ನರೇಶ್ವರ ।
ಏಕಸ್ಮಿನ್ಶಿರಸಿನ್ಯಸ್ತಂ ಶೂರ್ಪೇ ಚ ಸರ್ಷಪೋ ಯಥಾ ॥ ೬೭ ॥

ನಹ್ಯನಂತಸಮೋ ದೇವೋ ಬಲೇನ ಬಲವತ್ತರಃ ।
ಯದ್ಗುಣಾನಾಂ ಚ ನಾಸ್ತ್ಯಂತಸ್ತೇನಾನಂತಂ ಜಗುರ್ಬುಧಾಃ ॥ ೬೮ ॥

ವಸವೋಽಷ್ಟೌ ಮಹಾಭಾಗಾ ರುದ್ರಾಶ್ಚ ಶಂಕರಂ ವಿನಾ ।
ಬಲಿನೋ ದ್ವಾದಶಾದಿತ್ಯಾ ಮಹೇಂದ್ರಶ್ಚ ಸುರೈಃ ಸಮಃ ॥ ೬೯ ॥

ನ ಸಮರ್ಥಾ ಧ್ರುವಂ ಜೇತುಮುಗ್ರಸೇನಂ ನೃಪೇಶ್ವರಂ ।
ಕೃಷ್ಣಸ್ಯ ವಚನಂ ಶ್ರುತ್ವಾ ಪ್ರಸನ್ನವದನೋ ನೃಪಃ ॥ ೭೦ ॥

---

೬೬-೬೭. ಉಗ್ರಸೇನನಿಗೆ ಸಮನಾದ ರಾಜನು ಹಿಂದೆ ಇರಲಿಲ್ಲ, ಮುಂದೆ ಬರುವುದಿಲ್ಲ. ಯಾವ ಉಗ್ರಸೇನನ ಸಭೆಯಲ್ಲಿ ಪೂಜ್ಯನೂ ಬಲಿಷ್ಠನೂ ಆದಬಲ ದೇವನಿರುವನು. ಆ ಬಲದೇವನ ಸಾವಿರ ತಲೆಗಳಲ್ಲಿ ಒಂದುತಲೆಯ ಮೇಲೆ ಮೊರ ದಲ್ಲಿ ಸಾಸುವೆಯನ್ನಿಟ್ಟಂತೆ ಪ್ರಪಂಚವು ಇಡಲ್ಪಟ್ಟಿರುವುದು.

೬೮. ಬಲದಲ್ಲಿ ಅನಂತನಿಗೆ ಸಮನಾದ ಬಲಶಾಲಿಯು ಇಲ್ಲವೇ ಇಲ್ಲ. ಯಾವ ಅನಂತನಗುಣಗಳಿಗೆ ಅಂತವೇ ಇಲ್ಲ. ಆದುದರಿಂದ ತಿಳಿದವರು ಅನಂತ ನೆಂದು ಹೇಳುತ್ತಾರೆ.

೬೯-೭೦. ಅಷ್ಟವಸುಗಳೂ ಮಹಾಪರಾಕ್ರಮಿಗಳಾದ ಶಂಕರನನ್ನು ಬಿಟ್ಟು ಉಳಿದ ಏಕಾದಶರುದ್ರರೂ ಬಲಿಷ್ಠರಾದ ದ್ವಾದಶಾದಿತ್ಯರೂ ದೇವತೆಗಳಿಂದೊಡ ಗೂಡಿದ ಮಹೇಂದ್ರನೂ ನಿಶ್ಚಯವಾಗಿಯೂ ರಾಜೇಂದ್ರನಾದ ಉಗ್ರಸೇನನನ್ನು ಜಯಿಸಲಸಮರ್ಥರಾಗಿರುತ್ತಾರೆ. ಕೃಷ್ಣನಾಡಿದ ಮಾತನ್ನು ಕೇಳಿ ರಾಜನಾದ ಉಗ್ರ ಸೇನನು ಅರಳಿದ ಮುಖಕಮಲವುಳ್ಳವನಾಗಿ ಯಾದವರಿಂದೊಡಗೂಡಿದವನಾಗಿ ದ್ವಾರಕಾಪಟ್ಟಣದ ಮಧ್ಯದಲ್ಲಿ ರತ್ನಮಣಿಗಳ ಕಾಂತಿಯಿಂದ ಬೆಳಗುತ್ತಿರುವ

ಪ್ರಿಯಯಾ ಯಾದವೈಃ ಸಾರ್ಧಂ ಮಹೇಂದ್ರಭವನಾತ್ಪರಂ ।
ಸ್ವಾಲಯಂ ದ್ವಾರಕಾಮಧ್ಯೇ ಜ್ವಲಂತಂ ಮಣಿತೇಜಸಾ　　॥ ೭೦ ॥

ಸಹಸ್ರೈರ್ದ್ವಾರಪಾಲೈಶ್ಚ ಶೂಲಿಭಿರ್ದಂಡಹಸ್ತಕೈಃ ।
ನಿಯುಕ್ತೈ ರಕ್ಷಿತಂ ದ್ವಾರಂ ದದರ್ಶ ಮಾನವೇಶ್ವರಃ　　॥ ೭೨ ॥

ಅಭ್ಯಂತರೇ ಚ ಶಿಬಿರಂ ದ್ವಾರೇಭ್ಯಃ ಷಡ್ಭ್ಯ ಏವ ಚ ।
ಮಂದಿರಾಣಾಂ ಚ ಶತಕೈ ರತ್ನಾನಾಂ ಪರಿಭೂಷಣಂ　　॥ ೭೩ ॥

ಕೋಟಿಂ ಮತ್ತಗಜೇಂದ್ರಾಣಾಂ ದದರ್ಶ ಗಜಮಂದಿರೇ ।
ಚತುರ್ಯುಗಂ ಗಜೌಘಂ ಚ ಗಜಾನಾಂ ಷಡ್ಗುಣಂ ತಥಾ　　॥ ೭೪ ॥

ಮಹಾಬಲಾಂಶ್ಚ ತುರಗಾನ್‌ಸೂರ್ಯಾಶ್ವಂ ಚ ಹಸಂತಿ ಚ ।
ಗಜೇಂದ್ರೌಘಂ ಚ ಸರ್ವೇಷಾಂ ವಾಹನಾನಾಮಧೀಶ್ವರಂ　　॥ ೭೫ ॥

ಹಸತ್ಯೈರಾವತಂ ಶಶ್ವನ್ಮಹೇಂದ್ರಸ್ಯ ಚ ನಾರದ ।
ಅತ್ಯುಚ್ಚೈರುಚ್ಚೈಃಶ್ರವಸಾಂ ದದರ್ಶಕೋಟಿಮೀಪ್ಸಿತಂ　　॥ ೭೬ ॥

---

ಮಹೇಂದ್ರನ ಅರಮನೆಗಿಂತಲೂ ಶ್ರೇಷ್ಠವಾಗಿರುವ ತನ್ನ ಮನೆಯನ್ನು ಕುರಿತು ಹೊರಟನು.

೭೨. ಮನುಜರಾಜನಾದ ಉಗ್ರಸೇನನು, ಶೂಲಗಳನ್ನೂ ಕೋಲುಗಳನ್ನೂ ಕೈಯಲ್ಲಿಹಿಡಿದಿರುವ ನಿಯಮಿಸಲ್ಪಟ್ಟಿರುವ ಸಾವಿರ ದ್ವಾರಪಾಲಕರಿಂದ ರಕ್ಷಿಸಲ್ಪಟ್ಟಿರುವ ಬಾಗಿಲನ್ನು ನೋಡಿದನು.

೭೩–೭೫. ಆರುಬಾಗಿಲುಗಳ ಮಧ್ಯದಲ್ಲಿ ನೂರಾರು ಮನೆಗಳನ್ನೂ ರತ್ನಗಳಿಂದ ಮಾಡಲ್ಪಟ್ಟಿರುವ ಅಲಂಕಾರವನ್ನೂ ಆನೆಯ ಲಾಯದಲ್ಲಿ ಮದಿಸಿರುವ ಕೋಟಿ ಆನೆಗಳನ್ನೂ ನಾಲ್ಕುಕೊಂಬಿನ ಆನೆಗಳ ಗುಂಪನ್ನೂ ಆನೆಗಳಿಗೆ ಆರರಷ್ಟು ಮಹಾಬಲದಿಂದ ಕೂಡಿದ ಸೂರ್ಯನ ಕುದುರೆಗಳನ್ನು 'ಹಾಸ್ಯಮಾಡುತ್ತಿರುವ ಕುದುರೆಗಳನ್ನೂ ಸಕಲ ವಾಹನಗಳಿಗೂ ಮುಖ್ಯವಾದ ಆನೆಗಳ ಗುಂಪನ್ನೂ ನೋಡಿದನು.

೭೬. ಎಲೈ ನಾರದನೇ! ಆ ಆನೆಗಳು ಬಾರಿಬಾರಿಗೂ ಮಹೇಂದ್ರನ ಐರಾವತವನ್ನು ಹಾಸ್ಯಮಾಡುತ್ತಿರುವವುಗಳಾಗಿದ್ದುವು. ಅತ್ಯಂತ ಎತ್ತರಗಳಾದ ಉಚ್ಚೈಃಶ್ರವಸ್ಸುಗಳ ಕೋಟಿಯನ್ನು ಇಷ್ಟದಿಂದ ನೋಡಿದನು.

ಖರಾಣಾಂ ದಶಕೋಟಿಂ ಚ ಪಾದಾತಂ ಷಡ್ಗುಣಂ ತಥಾ ।
ನಿರ್ಮಾಣಂ ರತ್ನಸಾರಾಣಾಂ ರಥಾನಾಂ ಪಂಚಲಕ್ಷಕಂ ॥ ೭೭ ॥

ಪಂಚಲಕ್ಷಂ ಸಾರಥೀನಾಂ ತತ್ರಾಶ್ವಂ ಷಡ್ಗುಣಂ ತಥಾ ।
ಅಶ್ವವಾಟಂ ತತ್ಸಮಂ ಚ ಸುಧರ್ಮಾಂ ಚ ಸಭಾಮಪಿ ॥ ೭೮ ॥

ಪದಶರ್ಾಭ್ಯಂತರೇ ರಮ್ಯೇ ದೇವೌಘಮುನಿಸಂಯುತಾಂ ।
ವಹ್ನಿಶುದ್ಧಾಂಶುಕೈ ರಮ್ಯೈರ್ಭೂಷಿತಾಂ ರಕ್ತಕಂಬಲೈಃ ॥ ೭೯ ॥

ರತ್ನಸಿಂಹಾಸನೈ ರಮ್ಯೈರ್ಭೂಷಿತಾಂ ರಕ್ತಪಿಂಗಲೈಃ ।
ಅಮೂಲ್ಯರತ್ನನಿರ್ಮಾಣವೀಥೀನಾಂ ತೇಜಸೋಜ್ಜ್ವಲಾಂ ॥ ೮೦ ॥

ವೇಷ್ಟಿತಾಂ ಚ ಮಹಾಭೀತೈಃ ಕಿಂಕರೈಃ ಶತಕೋಟಿಭಿಃ ।
ಪ್ರವಿವೇಶ ಸಭಾಂ ರಮ್ಯಾಂ ಶ್ರುತ್ವಾ ಶಂಖಧ್ವನಿಂ ಶುಭಂ ॥ ೮೧ ॥

ವಾದ್ಯಂ ಚ ದುಂದುಭೀನಾಂ ಚ ಮುನೀನಾಂ ವೇದಮಂತ್ರಕಂ ।
ದೃಷ್ಟ್ವಾ ನೃಪಂ ಸಮುತ್ತಸ್ಥೌ ವೇಗೇನ ಸಬಲೋ ಹರಿಃ ॥ ೮೨ ॥

---

೭೭. ಹತ್ತು ಕೋಟಿ ಹೇಸರಕತ್ತೆಗಳನ್ನೂ ಅದರ ಆರರಷ್ಟು ಕಾಲಾಳುಗಳನ್ನೂ ರತ್ನಗಳ ಸಾರದಿಂದ ನಿರ್ಮಾಣಮಾಡಿದ ಐದುಲಕ್ಷ ರಥಗಳನ್ನೂ ನೋಡಿದನು.

೭೮–೮೨. ಐದುಲಕ್ಷ ಸಾರಥಿಗಳನ್ನೂ ಅದರ ಆರರಷ್ಟು ಕುದುರೆಗಳನ್ನೂ ಅದಕ್ಕೆ ಸಮನಾದ ಕುದುರೆಯ ಲಾಯವನ್ನೂ ದೇವಸಭೆಗೆ ಸಮನಾದ ಸಭೆಯನ್ನೂ ನೋಡಿದನು ಮತ್ತು ಒಳಭಾಗದಲ್ಲಿ ದೇವತೆಗಳು ಮುನಿಗಳು ಇವರ ಗುಂಪಿನಿಂದ ಕೂಡಿದ ಅಗ್ನಿಯಂತೆ ಪರಿಶುದ್ಧವಾದ ಮನೋಹರವಾದ ವಸ್ತ್ರಗಳಿಂದಲೂ ರತ್ನ ಗಂಬಳಿಗಳಿಂದಲೂ ಅಲಂಕರಿಸಲ್ಪಟ್ಟಿರುವ ಕೆಂಪು ಮತ್ತು ಹೊಂಬಣ್ಣಗಳಿಂದ ಕೂಡಿದ ಮನೋಹರವಾದ ರತ್ನಸಿಂಹಾಸನಗಳಿಂದ ಅಲಂಕರಿಸಲ್ಪಟ್ಟಿರುವ ಅಮೂಲ್ಯವಾದ ರತ್ನಗಳಿಂದ ಮಾಡಿರುವ ಬೀದಿಗಳ ತೇಜಸ್ಸಿನಿಂದ ಬೆಳಗುತ್ತಿರುವ ಅತ್ಯಂತ ಭಯಗೊಂಡ ನೂರುಕೋಟಿ ಸೇವಕರಿಂದ ಸುತ್ತುವರಿಯಲ್ಪಟ್ಟಿರುವ ಮನೋಹರವಾದ ಸಭೆಯನ್ನು ಮಂಗಳಕರವಾದ ಶಂಖಧ್ವನಿಯನ್ನೂ ವಾದ್ಯಧ್ವನಿಯನ್ನೂ ಮುನಿಗಳ ವೇದಮಂತ್ರವನ್ನೂ ಕೇಳುತ್ತ ಪ್ರವೇಶಿಸಿದನು. ರಾಜನು ಬಂದುದನ್ನು ನೋಡಿ ಬಲದೇವಸಹಿತನಾದ ಹರಿಯು ಶೀಘ್ರವಾಗಿ ಮೇಲಕ್ಕೆದ್ದನು.

ಬ್ರಹ್ಮಾ ಮಹೇಶ್ವರಶ್ಚೈವ ಶೇಷಶ್ಚ ದೇವಪುಂಗವಾಃ ।
ಸಮುತ್ತಸ್ಥುಃ ಸುರಾಃ ಸರ್ವೇ ಮುನಯಶ್ಚ ಮಹಾವ್ರತಾಃ　　|| ೮೩ ||

ರಾಜೇಂದ್ರಾಶ್ಚಾಪಿ ಸಿದ್ಧೇಂದ್ರಾ ವಸುದೇವಪುರೋಗಮಾಃ ।
ರತ್ನಸಿಂಹಾಸನೇ ರಮ್ಯೇ ಚೋಗ್ರಸೇನೋ ಮಹಾಬಲಃ　　|| ೮೪ ||

ಸಮುವಾಸ ಮಹೇಂದ್ರಸ್ಯ ಮುನಿನಾಮಾಜ್ಞಯಾ ಹರೇಃ ।
ದೇವಾನಾಂ ಚ ಗುರೂಣಾಂ ಚ ಗರ್ಗಸ್ಯಾಪಿ ತಥೈವ ಚ　　|| ೮೫ ||

ಸಪ್ತತೀರ್ಥೋದಕೇನೈವ ಪೂರ್ಣಕುಂಭೇನ ನಾರದ ।
ಚಕಾರ ವೇದಮಂತ್ರೈಶ್ಚ ನೃಪಸ್ಯಾಪ್ಯಭಿಷೇಚನಂ　　|| ೮೬ ||

ತಸ್ಮೈ ವಸ್ತ್ರಯುಗಂ ದತ್ತಂ ವಹ್ನಿಶುದ್ಧಂ ಮನೋಹರಂ ।
ವರುಣೇನ ಪುರಾ ದತ್ತಂ ಕೃಷ್ಣಾಯ ಪರಮಾತ್ಮನೇ　　|| ೮೭ ||

ಮಾಲ್ಯಂ ಚ ಪಾರಿಜಾತಾನಾಂ ಚಂದನಂ ರತ್ನಭೂಷಣಂ ।
ರತ್ನಚ್ಛತ್ರಂ ದದೌ ತಸ್ಮೈ ಬಲದೇವೋ ಮಹಾಬಲಃ　　|| ೮೮ ||

---

೮೩–೮೬. ಬ್ರಹ್ಮನೂ ಮಹೇಶ್ವರನೂ ಶೇಷನೂ ದೇವಶ್ರೇಷ್ಠರೂ ಮುನಿಗಳೂ ಮಹಾವ್ರತಿಗಳೂ ಸಮಸ್ತ ದೇವತೆಗಳೂ ರಾಜೇಂದ್ರರೂ ಸಿದ್ಧೇಂದ್ರರೂ ವಸುದೇವನೇ ಮೊದಲಾದವರೂ ಮೇಲಕ್ಕೆದ್ದರು. ಮಹಾಬಲಿಷ್ಠನಾದ ಉಗ್ರಸೇನನು ಮನೋಹರವಾದ ರತ್ನ ಸಿಂಹಾಸನದಲ್ಲಿ ಕುಳಿತುಕೊಂಡನು, ಎಲೈ ನಾರದನೇ! ಹರಿಯ ಮಹೇಂದ್ರನ ಮುನಿಗಳ ದೇವತೆಗಳ ಮತ್ತು ಗುರುಗಳ ಅಪ್ಪಣೆಯ ಪ್ರಕಾರ ಗರ್ಗಮುನಿಯು ಎಳುತೀರ್ಥಗಳ ನೀರಿನಿಂದ ತುಂಬಿದ ಪೂರ್ಣಕುಂಭದಿಂದ ವೇದ ಮಂತ್ರಗಳನ್ನು ಹೇಳುತ್ತ ರಾಜನಿಗೆ ಪಟ್ಟಾಭಿಷೇಕ ಮಾಡಿದನು.

೮೭. ಪೂರ್ವದಲ್ಲಿ ವರುಣನಿಂದ ಪರಮಾತ್ಮನಾದ ಕೃಷ್ಣನಿಗೆ ಕೊಡಲ್ಪಟ್ಟಿದ್ದ ಅಗ್ನಿಯಂತೆ ಪರಿಶುದ್ಧವಾದ ಮನೋಹರವಾದ ಒಂದು ಜೊತೆ ವಸ್ತ್ರವನ್ನು ಆ ಉಗ್ರಸೇನನಿಗೆ ಕೊಟ್ಟನು.

೮೮. ಬಲಶಾಲಿಯಾದ ಬಲದೇವನು ಪಾರಿಜಾತದ ಹೂವಿನ ಮಾಲಿಕೆಯನ್ನೂ ಗಂಧವನ್ನೂ ರತ್ನದ ಒಡವೆಗಳನ್ನೂ ರತ್ನದ ಕೊಡೆಯನ್ನೂ ಆ ಉಗ್ರಸೇನನಿಗೆ ಕೊಟ್ಟನು.

ಬ್ರಹ್ಮಾ ಕಮಂಡಲುಂ ಚೈವ ಶೂಲಂ ಚಾಪಿ ಮಹೇಶ್ವರಃ ।
ಪಾರ್ವತೀ ರತ್ನಮಾಲ್ಯಂ ಚ ಹಾರಂ ಚ ಮಾಲತೀ ಸತೀ ॥ ೮೯ ॥

ಅನ್ಯೇ ದೇವಾಶ್ಚ ಮುನಯೋ ರಾಜೇಂದ್ರಾಃ ಸಿದ್ಧಪುಂಗವಾಃ ।
ಯೌತಕಂ ಚ ದದೌ ತಸ್ಮೈ ಕ್ರಮೇಣ ಚ ಪೃಥಕ್ಪೃಥಕ್ ॥ ೯೦ ॥

ವಸುದೇವೋ ದದೌ ತಸ್ಮೈ ಶುಭದಂ ಶ್ವೇತಚಾಮರಂ ।
ಪವನೇನ ಪುರಾ ದತ್ತಂ ಕೃಷ್ಣಾಯ ಪರಮಾತ್ಮನೇ ॥ ೯೧ ॥

ನಂದೋ ದದೌ ಚ ಸುರಭಿಂ ಕಾಮಧೇನುಂ ಚ ಪೂಜಿತಾಂ ।
ಯಶೋದಾ ದೇವಕೀ ತಸ್ಮೈ ರತ್ನಶ್ರೇಷ್ಠಂ ದದೌ ಮುದಾ ॥ ೯೨ ॥

ಸಪ್ತಭಿಃ ಕಿಂಕರೈಶ್ಚಾಪಿ ಸಂವೀತಃ ಶ್ವೇತಚಾಮರೈಃ ।
ದಧಾರ ಛತ್ರಮಕ್ರೂರೋ ಭಕ್ತ್ಯಾ ಚೈವಾಜ್ಞಯಾ ಹರೇಃ ॥ ೯೩ ॥

---

೮೯. ಬ್ರಹ್ಮನು ಕಮಂಡಲುವನ್ನೂ ಮಹೇಶ್ವರನು ಶೂಲವನ್ನೂ ಪಾರ್ವತಿಯು ರತ್ನಗಳ ಮಾಲಿಕೆಯನ್ನೂ ಪತಿವ್ರತೆಯಾದ ಮಾಲತಿಯು ಮುತ್ತಿನ ಸರವನ್ನೂ ಕೊಟ್ಟರು.

೯೦. ಇನ್ನೂ ಉಳಿದ ದೇವತೆಗಳೂ ಮುನಿಗಳೂ ರಾಜೇಂದ್ರರೂ ಸಿದ್ಧ ಶ್ರೇಷ್ಠರೂ ಕ್ರಮವಾಗಿ ಬೇರೆ ಬೇರೆ ಉಡುಗೊರೆಗಳನ್ನು ಕೊಟ್ಟರು.

೯೧. ವಸುದೇವನು ಹಿಂದೆ ವಾಯುವಿನಿಂದ ಪರಮಾತ್ಮನಾದ ಶ್ರೀಕೃಷ್ಣನಿಗೆ ಕೊಡಲ್ಪಟ್ಟಿದ್ದ ಮಂಗಳಕರವಾದ ಬಿಳಿಯ ಚಾಮರವನ್ನು ಆ ಉಗ್ರಸೇನನಿಗೆ ಕೊಟ್ಟನು.

೯೨. ನಂದನು ಚೆನ್ನಾಗಿ ಪೂಜಿಸಲ್ಪಟ್ಟ ಕಾಮಧೇನುವೆಂಬ ಹಸುವನ್ನು ಕೊಟ್ಟನು. ಯಶೋದೆಯೂ ದೇವಕಿಯೂ ಕೂಡ ಅತ್ಯಂತ ಸಂತೋಷದಿಂದ ಶ್ರೇಷ್ಠ ವಾದ ರತ್ನಗಳನ್ನು ಉಗ್ರಸೇನನಿಗೆ ಕೊಟ್ಟರು.

೯೩. ಅಕ್ರೂರನು ಹರಿಯ ಅಪ್ಪಣೆಯಿಂದ ಬಿಳಿಯಚಾಮರಗಳನ್ನು ಹಿಡಿದು ಕೊಂಡಿರುವ ಏಳುಮಂದಿ ಸೇವಕರಿಂದೊಡಗೂಡಿದವನಾಗಿ ರಾಜನಾದ ಉಗ್ರಸೇನ ನಿಗೆ ಛತ್ರಿಯನ್ನು ಹಿಡಿದನು.

ರತ್ನಸಿಂಹಾಸನೇ ರಮ್ಯೇ ದದರ್ಶ ರತ್ನದರ್ಪಣಂ ।
ಅತೀವ ಪುಣ್ಯಾಪ್ಯಾಪ್ಯಂ ಚ ಹರಿಣಾ ಚ ಪುರಸ್ಕೃತಃ || ೯೪ ||

ಚಕ್ರುಃ ಸ್ತುತಿಂ ಚ ಭಟ್ಟಾಶ್ಚ ಭಿಕ್ಷುಕಾ ಬ್ರಾಹ್ಮಣಾಸ್ತಥಾ ।
ದದುಃ ಶುಭಾಶಿಷಂ ತಸ್ಮೈ ದೇವಾಶ್ಚ ಮುನಯಸ್ತಥಾ || ೯೫ ||

ಬ್ರಾಹ್ಮಣೇಭ್ಯೋ ದದೌ ರಾಜಾ ರತ್ನಕೋಟಿಂ ಚ ಭಕ್ತಿತಃ ।
ಭಟ್ಟೇಭ್ಯೋ ರತ್ನಶತಕಂ ಭಿಕ್ಷುಕೇಭ್ಯಸ್ತಥೈವ ಚ || ೯೬ ||

ಅಭಿಷಿಚ್ಯ ನೃಪೇಂದ್ರಂ ಚ ದೇವಾಂಶ್ಚ ಮುನಿಪುಂಗವಾನ್ ।
ಸಂಪೂಜ್ಯ ಬ್ರಾಹ್ಮಣಾಂಶ್ಚಾಪಿ ಭಟ್ಟಾನ್ಭಿಕ್ಷುಂ ದ್ವಿಜಂ ಗುರುಂ || ೯೭ ||

ಸ್ವಾಲಯಂ ಚ ಯಯುಃ ಸರ್ವೇ ಯಾದವಾಶ್ಚ ಮುದಾನ್ವಿತಾಃ ।
ಯೇಯೇ ಹರೇಃ ಪಾರ್ಷದಾಶ್ಚ ತೇ ಸರ್ವೇ ಸ್ವಾಲಯಂ ಯಯುಃ || ೯೮ ||

---

೯೪. ರಾಜನಾದ ಅಕ್ರೂರನು ಹರಿಯಿಂದ ಗೌರವಿಸಲ್ಪಟ್ಟವನಾಗಿ ರಮಣೀಯವಾದ ರತ್ನಸಿಂಹಾಸನದಲ್ಲಿ ಕುಳಿತುಕೊಂಡು ಅತ್ಯಂತ ಪುಣ್ಯದಿಂದ ಪಡೆಯಲು ಯೋಗ್ಯವಾದ ರತ್ನಮಯವಾದ ಕನ್ನಡಿಯನ್ನು ನೋಡಿಕೊಂಡನು.

೯೫. ಭಟ್ಟರೂ ಭಿಕ್ಷುಕರೂ ಮತ್ತು ಬ್ರಾಹ್ಮಣರೂ ರಾಜನನ್ನು ಸ್ತೋತ್ರ ಮಾಡಿದರು. ದೇವತೆಗಳೂ ಮತ್ತು ಮುನಿಗಳೂ ಆ ಅಕ್ರೂರನಿಗೆ ಮಂಗಳಾಶೀರ್ವಾದವನ್ನು ಮಾಡಿದರು.

೯೬. ರಾಜನಾದ ಅಕ್ರೂರನು ಭಕ್ತಿಪೂರ್ವಕವಾಗಿ ಬ್ರಾಹ್ಮಣರಿಗೆ ಕೋಟಿ ರತ್ನಗಳನ್ನು ಕೊಟ್ಟನು. ಭಟ್ಟರುಗಳಿಗೂ ಮತ್ತು ಭಿಕ್ಷುಗಳಿಗೂ ನೂರುನೂರು ರತ್ನಗಳನ್ನು ಕೊಟ್ಟನು.

೯೭–೯೮. ಯಾದವರೆಲ್ಲರೂ ರಾಜೇಂದ್ರನಾದ ಉಗ್ರಸೇನನಿಗೆ ಪಟ್ಟಾಭಿಷೇಕವನ್ನು ಮಾಡಿ ದೇವತೆಗಳನ್ನೂ ಮುನಿಶ್ರೇಷ್ಠರನ್ನೂ ಬ್ರಾಹ್ಮಣರನ್ನೂ ಭಟ್ಟರುಗಳನ್ನೂ ಭಿಕ್ಷುಗಳನ್ನೂ ಕ್ಷತ್ರಿಯರನ್ನೂ ವೈಶ್ಯರನ್ನೂ ಗುರುಗಳನ್ನೂ ಪೂಜಿಸಿದವರಾಗಿ ಸಂತೋಷಗೊಂಡವರಾಗಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಹರಿಯ ಪಾರ್ಷದರು ಯಾರು ಯಾರು ಬಂದಿದ್ದರೋ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಪ್ರಭಾತೇ ಚಾಯಯುಃ ಸರ್ವೇ ಸುಧರ್ಮಾಂ ಚ ಸಭಾಂ ಹರೇಃ ।
ನಮಸ್ಕೃತ್ಯ ಮಹೇಂದ್ರಂ ಚ ಚೋಷುಃ ಸರ್ವೇ ಚ ಸಂಸದಿ ॥ ೯೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ದ್ವಾರಕಾಪ್ರವೇಶೇ ಉಗ್ರಸೇನಾಭಿಷೇಕೇ
ಚತುರಧಿಕಶತತಮೋಽಧ್ಯಾಯಃ.

---

೯೯. ಇವರೆಲ್ಲರೂ ಮಾರನೆಯ ದಿನ ಪ್ರಾತಃಕಾಲ ಸುಧರ್ಮಾ ಎಂಬ ಹರಿಯಸಭೆಗೆ ಬಂದರು. ಅಲ್ಲಿ ಮಹೇಂದ್ರನಿಗೆ ನಮಸ್ಕಾರಮಾಡಿದವರಾಗಿ ಅವರೆಲ್ಲರೂ ಆ ಸಭೆಯಲ್ಲಿ ಕುಳಿತುಕೊಂಡರು.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿನ ನಾರಾಯಣ ನಾರದ ಸಂವಾದದಲ್ಲಿ
ದ್ವಾರಕಾಪ್ರವೇಶ ಉಗ್ರಸೇನ ಪಟ್ಟಾಭಿಷೇಕವೆಂಬ
ನೂರನಾಲ್ಕನೆಯ ಅಧ್ಯಾಯವು ಸಮಾಪ್ತವು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಪಂಚಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಅಥ ವೈದರ್ಭೋ ರಾಜೇಂದ್ರೋ ಮಹಾಬಲಪರಾಕ್ರಮಃ ।
ವಿದರ್ಭದೇಶೇ ಪುಣ್ಯಾತ್ಮಾ ಸತ್ಯಶೀಲಶ್ಚ ಭೀಷ್ಮಕಃ || ೧ ||

ರಾಜಾ ನಾರಾಯಣಾಂಶಶ್ಚ ದಾತಾ ಚ ಸರ್ವಸಂಪದಾಂ ।
ಧರ್ಮಿಷ್ಠಶ್ಚ ಗರೀಯಾಂಶ್ಚ ವರಿಷ್ಠಶ್ಚಾಪಿ ಪೂಜಿತಃ, || ೨ ||

ತಸ್ಯ ಕನ್ಯಾ ಮಹಾಲಕ್ಷ್ಮೀ ರುಕ್ಮಿಣೀ ಯೋಷಿತಾಂ ವರಾ ।
ಅತೀವ ಸುಂದರೀ ರಮ್ಯಾ ರಮಾ ರಾಮಾಸು ಪೂಜಿತಾ || ೩ ||

---

### ನೂರಐದನೆಯ ಅಧ್ಯಾಯವು.

೧–೨. ನಾರಾಯಣನು ಹೇಳುತ್ತಾನೆ :— ವಿದರ್ಭದೇಶದಲ್ಲಿ ಭೀಷ್ಮಕನೆಂಬ ಮಹಾಬಲಪರಾಕ್ರಮಿಯೂ ಪುಣ್ಯವಂತನೂ ಸತ್ಯವಂತನೂ ನಾರಾಯಣನ ಅಂಶದಿಂದ ಹುಟ್ಟಿದವನೂ ಸಕಲ ಸಂಪತ್ತುಗಳನ್ನೂ ದಾನಮಾಡುವವನೂ ಧರ್ಮನಿರತನೂ ಶ್ರೇಷ್ಠನೂ ಗೌರವಯುಕ್ತನೂ ಪೂಜಿಸಲ್ಪಟ್ಟವನೂ ವಿದರ್ಭರಾಜರುಗಳಿಗೆಲ್ಲ ಒಡೆಯನೂ ಆದ ರಾಜನಿದ್ದನು.

೩–೫. ಅವನಿಗೆ ಮಹಾಲಕ್ಷ್ಮೀರೂಪಳಾದ ರುಕ್ಮಿಣಿಯೆಂಬ ಸ್ತ್ರೀಯರಲ್ಲೆಲ್ಲ ಉತ್ತಮಳೂ ಅತ್ಯಂತ ಸುಂದರಿಯೂ ಮನೋಹರಳೂ ಸ್ತ್ರೀಯರಲ್ಲೆಲ್ಲ ಪೂಜ್ಯಳೂ ಹೊಸಯೌವನದಿಂದ ಕೂಡಿದವಳೂ, ರತ್ನಾಭರಣಗಳಿಂದ ಅಲಂಕರಿಸಲ್ಪಟ್ಟವಳೂ,

ನವಯೌವ್ವನಸಂಪನ್ನಾ ರತ್ನಾಭರಣಭೂಷಿತಾ ।
ತಪ್ತಕಾಂಚನವರ್ಣಾಭಾ ತೇಜಸೋಜ್ಜ್ವಲಿತಾ ಸತೀ ॥ ೪ ॥

ಶುದ್ಧಸತ್ತ್ವಸ್ವರೂಪಾ ಸಾ ಸತ್ಯಶೀಲಾ ಪತಿವ್ರತಾ ।
ಶಾಂತಾ ದಾಂತಾ ನಿತಾಂತಾ ಚಾಪ್ಯನಂತಗುಣಶಾಲಿನೀ ॥ ೫ ॥

ಇಂದ್ರಾಣೀ ವರುಣಾನೀ ಚ ಚಂದ್ರನಾರೀ ಚ ರೋಹಿಣೀ ।
ಕುಬೇರಪತ್ನೀ ಸೂರ್ಯಸ್ತ್ರೀ ಸ್ವಾಹಾ ಶಾಂತಾ ಕಲಾವತೀ ॥ ೬ ॥

ಅನ್ಯಾಸು ರಮಣೀಯಾಸು ಶ್ರೇಷ್ಠಾ ಚ ಸುಮನೋಹರಾ ।
ರುಕ್ಮಿಣ್ಯಾ ಭೀಷ್ಮಕನ್ಯಾಯಾಃ ಕಲಾಂ ನಾರ್ಹಂತಿ ಷೋಡಶೀಂ ॥ ೭ ॥

ತಾಂ ದೃಷ್ಟ್ವಾ ರಾಜರಾಜೇಂದ್ರೋ ಬಾಲಕ್ರೀಡಾರತಾಂ ಪರಾಂ ।
ಬಾಲಾಂ ಸುಶೋಭಾಂ ಕುರ್ವಂತೀಂ ಯಥಾಭ್ರೇಷು ವಿಧೋಃ ಕಲಾಂ ॥ ೮ ॥

ಶರತ್ಪೂರ್ಣೇಂದುಶೋಭಾಢ್ಯಾಂ ಶರತ್ಕಮಲಲೋಚನಾಂ ।
ವಿವಾಹಯೋಗ್ಯಾಂ ಯುವತೀಂ ಲಜ್ಜಾನಮ್ರಾನನಾಂ ಶುಭಾಂ ॥ ೯ ॥

---

ಕಾಯಿಸಿದ ಚಿನ್ನದಂತೆ ಕಾಂತಿಯುಳ್ಳವಳೂ, ತೇಜಸ್ಸಿನಿಂದ ಪ್ರಕಾಶಿಸುತ್ತಿರುವವಳೂ, ಪತಿವ್ರತೆಯೂ, ಶುದ್ಧವಾದಸತ್ವಗುಣಸ್ವರೂಪಳೂ, ಸತ್ಯವಂತಳೂ, ಹೆಚ್ಚಾದ ಶಾಂತಿಯಿಂದಲೂ, ತಾಳ್ಮೆಯಿಂದಲೂ ಕೂಡಿದವಳೂ ಅನಂತವಾದ ಗುಣಗಳಿಂದ ಪ್ರಕಾಶಮಾನಳೂ ಆದ ಮಗಳಿದ್ದಳು.

೬–೭. ಇಂದ್ರನ ಪತ್ನಿಯೂ ವರುಣನ ಪತ್ನಿಯೂ ಚಂದ್ರನ ಪತ್ನಿಯಾದ ರೋಹಿಣಿಯೂ ಕುಬೇರನ ಪತ್ನಿಯೂ ಸೂರ್ಯನ ಪತ್ನಿಯೂ ಸ್ವಾಹಾದೇವಿಯೂ ಶಾಂತಾದೇವಿಯೂ ಕಲಾವತಿಯೂ ಇನ್ನೂ ಇತರ ಶ್ರೇಷ್ಠರಾದ ಮನೋಹರೆಯರಾದ ಸ್ತ್ರೀಯರುಗಳು ಯಾರಿದ್ದಾರೆಯೋ ಅವರೆಲ್ಲರೂ ಭೀಷ್ಮಕನ ಮಗಳಾದ ರುಕ್ಮಿಣಿಯ ಹದಿನಾರನೆಯ ಒಂದು ಕಲೆಯನ್ನು ಹೊಂದಲಾರರು.

೮–೧೦. ಧರ್ಮಶೀಲನೂ ಸುವ್ರತನೂ ಆದ ರಾಜರುಗಳಿಗೆಲ್ಲ ರಾಜಶ್ರೇಷ್ಠನಾದ ಭೀಷ್ಮಕನು ಬಾಲಕಿಯೂ ಹುಡುಗರಿಗೆ ಉಚಿತವಾದ ಆಟಗಳನ್ನಾಡುತ್ತಿರುವವಳೂ ಚಂದ್ರನಕಲೆಯು ಆಕಾಶದಲ್ಲಿ ಕಾಂತಿಯನ್ನುಂಟುಮಾಡುವಂತೆ ಉತ್ತಮವಾದ ಕಾಂತಿಯನ್ನು ಬೀರುತ್ತಿರುವವಳೂ ಶರತ್ಕಾಲದ ಪೂರ್ಣಚಂದ್ರನಂತೆ ಕಂಗೊಳಿಸುತ್ತಿರುವವಳೂ ಶರತ್ಕಾಲದ ಕಮಲದಂತೆ ಕಣ್ಣುಳ್ಳವಳೂ ವಿವಾಹಕ್ಕೆ ತಕ್ಕವಳೂ

ಸಹಸಾ ಚಿಂತಿತೋ ಧರ್ಮೋ ಧರ್ಮಶೀಲಶ್ಚ ಸುವ್ರತಃ ।
ಸುತಾಂ ಪಪ್ರಚ್ಛ ಪುತ್ರಾಂಶ್ಚ ಬ್ರಾಹ್ಮಣಾಂಶ್ಚ ಪುರೋಹಿತಾನ್ ॥ ೧೦ ॥

॥ ಭೀಷ್ಮಕ ಉವಾಚ ॥

ಕಂ ವೃಣೋಷಿ ಸುತಾರ್ಥಂ ಚ ವರಾರ್ಹಂ ಪ್ರವರಂ ವರಂ ।
ಮುನಿಪುತ್ರಂ ದೇವಪುತ್ರಂ ರಾಜೇಂದ್ರಸುತಮೀಪ್ಸಿತಂ ॥ ೧೧ ॥

ವಿವಾಹಯೋಗ್ಯಾ ಕನ್ಯಾ ಮೇ ವರ್ಧಮಾನಾ ಮನೋಹರಾ ।
ಶೀಘ್ರಂ ಪಶ್ಯ ವರಂ ಯೋಗ್ಯಂ ನವಯೌವನಸಂಸ್ಥಿತಂ ॥ ೧೨ ॥

ಧರ್ಮಶೀಲಂ ಸತ್ಯಸಂಧಂ ನಾರಾಯಣಪರಾಯಣಂ ।
ವೇದವೇದಾಂಗವಿಜ್ಞಂ ಚ ಪಂಡಿತಂ ಸುಂದರಂ ಶುಭಂ ॥ ೧೩ ॥

ಶಾಂತಂ ದಾಂತಂ ಕ್ಷಮಾಶೀಲಂ ಗುಣಿನಂ ಚಿರಜೀವಿನಂ ।
ಮಹಾಕುಲಪ್ರಸೂತಂ ಚ ಸರ್ವತ್ರೈವ ಪ್ರತಿಷ್ಠಿತಂ ॥ ೧೪ ॥

---

ಯುವತಿಯೂ ನಾಚಿಕೆಯಿಂದ ಮುಖವನ್ನು ಬಾಗಿಸಿಕೊಂಡಿರುವವಳೂ ಮಂಗಳಾಕಾರಳೂ ಆದ ಆ ಮಗಳನ್ನು ನೋಡಿ ಧರ್ಮವನ್ನು ಸಮಾಲೋಚನೆಮಾಡಿದನು. ಮತ್ತು ಮಕ್ಕಳನ್ನೂ ಬ್ರಾಹ್ಮಣರನ್ನೂ ಪುರೋಹಿತರನ್ನೂ ಕುರಿತು ಇಂತೆಂದನು.

೧೧. ಭೀಷ್ಮಕನು ಹೇಳುತ್ತಾನೆ :— ನನ್ನ ಮಗಳಿಗೆ ವರನಾಗಲು ಯೋಗ್ಯನಾದ ಮುನಿಪುತ್ರನನ್ನೋ ದೇವಕುಮಾರನನ್ನೋ ರಾಜನ ಮಗನನ್ನೋ ಯಾವ ಉತ್ತಮವರನನ್ನು ಅಪೇಕ್ಷಿಸುತ್ತಿರುವಿ ?

೧೨–೧೪. ನನ್ನ ಮಗಳು ವಿವಾಹಕ್ಕೆ ಯೋಗ್ಯಳಾಗಿ ಮನೋಹರಳಾಗಿ ಅಭಿವೃದ್ಧಿ ಹೊಂದುತ್ತಿರುವಳು. ಶೀಘ್ರವಾಗಿ ನವಯೌವನ ಸಂಪನ್ನನೂ ಧರ್ಮಶೀಲನೂ ಸತ್ಯಸಂಧನೂ ನಾರಾಯಣನ ಭಕ್ತನೂ ವೇದಗಳನ್ನೂ ವೇದಾಂಗಗಳನ್ನೂ ಬಲ್ಲವನೂ ಪಂಡಿತನೂ ಸುಂದರನೂ ಮಂಗಳರೂಪನೂ ಶಾಂತಸ್ವಭಾವವುಳ್ಳವನೂ ಜಿತೇಂದ್ರಿಯನೂ ತಾಳ್ಮೆಯುಳ್ಳವನೂ ಉತ್ತಮವಾದ ಗುಣವುಳ್ಳವನೂ ದೀರ್ಘಾಯುವೂ ಉತ್ತಮಕುಲದಲ್ಲಿ ಹುಟ್ಟಿದವನೂ ಎಲ್ಲೆಡೆಯಲ್ಲಿಯೂ ಪ್ರಖ್ಯಾತನಾದವನೂ ರಾಜಕುಮಾರನಾದರೆ ರಾಜಶಾಸ್ತ್ರದಲ್ಲಿ ನಿಪುಣನೂ ಪರಾಕ್ರಮಶಾಲಿಯೂ ಪ್ರತಾಪಯುಕ್ತನೂ ಯುದ್ಧರಂಗದಲ್ಲಿ ಧೀರನೂ ದೇವಕುಮಾರನಾದ ಪಕ್ಷದಲ್ಲಿ ದೇವತೆಗಳಿಗೆ ಯೋಗ್ಯವಾದ ಗುಣವುಳ್ಳವನೂ ಮುನಿಪುತ್ರನಾದರೆ ನಾಲ್ಕುವೇದಗಳಲ್ಲಿಯೂ

ಕರೋಷಿ ರಾಜಪುತ್ರಂ ಚೇದ್ರಣಶಾಸ್ತ್ರವಿಶಾರದಂ ।
ಮಹಾರಥಂ ಪ್ರತಾಪಾರ್ಹಂ ರಣಮೂರ್ಧ್ನಿ ಚ ಸುಸ್ಥಿರಂ || ೧೩ ||

ಕರೋಷಿ ದೇವಪುತ್ರಂ ಚೇದ್ದೇವಂ ಗುಣಯುತಂ ತಥಾ ।
ಕರೋಷಿ ಮುನಿಪುತ್ರಂ ಚೇಚ್ಚತುರ್ವೇದವಿಶಾರದಂ || ೧೬ ||

ಸುವಾಚಕಂ ವಿಚಾರಜ್ಞಂ ಸಿದ್ಧಾಂತೇಷು ನಿತಾಂತಕಂ ।
ನೃಪೇಂದ್ರ ವಚನಂ ಶ್ರುತ್ವಾ ತಮುವಾಚ ಮುನೇಃ ಸುತಃ || ೧೭ ||

ಗೌತಮಸ್ಯ ಶತಾನಂದೋ ವೇದವೇದಾಂಗ ಪಾರಗಃ ।
ಆಪ್ತಃ ಪ್ರವಕ್ತಾ ವಿಜ್ಞಶ್ಚ ಧರ್ಮಿಷ್ಠ ಕುಲಪುರೋಹಿತಃ ।
ಪೃಥಿವ್ಯಾಂ ಸರ್ವತತ್ತ್ವಜ್ಞೋ ನಿಷ್ಣಾತಃ ಸರ್ವಕರ್ಮಸು || ೧೮ ||

|| ಶತಾನಂದ ಉವಾಚ ||

ರಾಜೇಂದ್ರ ತ್ವಂ ಚ ಧರ್ಮಜ್ಞೋ ಧರ್ಮಶಾಸ್ತ್ರವಿಶಾರದಃ ।
ಪೂರ್ವಾಖ್ಯಾನಂ ಚ ವೇದೋಕ್ತಂ ಕಥಯಾಮಿ ನಿಶಾಮಯ ।
ಭುವೋ ಭಾರಾವತರಣೇ ಸ್ವಯಂ ನಾರಾಯಣೋ ಭುವಿ || ೧೯ ||

---

ನಿಪುಣನೂ ಚನ್ನಾಗಿ ಮಾತನಾಡುವವನೂ ವಿಚಾರಮಾಡಲು ಬಲ್ಲವನೂ ಸಿದ್ಧಾಂತಗಳಲ್ಲಿ ಅತ್ಯಂತ ನಿಪುಣನೂ ಆದ ಯೋಗ್ಯನಾದ ವರನನ್ನು ನೋಡು. ರಾಜೇಂದ್ರನ ಮಾತನ್ನು ಕೇಳಿ ಗೌತಮಮುನಿಯ ಮಗನೂ ವೇದವೇದಾಂಗಗಳನ್ನು ತಿಳಿದವನೂ ಆಪ್ತನೂ ಚೆನ್ನಾಗಿ ಮಾತನಾಡುವವನೂ ಬುದ್ಧಿವಂತನೂ ಧರ್ಮನಿರತನೂ ಕುಲಪುರೋಹಿತನೂ ಭೂಮಿಯಲ್ಲಿ ಸಕಲತತ್ವಗಳನ್ನು ಬಲ್ಲವನೂ ಸಕಲಕರ್ಮಗಳಲ್ಲಿಯೂ ನಿಷ್ಣಾತನೂ ಆದ ಶತಾನಂದನು ಅವನನ್ನು ಕುರಿತು ಇಂತೆಂದನು.

೧೯—೨೪. ಶತಾನಂದನು ಹೇಳುತ್ತಾನೆ :— ಎಲೈ ರಾಜಶ್ರೇಷ್ಠನೇ ! ನೀನು ಸಕಲಧರ್ಮಗಳನ್ನೂ ಬಲ್ಲವನಾಗಿರುವಿ ಮತ್ತು ಧರ್ಮಶಾಸ್ತ್ರದಲ್ಲಿ ಅತ್ಯಂತ ನಿಪುಣನಾಗಿರುವಿ. ವೇದದಲ್ಲಿ ಹೇಳಲ್ಪಟ್ಟಿರುವ ಪೂರ್ವಕಥೆಯನ್ನು ಹೇಳುತ್ತೇನೆ, ಕೇಳುವವ

ವಸುದೇವಸುತಃ ಶ್ರೀಮಾನ್ಪರಿಪೂರ್ಣತಮಃ ಪ್ರಭುಃ ।
ವಿಧಾತುಶ್ಚ ವಿಧಾತಾ ಚ ಬ್ರಹ್ಮೇಶಶೇಷವಂದಿತಃ　　॥ ೨೦ ॥

ಜ್ಯೋತಿಃಸ್ವರೂಪಃ ಪರಮೋ ಭಕ್ತಾನುಗ್ರಹವಿಗ್ರಹಃ ।
ಪರಮಾತ್ಮಾ ಚ ಸರ್ವೇಷಾಂ ಪ್ರಾಣಿನಾಂ ಪ್ರಕೃತೇಃ ಪರಃ　　॥ ೨೨ ॥

ನಿರ್ಲಿಪ್ತಶ್ಚ ನಿರೀಹಶ್ಚ ಸಾಕ್ಷೀ ಚ ಸರ್ವಕರ್ಮಣಾಂ ।
ರಾಜೇಂದ್ರ ತಸ್ಮೈ ಕನ್ಯಾಂ ಚ ಪರಿಪೂರ್ಣತಮಾಯ ಚ　　॥ ೨೩ ॥

ದತ್ವಾ ಯಾಸ್ಯಸಿ ಗೋಲೋಕಂ ಪಿತೄಣಾಂ ಶತಕೈಃ ಸಹ ।
ಲಭ ಸಾರೂಪ್ಯಮುಕ್ತಿಂ ಚ ಕನ್ಯಾಂ ದತ್ವಾ ಪರತ್ರ ಚ　　॥ ೨೪ ॥

ಇಹೈವ ಸರ್ವಪೂಜ್ಯಶ್ಚ ಭವ ವಿಶ್ವಗುರೋರ್ಗುರುಃ ।
ಸರ್ವಸ್ವಂ ದಕ್ಷಿಣಾಂ ದತ್ವಾ ಮಹಾಲಕ್ಷ್ಮೀಂ ಚ ರುಕ್ಮಿಣೀಂ　　॥ ೨೫ ॥

---

ನಾಗು. ಭೂಮಿಯ ಭಾರವನ್ನಿಳುಹಲೋಸ್ಕರ ಸರ್ವವ್ಯಾಪಕನಾದ ನಾರಾಯಣನು ವಸುದೇವನ ಮಗನಾಗಿ ಹುಟ್ಟಿರುವನು. ಅವನು ಸಂಪದ್ಯುಕ್ತನೂ ಅತ್ಯಂತ ಪರಿಪೂರ್ಣನೂ ಸರ್ವರಿಗೂ ಪ್ರಭುವೂ ಬ್ರಹ್ಮನನ್ನು ಸೃಷ್ಟಿಸಿದವನೂ ಬ್ರಹ್ಮ, ಈಶ್ವರ, ಶೇಷ ಇವರುಗಳಿಂದ ನಮಸ್ಕರಿಸಲ್ಪಟ್ಟವನೂ ಆಗಿರುವನು ಮತ್ತು ಜ್ಯೋತಿಸ್ವರೂಪನೂ ಉತ್ತಮನೂ ಭಕ್ತರಿಗೆ ಅನುಗ್ರಹ ಮಾಡುವುದಕ್ಕಾಗಿ ಶರೀರವನ್ನು ಧರಿಸಿದವನೂ ಸಕಲಪ್ರಾಣಿಗಳಿಗೂ ಪರಮಾತ್ಮನೂ ಪ್ರಕೃತಿಗಿಂತಲೂ ಉತ್ಕೃಷ್ಟನೂ ನಿರ್ಲಿಪ್ತನೂ ಆಶೆಯಿಲ್ಲದವನೂ ಸಕಲಕರ್ಮಗಳಿಗೂ ಸಾಕ್ಷಿಯೂ ಆಗಿರುವನು. ಎಲೈ ರಾಜಶ್ರೇಷ್ಠನೇ! ಅತ್ಯಂತ ಪರಿಪೂರ್ಣನಾದ ಆ ಪರಮಾತ್ಮನಿಗೆ ಮಗಳನ್ನು ಕೊಟ್ಟು ನೂರುಮಂದಿ ಪಿತೃಗಳೊಡನೆ ಗೋಲೋಕಕ್ಕೆ ಹೋಗುವೆ. ಕನ್ಯೆಯನ್ನು ಕೊಟ್ಟು ಪರಲೋಕದಲ್ಲಿ ಸಾರೂಪ್ಯಮುಕ್ತಿಯನ್ನು ಪಡೆಯುವವನಾಗು.

೨೫–೨೬. ಅಲ್ಲದೆ ಪ್ರಪಂಚಕ್ಕೆ ಗುರುವಾದ ಪರಮಾತ್ಮನಿಗೆ ಗುರುವಾಗಿ ಈ ಲೋಕದಲ್ಲಿಯೂ ಸರ್ವರಿಂದಲೂ ಪೂಜಿಸಲ್ಪಡುವವನಾಗು. ಎಲೈ ರಾಜನೇ! ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟು ಮಹಾಲಕ್ಷ್ಮೀಸ್ವರೂಪಳಾದ ರುಕ್ಮಿಣಿಯನ್ನು

ಸಮರ್ಪಣಂ ಕುರು ವಿಭೋ ಕುರುಷ್ವ ಜನ್ಮಖಂಡನಂ ।
ವಿಧಾತ್ರಾ ಲಿಖಿತೋ ರಾಜನ್ಸಂಬಂಧಃ ಸರ್ವಸಮ್ಮತಃ ॥ ೨೭ ॥

ದ್ವಾರಕಾನಗರೇ ಕೃಷ್ಣಂ ಶೀಘ್ರಂ ಪ್ರಸ್ಥಾಪಯ ದ್ವಿಜಂ ।
ಶ್ರುತ್ವಾ ಶುಭಕ್ಷಣಂ ತೂರ್ಣಂ ಸರ್ವೇಷಾಮಪಿ ಸಮ್ಮತಂ ॥ ೨೮ ॥

ಆನೀಯ ಪರಮಾತ್ಮಾನಂ ಭಕ್ತಾನುಗ್ರಹವಿಗ್ರಹಂ ।
ಧ್ಯಾನಾನುರೋಧಹೇತುಂ ಚ ನಿತ್ಯದೇಹಮನುತ್ತಮಂ ॥ ೨೯ ॥

ದೃಷ್ಟಿಮಾತ್ರಾತ್ಕುರುನೃಪ ಸ್ವಜನ್ಮಕರ್ಮಖಂಡನಂ ।
ಯಂ ನ ಜಾನಂತಿ ಚತ್ವಾರೋ ವೇದಾಃ ಸಂತಶ್ಚ ದೇವತಾಃ ॥ ೨೯ ॥

ಸಿದ್ಧೇಂದ್ರಾಶ್ಚ ಮುನೀಂದ್ರಾಶ್ಚ ದೇವಾ ಬ್ರಹ್ಮಾದಯಸ್ತಥಾ ।
ಧ್ಯಾಯಂತೇ ಧ್ಯಾನಪೂತಾಶ್ಚ ಯೋಗಿನೋ ನ ವಿದಂತಿ ಯಂ ॥ ೩೦ ॥

ಸರಸ್ವತೀ ಜಡೀಭೂತಾ ವೇದಾಃ ಶಾಸ್ತ್ರಾಣಿ ಯಾನಿ ಚ ।
ಸಹಸ್ರವಕ್ತ್ರಃ ಶೇಷಶ್ಚ ಪಂಚವಕ್ತ್ರಃ ಸದಾಶಿವಃ ॥ ೩೧ ॥

---

ಸಮರ್ಪಣೆ ಮಾಡುವವನಾಗಿ ಪುನರ್ಜನ್ಮವಿಲ್ಲದಂತೆ ಮಾಡಿಕೋ. ಎಲೈ ರಾಜನೇ! ಸಕಲರಿಗೂ ಸಮ್ಮತವಾದ ಈ ಸಂಬಂಧವು ಬ್ರಹ್ಮನಿಂದ ಬರೆಯಲ್ಪಟ್ಟದಾಗಿರುವುದು.

೨೭–೩೩. ಜಾಗ್ರತೆಯಾಗಿ ದ್ವಾರಕಾಪಟ್ಟಣದಲ್ಲಿರುವ ಶ್ರೀಕೃಷ್ಣನಲ್ಲಿಗೆ ಬ್ರಾಹ್ಮಣನನ್ನು ಕಳುಹಿಸು. ಶುಭಮುಹೂರ್ತವನ್ನು ನಿಶ್ಚಯಮಾಡಿ ಶೀಘ್ರವಾಗಿ ಸಕಲರಿಗೂ ಸಮ್ಮತನೂ ಭಕ್ತರಿಗೆ ಅನುಗ್ರಹಮಾಡುವ ಶರೀರವುಳ್ಳವನೂ ಶ್ರೇಷ್ಠನೂ ಆದ ಪರಮಾತ್ಮನನ್ನು ಕರೆತಂದು ಅವನನ್ನು ನೋಡುವ ಮಾತ್ರದಿಂದಲೇ ಪುನರ್ಜನ್ಮವನ್ನು ಕಳೆದುಕೊಳ್ಳುವವನಾಗು. ಎಲೈ ರಾಜನೇ! ಯಾವನನ್ನು ನಾಲ್ಕುವೇದಗಳೂ ಸತ್ಪುರುಷರೂ ದೇವತೆಗಳೂ ಸಿದ್ಧಶ್ರೇಷ್ಠರೂ ಮುನಿಶ್ರೇಷ್ಠರೂ ಬ್ರಹ್ಮನೇ ಮೊದಲಾದ ದೇವತೆಗಳೂ ಕೂಡ ತಿಳಿಯಲಾರರೋ, ಧ್ಯಾನದಿಂದ ಪರಿಶುದ್ಧರಾದ ಯೋಗಿಗಳೂ ಕೂಡ ಯಾವನನ್ನು ಧ್ಯಾನಮಾಡುತ್ತಾರಲ್ಲದೆ ತಿಳಿಯಲಾರರೋ, ಯಾವನನ್ನು ಸ್ತೋತ್ರಮಾಡುವುದರಲ್ಲಿ ಸರಸ್ವತಿಯು ಮೂಕಳಾಗಿರುವಳೋ ವೇದಗಳೂ ಶಾಸ್ತ್ರಗಳೂ ಸಾವಿರಮುಖವುಳ್ಳ ಆದಿಶೇಷನೂ ಐದುಮುಖವುಳ್ಳ

ಚತುರ್ಮುಖೋ ಜಗದ್ಧಾತಾ ಕುಮಾರಃ ಕಾರ್ತಿಕಸ್ತಥಾ ।
ಋಷಯೋ ಮುನಯಶ್ಚೈವ ಭಕ್ತಾಃ ಪರಮವೈಷ್ಣವಾಃ || ೩೨ ||

ಅಕ್ಷಮಾಃ ಸ್ತವನೇ ಯಸ್ಯ ಧ್ಯಾನಾಸಾಧ್ಯಶ್ಚ ಯೋಗಿನಾಂ ।
ಬಾಲಕೋಽಹಂ ಮಹಾರಾಜ ತದ್ಗುಣಂ ಕಥಯಾಮಿ ಕಿಂ || ೩೩ ||

ಶತಾನಂದವಚಃ ಶ್ರುತ್ವಾ ಪ್ರಫುಲ್ಲವದನೋ ನೃಪಃ ।
ಆಲಿಂಗನಂ ದದೌ ತಸ್ಮೈ ಸಮುತ್ಥಾಯ ಜವೇನ ಚ || ೩೪ ||

ನಾನಾರತ್ನಂ ಸುವರ್ಣಂ ಚ ವಸ್ತ್ರಂ ಚ ರತ್ನಭೂಷಣಂ ।
ದದೌ ತಸ್ಮೈ ಪ್ರದಾನಂ ಚ ಪ್ರಸಾದಸುಮುಖೋ ನೃಪಃ || ೩೫ ||

ಗಜೇಂದ್ರಂ ತುರಗಂ ಶ್ರೇಷ್ಠಂ ರಥಂ ಚ ಮಣಿನಿರ್ಮಿತಂ ।
ರತ್ನಸಿಂಹಾಸನಂ ರಮ್ಯಂ ಧನಂ ಚ ವಿಪುಲಂ ತಥಾ || ೩೬ ||

ಭೂಮಿಂ ಚ ಸರ್ವಸಸ್ಯಾಢ್ಯಾಂ ಶಶ್ವದ್ವೃಷ್ಟಿಕರೀಂ ಶುಭಾಂ ।
ಅಕೃಷ್ಟಸಾಧ್ಯಾಂ ಪೂಜ್ಯಾಂ ಚ ಗ್ರಾಮಂ ಸರ್ವಪ್ರಶಂಸಿತಂ || ೩೭ ||

---

ಸದಾಶಿವನೂ ನಾಲ್ಕುಮುಖವುಳ್ಳ ಬ್ರಹ್ಮನೂ ಕೃತ್ತಿಕಾಪುತ್ರನಾದ ಕುಮಾರ ಸ್ವಾಮಿಯೂ ಋಷಿಗಳೂ ಮುನಿಗಳೂ ಅತ್ಯಂತವಿಷ್ಣುಭಕ್ತರೂ ಅಸಮರ್ಥರಾಗಿರುವರೋ ಯಾವನು ಯೋಗಿಗಳಿಗೆ ಧ್ಯಾನಮಾತ್ರದಿಂದ ಸಾಧಿಸಲು ಸಾಧ್ಯನೋ ಅಂಥಾ ಪರಮಾತ್ಮನ ಗುಣಗಳನ್ನು ಬಾಲಕನಾದ ನಾನು ಏನೆಂದು ಹೇಳಲಿ ?

೩೪. ರಾಜನು ಶತಾನಂದನಾಡಿದ ಮಾತನ್ನು ಕೇಳಿ ಅರಳಿದ ಮುಖವುಳ್ಳವನಾಗಿ ಶೀಘ್ರವಾಗಿ ಮೇಲಕ್ಕೆದ್ದು ಅವನನ್ನು ಆಲಂಗಿಸಿಕೊಂಡನು.

೩೫–೩೭. ಅನುಗ್ರಹದಿಂದ ಸುಮುಖನಾದ ರಾಜನು ಆ ಶತಾನಂದನಿಗೆ ಅನೇಕವಿಧವಾದ ರತ್ನವನ್ನೂ ವಸ್ತ್ರವನ್ನೂ ರತ್ನಾಭರಣಗಳನ್ನೂ ದಾನವಾಗಿ ಕೊಟ್ಟನು. ಶ್ರೇಷ್ಠವಾದ ಆನೆಯನ್ನೂ ಕುದುರೆಯನ್ನೂ ರತ್ನಮಣಿಗಳಿಂದ ಮಾಡಿದ ರಥವನ್ನೂ ಮನೋಹರವಾದ ರತ್ನಸಿಂಹಾಸನವನ್ನೂ ಹೆಚ್ಚಾದ ಧನವನ್ನೂ ಸಕಲ ಸಸ್ಯಗಳಿಂದಲೂ ಕೂಡಿದ ಬಾರಿಬಾರಿಗೂ ಮಳೆಯನ್ನುಂಟುಮಾಡುವ ಉಳದೇ ಬೆಳೆಯುವ ಪೂಜ್ಯವಾದ ಭೂಮಿಯನ್ನೂ ಸರ್ವರಿಂದಲೂ ಹೊಗಳಲ್ಪಟ್ಟ ಗ್ರಾಮವನ್ನೂ ಕೊಟ್ಟನು.

ಏತಸ್ಮಿನ್ನಂತರೇ ರುಕ್ಮೀಚ್ಛುಕೋಪ ನೃಪನಂದನಃ ।
ಕಂಪಿತೋಽಧರ್ಮಯುಕ್ತಶ್ಚ ರಕ್ತಾಸ್ಯೋ ರಕ್ತಲೋಚನಃ ॥ ೩೮ ॥

ಉವಾಚ ಪಿತರಂ ವಿಪ್ರಂ ಸಭಾಯಾಮಸ್ಥಿರಸ್ತದಾ ।
ಉತ್ಥಾಯ ತಿಷ್ಠನ್ಪುರತಃ ಸರ್ವೇಷಾಂ ಚ ಸಭಾಸದಾಂ ॥ ೩೯ ॥

॥ ರುಕ್ಮಿರುವಾಚ ॥

ಶೃಣು ರಾಜೇಂದ್ರ ವಚನಂ ಹಿತಂ ತಥ್ಯಂ ಪ್ರಶಂಸಿತಂ ।
ತ್ಯಜ ವಾಕ್ಯಂ ಭಿಕ್ಷುಕಾಣಾಂಲೋಭಿನಾಂ ಕ್ರೋಧಿನಾಮಹೋ ॥ ೪೦ ॥

ನರ್ತಕಾನಾಂ ಚ ವೈಶ್ಯಾಣಾಂ ಭಟ್ಟಾನಾಮರ್ಥಿನಾಮಪಿ ।
ಕಾಯಸ್ಥಾನಾಂ ಚ ಭಿಕ್ಷೂಣಾಮಸತ್ಯಂ ವಚನಂ ಸದಾ ॥ ೪೧ ॥

ಘಟಕಾನಾಂ ನಾಟಕಾನಾಂ ಸ್ತ್ರೀಲುಬ್ಧಾನಾಂ ಚ ಕಾಮಿನಾಂ ।
ದರಿದ್ರಾಣಾಂ ಚ ಮೂರ್ಖಾಣಾಂ ಸ್ತುತಿಪೂರ್ವಂ ವಚಃ ಸದಾ ॥ ೪೨ ॥

---

೩೮–೩೯. ಈ ಮಧ್ಯದಲ್ಲಿ ರಾಜನಮಗನಾದ ಅಧರ್ಮದಿಂದ ಕೂಡಿದ ರುಕ್ಮಿಯೆಂಬುವನು ಕೋಪದಿಂದ ನಡುಗುತ್ತ ಕೆಂಪಾದಮುಖವುಳ್ಳವನಾಗಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಸಭೆಯಲ್ಲಿ ಸ್ಥಿರನಾಗಿ ನಿಲ್ಲದೆ ಮೇಲೆದ್ದು ಎಲ್ಲ ಸಭಾಸದರುಗಳ ಮುಂದೆ ನಿಂತುಕೊಂಡು ತಂದೆಯನ್ನೂ ಶತಾನಂದನೆಂಬ ಬ್ರಾಹ್ಮಣನನ್ನೂ ಕುರಿತಿಂತೆಂದನು.

೪೦. ರುಕ್ಮಿಯು ಹೇಳುತ್ತಾನೆ ; — ಎಲೈ ರಾಜೇಂದ್ರನೇ ! ನಾನು ಹೇಳುವ ಸತ್ಯವೂ ಹಿತವೂ ಮತ್ತು ಶ್ಲಾಘನೀಯವೂ ಆದ ಮಾತನ್ನು ಕೇಳುವವನಾಗು. ಭಿಕ್ಷುಕರ, ಲೋಭಿಗಳ, ಕೋಪಿಷ್ಠರ ಮಾತನ್ನು ಕೇಳಬೇಡ.

೪೧. ನಾಟ್ಯಕಾರರ, ವೈಶ್ಯರ, ಭಟ್ಟರ, ಯಾಚಕರ, ಬಡಗಿಗಳ ಮತ್ತು ಭಿಕ್ಷುಗಳ ಮಾತು ಯಾವಾಗಲೂ ಸುಳ್ಳಾಗಿರುತ್ತದೆ.

೪೨. ಮಧ್ಯಸ್ಥರ, ನಾಟಕಕಾರರ, ಸ್ತ್ರೀಯರಲ್ಲಿ ಆಶೆಗೊಂಡವರ, ಕಾಮುಕರ, ದರಿದ್ರರ ಮತ್ತು ಮೂರ್ಖರ ಮಾತು ಯಾವಾಗಲೂ ಹೊಗಳಿಕೆಯೇ ಮುಂದಾಗಿರುವಂತಹುದು.

ನಿಹತ್ಯ ಕಾಲಯವನಂ ರಾಜೇಂದ್ರಂ ದೂರತೋ ಭಿಯಾ ।
ಉಪಾಯೇನ ಮಹಾಬಾಹೋ ಲಬ್ಧಂ ಕೃಷ್ಣೇನ ತದ್ಧನಂ || ೪೩ ||

ದ್ವಾರಕಾಯಾಂ ಧನೀ ಕೃಷ್ಣೋ ಯವನಸ್ಯ ಧನೇನ ಚ ।
ಜರಾಸಂಧಭಯೇನೈವ ಸಮುದ್ರಾಭ್ಯಂತರೇ ಗೃಹೀ || ೪೪ ||

ಜರಾಸಂಧಶತಂ ಚೈವ ಕ್ಷಣೇನೈವ ಚ ಲೀಲಯಾ ।
ಕ್ಷಮೋಽಹಂ ಹಂತುಮೇಕಾಕೀ ರಾಜ್ಞಾಶ್ಚಾನ್ಯಸ್ಯ ಕಾ ಕಥಾ || ೪೫ ||

ದುರ್ವಾಸಸಶ್ಚ ಶಿಷ್ಯೋಽಹಂ ರಣಶಾಸ್ತ್ರವಿಶಾರದಃ ।
ಧ್ರುವಂ ಭೀಷ್ಮಕ ತೇನೈವ ವಿಶ್ವಂ ಸಂಹರ್ತುಮೀಶ್ವರಃ || ೪೬ ||

ಮತ್ಸಮಃ ಪರ್ಶುರಾಮಶ್ಚ ಶಿಶುಪಾಲಶ್ಚ ಮತ್ಸಮಃ ।
ಸಖಾ ಚ ಬಲವಾಞ್ಛೂರಃ ಸ್ವರ್ಗಂ ಜೇತುಂ ಸ ಚ ಕ್ಷಮಃ || ೪೭ ||

---

೪೩. ಎಲೈ ಪರಾಕ್ರಮಶಾಲಿಯೇ! ಕಾಲಯವನನೆಂಬ ರಾಜನನ್ನು ಭಯದಿಂದ ಉಪಾಯವಾಗಿ ದೂರದಿಂದಲೇ ಕೊಂದು ಕೃಷ್ಣನು ಅವನ ದನವನ್ನು ಪಡೆದಿರುವನು.

೪೪. ಕಾಲಯವನನ ಧನದಿಂದಲೇ ಧನವಂತನಾದ ಕೃಷ್ಣನು ಜರಾಸಂಧನ ಹೆದರಿಕೆಯಿಂದ ಸಮುದ್ರದ ಮಧ್ಯದಲ್ಲಿ ದ್ವಾರಕಾ ಎಂಬ ನಗರವನ್ನು ಸೃಷ್ಟಿಮಾಡಿ ಅಲ್ಲಿ ಮನೆಮಾಡಿಕೊಂಡಿರುವನು.

೪೫. ನಾನೊಬ್ಬನೇ ನೂರುಮಂದಿ ಜರಾಸಂಧರನ್ನು ಲೀಲೆಯಿಂದ ಕ್ಷಣಮಾತ್ರದಲ್ಲಿ ಕೊಲ್ಲಲು ಶಕ್ತನಾಗಿರುವೆನು. ಇತರ ರಾಜರ ಮಾತೇನು.

೪೬. ಎಲೈ ಭೀಷ್ಮಕನೇ! ನಾನು ದೂರ್ವಾಸಮುನಿಗಳ ಶಿಷ್ಯನೂ ಯುದ್ಧಶಾಸ್ತ್ರದಲ್ಲಿ ಪಂಡಿತನೂ ಆಗಿರುವೆನು. ಅದರಿಂದಲೇ ನಿಶ್ಚಯವಾಗಿಯೂ ಪ್ರಪಂಚವನ್ನೇ ನಾಶಮಾಡಲು ಶಕ್ತನು.

೪೭. ಪರಶುರಾಮನು ನನಗೆ ಸಮಾನನು. ಶಿಶುಪಾಲನೂ ಸಮಾನನು ಮತ್ತು ನನ್ನ ಸ್ನೇಹಿತನೂ ಬಲಿಷ್ಠನೂ ಶೂರನೂ ಆಗಿರುವನು. ಅವನು ಸ್ವರ್ಗಲೋಕವನ್ನು ಜಯಿಸಲು ಸಮರ್ಥನು.

ಮಹೇಂದ್ರಂ ಸಗಣಂ ಜೇತುಮಹಮೀಶಃ ಕ್ಷಣೇನ ಚ ।
ಜಿತ್ವಾ ಯುದ್ಧೇ ಜರಾಸಂಧಂ ದುರ್ಬಲಂ ಯೋಗಿನಂ ನೃಪ ॥ ೪೮ ॥

ಅಹಂಕಾರಯುತಃ ಕೃಷ್ಣೋ ವೀರಂ ಸ್ವಂ ಮನ್ಯತೇ ಧಿಯಾ ।
ಯದ್ಯಾಯಾಸ್ಯತಿ ಮದ್ಗ್ರಾಮಂ ವಿವಾಹಂ ಕರ್ತುಮೀಪ್ಸಿತಂ ॥ ೪೯ ॥

ಧ್ರುವಂಪ್ರಸ್ಥಾಪಯಿಷ್ಯಾಮಿ ಕ್ಷಣೇನ ಯಮಮಂದಿರಂ ।
ಅಹೋ ನಂದಸ್ಯ ವೈಶ್ಯಸ್ಯ ತಸ್ಮೈ ಗೋರಕ್ಷಕಾಯ ಚ ॥ ೫೦ ॥

ಸಾಕ್ಷಾಜ್ಜಾರಾಯ ಗೋಪೀನಾಂ ಗೋಪಾಲೋಚ್ಛಿಷ್ಟಭೋಜಿನೇ ।
ಕರೋಷಿ ಕನ್ಯಾಸ್ವೀಕಾರಂ ದೇವಯೋಗ್ಯಾಂ ಚ ರುಕ್ಮಿಣೀಂ ॥ ೫೧ ॥

ದಾತುಮಿಚ್ಛಸಿ ವಾಕ್ಯೇನ ಭಿಕ್ಷುಕಸ್ಯ ದ್ವಿಜಸ್ಯ ಚ ।
ರಾಜೇಂದ್ರ ಬುದ್ಧಿಹೀನೋಸಿ ವಚನಾದ್ಸದ್ಗಲಸ್ಯ ಚ ॥ ೫೨ ॥

ಮಾ ರಾಜಪುತ್ರೋ ಮಾ ಶೂರೋ ಮಾ ಕುಲೀನಶ್ಚ ಮಾ ಶುಚಿಃ ।
ಮಾ ದಾತಾ ಮಾ ಧನಾಢ್ಯಶ್ಚ ಮಾ ಯೋಗ್ಯೋ ಮಾ ಜಿತೇಂದ್ರಿಯಃ ॥೫೩॥

---

೪೮–೫೨. ನಾನು ಒಂದು ಕ್ಷಣದಲ್ಲಿಯೇ ಪರಿವಾರ ಸಮೇತನಾದ ಮಹೇಂದ್ರನನ್ನು ಗೆಲ್ಲಲು ಸಮರ್ಥನಾಗಿರುವೆನು. ಎಲೈ ರಾಜನೇ! ದುರ್ಬಲನೂ ಯೋಗಿಯೂ ಆದ ಜರಾಸಂಧನನ್ನು ಯುದ್ಧದಲ್ಲಿ ಸೋಲಿಸಿ ಅಹಂಕಾರದಿಂದ ಕೂಡಿದ ಶ್ರೀಕೃಷ್ಣನು ತನ್ನನ್ನು ವೀರನೆಂದು ತಾನೇ ತಿಳಿದುಕೊಂಡಿರುವನು. ಅವನೇನಾದರೂ ನಮ್ಮೂರಿಗೆ ಮದುವೆಮಾಡಿಕೊಳ್ಳುವುದಕ್ಕೋಸ್ಕರವಾಗಿ ಬಂದನಾದ ಪಕ್ಷದಲ್ಲಿ ನಿಶ್ಚಯವಾಗಿಯೂ ಕ್ಷಣಕಾಲದಲ್ಲಿಯೇ ಯಮುನಮನೆಗೆ ಕಳುಹಿಸುತ್ತೇನೆ. ನಂದನೆಂಬ ವೈಶ್ಯನ ಮಗನಾದ ಆ ಗೋಪಾಲಕನಿಗೆ ಸಾಕ್ಷಾತ್ ಗೋಪಿಯರ ಜಾರನಿಗೆ ಗೋಪಾಲಕರ ಎಂಜಲನ್ನು ತಿನ್ನುವವನಿಗೆ ಬಿಕ್ಷುಕನಾದ ಬ್ರಾಹ್ಮಣ ಮಾತಿನಿಂದ ದೇವತೆಗಳಿಗೆ ಯೋಗ್ಯಳಾದ ರುಕ್ಮಿಣಿಯನ್ನು ಕೊಡುವವನಾದರೆ ಆ ಅಲ್ಪನ ಮಾತಿನಿಂದ ಬುದ್ಧಿ ಹೀನನಾಗಿರುವಿ.

೫೩. ಕೃಷ್ಣನು ರಾಜಕುಮಾರನಲ್ಲ ಶೂರನಲ್ಲ, ಉತ್ತಮಕುಲದವನಲ್ಲ, ಪರಿಶುದ್ಧನೂ ಅಲ್ಲ, ದಾನಮಾಡುವವನಲ್ಲ, ಧನವಂತನಲ್ಲ, ಯೋಗ್ಯನಲ್ಲ. ಇಂದ್ರಿಯಗಳನ್ನು ಜಯಿಸಿದವನೂ ಅಲ್ಲ.

ಕನ್ಯಾಂ ದೇಹಿ ಸುಪುತ್ರಾಯ ಶಿಶುಪಾಲಾಯ ಭೂಮಿಪ ।
ಬಲೇನ ರುದ್ರತುಷ್ಟಾಯ ರಾಜೇಂದ್ರತನಯಾಯ ಚ　　|| ೫೪ ||

ನಿಮಂತ್ರಣಂ ಕುರು ನೃಪ ನಾನಾದೇಶಭವಾನ್ನೃಪಾನ್ ।
ಬಾಂಧವಾಂಶ್ಚ ಮುನೀಂದ್ರಾಂಶ್ಚ ಪತ್ರದ್ವಾರಾ ತ್ವರಾನ್ವಿತಃ　　|| ೫೫ ||

ಅಂಗಂ ಕಲಿಂಗಂ ಮಗಧಂ ಸೌರಾಷ್ಟ್ರಂ ವಲ್ಕಲಂ ವರಂ ।
ರಾಟಂ ವರೇಂದ್ರಂ ವಂಗಂ ಚ ಗುರ್ಜರಾಟಂ ಚ ಪೇಶರಂ　　|| ೫೬ ||

ಮಹಾರಾಷ್ಟ್ರಂ ವಿರಾಟಂ ಚ ಮುದ್ಗಲಂ ಚ ಮುರಂಗಕಂ ।
ಭಲ್ಲಕಂ ಗಲ್ಲಕಂ ಖರ್ವಂ ದುರ್ಗಂ ಪ್ರಸ್ಥಾಪಯ ದ್ವಿಜಂ　　|| ೫೭ ||

ಘೃತಕುಲ್ಯಾಸಹಸ್ರಂ ಚ ಮಧುಕುಲ್ಯಾಸಹಸ್ರಕಂ ।
ದಧಿಕುಲ್ಯಾಸಹಸ್ರಂ ಚ ದುಗ್ಧಕುಲ್ಯಾಸಹಸ್ರಕಂ　　|| ೫೮ ||

---

೫೪. ಎಲೈ ರಾಜನೇ! ಉತ್ತಮನಾದ ಮಗನೆನಿಸಿದ ತನ್ನಬಲದಿಂದ ರುದ್ರನನ್ನು ಸಂತೋಷಪಡಿಸಿದ ರಾಜಕುಮಾರನಾದ ಶಿಶುಪಾಲನಿಗೆ ಮಗಳನ್ನು ಕೊಡುವವನಾಗು.

೫೫. ಎಲೈ ರಾಜನೇ! ನಾನಾದೇಶದ ರಾಜರುಗಳನ್ನೂ ಬಂಧುಜನರನ್ನೂ ಮುನಿಶ್ರೇಷ್ಠರನ್ನೂ ಪತ್ರವನ್ನು ಬರೆದು ಕಳುಹಿಸುವವನಾಗು.

೫೬—೫೭. ಅಂಗ ಕಲಿಂಗ ಮಗಧ ಸೌರಾಷ್ಟ್ರ ವಲ್ಕಲ ರಾಟ ವರೇಂದ್ರ ವಂಗ ಗುರ್ಜರಾಟ ಪೇಶರ ಮಹಾರಾಷ್ಟ್ರ ವಿರಾಟ ಮುದ್ಗಲ ಮುರಂಗ ಭಲ್ಲಕ ಗಲ್ಲಕ ಖರ್ವ ದುರ್ಗ ಈ ದೇಶಗಳಿಗೆ ಬ್ರಾಹ್ಮಣನನ್ನು ಕಳುಹಿಸು.

೫೮—೬೩. ಸಾವಿರ ತುಪ್ಪದ ಕಾಲುವೆಗಳನ್ನೂ ಸಾವಿರ ಜೇನುತುಪ್ಪದ ಕಾಲುವೆಗಳನ್ನೂ ಸಾವಿರ ಮೊಸರಿನ ಕಾಲುವೆಗಳನ್ನೂ ಸಾವಿರ ಹಾಲಿನ ಕಾಲುವೆಗಳನ್ನೂ ಐನೂರು ಎಣ್ಣೆಯ ಕಾಲುವೆಗಳನ್ನೂ ಎರಡುಲಕ್ಷ ಬೆಲ್ಲದ ಕಾಲುವೆಗಳನ್ನೂ ನೂರು ಸಕ್ಕರೆಯ ರಾಶಿಯನ್ನೂ ಇವುಗಳ ನಾಲ್ಕರಷ್ಟು ಮೃಷ್ಟಾನ್ನ ರಾಶಿಗಳನ್ನೂ ಯವ ಗೋಧಿ ಇವುಗಳ ನೂರು ನೂರು ರಾಶಿಗಳನ್ನೂ ಒಂದುಲಕ್ಷ ಅವಲಕ್ಕಿಯ ರಾಶಿಯನ್ನೂ ನಾಲ್ಕರಷ್ಟು ಅನ್ನರಾಶಿಯನ್ನೂ ಮಾಡಿಸು. ಒಂದುಲಕ್ಷ ಗೋವುಗ

ತೈಲಕುಲ್ಯಾಪಂಚಶತಂ ಗುಡಕುಲ್ಯಾದ್ವಿಲಕ್ಷಕಂ ।
ಶರ್ಕರಾಣಾಂ ರಾಶಿಶತಂ ಮಿಷ್ಟಾನ್ನಾನಾಂ ಚತುರ್ಗುಣಂ ॥ ೫೯ ॥

ಯವಗೋಧೂಮಚೂರ್ಣಾನಾಂ ಪಿಷ್ಟರಾಶಿಶತಂ ಶತಂ ।
ಪೃಥುಕಾನಾಂ ರಾಶಿಲಕ್ಷಮನ್ನಾನಾಂ ಚ ಚತುರ್ಗುಣಂ ॥ ೬೦ ॥

ಗವಾಂ ಲಕ್ಷಂ ಛೇದನಂ ಚ ಹರಿಣಾನಾಂ ದ್ವಿಲಕ್ಷಕಂ ।
ಚತುರ್ಲಕ್ಷಂ ಶಶಾನಾಂ ಚ ಕೂರ್ಮಾಣಾಂ ಚ ತಥಾ ಕುರು ॥ ೬೧ ॥

ದಶಲಕ್ಷಂ ಛಾಗಲಾನಾಂ ಭೇಟಾನಾಂ ತಚ್ಚತುರ್ಗುಣಂ ।
ಪರ್ವಣಿ ಗ್ರಾಮದೇವ್ಯೈ ಚ ಬಲಿಂ ದೇಹಿ ಚ ಭಕ್ತಿತಃ ॥ ೬೨ ॥

ಏತೇಷಾಂ ಪಕ್ವಮಾಂಸಂ ಚ ಭೋಜನಾರ್ಥಂ ಚ ಕಾರಯ ।
ಪರಿಪೂರ್ಣಂ ವ್ಯಂಜನಾನಾಂ ಸಾಮಗ್ರೀಂ ಕುರು ಭೂಮಿಪ ॥ ೬೩ ॥

ಅಥ ಶ್ರುತ್ವಾ ಚ ತದ್ವಾಕ್ಯಂ ರಾಜೇಂದ್ರಃ ಸಪುರೋಹಿತಃ ।
ಚಕಾರಂ ಮಂತ್ರಣಂ ತೂರ್ಣಂ ನಿಜೇನ ಮಂತ್ರಿಣಾ ಸಹ ॥ ೬೪ ॥

ದ್ವಿಜಂ ಪ್ರಸ್ಥಾಪಯಾಮಾಸ ದ್ವಾರಕಾಂ ಯೋಗ್ಯಮೀಪ್ಸಿತಂ ।
ಕೃತ್ವಾ ಚ ಶುಭಲಗ್ನಂ ಚ ಸರ್ವೇಷಾಮಭಿವಾಂಛಿತಂ ॥ ೬೫ ॥

---

ಳನ್ನೂ ಎರಡುಲಕ್ಷ ಜಿಂಕೆಗಳನ್ನೂ ನಾಲ್ಕುಲಕ್ಷ ಮೊಲಗಳನ್ನೂ ನಾಲ್ಕುಲಕ್ಷ ಆಮೆಗಳನ್ನೂ ಹತ್ತುಲಕ್ಷ ಗಂಡಾಡುಗಳನ್ನೂ ನಾಲ್ಕರಷ್ಟು ಪಕ್ಷಿಗಳನ್ನೂ ಕಡಿಸುವವನಾಗು. ಪರ್ವಕಾಲದಲ್ಲಿ ಗ್ರಾಮದೇವತೆಗೆ ಭಕ್ತಿಯಿಂದ ಬಲಿಯನ್ನು ಕೊಡುವವನಾಗು. ಇವುಗಳ ಪಕ್ವ ಮಾಂಸವನ್ನು ಭೋಜನಕ್ಕಾಗಿ ಏರ್ಪಡಿಸು. ವ್ಯಂಜನಗಳಿಂದ ತುಂಬಿದ ಸಾಮಗ್ರಿಗಳನ್ನು ಸಿದ್ಧಪಡಿಸುವವನಾಗು.

೬೪. ಅನಂತರ ರಾಜೇಂದ್ರನು ಅವನ ಮಾತನ್ನು ಕೇಳಿ ಪುರೋಹಿತರಿಂದಲೂ ಮಂತ್ರಿಯಿಂದಲೂ ಕೂಡಿದವನಾಗಿ ಶೀಘ್ರವಾಗಿ ಕರೆಕಳುಹಿದನು.

೬೫. ಸಕಲಸಮ್ಮತವಾದ ಶುಭಲಗ್ನವನ್ನು ನಿಶ್ಚಯಮಾಡಿಕೊಂಡು ಯೋಗ್ಯನೂ ಆಪ್ತನೂ ಆದ ಬ್ರಾಹ್ಮಣನನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿಕೊಟ್ಟನು.

ರಾಜಾ ಸಂಭೃತಸಂಭಾರೋ ಬಭೂವ ಸತ್ತ್ವರಂ ಮುದಾ ।
ನಿಮಂತ್ರಣಂ ಚ ಸರ್ವತ್ರ ಚಕಾರ ಚ ಸುತಾಜ್ಞಯಾ || ೬೬ ||

ವಿಪ್ರಃ ಸುಧರ್ಮಾಂ ಸಂಪ್ರಾಪ್ಯ ನೃಪೈರ್ದೇವೈಶ್ಚ ವೇಷ್ಟಿತಾಂ ।
ಪ್ರದದೌ ಪತ್ರಿಕಾಂ ಭದ್ರಾಮುಗ್ರಸೇನಾಯ ಭೂಭೃತೇ || ೬೭ ||

ಪ್ರಫುಲ್ಲವದನೋ ರಾಜಾ ಶ್ರುತ್ವಾ ಪತ್ರಂ ಸುಮಂಗಲಂ ।
ಸುವರ್ಣಾನಾಂ ಸಹಸ್ರಂ ಚ ಬ್ರಾಹ್ಮಣೇಭ್ಯೋ ದದೌ ಮುದಾ || ೬೮ ||

ದುಂದುಭಿಂ ವಾದಯಾಮಾಸ ದ್ವಾರಕಾಯಾಂ ಚ ಸರ್ವತಃ ।
ದೇವಾನ್ಮುನೀನ್ನೃಪಾಂಶ್ಚೈವ ಜ್ಞಾತಿವರ್ಗಾಂಶ್ಚ ಬಾಂಧವಾನ್ || ೬೯ ||

ಭಟ್ಟಾಂಶ್ಚ ಭಿಕ್ಷುಕಾಂಶ್ಚೈವ ಭೋಜಯಾಮಾಸ ಸಾದರಂ ।
ಶ್ರೀಕೃಷ್ಣಶ್ಚ ಸುವೇಷಂ ಚ ಕಾರಯಾಮಾಸ ಭೂಪತಿಃ || ೭೦ ||

---

೬೬. ರಾಜನು ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡವನಾದನು ಮತ್ತು ಮಗನ ಅಪ್ಪಣೆಯಂತೆ ಸಂತೋಷದಿಂದ ಶೀಘ್ರವಾಗಿ ಎಲ್ಲೆಡೆಗೂ ಕರೆ ಕಳುಹಿದನು.

೬೭. ಬ್ರಾಹ್ಮಣನು ರಾಜರಗಳಿಂದಲೂ ದೇವತೆಗಳಿಂದಲೂ ಕೂಡಿದ ಸಭೆಯನ್ನು ಪ್ರವೇಶಿಸಿದವನಾಗಿ ರಾಜನಾದ ಉಗ್ರಸೇನನಿಗೆ ಮಂಗಳಪತ್ರಿಕೆಯನ್ನು ಕೊಟ್ಟನು.

೬೮. ರಾಜನು ಮಂಗಳಕರವಾದ ಪತ್ರಿಕೆಯನ್ನೋದಿಸಿ ಕೇಳಿ ಸಂತೋಷದಿಂದ ಅರಳಿದ ಮುಖವುಳ್ಳವನಾಗಿ ಒಂದುಸಾವಿರ ಸುವರ್ಣಗಳನ್ನು ಸಂತೋಷದಿಂದ ದಾನಮಾಡಿದನು.

೬೯–೭೪. ದ್ವಾರಕೆಯಲ್ಲೆಲ್ಲೆಡೆಯಲ್ಲಿಯೂ ದುಂದುಭಿಯನ್ನು ಊದಿಸಿದನು. ದೇವತೆಗಳನ್ನೂ ಮುನಿಗಳನ್ನೂ ರಾಜರುಗಳನ್ನೂ ಜ್ಞಾತಿಗಳನ್ನೂ ಬಂಧುಜನರನ್ನೂ ಭಟ್ಟರನ್ನೂ ಭಿಕ್ಷುಕರನ್ನೂ ವಿಶ್ವಾಸದಿಂದ ಊಟಮಾಡಿಸಿದನು. ರಾಜನು ಶ್ರೀಕೃಷ್ಣನಿಗೆ ಅತ್ಯಂತ ಮನೋಹರವಾಗಿಯೂ ಎಣೆಯಿಲ್ಲದುದಾಗಿಯೂ ಮೂರು ಲೋಕದಲ್ಲೆಲ್ಲಿಯೂ ಇಲ್ಲದುದಾಗಿಯೂ ಇರುವ ಉತ್ತಮವಾದ ಅಲಂಕಾರವನ್ನು ಮಾಡಿಸಿದನು. ಮನೋಹರವಾದ ಸಮಯದಲ್ಲಿ ಇಂಪಾದ ವೇದಘೋಷಗಳೊಡನೆ

ಅತೀವರಮ್ಯಮತುಲಂ ತ್ರಿಷು ಲೋಕೇಷು ದುರ್ಲಭಂ ।
ಯಾತ್ರಾಂ ಚ ಕಾರಯಾಮಾಸ ಜಗತಾಂ ಪ್ರವರಂ ವರಂ ॥ ೭೧ ॥

ವೇದಮಂತ್ರೇಣ ರಮ್ಯೇಣ ಮಹೇಂದ್ರೇ ಸುಮನೋಹರೇ ।
ಆದೌ ಬ್ರಹ್ಮಾ ರಥಸ್ಥಶ್ಚ ಸಾವಿತ್ರ್ಯಾ ಸಹಿತೋ ಯಯೌ ॥ ೭೨ ॥

ರಥಸ್ಥಶ್ಚ ಮಹಾತ್ಮ್ಯಕೃಷ್ಣೋ ಭವಾನ್ಯಾ ಚ ಭವಃ ಸ್ವಯಂ ।
ಶೇಷಶ್ಚಾಪಿ ದಿನೇಶಶ್ಚ ಗಣೇಶಶ್ಚಾಪಿ ಕೀರ್ತಿತಃ ॥ ೭೩ ॥

ಮಹೇಂದ್ರಶ್ಚ ತಥಾ ಚಂದ್ರೋ ವರುಣಃ ಪವನಸ್ತಥಾ ।
ಕುಬೇರಶ್ಚ ಯಮೋ ವಹ್ನಿರೀಶಾನೋಽಪಿ ಯಯೌ ಮುದಾ ॥ ೭೪ ॥

ದೇವಾನಾಂ ಚ ತ್ರಿಕೋಟ್ಯಶ್ಚ ಮುನೀನಾಂ ಷಷ್ಟಿಕೋಟಯಃ ।
ಗಜೇಂದ್ರಾಣಾಂ ತ್ರಿಲಕ್ಷಂ ಚ ಶ್ವೇತಚ್ಛತ್ರಂ ತ್ರಿಲಕ್ಷಕಂ ॥ ೭೫ ॥

ಉಗ್ರಸೇನೋ ಬಭೌ ರಾಜಾ ನಕ್ಷತ್ರೇಷು ಯಥಾ ಶಶೀ ।
ಯಯೌ ಪ್ರಸನ್ನವದನಃ ಕುಂಡಿನಾಭಿಮುಖೋ ಬಲೀ ॥ ೭೬ ॥

ರತ್ನನಿರ್ಮಾಣಯಾನೇನ ಬಲದೇವೋ ಮಹಾಬಲಃ ।
ವಸುದೇವಶ್ಚೋದ್ಧವಶ್ಚ ನಂದೋಽಕ್ರೂರಶ್ಚ ಸಾತ್ಯಕಿಃ ॥ ೭೭ ॥

---

ಜಗತ್ತಿಗೆ ಶ್ರೇಷ್ಠನೂ ಉತ್ತಮನೂ ಆದ ಶ್ರೀಕೃಷ್ಣನನ್ನು ಪ್ರಯಾಣಮಾಡಿಸಿದನು. ಮೊದಲು ಬ್ರಹ್ಮನು ಸಾವಿತ್ರಿಯೊಡನೆ ರಥಾರೂಢನಾಗಿ ಹೊರಟನು. ಕೃಷ್ಣನು ರಥಾರೂಢನಾಗಿ ಹೊರಟನು. ಶೇಷನೂ ಸೂರ್ಯನೂ ಗಣೇಶನೂ ಷಣ್ಮುಖನೂ ಮಹೇಂದ್ರನೂ ಚಂದ್ರನೂ ವರುಣನೂ ವಾಯುವೂ ಕುಬೇರನೂ ಯಮನೂ ಅಗ್ನಿಯೂ ಈಶಾನನೂ ಕೂಡ ಸಂತೋಷದಿಂದ ಹೊರಟರು.

೭೫–೭೮. ಮೂರುಕೋಟಿ ದೇವತೆಗಳೂ, ಆರುಕೋಟಿ ಮುನಿಗಳೂ, ಮೂರುಲಕ್ಷ ಆನೆಗಳೂ, ಮೂರುಲಕ್ಷ ಶ್ವೇತಚ್ಛತ್ರಗಳು. ಇವುಗಳಿಂದ ಉಗ್ರಸೇನ ರಾಜನು ನಕ್ಷತ್ರಗಳ ಮಧ್ಯದಲ್ಲಿರುವ ಚಂದ್ರನಂತೆ ಕಂಗೊಳಿಸುತ್ತಿದ್ದನು. ರತ್ನ ಗಳಿಂದ ಮಾಡಿದ ರಥದಿಂದ ಮಹಾಬಲಶಾಲಿಯಾದ ಬಲದೇವನು ಕುಂಡಿನಪುರಕ್ಕ ಭಿಮುಖನಾಗಿ ಹೊರಟನು. ವಸುದೇವನೂ ಉದ್ಧವನೂ ನಂದನೂ ಅಕ್ರೂರನೂ

ಗೋಪಾಲಾ ಯಾದವೇಂದ್ರಾಶ್ಚ ಚಂದ್ರವಂಶ್ಯಾಶ್ಚ ತೇ ಯಯುಃ ।
ಧೃತರಾಷ್ಟ್ರಸುತಾಃ ಸರ್ವೇ ದುರ್ಯೋಧನಪುರೋಗಮಾಃ ॥ ೭೮ ॥

ಯುಧಿಷ್ಠಿರಸ್ತಥಾ ಭೀಮಃ ಫಲ್ಗುನೋ ನಕುಲಸ್ತಥಾ ।
ಸಹದೇವಶ್ಚ ಯಾನ್ಯೈಶ್ಚ ಪ್ರಯಯುಃ ಪಂಚಪಾಂಡವಾಃ ॥ ೭೯ ॥

ಭೀಷ್ಮೋ ದ್ರೋಣಶ್ಚ ಕರ್ಣಶ್ಚಾಶ್ವತ್ಥಾಮಾ ಮಹಾಬಲಃ ।
ಕೃಪಾಚಾರ್ಯಶ್ಚ ಶಕುನಿಃ ಶಲ್ಯಶ್ಚ ಪ್ರಯಯೌ ಮುದಾ ॥ ೮೦ ॥

ಭಟಾನಾಂ ಚ ತ್ರಿಕೋಟ್ಯಶ್ಚ ವಿಪ್ರಾಣಾಂ ಶತಕೋಟಯಃ ।
ಸನ್ಯಾಸಿನಾಂ ಸಹಸ್ರಂ ಚ ಯತೀನಾಂ ಬ್ರಹ್ಮಚಾರಿಣಾಂ ॥ ೮೧ ॥

ದ್ವಿಸಹಸ್ರಂ ಜಿತಕ್ರೋಧಾಶ್ಚಾವಧೂತಾಸ್ತಥೈವ ಚ ।
ಉತ್ಪಲಾನಾಂ ಸಹಸ್ರಂ ಚ ಸಹಸ್ರಂ ಪುಷ್ಪಕಾರಿಣಾಂ ॥ ೮೨ ॥

ನಾನಾಶಿಲ್ಪಕರಾಶ್ಚೈವ ವಿಚಿತ್ರಂ ಚಿತ್ರಮೇವ ಚ ।
ಲಕ್ಷಂ ಚ ವಾದ್ಯಭಾಂಡಾನಾಂ ನರ್ತಕಾನಾಂ ಚ ಲಕ್ಷಕಂ ॥ ೮೩ ॥

---

ಸಾತ್ಯಕಿಯೂ ಗೋಪಾಲರೂ ಯಾದವಶ್ರೇಷ್ಠರೂ ಚಂದ್ರವಂಶದವರಾದ ದುರ್ಯೋಧನನೇ ಮೊದಲಾದ ಧೃತರಾಷ್ಟ್ರನ ಮಕ್ಕಳುಗಳೂ ಹೊರಟರು.

೭೯. ಯುಧಿಷ್ಠಿರನೂ ಭೀಮನೂ ಅರ್ಜುನನೂ ನಕುಲನೂ ಸಹದೇವನೂ ಈ ಪಂಚಪಾಂಡವರೂ ಕೂಡ ರಥಾರೂಢರಾಗಿ ಹೊರಟರು.

೮೦. ಭೀಷ್ಮನೂ ದ್ರೋಣಾಚಾರ್ಯನೂ ಕರ್ಣನೂ ಮಹಾಬಲವುಳ್ಳ ಅಶ್ವತ್ಥಾಮನೂ ಕೃಪಾಚಾರ್ಯನೂ ಶಕುನಿಯೂ ಶಲ್ಯನೂ ಸಂತೋಷದಿಂದ ಹೊರಟರು.

೮೧–೮೬. ಮೂರುಕೋಟಿ ಭಟರುಗಳೂ ನೂರುಕೋಟಿ ಬ್ರಾಹ್ಮಣರೂ ಸಾವಿರ ಸನ್ಯಾಸಿಗಳೂ ಎರಡುಸಾವಿರ ಯತಿಗಳು ಮತ್ತೂ ಬ್ರಹ್ಮಚಾರಿಗಳೂ ಎರಡು ಸಾವಿರ ಕೋಪವನ್ನು ಜಯಿಸಿದ ಅವಧೂತರುಗಳೂ ಸಾವಿರಮಂದಿ ಉತ್ಕಲದೇಶದವರೂ ಸಾವಿರಮಂದಿ ಹೂವಾಡಿಗರೂ ವಿಚಿತ್ರವಾದ ಚಿತ್ರಗಳನ್ನು ರಚಿಸುವ ನಾನಾವಿಧವಾದ ಶಿಲ್ಪಕಾರರೂ ಒಂದುಲಕ್ಷ ವಾದ್ಯಭಾಂಡದವರೂ ಒಂದುಲಕ್ಷ

ಗಂಧರ್ವಾಣಾಂ ಗಾಯಕಾನಾಂ ಲಕ್ಷಮೇಕಂ ತು ನಾರದ ।
ತತ್ರ ಕಲ್ಪೇ ಭವತ್ಯೇವ ಗಂಧರ್ವಶ್ಚೋಪಬರ್ಹಣಃ ॥ ೮೪ ॥

ಪಂಚಾಶತ್ಕಾಮಿನೀಭಿಶ್ಚ ತ್ವಮೇವ ತೇಷು ಮಧ್ಯಗಃ ।
ವಿದ್ಯಾಧಾರೀಣಾಂ ಲಕ್ಷಂ ಚ ಲಕ್ಷಮಪ್ಸರಸಾಂ ತಥಾ ॥ ೮೫ ॥

ಕಿನ್ನರಾಣಾಂ ತ್ರಿಲಕ್ಷಂ ಚ ಗಂಧರ್ವಾಣಾಂ ತ್ರಿಲಕ್ಷಕಂ ॥ ೮೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ರುಕ್ಮಿಣ್ಯುದ್ವಾಹೇ
ಪಂಚಾಧಿಕಶತತಮೋಽಧ್ಯಾಯಃ.

---

ನರ್ತಕರೂ ಎಲ್ಲೈ ನಾರದನೇ! ಒಂದುಲಕ್ಷ ಗಂಧರ್ವರು ಮತ್ತು ಗಾಯಕರೂ ಐವತ್ತುಮಂದಿ ಸ್ತ್ರೀಯರೊಡನೆ ಬಂದು ಮಾಡಬೇಕಾದ ಸಲಕರಣೆಗಳನ್ನು ಸಿದ್ಧಗೊಳಿಸಿದರು. ಆ ಕಲ್ಪದಲ್ಲಿ ಗಂಧರ್ವನಾದ ಉಪಬರ್ಹಣನೂ ಇದ್ದನು. ಅವರ ಮಧ್ಯದಲ್ಲಿ ನೀನೂ ಇರುವವನಾಗಿದ್ದೆ. ಒಂದುಲಕ್ಷಮಂದಿ ವಿದ್ಯಾಧರಸ್ತ್ರೀಯರೂ ಒಂದುಲಕ್ಷಮಂದಿ ಅಪ್ಸರಸ್ತ್ರೀಯರೂ ಮೂರುಲಕ್ಷಮಂದಿ ಕಿನ್ನರಸ್ತ್ರೀಯರೂ ಮೂರುಲಕ್ಷಮಂದಿ ಗಂಧರ್ವರೂ ಬಂದು ಸೇರಿದರು

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣನಾರದಸಂವಾದದಲ್ಲಿ ರುಕ್ಮಿಣಿಯ ವಿವಾಹದಲ್ಲಿ
ನೂರಐದನೆಯ ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಷಡಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಏತಸ್ಮಿನ್ನಂತರೇ ರಾಜಾ ಕಕುದ್ಮೀ ಚ ಮಹಾಬಲಃ |
ವರಾರ್ಥಂ ಕನ್ಯಕಾಯಾಶ್ಚ ಬ್ರಹ್ಮಲೋಕಾತ್ಸಮಾಗತಃ || ೧ ||

ಪ್ರದದೌ ರೇವತೀಂ ಕನ್ಯಾಂ ಶಶ್ವತ್ಸುಸ್ಥಿರಯೌವನಾಂ |
ಅಮೂಲ್ಯರತ್ನಭೂಷಾಢ್ಯಾಂ ತ್ರಿಷು ಲೋಕೇಷು ದುರ್ಲಭಾಂ || ೨ ||

ಬಲಾಯ ಬಲದೇವಾಯ ಸಂಪ್ರದಾನೇನ ಕೌತುಕಾತ್ |
ವಯೋ ಯಸ್ಯಾ ಗತಂ ಸತ್ಯೇ ಯುಗಾನಾಂ ಸಪ್ತವಿಂಶತಿಃ || ೩ ||

---

### ನೂರಆರನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ :— ಈ ಮಧ್ಯದಲ್ಲಿ ಮಹಾಬಲಿಷ್ಠನಾದ ಕಕುದ್ಮಿಯೆಂಬ ರಾಜನು ತನ್ನ ಮಗಳಿಗೆ ತಕ್ಕ ವರನನ್ನು ನೋಡಲು ಬ್ರಹ್ಮಲೋಕದಿಂದ ಬಂದನು.

೨-೩. ಸತ್ಯಲೋಕದಲ್ಲಿ ಯಾವಳ ವಯಸ್ಸು ಇಪ್ಪತ್ತೇಳು ಯುಗಗಳು ಕಳೆದಿದ್ದುವೋ ಅಂಥಾ ಯಾವಾಗಲೂ ಸ್ಥಿರವಾದ ಯೌವನವುಳ್ಳ ಮಹಾಬೆಲೆಬಾಳುವ ರತ್ನಾಭರಣಗಳಿಂದ ಶೋಭಿಸುತ್ತಿರುವ ಮೂರುಲೋಕಗಳಲ್ಲೆಲ್ಲಿಯೂ ದೊರಕದ ಸೌಂದರ್ಯದಿಂದ ಕೂಡಿದ ರೇವತಿಯೆಂಬ ಕನ್ಯೆಯನ್ನು ಬಲಶಾಲಿಯಾದ ಬಲದೇವನಿಗೆ ಕನ್ಯಾದಾನ ವಿಧಿಯಿಂದ ಕೊಟ್ಟನು.

ದತ್ವಾ ಕನ್ಯಾಂ ವಿಧಾನೇನ ಮುನಿದೇವೇಂದ್ರಸಂಸದಿ ।
ಗಜೇಂದ್ರಾಣಾಂ ತ್ರಿಲಕ್ಷಂ ಚ ಜಾಮಾತ್ರೇ ಯೌತುಕಂ ದದೌ ॥ ೪ ॥

ದಶಲಕ್ಷಂ ತುರಂಗಾನಾಂ ರಥಾನಾಂ ಲಕ್ಷಮೇವ ಚ ।
ರತ್ನಾಲಂಕಾರಯುಕ್ತಾನಾಂ ದಾಸೀನಾಂ ಚಾಪಿ ಲಕ್ಷಕಂ ॥ ೫ ॥

ಮಣಿಲಕ್ಷಂ ರತ್ನಲಕ್ಷಂ ಸ್ವರ್ಣಕೋಟಿಂ ಚ ಸಾದರಂ ।
ವಹ್ನಿಶುದ್ಧಾಂಶುಕಂ ರಮ್ಯಂ ಮುಕ್ತಾಮಾಣಿಕ್ಯಹೀರಕಂ ॥ ೬ ॥

ದತ್ವಾ ಕನ್ಯಾಂ ಚ ರಾಜೇಂದ್ರೋ ಬಲಾಯ ಬಲಶಾಲಿನೇ ।
ರತ್ನೇಂದ್ರಸಾರಯಾನೇನ ತೈಃ ಸಾರ್ಧಂ ಕುಂಡಿನಂ ಯಯೌ ॥ ೭ ॥

ಅಥಾಂತರೇ ಚ ನಿರ್ಬಂಧೇ ಸಾಂಗೇ ಮಂಗಲಕರ್ಮಣಿ ।
ರೇವತೀಂ ವೇಶಯಾಮಾಸ ಯೋಷಿತಾಂ ಕಮಲಾಕಲಾಂ ॥ ೮ ॥

---

೪. ಮುನಿಗಳ ಮತ್ತು ದೇವಶ್ರೇಷ್ಠರ ಮುಂದೆ ವಿಧಿಗನುಸಾರವಾಗಿ ಕನ್ಯೆಯನ್ನು ದಾನಮಾಡಿ ಅಳಿಯನಿಗೆ ಮೂರುಲಕ್ಷ ಆನೆಗಳನ್ನು ಉಡುಗರೆಯಾಗಿ ಕೊಟ್ಟನು.

೫–೬. ಹತ್ತುಲಕ್ಷ ಕುದುರೆಗಳನ್ನೂ ಒಂದುಲಕ್ಷ ರಥಗಳನ್ನೂ ರತ್ನಾಭರಣಗಳಿಂದ ಅಲಂಕರಿಸಿಕೊಂಡಿರುವ ಒಂದುಲಕ್ಷ ದಾಸಿಯರನ್ನೂ ಒಂದುಲಕ್ಷ ಉತ್ತಮ ಮಣಿಗಳನ್ನೂ ಒಂದುಲಕ್ಷ ರತ್ನಗಳನ್ನೂ ಒಂದುಕೋಟಿ ಚಿನ್ನದ ನಾಣ್ಯಗಳನ್ನೂ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನೂ ಮನೋಹರವಾದ ಮುತ್ತು ಮಾಣಿಕ್ಯ ಮತ್ತು ಹೀರಕಗಳನ್ನೂ ವಿಶ್ವಾಸದಿಂದ ಕೊಟ್ಟನು.

೭. ರಾಜೇಂದ್ರನು ಬಲಶಾಲಿಯಾದ ಬಲದೇವನಿಗೆ ತನ್ನ ಮಗಳನ್ನು ಕೊಟ್ಟು ಅವರೊಂದಿಗೆ ರತ್ನಸಾರದಿಂದ ಮಾಡಿದ ರಥದಮೇಲೆ ಕುಳಿತುಕೊಂಡು ಕುಂಡಿನ ನಗರಕ್ಕೆ ಹೋದನು.

೮–೯. ಈ ಮಧ್ಯದಲ್ಲಿ ಮಂಗಲಕರ್ಮವು ನಿರ್ಬಂಧದಿಂದ ಸಾಂಗವಾಗಿ ನೆರವೇರಲು ದೇವಕಿಯೂ ರೋಹಿಣಿಯೂ ನಂದನಪತ್ನಿಯಾದ ಯಶೋದೆಯೂ

ದೇವಕೀ ರೋಹಿಣೀ ಚೈವ ಯಶೋದಾ ನಂದಗೇಹಿನೀ ।
ಅದಿತಿಶ್ಚ ದಿತಿಃ ಶಾಂತಿರ್ಜಯಂ ಕೃತ್ವಾ ಚ ಮಂದಿರಂ ॥ ೯ ॥

ಬ್ರಾಹ್ಮಣಾನ್ಭೋಜಯಾಮಾಸ ದದೌ ತೇಭ್ಯೋ ಧನಂ ಮುದಾ ।
ಮಂಗಲಂ ಕಾರಯಾಮಾಸ ವಸುದೇವಸ್ಯ ವಲ್ಲಭಃ ॥ ೧೦ ॥

ಅಥ ದೇವಾಶ್ಚ ಮುನಯೋ ರಾಜೇಂದ್ರಾಃ ಕಟಕೈಃ ಸಹ ।
ಸಂಪ್ರಾಪುರ್ಲೀಲಾಮಾತ್ರೇಣ ಕುಂಡಿನಂ ನಗರಂ ಮುದಾ ॥ ೧೧ ॥

ದದೃಶುರ್ನಗರಂ ಸರ್ವೇ ಹ್ಯತೀವ ಸುಮನೋಹರಂ ।
ಸಪ್ತಭಿಃ ಪರಿಖಾಭಿಶ್ಚ ಗಭೀರಾಭಿಶ್ಚ ವೇಷ್ಟಿತಂ ॥ ೧೨ ॥

ಪ್ರಾಕಾರೈಃ ಸಪ್ತಭಿರ್ಯುಕ್ತಂ ದ್ವಾರಾಣಾಂ ಶತಕೈಸ್ತಥಾ ।
ನಾನಾರತ್ನೈಶ್ಚ ಮಣಿಭಿರ್ನಿರ್ಮಿತಂ ವಿಶ್ವಕರ್ಮಣಾ ॥ ೧೩ ॥

ನಗರಸ್ಯ ಬಹಿರ್ದ್ವಾರಂ ದದೃಶುರ್ವರಯಾತ್ರಿಣಃ ।
ರಕ್ಷಿತಂ ರಕ್ಷಕೈಃ ಸಾರ್ಧಂ ಚತುರ್ಭಿಶ್ಚ ಮಹಾರಥೈಃ ॥ ೧೪ ॥

---

ಅದಿತಿಯೂ ದಿತಿಯೂ ಇವರೇ ಮೊದಲಾದ ಸ್ತ್ರೀಯರು ಮಂಗಳೋತ್ಸವಪೂರ್ವಕವಾಗಿ ರೇವತಿಯನ್ನು ಮನೆಗೆ ಪ್ರವೇಶಮಾಡಿಸಿದರು.

೧೦. ವಸುದೇವನ ಪತ್ನಿಯು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದಳು. ಸಂತೋಷದಿಂದ ಅವರಿಗೆ ಧನವನ್ನು ಕೊಟ್ಟಳು ಮತ್ತು ಮಂಗಲಾಶೀರ್ವಾದವನ್ನು ಮಾಡಿಸಿದಳು.

೧೧. ಅನಂತರ ದೇವತೆಗಳೂ ಮುನಿಗಳೂ ರಾಜೇಂದ್ರರೂ ಕೂಡ ತಮ್ಮ ತಮ್ಮ ಸೈನ್ಯದೊಡನೆ ಸಂತೋಷಗೊಂಡವರಾಗಿ ವಿಲಾಸದಿಂದ ಕುಂಡಿನನಗರವನ್ನು ಪ್ರವೇಶಿಸಿದರು.

೧೨–೧೩. ಅವರೆಲ್ಲರೂ ಅತ್ಯಂತ ಮನೋಹರವಾದ ಆಳವಾದ ಏಳುಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವ ಏಳುಕೋಟೆಗಳಿಂದ ಕೂಡಿರುವ ನೂರು ಬಾಗಿಲುಗಳಿಂದ ಪ್ರಕಾಶಿಸುತ್ತಿರುವ ನಾನಾವಿಧವಾದ ರತ್ನಗಳಿಂದಲೂ ಮಣಿಗಳಿಂದಲೂ ವಿಶ್ವಕರ್ಮನಿಂದ ಮಾಡಲ್ಪಟ್ಟಿರುವ ಆ ನಗರವನ್ನು ನೋಡಿದರು.

೧೪. ವರನಕಡೆಯವರು ದ್ವಾರಪಾಲಕರೊಡನೆ ನಾಲ್ಕುಮಂದಿ ಮಹಾರಥರಿಂದ ರಕ್ಷಿಸಲ್ಪಡುತ್ತಿರುವ ಊರಿನ ಹೊರಬಾಗಿಲನ್ನು ನೋಡಿದರು.

ರುಕ್ಮೀ ಚ ಶಿಶುಪಾಲಶ್ಚ ದಂತವಕ್ರೋ ಮಹಾಬಲೀ ।
ಶಾಲ್ವೋ ಮಾಯಾವಿನಾಂ ಶ್ರೇಷ್ಠೋ ಯುದ್ಧಶಾಸ್ತ್ರವಿಶಾರದಃ ॥ ೧೫ ॥

ನಾನಾಶಸ್ತ್ರೈಸ್ತಥಾಸ್ತ್ರೈಶ್ಚ ರಥಸ್ಥಶ್ಚ ರಣೋನ್ಮುಖಃ ।
ವಿಲೋಕ್ಯ ಕೃಷ್ಣಸೈನ್ಯಂ ಚ ಚುಕೋಪ ನೃಪನಂದನಃ ॥ ೧೬ ॥

ಉವಾಚ ನಿಷ್ಠುರಂ ವಾಕ್ಯಂ ಶ್ರುತಿತೀಕ್ಷ್ಣಂ ಸುದುಷ್ಕರಂ ।
ಉಪಹಾಸ್ಯ ಮುನೀಂದ್ರಾಂಶ್ಚ ದೇವಾಂಶ್ಚ ಮುನಿಪುಂಗವಾನ್ ॥ ೧೭ ॥

॥ ರುಕ್ಮಿರುವಾಚ ॥

ಅಹೋ ಕಾಲಕೃತಂ ಕರ್ಮ ದೈವಂ ಚ ಕೇನ ವಾರ್ಯತೇ ।
ಕಿಂ ವಾಹಂ ಕಥಯಿಷ್ಯಾಮಿ ದೇವೇಂದ್ರಾಣಾಂ ಚ ಸಂಸದಿ ॥ ೧೮ ॥

ಗೃಹೀತುಂ ರುಕ್ಮಿಣೀಂ ಕನ್ಯಾಂ ದೇವಯೋಗ್ಯಾಂ ಮನೋಹರಾಂ ।
ಆಯಾತಿ ದೇವೈರ್ಮುನಿಭಿರ್ನಂದಸ್ಯ ಪಶುರಕ್ಷಕಃ ॥ ೧೯ ॥

---

೧೫–೧೬. ರುಕ್ಮಿಯೂ ಶಿಶುಪಾಲನೂ ಮಹಾಬಲಶಾಲಿಯಾದ ದಂತವಕ್ರನೂ ಮಾಯಾವಿಗಳಲ್ಲೆಲ್ಲ ಶ್ರೇಷ್ಠನಾದ ಶಾಲ್ವನೂ ಇವರುಗಳೆಲ್ಲರೂ ಯುದ್ಧಶಾಸ್ತ್ರದಲ್ಲಿ ನಿಪುಣರಾಗಿ ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಧರಿಸಿದವರಾಗಿ ರಥದಲ್ಲಿ ಕುಳಿತು ಯುದ್ಧಮಾಡುವುದರಲ್ಲಿ ಆಸಕ್ತರಾಗಿದ್ದರು. ರಾಜಕುಮಾರನು ಕೃಷ್ಣನ ಸೈನ್ಯವನ್ನು ನೋಡಿ ಕೋಪಗೊಂಡನು.

೧೭. ಮುನೀಂದ್ರರನ್ನೂ ದೇವೇಂದ್ರರನ್ನೂ ಮುನಿಪುಂಗವರನ್ನೂ ಉಪಹಾಸ್ಯಮಾಡುತ್ತ ನಿಷ್ಠುರವೂ ಕಿವಿಗೆ ಕಠೋರವೂ ಅತ್ಯಂತ ದುಷ್ಕರವೂ ಆದ ಮಾತನ್ನಾಡಿದನು.

೧೮. ರುಕ್ಮಿಯು ಹೇಳುತ್ತಾನೆ :— ಕಾಲವು ಮಾಡುವ ಕೆಲಸವು ಆಶ್ಚರ್ಯಕರವಾದುದು. ದೈವವನ್ನು ಯಾವನು ತಡೆಯುತ್ತಾನೆ. ದೇವಶ್ರೇಷ್ಠರ ಸಭೆಯಲ್ಲಿ ನಾನು ಏನನ್ನು ಹೇಳಲಿ.

೧೯. ದೇವತೆಗಳಿಗೆ ಯೋಗ್ಯಳೂ ಮನೋಹರಳೂ ಆದ ರುಕ್ಮಿಣಿಯೆಂಬ ಕನ್ಯೆಯನ್ನು ಮದುವೆಯಾಗುವುದಕ್ಕಾಗಿ ನಂದನ ದನಕಾಯುವವನು ದೇವತೆಗಳೊಡನೆಯೂ ಮುನಿಗಳೊಡನೆಯೂ ಬರುತ್ತಿರುವನು.

ಸಾಕ್ಷಾಜ್ಜಾರಶ್ಚ ಗೋಪೀನಾಂ ಗೋಪೋಚ್ಛಿಷ್ಟಾನ್ನಭೋಜನಃ ।
ಜಾತೇಶ್ಚ ನಿರ್ಣಯೋ ನಾಸ್ತಿ ಭಕ್ಷ್ಯೈಮೈಥುನಯೋಸ್ತಥಾ ॥ ೨೦ ॥

ಕಿನ್ನು ರಾಜೇಂದ್ರಪುತ್ರಶ್ಚ ಕಿನ್ನು ವಾ ಮುನಿಪುತ್ರಕಃ ।
ವಸುದೇವಃ ಕ್ಷತ್ರಿಯಶ್ಚ ಭಕ್ಷಣಂ ವೈಶ್ಯಮಂದಿರೇ ॥ ೨೧ ॥

ಶಿಶುಕಾಲೇ ಚ ಸ್ತ್ರೀಹತ್ಯಾ ಕೃತಾನೇನ ದುರಾತ್ಮನಾ ।
ಕುಬ್ಜಾ ಮೃತಾ ಚ ಸಂಭೋಗಾದ್ವಾಸಸಾ ರಜಕೋ ಮೃತಃ ॥ ೨೨ ॥

ರಾಜೇಂದ್ರಸ್ಯ ವಧೋ ದುಷ್ಟೋ ಬ್ರಹ್ಮಹತ್ಯಾಂ ಲಭೇದ್ಧ್ರುವಂ ।
ಮಥುರಾಯಾಂ ಚ ಧರ್ಮಿಷ್ಠಃ ಸದ್ಯಃ ಕಂಸೋ ನಿಪಾತಿತಃ ॥ ೨೩ ॥

॥ ಶಾಲ್ವ ಉವಾಚ ॥

ಯದುಕ್ತಂ ರುಕ್ಮಿಣಾ ದೇವ ಕಿಮಸತ್ಯಂ ಚ ತತ್ರ ವೈ ।
ಕೋ ವಾಯಂ ರುಕ್ಮಿಣೀಭರ್ತಾ ನಂದಸ್ಯ ಪಶುರಕ್ಷಕಃ ॥ ೨೪ ॥

---

೨೦. ಪ್ರತ್ಯಕ್ಷವಾಗಿ ಗೋಪಿಯರ ಜಾರನೂ ಗೋಪಾಲಕರ ಎಂಜಲನು ತಿನ್ನುವವನೂ ಆದ ಕೃಷ್ಣನಿಗೆ ತಿನ್ನುವವಿಷಯದಲ್ಲಿಯೂ ಮೈಥುನ ವಿಷಯದಲ್ಲಿಯೂ ಜಾತಿಯನಿಯಮವೇ ಇಲ್ಲ.

೨೧. ಅವನೇನು ರಾಜೇಂದ್ರನ ಮಗನೇ? ಅಥವಾ ಮುನಿಕುಮಾರನೇ? ವಸುದೇವನು ಕ್ಷತ್ರಿಯನು, ವೈಶ್ಯರ ಮನೆಯಲ್ಲಿ ಊಟಮಾಡುತ್ತಾನೆ.

೨೨. ಈ ದುರಾತ್ಮನಿಂದ ಶಿಶುವಾಗಿರುವ ಕಾಲದಲ್ಲಿಯೇ ಸ್ತ್ರೀಹತ್ಯೆಯು ಮಾಡಲ್ಪಟ್ಟಿತು. ಸಂಭೋಗನಿಮಿತ್ತದಿಂದ ಕುಬ್ಜೆಯು ಸತ್ತುಹೋದಳು. ಬಟ್ಟೆಯ ನಿಮಿತ್ತದಿಂದ ಅಗಸನು ಸತ್ತುಹೋದನು.

೨೩. ರಾಜೇಂದ್ರನ ವಧೆಮಾಡಿ ದುಷ್ಟನಾದವನು ಖಂಡಿತವಾಗಿಯೂ ಬ್ರಹ್ಮ ಹತ್ಯೆಯನ್ನು ಹೊಂದುತ್ತಾನೆ. ಮಥುರಾಪಟ್ಟಣದಲ್ಲಿ ಧರ್ಮಿಷ್ಠನಾದ ಕಂಸನು ಇವನಿಂದ ನಾಶಮಾಡಲ್ಪಟ್ಟಿರುವನು.

೨೪. ಶಾಲ್ವನು ಹೇಳುತ್ತಾನೆ :— ಎಲೈ ಸ್ವಾಮಿಯೇ! ರುಕ್ಮಿಯು ಯಾವ ಮಾತನ್ನು ಹೇಳಿರುವನೋ ಅದರಲ್ಲಿ ಅಸತ್ಯವಾದುದು ಯಾವುದು? ನಂದನ ದನ ಗಳನ್ನು ಕಾಯುವ ಈ ಕೃಷ್ಣನು ರುಕ್ಮಿಣಿಯ ಗಂಡನಾಗಲು ಯಾವನು?

|| ಶಿಶುಪಾಲ ಉವಾಚ ||

ಅಹೋ ಭುವಿ ಕಿಮಾಶ್ಚರ್ಯಂ ದೇವಾ ಬ್ರಹ್ಮಾದಯಸ್ತಥಾ ।
ಮುನೀಂದ್ರಾ ಬ್ರಹ್ಮಣಃ ಪುತ್ರಾಶ್ಚಾಯಯುರ್ಮಾನವಾಜ್ಞಯಾ || ೨೫ ||

|| ದಂತವಕ್ತ್ರ ಉವಾಚ ||

ಸಂತತಂ ಬ್ರಾಹ್ಮಣಾ ಲಬ್ಧಾ ದೇವಾಶ್ಚ ಭಕ್ತವತ್ಸಲಾಃ ।
ಆಯಯುರ್ಬ್ರಹ್ಮಪುತ್ರಾಶ್ಚ ನಂದಪುತ್ರಾಜ್ಞಯಾ ಕಥಂ || ೨೬ ||

ತೇಷಾಂ ಚ ವಚನಂ ಶ್ರುತ್ವಾ ಚುಕೋಪ ದೇವಸಂಘಕಃ ।
ಮುನಿರಾಜೇಂದ್ರಸಂಘಶ್ಚ ಲಾಂಗಲೀತ್ಯಾದಿಕಂ ತಥಾ || ೨೭ ||

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ರುಕ್ಮಿಣ್ಯುದ್ವಾಹೇ
ಷಡಧಿಕಶತತಮೋಽಧ್ಯಾಯಃ.

---

೨೫. ಶಿಶುಪಾಲನು ಹೇಳುತ್ತಾನೆ :— ಅಬ್ಬಾ ಭೂಲೋಕದಲ್ಲಿ ಇದೇನಾಶ್ಚರ್ಯವು ? ಬ್ರಹ್ಮನೇ ಮೊದಲಾದ ದೇವತೆಗಳೂ ಮುನಿಶ್ರೇಷ್ಠರೂ ಬ್ರಹ್ಮಪುತ್ರರೂ ಮಾನವನ ಅಪ್ಪಣೆಯಂತೆ ಬಂದಿರುವರಲ್ಲಾ !!!

೨೬. ದಂತವಕ್ರನು ಹೇಳುತ್ತಾನೆ :— ಎಡೆಬಿಡದೆ ಬ್ರಾಹ್ಮಣರು ಬಂದಿರುವರು. ದೇವತೆಗಳೂ ಕೂಡ ಭಕ್ತರಲ್ಲಿ ಪ್ರೀತಿಯುಳ್ಳವರಾಗಿ ಬಂದಿರುವರು. ಇವರೆಲ್ಲರೂ ಬ್ರಹ್ಮಪುತ್ರನಾದ ಕೃಷ್ಣನ ಅಪ್ಪಣೆಯಿಂದ ಹೇಗೆ ಬಂದರು !!!

೨೭. ಇವರುಗಳ ಆ ಪ್ರಕಾರವಾದ ಮಾತನ್ನು ಕೇಳಿ ದೇವತೆಗಳ ಸಂಘವೂ ಮುನಿಗಳ ಮತ್ತು ರಾಜರ ಸಮೂಹವೂ ಬಲರಾಮ ಮುಂತಾದವರ ಗುಂಪೂ ಕೋಪಗೊಂಡಿತು.

ಇಂತು ಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿನ
ನಾರಾಯಣ ನಾರದ ಸಂವಾದದಲ್ಲಿ ರುಕ್ಮಿಣಿಯ ವಿವಾಹದಲ್ಲಿ
ನೂರಆರನೆಯ ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಸಪ್ತಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಅಥ ಕೋಪಪರೀತಶ್ಚ ಬಲದೇವೋ ಮಹಾಬಲಃ ।
ಹಲೇನ ರುಕ್ಮಿಯಾನಂ ಚ ಬಭಂಜ ಮುನಿಪುಂಗವ || ೧ ||

ಘೋಟಕಾನ್ಸಾರಥಿಂ ಚೈವ ನಿಹತ್ಯ ಜಗತೀಪತಿಃ ।
ಭೂಮಿಷ್ಠಂ ಚಾಪಿ ಪಾಪಿಷ್ಠಂ ರುಕ್ಮಿಂ ಹಂತುಂ ಜಗಾಮ ಸಃ || ೨ ||

ರುಕ್ಮೀ ಚ ಶರಜಾಲೇನ ವಾರಯಾಮಾಸ ಲೀಲಯಾ ।
ನಾಗಾಸ್ತ್ರಂ ಯೋಜಯಾಮಾಸ ಬದ್ಧುಂ ಹಲಿನಮೀಶ್ವರಂ || ೩ ||

ನಾಗಾಸ್ತ್ರಂ ಗಾರುಡೇನೈವ ಸಂಜಹಾರ ಹಲೀ ಸ್ವಯಂ ।
ಜಗ್ರಾಹ ಕೋಪಾದ್ರುಕ್ಮೀ ಚ ಪರಂ ಪಾಶುಪತಂ ಮುನೇ || ೪ ||

---

### ನೂರಏಳನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ:— ಎಲೈ ಮುನಿಶ್ರೇಷ್ಠನಾದ ನಾರದನೇ! ಅನಂತರ ಮಹಾಬಲಶಾಲಿಯಾದ ಬಲದೇವನು ಕೋಪಗೊಂಡವನಾಗಿ ತನ್ನ ನೇಗಿಲಿನಿಂದ ರುಕ್ಮಿಯ ರಥವನ್ನು ಮುರಿದುಹಾಕಿದನು.

೨. ರಾಜನಾದ ಆ ಬಲದೇವನು ಅವನ ಕುದುರೆಗಳನ್ನೂ ಸಾರಥಿಯನ್ನೂ ಕೊಂದು ನೆಲದಮೇಲೆ ನಿಂತಿರುವ ರುಕ್ಮಿಯನ್ನು ಕೊಲ್ಲಲು ಬಂದನು.

೩. ರುಕ್ಮಿಯು ಬಾಣಗಳ ಸಮೂಹದಿಂದ ಸುಲಭವಾಗಿ ತಡೆದನು. ರಾಜನಾದ ಬಲದೇವನನ್ನು ಕಟ್ಟುವುದಕ್ಕಾಗಿ ನಾಗಾಸ್ತ್ರವನ್ನು ಬಿಲ್ಲಿನಲ್ಲಿ ಹೂಡಿದನು.

೪–೫. ಬಲದೇವನು ಆ ನಾಗಾಸ್ತ್ರವನ್ನು ಗಾರುಡಾಸ್ತ್ರದಿಂದ ನಾಶಮಾಡಿದನು. ಎಲೈ ನಾರದ ಮುನಿಯೇ! ರುಕ್ಮಿಯೂ ಕೂಡ ಕೋಪಗೊಂಡವನಾಗಿ

ಅವ್ಯರ್ಥಂ ವೈರಿಮರ್ದಂ ಚ ಶತಸೂರ್ಯಸಮಪ್ರಭಂ ।
ಅಭಿತೋ ಹಲಿನಾ ರುಕ್ಮೀ ಜೃಂಭಣಾಸ್ತ್ರೇಣ ಜೃಂಭಿತಃ ॥ ೫ ॥

ಭೂಮಿಷ್ಠಃ ಸ್ಥಾಣುವದ್ರುಕ್ಮೀ ನಿದ್ರಾಸ್ತ್ರೇಣೈವ ನಿದ್ರಿತಃ ।
ಶಾಲ್ವಸ್ತಂ ನಿದ್ರಿತಂ ದೃಷ್ಟ್ವಾ ಶತಬಾಣಾನ್ಮುಮೋಚ ತಂ ॥ ೬ ॥

ಶೈಲವೃಷ್ಟಿಂ ಶಿಲಾವೃಷ್ಟಿಂ ಜಲವೃಷ್ಟಿಂ ಚಕಾರ ಸಃ ।
ಜ್ವಲದಂಗಾರವೃಷ್ಟಿಂ ಚ ಶರವೃಷ್ಟಿಂ ಚಕಾರ ಹ ॥ ೭ ॥

ಬಲಾಚ್ಚಾಸ್ತ್ರೇಣ ಸರ್ವಾಣಿ ವಾರಯಾಮಾಸ ಲಾಂಗಲೀ ।
ಹಲೇನ ತದ್ರಥಂ ಚೂರ್ಣಂ ಚಕಾರ ರಣಮಧ್ಯತಃ ॥ ೮ ॥

ಘೋಟಕಾನ್ಸಾರಥಿಂ ಚೈವ ಜಘಾನ ಚೈವ ಲೀಲಯಾ ।
ಕೋಪಾದ್ಬಲೇನ ತಂ ಹಂತುಂ ವಾಗ್ಬಭೂವಾಶರೀರಿಣೀ ॥ ೯ ॥

---

ವ್ಯರ್ಥವಾಗದಿರುವ ಶತ್ರುವನ್ನು ನಾಶಮಾಡುವ ನೂರು ಸೂರ್ಯರಿಗೆ ಸಮನಾದ ಕಾಂತಿಯುಳ್ಳ ಉತ್ತಮವಾದ ಪಾಶುಪತಾಸ್ತ್ರವನ್ನು ತೆಗೆದುಕೊಂಡನು. ಬಲದೇವನಿಂದ ಸುತ್ತಲೂ ಜೃಂಭಣಾಸ್ತ್ರದಿಂದ ರುಕ್ಮಿಯು ಜೃಂಭಿಸಲ್ಪಟ್ಟನು.

೬–೭. ರುಕ್ಮಿಯು ನೆಲದಮೇಲೆ ಮೋಟುಮರದಂತೆ ನಿಂತವನಾಗಿ ನಿದ್ರಾಸ್ತ್ರದ ಪ್ರಭಾವದಿಂದ ನಿದ್ರೆಮಾಡಿದನು. ಶಾಲ್ವನು ಅವನು ನಿದ್ರಿಸುತ್ತಿರುವುದನ್ನು ನೋಡಿ ಅವನಮೇಲೆ ನೂರುಬಾಣಗಳನ್ನು ಬಿಟ್ಟನು ಮತ್ತು ಅವನು ಬೆಟ್ಟಗಳ ಮಳೆಯನ್ನೂ ಕಲ್ಲಿನಮಳೆಯನ್ನೂ ಪ್ರಕಾಶಿಸುತ್ತಿರುವ ಕೆಂಡದ ಮಳೆಯನ್ನೂ ಸುರಿಸಿದನು.

೮. ಬಲದೇವನು ಪರಾಕ್ರಮದಿಂದ ಆ ಎಲ್ಲ ಅಸ್ತ್ರಗಳನ್ನೂ ತಡೆದನು ಮತ್ತು ಯುದ್ಧ ಮಧ್ಯದಲ್ಲಿ ತನ್ನ ನೇಗಿಲಿನಿಂದ ಆ ಶಾಲ್ವನ ರಥವನ್ನು ಪುಡಿಪುಡಿಮಾಡಿದನು.

೯. ಕುದುರೆಗಳನ್ನೂ ಸಾರಥಿಯನ್ನೂ ಕೂಡ ಸುಲಭವಾಗಿ ಕೊಂದನು. ಕೋಪಗೊಂಡವನಾಗಿ ಬಲದಿಂದ ಅವನನ್ನು ಕೊಲ್ಲುವುದಕ್ಕಾಗಿ ಹೋಗುತ್ತಿರಲು ಆಗ ಅಶರೀರವಾಣಿಯೊಂದು ಉಂಟಾಯಿತು.

ತ್ಯಜ ಶಾಲ್ವಂ ಕೃಷ್ಣವಧ್ಯಂ ತವ ಕಿಂ ಪೌರುಷಂ ರಣೇ ।
ಯಸ್ಯ ಮೂರ್ಧ್ನಿ ಚ ಬ್ರಹ್ಮಾಂಡಂ ಶೂರ್ಪೇ ಚ ಸರ್ಷಪಂ ಯಥಾ ॥೧೦॥

ತಚ್ಛ್ರುತ್ವಾ ಬಲದೇವಶ್ಚ ಹಲೇನ ತಸ್ಯ ಮಸ್ತಕಂ ।
ಚಕಾರ ಚೂರ್ಣಂ ವ್ಯಥಿತಃ ಪಪಾತ ರಣಮೂರ್ಧನಿ ॥ ೧೧ ॥

ಶಾಲ್ವಸ್ಯ ಪತನಂ ದೃಷ್ಟ್ವಾ ಶಿಶುಪಾಲೋ ಮಹಾಬಲೀ ।
ಚಕಾರ ಶರವೃಷ್ಟಿಂ ಚ ಜಲವೃಷ್ಟಿಂ ಯಥಾ ಭುವಿ ॥ ೧೨ ॥

ಹಲೀ ತಸ್ಯ ರಥಂ ಚೂರ್ಣಂ ಚಕಾರ ಲಾಂಗಲೇನ ಚ ।
ಅರ್ಧಚಂದ್ರೇಣ ತದ್ಬಾಣಾನ್ವಾರಯಾಮಾಸ ಲೀಲಯಾ ॥ ೧೩ ॥

ತಂ ಹಂತುಂ ಶಂಕರಃ ಸಾಕ್ಷಾನ್ನಿಷೇಧಂ ಚ ಚಕಾರ ತಂ ।
ಕೃಷ್ಣವಧ್ಯಂ ತ್ಯಜ ಬಲ ಪಾರ್ಶದಪ್ರವರಂ ಹರೇಃ ॥ ೧೪ ॥

---

೧೦. ಕೃಷ್ಣನಿಂದ ಕೊಲ್ಲಲ್ಪಡಬೇಕಾಗಿರುವ ಶಾಲ್ವನನ್ನು ಬಿಟ್ಟುಬಿಡು. ಯಾವನತಲೆಯಮೇಲೆ ಬ್ರಹ್ಮಾಂಡವು ಮೊರದಲ್ಲಿ ಸಾಸುವೆಯಂತೆ ಇದೆಯೋ ಅಂಥಾ ನಿನಗೆ ಈ ಯುದ್ಧದಲ್ಲಿ ಪರಾಕ್ರಮವು ಸಮನಲ್ಲ.

೧೧. ಬಲದೇವನು ಆ ಮಾತನ್ನು ಕೇಳಿ ನೇಗಿಲಿನಿಂದ ಅವನ ನೆತ್ತಿಯನ್ನು ಪುಡಿಮಾಡಿದನು. ಸಾಲ್ವನು ವ್ಯಥೆಗೊಂಡವನಾಗಿ ಯುದ್ಧರಂಗದಲ್ಲಿ ಬಿದ್ದನು.

೧೨. ಶಾಲ್ವನು ಬಿದ್ದುದನ್ನು ಕಂಡು ಮಹಾಬಲಶಾಲಿಯಾದ ಶಿಶುಪಾಲನು ಭೂಮಿಯ ಮೇಲೆ ನೀರಿನಮಳೆಯು ಬೀಳುವಂತೆ ಬಾಣಗಳ ಮಳೆಯನ್ನು ಸುರಿಸಿದನು.

೧೩. ಬಲದೇವನು ಆ ಶಿಶುಪಾಲನ ರಥವನ್ನು ನೇಗಿಲಿನಿಂದ ಪುಡಿಪುಡಿ ಮಾಡಿದನು ಮತ್ತು ಅರ್ಧಚಂದ್ರಾಕಾರವಾದ ಬಾಣದಿಂದ ಆ ಶಿಶುಪಾಲನ ಬಾಣಗಳನ್ನು ಸುಲಭವಾಗಿ ತಡೆಗಟ್ಟಿದನು.

೧೪. ಅವನನ್ನು ಕೊಲ್ಲಲು ಹೊರಟ ಬಲದೇವನನ್ನು ಶಂಕರನು ಪ್ರತ್ಯಕ್ಷನಾಗಿ ಬಂದು ಎಲೈ ಬಲದೇವನೇ! ಕೃಷ್ಣನಿಂದ ಕೊಲ್ಲಲ್ಪಡತಕ್ಕವನಾದ ಕೃಷ್ಣನ ಸೇವಕರಲ್ಲಿ ಮುಖ್ಯನಾದ ಇವನನ್ನು ಬಿಟ್ಟುಬಿಡು ಎಂದು ತಡೆದನು.

ದಂತವಕ್ರಸ್ಯ ದಂತಂ ಚ ಬಭಂಜ ಸ ಹಲೇನ ಚ ।
ಸುಪ್ರವೃತ್ತಸ್ಯ ಯುದ್ಧೇನ ತೇ ಸರ್ವೇ ಜಹಸುಶ್ಚ ತಂ ॥ ೧೫ ॥

ಬಲಸ್ಯ ವಿಕ್ರಮಂ ದೃಷ್ಟ್ವಾ ಸರ್ವೇ ವೀರಾಃ ಪಲಾಯಿತಾಃ ।
ಚಕ್ರುಃ ಪ್ರವೇಶನಂ ಸರ್ವೇ ಕುಂಡಿನಂ ವರಯಾತ್ರಿಕಾಃ ॥ ೧೬ ॥

ಏತಸ್ಮಿನ್ನಂತರೇ ತತ್ರ ಶತಾನಂದೋ ಮಹಾಮುನಿಃ ।
ಕೋಟಿಭಿರ್ಮುನಿಭಿಃ ಸಾರ್ಧಮಾಜಗಾಮ ಹರೇಃ ಪುರಃ ॥ ೧೭ ॥

ಪುರಂ ಪ್ರವೇಶಯಾಮಾಸ ಶತದ್ವಾರಂ ಚ ದುರ್ಗಮಂ ।
ಅಗಮ್ಯಂ ಚಾಪಿ ಶತ್ರೂಣಾಂ ಮಿತ್ರಾಣಾಂ ಚ ಸುಖಪ್ರದಂ ॥ ೧೮ ॥

ದೇವಕನ್ಯಾ ನಾಗಕನ್ಯಾ ರಾಜಕನ್ಯಾಸ್ತಥೈವ ಚ ।
ಮುನಿಕನ್ಯಾ ವರಂ ದ್ರಷ್ಟುಂ ಸಸ್ಮಿತಾಶ್ಚ ಸಮಾಯಯುಃ ॥ ೧೯ ॥

---

೧೫. ಬಲದೇವನು ದಂತವಕ್ರನ ಹಲ್ಲನ್ನು ನೇಗಿಲಿನಿಂದ ಸುಲಭವಾಗಿ ನಾಶ ಮಾಡಿದನು. ಪ್ರಸಿದ್ಧನಾದವನ ಯುದ್ಧದಿಂದ ಎಲ್ಲರೂ ನಕ್ಕರು

೧೬. ಬಲರಾಮನ ಪರಾಕ್ರಮವನ್ನು ನೋಡಿ ವೀರರೆಲ್ಲರೂ ಓಡಿಹೋದರು. ವರನಕಡೆಯ ಯಾತ್ರಿಕರೆಲ್ಲರೂ ಕುಂಡಿನ ನಗರವನ್ನು ಪ್ರವೇಶಮಾಡಿದರು.

೧೭. ಈ ಸಮಯದಲ್ಲಿ ಶತಾನಂದನೆಂಬ ಮಹಾಮುನಿಯು ಒಂದುಕೋಟಿ ಮುನಿಗಳಿಂದೊಡಗೂಡಿದವನಾಗಿ ಹರಿಯಮುಂದೆ ಬಂದುನಿಂತನು.

೧೮. ನೂರುಬಾಗಿಲುಗಳುಳ್ಳ ದುರ್ಗಮವಾದ ಶತ್ರುಗಳಿಗೆ ಪ್ರವೇಶಿಸಲಸಾಧ್ಯವಾದ ಮಿತ್ರರಿಗೆ ಸುಖವನ್ನುಂಟುಮಾಡುವುದಾದ ಪಟ್ಟಣವನ್ನು ಪ್ರವೇಶ ಮಾಡಿಸಿದನು.

೧೯. ವರನನ್ನು ನೋಡುವುದಕ್ಕೋಸ್ಕರ ದೇವಕನ್ಯೆಯರೂ ನಾಗಕನ್ಯೆಯರೂ ಮತ್ತು ರಾಜಕನ್ಯೆಯರೂ ಮುನಿಕನ್ಯೆಯರೂ ಕೂಡ ನಗುಮುಖದಿಂದ ಬಂದರು.

ದದೃಶುರ್ಯೋಷಿತಃ ಸರ್ವಾ ನಿಮೇಷರಹಿತೇನ ಚ ।
ಪ್ರಸನ್ನಂ ಕಾರಯಾಮಾಸ ಸಸ್ಮಿತಶ್ಚಂದ್ರಶೇಖರಃ ॥ ೨೦ ॥

ರತ್ನೇಂದ್ರಸಾರನಿರ್ಮಾಣರಥಸ್ಥಂ ಪರಮೇಶ್ವರಂ ।
ಸರ್ವೇಷಾಂ ಪರಮಾತ್ಮಾನಂ ಭಕ್ತಾನುಗ್ರಹವಿಗ್ರಹಂ ॥ ೨೧ ॥

ನವೀನಜಲದಶ್ಯಾಮಂ ಶೋಭಿತಂ ಪೀತವಾಸಸಾ ।
ಚಂದನೋಕ್ಷಿತಸರ್ವಾಂಗಂ ವನಮಾಲಾವಿಭೂಷಿತಂ ॥ ೨೨ ॥

ರತ್ನಕೇಯೂರವಲಯರತ್ನಮಾಲಾಕುಲೋಜ್ಜ್ವಲಂ ।
ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತಂ ॥ ೨೩ ॥

ರತ್ನೇಂದ್ರಸಾರನಿರ್ಮಾಣಕ್ವಣನ್ಮಂಜೀರರಂಜಿತಂ ।
ಸಸ್ಮಿತಂ ಮುರಲೀಹಸ್ತಂ ಪಶ್ಯಂತಂ ರತ್ನದರ್ಪಣಂ ॥ ೨೪ ॥

ಸಪ್ತಭಿಃ ಪಾರ್ಷದೈರ್ಗೋಪೈಃ ಸೇವಿತಂ ಶ್ವೇತಚಾಮರೈಃ ।
ನವಯೌವನಸಂಪನ್ನಂ ಶರತ್ಕಮಲಲೋಚನಂ ॥ ೨೫ ॥

---

೨೦–೨೧. ಸ್ತ್ರೀಯರೆಲ್ಲರೂ ಎವೆಯಿಕ್ಕದ ದೃಷ್ಟಿಯಿಂದ ನೋಡಿದರು. ಪರಮೇಶ್ವರನು ಮಂದಹಾಸದಿಂದ ಕೂಡಿದವನಾಗಿ ಸಕಲರಿಗೂ ಪರಮಾತ್ಮನಾದ ಭಕ್ತರಿಗೆ ಅನುಗ್ರಹಮಾಡಲೋಸ್ಕರ ಶರೀರವನ್ನು ಧರಿಸಿದ ರತ್ನಶ್ರೇಷ್ಠಗಳ ಸಾರದಿಂದ ಮಾಡಿರುವ ರಥದ ಮೇಲಿರುವ ಕೃಷ್ಣಪರಮಾತ್ಮನನ್ನು ಪ್ರಸನ್ನನನ್ನಾಗಿ ಮಾಡಿಸಿದನು.

೨೨–೩೦. ಹೊಸಮೋಡದಂತೆ ಕಪ್ಪಾದ ಪೀತಾಂಬರದಿಂದ ಶೋಭಿಸುತ್ತಿರುವ ಚಂದನದಿಂದ ನೆನೆಸಲ್ಪಟ್ಟ ಸಕಲ ಶರೀರವುಳ್ಳ ವನಮಾಲೆಯಿಂದ ಅಲಂಕೃತನಾದ ರತ್ನಮಯವಾದ ಭುಜಕೀರ್ತಿ ಬಳೆ ರತ್ನಮಾಲಿಕೆ ಇವುಗಳಿಂದ ಪ್ರಕಾಶಮಾನನಾದ ಕಪೋಲ ಪ್ರದೇಶಗಳಲ್ಲಿ ಪ್ರಕಾಶಮಾನವಾಗಿರುವ ರತ್ನಮಯವಾದ ಎರಡು ಕುಂಡಲಗಳುಳ್ಳ ರತ್ನಶ್ರೇಷ್ಠಗಳ ಸಾರದಿಂದ ಮಾಡಿದ ಶಬ್ದಮಾಡುತ್ತಿರುವ ಕಾಲು ಕಡಗಗಳಿಂದ ಮನೋಹರನಾದ ಮಂದಹಾಸವನ್ನು ಬೀರುತ್ತ, ಮುರಳಿಯನು ಕೈಯಲ್ಲಿ ಹಿಡಿದು ರತ್ನಮಯವಾದ ಕನ್ನಡಿಯನ್ನು ನೋಡುತ್ತಿರುವ ಏಳುಮಂದಿ ಸೇವಕರಾದ ಗೋಪರಿಂದ ಬಿಳಿಯ ಚಾಮರಗಳಿಂದ ಸೇವಿಸಲ್ಪಡುತ್ತಲಿರುವ ಹೊಸ

ಶರತ್ಪೂರ್ಣೇಂದುತುಲ್ಯಾಸ್ಯಂ ಭಕ್ತಾನುಗ್ರಹಕಾರಕಂ ।
ಕೋಟಿಕಂದರ್ಪಸೌಂದರ್ಯಂ ಸತ್ಯಂ ನಿತ್ಯಂ ಸನಾತನಂ ॥ ೨೬ ॥

ತೀರ್ಥಪೂತಂ ಕೀರ್ತಿಪೂತಂ ಬ್ರಹ್ಮೇಶಶೇಷವಂದಿತಂ ।
ಪರಮಾಹ್ಲಾದಕಂ ರೂಪಂ ಕೋಟಿಚಂದ್ರಸಮಪ್ರಭಂ ॥ ೨೭ ॥

ಧ್ಯಾನಾಸಾಧ್ಯಂ ದುರಾರಾಧ್ಯಂ ಪರಮಂ ಪ್ರಕೃತೇಃ ಪರಂ ।
ದೂರ್ವಯಾ ಪಟ್ಟಸೂತ್ರಂ ಚ ರತ್ನೇಂದ್ರಸಾರದರ್ಪಣಂ ॥ ೨೮ ॥

ದಧಾನಂ ಕರ್ತ್ಯಕಾಸಾಧ್ಯಂ ಕದಲ್ಯಾಃ ಸ್ಫುಟಮಂಜರೀಂ ।
ಚೂಡಾಂ ತ್ರಿವಿಕ್ರಮಾಕಾರಾಂ ಮಾಲತೀಮಾಲ್ಯಭೂಷಿತಾಂ ॥ ೨೯ ॥

ಪುಷ್ಪಂ ನಾರೀಪ್ರದತ್ತಂ ಚ ಮುಕುಟಂ ಮಸ್ತಕೋಜ್ಜ್ವಲಂ ।
ದೃಷ್ಟ್ವಾ ವರಂ ಯುವತ್ಯಶ್ಚ ಮೂರ್ಛಾಂ ಸಂಪ್ರಾಪುರೀಶ್ವರಂ ॥ ೩೦ ॥

---

ಯೌವನದಿಂದ ಕೂಡಿರುವ ಶರದೃತುವಿನ ಕಮಲದಂತೆ ಕಣ್ಣುಳ್ಳ ಶರದೃತುವಿನ ತುಂಬುಚಂದ್ರನಂತೆ ಮುಖವುಳ್ಳ ಭಕ್ತರಿಗೆ ಅನುಗ್ರಹಮಾಡುವ ಒಂದುಕೋಟಿ ಮನ್ಮಥರಂತೆ ಸೌಂದರ್ಯದಿಂದ ಕೂಡಿದ ಸತ್ಯಸ್ವರೂಪನೂ ನಿತ್ಯಸ್ವರೂಪನೂ ನಾಶ ರಹಿತನೂ ಆದ ತೀರ್ಥಗಳಿಂದ ಪವಿತ್ರನೂ ಕೀರ್ತಿಯಿಂದ ಪವಿತ್ರನೂ ಬ್ರಹ್ಮ ಈಶ್ವರ ಶೇಷ ಇವರುಗಳಿಂದ ನಮಸ್ಕರಿಸಲ್ಪಟ್ಟವನೂ, ಅತ್ಯಂತ ಸಂತೋಷವನ್ನುಂಟುಮಾಡುವ ರೂಪವುಳ್ಳ ಕೋಟಿಚಂದ್ರರಿಗೆ ಸಮನಾದ ಕಾಂತಿಯುಳ್ಳ ಧ್ಯಾನದಿಂದಲೂ, ಹೊಂದಲಸಾಧ್ಯನೂ ಅತಿ ಕಷ್ಟದಿಂದ ಆರಾಧಿಸಲು ಯೋಗ್ಯನೂ, ಪ್ರಕೃತಿಗಿಂತಲೂ ಅತ್ಯುತ್ತಮನಾದ ದೂರ್ವೆಯಿಂದ ಕೂಡಿದ ಪಟ್ಟೆಯ ವಸ್ತ್ರವನ್ನೂ ರತ್ನಮಯವಾದ ಕನ್ನಡಿಯನ್ನೂ ಬಾಳೆಯ ಗೊಂಚಲನ್ನೂ ಧರಿಸಿರುವ ತ್ರಿವಿಕ್ರಮಾಕಾರವಾದ ಮಾಲತೀಮಾಲಿಕೆಯಿಂದ ಅಲಂಕೃತವಾದ ತಲೆಗೂದಲನ್ನು ಧರಿಸಿರುವ ನಾರಿಯರಿಂದ ಕೊಡಲ್ಪಟ್ಟ ಹೂವಿನಿಂದ ಕೂಡಿದ ಕಿರೀಟದಿಂದ ಪ್ರಕಾಶಮಾನವಾದ ತಲೆಯುಳ್ಳ ಈಶ್ವರನಾದ ವರನನ್ನು ನೋಡಿ ಸ್ತ್ರೀಯರು ಮೂರ್ಛೆಗೊಂಡರು.

ರುಕ್ಮಿಣೀಜೀವನಂ ಧನ್ಯಂ ಶ್ಲಾಘ್ಯಮಿತ್ಯೂಚುರೀಪ್ಸಿತಂ ।
ಜಾಮಾತರಂ ಸಾ ದದರ್ಶ ರಾಜ್ಞೀ ಭೀಷ್ಮಕಕಾಮಿನೀ ॥ ೩೧ ॥

ನಿಮೇಷ ರಹಿತಾ ತುಷ್ಟಾ ಪ್ರಸನ್ನವದನೇಕ್ಷಣಾ ।
ರಾಜಾ ಪ್ರಸನ್ನವದನಃ ಸಾಮಾತ್ಯಃ ಸಪುರೋಹಿತಃ ॥ ೩೨ ॥

ಸಮಾಗತ್ಯ ಸುರಾನ್ವಿಪ್ರಾನ್ಭೂತಾಂಶ್ಚ ಪ್ರಣನಾಮ ಸಃ ।
ದದೌ ಯೋಗ್ಯಾಶ್ರಮಂ ತೇಭ್ಯೋ ಭಕ್ಷ್ಯಪೂರ್ಣಂ ಸುಧೋಪಮಂ ॥೩೩॥

ದಿವಾನಿಶಂ ಚಾಪ್ಯುವಾಚ ದೀಯತಾಂ ದೀಯತಾಮಿತಿ ।
ಸುಖಂ ನಿನಾಯ ರಜನೀಂ ದೇವೈಶ್ಚ ಬಾಂಧವೈಃ ಸಹ ॥ ೩೪ ॥

ವಸುದೇವಃ ಪ್ರಭಾತೇ ಚ ಪ್ರಾತಃಕೃತ್ಯಂ ಚಕಾರ ಸಃ ।
ಸ್ನಾತ್ವಾ ಸಂಧ್ಯಾದಿಕಂ ಕೃತ್ವಾ ಧೃತ್ವಾ ಧೌತೇ ಚ ವಾಸಸೀ ॥ ೩೫ ॥

ಚಕಾರ ವೇದಮಂತ್ರೇಣ ಶುಭಾದಿವಾಸನಂ ಹರೇಃ ।
ಸಂಪೂಜ್ಯ ಮಾತೃಕಾಃ ಸರ್ವಾಃ ಸಾಕ್ಷಾಚ್ಚ ಸರ್ವದೇವತಾಃ ॥ ೩೬ ॥

---

೩೧–೩೩. ರುಕ್ಮಿಣಿಯ ಜೀವನವು ಧನ್ಯವೂ ಶ್ಲಾಘ್ಯವೂ ಆದುದು ಎಂದು ಹೇಳಿದರು. ಭೀಷ್ಮಕನ ಪತ್ನಿಯಾದ ರಾಣಿಯು ಅಳಿಯನನ್ನು ಎವೆಯಿಕ್ಕದ ದೃಷ್ಟಿಯಿಂದ ನೋಡಿದಳು. ಮತ್ತು ಸಂತೋಷಗೊಂಡವಳಾಗಿ ಪ್ರಸನ್ನವಾದ ಮುಖ ಮತ್ತು ಕಣ್ಣುಗಳುಳ್ಳವಳಾದಳು. ರಾಜನು ಪ್ರಸನ್ನವಾದ ಮುಖವುಳ್ಳವನಾಗಿ ಮಂತ್ರಿಗಳೊಡನೆಯೂ ಪುರೋಹಿತರೊಡನೆಯೂ ಬಂದು ದೇವತೆಗಳನ್ನೂ ಬ್ರಾಹ್ಮಣರನ್ನೂ ರಾಜರನ್ನೂ ನಮಸ್ಕರಿಸಿದನು. ಅವರೆಲ್ಲರಿಗೂ ಅಮೃತಕ್ಕೆ ಸಮಾನವಾದ ಭಕ್ಷ್ಯಗಳಿಂದ ತುಂಬಿದ ಯೋಗ್ಯವಾದ ಬಿಡಾರಗಳನ್ನು ಕೊಟ್ಟನು.

೩೪. ಹಗಲು ರಾತ್ರಿಯೂ ಕೊಡಿರಿ ಕೊಡಿರಿ ಎಂಬುದಾಗಿ ಹೇಳುತ್ತಿದ್ದನು. ದೇವತೆಗಳೊಡನೆಯೂ, ಬಂಧುಜನರೊಡನೆಯೂ, ಸುಖವಾಗಿ ರಾತ್ರಿಯನ್ನು ಕಳೆದನು.

೩೫–೩೮. ವಸುದೇವನು ಪ್ರಾತಃಕಾಲದಲ್ಲಿ ಆ ಕಾಲಕ್ಕುಚಿತವಾದ ಕಾರ್ಯಗಳನ್ನು ಮಾಡಿದನು. ಮತ್ತು ಸ್ನಾನವನ್ನು ಮಾಡಿ ಸಂಧ್ಯಾವಂದನೆಯೇ ಮೊದಲಾದ ಕೆಲಸಗಳನ್ನು ಮಾಡಿ ಶುಭ್ರವಸ್ತ್ರವನ್ನು ಧರಿಸಿದವನಾಗಿ ವೇದಮಂತ್ರದಿಂದ ಹರಿಗೆ ಮಂಗಳಾರ್ಹವಾದ ಅಭ್ಯುದಯ ಕರ್ಮವನ್ನು ಮಾಡಿದನು. ಎಲ್ಲಾ

ಪ್ರದಾಯ ವಸುಧಾರಾಂ ಚ ವೃದ್ಧಿಶ್ರಾದ್ಧಾದಿಕಂ ತಥಾ।
ಬ್ರಾಹ್ಮಣಾನ್ಭೋಜಯಾಮಾಸ ದೇವಾಂಶ್ಚ ಬಾಂಧವಾಂಸ್ತಥಾ ॥ ೩೭ ॥

ವಾದ್ಯಂ ಚ ವಾದಯಾಮಾಸ ಕಾರಯಾಮಾಸ ಮಂಗಲಂ।
ಸುವೇಷಂ ಕಾರಯಾಮಾಸ ವರಸ್ಯಾಪ್ರತಿಮಸ್ಯ ಚ ॥ ೩೮ ॥

ಸಜ್ಜಂ ಚ ಕಾರಯಾಮಾಸ ನರಯಾನಂ ಸುಶೋಭನಂ।
ಏವಂ ರಾಜಾ ಭೀಷ್ಮಕಶ್ಚ ವಿವಾಹಾರ್ಹಂ ಚ ಮಂಗಲಂ ॥ ೩೯ ॥

ಪುರೋಹಿತೈರ್ವೇದಮಂತ್ರೈಃ ಸರ್ವಕರ್ಮ ಚಕಾರ ಸಃ।
ಮಣಿರತ್ನಂ ಧನಂ ವಾಪಿ ಮುಕ್ತಾಮಾಣಿಕ್ಯಹೀರಕಂ ॥ ೪೦ ॥

ಭಕ್ಷ್ಯದ್ರವ್ಯಂ ಚ ವಸ್ತ್ರಂ ಚಾಪ್ಯುಪಹಾರಮನುತ್ತಮಂ।
ಭಟ್ಟೇಭ್ಯೋ ಬ್ರಾಹ್ಮಣೇಭ್ಯೋಽಪಿ ಭಿಕ್ಷುಕೇಭ್ಯೋ ದದೌ ಮುದಾ ॥ ೪೧ ॥

ವಾದ್ಯಂ ಚ ವಾದಯಾಮಾಸ ಕಾರಯಾಮಾಸ ಮಂಗಲಂ।
ಸುವೇಷಂ ಕಾರಯಾಮಾಸ ರುಕ್ಮಿಣ್ಯಾಶ್ಚ ಮನೋಹರಂ ॥ ೪೨ ॥

---

ಮಾತೃಕೆಯರನ್ನೂ ಪೂಜೆಮಾಡಿ ಪ್ರತ್ಯಕ್ಷವಾಗಿ ಸಮಸ್ತ ದೇವತೆಗಳನ್ನೂ ಪೂಜೆ ಮಾಡಿ ವಸುಧಾರೆಯನ್ನು ಕೊಟ್ಟು ವೃದ್ಧಿಶ್ರಾದ್ಧ ಮುಂತಾದುವುಗಳನ್ನು ಮಾಡಿದವನಾಗಿ ಬ್ರಾಹ್ಮಣರಿಗೂ ದೇವತೆಗಳಿಗೂ ಬಂಧುಗಳಿಗೂ ಭೋಜನವನ್ನು ಮಾಡಿಸಿದನು. ವಾದ್ಯಗಳನ್ನು ಮೊಳಗಿಸಿದನು. ಮಂಗಳವನ್ನು ಮಾಡಿಸಿದನು. ತನಗೆ ಸಮಾನನಿಲ್ಲದ ವರನಿಗೆ ಉತ್ತಮವಾದ ಅಲಂಕಾರವನ್ನು ಮಾಡಿಸಿದನು.

೩೯–೪೧. ಅತ್ಯಂತ ಮಂಗಳಕರವಾದ ಪಲ್ಲಕ್ಕಿಯನ್ನು ಸಿದ್ಧಗೊಳಿಸಿದನು. ಹಾಗೆಯೇ ರಾಜನಾದ ಭೀಷ್ಮಕನೂ ಕೂಡ ವಿವಾಹ ಸಂಬಂಧವಾದ ಸಕಲ ಮಂಗಳ ಕಾರ್ಯಗಳನ್ನೂ ಪುರೋಹಿತರಿಂದೊಡಗೂಡಿ ವೇದಮಂತ್ರಪುರಸ್ಸರವಾಗಿ ನೆರವೇರಿಸಿದನು. ಭಟ್ಟರಿಗೂ ಬ್ರಾಹ್ಮಣರಿಗೂ ಭಿಕ್ಷುಕರಿಗೂ ಮಣಿರತ್ನವನ್ನೂ ಧನವನ್ನೂ ಮುತ್ತು ಮಾಣಿಕ್ಯ ಹೀರಕಗಳನ್ನೂ ಭಕ್ಷ್ಯದ್ರವ್ಯಗಳನ್ನೂ ವಸ್ತ್ರಗಳನ್ನೂ ಅತ್ಯುತ್ತಮವಾದ ಉಪಹಾರಗಳನ್ನೂ ಸಂತೋಷದಿಂದ ಕೊಟ್ಟನು.

೪೨–೫೦. ವಾದ್ಯಗಳನ್ನು ಮೊಳಗಿಸಿದನು. ಮಂಗಳವನ್ನು ಮಾಡಿಸಿದನು. ರಾಜಪತ್ನಿಯರಿಂದಲೂ ಮುನಿಪತ್ನಿಯರಿಂದಲೂ ರುಕ್ಮಿಣಿಗೆ ಯಥೋಚಿತ ವಿಧಾನ

ರಾಜ್ಞೀಭಿರ್ಮುನಿಪತ್ನೀಭಿರ್ವಿಧಾನಂ ಚ ಯಥೋಚಿತಂ ।
ತತಃ ಶುಭೇ ಕ್ಷಣೇ ಪ್ರಾಪ್ತೇ ಮಾಹೇಂದ್ರೇ ಪರಮೋದಯೇ ॥ ೪೩ ॥

ವಿವಾಹೋಚಿತಲಗ್ನೇ ಚ ಲಗ್ನಾಧಿಪತಿಸಂಯುತೇ ।
ಸದ್ಗ್ರಹೇಕ್ಷಣಶುದ್ಧೇ ಚಾಪ್ಯಸತಾಂ ದೃಷ್ಟಿವರ್ಜಿತೇ ॥ ೪೪ ॥

ಶುಭಕ್ಷಣೇ ಶುಭರ್ಕ್ಷೇ ಚ ವಿಶುದ್ಧೇ ಚಂದ್ರತಾರಯೋಃ ।
ವೇಧಘೋಷಾದಿಸಹಿತೇ ಶಲಾಕಾದಿವಿವರ್ಜಿತೇ ॥ ೪೫ ॥

ದಂಪತ್ಯೋಃ ಶರ್ಮಯೋಗ್ಯೇ ಚ ಪರಿಣಾಮಸುಖಪ್ರದೇ ।
ಏವಂಭೂತೇ ಚ ಸಮಯೇ ಭೀಷ್ಮಕಪ್ರಾಂಗಣಂ ಹರಿಃ ॥ ೪೬ ॥

ಆಜಗಾಮ ಸುರೈಃ ಸಾರ್ಧಂ ಮುನಿವಿಪ್ರಪುರೋಹಿತೈಃ ।
ಜ್ಞಾತಿಭಿರ್ಬಾಂಧವೈಃ ಸಾರ್ಧಂ ಪಿತ್ರಾ ಮಾತ್ರಾ ನೃಪೈಸ್ತಥಾ ॥ ೪೭ ॥

ಗೋಪಾಲಕೈಃ ಪಾರ್ಷದೈಶ್ಚ ವಯಸ್ಯೈಶ್ಚ ಮನೋಹರೈಃ ।
ಭಟೈಶ್ಚ ಗಣಕೈಶ್ಚೈವ ಜ್ಯೋತಿಃಶಾಸ್ತ್ರವಿಶಾರದೈಃ ॥ ೪೮ ॥

---

ದಿಂದ ಮನೋಹರವಾದ ಅಲಂಕಾರವನ್ನು ಮಾಡಿಸಿದನು. ಅನಂತರ ಮಾಹೇಂದ್ರವೆಂಬ ಪರಮೋದಯದ ಶುಭಕ್ಷಣದಲ್ಲಿ ವಿವಾಹೋಚಿತವಾದ ಲಗ್ನಾಧಿಪತಿಯಿಂದ ಕೂಡಿದ ಶುಭಗ್ರಹಗಳ ದೃಷ್ಟಿಯಿಂದ ಪವಿತ್ರವಾದ ಅಶುಭಗ್ರಹಗಳ ದೃಷ್ಟಿಯಿಲ್ಲದಿರುವ ಚಂದ್ರತಾರಾಬಲಗಳಿಂದ ಪರಿಶುದ್ಧವಾಗಿರುವ ಶುಭನಕ್ಷತ್ರಯುಕ್ತವಾದ ಶುಭಕ್ಷಣದಿಂದ ಕೂಡಿದ ಲಗ್ನವು ಪ್ರಾಪ್ತವಾಗಲು, ವೇದಘೋಷಗಳಿಂದ ಕೂಡಿದ ಶಲಾಕಾದಿ ದುರ್ಯೋಗಗಳಿಲ್ಲದ ದಂಪತಿಗಳ ಸೌಖ್ಯಕ್ಕೆ ಯೋಗ್ಯವಾದ ಫಲಕಾಲದಲ್ಲಿ ಸುಖವನ್ನುಂಟುಮಾಡುವುದಾದ ಇಂಥಾ ಸಮಯದಲ್ಲಿ ಹರಿಯು ದೇವತೆಗಳೊಡನೆಯೂ, ಮುನಿಗಳು ಬ್ರಾಹ್ಮಣರು ಪುರೋಹಿತರು ಇವರುಗಳೊಡನೆಯೂ ಜ್ಞಾತಿಗಳೊಡನೆಯೂ ಬಂಧುಜನರೊಡನೆಯೂ ತಾಯಿಯೊಡನೆಯೂ ಮತ್ತು ರಾಜರುಗಳೊಡನೆಯೂ ಗೋಪಾಲಕರೊಡನೆಯೂ ಸೇವಕರೊಡನೆಯೂ ಸುಂದರರಾದ ಸ್ನೇಹಿತರೊಡನೆಯೂ ಭಟರುಗಳೊಡನೆಯೂ ಜ್ಯೋತಿಷ್ಕರೊಡನೆಯೂ ನಾನಾವಿಧವಾದ ವಾದ್ಯಗಳೊಡನೆಯೂ ನಟರುಗಳೊಡನೆಯೂ ಗಾಯಕರೊಡನೆಯೂ ನಾನಾವಿಧವಾದ ಶಿಲ್ಪಿಗಳನ್ನು ಬಲ್ಲವರೊಡನೆಯೂ ಹೂವಾಡಿಗರೊಡನೆಯೂ ವಿದ್ಯಾಧರಿಯ

ವಾದ್ಯೈರ್ನಾನಾವಿಧೈಶ್ಚೈವ ನರ್ತಕೈರ್ಗಾಯನೈಸ್ತಥಾ ।
ನಾನಾಶಿಲ್ಪಕರೈಶ್ಚೈವ ಮಾಲಾಕಾರೈಸ್ತಥಾಪರೈಃ ॥ ೪೯ ॥

ವಿದ್ಯಾಧರ್ಯಪ್ಸರೋಭಿಶ್ಚ ಕಿನ್ನರೀಭಿಶ್ಚ ಸತ್ವರಂ ।
ಸ್ಥಲಂ ಚ ದದೃಶುರ್ದೇವಾ ಮುನಯಶ್ಚ ನೃಪೇಶ್ವರಾಃ ॥ ೫೦ ॥

ಸರ್ವೇ ಸಮಾಗತಾ ಯೇ ಚ ವಿವಾಹದರ್ಶನೋತ್ಸುಕಾಃ ।
ರಂಭಾಸ್ತಂಭಸಹಸ್ರೈಶ್ಚ ಪಟ್ಟಸೂತ್ರಪರಿಷ್ಕೃತೈಃ ॥ ೫೧ ॥

ಚಂಪಕಾನಾಂ ಚಂದನಾನಾಂ ರಸಾಲಾನಾಂ ಚ ಪಲ್ಲವೈಃ ।
ಮಾಲ್ಯೈರ್ನಾನಾವಿಧೈಶ್ಚೈವ ಪೀತರಕ್ತಸಿತಾನ್ವಿತೈಃ ॥ ೫೨ ॥

ಪರಿತೋ ಮಂಗಲಘಟೈಃ ಫಲಪಲ್ಲವಸಂಯುತೈಃ ।
ಕಸ್ತೂರೀಚಂದನಾಕ್ತೈಶ್ಚ ಕುಂಕುಮೇನ ವಿರಾಜಿತೈಃ ॥ ೫೩ ॥

ಪೂರ್ಣೈರ್ಲಾಜೈಃ ಫಲೈಃ ಪುಷ್ಪೈರ್ದೂರ್ವಾಭಿರುಪಶೋಭಿತೈಃ ।
ಮುನಿಭಿರ್ಬ್ರಾಹ್ಮಣೈಶ್ಚೈವ ರಾಜೇಂದ್ರೈರಪಿ ವೇಷ್ಟಿತಂ ॥ ೫೪ ॥

---

ರೊಡನೆಯೂ ಅಪ್ಸರಸ್ತ್ರೀಯರೊಡನೆಯೂ ಕಿನ್ನರಿಯರೊಡನೆಯೂ ಶೀಘ್ರವಾಗಿ ಭೀಷ್ಮಕನ ಮನೆಯ ಅಂಗಳಭಾಗಕ್ಕೆ ಬಂದನು, ವಿವಾಹವನ್ನು ನೋಡಬೇಕೆಂಬ ಉತ್ಸಾಹದಿಂದ ಯಾರು ಯಾರು ಬಂದಿದ್ದರೋ ಅಂಥಾ ಮುನಿಗಳು ರಾಜಶ್ರೇಷ್ಠರು ಇವರುಗಳೆಲ್ಲರೂ ಆ ಸ್ಥಳವನ್ನು ಕುತೂಹಲದಿಂದ ನೋಡಿದರು.

೫೧—೬೨. ಸಾವಿರಾರು ಬಾಳೆಯ ಕಂಬಗಳಿಂದಲೂ, ಪಟ್ಟೆಯ ಸೂತ್ರಗಳಿಂದ ಪರಿಷ್ಕರಿಸಲ್ಪಟ್ಟ ಸಂಪಿಗೆಯ ಗಂಧದ ಮತ್ತು ಮಾವಿನ ಚಿಗುರುಗಳಿಂದಲೂ, ನಾನಾವಿಧವಾದ ಮಾಲಿಕೆಗಳಿಂದಲೂ, ಹಳದಿಯ ಕೆಂಪಿನ ಬಿಳುಪಿನ ಬಣ್ಣಗಳಿಂದ ಕೂಡಿದ ಸುತ್ತಲೂ ಮಂಗಲಕಲಶಗಳಿಂದ ಕೂಡಿದ ಹಣ್ಣುಗಳು ಚಿಗುರುಗಳು ಇವುಗಳಿಂದ ಕೂಡಿದ ಕಸ್ತೂರಿಯ ಗಂಧದಿಂದ ನೆನೆಸಲ್ಪಟ್ಟ ಕೇಸರಿಯಿಂದ ಪ್ರಕಾಶವಾನವಾದ ಅರಳುಗಳಿಂದಲೂ, ಹಣ್ಣುಗಳಿಂದಲೂ, ಹೂವುಗಳಿಂದಲೂ, ದೂರ್ವೆಗಳಿಂದಲೂ, ಪ್ರಕಾಶಿಸುತ್ತಿರುವ ಮುನಿಗಳಿಂದಲೂ, ಬ್ರಾಹ್ಮಣರಿಂದಲೂ, ರಾಜಶ್ರೇಷ್ಠರಿಂದಲೂ ಕೂಡಿರುವ ರತ್ನಶ್ರೇಷ್ಠಗಳ ಸಾರದಿಂದ ಮಾಡಿದ ವೇದಿಕೆಗಳಿಂದ ಕೂಡಿರುವ ಮನೋಹರವಾದ ಕಸ್ತೂರಿ ಮತ್ತು ಕೇಸರಿಗಳಿಂದ ಕೂಡಿದ ದಿವ್ಯಗಂಧದಿಂದ ವ್ಯಾಪ್ತ

ರತ್ನೇಂದ್ರಸಾರನಿರ್ಮಾಣವೇದೀಯುಕ್ತಂ ಮನೋಹರಂ ।
ಚರ್ಚಿತಂ ಚಂದನಾಸ್ನಿಗ್ಧೈಃ ಕಸ್ತೂರೀ ಕುಂಕುಮಾನ್ವಿತೈಃ ॥ ೫೫ ॥

ಸುಗಂಧಿಶೀತಮಂದೈಶ್ಚ ಪವನೈಃ ಸುರಭೀಕೃತಂ ।
ರತ್ನಾನಾಂ ಚ ಸಹಸ್ರೈಶ್ಚ ಜ್ವಲಿತಂ ಜ್ವಲದೀಪ್ತಕೈಃ ॥ ೫೬ ॥

ನಾನಾಪ್ರಕಾರಧೂಪೈಶ್ಚ ಗಂಧದ್ರವ್ಯೈಃ ಸುವಾಸಿತಂ ।
ಚಿತ್ರಾವಚಿತ್ರೈರ್ವಿವಿಧೈಃ ಶಿಲ್ಪಿನಾಂ ಪುಣ್ಯಕಾರಿಣಾಂ ॥ ೫೭ ॥

ಪರಿತಃ ಪರಿತಶ್ಚೈವ ಶೋಭನಾರ್ಹೈಃ ಸುಶೋಭನೈಃ ।
ಗಂಧರ್ವಾಣಾಂ ಚ ಸಂಗೀತೈರ್ಮಧುರೈರ್ಮಧುರೀಕೃತಂ ॥ ೫೮ ॥

ವಿದ್ಯಾಧರೀಣಾಂ ನೃತ್ಯೈಶ್ಚ ನರ್ತಕೀನಾಂ ಚ ಶಿಲ್ಪಿನಾಂ ।
ತತ್ರ ನಿಶ್ಚೇಷ್ಟಚಿತ್ರೈಶ್ಚ ಜನರಾಜಿವಿರಾಜಿತಂ ॥ ೫೯ ॥

ಗುಪ್ತದ್ವಾರೈರ್ಗವಾಕ್ಷೈಶ್ಚ ಯುವತೀಭಿಶ್ಚ ವೀಕ್ಷಿತಂ ।
ಮಂಗಲೇನ ಘಟೇನೈವ ವಿಧುಷಾ ಚ ಪುರೋಧಸಾ ॥ ೬೦ ॥

---

ವಾದ ಸುವಾಸನೆಯಿಂದ ಕೂಡಿ ಶೀತಳವಾಗಿ ಮಂದವಾಗಿ ಬೀಸುತ್ತಿರುವ ಗಾಳಿಗಳಿಂದ ಸುವಾಸನೆಯಾಗಿ ಮಾಡಲ್ಪಟ್ಟ ಹೊಳೆಯುತ್ತಿರುವ ಸಾವಿರಾರು ರತ್ನಗಳಿಂದ ಪ್ರಕಾಶಮಾನವಾಗಿರುವ ನಾನಾವಿಧವಾದ ಧೂಪಗಳಿಂದಲೂ, ಸುಗಂಧದ್ರವ್ಯಗಳಿಂದಲೂ, ಸುವಾಸನೆಯಾಗಿರುವ ಪುಣ್ಯವಂತರಾದ ಶಿಲ್ಪಗಳಿಂದ ಮಾಡಿದ ನಾನಾವಿಧವಾದ ಮಂಗಳಯೋಗ್ಯಗಳಾದ ಮಂಗಳಕರಗಳಾದ ಚಿತ್ರಗಳಿಂದ ಸುತ್ತಲೂ ತುಂಬಿರುವ ಗಂಧರ್ವರ ಮಧುರವಾದ ಸಂಗೀತಗಳಿಂದಲೂ, ವಿದ್ಯಾಧರಿಯರಾದ ನರ್ತಕಿಯರ ನರ್ತನಗಳಿಂದಲೂ, ಮಧುರವಾಗಿರುವ ಶಿಲ್ಪಿಗಳಿಂದ ಮಾಡಲ್ಪಟ್ಟಿರುವ ಚಲಿಸದಿರುವ ಚಿತ್ರಗಳಿಂದಲೂ, ಜನರ ಗುಂಪಿನಿಂದಲೂ, ಪ್ರಕಾಶಮಾನವಾಗಿರುವ ಗುಪ್ತವಾದ ಬಾಗಿಲುಗಳುಳ್ಳ ಕಿಟಕಿಗಳಿಂದ ಯುವತಿಯರಿಂದ ನೋಡಲ್ಪಡುತ್ತಿರುವ ಮಂಗಲಕಲಶದಿಂದ ಕೂಡಿದ ಜ್ಞಾನಿಯಾದ ಪುರೋಹಿತನಿಂದಲೂ, ದರ್ಭೆಯನ್ನು ಕೈಯಲ್ಲಿ ಹಿಡಿದು ದಾನವಸ್ತುಗಳನ್ನು ಸಿದ್ಧಪಡಿಸಿಕೊಂಡು ದಾನಮಾಡಲು ನಿಂತಿರುವ ರಾಜನಿಂದ ಕೂಡಿದ ರಾಜನ ಮನೆಯ ಸಭಾಂಗಣವನ್ನು ನೋಡಿ ಬ್ರಹ್ಮನೇ

ಕುಶಹಸ್ತೇನ ಭೂಪೇನ ದಾನೇನ ದಾನವಸ್ತುನಾ ।
ದೃಷ್ಟ್ವಾ ಚ ಪ್ರಾಂಗಣೇ ರಾಜ್ಞೋ ದೇವಾ ಬ್ರಹ್ಮಾದಯಸ್ತಥಾ ॥ ೬೧ ॥

ಅವರುಹ್ಯ ರಥಾತ್ತೂರ್ಣಂ ತಿಷ್ಠಂತಿ ಪ್ರಾಂಗಣೇ ಮುದಾ ।
ರಾಜೇಂದ್ರಾ ದಾನವೇಂದ್ರಾಶ್ಚ ಮುನಯಃ ಸನಕಾದಯಃ ॥ ೬೨ ॥

ಶ್ರೀಕೃಷ್ಣಶ್ಚಾಪಿ ಭಗವಾನ್ಪಾರ್ಷದಪ್ರವರೈಃ ಸಹ ।
ತಾನ್ದೃಷ್ಟ್ವಾ ಸಹಸೋತ್ಥಾಯ ಜವೇನ ಭೀಷ್ಮಕಸ್ತಥಾ ॥ ೬೩ ॥

ಮೂರ್ಧ್ನಾವವಂದೇ ದೇವಾಂಶ್ಚ ಮುನೀಂದ್ರಾಂಶ್ಚ ನೃಪಾಂಸ್ತಥಾ ।
ರತ್ನಸಿಂಹಾಸನೇ ಚೈವ ಸುರಮ್ಯೇಷು ಪೃಥಕ್ಪೃಥಕ್ ॥ ೬೪ ॥

ಕ್ರಮತೋ ವಾಸಯಾಮಾಸ ಸಂಪೂಜ್ಯ ಸಾದರೇಣ ಚ ।
ರಾಜಾ ತುಷ್ಟಾವ ಭಕ್ತ್ಯಾ ಚ ತಾನ್ಸರ್ವಾನ್ಭಕ್ತಿಪೂರ್ವಕಂ ।
ವಸುದೇವಂ ವಾಸುದೇವಂ ಸಾಶ್ರುನೇತ್ರಃ ಪುಟಾಂಜಲಿಃ ॥ ೬೫ ॥

॥ ಭೀಷ್ಮಕ ಉವಾಚ ॥

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ॥ ೬೬ ॥

---

ಮೊದಲಾದ ದೇವತೆಗಳೂ ರಾಜಶ್ರೇಷ್ಠರೂ ದಾನವಶ್ರೇಷ್ಠರೂ ಸನಕನೇ ಮೊದಲಾದ ಮುನಿಗಳೂ ಜಾಗ್ರತೆಯಾಗಿ ರಥದಿಂದಿಳಿದು ಸಂತೋಷದಿಂದ ಸಭಾಂಗಣದಲ್ಲಿ ಬಂದು ನಿಂತರು.

೬೩–೬೫. ಪೂಜ್ಯನಾದ ಶ್ರೀಕೃಷ್ಣನೂ ಕೂಡ ತನ್ನ ಮುಖ್ಯ ಸೇವಕರೊಡನೆ ಬಂದುನಿಂತನು. ಭೀಷ್ಮಕನು ಅವರುಗಳನ್ನು ನೋಡಿ ಜಾಗ್ರತೆಯಾಗಿ ಮೇಲಕ್ಕೆದ್ದು ದೇವತೆಗಳಿಗೂ ಮುನಿಶ್ರೇಷ್ಠರಿಗೂ ರಾಜರುಗಳಿಗೂ ತಲೆಬಾಗಿ ನಮಸ್ಕರಿಸಿದನು. ಆದರದಿಂದ ಪೂಜೆಮಾಡಿ ಮನೋಹರವಾದ ರತ್ನಸಿಂಹಾಸನದಲ್ಲಿ ಅವರನ್ನು ಬೇರೆ ಬೇರೆಯಾಗಿ ಕುಳ್ಳಿರಿಸಿದನು. ರಾಜನು ಭಕ್ತಿಯಿಂದ ಬೊಗಸೆಮಾಡಿಕೊಂಡು ಕಣ್ಣಿನಲ್ಲಿ ಆನಂದಬಾಷ್ಪವನ್ನು ಸುರಿಸುತ್ತ ಅವರೆಲ್ಲರನ್ನೂ ವಸುದೇವನನ್ನೂ ವಾಸುದೇವನನ್ನೂ ಸ್ತೋತ್ರಮಾಡಿದನು.

೬೬–೬೮. ಭೀಷ್ಮಕನು ಹೇಳುತ್ತಾನೆ :— ಇಂದು ನನ್ನ ಜನ್ಮವು ಸಫಲವಾಯಿತು. ನನ್ನ ಜೀವನವು ಸಾರ್ಥಕವಾಯಿತು. ನನ್ನ ಕೋಟಿ ಜನ್ಮಗಳ ಕರ್ಮಗಳು

ಬಭೂವ ಜನ್ಮಕೋಟೀನಾಂ ಕರ್ಮಮೂಲನಿಕೃಂತನಂ ।
ಸ್ವಯಂ ವಿಧಾತಾ ಜಗತಾಂ ಪ್ರದಾತಾ ಸರ್ವಸಂಪದಾಂ || ೬೭ ||

ಸ್ವಪ್ನೇ ಯತ್ಪಾದಪದ್ಮಂ ಚ ದ್ರಷ್ಟುಂ ನೈವ ಕ್ಷಮಃ ಪ್ರಭೋ ।
ತಪಸಾಂ ಫಲದಾತಾ ಚ ಸಂಸ್ರಷ್ಟಾ ಪ್ರಾಂಗಣೇ ಮಮ || ೬೮ ||

ಸ್ವಾತ್ಮಾರಾಮೇಷು ಪೂರ್ಣೇಷು ಶುಭಪ್ರಶ್ನಮಭೀಪ್ಸಿತಂ ।
ಯೋಗೀಂದ್ರೈರಪಿ ಸಿದ್ಧೇಂದ್ರೈಃ ಸುರೇಂದ್ರೈಶ್ಚ ಮುನೀಂದ್ರಕೈಃ ||೬೯||

ಧ್ಯಾನಾದೃಷ್ಟಶ್ಚ ಯೋ ದೇವಃ ಸ ಶಿವಃ ಪ್ರಾಂಗಣೇ ಮಮ ।
ಕಾಲಸ್ಯ ಕಾಲೋ ಭಗವಾನ್ಮೃತ್ಯೋರ್ಮೃತ್ಯುಶ್ಚ ಯಃ ಪ್ರಭುಃ || ೭೦ ||

ಮೃತ್ಯುಂಜಯಶ್ಚ ಸರ್ವೇಶೋ ನರಾಣಾಂ ದೃಷ್ಟಿಗೋಚರಃ ।
ಯಸ್ಯ ಮೂರ್ಧ್ನಾಂ ಸಹಸ್ರೇಷು ಮೂರ್ಧ್ನಿ ವಿಶ್ವಂ ಚರಾಚರಂ || ೭೧ ||

---

ನಾಶವಾದುವು. ಸಕಲ ಜಗತ್ತುಗಳನ್ನೂ ತಾನೆ ಸೃಷ್ಟಿಮಾಡುವವನಾದ ಸಕಲ ಸಂಪತ್ತುಗಳನ್ನೂ ಕೊಡುವವನಾದ ಯಾವನ ಪಾದಕಮಲವನ್ನು ಸ್ವಪ್ನದಲ್ಲಿಯೂ ನೋಡಲು ಸಾಧ್ಯವಿಲ್ಲವೋ ತಪಸ್ಸುಗಳ ಫಲವನ್ನು ಕೊಡುವವನಾದ ಆ ಪ್ರಭುವು ಇಂದು ನನ್ನ ಮನೆಗೆ ಬಂದಿರುವನು.

೬೯–೭೨. ಆತ್ಮಾರಾಮರಲ್ಲಿಯೂ ಪರಿಪೂರ್ಣರಲ್ಲಿಯೂ ಮಂಗಳಪ್ರಶ್ನೆಯು ಆವಶ್ಯಕವಾದುದು, ಯೋಗಿಶ್ರೇಷ್ಠರಿಂದಲೂ ಸಿದ್ಧಶ್ರೇಷ್ಠರಿಂದಲೂ ದೇವಶ್ರೇಷ್ಠರಿಂದಲೂ ಮುನಿಶ್ರೇಷ್ಠರಿಂದಲೂ ಕೂಡ ಧ್ಯಾನಮಾರ್ಗದಿಂದಲೂ ನೋಡಲಸಾಧ್ಯನು ಯಾವನೋ ಅಂಥಾ ದೇವನಾದ ಶಿವನು ನನ್ನ ಮನೆಗೆ ಬಂದಿರುವನು. ಕಾಲನಿಗೆ ಕಾಲನಾಗಿ ಮೃತ್ಯುವಿಗೆ ಮೃತ್ಯುವಾಗಿಯೂ ಮೃತ್ಯುಂಜಯನೂ ಸರ್ವೇಶನೂ ಆದ ಯಾವನ ಸಾವಿರತಲೆಗಳಮೇಲೆ ಚರಾಚರಾತ್ಮಕವಾದ ಪ್ರಪಂಚವು ಇರುವುದೋ ಮತ್ತು ಸಕಲವೇದಗಳಲ್ಲಿ ಯಾವನ ಮಹಿಮೆಗೆ ಕೊನೆಯಿಲ್ಲವೋ ಅಂಥಾ ಪೂಜ್ಯನಾದ ಪ್ರಭುವು ನನ್ನಮನೆಯಲ್ಲಿ ಮಾನವರ ದೃಷ್ಟಿಗೆ ಗೋಚರನಾಗಿರುವನು. ಯಾವನು ಸಕಲ ಇಷ್ಟಾರ್ಥಗಳನ್ನೂ ಕೊಡುವವನಾಗಿರುವನೋ ಮತ್ತು ಯಾವನಿಗೆ

ನಾಸ್ತ್ಯಂತಃ ಸರ್ವವೇದೇಷು ಸೋಯಂ ಚ ಮಮ ಪ್ರಾಂಗಣೇ ।
ಸರ್ವಕಾಮಪ್ರದೇಯೋ ಹಿ ಸರ್ವಾಗ್ರೇ ಯಸ್ಯ ಪೂಜನಂ ।
ಶ್ರೇಷ್ಠೋ ದೇವಗಣಾನಾಂ ಚ ಸ ಗಣೇಶೋ ಮಮಾಂಗಣೇ ॥ ೭೨ ॥

ಮುನೀನಾಂ ವೈಷ್ಣವಾನಾಂ ಚ ಪ್ರವರೋ ಜ್ಞಾನಿನಾಂ ಗುರುಃ ।
ಸನತ್ಕುಮಾರೋ ಭಗವಾನ್ಪ್ರತ್ಯಕ್ಷಃ ಪ್ರಾಂಗಣೇ ಮಮ ॥ ೭೩ ॥

ಬ್ರಹ್ಮಪುತ್ರಾಶ್ಚ ಪೌತ್ರಾಶ್ಚ ಪ್ರಪೌತ್ರಾಶ್ಚಾಪಿ ವಂಶಜಾಃ ।
ತೇ ಸರ್ವೇ ಮದ್ಗೃಹೇದ್ಯೈವ ಜ್ವಲಂತೋ ಬ್ರಹ್ಮತೇಜಸಾ ॥ ೭೪ ॥

ಅಹೋ ಕಲ್ಪಾಂತಪರ್ಯಂತಂ ತೀರ್ಥೀಭೂತೋ ಮಮಾಶ್ರಯಃ ।
ಯೇಷಾಂ ಪಾದೋದಕೈಸ್ತೀರ್ಥಂ ವಿಶುದ್ಧಂ ತದ್ಗೃಹಂ ಮಮ ॥ ೭೫ ॥

ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।
ಸಾಗರೇ ಯಾನಿ ತೀರ್ಥಾನಿ ವಿಪ್ರಪಾದೇಷು ತಾನಿ ಚ ॥ ೭೬ ॥

---

ಎಲ್ಲರಿಗಿಂತಲೂ ಮೊದಲು ಪೂಜೆನಡೆಯುತ್ತದೋ ಸಕಲದೇವ ಸಮೂಹ ಮಧ್ಯದಲ್ಲಿ ಶ್ರೇಷ್ಠನಾದ ಆ ಗಣೇಶನು ನನ್ನ ಮನೆಗೆ ಬಂದಿರುವನು.

೭೩. ಸಕಲಮುನಿಗಳಿಗೂ ವಿಷ್ಣುಭಕ್ತರಿಗೂ ಶ್ರೇಷ್ಠನಾದ ಜ್ಞಾನಿಗಳಿಗೂ ಗುರುವಾದ ಪೂಜ್ಯನಾದ ಸನತ್ಕುಮಾರನು ನನ್ನ ಮನೆಯಲ್ಲಿ ಪ್ರತ್ಯಕ್ಷನಾಗಿರುವನು.

೭೪. ಬ್ರಹ್ಮನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಮತ್ತು ಅವರ ವಂಶದಲ್ಲಿ ಹುಟ್ಟಿದವರು ಅವರೆಲ್ಲರೂ ಇಂದು ನನ್ನ ಮನೆಯಲ್ಲಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತ ನಿಂದಿರುವರು.

೭೫. ಯಾರ ಪಾದೋದಕದಿಂದ ತೀರ್ಥವು ಪವಿತ್ರವಾಗುತ್ತದೆಯೋ ಅವರು ಇಂದು ನನ್ನ ಮನೆಯಲ್ಲಿರುವರು. ಆಹಾ ನನ್ನ ಮನೆಯು ಪ್ರಳಯಕಾಲದವರೆಗೂ ಕೂಡ ಪವಿತ್ರವಾದುದಾಯಿತು.

೭೬. ಭೂಮಿಯಲ್ಲಿ ಯಾವ ತೀರ್ಥಗಳಿವೆಯೋ ಅವುಗಳು ಸಮುದ್ರ ದಲ್ಲಿರುವುವು. ಸಮುದ್ರದಲ್ಲಿ ಯಾವ ತೀರ್ಥಗಳಿವೆಯೋ ಅವುಗಳು ಬ್ರಾಹ್ಮಣರ ಕಾಲುಗಳಲ್ಲಿರುತ್ತವೆ.

ವಿಪ್ರಪಾದೋದಕಕ್ಲಿನ್ನಾ ಯಾವತ್ತಿಷ್ಠತಿ ಮೇದಿನೀ ।
ತಾವತ್ಪುಷ್ಕರಪತ್ರೇಷು ಪಿಬಂತಿ ಪಿತರೋ ಜಲಂ ॥ ೭೭ ॥

ವಿಪ್ರಪಾದೋದಕಂ ಭುಕ್ತ್ವಾ ದತ್ತ್ವಾ ವಿಪ್ರಾಯ ದಕ್ಷಿಣಾಂ ।
ಸ್ನಾತಾನಾಂ ಸರ್ವತೀರ್ಥಾನಾಂ ಫಲಮಾಪ್ನೋತಿ ನಿಶ್ಚಿತಂ ॥ ೭೮ ॥

ನಿಕೃಂತನಂ ಚ ವಿಪದಾಂ ವ್ಯಾಧಿನಿರ್ಮೂಲಕಾರಣಂ ।
ಸುಖದಂ ಶುಭದಂ ಸಾರಂ ವಿಪ್ರಪಾದೋದಕಂ ನೃಣಾಂ ॥ ೭೯ ॥

ನ ಗಂಗಾಸದೃಶಂ ತೀರ್ಥಂ ನ ದೇವೋ ಮಾಧವಾತ್ಪರಃ ।
ಸನತ್ಕುಮಾರಾದ್ಭಕ್ತೋ ನ ನ ಹಿ ಕಲ್ಪತರೋಸ್ತರುಃ ॥ ೮೦ ॥

ನ ಪುಷ್ಪಂ ಪಾರಿಜಾತಾಚ್ಚ ನ ವ್ರತಂ ಹರಿವಾಸರಾತ್ ।
ಪೂಜನೇ ನ ಹಿ ಪೂಜ್ಯಂ ಚ ನ ಪತ್ರಂ ತುಲಸೀಪರಂ ॥ ೮೧ ॥

---

೭೭. ಭೂಮಿಯು ಎಲ್ಲಿಯವರೆಗೆ, ಬ್ರಾಹ್ಮಣರ ಪಾದೋದಕದಿಂದ ನೆನೆದಿರುತ್ತದೆಯೋ ಅಲ್ಲಿಯವರೆಗೆ ಪಿತೃಗಳು ತಾವರೆಯ ಎಲೆಯಲ್ಲಿ ನೀರನ್ನು ಕುಡಿಯುತ್ತಾರೆ.

೭೮. ಬ್ರಾಹ್ಮಣರ ಪಾದಜಲವನ್ನು ಕುಡಿದು ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟಲ್ಲಿ ಮಾನವನು ಸಂಶಯವಿಲ್ಲದೆ ಸಕಲತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಹೊಂದುತ್ತಾನೆ.

೭೯. ಬ್ರಾಹ್ಮಣರ ಪಾದೋದಕವು ಮಾನವನ ಸಮಸ್ತವಾದ ವಿಪತ್ತುಗಳನ್ನೂ ಹೋಗಲಾಡಿಸುತ್ತದೆ. ವ್ಯಾಧಿಗಳನ್ನು ನಿರ್ಮೂಲನಮಾಡಲು ಕಾರಣವಾಗಿರುತ್ತದೆ. ಸುಖವನ್ನೂ ಮಂಗಳವನ್ನೂ ಉಂಟುಮಾಡುತ್ತದೆ ಮತ್ತು ಸಾರಭೂತವಾದುದು.

೮೦. ಗಂಗೆಗೆ ಸಮನಾದ ತೀರ್ಥವಿಲ್ಲ ಮಾಧವನಿಗಿಂತಲೂ ಶ್ರೇಷ್ಠನಾದ ದೇವರಿಲ್ಲ. ಸನತ್ಕುಮಾರನಿಗಿಂತಲೂ ಉತ್ತಮನಾದ ಭಕ್ತನಿಲ್ಲ. ಕಲ್ಪವೃಕ್ಷಕ್ಕಿಂತಲೂ ಶ್ರೇಷ್ಠವಾದ ಮರವಿಲ್ಲ.

೮೧. ಪಾರಿಜಾತಕ್ಕಿಂತಲೂ ಉತ್ತಮವಾದ ಹೂವಿಲ್ಲ. ಹರಿವಾಸರ (ಏಕಾದಶೀ) ವ್ರತಕ್ಕಿಂತಲೂ ಉತ್ತಮವಾದ ವ್ರತವಿಲ್ಲ. ದೇವರಪೂಜೆಗೆ ತುಲಸೀಪತ್ರಕ್ಕಿಂತಲೂ ಪೂಜ್ಯವಾದ ಪತ್ರೆಯು ಬೇರೊಂದಿಲ್ಲ.

ನ ದೇವೀ ಪ್ರಕೃತೇಶ್ಚಾಪಿ ನಾಧಾರಃ ಪವನಾತ್ಪರಃ ।
ನ ಹಿ ಸ್ಥೂಲೋ ಮಹಾವಿಷ್ಣೋರ್ನ ಸೂಕ್ಷ್ಮಂ ಪರಮಾಣುತಃ ॥ ೮೨ ॥

ನ ಬ್ರಾಹ್ಮಣಾತ್ಪರಃ ಪೂತೋ ನಾಶ್ರಮಶ್ಚ ಪರಃ ಪ್ರಭುಃ ।
ನ ದೇವೋ ನ ಪರಃ ಕೋಽಪಿ ಇತ್ಯಾಹ ಕಮಲೋದ್ಭವಃ ॥ ೮೩ ॥

ಬ್ರಹ್ಮವಿಷ್ಣುಶಿವಾದೀನಾಂ ಪ್ರಕೃತೇಶ್ಚ ಪರಃ ಪ್ರಭುಃ ।
ಧ್ಯಾನಾಸಾಧ್ಯೋ ದುರಾರಾಧ್ಯೋ ಯೋಗಿನಾಮಪಿ ನಿಶ್ಚಿತಂ ॥ ೮೪ ॥

ನಿರ್ಗುಣಶ್ಚ ನಿರಾಕಾರೋ ಭಕ್ತಾನುಗ್ರಹವಿಗ್ರಹಃ ।
ಸ ಏವ ಚಕ್ಷುಷೋ ನೃಣಾಂ ಸಾಕ್ಷಾದ್ದೇವಶ್ಚ ಮದ್ಗೃಹೇ ॥ ೮೫ ॥

ದೇವೈರ್ಬ್ರಹ್ಮೇಶಶೇಷೈಶ್ಚ ಧ್ಯಾನಂ ಯತ್ಪಾದಪಂಕಜಂ ।
ಧನೇಶೇನ ಗಣೇಶೇನ ದಿನೇಶೇನಾಪಿ ದುರ್ಲಭಂ ॥ ೮೬ ॥

---

೮೨. ಪ್ರಕೃತಿಗಿಂತಲೂ ಉತ್ತಮಳಾದ ದೇವಿಯಿಲ್ಲ. ವಾಯುವಿಗಿಂತಲೂ ಉತ್ತಮವಾದ ಆಧಾರವಿಲ್ಲ. ಮಹಾವಿಷ್ಣುವಿಗಿಂತಲೂ ದೊಡ್ಡದಾದ ಪದಾರ್ಥವಿಲ್ಲ. ಪರಮಾಣುವಿಗಿಂತಲೂ ಚಿಕ್ಕದಾದ ವಸ್ತುವಿಲ್ಲ.

೮೩. ಬ್ರಾಹ್ಮಣನಿಗಿಂತಲೂ ಪವಿತ್ರವಾದುದು ಬೇರೊಂದಿಲ್ಲ. ಗೃಹಸ್ಥಾಶ್ರಮಕ್ಕಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ಪ್ರಭುವಾದ ಶ್ರೀಹರಿಗಿಂತಲೂ ಉತ್ತಮದೇವರು ಮತ್ತೊಂದಿಲ್ಲ. ಈ ಪ್ರಕಾರವಾಗಿ ಬ್ರಹ್ಮನು ಹೇಳಿರುವನು.

೮೪. ಬ್ರಹ್ಮ ವಿಷ್ಣು ಶಿವ ಮುಂತಾದವರಿಗಿಂತಲೂ ಪ್ರಕೃತಿಗಿಂತಲೂ ಪ್ರಭುವಾದ ಶ್ರೀಹರಿಯು ಉತ್ಕೃಷ್ಟನಾದವನು. ಅವನು ಯೋಗಿಗಳಿಗೂ ಕೂಡ ಧ್ಯಾನದಿಂದ ವಶಪಡಿಸಿಕೊಳ್ಳಲಸಾಧ್ಯನೂ ಕಷ್ಟದಿಂದ ಆರಾಧಿಸಲು ಯೋಗ್ಯನೂ ಆಗಿರುವನೆಂದು ನಿಶ್ಚಯಿಸಲ್ಪಟ್ಟಿರುವನು.

೮೫–೮೬. ಅವನು ನಿರ್ಗುಣನೂ ನಿರಾಕಾರನೂ ಭಕ್ತರಿಗೆ ಅನುಗ್ರಹಮಾಡಲೋಸ್ಕರ ದೇಹವನ್ನು ಧರಿಸಿದವನೂ ಆಗಿರುವನು. ಆ ದೇವನೇ ನನ್ನ ಮನೆಯಲ್ಲಿ ಮಾನವರಕಣ್ಣಿಗೆ ಗೋಚರನಾಗಿರುವನು. ಬ್ರಹ್ಮ ಈಶ್ವರ ಶೇಷ ಮುಂತಾದ ದೇವತೆಗಳಿಂದ ಯಾವನ ಪಾದಕಮಲಗಳ ಧ್ಯಾನವು ದುರ್ಲಭವಾದುದೋ ಕುಬೇರನಿಂದಲೂ ಗಣೇಶನಿಂದಲೂ ಸೂರ್ಯನಿಂದಲೂ ಯಾವನ ಪಾದಕಮಲಗಳು ಹೊಂದಲಸಾಧ್ಯವಾದುವುಗಳಾಗಿವೆಯೊ ಅಂಥಾ ಪರಮಾತ್ಮನು ನನ್ನ ಮನೆಯಲ್ಲಿ ಪ್ರತ್ಯಕ್ಷನಾಗಿರುವನು.

ಇತ್ಯುಕ್ತ್ವಾ ಭೀಷ್ಮಕಃ ಕೃಷ್ಣಂ ಸಮಾನೀಯ ಸ್ವಯಂ ಪುರಃ ।
ತುಷ್ಟಾವ ಸಾಮವೇದೋಕ್ತಸ್ತೋತ್ರೇಣ ಪರಮೇಶ್ವರಂ || ೮೭ ||

|| ಭೀಷ್ಮಕ ಉವಾಚ ||

ಸರ್ವಾಂತರಾತ್ಮಾ ಸರ್ವೇಷಾಂ ಸಾಕ್ಷೀ ನಿರ್ಲಿಪ್ತ ಏವ ಚ ।
ಕರ್ಮಿಣಾಂ ಕರ್ಮಣಾಮೇವ ಕಾರಣಾನಾಂ ಚ ಕಾರಣಂ || ೮೮ ||

ಕೇಚಿದ್ವದಂತಿ ತ್ವಾಮೇಕಂ ಜ್ಯೋತೀರೂಪಂ ಸನಾತನಂ ।
ಕೇಚಿಚ್ಚ ಪರಮಾತ್ಮಾನಂ ಜೀವೋ ಯತ್ಪ್ರತಿಬಿಂಬಕಃ || ೮೯ ||

ಕೇಚಿತ್ಪ್ರಾಕೃತಿಕಂ ಜೀವಂ ಸಗುಣಂ ಭ್ರಾಂತಬುದ್ಧಯಃ ।
ಕೇಚಿನ್ನಿತ್ಯಶರೀರಂ ಚ ಬುದ್ಧಾಃ ಶ್ಚ ಸೂಕ್ಷ್ಮಬುದ್ಧಯಃ || ೯೦ ||

---

೮೭. ಭೀಷ್ಮಕನು ಈ ಪ್ರಕಾರವಾಗಿ ಹೇಳಿ ತಾನು ಮುಂಭಾಗದಲ್ಲಿ ಬರುತ್ತ ಕೃಷ್ಣನನ್ನು ಕರೆತಂದು ಆ ಪರಮೇಶ್ವರನನ್ನು ಸಾಮವೇದದಲ್ಲಿ ಹೇಳಿರುವ ಸ್ತೋತ್ರದಿಂದ ಸ್ತುತಿಮಾಡಿದನು.

೮೮. ಭೀಷ್ಮಕನು ಹೇಳುತ್ತಾನೆ:— ಪರಮಾತ್ಮನೇ! ನೀನು ಸಕಲ ಪ್ರಾಣಿಗಳಿಗೂ ಅಂತರಾತ್ಮಕನಾಗಿರುವಿ. ಸಕಲರ ಕರ್ಮಗಳಿಗೂ ಸಾಕ್ಷಿಯೂ ನಿರ್ಲಿಪ್ತನೂ ಆಗಿರುವಿ. ಕರ್ಮವನ್ನು ಮಾಡುವವರಿಗೂ ಕರ್ಮಗಳಿಗೂ ಕಾರಣ ವಸ್ತುಗಳಿಗೂ ಕಾರಣನಾಗಿರುವಿ.

೮೯. ಕೆಲವರು ನಿನ್ನನ್ನು ಒಬ್ಬನೇ ಎಂದೂ ಜ್ಯೋತಿರೂಪನೆಂದೂ ನಾಶವಿಲ್ಲದವನೆಂದೂ ಹೇಳುತ್ತಾರೆ ಮತ್ತೆ ಕೆಲವರು ಪರಮಾತ್ಮನೆಂದೂ ಜೀವನು ಆ ಪರಮಾತ್ಮನ ಪ್ರತಿಬಿಂಬನೆಂದೂ ಹೇಳುತ್ತಾರೆ.

೯೦–೯೧. ಇನ್ನೂ ಕೆಲವರು ಭ್ರಾಂತಿಯಿಂದ ಕೂಡಿದ ಬುದ್ಧಿಯುಳ್ಳವರು ಪ್ರಕೃತಿಸಂಬಂಧವಾದ ಜೀವನೆಂದೂ ಗುಣಸಂಬಂಧವುಳ್ಳವನೆಂದೂ ಹೇಳುತ್ತಾರೆ. ಸೂಕ್ಷ್ಮಬುದ್ಧಿಯುಳ್ಳ ಕೆಲವರು ನಿತ್ಯವಾದ ಶರೀರವುಳ್ಳವನೆಂದು ತಿಳಿಯುತ್ತಾರೆ.

ಜ್ಯೋತಿರಭ್ಯಂತರೇ ನಿತ್ಯಂ ದೇಹರೂಪಂ ಸನಾತನಂ ।
ಕಸ್ಮಾತ್ತೇಜಃ ಪ್ರಭವತಿ ಸಾಕಾರಮೀಶ್ವರಂ ವಿನಾ ॥ ೯೦ ॥

ಏವಂ ಸ್ತುತ್ವಾ ಸ ವಾಚಾಂತಃ ಸ್ಮರನ್ವಿಷ್ಣುಂ ಚ ನಾರದ ।
ಪಾದ್ಯಂ ಪದ್ಮಾರ್ಚಿತೇ ಪಾದಪದ್ಮೇ ಚಾಯಂ ದದೌ ಮುದಾ ॥ ೯೨ ॥

ಅರ್ಘ್ಯಂ ಚ ಪ್ರದದೌ ತತ್ರ ದೂರ್ವಾಪುಷ್ಪಜಲಾನ್ವಿತಂ ।
ಮಧುಪರ್ಕಂ ಚ ಸುರಭಿಂ ಸರ್ವಾಂಗೇ ಗಂಧಚಂದನಂ ॥ ೯೩ ॥

ಯತ್ಪ್ರದತ್ತಂ ಮಹೇಂದ್ರೇಣ ಶುಭಕರ್ಮಣಿ ಯೌತುಕಂ ।
ಪಾರಿಜಾತಸ್ಯ ಮಾಲ್ಯಂ ಚ ಜಾಮಾತುಶ್ಚ ಗಲೇ ದದೌ ॥ ೯೪ ॥

ಕುಬೇರೇಣ ಚ ಯದ್ದತ್ತಮಮೂಲ್ಯರತ್ನಭೂಷಣಂ ।
ಚಕಾರ ವರಣಂ ತಸ್ಯ ಸ ರಾಜಾ ಭಕ್ತಿಪೂರ್ವಕಂ ॥ ೯೫ ॥

---

ಮತ್ತು ದೇಹದ ಒಳಭಾಗದಲ್ಲಿರುವ ಜ್ಯೋತಿರೂಪನೆಂದೂ ನಿತ್ಯನೆಂದೂ ದೇಹ ಸ್ವರೂಪನೆಂದೂ ನಾಶರಹಿತನೆಂದೂ ಆವನಿಂದಲೇ ಈಶ್ವರನನ್ನುಳಿದು ಎಲ್ಲ ತೇಜಸುಗಳೂ ಹುಟ್ಟುತ್ತವೆಯೆಂದೂ ಆಕಾರವುಳ್ಳವನೆಂದೂ ಹೇಳುತ್ತಾರೆ.

೯೨. ಎಲೈ ನಾರದನೇ! ಆ ಭೀಷ್ಮಕನು ಈ ಪ್ರಕಾರವಾಗಿ ಸ್ತೋತ್ರಮಾಡಿ ಆಚಮನವನ್ನು ಮಾಡಿ ವಿಷ್ಣುವನ್ನು ಸ್ಮರಣೆಮಾಡುತ್ತ ಕಮಲಗಳಿಂದ ಪೂಜಿಸಲ್ಪಟ್ಟ ಶ್ರೀಕೃಷ್ಣನ ಕಾಲುಗಳಲ್ಲಿ ಸಂತೋಷದಿಂದ ಪಾದ್ಯವನ್ನು ಕೊಟ್ಟನು.

೯೩. ದೂರ್ವೆಗಳಿಂದಲೂ ಹೂವುಗಳಿಂದಲೂ ನೀರಿನಿಂದಲೂ ಕೂಡಿದ ಅರ್ಘ್ಯವನ್ನು ಕೊಟ್ಟನು. ಮಧುಪರ್ಕವನ್ನೂ ಸಕಲಾಂಗಗಳಿಗೂ ಸುವಾಸನೆಯಿಂದ ಕೂಡಿದ ಗಂಧವನ್ನೂ ಸಮರ್ಪಿಸಿದನು.

೯೪. ಮಂಗಳಸಮಾರಂಭದಲ್ಲಿ ಮಹೇಂದ್ರನಿಂದ ಉಡುಗೊರೆಯಾಗಿ ಕೊಡಲ್ಪಟ್ಟಿದ್ದ ಪಾರಿಜಾತದ ಮಾಲಿಕೆಯನ್ನು ಅಳಿಯನ ಕೊರಳಿಗೆ ಹಾಕಿದನು.

೯೫. ಕುಬೇರನಿಂದ ಕೊಡಲ್ಪಟ್ಟಿದ್ದ ಅಮೂಲ್ಯವಾದ ರತ್ನಾಭರಣವನ್ನು ಭಕ್ತಿಪೂರ್ವಕವಾಗಿ ವರನಿಗೆ ಅರ್ಪಿಸಿದನು.

ವಹ್ನಿಶುದ್ಧಾಂಶುಕಯುಗಂ ಯದ್ದತ್ತಂ ವಹ್ನಿನಾ ಪುರಾ ।
ದದೌ ತದೇವ ಕೃಷ್ಣಾಯ ಪರಿಪೂರ್ಣತಮಾಯ ಚ ॥ ೯೬ ॥

ಜ್ವಲಿತಂ ರತ್ನಮುಕುಟಂ ಯದ್ದತ್ತಂ ವಿಶ್ವಕರ್ಮಣಾ ।
ದದೌ ತನ್ಮಸ್ತಕೇ ರಾಜಾ ಕೃಷ್ಣಸ್ಯ ಪರಮಾತ್ಮನಃ ॥ ೯೭ ॥

ಧೂಪಂ ರತ್ನಪ್ರದೀಪಂ ಚ ನೈವೇದ್ಯಂ ಸುಮನೋಹರಂ ।
ನಾನಾಪ್ರಕಾರಪುಷ್ಪಂ ಚ ರತ್ನಸಿಂಹಾಸನಂ ದದೌ ॥ ೯೮ ॥

ಸಪ್ತತೀರ್ಥೋದಕಂ ಚೈವ ಪುನರಾಚಮನೀಯಕಂ ।
ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿಸುವಾಸಿತಂ ॥ ೯೯ ॥

ಶಯ್ಯಾಂ ರತಿಕರೀಂ ರಮ್ಯಾಂ ಸ್ನಾನಾರ್ಥಂ ವಾಸಿತಂ ಜಲಂ ।
ಕೃತ್ವಾ ಚ ವರಣಂ ರಾಜಾ ಪರಿಹಾರಂ ಚಕಾರ ತಂ ॥ ೧೦೦ ॥

---

೯೬. ಹಿಂದೆ ಅಗ್ನಿಯಿಂದ ಕೊಡಲ್ಪಟ್ಟಿದ್ದ ಅಗ್ನಿಯಂತೆ ಪರಿಶುದ್ಧವಾದ ಒಂದು ಜೊತೆ ವಸ್ತ್ರವನ್ನು ಪರಿಪೂರ್ಣನಾದ ಕೃಷ್ಣನಿಗೆ ಕೊಟ್ಟನು.

೯೭. ವಿಶ್ವಕರ್ಮನಿಂದ ಕೊಡಲ್ಪಟ್ಟಿದ್ದ ಪ್ರಕಾಶಮಾನವಾದ ರತ್ನಮಯ ಕಿರೀಟವನ್ನು ಪರಮಾತ್ಮನಾದ ಕೃಷ್ಣನ ತಲೆಯಮೇಲೆ ರಾಜನು ಇಟ್ಟನು.

೯೮. ಧೂಪವನ್ನೂ ರತ್ನಮಯವಾದ ದೀಪವನ್ನೂ ಅತ್ಯಂತ ಮನೋಹರವಾದ ನೈವೇದ್ಯವನ್ನೂ ನಾನಾವಿಧವಾದ ಹೂವುಗಳನ್ನೂ ರತ್ನಮಯವಾದ ಸಿಂಹಾಸನವನ್ನೂ ಕೊಟ್ಟನು.

೯೯. ಏಳು ತೀರ್ಥಗಳನ್ನು ಪುನರಾಚಮನಕ್ಕಾಗಿ ಕೊಟ್ಟನು. ಪಚ್ಚಕರ್ಪೂರವೇ ಮುಂತಾದುವುಗಳಿಂದ ಸುವಾಸನೆಯಾದ ಮನೋಹರವೂ ಶ್ರೇಷ್ಠವೂ ಆದ ತಾಂಬೂಲವನ್ನು ಕೊಟ್ಟನು.

೧೦೦. ಪ್ರೀತಿಯನ್ನುಂಟುಮಾಡುವ ಮನೋಹರವಾದ ಹಾಸಿಗೆಯನ್ನು ಕುಡಿಯುವುದಕ್ಕಾಗಿ ಸುವಾಸನೆಯಾಗಿರುವ ನೀರನ್ನೂ ಕೊಟ್ಟನು. ರಾಜನು ಈ ಪ್ರಕಾರವಾಗಿ ವರನನ್ನು ಪೂಜಿಸಿ ಅವನನ್ನು ಪ್ರದಕ್ಷಿಣೆಮಾಡಿದನು.

ಕೃತಾಂಜಲಿಪುಟೋ ರಾಜಾ ತಸ್ಮೈ ಪುಷ್ಪಾಂಜಲಿಂ ದದೌ ||೧೦೧||

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ರುಕ್ಮಿಣ್ಯುದ್ವಾಹೇ
ಸಪ್ತಾಧಿಕಶತತಮೋಽಧ್ಯಾಯಃ.

---

೧೦೧. ರಾಜನು ಎರಡು ಕೈಗಳನ್ನೂ ಬೊಗಸೆಮಾಡಿಕೊಂಡು ಹೂವನ್ನು ಸಮರ್ಪಿಸಿದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣನಾರದಸಂವಾದದಲ್ಲಿ ರುಕ್ಮಿಣಿಯ ವಿವಾಹದಲ್ಲಿ
ನೂರಏಳನೆಯ ಅಧ್ಯಾಯವು ಸಮಾಪ್ತವಾದುದು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಅಷ್ಟಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಏತಸ್ಮಿನ್ನಂತರೇ ದೇವೀ ಮಹಾಲಕ್ಷ್ಮೀಶ್ಚ ರುಕ್ಮಿಣೀ ।
ಆಜಗಾಮ ಸಭಾಮಧ್ಯೇ ಮುನಿದೇವಾದಿಭಿರ್ಯುತಾ || ೧ ||

ರತ್ನಸಿಂಹಾಸನಸ್ಥಾ ಚ ರತ್ನಾಲಂಕಾರಭೂಷಿತಾ ।
ವಹ್ನಿಶುದ್ಧಾಂಶುಕಾಧಾನಾ ಕಬರೀಭಾರಭೂಷಿತಾ || ೨ ||

ಪಶ್ಯಂತೀ ಸಸ್ಮಿತಾ ಸಾಧ್ವಿ ಹ್ಯಮೂಲ್ಯರತ್ನದರ್ಪಣಂ ।
ಕಸ್ತೂರೀಬಿಂದುಭಿರ್ಯುಕ್ತಾ ಸ್ನಿಗ್ಧಚಂದನಚರ್ಚಿತಾ || ೩ ||

---

### ನೂರಎಂಟನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ:— ಈ ಸಮಯದಲ್ಲಿ ಮಹಾಲಕ್ಷ್ಮೀಸ್ವರೂಪಳಾದ ರುಕ್ಮಿಣೀದೇವಿಯು ಮುನಿಗಳು ಮತ್ತು ದೇವತೆಗಳು ಇವರೇ ಮೊದಲಾದವರೊಡನೆ ಸಭೆಯ ಮಧ್ಯಕ್ಕೆ ಬಂದಳು.

೨–೫. ರತ್ನಮಯವಾದ ಅಭರಣಗಳಿಂದ ಅಲಂಕರಿಸಲ್ಪಟ್ಟವಳಾಗಿ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನು ಧರಿಸಿಕೊಂಡವಳಾಗಿ ದೊಡ್ಡಜಡೆಯ ಸಮೂಹದಿಂದ ಭೂಷಿತಳಾಗಿ ಅಮೂಲ್ಯವಾದ ರತ್ನದ ಕನ್ನಡಿಯನ್ನು ನೋಡುತ್ತ ಮಂದಹಾಸವನ್ನು ಬೀರುತ್ತ ಕಸ್ತೂರಿಯ ಬೊಟ್ಟಿನಿಂದ ಕೂಡಿದವಳಾಗಿ ಸುವಾಸನೆಯಾಗಿರುವ ಗಂಧವನ್ನು ಮೈಗೆ ಲೇಪಿಸಿಕೊಂಡವಳಾಗಿ ಚಂದ್ರದ ಬೊಟ್ಟಿನಿಂದ ಆಗಾಗ್ಯೆ

ಸಿಂಧೂರಬಿಂದುನಾ ಶಶ್ವದ್ಭಾಲಮಧ್ಯಸ್ಥಲೋಜ್ಜ್ವಲಾ ।
ತಪ್ತಕಾಂಚನವರ್ಣಾಭಾ ಶತಚಂದ್ರಸಮಪ್ರಭಾ ॥ ೪ ॥

ಚಂದನೋಕ್ಷಿತ್ತಸರ್ವಾಂಗಾ ಮಾಲತೀಮಾಲ್ಯಶೋಭಿತಾ ।
ಸಪ್ತಭಿರ್ನೃಪಪುತ್ರೈಶ್ಚ ಸಮಾನೀತಾ ಚ ಬಾಲಕೈಃ ॥ ೫ ॥

ದೇವೇಂದ್ರಾಶ್ಚ ಮುನೀಂದ್ರಾಶ್ಚ ಸಿದ್ಧೇಂದ್ರಾ ನೃಪಪುಂಗವಾಃ ।
ದದೃಶೂ ರುಕ್ಮಿಣೀದೇವೀಂ ಮಹಾಲಕ್ಷ್ಮೀಂ ಪತಿವ್ರತಾಂ ॥ ೬ ॥

ಸಪ್ತ ಪ್ರದಕ್ಷಿಣಾಃ ಕೃತ್ವಾ ಪ್ರಣಮ್ಯ ಸ್ವಪತಿಂ ಸತೀ ।
ಸಿಷೇಚ ಶೀತತೋಯೇನ ಸ್ನಿಗ್ಧಚಂದನಪಲ್ಲವೈಃ ॥ ೭ ॥

ತಾಂ ಸಿಷೇಚ ಜಗತ್ಕಾಂತಃ ಕಾಂತಾಂ ಶಾಂತಾಂ ಚ ಸಸ್ಮಿತಾಂ ।
ದದರ್ಶ ಕಾಂತಃ ಕಾತಾಂ ಚ ಕಾಂತಂ ಕಾಂತಾ ಶುಭೇ ಕ್ಷಣೇ ॥ ೮ ॥

---

ಹೊಳೆಯುತ್ತಿರುವ ಹಣೆಯ ಮಧ್ಯಭಾಗವುಳ್ಳವಳಾಗಿ, ಕಾಯಿಸಿದ ಚಿನ್ನದಂತೆ ಕಾಂತಿಯುಳ್ಳವಳಾಗಿ ಶರತ್ಕಾಲದ ಚಂದ್ರನಿಗೆ ಸಮನಾದ ಪ್ರಭೆಯುಳ್ಳವಳಾಗಿ ಮಾಲತೀ ಹೂವಿನ ಮಾಲಿಕೆಯಿಂದ ಪ್ರಕಾಶಿಸುತ್ತಿರುವವಳಾಗಿ ಬಾಲಕರಾದ ಏಳುಮಂದಿ ರಾಜಕುಮಾರರಿಂದ ಕರೆತರಲ್ಪಟ್ಟವಳಾಗಿ ರತ್ನಮಯವಾದ ಸಿಂಹಾಸನದಲ್ಲಿ ಕುಳಿತಳು.

೬. ದೇವಶ್ರೇಷ್ಠರೂ ಮುನಿಶ್ರೇಷ್ಠರೂ ಸಿದ್ಧಶ್ರೇಷ್ಠರೂ ರಾಜಶ್ರೇಷ್ಠರೂಕೂಡ ಪತಿವ್ರತೆಯೂ ಮಹಾಲಕ್ಷ್ಮಿಯೂ ಆದ ರುಕ್ಮಿಣೀದೇವಿಯನ್ನು ನೋಡಿದರು.

೭. ಪತಿಪ್ರತೆಯೂದ ರುಕ್ಮಿಣಿಯು ತನ್ನ ಪತಿಗೆ ಏಳು ಪ್ರದಕ್ಷಿಣೆಗಳನ್ನು ಮಾಡಿ ನಮಸ್ಕಾರವನ್ನು ಮಾಡಿದವಳಾಗಿ ತಣ್ಣಗಿರುವ ನೀರಿನಿಂದ ಕೂಡಿದ ಸುವಾಸನೆಯಿಂದ ಕೂಡಿದ ಗಂಧದ ಚಿಗುರುಗಳಿಂದ ಸಿಂಪಡಿಸಿದಳು.

೮. ಜಗತ್ತಿಗೆ ಪತಿಯಾದ ಶ್ರೀಕೃಷ್ಣನು ಸುಂದರಿಯೂ ಶಾಂತಸ್ವಭಾವದವಳೂ ಮುಗುಳುನಗೆಯನ್ನು ಬೀರುತ್ತಿರುವವಳೂ ಆದ ಆ ರುಕ್ಮಿಣಿಯನ್ನು ಸಿಂಪಡಿಸಿದನು. ಶುಭಮುಹೂರ್ತದಲ್ಲಿ ಪತಿಯನ್ನು ಸತಿಯೂ ಸತಿಯನ್ನು ಪತಿಯೂ ಪರಸ್ಪರವಾಗಿ ನೋಡಿದರು.

ಅಥ ದೇವೀ ಪಿತುಃ ಕ್ರೋಡೇ ಸಮುವಾಸ ಶುಭಾನನಾ ।
ಲಜ್ಜಯಾ ನಮ್ರವದನಾ ಜ್ವಲಂತೀ ಚ ಸ್ವತೇಜಸಾ ॥ ೯ ॥

ರಾಜಾ ದೇವೇಶ್ವರೀಂ ತಸ್ಮೈ ಪರಿಪೂರ್ಣತಮಾಯ ಚ ।
ಪ್ರದದೌ ಸಂಪ್ರದಾನೇನ ವೇದಮಂತ್ರೇಣ ನಾರದ ॥ ೧೦ ॥

ವಸುದೇವಾಜ್ಞಯಾ ಕೃಷ್ಣಃ ಸ್ವಸ್ತೀತ್ಯುಕ್ತ್ವಾ ಸ್ಥಿತೋ ಮುದಾ ।
ಜಗ್ರಾಹ ದೇವೀಂ ದೇವಶ್ಚ ಭವಾನೀಂ ಚ ಭವೋ ಯಥಾ ॥ ೧೧ ॥

ಸುವರ್ಣಾನಾಂ ಪಂಚಲಕ್ಷಂ ಕೃಷ್ಣಾಯ ಪರಮಾತ್ಮನೇ ।
ದಕ್ಷಿಣಾಂ ತಾಂ ದದೌ ರಾಜಾ ಪರಿಪೂರ್ಣತಮಾಯ ಚ ॥ ೧೨ ॥

ಶುಭಕರ್ಮಣಿ ನಿಷ್ಪನ್ನೇ ಕೃತ್ವಾ ಕನ್ಯಾಂ ಚ ವಕ್ಷಸಿ ।
ರುರೋದ ರಾಜಾ ಮೋಹೇನ ಮುನಿ ದೇವೇಂದ್ರಸಂಸದಿ ॥ ೧೩ ॥

---

೯. ಅನಂತರ ರುಕ್ಮಿಣೀದೇವಿಯು ಮಂಗಳಕರವಾದ ಮುಖವುಳ್ಳವಳಾಗಿ ನಾಚಿಕೆಯಿಂದ ತಲೆಯನ್ನು ಬಾಗಿಸಿಕೊಂಡವಳಾಗಿ ತನ್ನ ಕಾಂತಿಯಿಂದ ಬೆಳಗುತ್ತಿರುವವಳಾಗಿ ತಂದೆಯ ತೊಡೆಯಮೇಲೆ ಕುಳಿತುಕೊಂಡಳು.

೧೦. ಎಲೈ ನಾರದನೇ! ರಾಜನಾದ ಭೀಷ್ಮಕನು ದೇವೇಶ್ವರಿಯಾದ ರುಕ್ಮಿಣಿಯನ್ನು ಅತ್ಯಂತ ಪರಿಪೂರ್ಣನಾದ ಆ ಶ್ರೀಕೃಷ್ಣನಿಗೆ ವೇದಮಂತ್ರ ಪುರಸ್ಸರವಾಗಿ ಕನ್ಯಾದಾನವಿಧಿಯಿಂದ ಕೊಟ್ಟನು.

೧೧. ವಸುದೇವನ ಅಪ್ಪಣೆಯ ಪ್ರಕಾರ ಸ್ವಸ್ತಿ ಎಂಬುದಾಗಿ ಹೇಳಿ ಸಂತೋಷಗೊಂಡವನಾಗಿ ದೇವನಾದ ಈಶ್ವರನು ಭವಾನೀದೇವಿಯನ್ನು ಸ್ವೀಕರಿಸಿದಂತೆ ರುಕ್ಮಿಣೀದೇವಿಯನ್ನು ಸ್ವೀಕರಿಸಿದನು.

೧೨. ರಾಜನು ಅತ್ಯಂತ ಪರಿಪೂರ್ಣನಾದ ಕೃಷ್ಣಪರಮಾತ್ಮನಿಗೆ ಐದುಲಕ್ಷ ಸುವರ್ಣಗಳನ್ನು ದಕ್ಷಿಣೆಯಾಗಿ ಕೊಟ್ಟನು.

೧೩. ಮಂಗಳಕಾರ್ಯವು ನೆರವೇರಿದನಂತರ ರಾಜನಾದ ಭೀಷ್ಮಕನು ದೇವತೆಗಳು ಮತ್ತು ಮುನಿಗಳ ಸಭೆಯಲ್ಲಿ ಮಗಳನ್ನು ಎದೆಗೆ ಅಪ್ಪಿಕೊಂಡು ಮೋಹದಿಂದ ಅತ್ತನು.

**ಪರಿಹಾರೇಣ ವಚಸಾ ಕೃತ್ವಾ ತಸ್ಮೈ ಸಮರ್ಪಣಂ ।**
**ಸಿಷೇಚ ಕನ್ಯಾಂ ಧನ್ಯಾಂ ಚ ನೇತ್ರಯುಗ್ಮಜಲೇನ ಚ ॥ ೧೪ ॥**

**ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ**
**ಉತ್ತರಾರ್ಧೇ ನಾರಾಯಣನಾರದಸಂವಾದೇ**
**ರುಕ್ಮಿಣ್ಯುದ್ವಾಹೇ**
**ಅಷ್ಟಾಧಿಕಶತತಮೋಽಧ್ಯಾಯಃ.**

---

೧೪. ಸಮಾಧಾನಕರವಾದ ಮಾತುಗಳನ್ನು ಕೇಳಿದನಂತರ ಮಗಳನ್ನು ಆ ಕೃಷ್ಣನಿಗೆ ಸಮರ್ಪಿಸಿ ಧನ್ಯಳಾದ ಕನ್ಯೆಯನ್ನು ತನ್ನ ಕಣ್ಣುಗಳಿಂದ ಬರುತ್ತಿರುವ ನೀರಿನಿಂದ ನೆನೆಸಿದನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿನ
ನಾರಾಯಣನಾರದಸಂವಾದದಲ್ಲಿ ರುಕ್ಮಿಣಿಯು ವಿವಾಹದಲ್ಲಿ
ನೂರಎಂಟನೆಯ ಅಧ್ಯಾಯವು ಸಮಾಪ್ತವಾದುದು.



॥ ಓಂ॥

॥ ಓಂ ಶ್ರೀ ಗುರುಭ್ಯೋ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### ॥ ಅಥ ನವಾಧಿಕಶತತಮೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಏತಸ್ಮಿನ್ನಂತರೇ ರಾಜ್ಞೀ ರುಕ್ಮಿಣೀಜನನೀ ಶುಭಾ ।
ಪತಿಪುತ್ರವತೀಭಿಶ್ಚ ಸಾಧ್ವೀಭಿಃ ಸಹಿತಾ ಮುದಾ ॥ ೧ ॥

ಆಗತ್ಯ ಮಂಗಲಂ ಕೃತ್ವಾ ತತ್ರ ನಿರ್ಮಂಛನಾದಿಕಂ ।
ದಂಪತೀ ವೇಶಯಾಮಾಸ ರತ್ನನಿರ್ಮಾಣಮಂದಿರಂ ॥ ೨ ॥

ನಾನಾವಿಚಿತ್ರಚಿತ್ರಾಢ್ಯಂ ಹೀರಹಾರೇಣ ಭೂಷಿತಂ ।
ಮುಕ್ತಾಮಾಣಿಕ್ಯರತ್ನೇನ ಸುದೀಪ್ತಂ ದರ್ಪಣೇನ ಚ ॥ ೩ ॥

---

### ನೂರಒಂಭತ್ತನೆಯ ಅಧ್ಯಾಯವು.

೧–೩. ಶ್ರೀ ನಾರಾಯಣನು ಹೇಳುತ್ತಾನೆ:— ಇದೇ ಸಮಯದಲ್ಲಿ ಮಂಗಳಕರಳಾದ ರುಕ್ಮಿಣಿಯ ತಾಯಿಯಾದ ರಾಣಿಯು ಪುತ್ರವತಿಯರೂ ಸುಮಂಗಲಿಯರೂ ಆದ ಪತಿವ್ರತಾಸ್ತ್ರೀಯರೊಡನೆ ಆನಂದಭರಿತಳಾಗಿ ಅಲ್ಲಿಗೆ ಬಂದು ಆರತಿ ಮಂಗಲಗಳನ್ನು ಮಾಡಿ ದಂಪತಿಗಳನ್ನು ಅನೇಕವಿಧವಾದ ಚಿತ್ರಗಳಿಂದ ಕೂಡಿದ, ಹೀರಕದ ಹಾರದಿಂದ ಅಲಂಕರಿಸಲ್ಪಟ್ಟದ್ದ, ಮುತ್ತು ಮಾಣಿಕ್ಯ ರತ್ನ ಇವುಗಳಿಂದ ಅತ್ಯಂತವಾಗಿ ಹೊಳೆಯುತ್ತಿರುವ, ಕನ್ನಡಿಯಿಂದ ಕೂಡಿದ ರತ್ನಗಳಿಂದಲೇ ಮಾಡಲ್ಪಟ್ಟಿರುವ ಮನೆಗೆ ಪ್ರವೇಶಮಾಡಿಸಿದಳು.

ದದರ್ಶ ಕೃಷ್ಣಸ್ತತ್ರೈವ ದುರ್ಗಾಂ ದುರ್ಗತಿನಾಶಿನೀಂ ।
ಸರಸ್ವತೀಂ ಚ ಸಾವಿತ್ರೀಂ ರತಿಂ ಚ ರೋಹಿಣೀಂ ಸತೀಂ ॥ ೪ ॥

ದೇವಪತ್ನೀಂ ರಾಜಪತ್ನೀಂ ಮುನಿಪತ್ನೀಂ ಪತಿವ್ರತಾಂ ।
ರತ್ನಸಿಂಹಾಸನಸ್ಥಾಂ ಚ ರತ್ನಭೂಷಣಭೂಷಿತಾಂ ॥ ೫ ॥

ಉತ್ತಸ್ಥುರಾರಾದ್ದೃಷ್ಟ್ವಾ ಚ ಶ್ರೀಕೃಷ್ಣಂ ಜಗತೀಪತಿಂ ।
ರತ್ನಸಿಂಹಾಸನೇ ರಮ್ಯೇ ವಾಸಯಾಮಾಸ ತಂ ಮುದಾ ॥ ೬ ॥

ಸ್ತುತಿಂ ಚಕ್ರುಶ್ಚ ದೇವಾಶ್ಚ ಮುನಿಪತ್ನ್ಯಶ್ಚ ಮಾಧವಂ ।
ಪುಟಾಂಜಲಿಯುತಾಸ್ತತ್ರ ಕ್ರಮೇಣ ಚ ಪೃಥಕ್ಪೃಥಕ್ ॥ ೭ ॥

ಭೋಜಯಾಮಾಸ ರಾಜ್ಞೀ ಚ ವರೇಣ ಸಹ ಕನ್ಯಕಾಂ ।
ಸಕರ್ಪೂರಂ ಸತಾಂಬೂಲಂ ಪ್ರದದೌ ವಾಸಿತಂ ಜಲಂ ॥ ೮ ॥

---

೪. ಶ್ರೀಕೃಷ್ಣನು ಅಲ್ಲಿಯೇ ದುರ್ಗತಿಯನ್ನು ನಾಶಮಾಡುವವಳಾದ ದುರ್ಗಿಯನ್ನೂ ಸರಸ್ವತಿಯನ್ನೂ ಸಾವಿತ್ರಿಯನ್ನೂ ರತಿಯನ್ನೂ ಪತಿವ್ರತೆಯಾದ ರೋಹಿಣಿಯನ್ನೂ ನೋಡಿದನು.

೫. ದೇವಪತ್ನಿಯರನ್ನೂ ರತ್ನಸಿಂಹಾಸನದಲ್ಲಿ ಕುಳಿತಿರುವ ರಾಜಪತ್ನಿಯರನ್ನೂ ರತ್ನದ ಆಭರಣಗಳಿಂದ ಅಲಂಕರಿಸಲ್ಪಟ್ಟವರಾದ ಪತಿವ್ರತೆಯರಾದ ಮುನಿಪತ್ನಿಯರನ್ನೂ ನೋಡಿದನು.

೬. ಜಗದೊಡೆಯನಾದ ಶ್ರೀಕೃಷ್ಣನನ್ನು ದೂರದಿಂದಲೇ ನೋಡಿ ಎಲ್ಲರೂ ಎದ್ದು ನಿಂತುಕೊಂಡರು ಮತ್ತು ಮನೋಹರವಾದ ರತ್ನಸಿಂಹಾಸನದಲ್ಲಿ ಅವನನ್ನು ಸಂತೋಷದಿಂದ ಕುಳ್ಳಿರಿಸಿದರು.

೭. ದೇವತೆಗಳೂ ಮುನಿಪತ್ನಿಯರೂ ಕೂಡ ಎರಡು ಕೈಗಳನ್ನೂ ಜೋಡಿಸಿಕೊಂಡು ಅಲ್ಲಿಯೇ ಬೇರೆಬೇರೆಯಾಗಿ ಕ್ರಮವಾಗಿ ಮಾಧವನನ್ನು ಸ್ತೋತ್ರ ಮಾಡಿದರು.

೮. ರಾಣಿಯೂಕೂಡ ವರನೊಡನೆ ಕನ್ಯೆಗೆ ಭೋಜನವನ್ನು ಮಾಡಿಸಿದಳು. ಪಚ್ಚ ಕರ್ಪೂರದಿಂದ ಕೂಡಿದ ತಾಂಬೂಲವನ್ನೂ ಸುವಾಸನೆಯಾದ ನೀರನ್ನೂ ಕೊಟ್ಟಳು.

ದುರ್ಗಾ ಕೃಷ್ಣಾಯ ಪ್ರದದೌ ತತ್ರ ಮಂಗಲಪತ್ರಿಕಾಂ ।
ಸರ್ವಾಸಾಮಾಜ್ಞಯಾ ದೇವೀ ಪಠೇತಿ ತಮುವಾಚ ಸಾ ॥ ೯ ॥

ಪಪಾಠ ಪತ್ರಿಕಾಂ ಕೃಷ್ಣೋ ದೇವೀಸಂಸದಿ ಸಸ್ಮಿತಃ ।
ಲಕ್ಷ್ಮೀ ಸರಸ್ವತೀ ದುರ್ಗಾ ಸಾವಿತ್ರೀ ರಾಧಿಕಾ ಸತೀ ॥ ೧೦ ॥

ತುಲಸೀ ಪೃಥಿವೀ ಗಂಗಾsರುಂಧತೀ ಯಮುನಾದಿತಿಃ ।
ಶತರೂಪಾ ಚ ಸೀತಾ ಚ ದೇವಹೂತಿಶ್ಚ ಮೇನಕಾ ॥ ೧೧ ॥

ದೇವ್ಯಶ್ಚೈತಾಶ್ಚ ದಂಪತ್ಯೋಃ ಕುರ್ವಂತು ಮಂಗಲಂ ಪರಂ ।
ಪಪಾಠ ಚೇತಿ ಕೃಷ್ಣಶ್ಚ ಶುಶ್ರುವುರ್ಜಹಸುಶ್ಚ ತಾಃ ॥ ೧೨ ॥

॥ ಪಾರ್ವತ್ಯುವಾಚ ॥

ರುಕ್ಮಿಣೀಂ ರುಕ್ಮಿಣೀಕಾಂತ ತ್ವಾಂ ಪಶ್ಯಂತೀಂ ಚ ಸಸ್ಮಿತಾಂ ।
ಪಶ್ಯ ಪ್ರೌಢಾಂ ರೂಪವತೀಂ ಸುಂದರೀಂ ನವಯೌವ್ವನಾಂ ॥ ೧೩ ॥

---

೯. ಅಲ್ಲಿಯೇ ದುರ್ಗಾದೇವಿಯು ಎಲ್ಲರ ಅಪ್ಪಣೆಯ ಪ್ರಕಾರ ಕೃಷ್ಣನಿಗೆ ಮಂಗಲಪತ್ರಿಕೆಯನ್ನು ಕೊಟ್ಟಳು ಮತ್ತು ಆ ದೇವಿಯು ಆ ಮಂಗಲಪತ್ರಿಕೆಯನ್ನು ಓದುವಂತೆ ಶ್ರೀಕೃಷ್ಣನಿಗೆ ಹೇಳಿದಳು.

೧೦–೧೨. ಕೃಷ್ಣನು ದೇವಿಯ ಮುಂದೆ ಮಂದಹಾಸವನ್ನು ಬೀರುತ್ತ ಪತ್ರಿಕೆಯನ್ನು ಓದಿದನು. ಲಕ್ಷ್ಮಿಯೂ ಸರಸ್ವತಿಯೂ ದುರ್ಗಿಯೂ ಸಾವಿತ್ರಿಯೂ ಸತಿಯಾದ ರಾಧೆಯೂ ತುಲಸಿಯೂ ಪೃಥಿವಿಯೂ ಗಂಗೆಯೂ ಅರುಂಧತಿಯೂ ಯಮುನೆಯೂ ದಿತಿಯೂ ಶತರೂಪಳೂ ಸೀತೆಯೂ ದೇವಹೂತಿಯೂ ಮೇನಕೆಯೂ ಈ ದೇವಿಯರೆಲ್ಲರೂ ದಂಪತಿಗಳಿಗೆ ಉತ್ತಮವಾದ ಮಂಗಲವನ್ನುಂಟುಮಾಡಲಿ, ಈ ರೀತಿಯಾಗಿ ಕೃಷ್ಣನು ಓದಿದನು. ಅವರೆಲ್ಲರೂ ಕೇಳಿ ನಕ್ಕರು.

೧೩. ಪಾರ್ವತಿಯು ಹೇಳುತ್ತಾಳೆ:— ಎಲೈ ರುಕ್ಮಿಣಿಯ ಪ್ರಿಯನೇ! ಮುಗುಳುನಗುತ್ತ ನಿನ್ನನ್ನು ನೋಡುತ್ತಿರುವ ಪ್ರೌಢಳಾದ ರೂಪವತಿಯೂ ಸುಂದರಿಯೂ ಆದ ಹೊಸದಾದ ಯೌವನದಿಂದ ಕೂಡಿರುವ ರುಕ್ಮಿಣಿಯನ್ನು ನೋಡುವವನಾಗು.

॥ ಸರಸ್ವತ್ಯುವಾಚ ॥

ತವ ಯೋಗ್ಯಾ ಚ ಯುವತೀ ರತ್ನಭೂಷಣಭೂಷಿತಾ ।
ತ್ವಾಂ ಪ್ರಾರ್ಥಯಂತೀ ಸುಚಿರಮವಮನ್ಯಾನ್ಯಮೀಶ್ವರಂ ॥ ೧೪ ॥

॥ ಸಾವಿತ್ರ್ಯುವಾಚ ॥

ಯಥಾ ವರಸ್ತಥಾ ಕನ್ಯಾ ವಿಧಿನಾ ಯೋಜಿತಾ ಪುರಾ ।
ವಿದಗ್ಧಾಯಾ ವಿದಗ್ಧೇನ ಸರ್ವತ್ರ ಸಂಗಮಃ ಶುಭಃ ॥ ೧೫ ॥

॥ ರತ್ಯುವಾಚ ॥

ಈಶ್ವರೇಣ ಪರೀಹಾಸಂ ಕಾ ವಾ ಕರ್ತುಂ ಕ್ಷಮಾ ಭುವಿ ।
ಧ್ಯಾನಾಸಾಧ್ಯೋ ದುರಾರಾಧ್ಯಶ್ಚಾವಮನ್ಯಾನ್ಯಮೀಶ್ವರಂ ॥ ೧೬ ॥

॥ ಗಾಯತ್ರ್ಯುವಾಚ ॥

ಯಥಾ ವರಸ್ತಥಾ ಕನ್ಯಾ ಚಾಸ್ಮಿಚ್ಛೇ ಭೈಷ್ಮಕೇ ಗೃಹೇ ।

---

೧೪. ಸರಸ್ವತಿಯು ಹೇಳುತ್ತಾಳೆ :— ರತ್ನಾಭರಣಗಳಿಂದ ಶೋಭಿಸುತ್ತಿರುವ ಬೇರೆಯ ಐಶ್ವರ್ಯವಂತನನ್ನು ತಿರಸ್ಕರಿಸಿ ಬಹುಕಾಲದಿಂದಲೂ ನಿನ್ನನ್ನೇ ಪ್ರಾರ್ಥಿಸುತ್ತಿರುವ ಈ ಯುವತಿಯು ನಿನಗೆ ತಕ್ಕವಳಾಗಿರುವಳು.

೧೫. ಸಾವಿತ್ರಿಯು ಹೇಳುತ್ತಾಳೆ :—ವರನು ಯಾವ ರೀತಿಯ ಗುಣವಂತನೋ ಅದೇ ರೀತಿಯ ಗುಣವುಳ್ಳ ಕನ್ಯೆಯನ್ನು ಬ್ರಹ್ಮನು ಸೇರಿಸಿರುವನು. ಎಲ್ಲೆಡೆಯಲ್ಲಿಯೂ ನಿಪುಣಳಾದ ಕನ್ಯೆಯು ನಿಪುಣನಾದ ವರನೊಡನೆ ಸೇರುವುದು ಶುಭಕರವು.

೧೬. ರತಿಯು ಹೇಳುತ್ತಾಳೆ :— ಭೂಮಿಯಲ್ಲಿ ಈಶ್ವರನೊಡನೆ ಪರಿಹಾಸ್ಯವನ್ನು ಮಾಡಲು ಯಾವಳು ತಾನೆ ಸಮರ್ಥಳಾಗುತ್ತಾಳೆ? ಬೇರೆಯ ಐಶ್ವರ್ಯವಂತನನ್ನು ತಿರಸ್ಕರಿಸಿ ಧ್ಯಾನದಿಂದ ಒಲಿಸಿಕೊಳ್ಳಲಸಾಧ್ಯನೂ ಕಷ್ಟದಿಂದ ಆರಾಧಿಸಲು ಯೋಗ್ಯನೂ ಆದ ಈ ವರನನ್ನು ರುಕ್ಮಿಣಿಯು ಹೊಂದಿರುವಳು.

೧೭. ಗಾಯತ್ರಿಯು ಹೇಳುತ್ತಾಳೆ :— ಆನಂದಕರವಾದ ಈ ಭೀಷ್ಮಕನ ಮನೆಯಲ್ಲಿ ವರನಿಗೆ ತಕ್ಕ ಕನ್ಯೆಯು ದೊರೆತಿರುವಳು.

|| ರೋಹಿಣ್ಯುವಾಚ ||

ಸತ್ಯಂ ಬ್ರೂಹಿ ಜಗನ್ನಾಥ ಕಾಮಿನೀನಾಂ ಚ ಸಂಸದಿ ।
ಕೀದೃಶೀ ರಾಧಿಕಾ ರಮ್ಯಾ ರುಕ್ಮಿಣೀ ಚಾಪಿ ಕೀದೃಶೀ || ೧೭ ||

|| ಸರಸ್ವತ್ಯುವಾಚ ||

ರಾಧಾಯಾಂ ಯಾದೃಶೀಪ್ರೀತೀ ರುಕ್ಮಿಣ್ಯಾಂ ನೈವ ತಾದೃಶೀ ।
ಸಾ ಸಂಗಿನೀ ಪೂರ್ವಕಾಲೇ ಸರ್ವಕ್ರೀಡಾಸು ವರ್ಧಿನೀ || ೧೮ ||

ಪ್ರಾಣಾಧಿಷ್ಠಾತೃದೇವೀ ಸಾ ಪಂಚಪ್ರಾಣಾಧಿಕಾ ಸತೀ ।
ರುಕ್ಮಿಣೀ ಕಮಲಾ ಸಾಕ್ಷಾತ್ಸಂಪದಾಮಧಿದೇವತಾ || ೧೯ ||

ಸರ್ವಶಕ್ತಿಸ್ಸ್ವರೂಪಾ ಚ ಕೃಷ್ಣಸ್ಯ ಪರಮಾತ್ಮನಃ ।
ಬುದ್ಧೇರಪ್ಯಧಿದೇವೀ ಚ ದುರ್ಗಾ ನಾರಾಯಣೀ ಪರಾ || ೨೦ ||

ದೇವಾಧಿಷ್ಠಾತೃದೇವೀ ತ್ವಂ ಸಾವಿತ್ರೀ ವೇದಮಾತೃಕಾ ।
ವಿದ್ಯಾಧಿದೇವತಾಹಂ ಚ ತತೋಽನ್ಯಾಶ್ಚ ಕಲಾಕಲಾಃ || ೨೧ ||

---

ರೋಹಿಣಿಯು ಹೇಳುತ್ತಾಳೆ :— ಎಲೈ ಜಗನ್ನಾಥನೇ ಈ ಸ್ತ್ರೀಯರ ಮಧ್ಯದಲ್ಲಿ ನಿಜವಾದ ಮಾತನ್ನು ಹೇಳು. ರಾಧಿಕೆಯು ಯಾವ ರೀತಿ ಮನೋಹರಳು ? ರುಕ್ಮಿಣಿಯು ಯಾವ ರೀತಿ ಮನೋಹರಳಾಗಿರುವಳು ?

೧೮. ಸರಸ್ವತಿಯು ಹೇಳುತ್ತಾಳೆ :— ರಾಧೆಯಲ್ಲಿ ಎಷ್ಟು ಪ್ರೀತಿಯಿರುವುದೋ ಅಷ್ಟು ಪ್ರೀತಿಯು ರುಕ್ಮಿಣಿಯಲ್ಲಿ ಇಲ್ಲವೇ ಇಲ್ಲ. ಅವಳು ಪೂರ್ವಕಾಲದಲ್ಲಿಯೇ ಇವನನ್ನು ಸೇರಿದವಳು ಮತ್ತು ಎಲ್ಲ ಆಟಪಾಟಗಳಲ್ಲಿಯೂ ಅಭಿವೃದ್ಧಿ ಹೊಂದಿದವಳು.

೧೯. ಸತಿಯಾದ ಆ ರಾಧೆಯು ಕೃಷ್ಣನ ಪ್ರಾಣಕ್ಕೆ ಆಧಾರಳಾದ ಮತ್ತು ಪಂಚಪ್ರಾಣಗಳಿಗಿಂತಲೂ ಹೆಚ್ಚೆನಿಸಿದ ದೇವಿಯು. ರುಕ್ಮಿಣಿಯು ಸಂಪತ್ತುಗಳಿಗೆ ಅಧಿದೇವತೆಯಾದ ಸಾಕ್ಷಾಲ್ಲಕ್ಷ್ಮಿಯು.

೨೦. ನಾರಾಯಣಿಯೂ ಶ್ರೇಷ್ಠಳೂ ಆದ ದುರ್ಗೆಯು ಕೃಷ್ಣಪರಮಾತ್ಮನ ಸರ್ವಶಕ್ತಿಸ್ವರೂಪಳೂ ಬುದ್ಧಿಗೆ ಅಧಿದೇವತೆಯೂ ಆಗಿರುವಳು.

೨೧. ನೀನಾದರೋ ದೇವತೆಗಳಿಗೆ ಆಧಾರರೂಪಳಾದ ದೇವಿಯು. ಸಾವಿತ್ರಿಯು ವೇದಗಳಿಗೆ ಜನನಿಯು. ನಾನು ವಿದ್ಯೆಗೆ ಆಧಾರಭೂತಳಾದ ದೇವಿಯು. ಇನ್ನುಳಿದವರೆಲ್ಲ ಕಲೆಗಳ ಕಲಾ ಸ್ವರೂಪರು.

ನ ಬ್ರಹ್ಮಣಿ ಶಿವೇ ಶೇಷೇ ಗಣೇಶೇ ಚ ದಿನೇಶ್ವರೇ ।
ನ ಭಕ್ತೇಷು ಚ ಪದ್ಮಾಯಾಂ ನ ಶಿವಾಯಾಂ ಚ ಮಯ್ಯಪಿ ॥ ೨೨ ॥

ಪ್ರಸಾದೋ ಯಾದೃಶಸ್ತಸ್ಯಾಮನ್ಯೇಷು ಚ ನ ತಾದೃಶಃ ।
ತ್ರೈಲೋಕ್ಯೇ ಪೃಥಿವೀ ಧನ್ಯಾ ಸುಪುಣ್ಯಂ ಭಾರತಂ ಯತಃ ॥ ೨೩ ॥

ತತ್ರ ವೃಂದಾವನಂ ಧನ್ಯಂ ರಾಧಾಪಾದಾಬ್ಜಚಿಹ್ನಿತಂ ।
ಸರ್ವಾಸಾಮಪಿ ದೇವೀನಾಂ ರಾಧಾ ಪುಣ್ಯವತೀ ಸತೀ ॥ ೨೪ ॥

ರಾಧಾಪಾದಾಬ್ಜನಖರೇ ದದೌ ಸ್ನಿಗ್ಧಮಲಕ್ತಕಂ ।
ಅಯಮೇವಮಿತಿ ಶ್ರುತ್ವಾ ಜಹಸುಃ ಸರ್ವಯೋಷಿತಃ ॥ ೨೫ ॥

ಧ್ಯಾಯಂತೇ ದೂರತಃ ಸರ್ವಾ ರಾಧಾವಕ್ಷಃಸ್ಥಲಸ್ಥಿತಾ ।
ತಸ್ಮಾದ್ರಾಧಾಂ ನಮಸ್ಕೃತ್ಯ ತುಲನಾಂ ಮನ್ಯತೇ ಕಿಲ ॥ ೨೬ ॥

---

೨೨–೨೪. ರಾಧೆಯಲ್ಲಿ ಯಾವರೀತಿಯಾದ ಪ್ರೀತಿಯಿರುವುದೋ ಅಂಥಾ ಪ್ರೀತಿಯು ಬ್ರಹ್ಮನಲ್ಲಾಗಲಿ ಈಶ್ವರನಲ್ಲಾಗಲಿ ಶೇಷನಲ್ಲಾಗಲಿ ಗಣೇಶನಲ್ಲಾಗಲಿ ಸೂರ್ಯನಲ್ಲಾಗಲಿ ಭಕ್ತರಲ್ಲಾಗಲಿ ಲಕ್ಷ್ಮಿಯಲ್ಲಾಗಲಿ ಪಾರ್ವತಿಯಲ್ಲಾಗಲಿ ನನ್ನಲ್ಲಾಗಲಿ ಇತರರಲ್ಲಾರಲ್ಲಿಯೂ ಇಲ್ಲವೇ ಇಲ್ಲ. ಮೂರುಲೋಕದಲ್ಲಿ ಭೂಲೋಕವು ಧನ್ಯವಾದುದು. ಭರತಖಂಡವು ಅತ್ಯಂತ ಪುಣ್ಯಕರವಾದುದು. ಯಾಕೆಂದರೆ ಆ ಭರತಖಂಡದಲ್ಲಿ ರಾಧೆಯ ಪಾದಕಮಲಗಳ ಗುರುತುಳ್ಳ ಪುಣ್ಯಕರವಾದ ವೃಂದಾವನವಿರುವುದು. ಸಮಸ್ತ ದೇವಿಯರ ಮಧ್ಯದಲ್ಲಿ ಪತಿವ್ರತೆಯಾದ ರಾಧೆಯು ಪುಣ್ಯವಂತಳು.

೨೫. ಈ ಕೃಷ್ಣನು ತಾನೇ ಆ ರಾಧೆಯ ಪಾದಕಮಲಗಳ ಉಗುರುಗಳಿಗೆ ಜಿಗುಟಾಗಿರುವ ಅರಗಿನರಸವನ್ನು ಬಳಿದಿರುವನು. ಈ ಪ್ರಕಾರ ಹೇಳಿದ ಮಾತನ್ನು ಕೇಳಿ ಅಲ್ಲಿದ್ದ ಎಲ್ಲ ಹೆಂಗಸರೂ ನಕ್ಕರು.

೨೬. ಇತರ ದೇವಿಯರೆಲ್ಲರೂ ದೂರದಲ್ಲಿದ್ದುಕೊಂಡು ಕೃಷ್ಣನನ್ನು ಧ್ಯಾನ ಮಾಡುತ್ತಾರೆ. ರಾಧೆಯು ಅವನ ವಕ್ಷಸ್ಥಳದಲ್ಲಿಯೇ ಇರುವಳು. ಆದುದರಿಂದ ರಾಧೆಗೆ ನಮಸ್ಕಾರಮಾಡಿ ಅವಳಿಗೆ ತಾವು ಸಮನಲ್ಲವೆಂದು ತಿಳಿದುಕೊಳ್ಳುತ್ತಾರೆ.

ಸರಸ್ವತೀವಚಶ್ರುತ್ವಾ ಸಾವಿತ್ರೀ ಪಾರ್ವತೀ ಸತೀ ।
ಅನ್ಯಾಶ್ಚ ಯೋಷಿತಃ ಸರ್ವಾಃ ಸಾಧ್ವಿತ್ಯೂಚುಶ್ಚ ಸಂಸದಿ ॥ ೨೭ ॥

ಲೋಪಾಮುದ್ರಾನಸೂಯಾ ಚಾಪ್ಯಹಲ್ಯಾರುಂಧತೀ ತಥಾ ।
ಸರ್ವಾಸ್ತಾ ಮುನಿಪತ್ನ್ಯಶ್ಚ ರಭಸಂ ಚಕ್ರುರೀಶ್ವರಂ ॥ ೨೮ ॥

ಅಥ ದೇವಾಂಶ್ಚ ಭೂಪಾಂಶ್ಚ ಮುನೀಂದ್ರಾಂಶ್ಚಾಪಿ ಭೀಷ್ಮಕಃ ।
ಪೂಜಯಾಮಾಸ ವಿಧಿನಾ ಭೋಜಯಾಮಾಸ ಸಾದರಂ ॥ ೨೯ ॥

ಖಾದ್ಯತಾಂ ಖಾದ್ಯತಾಂ ಲೋಕಾ ದೀಯತಾಂ ದೀಯತಾಮಿತಿ ।
ಶಬ್ದೋ ಬಭೂವ ನಗರೇ ವಾದ್ಯಸಂಗೀತಮಂಗಲೈಃ ॥ ೩೦ ॥

ಅಥ ಪ್ರಭಾತೇ ಬ್ರಹ್ಮೇಶ ಶೇಷಾದ್ಯಾಸ್ತ್ರಿದಶಾಸ್ತಥಾ ।
ಯಾನಮಾರೋಹಣಂ ಭೂಪಾಶ್ಚಕ್ರಿರೇ ಚ ತ್ವರಾನ್ವಿತಾಃ ॥ ೩೧ ॥

---

೨೭. ಸರಸ್ವತಿಯ ಮಾತನ್ನು ಕೇಳಿ ಪಾರ್ವತಿಯೂ ಸತಿಯಾದ ಸಾವಿತ್ರಿಯೂ ಇನ್ನೂ ಇತರ ಎಲ್ಲ ಹೆಂಗಸರೂ ಯೋಗ್ಯವಾದ ಮಾತೆಂದು ಹೇಳಿದರು.

೨೮. ಲೋಪಾಮುದ್ರೆಯೂ ಅನಸೂಯೆಯೂ ಅಹಲ್ಯೆಯೂ ಅರುಂಧತಿಯೂ ಮತ್ತು ಇತರ ಮುನಿಪತ್ನಿಯರೂ ಕೂಡ ಈಶ್ವರನಾದ ಕೃಷ್ಣನಿಗೆ ಆನಂದವಾಗುವಂತೆ ಮಾತನಾಡಿದರು.

೨೯. ಅನಂತರ ಭೀಷ್ಮಕನು ದೇವತೆಗಳನ್ನೂ ರಾಜರನ್ನೂ ಮುನಿಶ್ರೇಷ್ಠರನ್ನೂ ನಿಯಮಾನುಸಾರವಾಗಿ ಪೂಜಿಸಿದನು ಮತ್ತು ಪ್ರೀತಿಯಿಂದ ಭೋಜನವನ್ನು ಮಾಡಿಸಿದನು.

೩೦. ಜನರೇ! ತಿನ್ನಿರಿ ತಿನ್ನಿರಿ, ಕೊಡಿರಿ ಕೊಡಿರಿ ಎಂಬ ಶಬ್ದವು ಮಂಗಲೋತ್ಸವ ಸಂಬಂಧವಾದ ವಾದ್ಯ ಮತ್ತು ಸಂಗೀತಗಳ ಧ್ವನಿಯೊಡನೆ ಆ ಪಟ್ಟಣದಲ್ಲೆಲ್ಲಾ ಹರಡಿತು.

೩೧. ಅನಂತರ ಪ್ರಾತಃಕಾಲವಾಗಲು ಬ್ರಹ್ಮ ಈಶ್ವರ ಶೇಷ ಮುಂತಾದ ದೇವತೆಗಳೂ ರಾಜರುಗಳೂ ತ್ವರೆಯಿಂದ ಕೂಡಿದವರಾಗಿ ಸತಿಯಾದ ರುಕ್ಮಿಣಿಯನ್ನೂ ಶ್ರೀಕೃಷ್ಣನನ್ನೂ ರಥಾರೋಹಣ ಮಾಡಿಸಿದರು.

ರಾಜಾ ಮಹೋಗ್ರಸೇನಶ್ಚ ವಸುದೇವಸ್ತ್ವರಾನ್ವಿತಃ ।
ಕಾರಯಾಮಾಸ ಯಾತ್ರಾಂ ಚ ಶ್ರೀಕೃಷ್ಣಂ ರುಕ್ಮಿಣೀಂ ಸತೀಂ ॥ ೩೨ ॥

ಸುಭದ್ರಾ ರುಕ್ಮಿಣೀಮಾತಾ ಕನ್ಯಾಂ ಕೃತ್ವಾ ಸ್ವವಕ್ಷಸಿ ।
ರುರೋದೋಚ್ಚೈಸ್ತತ್ಸಖೀಭಿರ್ಬಾಂಧವೈರಿತ್ಯುವಾಚ ಸಾ ॥ ೩೩ ॥

॥ ಸುಭದ್ರೋವಾಚ ॥

ಕ್ವ ಯಾಸಿ ಮಾಂ ಪರಿತ್ಯಜ್ಯ ವತ್ಸೇ ಮಾತರಮೀಶ್ವರೀಂ ।
ಕಥಂ ಜೀವಾಮಿ ತ್ವಾಂ ತ್ಯಕ್ತ್ವಾ ಕಥಂ ತ್ವಂ ವಾಪಿ ಜೀವಸಿ ॥ ೩೪ ॥

ಮಹಾಲಕ್ಷ್ಮೀರ್ಮಮಗೃಹಾತ್ಕನ್ಯಾರೂಪಾ ಚ ಮಾಯಯಾ ।
ವಸುದೇವಾಲಯಂ ಯಾಸಿ ವಾಸುದೇವ ಪ್ರಿಯಾ ಸತೀ ॥ ೩೫ ॥

ಇತ್ಯುಕ್ತ್ವಾ ಕನ್ಯಕಾಂ ಶೋಕಾತ್ಸಿಷೇಚ ನೇತ್ರಜೈರ್ಜಲೈಃ ।
ಭೀಷ್ಮಕಃ ಸಾಶ್ರುನೇತ್ರಶ್ಚ ಕನ್ಯಾಂ ಕೃಷ್ಣೇ ಸಮರ್ಪ್ಯ ಚ ॥ ೩೬ ॥

---

೩೨. ರಾಜನಾದ ಉಗ್ರಸೇನನೂ ವಸುದೇವನೂ ಕೂಡ ತ್ವರೆಯಿಂದ ಕೂಡಿದವರಾಗಿ ಸತಿಯಾದ ರುಕ್ಮಿಣಿಯನ್ನೂ ಶ್ರೀಕೃಷ್ಣನನ್ನೂ ಪ್ರಯಾಣಮಾಡಿಸಿದರು.

೩೩. ರುಕ್ಮಿಣಿಯ ತಾಯಿಯಾದ ಸುಭದ್ರೆಯು ಮಗಳನ್ನು ತನ್ನೆದೆಗಪ್ಪಿಕೊಂಡು ಅವಳ ಸಖಿಯರಿಂದಲೂ ಬಂಧುಗಳಿಂದಲೂ ಸಮೇತಳಾಗಿ ಗಟ್ಟಿಯಾಗಿ ಅತ್ತಳು; ಮತ್ತು ಈ ಪ್ರಕಾರ ಹೇಳಿದಳು.

೩೪. ಸುಭದ್ರೆಯು ಹೇಳುತ್ತಾಳೆ :— ಎಲೈ ಮಗಳೇ! ತಾಯಿಯಾದ ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವಿ? ನಿನ್ನನ್ನು ಬಿಟ್ಟು ನಾನು ಹೇಗೆ ಬದುಕಲಿ? ನೀನಾದರೋ ನನ್ನನ್ನು ಬಿಟ್ಟು ಹೇಗೆ ಬದುಕುವಿ?

೩೫. ಮಾಯೆಯಿಂದ ಕನ್ಯಾರೂಪಳಾದ ಸಾಕ್ಷಾನ್ಮಹಾಲಕ್ಷ್ಮಿಯಾದ ನೀನು ವಾಸುದೇವನ ಪ್ರಿಯಪತ್ನಿಯಾಗಿ ನನ್ನ ಮನೆಯಿಂದ ವಸುದೇವನ ಮನೆಗೆ ಹೋಗುತ್ತಿರುವಿ.

೩೬–೩೭. ಈ ರೀತಿಯಾಗಿ ಹೇಳುತ್ತ ದುಃಖದಿಂದ ಮಗಳನ್ನು ಕಣ್ಣೀರಿನಿಂದ ನೆನೆಸಿದಳು. ಭೀಷ್ಮಕನು ಕಣ್ಣಿನಲ್ಲಿ ನೀರು ತುಂಬಿಕೊಂಡವನಾಗಿ

ತಂ ಚ ಕೃತ್ವಾ ಪರೀಹಾರಂ ರುರೋದೋಚ್ಚೈರತೀವ ಸಃ ।
ರುರೋದ ರುಕ್ಮಿಣೀ ದೇವೀ ಶ್ರೀಕೃಷ್ಣಶ್ಚಾಪಿ ಮಾಯಯಾ ॥ ೩೭ ॥

ರಥಮಾರೋಪಯಾಮಾಸ ವಸುದೇವಃ ಸುತಂ ವಧೂಂ ।
ಏತಸ್ಮಿನ್ನಂತರೇ ರಾಜಾ ಜಾಮಾತ್ರೇ ಯೌತುಕಂ ದದೌ ॥ ೩೮ ॥

ಗಜೇಂದ್ರಾಣಾಂ ಸಹಸ್ರಂ ಚ ಷಡ್ಗುಣಂ ಚ ತುರಂಗಮಂ ।
ದಾಸೀನಾಂ ಚ ಸಹಸ್ರಂ ಚ ಕಿಂಕರಾಣಾಂ ಶತಂಶತಂ ॥ ೩೯ ॥

ರತ್ನಾನಾಂ ಚ ಸಹಸ್ರಂ ಚೈವಾಮೂಲ್ಯರತ್ನಭೂಷಣಂ ।
ಸ್ವರ್ಣಾನಾಂ ಪರಿಶುದ್ಧಾನಾಂ ಪಂಚಲಕ್ಷಂ ಚ ಸಾದರಂ ॥ ೪೦ ॥

ತೋಯಭೋಜನಪಾತ್ರಾಣಿ ಕೃತಾನಿ ವಿಶ್ವಕರ್ಮಣಾ ।
ಸೌವರ್ಣಾನಿಚ ರಮ್ಯಾಣಿ ಸುರಭೀಃ ಪ್ರದದೌ ಮುದಾ ॥ ೪೧ ॥

ದುಗ್ಧವತೀನಾಂ ಧೇನೂನಾಂ ಸವತ್ಸಾನಾಂ ಸಹಸ್ರಕಂ ।
ಅಮೂಲ್ಯಾನಿ ಚ ರಮ್ಯಾಣಿ ವಹ್ನಿಶುದ್ಧಾಂಶುಕಾನಿ ಚ ॥ ೪೨ ॥

---

ಮಗಳನ್ನು ಕೃಷ್ಣನಿಗೊಪ್ಪಿಸಿ ಅವನನ್ನು ಉಪಚರಿಸಿ ಗಟ್ಟಿಯಾಗಿ ಅತ್ತನು. ರುಕ್ಮಿಣೀದೇವಿಯೂ ಅತ್ತಳು. ಶ್ರೀಕೃಷ್ಣನೂ ಕೂಡ ಮಾಯೆಯಿಂದ ಮೋಹಿತನಾಗಿ ಅತ್ತನು.

೩೮. ವಸುದೇವನು ಮಗನನ್ನೂ ಸೊಸೆಯನ್ನೂ ರಥದ ಮೇಲಕ್ಕೆ ಹತ್ತಿಸಿದನು. ಈ ಸಮಯದಲ್ಲಿ ರಾಜನು ಅಳಿಯನಿಗೆ ಬಳುವಳಿಯನ್ನು ಕೊಟ್ಟನು.

೩೯. ಒಂದುಸಾವಿರ ಆನೆಗಳನ್ನೂ ಅದರ ಆರರಷ್ಟು ಕುದುರೆಗಳನ್ನೂ ಒಂದು ಸಾವಿರ ದಾದಿಯರನ್ನೂ ಒಂದು ಲಕ್ಷ ಸೇವಕರನ್ನೂ ಕೊಟ್ಟನು.

೪೦. ಒಂದುಸಾವಿರ ರತ್ನಗಳನ್ನೂ ಅಮೂಲ್ಯವಾದ ರತ್ನಾಭರಣಗಳನ್ನೂ ಪರಿಶುದ್ಧವಾದ ಸುವರ್ಣಗಳ ಐದು ಲಕ್ಷವನ್ನೂ ಪ್ರೀತಿಪೂರ್ವಕವಾಗಿ ಕೊಟ್ಟನು.

೪೧. ವಿಶ್ವಕರ್ಮನಿಂದ ಮಾಡಲ್ಪಟ್ಟ ಮನೋಹರವಾದ ಚಿನ್ನದ ಭೋಜನ ಪಾತ್ರೆಯನ್ನೂ ನೀರಿನಪಾತ್ರೆಯನ್ನೂ ಸಂತೋಷದಿಂದ ಕೊಟ್ಟನು.

೪೨. ತುಂಬ ಹಾಲನ್ನು ಕೊಡುವ ಕರುವಿನಿಂದ ಕೂಡಿದ ಒಂದುಸಾವಿರ ಹಸುಗಳನ್ನು ಕೊಟ್ಟನು ಮತ್ತು ಅಮೂಲ್ಯವಾದ ಮನೋಹರವಾದ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನು ಕೊಟ್ಟನು.

ವಸುದೇವಶ್ಚೋಗ್ರಸೇನೋ ದೇವೈಶ್ಚ ಮುನಿಭಿಃ ಸಹ ।
ಪ್ರಹೃಷ್ಟವದನಃ ಶೀಘ್ರಂ ದ್ವಾರಕಾಭಿಮುಖಂ ಯಯೌ ॥ ೪೩ ॥

ಪ್ರವಿಶ್ಯ ಸ್ವಪುರೀಂ ರಮ್ಯಾಂ ಕಾರಯಾಮಾಸ ಮಂಗಲಂ ।
ವಾದ್ಯಂ ಚ ವಾದಯಾಮಾಸ ಸುಂದರಂ ಸುಮನೋಹರಂ ॥ ೪೪ ॥

ದೇವಕೀ ರೋಹಿಣೀ ರಮ್ಯಾ ಯಶೋದಾ ನಂದಗೇಹಿನೀ ।
ಅದಿತಿಶ್ಚ ದಿತಿಶ್ಚೈವ ತಥಾ ಚ ವರಕಾಮಿನೀ ॥ ೪೫ ॥

ಶ್ರೀಕೃಷ್ಣಂ ರುಕ್ಮಿಣೀಂ ರಮ್ಯಾಂ ವಿಲೋಕ್ಯ ಚ ಪುನಃಪುನಃ ।
ಗೃಹಂ ಪ್ರವೇಶಯಾಮಾಸ ಕಾರಯಾಮಾಸ ಮಂಗಲಂ ॥ ೪೬ ॥

ಚತುರ್ವಿಧಂ ಭೋಜಯಿತ್ವಾ ದೇವಾಂಶ್ಚ ಮುನಿಪುಂಗವಾನ್ ।
ನೃಪಾಂಶ್ಚ ಬಾಂಧವಾಂಶ್ಚೈವ ಪರಿಹಾರಂ ಚಕಾರ ಚ ॥ ೪೭ ॥

---

೪೩. ವಸುದೇವನು ಉಗ್ರಸೇನನೊಡನೆಯೂ ದೇವತೆಗಳು ಮತ್ತು ಮುನಿಗಳೊಡನೆಯೂ ಸಂತೋಷಗೊಂಡವನಾಗಿ ಜಾಗ್ರತೆ ದ್ವಾರಕಿಯನ್ನು ಕುರಿತು ಪ್ರಯಾಣಮಾಡಿದನು.

೪೪. ರಮ್ಯವಾದ ತನ್ನ ನಗರಕ್ಕೆ ಪ್ರವೇಶಮಾಡಿ ಮಂಗಳಕಾರ್ಯಗಳನ್ನು ಮಾಡಿಸಿದನು. ಮನೋಹರವಾದ ವಾದ್ಯಗಳು ಮಧುರವಾಗಿ ಮೊಳಗುವಂತೆ ಮಾಡಿಸಿದನು.

೪೫–೪೬. ದೇವಕಿಯೂ, ರೋಹಿಣಿಯೂ, ರಮ್ಯಳಾದ ನಂದಪತ್ನಿಯಾದ ಯಶೋದೆಯೂ, ಅದಿತಿಯೂ, ದಿತಿಯೂ, ವರಕಾಮಿನಿಯೂ ಸಹ ರಮ್ಯಳಾದ ರುಕ್ಮಿಣಿಯನ್ನು ಶ್ರೀಕೃಷ್ಣನನ್ನೂ ಮತ್ತೆ ಮತ್ತೆ ನೋಡಿ ಮಂದಿರದೊಳಕ್ಕೆ ಪ್ರವೇಶ ಮಾಡಿಸಿ ಮಂಗಳಕಾರ್ಯಗಳನ್ನು ಮಾಡಿಸಿದರು.

೪೭. ದೇವತೆಗಳಿಗೂ, ಮುನಿಪುಂಗವರಿಗೂ, ನೃಪರಿಗೂ ಮತ್ತು ಬಂಧುಗಳಿಗೂ ಪ್ರತ್ಯೇಕವಾಗಿ ಭೋಜನಮಾಡಿಸಿ ಎಲ್ಲರಿಗೂ ದಕ್ಷಿಣೆ ತಾಂಬೂಲಗಳನ್ನು ಕೊಟ್ಟರು.

ಭಟ್ಟೇಭ್ಯೋ ಬ್ರಾಹ್ಮಣೇಭ್ಯೋಽಪಿ ದದೌ ರತ್ನಾದಿಕಂ ಮುದಾ ।
ತಾಂಶ್ಚಾಪಿ ಭೋಜಯಾಮಾಸ ಪರಿತುಷ್ಟಾಂಶ್ಚ ಸಸ್ಮಿತಾನ್ ॥ ೪೮ ॥

ಏವಂ ಭುಕ್ತ್ವಾ ಧನಂ ಲಬ್ಧ್ವಾ ಯಯುಃ ಸರ್ವೇ ಗೃಹಂ ಮುದಾ ।
ಮಂಗಲಂ ಕಾರಯಾಮಾಸ ವಸುದೇವಸ್ಯ ವಲ್ಲಭಾ ॥ ೪೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ರುಕ್ಮಿಣ್ಯುದ್ವಾಹೇ
ನವಾಧಿಕಶತತಮೋಽಧ್ಯಾಯಃ.

---

೪೮. ಭಟ್ಟರಿಗೂ, ಬ್ರಾಹ್ಮಣರಿಗೂ ರತ್ನಾದಿಗಳನ್ನು ಸಂತೋಷದಿಂದ ದಾನ ಮಾಡಿದ್ದಲ್ಲದೆ ಅವರಿಗೆ ತುಷ್ಟಿಯಾಗುವಂತೆ ಭೋಜನಮಾಡಿಸಿದರು.

೪೯. ಈ ರೀತಿಯಾಗಿ ತೃಪ್ತಿಯಾಗುವಂತೆ ಊಟಮಾಡಿ ದಕ್ಷಿಣೆಯನ್ನು ಪಡೆದು ಎಲ್ಲರೂ ಸಂತೋಷದಿಂದ ಮನೆಗೆ ಹಿಂತಿರುಗಿದರು. ವಸುದೇವನ ಪತ್ನಿಯೂ ಸಹ ಮಂಗಳ ಕಾರ್ಯಗಳನ್ನು ಮಾಡಿಸಿದಳು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣನಾರದಸಂವಾದದಲ್ಲಿ ರುಕ್ಮಿಣಿಯ ವಿವಾಹದಲ್ಲಿ
ನೂರಒಂಭತ್ತನೆಯ ಅಧ್ಯಾಯವು ಸಮಾಪ್ತವಾದುದು.



॥ ಓಂ ॥

॥ ಓಂ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

॥ ಅಥ ದಶಾಧಿಕಶತತಮೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಆಗತೇಷು ಗತೇಶ್ವೇವಂ ಸಾಂಗೇ ಮಂಗಲಕರ್ಮಣಿ ।
ನಂದೋ ಯಶೋದಯಾ ಸಾರ್ಧಂ ಪುತ್ರಾಭ್ಯಾಶಂ ಸಮಾಯಯೌ ॥ ೧ ॥

॥ ಯಶೋದೋವಾಚ ॥

ಜ್ಞಾನಂ ಚ ಭವತಾ ದತ್ತಂ ಪಿತ್ರೇ ನಂದಾಯ ಮಾಧವ ।
ಮಾಂಚಾಪಿ ಮಾತರಂ ವತ್ಸ ಕೃಪಾಂ ಕುರು ಕೃಪಾನಿಧೇ ॥ ೨ ॥

ಮಾಮುದ್ಧರ ಮಹಾಭಾಗ ಧರೋದ್ಧಾರಣಕಾರಣ ।
ಭವಾಬ್ಧಿಕರಣೇ ಭೀಮೇ ಭೀತಾಂ ಚ ಪತಿತಾಮಪಿ ॥ ೩ ॥

---

### ನೂರಹತ್ತನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ; — ಈ ರೀತಿಯಾಗಿ ಬಂದ ಬಂಧು ಬಳಗದವರೆಲ್ಲರೂ ಪ್ರಯಾಣಮಾಡಿ ಮಂಗಳಕಾರ್ಯವು ಸಾಂಗವಾಗಿ ನೆರವೇರಿದ ನಂತರ ನಂದಗೋಪನು ಯಶೋದೆಯೊಡನೆ ಮಗನ ಹತ್ತಿರಕ್ಕೆ ಬಂದನು.

೨. ಯಶೋದೆಯು ಹೇಳುತ್ತಾಳೆ :— ಎಲೈ ಮಾಧವನೇ! ನಿನ್ನ ತಂದೆಯಾದ ನಂದಗೋಪನಿಗೆ ದಿವ್ಯಜ್ಞಾನವನ್ನು ಉಪದೇಶಿಸಿದೆ. ಕೃಪಾನಿಧಿಯಾದ ಎಲೈ ವತ್ಸನೇ! ತಾಯಿಯಾದ ನನ್ನ ವಿಷಯದಲ್ಲಿ ಕೃಪೆಯನ್ನು ತೋರು.

೩. ಭೂದೇವಿಯನ್ನು ಉದ್ಧಾರಮಾಡಿದ ಆದಿ ವರಾಹಮೂರ್ತಿಯೇ, ಭಯಂಕರವಾದ ಸಂಸಾರಾರ್ಣವದಲ್ಲಿ ಮುಳುಗಿ ಭೀತಳಾಗಿರುವ ನನ್ನನ್ನೂ ಉದ್ಧಾರ ಮಾಡು.

ಮಾಯೊಮಯಿೀ ಸಾ ಪ್ರಕೃತಿರ್ಭವಾಬ್ಧಿತರಣೇ ತರಿಃ ।
ತ್ವಮೇವ ಕರ್ಣಧಾರಶ್ಚ ಭಕ್ತೋತ್ತೀರ್ಣ ಕೃಪಾಮಯ ॥ ೪ ॥

ಯಶೋದಾವಚನಂ ಶ್ರುತ್ವಾ ಜಹಾಸ ಪುರುಷೋತ್ತಮಃ ।
ಉವಾಚ ಮಾತರಂ ಭಕ್ತ್ಯಾ ಜ್ಞಾನಿನಾಂ ಚ ಗುರೋರ್ಗುರುಃ ॥ ೫ ॥

॥ ಶ್ರೀ ಭಗವಾನುವಾಚ ॥

ಸಿದ್ಧಿಯೋಗಾತ್ಮಕಂ ಮಾತರ್ಜ್ಞಾನಂ ಚ ವಿಷಯಾತ್ಮಕಂ ।
ಜ್ಞಾನಂ ಭಕ್ತ್ಯಾತ್ಮಕಂ ಶ್ರೇಷ್ಠಂ ಮದ್ದಾಸ್ಯಕಾರಣಂ ಶುಭಂ ॥ ೬ ॥

ಜ್ಞಾನಂ ಪಂಚವಿಧಂ ಪ್ರೋಕ್ತಂ ಸರ್ವವೇದೇಷು ಸಮ್ಮತಂ ।
ಭಕ್ತ್ಯಾತ್ಮಕಂ ಸರ್ವಪರಂ ತೇಷಾಂ ಚ ಲಕ್ಷಣಂ ಶೃಣು ॥ ೭ ॥

ಕ್ಷುತ್ಪಿಪಾಸಾದಿಕಾನಾಂ ಚ ಖಂಡನಂ ಸ್ವಾಂತಶೋಧನಂ ।
ನಾಡೀನಾಂ ಶೋಧನಂ ಚೈವ ಚಕ್ರಾಣಾಮಪಿ ಭೇದನಂ ॥ ೮ ॥

---

೪. ಮಾಯರೂಪಿಣಿಯಾದ ಪ್ರಕೃತಿದೇವಿಯು ಸಂಸಾರಸಾಗರವನ್ನು ದಾಟಲು ಸಾಧನವಾದ ದೋಣಿಯಂತಿದ್ದಾಳೆ. ನೀನೆ ಅಂಬಿಗನಾಗಿರುವೆ. ಎಲೈ! ಕೃಪಾಮಯನೇ, ಭಕ್ತಳಾದ ನನ್ನನ್ನು ದಾಟಿಸು.

೫. ಯಶೋದೆಯ ಈ ಮಾತುಗಳನ್ನು ಕೇಳಿ ಪುರುಷೋತ್ತಮನಾದ ಕೃಷ್ಣನು ನಕ್ಕನು ಮತ್ತು ಜ್ಞಾನಿಗಳಿಗೂ ಗುರುಗಳಿಗೂ ಗುರುವಾದ ಪರಮಾತ್ಮನು ತಾಯಿಯನ್ನು ಕುರಿತು ಇಂತೆಂದನು.

೬–೭. ಶ್ರೀ ಭಗವಂತನು ಹೇಳುತ್ತಾನೆ :— ಎಲೈ ತಾಯಿಯೇ! ಜ್ಞಾನವು ಸಿದ್ಧಿರೂಪ, ಯೋಗರೂಪ, ವಿಷಯರೂಪ, ಭಕ್ತಿರೂಪ ಮತ್ತು ಪರಮಾತ್ಮನ ದಾಸ್ಯ ರೂಪವೆಂದು ಐದುರೀತಿಯಾಗಿ ಸಕಲವೇದಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ. ಅವು ಗಳಲ್ಲಿ ಭಕ್ತ್ಯಾತ್ಮಕವಾದ ಜ್ಞಾನವು ಎಲ್ಲಕ್ಕಿಂತಲೂ ಮೇಲಾದುದು. ಅವುಗಳ ಲಕ್ಷಣಗಳನ್ನು ಹೇಳುವೆನು ಕೇಳು.

೮. ಹಸಿವು ನೀರಡಿಕೆಗಳನ್ನು ನಿಗ್ರಹಿಸಿ ಮನಸ್ಸನ್ನು ಶುದ್ಧಿಗೊಳಿಸಿ ನಾಡಿ ಗಳನ್ನು ಶುದ್ಧೀಕರಣ ಮಾಡಿಕೊಳ್ಳುವುದಲ್ಲದೆ ಷಟ್ಚಕ್ರಗಳನ್ನೂ ಭೇಧಿಸಬೇಕು.

ಶಕ್ತಿಕುಂಡಲಿನೀಯುಕ್ತಮೀಶ್ವರಂ ಚಿಂತಯೇತ್ತತಃ ।
ಇಂದ್ರಿಯಾಣಾಂ ಚ ದಮನಂ ಲೋಭಾದೀನಾಂ ಚ ವರ್ಜನಂ ॥೯॥

ಮೂಲಾಧಾರಂ ಸ್ವಾಧಿಷ್ಠಾನಂ ಮಣಿಪೂರಮನಾಹತಂ ।
ವಿಶುದ್ಧಂ ಚ ತಥಾಜ್ಞಾಖ್ಯಂ ಚಕ್ರಷಟ್ಕಂ ಪ್ರಕೀರ್ತಿತಂ ॥೧೦॥

ನಾರೀಣಾಮಪಿ ದುರ್ಬೋಧಂ ಮೂರ್ಖಾಣಾಂ ಚ ವಿಶೇಷತಃ ।
ಜ್ಞಾನಂ ಯೋಗಾತ್ಮಕಂ ಸಾಧ್ವಿ ಸಿದ್ಧಾನಾಂ ಸಾಧ್ಯಮೀಪ್ಸಿತಂ ॥೧೧॥

ಜಂತೂನಾಮಪಿ ಸರ್ವೇಷಾಂ ಜ್ಞಾನಂ ಸ್ವವಿಷಯೇ ತಥಾ ।
ಸಂತಃ ಸರ್ವೇ ವಿಜಾನಂತಿ ಸ್ವೇಚ್ಛಯಾ ಚ ಮದೀಯಯಾ ॥೧೨॥

ಸಿದ್ಧ್ಯಾತ್ಮಕಂ ಚ ಸಿದ್ಧಾನಾಂ ನಿಯುಕ್ತಂ ಸರ್ವಕರ್ಮಸು ।
ಚತುಸ್ತ್ರಿಂಶತ್ಸು ಸಿದ್ಧಾನಾಂ ಸಾಧನಂ ಬೋಧನಂ ತಥಾ ।
ಜ್ಞಾನಂ ಮೋಕ್ಷಾತ್ಮಕಂ ಸಿದ್ಧಂ ಪರಂ ನಿರ್ವಾಣಕಾರಣಂ ॥೧೩॥

---

೯. ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವಿಕೆ, ಲೋಭ ಮುಂತಾದುವುಗಳನ್ನು ಬಿಡುವಿಕೆ ಇವುಗಳಿಗೆ ಸಾಧಕವಾದ ಶಕ್ತಿಕುಂಡಲಿನೀಸಮೇತನಾದ ಈಶ್ವರನನ್ನು ಅನಂತರ ಧ್ಯಾನಮಾಡಬೇಕು.

೧೦. ಮೂಲಾಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧ ಮತ್ತು ಆಜ್ಞಾ ಎಂಬುದಾಗಿ ಆರು ಚಕ್ರಗಳು ಹೇಳಲ್ಪಟ್ಟವೆ. (ಇವುಗಳು ಮನುಷ್ಯನ ಶರೀರದಲ್ಲಿರುವುವುಗಳು)

೧೧. ಎಲೈ ಪತಿವ್ರತೆಯೇ! ಯೋಗಾತ್ಮಕವಾದ ಜ್ಞಾನವೆಂಬುದು ಹೆಂಗಸರಿಗೆ ತಿಳಿದುಕೊಳ್ಳಲಸಾಧ್ಯವಾದುದು. ಮೂರ್ಖರಿಗಂತೂ ಸಾಧ್ಯವೇ ಇಲ್ಲ. ಸಿದ್ಧಪುರುಷರಿಗೆ ಮಾತ್ರ ಸಾಧ್ಯವಾದುದು.

೧೨. ಸಕಲಪ್ರಾಣಿಗಳಿಗೂ ಕೂಡ ತಮ್ಮ ತಮ್ಮ ವಿಷಯಾತ್ಮಕಜ್ಞಾನವು ಇರುತ್ತದೆ. ನನ್ನ ಇಚ್ಛೆಯಿಂದ ಸತ್ಪುರುಷರೆಲ್ಲರೂ ಉತ್ತಮಜ್ಞಾನವನ್ನು ಹೊಂದುತ್ತಾರೆ.

೧೩. ಸಿದ್ಧಾತ್ಮಕಜ್ಞಾನವು ಸಿದ್ಧರಿಗೆ ನಿಯಮಿತವಾದುದು. ಮೂವತ್ತನಾಲ್ಕು ಸಿದ್ಧಿಗಳಲ್ಲಿ ಸಿದ್ಧರು ಸಾಧನೆಯನ್ನೂ ಬೋಧನೆಯನ್ನೂ ಹೊಂದುವವರಾಗಿರುತ್ತಾರೆ. ಮೋಕ್ಷರೂಪವಾದ ಜ್ಞಾನವು ಸಿದ್ಧಿಸಿದರೆ ಅದು ಉತ್ತಮವಾದ ಮುಕ್ತಿಗೆ ಕಾರಣವಾಗುತ್ತದೆ.

ನಿವೃತ್ತಿಮಾರ್ಗಮಾರೂಢಂ ಭಕ್ತಸ್ತನ್ನೈವ ವಾಂಛತಿ ।
ಭಕ್ತ್ಯಾತ್ಮಕಂ ಚ ಯಜ್ಜ್ಞಾನಂ ತುಭ್ಯಂ ರಾಧಾ ಪ್ರದಾಸ್ಯತಿ ॥ ೧೪ ॥

ತಸ್ಯಾಂ ಚ ಮಾನವಂ ಭಾವಂ ತ್ಯಕ್ತ್ವಾಽಜ್ಞಾಂ ಚ ಕರಿಷ್ಯತಿ ।
ಸಂಪಾಯ ದತ್ತಂ ಯಜ್ಜ್ಞಾನಂ ತಚ್ಚ ತುಭ್ಯಂ ಪ್ರದಾಸ್ಯತಿ ॥ ೧೫ ॥

ಗಚ್ಛ ನಂದವ್ರಜಂ ಮಾತರ್ನಂದೇನ ಸಹ ಸಾದರಂ ।
ಇತ್ಯುಕ್ತ್ವಾ ವಿನಯಂ ಕೃತ್ವಾ ಜಗಾಮಾಭ್ಯಂತರಂ ಹರಿಃ ॥ ೧೬ ॥

ನಂದೋ ಯಶೋದಯಾ ಸಾರ್ಧಂ ಪ್ರಯಯೌ ಕದಲೀವನಂ ।
ದದರ್ಶ ರಾಧಾಂ ತತ್ರೈವ ನಿದ್ರಿತಾಂ ತ್ಯಕ್ತಭೂಷಣಾಂ ॥ ೧೭ ॥

ದಧಾನಾಂ ಶುಕ್ಲವಸ್ತ್ರಂ ಚ ನಿರಾಹಾರಾಂ ಕೃಶೋದರೀಂ ।
ಪಂಕಸ್ಥೇ ಪಂಕಜದಲೇ ಸಜಲೇ ಚಂದನಾರ್ಚಿತೇ ॥ ೧೮ ॥

---

೧೪. ನಿವೃತ್ತಿಮಾರ್ಗದಲ್ಲಿರುವುದನ್ನು ಭಕ್ತನು ಅಪೇಕ್ಷಿಸುವುದಿಲ್ಲ. ಭಕ್ತಿರೂಪವಾದ ಜ್ಞಾನವನ್ನು ನಿನಗೆ ರಾಧೆಯು ಕೊಡುತ್ತಾಳೆ.

೧೫. ಅವಳಲ್ಲಿ ಮನುಷ್ಯಳೆಂಬ ಭಾವನೆಯನ್ನು ಬಿಟ್ಟು ಕೇಳುವವಳಾಗು. ನನ್ನ ಅಪ್ಪಣೆಯನ್ನು ನಡೆಸುತ್ತಾಳೆ. ನಂದನಿಗೆ ಯಾವ ಜ್ಞಾನವು ನನ್ನಿಂದ ಉಪದೇಶಮಾಡಲ್ಪಟ್ಟಿತೋ ಆ ಜ್ಞಾನವನ್ನು ನಿನಗೂ ಉಪದೇಶಿಸುತ್ತಾಳೆ.

೧೬. ಎಲೈ ತಾಯಿಯೇ! ಈ ನಂದನೊಡನೆ ವಿಶ್ವಾಸದಿಂದ ನಂದಗೋಕುಲಕ್ಕೆ ಹೊರಡುವವಳಾಗು. ಈ ಪ್ರಕಾರವಾಗಿ ಹೇಳಿ ಹರಿಯು ವಿನಯದಿಂದ ನಮಸ್ಕರಿಸಿ ಮನೆಯೊಳಕ್ಕೆ ಹೋದನು.

೧೭. ನಂದನು ಯಶೋದೆಯೊಡನೆ ಬಾಳೆಯ ತೋಟಕ್ಕೆ ಹೋದನು. ಅಲ್ಲಿ ಆಭರಣಗಳನ್ನು ತೆಗೆದುಹಾಕಿ ನಿದ್ರೆಮಾಡುತ್ತಿರುವ ರಾಧೆಯನ್ನು ನೋಡಿದನು.

೧೮–೧೯. ಬಿಳಿಯ ಬಟ್ಟೆಯನ್ನು ಧರಿಸಿಕೊಂಡು ಆಹಾರವನ್ನು ತೆಗೆದುಕೊಳ್ಳದೆ ಸಣ್ಣದಾದ ನಡುವುಳ್ಳವಳಾಗಿ ಒಣಗಿದ ತುಟಿಯುಳ್ಳ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡಿರುವ ಕೆಸರಿನಲ್ಲಿದ್ದ ಕಮಲದದಳಗಳ ಹಾಸಿಗೆಯ ಮೇಲೆ ಗಂಧದ

ಶಯಾನಾಂ ಶುಷ್ಕಿತೌಷ್ಠೀಂ ಚ ಸಾಶ್ರುನೇತ್ರಾಂ ಚ ಮೂರ್ಚ್ಛಿತಾಂ ।
ಧ್ಯಾಯಮಾನಾಂ ಪದಾಂಭೋಜಂ ಕೃಷ್ಣಸ್ಯ ಪರಮಾತ್ಮನಃ ॥ ೧೯ ॥

ಬಾಹ್ಯಜ್ಞಾನಪರಿತ್ಯಕ್ತಾಂ ತನ್ನಿವಿಷ್ಟೈಕಮಾನಸಾಂ ।
ಪಶ್ಯಂತೀಂ ಸಸ್ಮಿತಂ ಕಾಂತಂ ಪಶ್ಯಂತೀಮುನ್ಮುಖಾಂಬುಜಂ ॥ ೨೦ ॥

ಹಸಂತೀಂ ಚ ರುದಂತೀಂ ಚ ಸ್ವಪ್ನೇ ಕಾಂತಸಮೀಪತಃ ।
ಸಖೀಭಿಃ ಪರಿತಃ ಶಶ್ವತ್ಸೇವಿತಾಂ ಶ್ವೇತಚಾಮರೈಃ ॥ ೨೧ ॥

ದಿವಾನಿಶಂ ರಕ್ಷಿತಾಂ ಚ ಗೋಪೀಭಿಃ ಶತಕೋಟಿಭಿಃ ।
ಸಾವಧಾನಪರಾಭಿಶ್ಚ ವೇತ್ರಹಸ್ತಾಭಿರೀಶ್ವರೀಂ ॥ ೨೨ ॥

ಸಪ್ತದ್ವಾರೇಷು ಯುಕ್ತಾಭಿಃ ಪರಿತಃ ಪ್ರಾಂಗಣೇಷು ಚ ।
ತಾಂ ದೃಷ್ಟ್ವಾ ವಿಸ್ಮಯಂ ಪ್ರಾಪ್ಯ ಸಭಾರ್ಯೋ ನಂದ ಏವ ಚ ॥ ೨೩ ॥

---

ನೀರನ್ನೆರಚಿರಲು ಅದರಲ್ಲಿ ಮಲಗಿಕೊಂಡಿರುವ, ಮೂರ್ಚ್ಛೆಯನ್ನು ಹೊಂದುತ್ತಿರುವ, ಪರಮಾತ್ಮನಾದ ಶ್ರೀಕೃಷ್ಣನ ಪಾದಕಮಲಗಳನ್ನು ಧ್ಯಾನಮಾಡುತ್ತಲಿರುವ, ರಾಧೆಯನ್ನು ನೋಡಿದನು.

೨೦–೨೧. ಹೊರಗಿನ ಜ್ಞಾನದಿಂದ ಶೂನ್ಯಳಾಗಿ ಆ ಕೃಷ್ಣನಲ್ಲಿಯೇ ನೆಟ್ಟ ಮನಸ್ಸುಳ್ಳವಳಾದ ಮಂದಹಾಸಯುಕ್ತನಾದ ಕಾಂತನನ್ನೇ ನೋಡುತ್ತ ಮುಖವನ್ನು ಮೇಲೆತ್ತಿಕೊಂಡು ಸ್ವಪ್ನದಲ್ಲಿ ಕಾಂತನ ಸಮೀಪದಲ್ಲಿ ಅಳುತ್ತಲೂ ನಗುತ್ತಲೂ ಇರುವ ಯಾವಾಗಲೂ ಸಖಿಯರಿಂದ ಬಿಳಿಯ ಚಾಮರಗಳಿಂದ ಬೀಸಿಸಿಕೊಳ್ಳುತ್ತಿರುವ ರಾಧೆಯನ್ನು ಕಂಡನು.

೨೨–೨೪. ಹಗಲು ರಾತ್ರಿಗಳಲ್ಲಿಯೂ ಜಾಗರೂಕತೆಯಿಂದ ಕೂಡಿದ ಚಿತ್ರವನ್ನು ಕೈಯಲ್ಲಿ ಹಿಡಿದುಕೊಂಡಿರುವ ಪ್ರಾಂಗಣದ ಸುತ್ತಲೂ ಏಳುಬಾಗಿಲುಗಳಲ್ಲಿ ನಿಯಮಿಸಲ್ಪಟ್ಟ ನೂರುಕೋಟಿ ಗೋಪಿಯರಿಂದ ರಕ್ಷಿಸಲ್ಪಟ್ಟಿರುವ ಈಶ್ವರಿಯಾದ ಆ ರಾಧೆಯನ್ನು ನೋಡಿ ಪತ್ನೀಸಮೇತನಾದ ನಂದನು ಆಶ್ಚರ್ಯವನ್ನು ಹೊಂದಿದವನಾಗಿ ಅತ್ಯಂತ ಭಕ್ತಿಯಿಂದ ನೆಲದಮೇಲೆ ಕೋಲಿನಂತೆ ಬಿದ್ದು ನಮಸ್ಕಾರವನ್ನು

ನನಾಮ ಪರಯಾ ಭಕ್ತ್ಯಾ ದಂಡವತ್ಪ್ರಣಿಪತ್ಯ ಚ ।
ನಿದ್ರಾಂ ತ್ಯಕ್ತ್ವಾ ಚ ಸಹಸಾ ಬುಬುಧೇ ಸೇಶ್ವರೇಚ್ಛಯಾ || ೨೪ ||

ಕ್ಷಣೇನ ಚೇತನಾಂ ಪ್ರಾಪ್ಯ ವಿಷಯಜ್ಞಾನವರ್ಜಿತಾಂ ।
ಪುರತೋ ದಂಪತೀ ದೃಷ್ಟ್ವಾ ಪಪ್ರಚ್ಛ ಸಾದರಂ ಸತೀ ।
ಉವಾಚ ಮಧುರಂ ಚೈವಂ ತತ್ರೈವ ಸಖಿಸಂಸದಿ || ೨೫ ||

|| ರಾಧಿಕೋವಾಚ ||

ಕಸ್ತ್ವಂ ಚಾತ್ರ ಸಮಾಯಾತೋ ಬ್ರೂಹಿ ವಾ ಕಿಂ ಪ್ರಯೋಜನಂ ।
ನ ಚ ಮೇ ವಿಷಯಜ್ಞಾನಂ ನ ಜಾನಾಮಿ ನರಂ ಪಶುಂ || ೨೬ ||

ಕಿಂ ಜಲಂ ವಾ ಸ್ಥಲಂ ಕಿಂ ವಾ ಕಿಂ ವಾ ನಕ್ತಂ ದಿನಂ ಶೃಣು ।
ಸ್ತ್ರಿಯಂ ಪುಮಾಂಸಂ ಕ್ಲೀಬಂ ವಾ ನಾಹಂ ಜಾನಾಮಿ ಭೇದಕಂ || ೨೭ ||

---

ಮಾಡಿದನು. ಆ ರಾಧೆಯು ಈಶ್ವರೇಚ್ಛೆಯಿಂದ ಜಾಗ್ರತೆಯಾಗಿ ನಿದ್ರೆಯನ್ನು ಬಿಟ್ಟು ಎಚ್ಚರಗೊಂಡಳು.

೨೫. ಆ ಕ್ಷಣದಲ್ಲಿ ವಿಷಯಜ್ಞಾನವಿಲ್ಲದಿರುವ ಚೈತನ್ಯವನ್ನು ಹೊಂದಿದವಳಾಗಿ ಮುಂದೆ ನಿಂತಿರುವ ದಂಪತಿಗಳನ್ನು ನೋಡಿ ಸತಿಯಾದ ರಾಧೆಯು ವಿಶ್ವಾಸಪೂರ್ವಕವಾಗಿ ಅವರನ್ನು ಕುರಿತು ಪ್ರಶ್ನೆಮಾಡಿದಳು. ಸಖಿಯರ ಮುಂಭಾಗದಲ್ಲಿ ಮಧುರವಾಗಿ ಈ ಪ್ರಕಾರ ಮಾತನಾಡಿದಳು.

೨೬. ರಾಧಿಕೆಯು ಹೇಳುತ್ತಾಳೆ :— ನೀನು ಯಾರು ? ಯಾವ ಪ್ರಯೋಜನವನ್ನುದ್ದೇಶಿಸಿಕೊಂಡು ಇಲ್ಲಿಗೆ ಬಂದಿರುವಿ ? ಹೇಳು. ನನಗೆ ವಿಷಯ ಜ್ಞಾನವೇ ಇಲ್ಲವು. ಮನುಷ್ಯನು ಪಶುವು ಎಂಬ ಭೇದವನ್ನೇ ತಿಳಿಯದವಳಾಗಿರುವೆನು.

೨೭. ಯಾವುದು ನೀರು ಯಾವುದು ಸ್ಥಳವು, ಹಗಲು ಯಾವುದು ರಾತ್ರಿ ಯಾವುದು, ಪುರುಷನಾರು ಸ್ತ್ರೀಯು ಯಾವಳು ನಪುಂಸಕನಾವನು, ಎಂಬ ಭೇದವನ್ನು ನಾನು ತಿಳಿಯದವಳಾಗಿರುವೆನು.

ರಾಧಿಕಾವಚನಂ ಶ್ರುತ್ವಾ ನಂದಶ್ಚ ವಿಸ್ಮಯಂ ಯಯೌ ।
ಭೀತಾ ಯಶೋದಾ ನಿಕಟಂ ಗೋಪೀ ಸಂಭಾಷಿತಾ ಯಯೌ ॥ ೨೮ ॥

ಉವಾಸ ನಿಕಟೇ ತಸ್ಯಾಃ ಸಮುವಾಚ ಪ್ರಿಯಂ ವಚಃ ।
ಉವಾಸ ತತ್ರ ನಂದಶ್ಚ ಗೋಪೀದತ್ತಾಸನೇನ ಚ ॥ ೨೯ ॥

॥ ಯಶೋದೋವಾಚ ॥

ಚೇತನಂ ಕುರು ರಾಧೇ ತ್ವಮಾತ್ಮಾನಂ ರಕ್ಷ ಯತ್ನತಃ ।
ದ್ರಕ್ಷ್ಯಸಿ ಪ್ರಾಣನಾಥಂ ಚ ಸಂಪ್ರಾಪ್ತೇ ಮಂಗಲೇ ದಿನೇ ॥ ೩೦ ॥

ತ್ವತ್ತೋ ವಿಶ್ವಂ ಪವಿತ್ರಂ ಚ ಸ್ವಕುಲಂ ಚ ಸುರೇಶ್ವರಿ ।
ಗೋಪ್ಯಶ್ಚ ಪುಣ್ಯವತ್ಯಶ್ಚ ತ್ವತ್ಪಾದಾಂಬುಜಸೇವಯಾ ॥ ೩೧ ॥

ಲೋಕಾ ಗಾಸ್ಯಂತಿ ತ್ವತ್ಕೀರ್ತಿಂ ತೀರ್ಥಪೂತಾಂ ಸುಮಂಗಲಾಂ ।
ಸತೋ ವೇದಾಶ್ಚ ಚತ್ವಾರಃ ಪುರಾಣಾನಿ ಪುರಾತನಂ ॥ ೩೨ ॥

---

೨೮. ರಾಧೆಯಾಡಿದ ಮಾತನ್ನು ಕೇಳಿ ನಂದನು ಆಶ್ಚರ್ಯಗೊಂಡನು. ಯಶೋದೆಯು ಭಯಗೊಂಡವಳಾಗಿ ಗೋಪಿಯಿಂದ ಮಾತನಾಡಿಸಲ್ಪಟ್ಟವಳಾಗಿ ಅವಳ ಸಮೀಪಕ್ಕೆ ಹೋದಳು.

೨೯. ಅವಳ ಸಮೀಪದಲ್ಲಿ ಕುಳಿತುಕೊಂಡು ಯಶೋದೆಯು ಹಿತಕರವಾದ ಮಾತನ್ನಾಡಿದಳು. ನಂದನೂ ಕೂಡ ಗೋಪಿಯಿಂದ ಕೊಡಲ್ಪಟ್ಟ ಆಸನದಮೇಲೆ ಅಲ್ಲಿಯೇ ಕುಳಿತುಕೊಂಡನು.

೩೦. ಯಶೋದೆಯು ಹೇಳುತ್ತಾಳೆ :— ಎಲೈ ರಾಧೆಯೇ! ನೀನು ಚೈತನ್ಯವನ್ನು ಹೊಂದುವವಳಾಗು. ಪ್ರಯತ್ನಪೂರ್ವಕವಾಗಿ ಆತ್ಮರಕ್ಷಣೆಯನ್ನು ಮಾಡಿಕೋ. ಮಂಗಳದದಿನವು ಬರಲು ನಿನ್ನ ಪ್ರಾಣನಾಥನನ್ನು ನೋಡುವವಳಾಗುತ್ತೀಯೆ.

೩೧. ಎಲೈ ದೇವೇಶ್ವರಿಯೇ! ನಿನ್ನಿಂದ ಪ್ರಪಂಚವು ಪವಿತ್ರವಾಗಿದೆ ಮತ್ತು ನಿನ್ನವಂಶವೂ ಪವಿತ್ರವಾಗಿ ಮಾಡಲ್ಪಟ್ಟಿದೆ. ನಿನ್ನ ಪಾದಕಮಲಗಳನ್ನು ಸೇವೆ ಮಾಡುವುದರಿಂದ ಗೋಪಿಯರೆಲ್ಲರೂ ಪುಣ್ಯವತಿಯರಾಗಿರುವರು.

೩೨. ತೀರ್ಥಗಳಂತೆ ಪವಿತ್ರವಾದ ಮಂಗಲಕರವಾದ ನಿನ್ನ ಕೀರ್ತಿಯನ್ನು ಎಲ್ಲ ಲೋಕಗಳೂ ಗಾನಮಾಡುತ್ತಲಿವೆ. ಉತ್ತಮವಾದ ನಾಲ್ಕುವೇದಗಳೂ ಪ್ರಾಚೀನಗಳಾದ ಪುರಾಣಗಳೂ ಕೂಡ ಹಾಡುತ್ತಲಿವೆ.

ಅಹಂ ಯಶೋದಾ ನಂದೋಽಯಂ ಬುದ್ಧಿರೂಪೇ ನಿಬೋಧ ಮಾಂ ।
ವೃಷಭಾನುಸುತಾ ತ್ವಂ ಚ ಮಾಂ ನಿಶಾಮಯ ಸುವ್ರತೇ ॥ ೩೩ ॥

ದ್ವಾರಕಾನಗರಾದ್ಭದ್ರೇ ಶ್ರೀಕೃಷ್ಣಸನ್ನಿಧಾನತಃ ।
ತವಾಂತಿಕಮಾಗತಾಹಂ ಪ್ರೇರಿತಾ ಹರಿಣಾ ಸತೀ ॥ ೩೪ ॥

ಶೃಣು ಮಂಗಲವಾರ್ತಾಂ ಚ ಮಂಗಲಂ ಚ ಗದಾಭೃತಃ ।
ಆರಾದ್ದ್ರಕ್ಷ್ಯಸಿ ಕೃಷ್ಣಂ ತಂ ಹೇ ದೇವಿ ಚೇತನಂ ಕುರು ॥ ೩೫ ॥

ಭಕ್ತ್ಯಾತ್ಮಕಂ ಪರಿಜ್ಞಾನಂ ದೇಹಿ ಮಹ್ಯಂ ಚ ಸಾಂಪ್ರತಂ ।
ತ್ವಪ್ಭರ್ತುರುಪದೇಶೇನ ತ್ವತ್ಸಮೀಪಂ ಸಮಾಗತಾ ॥ ೩೬ ॥

ಪಶ್ಚಾದಾಯಾಸ್ಯತಿ ಹರಿಸ್ತ್ವಾಂ ಮುಹೂರ್ತಂ ವರಾನನೇ ।
ಭವಿಷ್ಯತ್ಯಚಿರೇಣೈವ ಶ್ರೀದಾಮ್ನಃ ಶಾಪಮೋಚನಂ ॥ ೩೭ ॥

---

೩೩. ಬುದ್ಧಿರೂಪಳೂ ಉತ್ತಮವಾದ ನಡತೆಯುಳ್ಳವಳೂ ಆದ ರಾಧೆಯೇ! ನಾನು ಯಶೋದೆಯು, ಇವನು ನಂದನು. ಈ ರೀತಿಯಲ್ಲಿ ನನ್ನನ್ನು ತಿಳಿದುಕೋ ನೀನಾದರೋ ವೃಷಭಾನನ ಮಗಳಾಗಿರುತ್ತೀಯೆ, ನನಗೆ ವಿಷಯವನ್ನು ತಿಳಿಸು.

೩೪. ಎಲೈ ಮಂಗಳಕರಳೇ! ನಾನು ದ್ವಾರಕಾಪಟ್ಟಣದಿಂದ ಶ್ರೀಕೃಷ್ಣನ ಸನ್ನಿಧಿಯಿಂದ ಶ್ರೀಕೃಷ್ಣನಿಂದಲೇ ಪ್ರೇರಿಸಲ್ಪಟ್ಟವಳಾಗಿ ನಿನ್ನ ಸಮೀಪವನ್ನು ಕುರಿತು ಬಂದಿರುವೆನು.

೩೫. ಎಲೈ ದೇವಿಯೇ! ಗದಾಧಾರಿಯಾದ ಪರಮಾತ್ಮನ ಮಂಗಲಕರವಾದ ಶುಭ ಸಮಾಚಾರವನ್ನು ಕೇಳುವವಳಾಗು. ನೀನು ಚೈತನ್ಯವನ್ನು ಹೊಂದು ಶೀಘ್ರದಲ್ಲಿಯೇ ಆ ಕೃಷ್ಣನನ್ನು ನೀನು ನೋಡುತ್ತೀಯೆ.

೩೬. ಈಗ ನೀನು ಭಕ್ತಿರೂಪವಾದ ದಿವ್ಯಜ್ಞಾನವನ್ನು ನನಗೆ ತಿಳಿಸಿ ಕೊಡುವವಳಾಗು. ನಿನ್ನ ಗಂಡನ ಉಪದೇಶದಿಂದ ನಾವಿಬ್ಬರೂ ನಿನ್ನ ಸಮೀಪವನ್ನು ಕುರಿತು ಬಂದಿರುವೆವು.

೩೭. ಇನ್ನು ಸ್ವಲ್ಪದಿನಗಳಲ್ಲಿಯೇ ಶ್ರೀದಾಮನು ಕೊಟ್ಟಿರುವ ಶಾಪದ ಅವಧಿಯು ಕಳೆದುಹೋಗುತ್ತದೆ. ಎಲೈ ಮಂಗಳಮುಖಿಯೇ! ಅನಂತರ ಸ್ವಲ್ಪ ಕಾಲದಲ್ಲಿಯೇ ಹರಿಯು ನಿನ್ನ ಸಮೀಪಕ್ಕೆ ಬರುತ್ತಾನೆ.

ಯಶೋದಾ ವಚನಂ ಶ್ರುತ್ವಾ ವಾರ್ತಾಂ ಪ್ರಾಪ್ಯ ಗದಾಭೃತಃ ।
ಶ್ರೀಕೃಷ್ಣನಾಮಸ್ಮರಣಾದ್ದೂರೀಭೂತಮಮಂಗಲಂ ॥ ೩೮ ॥

ಸಂಪ್ರಾಪ ಚೇತನಂ ರಾಧಾ ಸಂಭಾವ್ಯ ಕೃಷ್ಣಮಂತರಂ ।
ಉವಾಚ ಮಧುರಂ ಶಾಂತಾ ಲೌಕಿಕೀಂ ಭಕ್ತಿಮುತ್ತಮಾಂ ॥ ೩೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ರಾಧಾಯಶೋಧಾಸಂವಾದೇ
ದಶಾಧಿಕಶತತಮೋಽಧ್ಯಾಯಃ.

---

೩೮–೩೯. ಯಶೋದೆಯ ಮಾತನ್ನು ಕೇಳಿ ಗದಾಧಾರಿಯಾದ ಪರಮಾತ್ಮನ ಸಮಾಚಾರವನ್ನು ತಿಳಿದುಕೊಂಡು ಶ್ರೀಕೃಷ್ಣನ ಹೆಸರನ್ನು ಸ್ಮರಿಸಿಕೊಳ್ಳುವುದರಿಂದ ಅಮಂಗಳಗಳೆಲ್ಲವೂ ನಾಶವಾಗಲು ರಾಧೆಯು ಚೈತನ್ಯವನ್ನು ಹೊಂದಿದಳು ಮತ್ತು ಶ್ರೀಕೃಷ್ಣನ ತಾಯಿಯಾದ ಯಶೋದೆಯನ್ನು ಗೌರವಿಸುತ್ತ ಶಾಂತಳಾಗಿ ಮಧುರವೂ ಉತ್ತಮವೂ ಲೌಕಿಕವೂ ಆದ ಭಕ್ತಿಯನ್ನು ವಿವರವಾಗಿ ಹೇಳಿದಳು.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿನ ನಾರಾಯಣ ನಾರದ ಸಂವಾದದಲ್ಲಿ
ರಾಧಾಯಶೋದಾಸಂವಾದದಲ್ಲಿ ನೂರಹತ್ತನೆಯ
ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಏಕಾದಶಾಧಿಕಶತತಮೋಽಧ್ಯಾಯಃ ||

|| ರಾಧಿಕೋವಾಚ ||

ಜ್ಞಾನಾತ್ಮಕಶ್ಚ ಪರಮೋ ಬ್ರಹ್ಮೇಶಶೇಷಪೂಜಿತಃ ।
ಜ್ಞಾನಂ ಚ ನ ದದೌ ತುಭ್ಯಂ ಮನ್ಮೂಲಂ ಪ್ರೇಷಿತಾ ಸತಿ ||೧||

ತೇನೈವ ಛದ್ಮನಾ ನೇತುಂ ಭಾವಾರ್ಥಂ ಬೋಧಯಾಮಿ ಕಿಂ ।
ವೇದಾಃ ಸಂತಶ್ಚ ಭಾವಾರ್ಥಂ ನೈವ ಜಾನಂತಿ ತಸ್ಯ ಚ ||೨||

ಸ್ತ್ರೀಜಾತಿರಬಲಾ ಮೂಢಾ ವಸ್ತುತೋಽಜ್ಞಾನತತ್ಪರಾ ।
ತತಸ್ತದ್ವಿರಹೇಣೈವ ಸಂತತಂ ಹತಚೇತನಾ ||೩||

---

### ನೂರಹನ್ನೊಂದನೆಯ ಅಧ್ಯಾಯವು.

೧. ರಾಧಿಕೆಯು ಹೇಳುತ್ತಾಳೆ:— ಜ್ಞಾನಸ್ವರೂಪವು ಅತ್ಯಂತ ಶ್ರೇಷ್ಠವಾದುದು. ಅದು ಬ್ರಹ್ಮ, ಈಶ್ವರ, ಶೇಷ ಇವರುಗಳಿಂದ ಗೌರವಿಸಲ್ಪಟ್ಟುದಾಗಿದೆ. ಪರಮಾತ್ಮನು ನಿನಗೆ ಜ್ಞಾನವನ್ನುಪದೇಶ ಮಾಡಲಿಲ್ಲ. ನನ್ನ ಬಳಿಗೆ ಕಳುಹಿಸಲ್ಪಟ್ಟವಳಾಗಿರುವಿ.

೨. ಆ ಪರಮಾತ್ಮನೇ ನೆಪಮಾಡಿ ಇಲ್ಲಿಗೆ ಕಳುಹಿಸಿರುವಾಗ ಭಕ್ತಿಮಾರ್ಗದ ಭಾವಾರ್ಥವನ್ನು ನಾನು ಏನೆಂದು ಹೇಳಲಿ? ವೇದಗಳೂ ಸತ್ಪುರುಷರೂ ಕೂಡ ಆ ಭಕ್ತಿಮಾರ್ಗವನ್ನು ತಿಳಿಯದವರಾಗಿರುತ್ತಾರೆ.

೩. ಸ್ತ್ರೀ ಜಾತಿಯು ದುರ್ಬಲವಾದುದು ನಿಜವಾಗಿಯೂ ಮೂಢವೂ ಅಜ್ಞಾನದಿಂದ ಕೂಡಿದುದೂ ಆಗಿರುತ್ತೆ. ಇದರ ಮೇಲೆ ನಾನು ಆ ಪರಮಾತ್ಮನ ಅಗಲುವಿಕೆಯಿಂದ ಯಾವಾಗಲೂ ಚೈತನ್ಯಶೂನ್ಯಳಾಗಿರುವೆನು.

ಕಿಂ ವಾಹಂ ಕಥಯಿಷ್ಯಾಮಿ ಜ್ಞಾನಂ ಪಂಚವಿಧೇಷು ಚ ।
ಭಕ್ತ್ಯಾತ್ಮಕಂ ಸರ್ವಪರಂ ನಿಬೋಧ ಕಥಯಾಮಿ ತೇ ॥ ೪ ॥

ಶ್ರೀಕೃಷ್ಣಸ್ಯ ವರೇಣಾಪಿ ತ್ವಂ ಸಾಧೋ ನಿರ್ಭಯೋ ಭವ ।
ಗೋಲೋಕೇ ಚಾಪಿ ಪತನಂ ಸಂಭವೇಚ್ಚ ಕುಯೋಗಿನಃ ॥ ೫ ॥

ತಸ್ಮಾತ್ಸರ್ವಂ ಪರಿತ್ಯಜ್ಯ ಭಜಸ್ವ ಪರಮೇಶ್ವರಂ ।
ಪುತ್ರಬುದ್ಧಿಂ ಪರಿತ್ಯಜ್ಯ ಬ್ರಹ್ಮರೂಪಂ ನಿಶಾಮಯ ॥ ೬ ॥

ಸರ್ವಂ ಯಶೋದೇ ಭವತೀ ಪರಿತ್ಯಜ್ಯ ಚ ನಶ್ವರಂ ।
ಗತ್ವಾ ವೃಂದಾವನಂ ರಮ್ಯಂ ಪುಣ್ಯಕ್ಷೇತ್ರಂ ಚ ಭಾರತಂ ॥ ೭ ॥

ಕೃತ್ವಾ ತ್ರಿಕಾಲಸ್ನಾನಂ ಚ ನಿರ್ಮಲೇ ಯಮುನಾಜಲೇ ।
ಕೃತ್ವಾಷ್ಟದಲಪದ್ಮಂ ಚ ಸ್ನಿಗ್ಧೇನ ಚಂದನೇನ ಚ ॥ ೮ ॥

---

೪. ನಾನು ಏನೆಂದು ಹೇಳಲಿ ? ಐದು ವಿಧವಾದ ಜ್ಞಾನದಲ್ಲಿ ಭಕ್ತಿರೂಪವಾದ ಜ್ಞಾನವು ಎಲ್ಲದಕ್ಕಿಂತಲೂ ಉತ್ತಮವಾದುದು. ಅದನ್ನು ನಿನಗೆ ಹೇಳುತ್ತೇನೆ ಕೇಳು.

೫. ಎಲೈ ಸಾಧುವೇ! ನೀನು ಭಯವಿಲ್ಲದವನಾಗು. ಶ್ರೀಕೃಷ್ಣನ ವರದಿಂದ ಯೋಗಿಯಾದ ನಿನಗೆ ಗೋಲೋಕದಲ್ಲಿ ವಾಸಮಾಡುವಿಕೆಯು ಉಂಟಾಗುತ್ತದೆ.

೬. ಆದುದರಿಂದ ನೀನು ಸಕಲವನ್ನೂ ಬಿಟ್ಟು ಮಗನೆಂಬ ಭಾವನೆಯನ್ನು ಬಿಟ್ಟು ಆ ಪರಮೇಶ್ವರನನ್ನು ಬ್ರಹ್ಮಸ್ವರೂಪನೆಂದು ತಿಳಿದುಕೊಂಡು ಭಜಿಸುವವನಾಗು.

೭–೮. ಯಶೋದೆಯೇ! ನೀನು ನಾಶವಾಗುವ ಸಕಲವನ್ನೂ ಬಿಟ್ಟು ಪುಣ್ಯಕ್ಷೇತ್ರವಾದ ಭರತಖಂಡದಲ್ಲಿರುವ ವೃಂದಾವನಕ್ಕೆ ಹೋಗಿ ಪರಿಶುದ್ಧವಾದ ಯಮುನಾನದಿಯ ನೀರಿನಲ್ಲಿ ಮೂರುಕಾಲಗಳಲ್ಲಿ ಸ್ನಾನವನ್ನು ಮಾಡಿ ಉತ್ತಮವಾದ ಚಂದನದಿಂದ ಅಷ್ಟದಳ ಪದ್ಮವನ್ನು ಬರೆದುಕೊಂಡು ಗರ್ಗನಿಂದ ಉಪದೇಶ ಮಾಡಲ್ಪಟ್ಟ

ಧ್ಯಾನೇನ ಗರ್ಗದತ್ತೇನ ಶುದ್ಧೇನ ಮನಸಾ ಸತಿ ।
ಸಂಪೂಜ್ಯ ಪರಮಾನಂದಂ ಸಾನಂದಂ ವ್ರಜ ತತ್ಪದಂ ॥ ೯ ॥

ಕೃತ್ವಾ ನಿಕೃಂತನಂ ಕರ್ಮ ಪಿತೃಭಿಃ ಶತಕೈಃ ಸಹ ।
ವೈಷ್ಣವೇನ ಸಹಾಲಾಪಂ ಕುರುಷ್ವ ಸತತಂ ಸತೀ ॥ ೧೦ ॥

ವರಂ ಹುತವಹಜ್ವಾಲಾಂ ಭಕ್ತೋ ವಾಂಛತಿ ಪಂಜರಂ ।
ವರಂ ಚ ಕಂಟಕೇ ವಾಸಂ ವರಂ ಚ ವಿಷಭಕ್ಷಣಂ ॥ ೧೧ ॥

ಹರಿಭಕ್ತಿವಿಹೀನಾನಾಂ ನ ಸಂಗಂ ನಾಶಕಾರಣಂ ।
ಸ್ವಯಂ ನಷ್ಟೋ ಭಕ್ತಿಹೀನೋ ಬುದ್ಧಿಭೇದಂ ಕರೋತಿ ಚ ॥ ೧೨ ॥

ಅಂಕುರೋ ಭಕ್ತಿವೃಕ್ಷಸ್ಯ ಭಕ್ತಿಸಂಗೇನ ವರ್ಧತೇ ।
ಪರಂ ಹರಿಕಥಾಲಾಪಪೀಯೂಷಾಸೇಚನೇನ ಚ ॥ ೧೩ ॥

---

ರೀತಿಯಿಂದ ಶುದ್ಧವಾದ ಮನಸ್ಸಿನಿಂದ ಕೂಡಿದವಳಾಗಿ ಪರಮಾತ್ಮನನ್ನು ಪೂಜಿಸಿ ಆನಂದದಿಂದ ಆ ಪರಮಾತ್ಮನ ಸ್ಥಾನವನ್ನು ಹೊಂದುವವಳಾಗು.

೧೦. ಕರ್ಮವನ್ನು ನಾಶಮಾಡಿಕೊಂಡು ನೂರುಮಂದಿ ಪಿತೃಗಳೊಡನೆ ವೈಕುಂಠದಲ್ಲಿ ವಾಸಮಾಡುವವಳಾಗು. ಪಾತಿವ್ರತ್ಯ ನಿರತಳಾಗಿ ಯಾವಾಗಲೂ ವಿಷ್ಣುಭಕ್ತರೊಡನೆ ಮಾತುಕಥೆಗಳನ್ನಾಡುತ್ತಿರುವವಳಾಗು.

೧೧. ಭಕ್ತನಾದವನು ಬೆಂಕಿಯಜ್ವಾಲೆಯನ್ನು ಪ್ರವೇಶಿಸುವುದು ಉತ್ತವೆಂದು ತಿಳಿಯುತ್ತಾನೆ. ಪಂಜರದಲ್ಲಿ ವಾಸವನ್ನೂ ಒಪ್ಪಿಕೊಳ್ಳುತ್ತಾನೆ. ಮುಳ್ಳಿನ ಮೇಲೆ ವಾಸಮಾಡುವುದು ಉತ್ತಮವೆಂದು ತಿಳಿಯುತ್ತಾನೆ. ವಿಷವನ್ನು ಕುಡಿಯುವುದು ಉತ್ತಮವೆನ್ನುತ್ತಾನೆ.

೧೨. ಹರಿಭಕ್ತಿಯಿಲ್ಲದವರ ಸಂಗವು ಒಳ್ಳೆಯದಲ್ಲ. ಅದು ತನ್ನ ನಾಶಕೆಕ ಕಾರಣವಾದುದು. ಭಕ್ತಿಯಿಲ್ಲದವನು ತಾನು ನಾಶಹೊಂದುವುದಲ್ಲದೆ ಇತರರ ಬುದ್ಧಿಯನ್ನೂ ಭೇಧಿಸುತ್ತಾನೆ.

೧೩. ಭಕ್ತಿಯೆಂಬ ಮರದ ಮೊಳಕೆಯು ಭಕ್ತಿಯ ಸಂಬಂಧದಿಂದ ಬೆಳೆಯುತ್ತದೆ. ಪರಮಾತ್ಮನ ಕಥೆಗಳನ್ನು ಹೇಳುವಿಕೆಯೆಂಬ ಅಮೃತವನ್ನೆರೆಯುವುದರಿಂದ ಉತ್ತಮವಾಗಿ ಬೆಳೆಯುತ್ತದೆ

ಕಿಂ ವಾಹಂ ಕಥಯಿಷ್ಯಾಮಿ ಜ್ಞಾನಂ ಪಂಚವಿಧೇಷು ಚ ।
ಭಕ್ತ್ಯಾತ್ಮಕಂ ಸರ್ವಪರಂ ನಿಬೋಧ ಕಥಯಾಮಿ ತೇ ॥ ೪ ॥

ಶ್ರೀಕೃಷ್ಣಸ್ಯ ವರೇಣಾಪಿ ತ್ವಂ ಸಾಧೋ ನಿರ್ಭಯೋ ಭವ ।
ಗೋಲೋಕೇ ಚಾಪಿ ಪತನಂ ಸಂಭವೇಚ್ಚ ಕುಯೋಗಿನಃ ॥ ೫ ॥

ತಸ್ಮಾತ್ಸರ್ವಂ ಪರಿತ್ಯಜ್ಯ ಭಜಸ್ವ ಪರಮೇಶ್ವರಂ ।
ಪುತ್ರಬುದ್ಧಿಂ ಪರಿತ್ಯಜ್ಯ ಬ್ರಹ್ಮರೂಪಂ ನಿಶಾಮಯ ॥ ೬ ॥

ಸರ್ವಂ ಯಶೋದೇ ಭವತೀ ಪರಿತ್ಯಜ್ಯ ಚ ನಶ್ವರಂ ।
ಗತ್ವಾ ವೃಂದಾವನಂ ರಮ್ಯಂ ಪುಣ್ಯಕ್ಷೇತ್ರಂ ಚ ಭಾರತಂ ॥ ೭ ॥

ಕೃತ್ವಾ ತ್ರಿಕಾಲಸ್ನಾನಂ ಚ ನಿರ್ಮಲೇ ಯಮುನಾಜಲೇ ।
ಕೃತ್ವಾಷ್ಟದಲಪದ್ಮಂ ಚ ಸ್ನಿಗ್ಧೇನ ಚಂದನೇನ ಚ ॥ ೮ ॥

---

೪. ನಾನು ಏನೆಂದು ಹೇಳಲಿ ? ಐದು ವಿಧವಾದ ಜ್ಞಾನದಲ್ಲಿ ಭಕ್ತಿರೂಪ ವಾದ ಜ್ಞಾನವು ಎಲ್ಲದಕ್ಕಿಂತಲೂ ಉತ್ತಮವಾದುದು. ಅದನ್ನು ನಿನಗೆ ಹೇಳು ತ್ತೇನೆ ಕೇಳು.

೫. ಎಲೈ ಸಾಧುವೇ! ನೀನು ಭಯವಿಲ್ಲದವನಾಗು. ಶ್ರೀಕೃಷ್ಣನ ವರ ದಿಂದ ಯೋಗಿಯಾದ ನಿನಗೆ ಗೋಲೋಕದಲ್ಲಿ ವಾಸಮಾಡುವಿಕೆಯು ಉಂಟಾಗು ತ್ತದೆ.

೬. ಆದುದರಿಂದ ನೀನು ಸಕಲವನ್ನೂ ಬಿಟ್ಟು ಮಗನೆಂಬ ಭಾವನೆಯನ್ನು ಬಿಟ್ಟು ಆ ಪರಮೇಶ್ವರನನ್ನು ಬ್ರಹ್ಮಸ್ವರೂಪನೆಂದು ತಿಳಿದುಕೊಂಡು ಭಜಿಸುವವ ನಾಗು.

೭-೯. ಯಶೋದೆಯೇ! ನೀನು ನಾಶವಾಗುವ ಸಕಲವನ್ನೂ ಬಿಟ್ಟು ಪುಣ್ಯ ಕ್ಷೇತ್ರವಾದ ಭರತಖಂಡದಲ್ಲಿರುವ ವೃಂದಾವನಕ್ಕೆ ಹೋಗಿ ಪರಿಶುದ್ಧವಾದ ಯಮುನಾ ನದಿಯ ನೀರಿನಲ್ಲಿ ಮೂರುಕಾಲಗಳಲ್ಲಿ ಸ್ನಾನವನ್ನು ಮಾಡಿ ಉತ್ತಮವಾದ ಚಂದನ ದಿಂದ ಅಷ್ಟದಳ ಪದ್ಮವನ್ನು ಬರೆದುಕೊಂಡು ಗರ್ಗನಿಂದ ಉಪದೇಶ ಮಾಡಲ್ಪಟ್ಟ

ಧ್ಯಾನೇನ ಗರ್ಗದತ್ತೇನ ಶುದ್ಧೇನ ಮನಸಾ ಸತಿ ।
ಸಂಪೂಜ್ಯ ಪರಮಾನಂದಂ ಸಾನಂದಂ ವ್ರಜ ತತ್ಪದಂ ॥ ೯ ॥

ಕೃತ್ವಾ ನಿಕೃಂತನಂ ಕರ್ಮ ಪಿತೃಭಿಃ ಶತಶೈಃ ಸಹ ।
ವೈಷ್ಣವೇನ ಸಹಾಲಾಪಂ ಕುರುಷ್ವ ಸತತಂ ಸತೀ ॥ ೧೦ ॥

ವರಂ ಹುತವಹಜ್ವಾಲಾಂ ಭಕ್ತೋ ವಾಂಛತಿ ಪಂಜರಂ ।
ವರಂ ಚ ಕಂಟಕೇ ವಾಸಂ ವರಂ ಚ ವಿಷಭಕ್ಷಣಂ ॥ ೧೧ ॥

ಹರಿಭಕ್ತಿವಿಹೀನಾನಾಂ ನ ಸಂಗಂ ನಾಶಕಾರಣಂ ।
ಸ್ವಯಂ ನಷ್ಟೋ ಭಕ್ತಿಹೀನೋ ಬುದ್ಧಿಭೇದಂ ಕರೋತಿ ಚ ॥ ೧೨ ॥

ಅಂಕುರೋ ಭಕ್ತಿವೃಕ್ಷಸ್ಯ ಭಕ್ತಿಸಂಗೇನ ವರ್ಧತೇ ।
ಪರಂ ಹರಿಕಥಾಲಾಪಪೀಯೂಷಾಸೇಚನೇನ ಚ ॥ ೧೩ ॥

---

ರೀತಿಯಿಂದ ಶುದ್ಧವಾದ ಮನಸ್ಸಿನಿಂದ ಕೂಡಿದವಳಾಗಿ ಪರಮಾತ್ಮನನ್ನು ಪೂಜಿಸಿ ಆನಂದದಿಂದ ಆ ಪರಮಾತ್ಮನ ಸ್ಥಾನವನ್ನು ಹೊಂದುವವಳಾಗು.

೧೦. ಕರ್ಮವನ್ನು ನಾಶಮಾಡಿಕೊಂಡು ನೂರುಮಂದಿ ಪಿತೃಗಳೊಡನೆ ವೈಕುಂಠದಲ್ಲಿ ವಾಸಮಾಡುವವಳಾಗು. ಪಾತಿವ್ರತ್ಯ ನಿರತಳಾಗಿ ಯಾವಾಗಲೂ ವಿಷ್ಣುಭಕ್ತರೊಡನೆ ಮಾತುಕಥೆಗಳನ್ನಾಡುತ್ತಿರುವವಳಾಗು.

೧೧. ಭಕ್ತನಾದವನು ಬೆಂಕಿಯಜ್ವಾಲೆಯನ್ನು ಪ್ರವೇಶಿಸುವುದು ಉತ್ತ ವೆಂದು ತಿಳಿಯುತ್ತಾನೆ. ಪಂಜರದಲ್ಲಿ ವಾಸವನ್ನೂ ಒಪ್ಪಿಕೊಳ್ಳುತ್ತಾನೆ. ಮುಳ್ಳಿನ ಮೇಲೆ ವಾಸಮಾಡುವುದು ಉತ್ತಮವೆಂದು ತಿಳಿಯುತ್ತಾನೆ. ವಿಷವನ್ನು ಕುಡಿಯು ವುದು ಉತ್ತಮವೆನ್ನುತ್ತಾನೆ.

೧೨. ಹರಿಭಕ್ತಿಯಿಲ್ಲದವರ ಸಂಗವು ಒಳ್ಳೆಯದಲ್ಲ. ಅದು ತನ್ನ ನಾಶಕ್ಕೆ ಕಾರಣವಾದುದು. ಭಕ್ತಿಯಿಲ್ಲದವನು ತಾನು ನಾಶಹೊಂದುವುದಲ್ಲದೆ ಇತರರ ಬುದ್ಧಿ ಯನ್ನೂ ಭೇಧಿಸುತ್ತಾನೆ.

೧೩. ಭಕ್ತಿಯೆಂಬ ಮರದ ಮೊಳಕೆಯು ಭಕ್ತಿಯ ಸಂಬಂಧದಿಂದ ಬೆಳೆಯು ತ್ತದೆ. ಪರಮಾತ್ಮನ ಕಥೆಗಳನ್ನು ಹೇಳುವಿಕೆಯೆಂಬ ಅಮೃತವನ್ನೆರೆಯುವುದರಿಂದ ಉತ್ತಮವಾಗಿ ಬೆಳೆಯುತ್ತದೆ

ಅಭಕ್ತಾಲಾಪದೀಪಾಗ್ನಿಜ್ವಾಲಾಯಾಃ ಕಲಯಾಪಿ ಚ ।
ಅಂಕುರಃ ಶುಷ್ಕತಾಂ ಯಾತಿ ಪುನಃ ಸೇಕೇನ ವರ್ದ್ಧತೇ ॥ ೧೪ ॥

ತಸ್ಮಾದಭಕ್ತಸಂಘಂ ಚ ಸಾವಧಾನಃ ಪರಿತ್ಯಜ ।
ಯಥಾ ದೃಷ್ಟ್ವಾ ಕಾಲಸರ್ಪಂ ನರೋ ಭೀತ್ವಾ ಪಲಾಯತೇ ॥ ೧೫ ॥

ಯಶೋದೇ ಚ ಪ್ರಯತ್ನೇನ ಸ್ವಾತ್ಮನಃ ಪುತ್ರಮೀಶ್ವರಂ ।
ರಾಮ ನಾರಾಯಣಾನಂತ ಮುಕುಂದ ಮಧುಸೂದನ ॥ ೧೬ ॥

ಕೃಷ್ಣ ಕೇಶವ ಕಂಸಾರೇ ಹರೇ ವೈಕುಂಠ ವಾಮನ ।
ಇತ್ಯೇಕಾದಶ ನಾಮಾನಿ ಪಠೇದ್ವಾ ಪಾಠಯೇದಿತಿ
ಜನ್ಮಕೋಟಿಸಹಸ್ರಾಣಾಂ ಪಾತಕಾದೇವ ಮುಚ್ಯತೇ ॥ ೧೭ ॥

ರಾಶಬ್ದೋ ವಿಶ್ವವಚನೋ ಮಶ್ಚಾಪೀಶ್ವರವಾಚಕಃ ।
ವಿಶ್ವಾನಾಮೀಶ್ವರೋ ಯೋ ಹಿ ತೇನ ರಾಮಃ ಪ್ರಕೀರ್ತಿತಃ ॥ ೧೮ ॥

---

೧೪. ಆ ಭಕ್ತಿಯೆಂಬ ಮರದ ಮೊಳಕೆಯು ಭಕ್ತರಲ್ಲದವರೊಡನೆ ಮಾಡುವ ಸಂಭಾಷಣೆಯೆಂಬ ದೀಪದಿಂದುಂಟಾದ ಬೆಂಕಿಯ ಜ್ವಾಲೆಯ ಕಿಡಿಮಾತ್ರದಿಂದ ಒಣಗಿಹೋಗುತ್ತದೆ. ಮತ್ತೆ ಮೇಲೆಹೇಳಿದ ನೀರನ್ನೆರೆಯುವುದರಿಂದ ಬೆಳೆಯುತ್ತದೆ.

೧೫. ಆದುದರಿಂದ ಭಕ್ತರಲ್ಲದವರ ಸಂಗವನ್ನು ನಾಗರಹಾವನ್ನು ನೋಡಿ ಮಾನವನು ಯಾವರೀತಿಯಲ್ಲಿ ಹೆದರಿ ಓಡುತ್ತಾನೋ ಹಾಗೆ ಜಾಗರೂಕನಾಗಿ ಬಿಟ್ಟು ಓಡುವವನಾಗು.

೧೬–೧೭. ಎಲೈ ಯಶೋದೆಯೇ! ನೀನು ಪ್ರಯತ್ನಪೂರ್ವಕವಾಗಿ ನಿನ್ನ ಮಗನನ್ನು ಜಗದೀಶ್ವರನೆಂದು ತಿಳಿದು ರಾಮ ನಾರಾಯಣ ಅನಂತ ಮುಕುಂದ ಮಧುಸೂದನ ಕೃಷ್ಣ ಕೇಶವ ಕಂಸಾರಿ ಹರಿ ವೈಕುಂಠ ವಾಮನ ಎಂಬ ಈ ಹನ್ನೊಂದು ನಾಮುಗಳನ್ನು ಹೇಳುವವಳಾಗು ಅಥವಾ ಹೇಳಿಸಿ ಕೇಳುವವಳಾಗು. ಹೀಗೆ ಮಾಡುವುದರಿಂದ ಒಂದು ಸಹಸ್ರಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುತ್ತೀಯೆ.

೧೮. ರಾ ಎಂಬ ಶಬ್ಧವು ಪ್ರಪಂಚವನ್ನು ಹೇಳುವುದಾಗಿರುತ್ತದೆ. ಮ ಎಂಬ ಶಬ್ದವು ಈಶ್ವರನನ್ನು ಹೇಳುತ್ತದೆ. ಯಾವ ಪರಮಾತ್ಮನು ಪ್ರಪಂಚಗಳಿಗೆ ಈಶ್ವರನಾಗಿರುವನೊ ಅದರಿಂದಲೇ ಅವನು ರಾಮನೆಂದು ಹೇಳಲ್ಪಟ್ಟಿರುವನು.

ರಮತೇ ರಮಯಾ ಸಾರ್ಧಂ ತೇನ ರಾಮಂ ವಿದುರ್ಬುಧಾಃ ।
ರಮಾಯಾ ರಮಣಸ್ಥಾನಂ ರಾಮಂ ರಾಮವಿದೋ ವಿದುಃ || ೧೯ ||

ರಾ ಶ್ಚೇತಿ ಲಕ್ಷ್ಮೀ ವಚನೋ ಮಶ್ಚಾಪೀಶ್ವರವಾಚಕಃ ।
ಲಕ್ಷ್ಮೀಪತಿಂ ಗತಿಂ ರಾಮಂ ಪ್ರವದಂತಿ ಮನೀಷಿಣಃ || ೨೦ ||

ನಾಮ್ನಾಂ ಸಹಸ್ರಂ ದಿವ್ಯಾನಾಂ ಸ್ಮರಣೇ ಯತ್ಫಲಂ ಲಭೇತ್ ।
ತತ್ಫಲಂ ಲಭತೇ ನೂನಂ ರಾಮೋಚ್ಚಾರಣಮಾತ್ರತಃ || ೨೧ ||

ಸಾರೂಪ್ಯಮುಕ್ತಿವಚನೋ ನಾರೇತಿ ಚ ವಿದುರ್ಬುಧಾಃ ।
ಯೋ ದೇವೋಪ್ಯಯನಂ ತಸ್ಯ ಸ ಚ ನಾರಾಯಣಃ ಸ್ಮೃತಃ || ೨೨ ||

ನಾರಾಶ್ಚ ಕೃತಪಾಪಾಶ್ಚಾಪ್ಯಯನಂ ಗಮನಂ ಸ್ಮೃತಂ ।
ಯತೋಹಿ ಗಮನಂ ತೇಷಾಂ ಸೋಯಂ ನಾರಾಯಣಃ ಸ್ಮೃತಃ || ೨೩ ||

---

೧೯. ಲಕ್ಷ್ಮಿಯೊಡನೆ ವಿಹರಿಸುತ್ತಾನೆ ಆದುದರಿಂದ ರಾಮನು ಎಂದು ಜ್ಞಾನಿಗಳು ತಿಳಿಯುತ್ತಾರೆ. ಲಕ್ಷ್ಮೀದೇವಿಗೆ ವಿಹಾರಸ್ಥಾನನಾಗಿರುವುದರಿಂದ ರಾಮನು ಎಂದು ರಾಮನನ್ನು ತಿಳಿದವರು ಹೇಳುತ್ತಾರೆ.

೨೦. ರಾ ಎಂಬುದು ಲಕ್ಷ್ಮಿಯನ್ನು ಹೇಳುತ್ತದೆ ಮ ಎಂಬುದು ಈಶ್ವರನನ್ನು ಹೇಳುತ್ತದೆ. ಆದುದರಿಂದ ಲಕ್ಷ್ಮೀಪತಿಯಾದ ರಾಮನೇ ಗತಿಯೆಂದು ಹೇಳುತ್ತಾರೆ.

೨೧. ದಿವ್ಯವಾದ ಸಹಸ್ರನಾಮ ಸ್ಮರಣದಿಂದ ಯಾವ ಫಲವನ್ನು ಮಾನವನು ಹೊಂದುತ್ತಾನೋ ಅಂತಹ ಫಲವನ್ನು ರಾಮ ಎಂಬುದಾಗಿ ಹೇಳುವಮಾತ್ರದಿಂದಲೇ ಖಂಡಿತವಾಗಿಯೂ ಹೊಂದುತ್ತಾನೆ.

೨೨. ನಾರ ಎಂಬುದು ಸಾರೂಪ್ಯ ಮುಕ್ತಿಯನ್ನು ಹೇಳುತ್ತದೆಂದು ಪಂಡಿತರು ಹೇಳುತ್ತಾರೆ. ಯಾವ ದೇವನು ಆ ಮುಕ್ತಿಗೆ ಮಾರ್ಗಸ್ವರೂಪನಾಗಿರುವನೋ ಆ ಕಾರಣದಿಂದ ಅವನನ್ನು ನಾರಾಯಣನೆಂದು ಹೇಳುತ್ತಾರೆ.

೨೩. ನಾರ ಎಂದರೆ ಮಾನವನು ಮಾಡಿದ ಪಾಪಗಳೆಂದರ್ಥ. ಅಯನವೆಂದರೆ ಅದರ ಹೋಗುವಿಕೆಯೆಂದರ್ಥ. ಯಾವನ ದೆಸೆಯಿಂದ ಮಾನವನು ಮಾಡಿದ ಪಾಪಗಳ ನಾಶವುಂಟಾಗುತ್ತದೊ ಅವನು ನಾರಾಯಣನೆಂಬ ಹೆಸರಿನಿಂದ ಕರೆಯಲ್ಪಡುತ್ತಾನೆ.

ಸಕೃನ್ನಾರಾಯಣೇತ್ಯುಕ್ತ್ವಾ ಪುಮಾನ್ಕಲ್ಪಶತತ್ರಯಂ ।
ಗಂಗಾದಿಸರ್ವತೀರ್ಥೇಷು ಸ್ನಾತೋ ಭವತಿ ನಿಶ್ಚಿತಂ ॥ ೨೪ ॥

ನಾರಂ ಚ ಮೋಕ್ಷಣಂ ಪುಣ್ಯಮಯನಂ ಜ್ಞಾನಮೀಪ್ಸಿತಂ ।
ತಯೋರ್ಜ್ಞಾನಂ ಭವೇದ್ಯಸ್ಮಾತ್ಸೋಽಯಂ ನಾರಾಯಣಃ ಪ್ರಭುಃ ॥ ೨೫ ॥

ನಾಸ್ತ್ಯಂತೋ ಯಸ್ಯ ವೇದೇಷು ಪುರಾಣೇಷು ಚತುರ್ಷು ಚ ।
ಶಾಸ್ತ್ರೇಷ್ವನ್ಯೇಷು ಯೋಗೇಷು ತೇನಾನಂತಂ ವಿದುರ್ಬುಧಾಃ ॥ ೨೬ ॥

ಮುಕುಮವ್ಯಯಮಾನಂ ಚ ನಿರ್ವಾಣಂ ಮೋಕ್ಷವಾಚಕಂ ।
ತದ್ದದಾತಿ ಚ ಯೋ ದೇವೋ ಮುಕುಂದಸ್ತೇನ ಕೀರ್ತಿತಃ ॥ ೨೭ ॥

ಮುಕುಂ ಭಕ್ತಿರಸಪ್ರೇಮವಚನಂ ವೇದಸಂಮತಂ ।
ಯಸ್ತಂ ದದಾತಿ ಭಕ್ತೇಭ್ಯೋ ಮುಕುಂದಸ್ತೇನ ಕೀರ್ತಿತಃ ॥ ೨೮ ॥

---

೨೪. ಮಾನವನು ಒಂದುಸಾರಿ ನಾರಾಯಣ ಎಂದು ಹೇಳಿದ ಮಾತ್ರದಿಂದ ಮುನ್ನೂರುಕಲ್ಪಗಳಲ್ಲಿ ಗಂಗೆಯೇ ಮೊದಲಾದ ಸಮಸ್ತತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವನ್ನು ನಿಶ್ಚಯವಾಗಿಯೂ ಹೊಂದುತ್ತಾನೆ.

೨೫. ನಾರ ಎಂದರೆ ಮೋಕ್ಷವನ್ನುಂಟುಮಾಡುವ ಪುಣ್ಯವು. ಅಯನ ವೆಂದರೆ ಜ್ಞಾನವೆಂದರ್ಥವು. ಯಾವನದೆಸೆಯಿಂದ ಆ ಎರಡರ ತಿಳಿವಳಿಕೆಯುಂಟಾಗುತ್ತದೊ ಅವನೇ ಜಗತ್ಪ್ರಭುವಾದ ನಾರಾಯಣನು.

೨೬. ಚತುರ್ವೇದಗಳಲ್ಲೂ, ಪುರಾಣಗಳಲ್ಲೂ ಇತರ ಶಾಸ್ತ್ರಗಳಲ್ಲೂ ಯಾವ ಪರಮಾತ್ಮನ ಪರಿಮಿತಿಯನ್ನು ತಿಳಿಯಲಾಗುವುದಿಲ್ಲವೋ, ಬುಧರು ಯೋಗಾಭ್ಯಾಸದಿಂದಲೂ ಯಾರ ಅಂಶವನ್ನು ತಿಳಿಯಲಾರರೋ ಆ ಪರಮಾತ್ಮನು ಅನಂತನೆನಿಸುವನು.

೨೭. 'ಮುಕ್ಕು' ಎಂದರೆ ಶಾಶ್ವತವಾದ ನಿರ್ವಾಣರೂಪವಾದ ಮೋಕ್ಷ. ಯಾವ ದೇವನು ಆ ರೀತಿಯಾದ ಮೋಕ್ಷವನ್ನು ಭಕ್ತನಿಗೆ ಕೊಡುತ್ತಾನೋ ಅವನು ಮುಕುಂದನೆನಿಸಿಕೊಳ್ಳುತ್ತಾನೆ.

೨೮. 'ಮುಕುಂ' ಎಂದರೆ ಭಕ್ತಿರಸ, ಪ್ರೇಮವಚನ ಎಂದು ವೇದೋಕ್ತವಾಗಿದೆ. ಯಾವನು ಭಕ್ತರಿಗೆ ಇವುಗಳನ್ನು ದಾನಮಾಡುತ್ತಾನೋ ಅವನು ಮುಕುಂದನೆಂದು ಕೀರ್ತಿತನಾಗಿದ್ದಾನೆ.

ಸೂದನಂ ಮಧುದೈತ್ಯಸ್ಯ ಯಸ್ಮಾತ್ಸಮಧುಸೂದನಃ ।
ಇತಿ ಸಂತೋ ವದಂತೀಶಂ ವೇದೇ ಭಿನ್ನಾರ್ಥಮೀಪ್ಸಿತಂ ॥ ೨೯ ॥

ಮಧು ಕ್ಲೀಬಂ ಚ ಮಾಧ್ವೀಕೇ ಕೃತಕರ್ಮಶುಭಾಶುಭೇ ।
ಭಕ್ತಾನಾಂ ಕರ್ಮಣಾಂ ಚೈವ ಸದನಂ ಮಧುಸೂದನಃ ॥ ೩೦ ॥

ಪರಿಣಾಮಾಶುಭಂ ಕರ್ಮ ಭ್ರಾಂತಾನಾಂ ಮಧುರಂ ಮಧು ।
ಕರೋತಿ ಸೂದನಂ ಯೋ ಹಿ ಸ ಏವ ಮಧುಸೂದನಃ ॥ ೩೧ ॥

ಕೃಷಿರುತ್ಕೃಷ್ಟವಚನೋ ಣಶ್ಚ ಸದ್ಭಕ್ತಿವಾಚಕಃ ।
ಅಶ್ಚಾಪಿ ದಾತೃವಚನಃ ಕೃಷ್ಣಂ ತೇನ ವಿದುರ್ಬುಧಾಃ ॥ ೩೨ ॥

ಕೃಷಿಶ್ಚ ಪರಮಾನಂದೇ ಣಶ್ಚ ತದ್ದಾಸ್ಯಕರ್ಮಣಿ ।
ತಯೋರ್ದಾತಾ ಚ ಯೋ ದೇವಸ್ತೇನ ಕೃಷ್ಣಃ ಪ್ರಕೀರ್ತಿತಃ ॥ ೩೩ ॥

---

೨೯. ಯಾರು ಮಧುವೆಂಬ ರಾಕ್ಷಸನನ್ನು 'ಸೂದನ' ಎಂದರೆ ವಿನಾಶ ಮಾಡಿದನೋ ಅವನು ಮಧುಸೂದನನೆನಿಸಿಕೊಂಡನು. ಈ ರೀತಿಯಾಗಿ ಸತ್ಪುರುಷರು ಪರಮೇಶ್ವರನಿಗೆ ವೇದದಲ್ಲಿ ಭಿನ್ನಾರ್ಥವಾಚಕ ಶಬ್ದಗಳಿವೆ ಎನ್ನುತ್ತಾರೆ.

೩೦. ನಪುಂಸಕಲಿಂಗವಾದ 'ಮಧು' ಶಬ್ದವು ಜೇನುತುಪ್ಪವೆಂಬ ಅರ್ಥವನ್ನೂ, ಶುಭಾಶುಭರೂಪವಾದ ಕರ್ಮವನ್ನೂ ತಿಳಿಸುತ್ತದೆ. ಭಕ್ತರ ಶುಭಾಶುಭ ರೂಪವಾದ ಕರ್ಮಗಳನ್ನು ನಾಶಗೊಳಿಸುವವನೇ 'ಮಧುಸೂದನ' ನೆನಿಸುವನು.

೩೧. ಪರಿಣಾಮದಲ್ಲಿ ಅಶುಭವನ್ನುಂಟುಮಾಡುವ ಕರ್ಮವು ಭ್ರಾಂತರಾದ ಜನರಿಗೆ ಮಧುರವಾಗಿ ಕಾಣುವುದರಿಂದ 'ಮಧು' ವೆನಿಸುವುದು. ಇಂಥ ಕರ್ಮವನ್ನು ಯಾವನು ವಿನಾಶಗೊಳಿಸುವನೋ ಅವನು ಮಧುಸೂದನನೆನಿಸುವನು.

೩೨. 'ಕೃಷಿ' ಎಂಬುದು ಉತ್ಕೃಷ್ಟವೆಂಬ ಅರ್ಥವನ್ನೂ 'ಣ' ಎಂಬುದು ಒಳ್ಳೆಯಭಕ್ತಿ ಎಂಬರ್ಥವನ್ನೂ 'ಅ' ಎಂಬುದು ದಾನಾರ್ಥವನ್ನೂ ಕೊಡುವುದರಿಂದ ಉತ್ಕೃಷ್ಟವಾದ ಭಕ್ತಿಯನ್ನು ಕೊಡುವವನೇ ಕೃಷ್ಣನೆಂದು ಬಲ್ಲವರು ಹೇಳುತ್ತಾರೆ.

೩೩. 'ಕೃಷಿ' ಎಂಬುದು ಪರಮಾನಂದವೆಂಬ ಅರ್ಥವನ್ನೂ 'ಣ' ಎಂಬುದು ಪರಮಾತ್ಮನ ದಾಸ್ಯವೆಂಬರ್ಥವನ್ನೂ ಕೊಡುವುದರಿಂದ ಯಾವ ದೇವನು ಪರಮಾನಂದ ಮತ್ತು ಪರಮಾತ್ಮನ ದಾಸ್ಯವನ್ನು ಕೊಡುವನೋ ಅವನೇ 'ಕೃಷ್ಣ' ನೆನಿಸುವನು.

ಕೋಟಿಜನ್ಮಾರ್ಜಿತೇ ಪಾಪೇ ಕೃಷಿಃ ಕ್ಲೇಶೇ ಚ ವರ್ತತೇ ।
ಭಕ್ತಾನಾಂ ಣಶ್ಚ ನಿರ್ವಾಣೇ ತೇನ ಕೃಷ್ಣಃ ಪ್ರಕೀರ್ತಿತಃ ॥ ೩೪ ॥

ನಾಮ್ನಾಂ ಸಹಸ್ರಂ ದಿವ್ಯಾನಾಂ ತ್ರಿರಾವೃತ್ತ್ಯಾ ಚ ಯತ್ಫಲಂ ।
ಏಕಾವೃತ್ತ್ಯಾ ತು ಕೃಷ್ಣಸ್ಯ ತತ್ಫಲಂ ಲಭತೇ ನರಃ ॥ ೩೫ ॥

ಕೃಷ್ಣನಾಮ್ನಃ ಪರಂ ನಾಮ ನ ಭೂತಂ ನ ಭವಿಷ್ಯತಿ ।
ಸರ್ವೇಭ್ಯಶ್ಚ ಪರಂ ನಾಮ ಕೃಷ್ಣೇತಿ ವೈದಿಕಾ ವಿದುಃ ॥ ೩೬ ॥

ಕೃಷ್ಣಕೃಷ್ಣೇತಿ ಹೇ ಗೋಪಿ ಯಸ್ತಂ ಸ್ಮರತಿ ನಿತ್ಯಶಃ ।
ಜಲಂ ಭಿತ್ವಾ ಯಥಾ ಪದ್ಮಂ ನರಕಾದುದ್ಧರೇಚ್ಚ ಸಃ ॥ ೩೭ ॥

ಕೃಷ್ಣೇತಿ ಮಂಗಲಂ ನಾಮ ಯಸ್ಯ ವಾಚಿ ಪ್ರವರ್ತತೇ ।
ಭಸ್ಮೀಭವಂತಿ ಸದ್ಯಸ್ತು ಮಹಾಪಾತಕಕೋಟಯಃ ॥ ೩೮ ॥

---

೩೪. 'ಕೃಷಿ' ಎಂಬುದು ಕೋಟಿಜನ್ಮಾರ್ಜಿತ ಪಾಪವನ್ನೂ ಕ್ಲೇಶವನ್ನೂ ವ್ಯಕ್ತಪಡಿಸುತ್ತದೆ. 'ಣ' ಎಂಬುದು ಅದರ ನಿವಾರಣೆಯ ಅರ್ಥವನ್ನು ಕೊಡುತ್ತದೆ. ಆದುದರಿಂದ ಯಾವನು ಭಕ್ತರ ಪಾಪಗಳನ್ನು ಪರಿಹರಿಸಿ ನಿರ್ವಾಣ ಮುಕ್ತಿಯನ್ನು ಕೊಡುವನೋ ಅವನು ಕೃಷ್ಣನೆನಿಸುವನು.

೩೫. ಪರಮಾತ್ಮನ ಸಹಸ್ರ ದಿವ್ಯನಾಮಗಳನ್ನು ಮೂರುಸಾರಿ ಪಠಿಸುವುದರಿಂದ ಯಾವ ಫಲವೋ ಅದೇ ಫಲವನ್ನು 'ಕೃಷ್ಣ' ಎಂಬ ದಿವ್ಯನಾಮವನ್ನು ಒಂದುಸಾರಿ ಪಠಿಸುವುದರಿಂದ ಭಕ್ತನು ಪಡೆಯುತ್ತಾನೆ.

೩೬. 'ಕೃಷ್ಣ' ಎಂಬ ದಿವ್ಯನಾಮಕ್ಕಿಂತ ಶ್ರೇಷ್ಠವಾದ ನಾಮವು ಹಿಂದೆ ಮತ್ತೊಂದಿರಲಿಲ್ಲ; ಮುಂದೆ ಇರುವುದಿಲ್ಲ. 'ಕೃಷ್ಣ' ಎಂಬ ದಿವ್ಯನಾಮವು ಎಲ್ಲ ನಾಮಗಳಿಗಿಂತ ಶ್ರೇಷ್ಠವಾದುದೆಂದು ವೈದಿಕರು ತಿಳಿದಿದ್ದಾರೆ.

೩೭. ಎಲೌ ಗೋಪಿಯೇ, ಯಾವನು ಪರಮಾತ್ಮನನ್ನು 'ಕೃಷ್ಣ' 'ಕೃಷ್ಣ' ಎಂದು ಪ್ರತಿದಿನವೂ ಸ್ಮರಣೆಮಾಡುತ್ತಾನೋ, ಅಂಥ ಭಕ್ತನನ್ನು ಕೃಷ್ಣನು ನೀರನ್ನು ಭೇದಿಸಿ ತಾವರೆಯು ಹೊರಕ್ಕೆ ಬರುವಂತೆ ನರಕದಿಂದ ಪಾರುಗಾಣಿಸುತ್ತಾನೆ.

೩೮. ಯಾವನ ಮಾತಿನಲ್ಲಿ ಕೃಷ್ಣ ಎಂಬ ಮಂಗಲಕರವಾದ ನಾಮೋಚ್ಚಾರಣೆ ಇರುತ್ತದೋ ಅವನ ಕೋಟಿ ಮಹಾಪಾತಕಗಳೂ ಕೂಡಲೇ ಭಸ್ಮವಾಗುವುದರಲ್ಲಿ ಸಂಶಯವಿಲ್ಲ.

ಅಶ್ವಮೇಧಸಹಸ್ರೇಭ್ಯಃ ಫಲಂ ಕೃಷ್ಣಜಪಸ್ಯ ಚ ।
ವರಂ ತೇಭ್ಯಃ ಪುನರ್ಜನ್ಮ ನಾತೋ ಭಕ್ತಪುನರ್ಭವಃ ॥ ೩೯ ॥

ಸರ್ವೇಷಾಮಪಿ ಯಜ್ಞಾನಾಂ ಲಕ್ಷಾಣಿ ವ್ರತಾನಿ ಚ ।
ತೀರ್ಥಸ್ನಾನಾನಿ ಸರ್ವಾಣಿ ತಪಾಂಸ್ಯನಶನಾನಿ ಚ ॥ ೪೦ ॥

ವೇದಪಾಠಸಹಸ್ರಾಣಿ ಪ್ರಾದಕ್ಷಿಣ್ಯಂ ಭುವಃ ಶತಂ ।
ಕೃಷ್ಣನಾಮಜಪಸ್ಯಾಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೪೧ ॥

ತೇಷಾಂ ಲೋಭಾದ್ಭವೇತ್ಸ್ವರ್ಗಫಲಂ ಚ ಸುಚಿರಂ ನೃಣಾಂ ।
ಸ್ವರ್ಗಾಪವಶ್ಯಂ ಪುಂಸಶ್ಚ ಜಪಕರ್ತುರ್ಹರೇಃ ಪದಂ ॥ ೪೨ ॥

---

೩೯. ಸಾವಿರ ಅಶ್ವಮೇಧ ಯಾಗ ಮಾಡಿದ ಫಲಕ್ಕಿಂತ 'ಕೃಷ್ಣ' ಎಂಬ ದಿವ್ಯನಾಮವನ್ನು ಜಪಿಸುವುದರ ಫಲವು ಹೆಚ್ಚಾದುದು. ಅಶ್ವಮೇಧ ಯಾಗ ಮಾಡುವುದರಿಂದ ಪುನರ್ಜನ್ಮವು ತಪ್ಪುವುದಿಲ್ಲ. ಆದರೆ ಕೃಷ್ಣ ಜಪ ಮಾಡುವ ಭಕ್ತನಿಗೆ ಪುನರ್ಜನ್ಮವಿರುವುದಿಲ್ಲ.

೪೦–೪೧. ಎಲ್ಲ ಯಜ್ಞಗಳನ್ನು ಲಕ್ಷಾವರ್ತಿ ಆಚರಿಸುವುದು, ವ್ರತಗಳನ್ನಾಚರಿಸುವುದು, ಸಕಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವುದು, ತಪಸ್ಸನ್ನಾಚರಿಸುವುದು, ಅನಶನವ್ರತವನ್ನಾಚರಿಸುವುದು, ಸಾವಿರಸಾರಿ ವೇದಪಾರಾಯಣ ಮಾಡುವುದು, ಭೂಮಿಯನ್ನು ನೂರುಸರ್ತಿ ಪ್ರದಕ್ಷಿಣೆ ಮಾಡುವುದು. ಇವೆಲ್ಲವೂ ಶ್ರೀಕೃಷ್ಣನ ದಿವ್ಯನಾಮವನ್ನು ಜಪಿಸುವುದರಿಂದ ದೊರಕುವ ಫಲದ ಹದಿನಾರನೆಯ ಒಂದಂಶ ಫಲವನ್ನೂ ಕೊಡುವುದಿಲ್ಲ.

೪೨. ಮೇಲೆ ಹೇಳಿದ ವ್ರತಗಳು ಕಾಮ್ಯಕರ್ಮಗಳಾದುದರಿಂದ ಅವುಗಳ ಆಚರಣೆಯಿಂದ ಮನುಜರಿಗೆ ದೀರ್ಘಕಾಲ ಸ್ವರ್ಗಪ್ರಾಪ್ತಿರೂಪವಾದ ಫಲ ದೊರಕುವುದು. ಮನುಷ್ಯನಿಗೆ ಅದಕ್ಕಿಂತಲೂ ಅವಶ್ಯಕವಾದ ಶ್ರೀಹರಿಯ ಪದವು ಕೃಷ್ಣನಾಮಜಪದಿಂದ ದೊರೆಯುವುದು.

ಕೇ ಜಲೇ ಸರ್ವದೇಹೇಪಿ ಶಯನಂ ಯಸ್ಯ ಚಾತ್ಮನಃ ।
ವದಂತಿ ವೈದಿಕಾಃ ಸರ್ವೇ ತಂ ದೇವಂ ಕೇಶವಂ ಪರಂ ॥ ೪೩ ॥

ಕಂಸಶ್ಚ ಪಾತಕೇ ವಿಘ್ನೇ ರೋಗೇ ಶೋಕೇ ಚ ದಾನವೇ ।
ತೇಷಾಮರಿರ್ನಿಹಂತಾ ಚ ಸ ಕಂಸಾರಿಃ ಪ್ರಕೀರ್ತಿತಃ ॥ ೪೪ ॥

ರುದ್ರರೂಪೇಣ ಸಂಹರ್ತಾ ವಿಶ್ವಾನಾಮಪಿ ನಿತ್ಯಶಃ ।
ಭಕ್ತಾನಾಂ ಪಾತಕಾನಾಂ ಚ ಹರಿಸ್ತೇನ ಪ್ರಕೀರ್ತಿತಃ ॥ ೪೫ ॥

ಮಾ ಚ ಬ್ರಹ್ಮಸ್ವರೂಪಾ ಯಾ ಮೂಲಪ್ರಕೃತಿರೀಶ್ವರೀ ।
ನಾರಾಯಣೀತಿ ವಿಖ್ಯಾತಾ ವಿಷ್ಣುಮಾಯಾ ಸನಾತನೀ ॥ ೪೬ ॥

ಮಹಾಲಕ್ಷ್ಮೀ ಸ್ವರೂಪಾ ಚ ವೇದಮಾತಾ ಸರಸ್ವತೀ ।
ರಾಧಾ ವಸುಂಧರಾ ಗಂಗಾ ತಾಸಾಂ ಸ್ವಾಮೀ ಚ ಮಾಧವಃ ॥ ೪೭ ॥

---

೪೩. 'ಕೆ' ಎಂದರೆ ನೀರಿನಲ್ಲೂ ಮತ್ತು ಸಕಲ ಪ್ರಾಣಿಗಳ ದೇಹದಲ್ಲೂ ಯಾವ ಆತ್ಮನು ಶಯನ ಅಂದರೆ ವ್ಯಾಪಿಸಿಕೊಂಡಿರುವನೋ ಅಂಥ ದೇವನನು ವೈದಿಕರು 'ಕೇಶವ' ನೆಂದು ಕರೆಯುವರು.

೪೪- 'ಕಂಸ' ಎಂದರೆ ಪಾತಕ, ವಿಘ್ನ, ರೋಗ, ಶೋಕ, ದಾನವ ಮುಂತಾದ ಅರ್ಥವಾಗುವುದು. ಯಾವನು ಇವುಗಳನ್ನು ನಾಶಗೊಳಿಸಿ, ಇವುಗಳ ಅರಿ ಎಂದರೆ ಶತ್ರುವಾಗುವನೋ ಅವನು 'ಕಂಸಾರಿ' ಎನಿಸಿಕೊಳ್ಳುವನು.

೪೫. ಯಾವ ಪರಮಾತ್ಮನು ವಿಶ್ವವನ್ನೆಲ್ಲ ರುದ್ರರೂಪದಿಂದ ಸಂಹಾರ ಮಾಡುವನೋ, ಅವನೇ ಭಕ್ತರ ಪಾಪ ಪರಿಹಾರಕನಾದುದರಿಂದ 'ಹರಿ' ಎನಿಸಿಕೊಳ್ಳುವನು.

೪೬–೪೭. 'ಮಾ' ಎಂಬ ಪದಕ್ಕೆ ಬ್ರಹ್ಮಸ್ವರೂಪಳಾದ ಮೂಲಪ್ರಕೃತಿ, ಈಶ್ವರಿ, ನಾರಾಯಣಿ, ವಿಷ್ಣುಮಾಯಾ, ಸನಾತನಿ, ಮಹಾಲಕ್ಷ್ಮಿ, ವೇದಮಾತೆಯಾದ ಸರಸ್ವತಿ, ರಾಧಾ, ವಸುಂಧರಾ, ಗಂಗಾ ಮುಂತಾದ ಅರ್ಥಗಳಾಗುವುದರಿಂದ ಇವರುಗಳ 'ಧವ' ಎಂದರೆ ಸ್ವಾಮಿಯೇ ಮಾಧವನೆನಿಸುವನು.

ಬ್ರಹ್ಮೇಶಶೇಷಾದಿಭಿರನ್ಯೈಶ್ಚ ವಂದ್ಯಂ ಧ್ಯಾನೈರ್ನ ಕಿಂಚಿತ್ಸನಕಾದಿಭಿಶ್ಚ ।
ವೇದ್ಯೈಃ ಪುರಾಣೈರ್ನ ನಿರೂಪಿತಂ ಚ ಭಜಸ್ವ ಭಕ್ತ್ಯಾ ನವನೀತಚೋರಂ
|| ೪೮ ||

ಕ್ವ ಚಾಪಿ ದುಗ್ಧಂ ಕ್ವ ದಧಿಘೃತಂ ವಾ ನವೋದ್ಧೃತಂ ವಾ ಕ್ವ
ಚ ತಕ್ರಮಿಷ್ಟಿತಂ । ತೇಷಾಂ ಕ್ವ ಚೋರೋ ಭವತಿ ಕ್ವ ಚಾಪಿ
ಕ್ವ ಬಂಧನಂ ತೇ ಭವಮೂಲಮಧ್ಯೇ || ೪೯ ||

ನ ಯೋಗಿಭಿಃ ಸಿದ್ಧಗಣೈರ್ಮುನೀಂದ್ರೈರ್ನ ಭಕ್ತಸಂಘೈರ್ಭವ
ಪದ್ಮಶೇಷೈಃ । ಯೋಗೈರ್ನ ಬದ್ಧೋ ನ ಹಿ ರಕ್ಷಿತುಂ ಕ್ಷಮೈಃ
ಕಥಂ ಸ ಬದ್ಧಸ್ತವ ಮೂಲಮಧ್ಯತಃ || ೫೦ ||

ಪ್ರೇಮ್ಣಾ ನು ಭಕ್ತ್ಯಾ ಸ್ತವನೇನ ಪೂಜಯಾ ಭಜಸ್ವ ಪುತ್ರಂ
ತರಸಾ ಚ ಭಾರತೇ । ಹೃತ್ಪದ್ಮಮಧ್ಯೇ ಸ್ಥಿತಮೀಶ್ವರಂ ಪರಂ
ಧ್ಯಾನೇನ ಯತ್ನೇನ ಚ ಸಂತತಂ ಸತಿ || ೫೧ ||

---

೪೮. ಬ್ರಹ್ಮ, ಈಶ್ವರ, ಶೇಷ ಮುಂತಾದವರಿಂದ ವಂದ್ಯನಾದ, ಸನಕಾದಿ ಬ್ರಹ್ಮಮಾನಸಪುತ್ರರಿಗೂ ಧ್ಯಾನಾಸಾಧ್ಯನಾದ, ವೇದಪುರಾಣಗಳಿಂದ ನಿರೂಪಿಸಲಸಾಧ್ಯನಾದ ನವನೀತಚೋರನನ್ನು ಭಕ್ತಿಯಿಂದ ಭಜಿಸು.

೪೯. ಹಾಲು ಎಲ್ಲಿ? ಮೊಸರೆಲ್ಲಿ? ತುಪ್ಪವೆಲ್ಲಿ? ಹೊಸದಾಗಿ ತೆಗೆದ ಬೆಣ್ಣೆ ಎಲ್ಲಿ? ಮಜ್ಜಿಗೆ ಎಲ್ಲಿ? ಶ್ರೀಕೃಷ್ಣನು ಇವುಗಳನ್ನೆಲ್ಲ ಕದ್ದನೆಂಬುದು ಹೇಗೆ? ಈ ಸಂಸಾರ ಮಧ್ಯದಲ್ಲಿ ನಿನಗಿರುವಂತೆ ಶ್ರೀಕೃಷ್ಣನಿಗೆ ಬಂಧನವೆಲ್ಲಿಬಂತು?

೫೦. ಯೋಗಿಗಳಿಂದಾಗಲೀ ಸಿದ್ಧಪುರುಷರಿಂದಾಗಲೀ, ಮುನಿಶ್ರೇಷ್ಠರಿಂದಾಗಲೀ, ಭಕ್ತಸಮೂಹದಿಂದಾಗಲೀ, ಯಾವ ಯೋಗಬಲದಿಂದಲೂ ಬಂಧಿಸಲಸಾಧ್ಯನಾದ ಮತ್ತು ಯಾರ ರಕ್ಷಣೆಗೂ ಒಳಪಡದಿರುವ ಆ ಕೃಷ್ಣನು ನಿನ್ನ ಮಗನೆಂಬ ಬಂಧನಕ್ಕೆ ಹೇಗೆ ಒಳಗಾಗುತ್ತಾನೆ?

೫೧. ಎಲೌ ಸತಿಯೇ, ನಿನ್ನ ಹೃತ್ಪದ್ಮಮಧ್ಯದಲ್ಲಿರುವ, ನಿನ್ನ ಪುತ್ರನೆಂದು ಭಾವಿಸಿರುವ ಆ ಕೃಷ್ಣಪರಮಾತ್ಮನನ್ನು ಪ್ರೇಮದಿಂದಲೂ, ಭಕ್ತಿಯಿಂದಲೂ, ಸ್ತೋತ್ರಪೂಜೆಗಳಿಂದಲೂ ಧ್ಯಾನದಿಂದಲೂ ಪ್ರಯತ್ನಪೂರ್ವಕವಾಗಿ ಭಜಿಸುವವಳಾಗು.

ವರಂ ವೃಣುಷ್ವ ಭದ್ರಂ ತೇ ಯತ್ತೇ ಮನಸಿ ವಾಂಛಿತಂ ।
ಸರ್ವಂ ದಾಸ್ಯಾಮಿ ಜಗತಿ ದೇವಾನಾಮಪಿ ದುರ್ಲಭಂ ॥ ೫೨ ॥

॥ ಯಶೋದೋವಾಚ ॥

ಹರೌ ಚ ನಿಶ್ಚಲಾಭಕ್ತಿ ಸ್ತದ್ದಾಸ್ಯಂ ವಾಂಛಿತಂ ಮಮ ।
ತವ ನಾಮ್ನಶ್ಚ ವ್ಯುತ್ಪತ್ತಿಃ ಕಾ ವಾ ತದ್ವಕ್ತುಮರ್ಹಸಿ ॥ ೫೩ ॥

॥ ಶ್ರೀ ರಾಧಿಕೋವಾಚ ॥

ಭವೇದ್ಭಕ್ತಿರ್ನಿಶ್ಚಲಾ ತೇ ಹರೇರ್ದಾಸ್ಯಂ ಚ ದುರ್ಲಭಂ ।
ಲಭಸ್ವ ಮದ್ವರೇಣಾಪಿ ಕಥಯಾಮಿ ಸುನಿರ್ಣಯಂ ॥ ೫೪ ॥

ಪುರಾ ನಂದೇನ ದೃಷ್ಟಾಹಂ ಭಾಂಡೀರೇ ವಟಮೂಲಕೇ ।
ಮಯಾ ಚ ಕಥಿತೋ ನಂದೋ ನಿಷಿದ್ಧಶ್ಚ ವ್ರಜೇಶ್ವರಃ ॥ ೫೫ ॥

ಅಹಮೇವ ಸ್ವಯಂ ರಾಧಾ ಛಾಯಾರಾಪಾಣಕಾಮಿನೀ ।
ರಾಪಾಣಃ ಶ್ರೀಹರೇರಂಶೋ ಪಾರ್ಷದಪ್ರವರೋ ಮಹಾನ್ ॥ ೫೬ ॥

---

೫೨. ನಿನಗೆ ಮಂಗಳವಾಗಲಿ; ನಿನ್ನ ಮನಸ್ಸಿನಲ್ಲಿ ಬಯಸಿರುವ ವರವನ್ನು ಕೇಳಿಕೋ. ಜಗತ್ತಿನಲ್ಲಿ ದೇವತೆಗಳಿಗೂ ದುರ್ಲಭವಾದ ಯಾವ ವರವನ್ನು ಬೇಕಾದರೂ ನಿನಗೆ ಕೊಡುವೆನು.

೫೩. ಯಶೋದೆಯು ಹೇಳಿದಳು :—ಶ್ರೀಹರಿಯಲ್ಲಿ ನಿಶ್ಚಲವಾದ ಭಕ್ತಿಯೂ ದಾಸ್ಯವೂ ನನಗೆ ಬೇಕಾದುದು. ಅದನ್ನು ಅನುಗ್ರಹಿಸು. ರಾಧಾ ಎಂಬ ನಿನ್ನ ದಿವ್ಯನಾಮದ ವ್ಯುತ್ಪತ್ತಿಯು ಹೇಗೆಂಬುದನ್ನು ನನಗೆ ಕೃಪೆಯಿಟ್ಟು ಹೇಳು.

೫೪. ಶ್ರೀರಾಧಿಕೆಯು ಹೇಳಿದಳು :—ನನ್ನ ಅನುಗ್ರಹದಿಂದ ನಿನಗೆ ಶ್ರೀಹರಿಯಲ್ಲಿ ನಿಶ್ಚಲವಾದ ಭಕ್ತಿಯೂ, ಇತರರಿಗೆ ದುರ್ಲಭವಾದ ದಾಸ್ಯವೂ ದೊರಕುವುದು. ನನ್ನ ಹೆಸರಿನ ವ್ಯುತ್ಪತ್ತಿಯನ್ನು ನಿನಗೆ ನಿಶ್ಚಯವಾಗಿ ಹೇಳುವೆನು.

೫೫. ಹಿಂದೆ ನಂದಗೋಪನು ನನ್ನನ್ನು ಭಾಂಡೀರವನದಲ್ಲಿ ವಟವೃಕ್ಷದ ಬುಡದಲ್ಲಿ ಕಂಡನು. ನಾನು ಅವನಿಗೆ ಉಪದೇಶಮಾಡಿ ಶ್ರೀಕೃಷ್ಣನನ್ನು ಹಿಂಬಾಲಿಸದಂತೆ ನಿಷಿದ್ಧಪಡಿಸಿದೆನು.

೫೬. ಸ್ವಯಂರಾಧೆಯಾದ ನಾನೇ ಛಾಯಾರೂಪದಲ್ಲಿ ರಾಪಾಣನ ಪತ್ನಿಯಾಗಿದ್ದೆನು. ರಾಪಾಣನು ಶ್ರೀಹರಿಯ ಪಾರ್ಷದರಲ್ಲಿ ಒಬ್ಬನೂ ಶ್ರೀಹರಿಯ ಅಂಶಸಂಭೂತನೂ ಆಗಿರುವನು.

ರಾಶಬ್ದಶ್ಚ ಮಹಾವಿಷ್ಣುರ್ವಿಶ್ವಾನಿ ಯಸ್ಯ ಲೋಮಸು ।
ವಿಶ್ವಪ್ರಾಣಿಷು ವಿಶ್ವೇಷು ಧಾ ಧಾತ್ರೀ ಮಾತೃವಾಚಕಃ ॥ ೫೭ ॥

ಧಾತ್ರೀ ಮಾತಾಹಮೇತೇಷಾಂ ಮೂಲಪ್ರಕೃತಿರೀಶ್ವರೀ ।
ತೇನ: ರಾಧಾ ಸಮಾಖ್ಯಾತಾ ಹರಿಣಾ ಚ ಪುರಾ ಬುಧೈಃ ॥ ೫೮ ॥

ಅಹಂ ಸುದಾಮಶಾಪೇನ ವೃಷಭಾನಸುತಾಧುನಾ ।
ಶತವರ್ಷಂ ಚ ವಿಚ್ಛೇದೋ ಹರಿಣಾ ಸಹ ಸಾಂಪ್ರತಂ ॥ ೫೯ ॥

ವೃಷಭಾನಶ್ಚ ಕೃಷ್ಣಸ್ಯ ಪಾರ್ಷದ ಪ್ರವರೋ ಮಹಾನ್ ।
ಪಿತೄಣಾಂ ಮಾನಸೀ ಕನ್ಯಾ ಮಮ ಮಾತಾ ಕಲಾವತೀ ॥ ೬೦ ॥

ಅಯೋನಿಸಂಭವಾಹಂ ಚ ಮಮ ಮಾತಾ ಚ ಭಾರತೇ ।
ಪುನಃ ಸಾರ್ಧಂ ಚ ಯುಷ್ಮಾಭಿರ್ಯಾಸ್ಯಾಮಿ ಶ್ರೀಹರೇಃ ಪದಂ ॥ ೬೧ ॥

---

೫೭. 'ರಾ' ಎಂದರೆ ಯಾರ ರೋಮಕೂಪಗಳಲ್ಲಿ ನಿಖಿಲವಿಶ್ವವೂ ಇರುವುದೋ ಅಂಥ ಮಹಾವಿಷ್ಣುವೆಂದು ಅರ್ಥವಾಗುವುದು. 'ಧಾ' ಎಂದರೆ ವಿಶ್ವದಲ್ಲಿರುವ ಸಕಲ ಪ್ರಾಣಿಗಳ ಮಾತೆ ಎಂಬರ್ಥಕೊಡುವ ಧಾತ್ರಿ ಎಂದಾಗುವುದು.

೫೮. ಮೂಲಪ್ರಕೃತಿಯೂ ಈಶ್ವರಿಯೂ ಆದ ನಾನು ಸಮಸ್ತ ಜೀವಿಗಳ ಧಾತ್ರಿಯೂ ಮಾತೆಯೂ ಆಗಿರುವೆನು. ಆದುದರಿಂದಲೇ ಶ್ರೀಹರಿಯೂ ಬುಧರೂ ನನ್ನನ್ನು 'ರಾಧಾ' ಎಂದು ಕರೆದರು.

೫೯. ವೃಷಭಾನನ ಮಗಳಾದ ನಾನು ಸುದಾಮನ ಶಾಪದಿಂದ ಈಗ ಶ್ರೀಹರಿಯ ವಿರಹವನ್ನು ಅನುಭವಿಸುತ್ತಿದ್ದೇನೆ. ನನಗೂ ಶ್ರೀಹರಿಗೂ ನೂರು ವರ್ಷ ವಿರಹವುಂಟಾಗಿರುತ್ತದೆ.

೬೦. ವೃಷಭಾನನು ಶ್ರೀಕೃಷ್ಣನ ಪಾರ್ಷದರಲ್ಲಿ ಶ್ರೇಷ್ಠನಾದವನು. ನನ್ನ ತಾಯಿಯು ಪಿತೃದೇವತೆಗಳ ಮಾನಸಕನ್ಯೆಯಾದ ಕಲಾವತಿ ಎಂಬವಳು.

೬೧. ಭಾರತದಲ್ಲಿ ನಾನು ಮತ್ತು ನನ್ನ ತಾಯಿಯು ಇತರ ಜೀವಿಗಳಂತೆ ಯೋನಿಯಲ್ಲಿ ಹುಟ್ಟದೆ ಇರುವವರು. ನಿಮ್ಮೆಲ್ಲರೊಡನೆ ನಾನೂ ಸಹ ಶ್ರೀಹರಿಯ ಪದವನ್ನು ಸೇರುವೆನು.

ಇತಿ ತೇ ಕಥಿತಂ ಸರ್ವಂ ವ್ರಜಂ ವ್ರಜ ವ್ರಜೇಶ್ವರಿ ।
ವ್ರಜೇಶ್ವರೇಣ ಸಹಿತಾ ಸ್ವಾಮಿನಾ ಜ್ಞಾನಿನಾ ಸತೀ ॥ ೬೨ ॥

ಮಮಾಧುನಾ ಚ ಭವತೀ ಧ್ಯಾನಸ್ಯ ವ್ಯವಧಾನಿಕಾ ।
ಧ್ಯಾನಭಂಗೇ ಮಹಾದೋಷೋ ನರಾಣಾಮಪಿ ಸುಂದರಿ ॥ ೬೩ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ರಾಧಾಯಶೋದಾಸಂವಾದೇ
ಏಕಾದಶಾಧಿಕಶತತಮೋಽಧ್ಯಾಯಃ.

---

೬೨. ಈ ರೀತಿ ನಿನಗೆ ಸಮಸ್ತ ವಿಷಯವನ್ನೂ ತಿಳಿಸಿದ್ದೇನೆ. ಎಲೌ ವ್ರಜೇಶ್ವರಿಯೇ, ನಂದಗೋಕುಲವನ್ನು ಕುರಿತು ಹೋಗು, ಅಲ್ಲಿ ನಿನ್ನ ಪತಿಯೂ ಜ್ಞಾನಿಯೂ ಆದ ವ್ರಜೇಶ್ವರ (ನಂದ)ನೊಡನೆ ಆನಂದದಿಂದಿರು.

೬೩. ನೀನು ಈಗ ಇಲ್ಲಿದ್ದರೆ ನನ್ನ ಪರಮಾತ್ಮಧ್ಯಾನಕ್ಕೆ ಭಂಗತಂದಂತಾಗುವುದು. ಎಲೌ ಸುಂದರಿಯೇ, ಮನುಷ್ಯರ ಧ್ಯಾನಕ್ಕೆ ಭಂಗತರುವುದು ಮಹಾಪಾಪಕರವಾದುದು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ ನಾರಾಯಣನಾರದಸಂವಾದಾಂತರ್ಗತವಾದ ರಾಧಾ ಯಶೋದೆಯರ ಸಂವಾದದಲ್ಲಿ ನೂರಹನ್ನೊಂದನೆಯ ಅಧ್ಯಾಯವು ಸಮಾಪ್ತವಾದುದು.



॥ ಓಂ॥

॥ ಓಂ ಶ್ರೀ ಗುರುಭ್ಯೋ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

॥ ಅಥ ದ್ವಾದಶಾಧಿಕಶತತಮೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ವಾಸುದೇವೋ ದ್ವಾರಕಾಯಾಂ ವಸುದೇವಾಜ್ಞಯಾ ಮುನೇ ।
ಪ್ರಯಯೌ ರತ್ನರುಚಿರಂ ರುಕ್ಮಿಣೀಮಂದಿರಂ ವರಂ ॥ ೧ ॥

ಶುದ್ಧಸ್ಫಟಿಕಸಂಕಾಶಮಮೂಲ್ಯರತ್ನನಿರ್ಮಿತಂ ।
ಪುರತಃ ಪರಿತೋ ರಮ್ಯಂ ನಾನಾಚಿತ್ರೇಣ ಚಿತ್ರಿತಂ ॥ ೨ ॥

ಅಮೂಲ್ಯರತ್ನಕಲಶಂ ಶ್ವೇತಚಾಮರದರ್ಪಣೈಃ ।
ವಹ್ನಿಶುದ್ಧಾಂಶುಕೈಃ ಶುದ್ಧೈಃ ಪರಿತಃ ಪರಿಶೋಭಿತಂ ॥ ೩ ॥

---

### ನೂರಹನ್ನೆರಡನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ:—ಎಲೈ ನಾರದ ಮುನಿಯೇ, ಇಲ್ಲಿ ಶ್ರೀಕೃಷ್ಣನು ವಸುದೇವನ ಆಜ್ಞೆಯಂತೆ ದ್ವಾರಕಿಯಲ್ಲಿ ರತ್ನಗಳಿಂದ ಮನೋಹರವಾದ ಶ್ರೇಷ್ಠವಾದ ರುಕ್ಮಿಣಿಯ ಮಂದಿರಕ್ಕೆ ತೆರಳಿದನು.

೨. ಅಮೂಲ್ಯ ರತ್ನಗಳಿಂದ ನಿರ್ಮಿತವಾದ ಆ ಮಂದಿರವು ಶುದ್ಧ ಸ್ಫಟಿಕದಂತೆ ಹೊಳೆಯುತ್ತಿತ್ತು. ಸುತ್ತಲೂ ನಾನಾ ಚಿತ್ರವಿಚಿತ್ರಗಳಿಂದ ರಮ್ಯವಾಗಿದ್ದಿತು.

೩. ಆ ಮಂದಿರದಲ್ಲಿ ಅಮೂಲ್ಯವಾದ ರತ್ನಕಲಶವಿತ್ತು. ಬಿಳಿದಾದ ಚಾಮರಗಳಿಂದಲೂ, ರತ್ನಗನ್ನಡಿಗಳಿಂದಲೂ, ಅಗ್ನಿಯಂತೆ ಶುದ್ಧವಾದ ವಸ್ತ್ರಗಳಿಂದಲೂ ಆ ಮಂದಿರವು ಕಂಗೊಳಿಸುತ್ತಿತ್ತು.

ದದರ್ಶ ರುಕ್ಮಿಣೀಂ ದೇವೀಮತೀವ ನವಯೌವ್ವನಾಂ ।
ರತ್ನಪರ್ಯಂಕಮಾರುಹ್ಯ ಶಯಾನಾಂ ಸಸ್ಮಿತಾಂ ಮುದಾ ॥ ೪ ॥

ಅಪ್ರೌಢಾಂ ಚ ನವೋಢಾಂ ಚ ನವಸಂಗಮಲಜ್ಜಿತಾಂ ।
ಅಮೂಲ್ಯರತ್ನನಿರ್ಮಾಣಭೂಷಣೇನ ವಿಭೂಷಿತಾಂ ॥ ೫ ॥

ಸುಚಾರುಕಬರೀಭಾರಾಂ ಮಾಲತೀ ಮಾಲ್ಯಭೂಷಿತಾಂ ।
ದೃಷ್ಟ್ವಾ ಕೃಷ್ಣಂ ಭೀಷ್ಮಕನ್ಯಾ ಸಹಸಾ ಪ್ರಣನಾಮ ಸಾ ॥ ೬ ॥

ತಾಂ ಸಂಪ್ರಾಪ್ಯ ಜಗನ್ನಾಥೋ ರತ್ನತಲ್ಪೇ ಉವಾಸ ಸಃ ।
ಶುಭಕ್ಷಣೇ ಚ ಶುಭಯಾ ಸ ರೇಮೇ ರಮಯಾ ಸಹ ॥ ೭ ॥

ಸುಖಸಂಭೋಗಮಾತ್ರೇಣ ಮೂರ್ಛಾಮಾಪ ಮಹಾ ಸತೀ ।
ತಸ್ಯಾಂ ಜಜ್ಞೇ ಕಾಮದೇವೋ ಭಸ್ಮೀಭೂತಶ್ಚ ಶಂಭುನಾ ॥ ೮ ॥

---

೪. ಅಲ್ಲಿ ರತ್ನದ ಮಂಚವನ್ನೇರಿ ಮಲಗಿರುವ ಹಸನ್ಮುಖಿಯಾದ, ನವ ಯೌವನದಿಂದ ಶೋಭಿತಳಾದ ರುಕ್ಮಿಣೀದೇವಿಯನ್ನು ಕಂಡನು.

೫. ಆಗತಾನೇ ವಿವಾಹಿತಳಾಗಿ ಪೌಢಳಲ್ಲದಿರುವುದರಿಂದ ಪತಿಯೊಡನೆ ಪ್ರಥಮ ಸಮಾಗಮದಲ್ಲಿ ಲಜ್ಜಿತಳಾಗಿದ್ದ ಆ ರುಕ್ಮಿಣಿಯು ಅಮೂಲ್ಯ ರತ್ನಭೂಷಣ ಗಳಿಂದ ಭೂಷಿತಳಾಗಿದ್ದಳು.

೬. ಜಾಜೀ ಹೂಮಾಲೆಯಿಂದಲಂಕೃತವಾದ ಸುಂದರವಾದ ಕಬರೀಭಾರ ದಿಂದ ಶೋಭಿಸುತ್ತಿದ್ದ ಭೀಷ್ಮರಾಜ ಕನ್ಯೆಯಾದ ಆ ರುಕ್ಮಿಣಿಯು ಶ್ರೀಕೃಷ್ಣನನ್ನು ಇದ್ದಕ್ಕಿದ್ದಂತೆಯೇ ನೋಡಿ ನಮಸ್ಕಾರ ಮಾಡಿದಳು.

೭. ಜಗನ್ನಾಥನಾದ ಶ್ರೀಹರಿಯು ಆ ರತ್ನಪರ್ಯಂಕದಲ್ಲಿ ರುಕ್ಮಿಣಿಯೊಡನೆ ಕುಳಿತನು. ಮಂಗಳ ಮುಹೂರ್ತದಲ್ಲಿ ಮಂಗಳಾಂಗಿಯಾದ ಆ ರಮೆಯೊಡನೆ ಶ್ರೀಹರಿಯು ರಮಿಸಿದನು.

೮. ಮಹಾಸಾಧ್ವಿಯಾದ ಆ ರುಕ್ಮಿಣಿಯು ಸುಖಸಂಭೋಗದಿಂದ ಮೂರ್ಛೆ ಹೊಂದಿದಳು. ಆ ರುಕ್ಮಿಣಿಯ ಗರ್ಭದಲ್ಲಿ ಜನಿಸಿದ ಕಾಮದೇವನು ಈಶ್ವರನ ಆಗ್ರಹಕ್ಕೊಳಗಾಗಿ ಭಸ್ಮೀಭೂತನಾದನು.

ಸ ಶಂಬರಂ ನಿಹತ್ಯೈವ ತತ್ರ ಪ್ರಾಪ ರತಿಂ ಸತೀಂ ।
ರತೀ ಮಾಯಾವತೀನಾಮ್ನಾ ಸಂಕೇತೇನ ಸುರಸ್ಯ ಚ ।
ಛಾಯಾಂ ದತ್ವಾ ಚ ಶಯನೇ ಗೃಹಿಣೀ ಶಂಬರಾಲಯೇ ॥ ೯ ॥

॥ ನಾರದ ಉವಾಚ ॥

ಜಹಾರ ಶಂಬರಂ ಕಾಮೋ ದೈತ್ಯಂ ಕೇನ ಪ್ರಕಾರತಃ ।
ಕಥಯಸ್ವ ಮಹಾಭಾಗ ವಿಸ್ತರೇಣ ಶುಭಾಂ ಕಥಾಂ ॥ ೧೦ ॥

॥ ನಾರಾಯಣ ಉವಾಚ ॥

ಸಮತೀತೇ ಚ ಸಪ್ತಾಹೇ ರುಕ್ಮಿಣೀ ಸೂತಿಕಾಗೃಹಾತ್ ।
ಗೃಹೀತ್ವಾ ಬಾಲಕಂ ದೈತ್ಯೋ ಜಗಾಮ ಸ್ವಾಲಯಂ ಜವಾತ್ ॥ ೧೧ ॥

ಅಪುತ್ರಕಶ್ಚ ದೈತ್ಯೇಶಃ ಪುತ್ರಂ ಪ್ರಾಪ್ಯ ಪ್ರಹರ್ಷಿತಃ ।
ಮಾಯಾವತ್ಯೈ ದದೌ ಹೃಷ್ಟೋ ಹೃಷ್ಟಾ ಮಾಯಾವತೀ ಸತೀ ॥ ೧೨ ॥

---

೯. ಆ ಕಾಮದೇವನು ಶಂಬರಾಸುರನನ್ನು ಕೊಂದು ಪತಿವ್ರತೆಯಾದ ರತೀ ದೇವಿಯನ್ನು ಅಲ್ಲಿ ಪಡೆದನು. ರತಿಯು ಮಾಯಾವತಿ ಎಂಬ ಹೆಸರಿನಿಂದ ಶಂಬರಾ ಸುರನ ಗೃಹಿಣಿಯಾಗಿದ್ದು ಸುರರ ಸಂಕೇತದಂತೆ ಪ್ರದ್ಯುಮ್ನನೊಡನೆ ರಮಿಸಿ ಕೊಂಡಿದ್ದಳು—ಶಂಬರಾಸುರನ ಶಯನದಲ್ಲಿ ಛಾಯಾರೂಪದಿಂದಿರುತ್ತಿದ್ದಳು.

೧೦. ನಾರದನು ಹೇಳಿದನು :—ಎಲೈ ನಾರಾಯಣ ಮಹರ್ಷಿಯೇ' ಪ್ರದ್ಯುಮ್ನ ರೂಪಿಯಾದ ಮನ್ಮಥನು ಶಂಬರಾಸುರನನ್ನು ಯಾವ ರೀತಿಯಿಂದ ಕೊಂದನು? ಈ ಶುಭ ಕಥೆಯನ್ನು ವಿಸ್ತಾರವಾಗಿ ಹೇಳು.

೧೧. ನಾರಾಯಣನು ಹೇಳಿದನು :—ಎಲೈ ನಾರದನೇ, ರುಕ್ಮಿಣಿಯು ಪ್ರಸವಿಸಿದ ಏಳು ದಿನಗಳು ಕಳೆಯಲಾಗಿ ದೈತ್ಯೇಂದ್ರನಾದ ಶಂಬರಾಸುರನು ಮಾಯಾ ಪ್ರಭಾವದಿಂದ ಶಿಶುವನ್ನು ಅಪಹರಿಸಿಕೊಂಡು ತನ್ನ ಮನೆಗೆ ಹೋದನು.

೧೨. ಮಕ್ಕಳಿಲ್ಲದ ಆ ದೈತ್ಯೇಂದ್ರನು ಆ ಶಿಶುವನ್ನು ಕಂಡು ಸಂತೋಷ ಗೊಂಡವನಾಗಿ ತನ್ನ ಪತ್ನಿಯಾದ ಮಾಯಾವತಿಗೆ ಕೊಟ್ಟನು. ಸತಿಯಾದ ಮಾಯಾವತಿಯೂ ಆ ಶಿಶುವನ್ನು ಕಂಡು ಸಂತಸಗೊಂಡಳು.

ಅತೀವ ಪಾಲನೇನೈವ ವರ್ಧಯಾಮಾಸ ಬಾಲಕಂ ।
ಸರಸ್ವತೀ ತಾಂ ರಹಸಿ ಕಥಯಾಮಾಸ ನಿರ್ಜನೇ ॥ ೧೩ ॥

॥ ಸರಸ್ವತ್ಯುವಾಚ ॥

ಶಿವಕೋಪಾನಲೇ ಪೂರ್ವಂ ಭಸ್ಮೀಭೂತಃ ಪತಿಸ್ತವ ।
ಸ ಚಾಯಂ ರುಕ್ಮಿಣೀಪುತ್ರೋ ದೈತ್ಯೇನೈವ ಸಮಾಹೃತಃ ॥ ೧೪ ॥

ಮಾಯಯಾಪಿ ಚ ಮಾಯೇಶೋ ರುಕ್ಮಿಣೀಸೂತಿಕಾಗೃಹಾತ್ ।
ಸಮಾನೀಯ ದದೌ ತುಭ್ಯಂ ಪತಿಸ್ತೇಯಂ ನ ಚಾತ್ಮಜಃ ॥ ೧೫ ॥

ಕಾಮಂ ಚ ಕಥಯಾಮಾಸ ಜಗನ್ಮಾತಾ ಚ ಸಾ ಸತೀ ।
ತವ ಪತ್ನೀ ರತಿಶ್ಚೇಯಂ ರಮಸ್ವ ರಾಮಯಾ ಸಹ ॥ ೧೬ ॥

---

೧೩. ಚೆನ್ನಾಗಿ ಪಾಲನೆ ಪೋಷಣೆ ಮಾಡಿ ಆ ಬಾಲಕನನ್ನು ಬೆಳೆಸಿದಳು. ಸರಸ್ವತೀ ದೇವಿಯು ನಿರ್ಜನವಾದ ಏಕಾಂತ ಸ್ಥಳದಲ್ಲಿ ಆ ಮಾಯಾವತಿಯನ್ನು ಕುರಿತು ಹೀಗೆಂದು ಹೇಳಿದಳು.

೧೪. ಸರಸ್ವತಿಯು ಹೇಳಿದಳು:—ಎಲೌ ಮಾಯಾವತಿಯೇ, ನೀನು ಹಿಂದಿನ ಜನ್ಮದಲ್ಲಿ ರತಿಯಾಗಿದ್ದಾಗ ನಿನ್ನ ಪತಿಯಾಗಿದ್ದ ಮನ್ಮಥನು ಶಿವನ ಕೋಪಾನಲದಿಂದ ದಗ್ಧನಾದನು. ಅವನೇ ರುಕ್ಮಿಣಿಯ ಪುತ್ರನಾಗಿ ಜನಿಸಿರುವನು. ನಿನ್ನ ಪತಿಯಾದ ಶಂಬರಾಸುರನು ಅವನನ್ನು ಅಪಹರಿಸಿ ತಂದಿದ್ದಾನೆ.

೧೫. ಮಾಯಾಪತಿಯಾದ ಶಂಬರನು ಮಾಯಾಶಕ್ತಿಯಿಂದ ರುಕ್ಮಿಣಿಯ ಸೂತಿಕಾಗೃಹದಿಂದ ಆ ಶಿಶುವನ್ನು ಅಪಹರಿಸಿ ತಂದು ನಿನಗೆ ಕೊಟ್ಟಿದ್ದಾನೆ. ಈ ಶಿಶುವು ನಿನ್ನ ಪತಿಯೇ ಹೊರತು ನಿನ್ನ ಮಗನಲ್ಲ.

೧೬. ಇದೇ ರೀತಿ ಜಗನ್ಮಾತೆಯಾದ ಸರಸ್ವತಿಯು ಕಾಮದೇವನಿಗೂ ಸಹ ಹೀಗೆ ಹೇಳಿದಳು. ಈ ಮಾಯಾವತಿಯು ನಿನ್ನ ಪತ್ನಿಯಾದ ರತೀದೇವಿಯೇ ಹೊರತು ಬೇರಾರೂ ಅಲ್ಲ. ಅವಳೊಡನೆ ನೀನು ರಮಿಸಿಕೊಂಡಿರು.

ತ್ವಮೇವ ರುಕ್ಮಿಣೀ ಪುತ್ರೋ ನಾನ್ಯದ್ದೈತ್ಯಸ್ಯ ಮನ್ಮಥಃ ।
ಕುರರೀವ ಸತೀ ನಿತ್ಯಂ ರೋದಿತಿಸ್ಮ ತ್ವಯಾ ವಿನಾ ॥ ೧೭ ॥

ಇತ್ಯುಕ್ತ್ವಾ ಚ ಯಯೌ ವಾಣೀ ಬ್ರಹ್ಮಾಣೀ ಬ್ರಹ್ಮಣಃ ಪದಂ ।
ಸ ರೇಮೇ ನಿರ್ಜನೇ ನಿತ್ಯಂ ರಾಮಯಾ ಸಹ ಸುಂದರಃ ॥ ೧೮ ॥

ಏಕದಾ ಮನ್ಮಥಂ ದೈತ್ಯೋ ದದರ್ಶ ರಹಸಿ ಸ್ಥಿತಂ ।
ಶೃಂಗಾರಂ ರಾಮಯಾ ಸಾರ್ಧಂ ಕುರ್ವತಂ ಕೌತುಕೇನ ಚ ॥ ೧೯ ॥

ಸಸ್ಮಿತಂ ಸಸ್ಮಿತಾಯೊಶ್ಚ ಮಧ್ಯವಕ್ಷಃಸ್ಥಲಸ್ಥಿತಂ ।
ರತಿಂ ದದರ್ಶ ಕಾಮೇನ ಮೂರ್ಛಿತಾಂ ಸುರತೋತ್ಸುಕಾಂ ॥ ೨೦ ॥

ದೃಷ್ಟ್ವಾ ಚುಕೋಪ ದೈತ್ಯಶ್ಚ ಜಗ್ರಾಹ ಖಡ್ಗಮುತ್ತಮಂ ।
ಉವಾಚ ಖಡ್ಗಹಸ್ತಶ್ಚ ಕಾಮದೇವಂ ರತಿಂ ಸತೀಂ ॥ ೨೧ ॥

೧೭. ನೀನೇ ರುಕ್ಮಿಣೀ ಪುತ್ರನಾದ (ಮನ್ಮಥ) ಪ್ರದ್ಯುಮ್ನನು. ಶಂಬರಾಸುರನ ಮಗನಲ್ಲ. ನಿನ್ನ ಸತಿಯಾದ ರತಿಯು ನಿನ್ನ ವಿರಹದಿಂದ ಪೀಡಿತಳಾಗಿ ಹೆಣ್ಣು ಜಿಂಕೆಯಂತೆ ಯಾವಾಗಲೂ ವ್ಯಥೆಪಡುತ್ತಿದ್ದಳು.

೧೮. ಬ್ರಹ್ಮನ ಸತಿಯಾದ ವಾಣಿಯು ಈ ರೀತಿ ಹೇಳಿ ಬ್ರಹ್ಮನ ಸಮೀಪಕ್ಕೆ ಹೋದಳು. ಆ ಸುಂದರನಾದ ಮನ್ಮಥನು ನಿರ್ಜನವಾದ ಸ್ಥಳದಲ್ಲಿ ಆ ಮಾಯಾವತಿಯೊಡನೆ ರಮಿಸಿಕೊಂಡಿದ್ದನು.

೧೯. ಹೀಗಿರಲು ಒಮ್ಮೆ ಆ ಮಾಯಾವತಿಯೊಡನೆ ಏಕಾಂತ ಸ್ಥಳದಲ್ಲಿ ರತಿಸುಖನಿರತನಾಗಿರುವುದನ್ನು ದೈತ್ಯರಾಜನಾದ ಶಂಬರಾಸುರನು ಕುತೂಹಲದಿಂದ ನೋಡಿ ಉದ್ವಿಗ್ನನಾದನು.

೨೦. ಮಾಯಾವತಿಯೂ ಸಹ ಸ್ಮಿತಮುಖಿಯಾಗಿ ಆ ಪ್ರದ್ಯುಮ್ನನನ್ನು ತನ್ನ ವಕ್ಷಃಸ್ಥಳದಲ್ಲಿ ಧರಿಸಿಕೊಂಡು ಸುರತೋತ್ಸವವನ್ನನುಭವಿಸಿ ಆನಂದಪರವಶಳಾಗಿ ಮೂರ್ಛಿತಳಾಗಿದ್ದಳು.

೨೧. ದೈತ್ಯೇಂದ್ರನು ಈ ದೃಶ್ಯವನ್ನು ನೋಡಿ ಕುಪಿತನಾಗಿ ತನ್ನ ಉತ್ತಮವಾದ ಖಡ್ಗವನ್ನು ಬರಸೆಳೆದನು. ಖಡ್ಗಹಸ್ತನಾಗಿಯೂ ಆ ಪ್ರದ್ಯುಮ್ನನನ್ನೂ ಅವನೊಡಗೂಡಿದ ಮಾಯಾವತಿಯನ್ನೂ ಕುರಿತು ಇಂತೆಂದನು.

॥ ಶಂಬರ ಉವಾಚ ॥

ಧಿಕ್ತ್ವಾಂ ಮಹಾಕಾಮುಕಂ ಚ ಮೂರ್ಖಂ ಪಂಡಿತಮಾನಿನಂ ।
ಮಹಾಪಾತಕಿನಾಂ ಶ್ರೇಷ್ಠಂ ಪ್ರಮತ್ತಂ ಮಾತೃಗಾಮಿನಂ ॥ ೨೨ ॥

ಧಿಕ್ ತ್ವಾಂ ಚ ಪುಂಶ್ಚಲೀಂ ಮತ್ತಾಂ ಕಾಮುಕೀಂ ಹತಚೇತನಾಂ ।
ಪುತ್ರಂ ಗೃಹೀತ್ವಾ ರಹಸಿ ಕರೋಷಿ ಸುರತಿಂ ಸತಿ ॥ ೨೩ ॥

ಇತ್ಯೇವಮುಕ್ತ್ವಾ ಖಡ್ಗಂ ಚ ತಾನೇವ ಹಂತುಮುದ್ಯತಃ ।
ಜಿಘಾಂಸಂತಂ ರತಿಂ ದೈತ್ಯಂ ಪ್ರೇರಯಾಮಾಸ ಮನ್ಮಥಃ ॥ ೨೪ ॥

ಪಪಾತ ದೂರತೋ ಬ್ರಹ್ಮನ್ಮೂರ್ಛಿತಃ ಸ್ವಾಂಗಪೀಡಿತಃ ।
ಪುನಶ್ಚ ಚೇತನಾಂ ಪ್ರಾಪ್ಯ ಕೋಪೇನ ಪ್ರಜ್ವಲನ್ನಿವ ॥ ೨೫ ॥

ಶಿವ ದತ್ತಂ ಚ ಶೂಲಂ ಚ ಜಗ್ರಾಹ ನಿರ್ಭರೇಣ ಚ ।
ಶತಸೂರ್ಯಪ್ರಭಂ ಶೂಲಂ ಪ್ರಲಯಾಗ್ನಿಸಮಂ ಮುನೇ ॥ ೨೬ ॥

---

೨೨. ಶಂಬರನು ಹೇಳಿದನು:—ಎಲೈ ಪ್ರದ್ಯುಮ್ನನೇ, ಮಹಾಕಾಮುಕನೂ, ಮೂರ್ಖನೂ, ಪಂಡಿತಮಾನಿಯೂ ಆದ ನಿನಗೆ ಧಿಕ್ಕಾರ. ಪ್ರಮತ್ತನಾಗಿ ಮಾತೃಗಾಮಿಯಾಗಿರುವ ನೀನು ಮಹಾಪಾಪಿಗಳಲ್ಲಿ ಅಗ್ರಗಣ್ಯನು.

೨೩. ಎಲೌ ಮಾಯಾವತಿಯೇ, ಕಾಮುಕಿಯೂ, ಮತ್ತಳೂ, ವಿವೇಚನಾ ರಹಿತಳೂ, ಕುಲಟೆಯೂ ಆದ ನಿನಗೆ ಧಿಕ್ಕಾರ. ಪುತ್ರಸದೃಶನಾದ ಇವನನ್ನು ಏಕಾಂತದಲ್ಲಿ ಕೂಡಿಕೊಂಡು ರತಿಸುಖವನ್ನು ಅನುಭವಿಸುತ್ತಿದ್ದೀಯಲ್ಲಾ!

೨೪. ಹೀಗೆ ಹೇಳಿ ಖಡ್ಗವನ್ನೆತ್ತಿ ಅವಳನ್ನೇ ಕೊಲ್ಲಲುದ್ಯುಕ್ತನಾದನು. ಈ ರೀತಿ ರತಿಯನ್ನು ಕೊಲ್ಲಲು ಹವಣಿಸಿದ್ದ ಆ ದೈತ್ಯೇಂದ್ರನನ್ನು ಮನ್ಮಥನು ಹೊರ ದೂಡಿದನು.

೨೫–೨೬. ಎಲೈ ನಾರದನೇ. ಆಗ ದೈತ್ಯನು ಪೀಡಿತವಾದ ಅವಯವಗಳಿಂದ ಕೂಡಿ ಬಹುದೂರಕ್ಕೆ ಬಿದ್ದು ಮೂರ್ಛೆಹೊಂದಿದನು. ಪುನಃ ಚೇತನವನ್ನು ಹೊಂದಿ ಕೋಪದಿಂದ ಪ್ರಜ್ವಲಿಸುತ್ತ, ನೂರು ಸೂರ್ಯರಷ್ಟು ತೇಜಸ್ವಿಯಾದ ಪ್ರಲಯಾಗ್ನಿಗೆ ಸದೃಶವಾದ ಪರಮೇಶ್ವರನಿಂದ ದತ್ತವಾದ ಶೂಲಾಯುಧವನ್ನು ದೃಢವಾಗಿ ಹಿಡಿದು ನಿಂತನು.

ದೃಷ್ಟ್ವಾಜಗ್ಮುಶ್ಚ ದೇವಾಶ್ಚ ಬ್ರಹ್ಮೇಶಶೇಷಸಂಜ್ಞಕಾಃ ।
ಪವನಃ ಕಥಯಾಮಾಸ ಕರ್ಣೇ ಕಾಮಸ್ಯ ಯತ್ನತಃ ॥ ೨೭ ॥

ಸ್ಮರ ಸ್ಮರ ಮಹಾಮಾಯಾಂ ದುರ್ಗಾಂ ದುರ್ಗತಿನಾಶಿನೀಂ ।
ಪವನಸ್ಯ ವಚಃ ಶ್ರುತ್ವಾ ದುರ್ಗಾಂ ಸಸ್ಮಾರ ಮನ್ಮಥಃ ॥ ೨೮ ॥

ಶೂಲಂ ಬಭೂವ ತಸ್ಯಾಂಗೇ ರಮ್ಯಂ ಮಾಲ್ಯಂ ಮನೋಹರಂ ।
ಬ್ರಹ್ಮಾಸ್ತ್ರೇಣ ಚ ತಂ ದೈತ್ಯಂ ಜಘಾನ ಮನ್ಮಥೋ ಮುದಾ ॥ ೨೯ ॥

ರತಿಂ ಗೃಹೀತ್ವಾ ಯಾನೇನ ಜಗಾಮ ದ್ವಾರಕಾಂ ಪುರೀಂ ।
ಪ್ರಯಯುರ್ದೇವತಾಃ ಸರ್ವಾಃ ಸ್ತುತ್ವಾ ಚ ಪಾರ್ವತೀಂ ಸ್ವಯಂ॥ ೩೦ ॥

ರುಕ್ಮಿಣೀ ಮಂಗಲಂ ಕೃತ್ವಾ ಪ್ರಜಗ್ರಾಹ ರತಿಂ ಸುತಂ ।
ಉತ್ಸವಂ ಕಾರಯಾಮಾಸ ಪರಂ ಸ್ವಸ್ತ್ಯಯನಂ ಹರಿಃ ॥ ೩೧ ॥

---

೨೭. ಇದನ್ನು ನೋಡಿ ಬ್ರಹ್ಮ ಈಶ್ವರ ಶೇಷ ಮುಂತಾದ ಸಕಲ ದೇವತೆಗಳೂ ಅಲ್ಲಿಗೆ ಬಂದರು. ವಾಯುದೇವನು ಕಾಮನ ಸಮೀಪಕ್ಕೆ ಬಂದು ಕಿವಿಯಲ್ಲಿ ಏನೋ ಗುಟ್ಟನ್ನು ಹೇಳಿದನು.

೨೮. ಎಲೈ ಮನ್ಮಥನೇ, ಮಹಾಮಾಯೆಯೂ ದುರ್ಗತಿ ನಾಶಿನಿಯೂ ಆದ ದುರ್ಗಾದೇವಿಯನ್ನು ಸ್ಮರಿಸಿಕೋ. ವಾಯುದೇವನ ಮಾತುಗಳನ್ನು ಕೇಳಿ ಮನ್ಮಥನು ದುರ್ಗಾದೇವಿಯನ್ನು ಸ್ಮರಿಸಿಕೊಂಡನು.

೨೯. ಕೂಡಲೇ ದೈತ್ಯನು ಪ್ರಯೋಗಿಸಿದ ಶೂಲಾಯುಧವು ಮನ್ಮಥನ ಕಂಠದಲ್ಲಿ ಮನೋಹರವಾದ ಪುಷ್ಪಮಾಲಿಕೆಯಂತಾಯಿತು. ಅನಂತರ ಆ ಮನ್ಮಥನು ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿ ಆ ದೈತ್ಯೇಂದ್ರನನ್ನು ಕೊಂದನು.

೩೦. ರತಿಯನ್ನು ಕರೆದುಕೊಂಡು ವಾಹನಾರೂಢನಾಗಿ ದ್ವಾರಕಾನಗರಿಗೆ ಹೋದನು. ದೇವತೆಗಳೆಲ್ಲರೂ ಪಾರ್ವತೀದೇವಿಯನ್ನು ಸ್ತುತಿಸಿ ನಮಸ್ಕರಿಸಿ ತಮ್ಮ ತಮ್ಮ ಸ್ಥಳಕ್ಕೆ ಹಿಂತಿರುಗಿದರು.

೩೧. ಇತ್ತ ರುಕ್ಮಿಣಿಯು ಮಂಗಳಕಾರ್ಯಗಳನ್ನು ಮಾಡಿಸಿ ರತಿಯನ್ನೂ ತನ್ನ ಮಗನನ್ನು ಸ್ವಾಗತಿಸಿದಳು. ಹರಿಯು ವೇದಮಂತ್ರಗಳಿಂದ ಆಶೀರ್ವಾದ ಮಾಡಿ ಉತ್ಸವವನ್ನು ಮಾಡಿಸಿದನು.

ಬ್ರಾಹ್ಮಣಾನ್ಭೋಜಯಾಮಾಸ ಪೂಜಯಾಮಾಸ ಪಾರ್ವತೀಂ ।
ಅಥ ಕೃಷ್ಣಃ ಕ್ರಮೇಣೈವ ವೇದೋಕ್ತೇ ಮಂಗಲೇ ದಿನೇ ॥ ೩೨ ॥

ಸಪ್ತಾನಾಂ ರಮಣೀನಾಂ ಚ ಪಾಣಿಗ್ರಾಹಂ ಚಕಾರ ಹ ।
ಕಾಲಿಂದೀಂ ಸತ್ಯಭಾಮಾಂ ಚ ಸತ್ಯಾಂ ನಾಗ್ನಿಜಿತೀಂ ಸತೀಂ ॥ ೦೩ ॥

ಜಾಂಬವತೀಂ ಲಕ್ಷ್ಮಣಾಂ ಚ ಸಮುದ್ವಾಹಂ ಚಕಾರ ಸಃ ।
ತಾಭಿಃ ಸಾರ್ಧಂ ಕ್ರಮೇಣೈವ ಪುತ್ರೋತ್ಪತ್ತಿಂ ಚಕಾರ ಹ ॥ ೩೪ ॥

ಏಕಸ್ಯಾಂ ದಶಪುತ್ರಾಶ್ಚ ಕನ್ಯಕೈಕಾ ಕ್ರಮೇಣ ಚ ।
ನಿಹತ್ಯ ನರಕಂ ದೈತ್ಯಂ ಸಪುತ್ರಂ ಚ ನೃಪೇಶ್ವರಂ ॥ ೩೫ ॥

ಬಲವಂತಂ ಮುರಂ ದೈತ್ಯಂ ಜಘಾನ ರಣಮೂರ್ಧನಿ ।
ದದರ್ಶ ಕನ್ಯಾಸ್ತತ್ರಸ್ಥಾಃ ಸಹಸ್ರಾಣಾಂ ಚ ಷೋಡಶ ॥ ೩೬ ॥

---

೩೨–೩೩–೩೪. ಪಾರ್ವತೀದೇವಿಗೆ ಪೂಜೆ ಮಾಡಿಸಿ ಬ್ರಾಹ್ಮಣರ ಸಂತರ್ಪಣೆ ಮಾಡಿಸಿದನು. ಅನಂತರ ಶ್ರೀಕೃಷ್ಣನು ಶುಭಮುಹೂರ್ತದಲ್ಲಿ ವೇದೋಕ್ತ ರೀತಿಯಲ್ಲಿ ಕ್ರಮವಾಗಿ ಸಪ್ತ ಪತ್ನಿಯರ ಪಾಣಿಗ್ರಹಣ ಮಾಡಿಕೊಂಡನು. ಕಾಲಿಂದಿ, ಸತ್ಯಭಾಮಾ, ಸತ್ಯಾ, ನಾಗ್ನಿಜಿತಿ, ಸತಿ, ಜಾಂಬವತಿ, ಲಕ್ಷ್ಮಣಾ ಎಂಬುವರೇ ಆ ಸಪ್ತ ಪತ್ನಿಯರು. ಕ್ರಮವಾಗಿ ಅವರ ಒಡಗೂಡಿದವನಾಗಿ ಪ್ರತಿಯೊಬ್ಬರಲ್ಲಿಯೂ ಪುತ್ರ ಸಂತಾನವನ್ನು ಪಡೆದನು.

೩೫–೩೬. ಒಬ್ಬೊಬ್ಬಳಲ್ಲಿಯೂ ಹತ್ತುಜನ ಗಂಡು ಮಕ್ಕಳು ಒಬ್ಬಳು ಹೆಣ್ಣು ಮಗಳೂ ಜನಿಸಿದರು. ಅನಂತರ ನರಕಾಸುರನನ್ನು ಕೊಂದು ಅವನ ಮಗನಾದ ಭಗದತ್ತನನ್ನು ಪ್ರಾಗ್ಜ್ಯೋತಿಷ ನಗರದ ರಾಜನನ್ನಾಗಿ ಮಾಡಿ ಯುದ್ಧದಲ್ಲಿ ಪ್ರಬಲನಾದ ಮುರನೆಂಬ ರಾಕ್ಷಸನನ್ನೂ ಕೂಡ ಕೊಂದನು. ಆ ನರಕಾಸುರನ ಬಂದೀಖಾನೆಯಲ್ಲಿದ್ದ ಹದಿನಾರು ಸಹಸ್ರ ಮಂದಿ ಕನ್ನಿಕೆಯರನ್ನೂ ಸಹ ಶ್ರೀಕೃಷ್ಣನು ನೋಡಿದನು.

ಶುಭಕ್ಷಣೇ ಚ ತಾಸಾಂ ಚ ಪಾಣಿಂಜ ಗ್ರಾಹ ಮಾಧವಃ ।
ಶತಾಧಿಕಾ ವಯಸ್ಯಾಶ್ಚ ಶಶ್ವತ್ಸುಸ್ಥಿರಯೌವ್ವನಾಃ ।
ಪ್ರಫುಲ್ಲವದನಾಃ ಸರ್ವಾ ರತ್ನಭೂಷಣಭೂಷಿತಾಃ ॥ ೩೭ ॥

ಶುಭಕ್ಷಣೇ ಚ ತಾಸಾಂ ಚ ಪಾಣಿಂ ಜಗ್ರಾಹ ಮಾಧವಃ ।
ತಾಭಿಃ ಸಾರ್ಧಂ ಸ ರೇಮೇ ಚ ಕ್ರಮೇಣ ಚ ಶುಭಕ್ಷಣೇ ॥ ೩೮ ॥

ಏಕಸ್ಯಾಂ ದಶಪುತ್ರಾಶ್ಚ ಕನ್ಯಕೈಕಾ ಕ್ರಮೇಣ ಚ ।
ಹರೇರೇತಾನ್ಯಪತ್ಯಾನಿ ಬಭೂವುಶ್ಚ ಪೃಥಕ್ಪೃಥಕ್ ॥ ೩೯ ॥

ಏಕದಾ ದ್ವಾರಕಾಂ ರಮ್ಯಾಂ ದುರ್ವಾಸಾ ಮುನಿಪುಂಗವಃ ।
ಶಿಷ್ಯೈಸ್ತ್ರಿಕೋಟಿಭಿಃ ಸಾರ್ಧಮಾಜಗಾಮಾವಲೀಲಯಾ ॥ ೪೦ ॥

ರಾಜಾ ಮಹೋಗ್ರಸೇನಶ್ಚ ಸಪುತ್ರಃ ಸಪುರೋಹಿತಃ ।
ವಸುದೇವೋ ವಾಸುದೇವೋಽಪ್ಯಕ್ರೂರಶ್ಚೋದ್ಧವಸ್ತಥಾ ॥ ೪೧ ॥

---

೩೭. ನೂರಾರು ಗೆಳತಿಯರಿಂದ ಕೂಡಿ ಆ ಕನ್ನಿಕೆಯರು ರತ್ನಾಲಂಕಾರ ಭೂಷಿತರಾಗಿ ಪ್ರಫುಲ್ಲಮುಖಿಯರಾಗಿ ಸ್ಥಿರಯೌವನದಿಂದ ಶೋಭಿಸುತ್ತಿದ್ದರು.

೩೮. ಮಾಧವನು ಶುಭಮುಹೂರ್ತದಲ್ಲಿ ಅವರೆಲ್ಲರ ಪಾಣಿಗ್ರಹಣ ಮಾಡಿದನು. ಕ್ರಮವಾಗಿ ಶುಭಮುಹೂರ್ತದಲ್ಲಿ ಅವರೊಡನೆ ಸೇರಿ ರಮಿಸಿದನು.

೩೯. ಅವರಲ್ಲಿ ಒಬ್ಬೊಬ್ಬರಲ್ಲಿಯೂ ಹತ್ತು ಜನ ಗಂಡು ಮಕ್ಕಳೂ, ಒಬ್ಬಳು ಹೆಣ್ಣುಮಗಳೂ ಜನಿಸಿದರು. ಈ ರೀತಿಯಾಗಿ ಶ್ರೀಹರಿಗೆ ಬೇರೆಬೇರೆಯಾಗಿ ಅನೇಕ ಮಕ್ಕಳಾದರು.

೪೦. ಹೀಗಿರಲು ಒಮ್ಮೆ ಮುನಿಪುಂಗವನಾದ ದೂರ್ವಾಸ ಮುನಿಯು ಮೂರು ಕೋಟಿ ಶಿಷ್ಯರೊಡಗೂಡಿ ದ್ವಾರಕಾನಗರಿಗೆ ವಿಹಾರಾರ್ಥವಾಗಿ ಬಂದನು.

೪೧–೪೨. ಪುತ್ರರಿಂದಲೂ ಪುರೋಹಿತರಿಂದಲೂ ಒಡಗೂಡಿದ ಉಗ್ರಸೇನ ಮಹಾರಾಜನೂ, ವಸುದೇವನೂ. ವಾಸುದೇವನೂ, ಅಕ್ರೂರನೂ, ಉದ್ಧವನೂ ಸಹ ಷೋಡಶೋಪಚಾರ ಸಾಮಗ್ರಿಗಳೊಡನೆ ದೂರ್ವಾಸ ಮುನಿಯ ಸಮೀಪಕ್ಕೆ ಬಂದು

ನೀತ್ವಾ ಷೋಡಶೋಪಚಾರಂ ಪ್ರಣೇಮುರ್ಮುನಿಪುಂಗವಂ ।
ಶುಭಾಶಿಷಂ ಚ ಪ್ರದದೌ ತೇಭ್ಯೋ ಬ್ರಹ್ಮನ್ಪೃಥಕ್ಪೃಥಕ್ ॥ ೪೨ ॥

ಏಕಾನಂಶಾಂ ಚ ಕನ್ಯಾಂ ತಾಂ ದದೌ ತಸ್ಮೈ ಶುಭಕ್ಷಣೇ ।
ಮುಕ್ತಾಮಾಣಿಕ್ಯಹೀರಾಂಶ್ಚ ರತ್ನಂ ಚ ಯೌತಕಂ ದದೌ ॥ ೪೩ ॥

ಸ ರೇಮೇ ರಾಮಯಾ ಸಾರ್ಧಂ ಮಾಹೇಂದ್ರೇ ರತ್ನಮಂದಿರೇ ।
ರತ್ನೇಂದ್ರಸಾರನಿರ್ಮಾಣಂ ದದೌ ತಸ್ಮೈ ಶುಭಾಶ್ರಮಂ ॥ ೪೪ ॥

ಏಕದಾ ಸ ಮುನಿಶ್ರೇಷ್ಠಃ ಸಮಾಲೋಚ್ಯ ಸ್ವಚೇತನಾ ।
ಶಯಾನಾಂ ಕುತ್ರಚಿದ್ರಮ್ಯಪರ್ಯಂಕೇ ರತ್ನನಿರ್ಮಿತೇ ॥ ೪೫ ॥

ಶ್ರುತವಂತಂ ಪುರಾಣಂ ಚ ಶ್ರದ್ಧಯಾ ಕುತ್ರಚಿದ್ವಿಭುಂ ।
ಮಹೋತ್ಸವೇ ನಿಯುಕ್ತಂ ಚ ಕುತ್ರಚಿತ್ಪ್ರಾಂಗಣೇ ಶುಭೇ ॥ ೪೬ ॥

ತಾಂಬೂಲಂ ಭುಕ್ತವಂತಂ ಚ ಭಕ್ತ್ಯಾ ದತ್ತಂ ಚ ಸತ್ಯಯಾ ।
ಕುತ್ರಚಿತ್ಸೇವಿತಂ ತಲ್ಪೇ ರುಕ್ಮಿಣ್ಯಾ ಶ್ವೇತಚಾಮರೈಃ ॥ ೪೭ ॥

---

ಅವನಿಗೆ ನಮಸ್ಕರಿಸಿದರು. ಆ ಮಹರ್ಷಿಯು ಅವರೆಲ್ಲರಿಗೂ ಪ್ರತ್ಯೇಕವಾಗಿ ಶುಭಾಶೀರ್ವಾದವನ್ನು ಕೊಟ್ಟನು.

೪೩. ಶುಭಕ್ಷಣದಲ್ಲಿ ಆ ದೂರ್ವಾಸಮುನಿಗೆ ಏಕಾನಂಶಾ ಎಂಬ ಕನ್ಯೆಯನ್ನೂ ಮುತ್ತು ಮಾಣಿಕ್ಯ, ವಜ್ರ ರತ್ನ ಮುಂತಾದುವುಗಳನ್ನು ಬಳುವಳಿಯಾಗಿ ಕೊಟ್ಟರು.

೪೪. ಅವನು ಆ ಕನ್ಯೆಯೊಡನೆ ಮಹೇಂದ್ರ ಪರ್ವತದ ರತ್ನಮಂದಿರದಲ್ಲಿ ಕ್ರೀಡಿಸಿದನು. ಶ್ರೇಷ್ಠ ರತ್ನಗಳಿಂದ ನಿರ್ಮಿತವಾದ ಮಂಗಳಕರವಾದ ಆಶ್ರಮವನ್ನು ಅವನಿಗೆ ಕೊಟ್ಟರು.

೪೫–೪೯. ಒಮ್ಮೆ ಆ ದೂರ್ವಾಸ ಮುನಿಯು ಮನಸ್ಸಿನಲ್ಲಿ ಧ್ಯಾನ ಮಾಡುತ್ತಲೇ ಶ್ರೀಕೃಷ್ಣನನ್ನು ವಿವಿಧ ರೀತಿಯಲ್ಲಿ ಕಂಡನು. ಒಮ್ಮೆ ರತ್ನನಿರ್ಮಿತವಾದ ರಮ್ಯವಾದ ಮಂಚದಲ್ಲಿ ಮಲಗಿರುವಂತೆಯೂ, ಒಂದು ಕಡೆ ಶ್ರದ್ಧೆಯಿಂದ ಪುರಾಣವನ್ನು ಕೇಳುತ್ತಿರುವಂತೆಯೂ ಒಂದು ಮಂಗಳಕರವಾದ ಪ್ರಾಂಗಣದಲ್ಲಿ ಮಹೋತ್ಸವದಲ್ಲಿ ನಿರತನಾಗಿರುವಂತೆಯೂ, ಸತ್ಯಭಾಮೆಯು ಪ್ರೀತಿಪೂರ್ವಕವಾಗಿ ಕೊಟ್ಟ ತಾಂಬೂಲವನ್ನು ಒಮ್ಮೆ ಸೇವಿಸುತ್ತಿರುವಂತೆಯೂ, ಒಮ್ಮೆ ದಿವ್ಯವಾದ ಹಾಸಿಗೆಯಲ್ಲಿ ಮಲಗಿ ರುಕ್ಮಿಣಿಯಿಂದ ಶ್ವೇತಚಾಮರಸೇವೆಯನ್ನು ಕೈಗೊಳ್ಳುತ್ತಿರುವಂತೆಯೂ,

ಕಾಲಿಂದೀಸೇವಿತಪದಂ ಶಯಾನಾಂ ಕುತ್ರಚಿನ್ಮುದಾ ।
ಸರ್ವತ್ರ ಸಮಸಂಭಾಷಾಂ ಚಕಾರ ಭಗವಾನ್ಮುನಿಃ || ೪೮ ||

ವಿಸ್ಮಯಂ ಪ್ರಯಯೌ ವಿಪ್ರೋ ದೃಷ್ಟ್ವಾ ತತ್ಪರಮದ್ಭುತಂ ।
ತುಷ್ಟಾವ ಜಗತೀನಾಥಂ ರುಕ್ಮಿಣೀ ಮಂದಿರೇ ಪುನಃ
ವಸಂತಂ ಚ ಸುಧರ್ಮಾಯಾಂ ಸತಾಂ ಸಂಸದಿ ಸುಂದರಂ || ೪೯ ||

|| ದುರ್ವಾಸಾ ಉವಾಚ ||

ಜಯಜಯ ಜಗತಾಂ ನಾಥ ಜಿತಸರ್ವ ಜನಾರ್ದನ ಸರ್ವಾತ್ಮಕ
ಸರ್ವೇಶ ಸರ್ವಬೀಜ ಪುರಾತನ ನಿರ್ಗುಣ ನಿರೀಹ ನಿರ್ಲಿಪ್ತ
ನಿರಂಜನ ನಿರಾಕಾರ ಭಕ್ತಾನುಗ್ರಹವಿಗ್ರಹ ಸತ್ಯಸ್ವರೂಪ ಸನಾತನ
ನಿಃಸ್ವರೂಪ ನಿತ್ಯನೂತನ ಬ್ರಹ್ಮೇಶಶೇಷಧನೇಶವಂದಿತ ಪದ್ಮಯಾ
ಸೇವಿತಪಾದಪದ್ಮ ಬ್ರಹ್ಮಜ್ಯೋತಿರನಿರ್ವಚನೀಯ ವೇದಾವಿದಿತಗುಣರೂಪ
ಮಹಾಕಾಶಸಂಮಾನನೀಯ ಪರಮಾತ್ಮನ್ನಮೋಽಸ್ತುತೇ || ೫೦ ||

---

ಒಮ್ಮೆ ಸಂತೋಷದಿಂದ ಮಲಗಿಕೊಂಡು ಕಾಲಿಂದಿಯಿಂದ ಪಾದಸಂವಾಹನವನ್ನು ಅನುಭವಿಸುವಂತೆಯೂ, ನೋಡಿದ ಆ ಮುನಿಯು ಎಲ್ಲರೊಡನೆಯೂ ಏಕಕಾಲದಲ್ಲಿ ಮಾತನಾಡುತ್ತಿರುವ ಆ ಅದ್ಭುತವನ್ನು ಕಂಡು ಪರಮಾಶ್ಚರ್ಯಭರಿತನಾಗಿ ಪುನಃ ಕಣ್ತೆರೆದಾಗ ರುಕ್ಮಿಣೀ ಮಂದಿರದಲ್ಲೇ ಇರುವ ಆ ಕೃಷ್ಣ ಪರಮಾತ್ಮನ ಮಹಿಮೆಯನ್ನು ಸತ್ಪುರುಷರು ಸೇರಿರುವ ಸುಧರ್ಮಾ ಎಂಬ ದೇವಸಭೆಯಲ್ಲಿ ಈ ರೀತಿ ಕೊಂಡಾಡಿದನು.

೫೦. ದೂರ್ವಾಸನು ಹೇಳಿದನು: – ಜಗದೊಡೆಯನಾದ ಪರಮಾತ್ಮನೇ ನಿನಗೆ ಜಯವಾಗಲಿ. ನಿಖಿಲಜಗತ್ತನ್ನು ಜಯಿಸಿದ ಜನಾರ್ದನನೇ, ಸರ್ವಾತ್ಮಕನೂ ಸರ್ವೇಶ್ವರನೂ ಸರ್ವಕಾರಣನೂ ಆದವನೇ ನಿನಗೆ ಜಯವಾಗಲಿ. ಪುರಾತನನೂ, ನಿರ್ಗುಣನೂ, ಆಶಾರಹಿತನೂ, ನಿರ್ಲಿಪ್ತನೂ, ನಿರಂಜನನೂ, ನಿರಾಕಾರನೂ, ಭಕ್ತಾನುಗ್ರಹವಿಗ್ರಹನೂ ಆದ ನಿನಗೆ ಜಯವಾಗಲಿ. ಸತ್ಯಸ್ವರೂಪನೂ, ಸನಾತನನೂ, ನಿರಾಕಾರನೂ, ನಿತ್ಯನೂತನನೂ, ಬ್ರಹ್ಮ, ಈಶ, ಶೇಷ, ಧನೇಶ ಇವರುಗಳಿಂದ ವಂದಿತನೂ, ಪದ್ಮಾದೇವಿಯಿಂದ ಸೇವಿತ ಪಾದಪದ್ಮನೂ, ಬ್ರಹ್ಮಜ್ಯೋತಿಸ್ವರೂಪನೂ, ಅನಿರ್ವಚನೀಯನೂ ಆದ ನಿನಗೆ ಜಯವಾಗಲಿ. ವೇದಗಳಿಗೂ ಗೋಚರವಾಗದ ಗುಣರೂಪನೂ ಮಹಾಕಾಶದಂತೆ ಸರ್ವವ್ಯಾಪಿಯೂ ಆದ ಎಲೈ ಪರಮಾತ್ಮನೇ ನಿನಗೆ ನಮಸ್ಕರಿಸುವೆನು.

ಇತ್ಯೇವ ಮುಕ್ತ್ವಾ ಮನಸಾ ಹರೇರನುಮತೇನ ಚ ।
ಪ್ರಣಮ್ಯ ತಸ್ಥೌ ವಿಪ್ರೇಂದ್ರಸ್ತತ್ರೈವ ಪುರತೋ ಹರೇಃ ॥ ೫೧ ॥

ತಮುವಾಚ ಜಗನ್ನಾಥೋ ಹಿತಂ ಸತ್ಯಂ ಪುರಾತನಂ ।
ಜ್ಞಾನಂ ಚ ವೇದವಿಹಿತಂ ಸರ್ವೇಷಾಂ ಚ ಸತಾಂ ಮತಂ ॥ ೫೨ ॥

॥ ಶ್ರೀ ಭಗವಾನುವಾಚ ॥

ಮಾ ಭೈರ್ವಿಪ್ರ ಶಿವಾಂಶಸ್ತ್ವಂ ಕಿಂ ನ ಜಾನಾಸಿ ಜ್ಞಾನತಃ ।
ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ॥ ೫೩ ॥

ಅಹಮಾತ್ಮಾ ಚ ಸರ್ವೇಷಾಂ ಶವಾಃ ಸರ್ವೇ ಮಯಾ ವಿನಾ ।
ಪ್ರಾಣಿದೇಹಾನ್ಮಯಿ ಗತೇ ಯಾಂತ್ಯೇವ ಸರ್ವಶಕ್ತಯಃ ॥ ೫೪ ॥

---

೫೧. ಈ ರೀತಿ ದೂರ್ವಾಸ ಮುನಿಯು ಮನಸ್ಸಿನಲ್ಲೇ ಸ್ತುತಿಸಿ ಶ್ರೀಹರಿಗೆ ಪ್ರಣಾಮ ಮಾಡಿ ಆವನ ಅನುಮತಿಯಿಂದ ಅವನ ಮುಂದೆಯೇ ತಲೆಬಾಗಿ ನಿಂತನು.

೫೨, ಆಗ ಜಗನ್ನಾಥನಾದ ಶ್ರೀಹರಿಯು ಅವನನ್ನು ಕುರಿತು ಹಿತವೂ ಸತ್ಯವೂ ಪುರಾತನವೂ ವೇದವಿಹಿತವೂ ಸಕಲಸಮ್ಮತವೂ ಆದ ದಿವ್ಯಜ್ಞಾನವನ್ನು ಬೋಧಿಸಿದನು

೫೩. ಶ್ರೀ ಭಗವಂತನು ಹೇಳಿದನು: ಎಲೈ ವಿಪ್ರೇಂದ್ರನೇ, ನೀನು ಶಿವಾಂಶ ಸಂಭೂತನು. ನೀನು ಹೆದರಬೇಕಾದ್ದಿಲ್ಲ. ನಾನು ನಿಖಿಲ ಪ್ರಪಂಚಕ್ಕೂ ಮೂಲ ಕಾರಣನೂ, ನನ್ನಿಂದ ನಿಖಿಲ ಜಗತ್ಸೃಷ್ಟಿಯಾಗುವುದೆಂಬುದನ್ನೂ ನೀನು ದಿವ್ಯ ಜ್ಞಾನದಿಂದ ತಿಳಿದಿರುವೆ.

೫೪. ನಾನು ನಿಖಿಲಜೀವಿಗಳಲ್ಲೂ ಆತ್ಮಸ್ವರೂಪನಾಗಿರುವೆನು. ನಾನಿಲ್ಲ ದಿದ್ದರೆ ಎಲ್ಲ ಪ್ರಾಣಿಗಳೂ ಶವಸದೃಶವಾಗುವುವು. ನಾನು ಹೊರಟುಹೋದರೆ ಪ್ರಾಣಿಗಳ ದೇಹದಿಂದ ನಿಖಿಲ ಶಕ್ತಿಗಳೂ ನಾಶವಾಗುವುವು.

ಜಾತಾವಪ್ಯೇಕ ಏವಾಹಂ ವ್ಯಕ್ತ ಏವ ಪೃಥಕ್ಪೃಥಕ್ ।
ಯೋ ಭುಂಕ್ತೇ ತಸ್ಯ ತೃಪ್ತಿಃ ಸ್ಯಾನ್ನಾನ್ಯೇಷಾಂ ಚ ಕದಾಚನ ॥ ೫೫ ॥

ಪೃಥಗ್ಜೀವಾದಿಸರ್ವೇಷಾಂ ಪ್ರತಿಮಾನಂ ಚ ಪ್ರಾಣಿನಾಂ ।
ಪರಿಪೂರ್ಣತಮೋಽಹಂ ಚ ಗೋಲೋಕೇ ರಾಸಮಂಡಲೇ ॥ ೫೬ ॥

ಶ್ರೀದಾಮಶಾಪಾದ್ರಾಧಾ ಸಾ ಮಾಂ ದ್ರಷ್ಟುಮಕ್ಷಮಾಧುನಾ ।
ಸರ್ವೇ ಚೈವಾಂಶರೂಪೇಣ ಕಲಯಾ ಚ ತದಂಶತಃ ॥ ೫೭ ॥

ರುಕ್ಮಿಣೀಮಂದಿರೇ ಚಾಂಶೋಽಪ್ಯನ್ಯಾಸಾಂ ಮಂದಿರೇ ಕಲಾಃ ।
ಮಮಾಪಿ ಕುತ್ರಚಿಚ್ಚಾಂಶಂ ಕುತ್ರಚಿಚ್ಚ ಕಲಾಕಲಾಃ ॥ ೫೮ ॥

ಕಲಾಕಲಾಂಶಃ ಕುತ್ರಾಪಿ ಪ್ರತಿಮಾಸು ಚ ದೇಹಿಷು ।
ಇತ್ಯುಕ್ತ್ವಾ ಜಗತಾಂ ನಾಥೋ ಗೃಹಸ್ಯಾಭ್ಯಂತರಂ ಯಯೌ ॥ ೫೯ ॥

---

೫೫. ಜನ್ಮವಿಷಯದಲ್ಲಿಯೂ ನಾನು ಒಬ್ಬನೇ ಆಗಿರುವೆನು. ಆದರೆ ಬೇರೆ ಬೇರೆಯಾಗಿ ತೋರುತ್ತಿರುವೆನು. ಯಾವನು ಊಟಮಾಡುತ್ತಾನೋ ಅವನಿಗೆ ತೃಪ್ತಿಯಾಗುತ್ತದೆ. ಬೇರೆಯವರಿಗೆ ಯಾವಾಗಲೂ ಆಗುವುದಿಲ್ಲ.

೫೬. ನಾನು ಸಕಲಪ್ರಾಣಿಗಳಲ್ಲಿಯೂ ಜೀವರೂಪದಿಂದ ಪ್ರತಿಮೆಗಳಲ್ಲಿಯೂ ಬೇರೆಬೇರೆಯಾಗಿರುವೆನು. ಗೋಲೋಕದಲ್ಲಿಯೂ ರಾಸಮಂಡಲದಲ್ಲಿಯೂ ಪರಿಪೂರ್ಣನಾಗಿರುವೆನು.

೫೭. ಶ್ರೀದಾಮನ ಶಾಪದಿಂದ ಆ ರಾಧೆಯು ಈಗ ನನ್ನನ್ನು ನೋಡಲು ಅಸಮರ್ಥಳಾಗಿರುತ್ತಾಳೆ. ಎಲ್ಲರೂ ನನ್ನ ಅಂಶರೂಪದಿಂದಲೂ, ಕಲಾರೂಪದಿಂದಲೂ, ಕಲೆಯ ಅಂಶರೂಪದಿಂದಲೂ ಇರುತ್ತಾರೆ.

೫೮–೫೯. ರುಕ್ಮಿಣಿಯ ಮನೆಯಲ್ಲಿ ಅಂಶರೂಪವೂ ಇತರರ ಮನೆಯಲ್ಲಿ ಕಲಾರೂಪವೂ ಇರುವುದು. ಕೆಲವೆಡೆಯಲ್ಲಿ ನನ್ನ ಅಂಶವೂ ಕೆಲವೆಡೆಯಲ್ಲಿ ಕಲೆಯೂ ಮತ್ತೆ ಕೆಲವೆಡೆಯಲ್ಲಿ ಕಲೆಯ ಕಲಾಂಶವೂ ಇರುವುದು. ಕೆಲವೆಡೆಯಲ್ಲಿ ಪ್ರಾಣಿಗಳಲ್ಲಿಯೂ ಪ್ರತಿಮೆಗಳಲ್ಲಿಯೂ ಕಲೆಯ ಕಲಾಂಶವಿರುವುದು ಎಂಬುದಾಗಿ ಹೇಳಿ ಜಗನ್ನಾಥನು ಮನೆಯೊಳಕ್ಕೆ ಹೋದನು.

ದುರ್ವಾಸಾಶ್ಚ ಪ್ರಿಯಾಂ ತ್ಯಕ್ತ್ವಾ ಶ್ರೀಹರೇಸ್ತಪಸೇ ಗತಃ ॥ ೩೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಮುನಿಕೃಷ್ಣಸಂವಾದೇ
ದ್ವಾದಶಾಧಿಕಶತತಮೋಽಧ್ಯಾಯಃ.

---

೬೦. ದೂರ್ವಾಸನೂ ಪತ್ನಿಯನ್ನು ಬಿಟ್ಟು ಹರಿಯನ್ನು ಕುರಿತು ತಪಸ್ಸನ್ನು ಮಾಡುವುದಕ್ಕಾಗಿ ಹೊರಟನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿನ ನಾರಾಯಣನಾರದಸಂವಾದದಲ್ಲಿ
ಮುನಿಕೃಷ್ಣಸಂವಾದವೆಂಬ
ನೂರಹನ್ನೆರಡನೇ ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ತ್ರಯೋದಶಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಸಶಿಷ್ಯಶ್ಚಾಪಿ ದುರ್ವಾಸಾಸ್ತ್ಯಕ್ತ್ವಾ ಚ ದ್ವಾರಕಾಂ ಪುರೀಂ |
ಕೈಲಾಸಂ ಪ್ರಯಯೌ ಭಕ್ತ್ಯಾ ಶಂಕರಂ ದ್ರಷ್ಟುಮೀಶ್ವರಂ || ೧ ||

ಗತ್ವಾ ಮುನಿಶ್ಚ ಕೈಲಾಸಂ ಪ್ರಣನಾಮ ಶಿವಂ ಶಿವಾಂ |
ತುಷ್ಟಾವ ಪರಯಾ ಭಕ್ತ್ಯಾ ಸಶಿಷ್ಯಃ ಪ್ರಣತಃ ಶುಚಿಃ || ೨ ||

ತತ್ಸರ್ವಂ ಕಥಯಾಮಾಸ ವೃತ್ತಾಂತಂ ಶ್ರೀಹರೇರಪಿ |
ಆತ್ಮನಸ್ತಪಸಸ್ತತ್ತ್ವಂ ಸ್ವವೈರಾಗ್ಯಂ ಚ ಚೇತಸಃ || ೩ ||

---

### ನೂರಹದಿಮೂರನೆಯ ಅಧ್ಯಾಯವು.

೧. ಶ್ರೀ ನಾರಾಯಣನು ಹೇಳುತ್ತಾನೆ ;— ದೂರ್ವಾಸಮುನಿಯು ಶಿಷ್ಯರಿಂದೊಡಗೂಡಿದವನಾಗಿ ದ್ವಾರಕಾಪಟ್ಟಣವನ್ನು ಜಾಗ್ರತೆಯಾಗಿ ಬಿಟ್ಟು ಭಕ್ತಿಯಿಂದ ಕೂಡಿದವನಾಗಿ ಮಂಗಳಕರನಾದ ಶಂಕರನನ್ನು ನೋಡುವುದಕ್ಕೋಸ್ಕರವಾಗಿ ಕೈಲಾಸಕ್ಕೆ ತೆರಳಿದನು.

೨. ದೂರ್ವಾಸಮುನಿಯು ಕೈಲಾಸಕ್ಕೆ ಹೋಗಿ ಶಿಷ್ಯಸಮೇತನಾಗಿ ಭಕ್ತಿಯಿಂದಲೂ ಶುದ್ಧವಾದ ಮನಸ್ಸಿನಿಂದಲೂ ಈಶ್ವರನಿಗೂ ಪಾರ್ವತೀದೇವಿಗೂ ನಮಸ್ಕಾರವನ್ನು ಮಾಡಿದನು. ಮತ್ತು ಅತ್ಯಂತ ಭಕ್ತಿಯಿಂದ ಸ್ತೋತ್ರಮಾಡಿದನು.

೩. ಶ್ರೀಹರಿಯ ಸಕಲ ವೃತ್ತಾಂತವನ್ನೂ ತಾನು ತಪಸ್ಸನ್ನು ಮಾಡಲು, ಹೊರಟಿರುವ ಉದ್ದೇಶ್ಯವನ್ನೂ ತನ್ನ ಮನಸ್ಸಿನಲ್ಲುಂಟಾಗಿರುವ ವೈರಾಗ್ಯವನ್ನೂ ಹೇಳಿದನು.

ಮುನೇಶ್ಚ ವಚನಂ ಶ್ರುತ್ವಾ ಪ್ರಹಸ್ಯ ಪಾರ್ವತೀ ಸತೀ ।
ತಮುವಾಚ ಹಿತಂ ಸತ್ಯಂ ಸಾಕ್ಷಾಚ್ಛಂಕರಸನ್ನಿಧೌ ॥ ೪ ॥

॥ ಪಾರ್ವತ್ಯುವಾಚ ॥

ಧರ್ಮತತ್ತ್ವಂ ನ ಜಾನಾಸಿ ಧರ್ಮಿಷ್ಠಂ ಮನ್ಯಸೇ ಸ್ವಕಂ ।
ಅನಪತ್ಯಾಂ ಪರಿತ್ಯಜ್ಯ ಕ್ವ ಯಾಸಿ ತಪಸೇ ಮುನೇ ॥ ೫ ॥

ಅನಪತ್ಯಾಂ ಚ ಯುವತೀಂ ಕುಲಜಾಂ ಚ ಪತಿವ್ರತಾಂ ।
ತ್ಯಕ್ತ್ವಾ ಭವೇಯುಃ ಸನ್ಯಾಸೀ ಬ್ರಹ್ಮಚಾರೀ ಯತೀತಿ ವಾ ॥ ೬ ॥

ವಾಣಿಜ್ಯೇ ವಾ ಪ್ರವಾಸೇ ವಾ ಚಿರಂ ದೂರಂ ಪ್ರಯಾತಿ ಯಃ ।
ತೀರ್ಥೇ ವಾ ತಪಸೇ ವಾಪಿ ಮೋಕ್ಷಾರ್ಥಂ ಜನ್ಮ ಖಂಡಿತುಂ ॥ ೭ ॥

ನ ಮೋಕ್ಷಸ್ತಸ್ಯ ಭವತಿ ಧರ್ಮಸ್ಯ ಸ್ಖಲನಂ ಧ್ರುವಂ ।
ಅಭಿಶಾಪೇನ ಭಾರ್ಯಾಯಾ ನರಕಂ ಚ ಪರತ್ರ ಚ ।
ಇಹೈವ ಚ ಯಶೋನಾಶ ಇತ್ಯಾಹ ಕಮಲೋದ್ಭವಃ ॥ ೮ ॥

---

೪. ದೂರ್ವಾಸಮುನಿಯು ಹೇಳಿದ ಮಾತನ್ನು ಕೇಳಿ ಸತಿಯಾದ ಪಾರ್ವತಿಯು ನಕ್ಕು ಸಾಕ್ಷಾತ್ ಶಂಕರನ ಸನ್ನಿಧಿಯಲ್ಲಿ ಆ ಮುನಿಯನ್ನು ಕುರಿತು ಹಿತವೂ ಸತ್ಯವೂ ಆದ ಮಾತನ್ನು ಹೇಳಿದಳು.

೫. ಪಾರ್ವತಿಯು ಹೇಳುತ್ತಾಳೆ:— ನೀನು ಧರ್ಮದ ರಹಸ್ಯವನ್ನರಿಯೇ, ನಿನ್ನನ್ನು ನೀನೇ ಧರ್ಮಿಷ್ಠನೆಂದು ತಿಳಿದಿರುತ್ತೀಯೆ. ಎಲೈ ಮುನಿಯೇ ! ಮಕ್ಕಳಿಲ್ಲದ ಹೆಂಡತಿಯನ್ನು ಬಿಟ್ಟು ತಪಸ್ಸನ್ನು ಮಾಡಲು ಎಲ್ಲಿಗೆಹೋಗುವಿ ?

೬–೮. "ಯಾವ ಮಾನವನು ಮಕ್ಕಳಿಲ್ಲದ ಯುವತಿಯಾದ ಉತ್ತಮಕುಲ ದಲ್ಲಿ ಹುಟ್ಟಿದ ಪತಿವ್ರತೆಯಾದ ಹೆಂಡತಿಯನ್ನು ಬಿಟ್ಟು ಸನ್ಯಾಸಿಯಾಗುತ್ತಾನೋ ಬ್ರಹ್ಮಚರ್ಯನಿರತನಾಗುತ್ತಾನೊ, ವ್ಯಾಪಾರದಲ್ಲಿ ನಿರತನಾಗುತ್ತಾನೋ ಅಥವಾ ಬಹಳಕಾಲ ಪ್ರವಾಸವನ್ನು ಮಾಡುತ್ತಾನೋ ಇಲ್ಲದಿದ್ದರೆ ಮೋಕ್ಷವನ್ನಪೇಕ್ಷಿಸಿ ತೀರ್ಥಯಾತ್ರೆಯನ್ನು ಮಾಡುತ್ತಾನೋ ಅಥವಾ ತಪಸ್ಸನ್ನು ಮಾಡಿ ಹುಟ್ಟುವಿಕೆ ಯನ್ನು ಹೋಗಲಾಡಿಸಿಕೊಳ್ಳಲಪೇಕ್ಷಿಸುತ್ತಾನೋ ಅವನಿಗೆ ಮೋಕ್ಷವು ದೊರೆಯು ವುದಿಲ್ಲ. ಪರಂತು ಧರ್ಮನಾಶವು ನಿಶ್ಚಯವು. ಪತ್ನಿಯ ಶಾಪದಿಂದ ಪರಲೋಕ ದಲ್ಲಿ ನರಕವನ್ನು ಹೊಂದುತ್ತಾನೆ. ಇಹಲೋಕದಲ್ಲಿ ಅಪಕೀರ್ತಿಯುಂಟಾಗುತ್ತದೆ" ಎಂಬುದಾಗಿ ಬ್ರಹ್ಮನು ಹೇಳಿರುವನು.

ದ್ವಾರಕಾಂ ಗಚ್ಛ ಹೇ ವಿಪ್ರ ಸ್ವಧರ್ಮಂ ರಕ್ಷ ಸಾಂಪ್ರತಂ ।
ಏಕಾನಂಶಾಂ ಮದಂಶಾಂ ಚ ಧರ್ಮತಃ ಪರಿಪಾಲಯ ॥ ೯ ॥

ಪಾದಪದ್ಮಾರ್ಜಿತಂ ಪಾದಪದ್ಮಂ ಸರ್ವಸುದುರ್ಲಭಂ ।
ಸಂತತಂ ಶಂಭುನಾ ಗೀತಂ ಮುನೀಂದ್ರೈಃ ಸನಕಾದಿಭಿಃ ॥ ೧೦ ॥

ಪರಿತ್ಯಜ್ಯ ಸುರತರೋಃ ಕೃಷ್ಣಸ್ಯ ಪರಮಾತ್ಮನಃ ।
ಕ್ವ ಯಾಸಿ ತಪಸೇ ವತ್ಸ ಸುಧಾಂ ತ್ಯಕ್ತ್ವಾ ಮನೋಹರಾಂ ॥ ೧೧ ॥

ಶ್ರೀಕೃಷ್ಣಪಾದಪದ್ಮಂ ಚ ಸ್ವಪ್ನೇ ಜಪತಿ ಯೋ ಮುನೇ ।
ಶತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೧೨ ॥

ಯದ್ಬಾಲ್ಯೇ ಯಚ್ಚ ಕೌಮಾರೇ ವಾರ್ಧಕೇ ಯಚ್ಚ ಯೌವನೇ ।
ಕಾಮತೋಽಕಾಮತೋ ವಾಪಿ ಭಸ್ಮೀಭೂತಂ ಚ ಪಾತಕಂ ॥ ೧೩ ॥

---

೯ ಎಲೈ ಬ್ರಾಹ್ಮಣನೇ! ದ್ವಾರಕಿಗೆ ಹೋಗು. ನಿನ್ನ ಗೃಹಸ್ಥಧರ್ಮವನ್ನು ಕಾಪಾಡಿಕೊ. ನನ್ನ ಅಂಶಭೂತಳಾದ ಏಕಾನಂಶಳನ್ನು ಧರ್ಮದಿಂದ ಕಾಪಾಡುವವನಾಗು.

೧೦–೧೧. ಎಲೈ ಮಗನೇ! ಸಕಲರಿಗೂ ದೊರಕದ ಶಂಖ ಪದ್ಮಗಳ ಗುರುತುಳ್ಳ ಸರ್ವಕಾಲದಲ್ಲಿಯೂ ಪರಮೇಶ್ವರನಿಂದಲೂ ಸನಕನೇ ಮೊದಲಾದ ಮುನಿಶ್ರೇಷ್ಠರಿಂದಲೂ ಸ್ತೋತ್ರಮಾಡಲ್ಪಡುತ್ತಿರುವ ಕಲ್ಪವೃಕ್ಷವಾದ ಶ್ರೀಕೃಷ್ಣಪರಮಾತ್ಮನ ಪಾದಕಮಲವನ್ನು ಬಿಟ್ಟು ಮನೋಹರವಾದ ಅಮೃತವನ್ನು ಬಿಟ್ಟುಹೋದಂತೆ ತಪಸ್ಸನ್ನು ಮಾಡಲು ಎಲ್ಲಿಗೆ ಹೋಗುವೆ ?

೧೨. ಎಲೈ ಮುನಿಯೇ! ಯಾವ ಮಾನವನು ಶ್ರೀಕೃಷ್ಣನ ಪಾದಕಮಲಗಳನ್ನು ಕನಸಿನಲ್ಲಾದರೂ ಜಪಿಸುತ್ತಾನೆಯೋ ಅವನು ನೂರುಜನ್ಮಗಳಲ್ಲಿ ಮಾಡಿದ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೩. ಮಾನವನು ಬಾಲ್ಯದಲ್ಲಾಗಲಿ, ಕೌಮಾರದಲ್ಲಾಗಲಿ, ಪ್ರಾಯದಲ್ಲಾಗಲಿ, ಮುಪ್ಪಿನಲ್ಲಾಗಲಿ ತಿಳಿದುಮಾಡಿದ ಅಥವಾ ತಿಳಿಯದೆ ಮಾಡಿದ ಪಾಪಗಳೆಲ್ಲವೂ ಶ್ರೀಕೃಷ್ಣನ ಪಾದಕಮಲ ಸ್ಮರಣೆ ಮಾಡೋಣದರಿಂದ ಭಸ್ಮವಾಗುತ್ತವೆ.

ಸಾಕ್ಷಾದ್ಯೋ ಭಾರತೇ ವರ್ಷೇ ಶ್ರೀಕೃಷ್ಣ ಚರಣಾಂಬುಜಂ ।
ದೃಷ್ಟ್ವಾ ಸದ್ಯೋ ಭವೇತ್ಪೂಜ್ಯೋ ಜೀವನ್ಮುಕ್ತೋ ಭವೇದ್ಧ್ರುವಂ ॥೧೪॥

ಕೋಟಿಜನ್ಮಾರ್ಜಿತಾತ್ಸದ್ಯಃ ಕೃತಪಾಪಾದ್ವಿಮುಚ್ಯತೇ ।
ಸರ್ವಾಣ್ಯೇವಹಿ ತೀರ್ಥಾನಿ ಯತಃ ಪೂತಾನಿ ನಿತ್ಯಶಃ ॥ ೧೫ ॥

ತದ್ವ್ರತಂ ತತ್ತಪಃ ಸತ್ಯಂ ತತ್ಪುಣ್ಯಂ ತಚ್ಚ ಪೂಜನಂ ।
ಸಫಲಂ ಕೃಷ್ಣಸಂಬಂಧಿ ಸ್ವಜನ್ಮ ಖಂಡನಂ ಯತಃ ॥ ೧೬ ॥

ಕೃಷ್ಣಭಕ್ತಿವಿಹೀನಶ್ಚ ಬ್ರಾಹ್ಮಣೋ ವೇದಪಾರಗಃ ।
ತತ್ಸಂಗಾಚ್ಚ ತದಾಲಾಪಾದ್ಭಕ್ತಭಕ್ತಿಃ ಪ್ರಣಶ್ಯತಿ ॥ ೧೭ ॥

ಕೃಷ್ಣಸ್ಯೋಚ್ಛಿಷ್ಟಭೋಜೀ ಯಃ ಕೃಷ್ಣಶ್ಚ ಬ್ರಾಹ್ಮಣಃ ಸ್ವಯಂ ।
ಅವಹ್ನಿಪವನಾತ್ಪೂತಃ ಪೂತಂ ಕರ್ತುಂ ಜಗತ್ಕ್ಷಮಃ ॥ ೧೮ ॥

---

೧೪. ಭರತಖಂಡದಲ್ಲಿ ಯಾವ ಮಾನವನು ಪ್ರತ್ಯಕ್ಷವಾಗಿ ಶ್ರೀಕೃಷ್ಣನ ಪಾದಕಮಲವನ್ನು ನೋಡುತ್ತಾನೆಯೋ ಅವನು ಆ ಕ್ಷಣವೇ ಮಹಾಪೂಜ್ಯನಾಗುತ್ತಾನೆ. ಅವನು ನಿಜವಾಗಿಯೂ ಜೀವನ್ಮುಕ್ತನಾಗುತ್ತಾನೆ.

೧೫. ಮತ್ತು ಕೋಟಿ ಜನ್ಮಗಳಲ್ಲಿ ಮಾಡಿದ ಪಾಪದಿಂದ ಆ ಕ್ಷಣವೇ ಮುಕ್ತನಾಗುತ್ತಾನೆ. ಅಲ್ಲದೆ ಅವನ ಸಂಬಂಧದಿಂದ ಸಕಲತೀರ್ಥಗಳೂ ಪವಿತ್ರವಾಗುತ್ತವೆ.

೧೬. ಅದೇ ವ್ರತವು, ಅದೇ ತಪಸ್ಸು ಮತ್ತು ಪುಣ್ಯವು, ಅದೇ ಸತ್ಯವು ಅದೇ ಪೂಜೆಯು, ಯಾವುದರಿಂದ ತನ್ನ ಜನ್ಮನಾಶವಾಗುತ್ತದೆಯೋ ಆ ಕೃಷ್ಣನ ಸಂಪರ್ಕವೆಂಬುದು ಸಫಲವಾದುದು.

೧೭. ಕೃಷ್ಣನಲ್ಲಿ ಭಕ್ತಿಯಿಲ್ಲದ ಬ್ರಾಹ್ಮಣನು ವೇದಪಾರಂಗತನಾಗಿದ್ದಾಗ್ಯೂ ಕೂಡ ಅವನ ಸಂಗದಿಂದಲೂ ಅವನೊಡನೆ ಮಾತನಾಡುವುದರಿಂದಲೂ ಕೂಡ ಭಕ್ತರ ಭಕ್ತಿಯು ನಾಶವಾಗುತ್ತದೆ.

೧೮. ಯಾವ ಬ್ರಾಹ್ಮಣನು ಕೃಷ್ಣನ ನಿರ್ಮಾಲ್ಯವನ್ನು ಭೋಜನಮಾಡುತ್ತಾನೋ ಅವನು ಸಾಕ್ಷಾತ್ ಕೃಷ್ಣನೇ ಆಗುತ್ತಾನೆ ಮತ್ತು ಅಗ್ನಿ ವಾಯು ಇವರಿಗಿಂತಲೂ ಪರಿಶುದ್ಧನಾಗಿ ಸಕಲ ಜಗತ್ತನ್ನೂ ಪರಿಶುದ್ಧಿಗೊಳಿಸಲು ಸಮರ್ಥನಾಗುತ್ತಾನೆ.

ಶ್ರೀಕೃಷ್ಣಂ ಚ ಪರಿತ್ಯಜ್ಯ ಕ್ವ ಯಾಸಿ ತಪಸೇ ದ್ವಿಜ ।
ತಪಸಾಂ ಫಲಮಾಪ್ನೋತಿ ಶ್ರೀಕೃಷ್ಣಸ್ಮರಣೇನ ಚ ॥ ೧೯ ॥

ಯತೋ ಭಕ್ತಿರ್ನ ಚ ಭವೇಚ್ಛ್ರೀಕೃಷ್ಣೇ ಪರಮಾತ್ಮನಿ ।
ಸ ಗುರುಃ ಪರಮೋ ವೈರೀ ಕರೋತಿ ಜನ್ಮನಿಷ್ಫಲಂ ॥ ೨೦ ॥

ಪಾರ್ವತೀ ವಚನಂ ಶ್ರುತ್ವಾ ಶಂಕರಃ ಪ್ರೇಮವಿಹ್ವಲಃ ।
ಪುಲಕಾಂಕಿತಸರ್ವಾಂಗಸ್ತುಷ್ಟಾವ ಪರಮೇಶ್ವರೀಂ ॥ ೨೧ ॥

ದುರ್ವಾಸಾಃ ಪ್ರಣತಿಂ ಕೃತ್ವಾ ಶಿವದುರ್ಗಾಪದಾಂಬುಜೇ ।
ಸ್ಮಾರಂ ಸ್ಮಾರಂ ಕೃಷ್ಣಪದಂ ಪುನಶ್ಚ ದ್ವಾರಕಾಂ ಯಯೌ ॥ ೨೨ ॥

ತತ್ರ ಗತ್ವಾ ಹರಿಂ ದೃಷ್ಟ್ವಾ ತುಷ್ಟಾವ ಪರಮೇಶ್ವರಂ ।
ಏಕಾನಂಶಾಲಯಂ ಗತ್ವಾ ಸ ಚ ರೇಮೇ ತಯಾ ಸಹ ॥ ೨೩ ॥

---

೧೯. ಎಲೈ ಬ್ರಾಹ್ಮಣನೇ! ಶ್ರೀಕೃಷ್ಣನನ್ನು ಬಿಟ್ಟು ತಪಸ್ಸಿಗೋಸ್ಕರ ಎಲ್ಲಿಗೆ ಹೋಗುತ್ತೀಯೆ? ಶ್ರೀಕೃಷ್ಣನ ಸ್ಮರಣೆಯನ್ನು ಮಾಡುವ ಮಾತ್ರದಿಂದಲೇ ತಪಸ್ಸುಗಳ ಫಲವನ್ನು ಮಾನವನು ಹೊಂದುತ್ತಾನೆ.

೨೦. ಯಾವನಿಂದ ಶ್ರೀಕೃಷ್ಣಪರಮಾತ್ಮನಲ್ಲಿ ಭಕ್ತಿಯುಂಟಾಗುವುದಿಲ್ಲವೋ ಅಂಥಾ ಗುರುವು ದೊಡ್ಡ ಶತ್ರುವು, ಅಂಥವನು ಜನ್ಮವನ್ನು ವ್ಯರ್ಥಮಾಡುತ್ತಾನೆ.

೨೧. ಪಾರ್ವತಿಯ ಮಾತನ್ನು ಕೇಳಿ ಶಂಕರನು ಪ್ರೀತಿಯಿಂದ ಕೂಡಿದವನಾಗಿಯೂ ರೋಮಾಂಚನದಿಂದ ಕೂಡಿದ ಸಕಲಶರೀರವುಳ್ಳವನಾಗಿಯೂ ಪರಮೇಶ್ವರಿಯನ್ನು ಸ್ತೋತ್ರಮಾಡಿದನು.

೨೨. ದೂರ್ವಾಸಮುನಿಯು ಈಶ್ವರನ ಮತ್ತು ಪಾರ್ವತಿಯ ಪಾದಕಮಲಗಳಿಗೆ ನಮಸ್ಕಾರಮಾಡಿ ಶ್ರೀಕೃಷ್ಣನ ಪಾದಪದ್ಮವನ್ನು ಮತ್ತೆ ಮತ್ತೆ ಸ್ಮರಣೆ ಮಾಡುತ್ತ ಮತ್ತೆ ದ್ವಾರಕಾನಗರಕ್ಕೆ ಹೋದನು.

೨೩. ಅವನು ದ್ವಾರಕಿಗೆ ಹೋಗಿ ಹರಿಯನ್ನು ದರ್ಶನಮಾಡಿ ಆ ಪರಮೇಶ್ವರನನ್ನು ಸ್ತೋತ್ರಮಾಡಿದನು. ಮತ್ತು ಏಕಾನಂಶಳ ಮನೆಗೆ ಹೋಗಿ ಅವಳೊಡನೆ ವಿಹರಿಸುತ್ತಿದ್ದನು.

ಕೃಷ್ಣೋ ಯುಧಿಷ್ಠಿರಧ್ಯಾನಾತ್ಪ್ರಯಯೌ ಹಸ್ತಿನಾಪುರಂ ।
ಕುಂತೀಂ ಸಂಭಾಷ್ಯ ಭೂಪಂ ಚ ಭ್ರಾತೄಂಶ್ಚ ಪ್ರಮುದಾನ್ವಿತಃ ॥ ೨೪ ॥

ಉಪಾಯೇನ ಜರಾಸಂಧಂ ನಿಹತ್ಯ ಶಾಲ್ವಮೇವ ಚ ।
ಕಾರಯಾಮಾಸ ಯಜ್ಞಂ ಚ ವಿಧಿಬೋಧಿತದಕ್ಷಿಣಂ ॥ ೨೫ ॥

ಮುನೀಂದ್ರೈಶ್ಚ ನೃಪೇಂದ್ರೈಶ್ಚ ರಾಜಸೂಯಮಭೀಪ್ಸಿತಂ ।
ಶಿಶುಪಾಲಂ ದಂತವಕ್ರಂ ತತ್ರ ಯಜ್ಞೇ ಜಘಾನ ಸಃ ॥ ೨೬ ॥

ಅತೀವ ನಿಂದಾಂ ಕುರ್ವಂತಂ ಸಭಾಯಾಂ ಸುರಭೂಪಯೋಃ ।
ಪಪಾತ ತಚ್ಛರೀರಂ ಚ ಜೀವೋ ಗತ್ವಾ ಹರೇಃ ಪದಂ ।
ನ ದೃಷ್ಟ್ವಾ ತತ್ರ ಸರ್ವೇಶಂ ತುಷ್ಟಾವಾಗತ್ಯ ಮಾಧವಂ ॥ ೨೭ ॥

॥ ಶಿಶುಪಾಲ ಉವಾಚ ॥

ವೇದಾನಾಂ ಜನಕೋಸಿ ತ್ವಂ ವೇದಾಂಗಾನಾಂ ಚ ಮಾಧವ ।
ಸುರಾಣಾಮಸುರಾಣಾಂ ಚ ಪ್ರಾಕೃತಾನಾಂ ಚ ದೇಹಿನಾಂ । ॥ ೨೮ ॥

---

೨೪. ಶ್ರೀಕೃಷ್ಣನು ಯುಧಿಷ್ಠಿರನು ಸ್ಮರಣೆಮಾಡಿದ ಕಾರಣ ಹಸ್ತಿನಾಪುರಕ್ಕೆ ಹೋದನು. ಕುಂತಿಯನ್ನೂ ರಾಜನಾದ ಯುಧಿಷ್ಠಿರನನ್ನೂ ಭೀಮನೇ ಮೊದಲಾದ ಸಹೋದರರನ್ನೂ ಸಂತೋಷದಿಂದ ಮಾತನಾಡಿಸಿದನು.

೨೫–೨೬. ಉಪಾಯದಿಂದ ಜರಾಸಂಧನನ್ನೂ ಶಾಲ್ವನನ್ನೂ ಕೊಂದು ವೇದೋಕ್ತವಾದ ದಕ್ಷಿಣೆಯಿಂದ ಕೂಡಿದ ರಾಜಸೂಯ ಯಾಗವನ್ನು ಮುನಿಶ್ರೇಷ್ಠ ರಿಂದಲೂ ರಾಜಶ್ರೇಷ್ಠರಿಂದಲೂ ಕೂಡಿದವನಾಗಿ ಮಾಡಿಸಿದನು. ಆ ಯಾಗದಲ್ಲಿ ಕೃಷ್ಣನು ಶಿಶುಪಾಲನನ್ನೂ ದಂತವಕ್ರನನ್ನೂ ಕೊಂದನು.

೨೭. ದೇವತೆಗಳು ಮತ್ತು ರಾಜರುಗಳು ಇವರುಗಳ ಸಭೆಯಲ್ಲಿ ಅತ್ಯಂತ ವಾಗಿ ನಿಂದೆಮಾಡುತ್ತಿರುವ ಆ ಶಿಶುಪಾಲನ ಶರೀರವು ಕೆಳಕ್ಕುರುಳಿತು. ಅವನ ಜೀವವು ಹೋಗಿ ಹರಿಯ ಪಾದವನ್ನು ಸೇರಿತು. ಅವನು ಅಲ್ಲಿ ದೇವೇಶ್ವರನಾದ ಮಾಧವನನ್ನು ನೋಡಿ ಸ್ತೋತ್ರಮಾಡಿದನು.

೨೮. ಶಿಶುಪಾಲನು ಹೇಳುತ್ತಾನೆ :— ಎಲೈ ಮಾಧವನೇ! ನೀನು ವೇದ ಗಳಿಗೂ ವೇದಾಂಗಗಳಿಗೂ ದೇವತೆಗಳಿಗೂ ರಾಕ್ಷಸರಿಗೂ ಅಲ್ಪರಾದ ಪ್ರಾಣಿ ಗಳಿಗೂ ತಂದೆಯಾಗಿರುತ್ತೀಯೆ.

ಸೂಕ್ಷ್ಮಾಂ ವಿಧಾಯ ಸೃಷ್ಟಿಂ ಚ ಕಲ್ಪಭೇದಂ ಕರೋಷಿ ಚ ।
ಮಾಯಯಾ ಚ ಸ್ವಯಂ ಬ್ರಹ್ಮಾ ಶಂಕರಃ ಶೇಷ ಏವ ಚ ॥ ೨೯ ॥

ಮನವೋ ಮುನಯಶ್ಚೈವ ವೇದಾಶ್ಚ ಸೃಷ್ಟಿಪಾಲಕಾಃ ॥ ೩೦ ॥

ಕಲಾಂಶೇನಾಪಿ ಕಲಯಾ ದಿಕ್ಪಾಲಾಶ್ಚ ಗ್ರಹಾದಯಃ ।
ಸ್ವಯಂ ಪುಮಾನ್ಸ್ವಯಂ ಸ್ತ್ರೀಚ ಸ್ವಯಮೇವ ನಪುಂಸಕಃ ॥ ೩೧ ॥

ಕಾರಣಂ ಚ ಸ್ವಯಂ ಕಾರ್ಯಂ ಜನ್ಯಶ್ಚ ಜನಕಃ ಸ್ವಯಂ ।
ಯಂತ್ರಸ್ಯ ಚ ಗುಣೋ ದೋಷೋ ಯಂತ್ರಿಣಶ್ಚ ಶ್ರುತೌ ಶ್ರುತಂ ॥೩೨॥

ಸರ್ವೇ ಯಂತ್ರಾ ಭವಾನ್ಯಂತ್ರೀ ತ್ವಯಿ ಸರ್ವಂ ಪ್ರತಿಷ್ಠಿತಂ ।
ಮಮ ಕ್ಷಮಸ್ವಾಪರಾಧಂ ಮೂಢಸ್ಯ ದ್ವಾರಿಣಸ್ತವ ॥ ೩೩ ॥

---

೨೯. ನೀನು ಮಾಯೆಯಿಂದ ಕೂಡಿದವನಾಗಿ ಸೂಕ್ಷ್ಮವಾದ ಸೃಷ್ಟಿಯನ್ನು ಮಾಡಿ ಕಲ್ಪಭೇದವನ್ನೂ ಮಾಡುವವನಾಗುತ್ತೀಯೆ. ನೀನೇ ಬ್ರಹ್ಮನೂ ಶಂಕರನೂ ಶೇಷನೂ ಆಗಿರುವೆ.

೩೦–೩೧. ಮನುಗಳು, ಮುನಿಗಳು, ವೇದಗಳೂ ಕಲಾಂಶದಿಂದ ಸೃಷ್ಟಿಯನ್ನು ಪಾಲನೆಮಾಡುತ್ತಿರುವರು. ದಿಕ್ಪಾಲಕರೂ ಗ್ರಹವೇ ಮುಂತಾದವರು ಕಲಾಮಾತ್ರದಿಂದ ಸೃಷ್ಟಿಪಾಲನೆಯನ್ನು ಮಾಡುತ್ತಿರುವರು. ನೀನು ಸ್ವತಂತ್ರನಾಗಿ ಸ್ತ್ರೀಯೂ, ಪುರುಷನೂ, ನಪುಂಸಕನೂ ಆಗಿರುತ್ತೀಯೆ.

೩೨–೩೩. ನೀನೇ ಕಾರಣನೂ ಕಾರ್ಯನೂ ಹುಟ್ಟುವವನೂ ಹುಟ್ಟಿಸುವವನೂ ಆಗಿರುತ್ತೀಯೆ. ಯಂತ್ರದ ಮತ್ತು ಯಂತ್ರವನ್ನು ನಡೆಸುವವನ ಗುಣದೋಷವು ವೇದದಲ್ಲಿ ಹೇಳಲ್ಪಟ್ಟಿರುವುದು. ಸಕಲ ಪ್ರಪಂಚಗಳೂ ಯಂತ್ರಗಳು. ನೀನು ಯಂತ್ರವನ್ನು ನಡೆಸುವವನು. ನಿನ್ನಲ್ಲಿ ಸಕಲವೂ ಇರುವವುಗಳಾಗಿವೆ. ನಿನ್ನ ಬಾಗಿಲು ಕಾಯುವವನಾದ ಮೂಢನಾದ ನನ್ನ ಅಪರಾಧವನ್ನು ಕ್ಷಮಿಸುವವನಾಗು.

ಬ್ರಹ್ಮಶಾಪಾತ್ಕುಬುದ್ಧೇಶ್ಚ ರಕ್ಷ ರಕ್ಷ ಜಗದ್ಗುರೋ ।
ಇತ್ಯೇವ ಮುಕ್ತ್ವಾ ಕ್ರಮತೋ ಜಯೋ ವಿಜಯ ಏವ ಚ ॥ ೩೪ ॥

ಮುದಾ ತೌ ಯಯತುಃ ಶೀಘ್ರಂ ವೈಕುಂಠದ್ವಾರಮೀಪ್ಸಿತಂ ।
ಶಿಶುಪಾಲಸ್ಯ ಸ್ತೋತ್ರೇಣ ಸರ್ವೇ ತೇ ವಿಸ್ಮಯಂ ಯಯುಃ ॥ ೩೫ ॥

ಪರಿಪೂರ್ಣತಮಂ ಕೃತ್ವಾ ಮೇನಿರೇ ಕೃಷ್ಣಮೀಶ್ವರಂ ।
ಕಾರಯಿತ್ವಾ ರಾಜಸೂಯಂ ಭೋಜಯಾಮಾಸ ಬ್ರಾಹ್ಮಣಾನ್ ॥ ೩೬ ॥

ಕುರುಪಾಂಡವಯುದ್ಧಂ ಚ ಕಾರಯಾಮಾಸ ಭೇದತಃ ।
ಭುವೋ ಭಾರಾವತರಣಂ ಚಕಾರ ಸ ಕೃಪಾನಿಧಿಃ ॥ ೩೭ ॥

ಪುನರ್ಯಯೌ ದ್ವಾರಕಾಂ ಚ ಚಿರಂ ಸ್ಥಿತ್ವಾ ನೃಪಾಜ್ಞಯಾ ।
ವಿಪ್ರಾಯಾ ಮೃತವತ್ಸಾಯಾ ಜೀವಯಾಮಾಸ ಪುತ್ರಕಾನ್ ॥ ೩೮ ॥

---

೩೪–೩೫. ಎಲೈ ಜಗದ್ಗುರುವೇ! ಬ್ರಾಹ್ಮಣ ಶಾಪದಿಂದಲೂ ದುರ್ಬುದ್ಧಿಯಿಂದಲೂ ನನ್ನನ್ನು ಪಾರುಮಾಡಿ ಕಾಪಾಡುವವನಾಗು. ಈ ಪ್ರಕಾರವಾಗಿ ಹೇಳಿ ಕ್ರಮವಾಗಿ ಜಯ ಮತ್ತು ವಿಜಯ ಇಬ್ಬರೂ ಸಂತೋಷದಿಂದ ತಮಗೆ ಇಷ್ಟವಾದ ವೈಕುಂಠದ ಬಾಗಿಲಿಗೆ ಶೀಘ್ರವಾಗಿ ಹೋದರು. ಶಿಶುಪಾಲನು ಮಾಡಿದ ಸ್ತೋತ್ರವನ್ನು ಕೇಳಿ ಅಲ್ಲಿದ್ದವರೆಲ್ಲರೂ ಬಹಳ ಆಶ್ಚರ್ಯವನ್ನು ಹೊಂದಿದರು.

೩೬. ಕೃಷ್ಣನನ್ನು ಅತ್ಯಂತ ಪರಿಪೂರ್ಣನೆಂದು ಮನಸ್ಸಿನಲ್ಲಿ ಮಾಡಿಕೊಂಡು ಅವನನ್ನು ಸಕಲ ಜಗತ್ತಿಗೂ ಯಜಮಾನನೆಂದು ತಿಳಿದುಕೊಂಡರು. ಕೃಷ್ಣನು ರಾಜಸೂಯ ಯಾಗವನ್ನು ಮಾಡಿಸಿ ಬ್ರಾಹ್ಮಣ ಭೋಜನವನ್ನು ಮಾಡಿಸಿದನು.

೩೭. ಕೃಪಾನಿಧಿಯಾದ ಆ ಕೃಷ್ಣನು ಭೇದೋಪಾಯದಿಂದ ಕೌರವರಿಗೂ ಪಾಂಡವರಿಗೂ ಯುದ್ಧವನ್ನು ಮಾಡಿಸಿದನು. ಮತ್ತು ಭೂಮಿಯ ಭಾರವನ್ನು ಇಳುಹಿದನು.

೩೮. ಮತ್ತೆ ದ್ವಾರಕೆಗೆ ಬಂದನು. ಅಲ್ಲಿ ರಾಜನ ಅಪ್ಪಣೆಯ ಪ್ರಕಾರ ಬಹುಕಾಲವಿದ್ದು ಸತ್ತುಹೋದ ಮಕ್ಕಳುಳ್ಳ ಬ್ರಾಹ್ಮಣಿಯ ಮಕ್ಕಳನ್ನು ಬದುಕಿಸಿದನು.

ಮೃತಸ್ಥಾನಾತ್ಸಮಾನೀಯ ತನ್ಮಾತ್ರೇ ಪ್ರದದೌ ಸುತಾನ್ ।
ತದ್ದೃಷ್ಟ್ವಾ ದೇವಕೀ ತುಷ್ಟಾ ಯಯಾಚೇ ಮೃತಪುತ್ರಕಾನ್ ॥ ೩೯ ॥

ಮೃತಸ್ಥಾನಾತ್ಸಮಾನೀಯ ದದೌ ಮಾತ್ರೇ ಸಹೋದರಾನ್ ।
ಸದ್ಯೋ ಜಹಾರ ದಾರಿದ್ರ್ಯಂ ಸುದಾಮ್ನೋ ಬ್ರಾಹ್ಮಣಸ್ಯ ಚ ॥ ೪೦ ॥

ಸಮಾಗತಸ್ಯ ಸ್ವಗೃಹಾದ್ದ್ವಾರಕಾಂ ಶರಣಾರ್ಥಿನಃ ।
ತಸ್ಮೈ ದದೌ ರಾಜಲಕ್ಷ್ಮೀಂ ನಿಶ್ಚಲಾಂ ಸಾಪ್ತಪೌರುಷೀಂ ॥ ೪೧ ॥

ಪೃಥುಕಾನಾಂ ಕಣಂ ಭುಕ್ತ್ವಾ ಭಕ್ತಸ್ಯ ಭಕ್ತವತ್ಸಲಃ ।
ಬಭೂವ ತಸ್ಯ ರಾಜ್ಯಂ ಚ ಯಥೇಂದ್ರಸ್ಯಾಮರಾವತೀ ॥ ೪೨ ॥

ಯಥಾ ಧನೇಶ್ವರೋ ದೇವೋ ಧನಾಢ್ಯಃ ಸ ಬಭೂವ ಹ ।
ನಿಶ್ಚಲಾಂ ಹರಿಭಕ್ತಿಂ ಚ ದದೌ ದಾಸ್ಯಂ ಸುದುರ್ಲಭಂ ॥ ೪೩ ॥

ಅವಿನಾಶಿನಿ ಗೋಲೋಕೇ ಯಥೇಷ್ಟಂ ಪದಮುತ್ತಮಂ ।
ಜಹಾರ ಪಾರಿಜಾತಂ ಚ ಶಕ್ರಾಹಂಕಾರಮೇವ ಚ ॥ ೪೪ ॥

---

೩೯. ಸತ್ತು ಹೋದ ಸ್ಥಳದಿಂದ ಮಕ್ಕಳನ್ನು ತಂದು ಆ ಮಕ್ಕಳ ತಾಯಿಗೆ ಕೊಟ್ಟನು. ಅದನ್ನು ಕಂಡು ಸಂತೋಷಗೊಂಡ ದೇವಕಿಯು ಸತ್ತುಹೋದ ತನ್ನ ಮಕ್ಕಳನ್ನು ಬದುಕಿಸಿಕೊಡುವಂತೆ ಬೇಡಿದಳು.

೪೦–೪೨. ಸತ್ತ ಸ್ಥಳದಿಂದ ತನ್ನ ಸೋದರರನ್ನು ತಂದು ತನ್ನ ತಾಯಿಗೆ ಕೊಟ್ಟನು. ಸುದಾಮನೆಂಬ ಬ್ರಾಹ್ಮಣನು ತನ್ನ ಮನೆಯಿಂದ ದ್ವಾರಕಿಗೆ ಕೃಷ್ಣನನ್ನು ಶರಣು ಹೊಂದುವುದಕ್ಕಾಗಿ ಬಂದಿರಲು ಆ ಕ್ಷಣವೆ ಅವನ ದಾರಿದ್ರ್ಯವನ್ನು ಹೋಗಲಾಡಿಸಿದನು. ಭಕ್ತರಲ್ಲಿ ಪ್ರೀತಿಯುಳ್ಳ ಶ್ರೀಕೃಷ್ಣನು ಅವಲಕ್ಕಿಯ ಕಾಳನ್ನು ತಿಂದು ಮುಂದೆ ಏಳುತಲೆಗಳವರೆಗೂ ಸ್ಥಿರವಾಗಿರುವ ರಾಜ್ಯಲಕ್ಷ್ಮಿಯನ್ನು ಕೊಟ್ಟನು. ಅವನ ರಾಜ್ಯವು ಇಂದ್ರನ ಅಮರಾವತಿಗೆ ಸಮಾನವಾಯಿತು.

೪೩. ಆ ಸುದಾಮನು ಧನಾಧಿಪತಿಯಾದ ಕುಬೇರನಂತೆ ಧನವಂತನಾದನು. ಅವನಿಗೆ ಸ್ಥಿರವಾದ ಹರಿಭಕ್ತಿಯನ್ನೂ ದೊರೆಯಲಸಾಧ್ಯವಾದ ದಾಸತನವನ್ನೂ ಕೊಟ್ಟನು.

೪೪. ಸ್ಥಿರವಾದ ಗೋಲೋಕದಲ್ಲಿ ಅವನ ಇಷ್ಟಬಂದ ಉತ್ತಮಸ್ಥಾನವನ್ನೂ ಕೊಟ್ಟನು. ಪಾರಿಜಾತದ ಮರವನ್ನೂ ದೇವೇಂದ್ರನ ಅಹಂಕಾರವನ್ನೂ ಅಪಹಾರ ಮಾಡಿದನು.

ಸತ್ಯಾಂ ಚ ಕಾರಯಾಮಾಸ ಪುಣ್ಯಕಂ ವ್ರತಮೀಪ್ಸಿತಂ ।
ವರ್ಧಯಾಮಾಸ ಸರ್ವತ್ರ ನಿತ್ಯಂ ನೈಮಿತ್ತಿಕಂ ಮುನೇ ॥ ೪೫ ॥

ತತ್ರ ವ್ರತೇ ಕುಮಾರಾಯ ಸ್ವಾತ್ಮಾನಂ ದಕ್ಷಿಣಾಂ ದದೌ ।
ಬ್ರಾಹ್ಮಣಾನ್ಭೋಜಯಾಮಾಸ ತೇಭ್ಯೋ ರತ್ನಂ ದದೌ ಮುದಾ ॥ ೪೬ ॥

ಸತ್ಯಭಾಮಾತಿಮಾನಂ ಚ ವರ್ಧಯಾಮಾಸ ಸರ್ವತಃ ।
ರುಕ್ಮಿಣ್ಯಾ ಅತಿಸೌಭಾಗ್ಯಮನ್ಯಾಸಾಂ ಚ ನವಂನವಂ ॥ ೪೭ ॥

ವೈಷ್ಣವಾನಾಂ ಸುರಾಣಾಂ ಚ ವಿಪ್ರಾಣಾಮಪಿ ಪೂಜನಂ ।
ವರ್ಧಯಾಮಾಸ ಸರ್ವತ್ರ ನಿತ್ಯಂ ನೈಮಿತ್ತಿಕಂ ಮುನೇ ॥ ೪೮ ॥

ಪರಮಾಧ್ಯಾತ್ಮಿಕಂ ಜ್ಞಾನಮುದ್ಧವಾಯ ದದೌ ಪ್ರಭುಃ ।
ಅರ್ಜುನಂ ಕಥಯಾಮಾಸ ಗೀತಾಂ ಚ ರಣಮೂರ್ಧನಿ ॥ ೪೯ ॥

---

೪೫. ಎಲೈ ಮುನಿಯೇ! ಸತ್ಯೆಗೆ ಅವಳ ಇಷ್ಟದಂತೆ ಪುಣ್ಯಕವೆಂಬ ವ್ರತವನ್ನು ಮಾಡಿಸಿದನು. ಎಲ್ಲೆಡೆಯಲ್ಲಿಯೂ ನಿತ್ಯ ನೈಮಿತ್ತಿಕ ಕರ್ಮಗಳು ವೃದ್ಧಿ ಹೊಂದುವಂತೆ ಮಾಡಿದನು.

೪೬. ಅಲ್ಲಿ ಆ ವ್ರತದಲ್ಲಿ ಕುಮಾರನಿಗೆ ತನ್ನನ್ನು ದಕ್ಷಿಣೆಯಾಗಿ ಕೊಟ್ಟನು. ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಿದನು. ಅವರುಗಳಿಗೆ ಸಂತೋಷಗೊಂಡವನಾಗಿ ರತ್ನಗಳನ್ನು ಕೊಟ್ಟನು.

೪೭. ಸತ್ಯಭಾಮೆಯ ಗೌರವವನ್ನು ಎಲ್ಲೆಡೆಯಲ್ಲಿಯೂ ಅಭಿವೃದ್ಧಿಪಡಿಸಿದನು. ರುಕ್ಮಿಣಿಯ ಹೆಚ್ಚಾದ ಸೌಭಾಗ್ಯವನ್ನೂ ಉಳಿದವರ ಹೊಸಹೊಸದಾದ ಸೌಭಾಗ್ಯವನ್ನೂ ವೃದ್ಧಿಪಡಿಸಿದನು.

೪೮. ಎಲೈ ಮುನಿಯೇ! ವಿಷ್ಣುಭಕ್ತರ ದೇವತೆಗಳ ಮತ್ತು ಬ್ರಾಹ್ಮಣರ ಪೂಜೆಯನ್ನೂ ನಿತ್ಯ ಮತ್ತು ನೈಮಿತ್ತಿಕವಾದ ಕರ್ಮಗಳನ್ನೂ ಎಲ್ಲೆಡೆಯಲ್ಲಿಯೂ ವೃದ್ಧಿಪಡಿಸಿದನು.

೪೯. ಪ್ರಭುವಾದ ಪರಮಾತ್ಮನು ಉದ್ಧವನಿಗೆ ಅತ್ಯುತ್ತಮವಾದ ಆತ್ಮವಿಷಯಕವಾದ ಜ್ಞಾನವನ್ನು ಅನುಗ್ರಹಿಸಿದನು. ಯುದ್ಧರಂಗದಲ್ಲಿ ಅರ್ಜುನನಿಗೆ ಗೀತೆಯನ್ನು ಕೂಡ ಉಪದೇಶ ಮಾಡಿದನು.

ಕೃತ್ವಾ ನಿಷ್ಕಂಟಕಂ ಚೈವ ಕೃಪಯಾ ಚ ಕೃಪಾನಿಧಿಃ ।
ಯುಧಿಷ್ಠಿರಾಯ ಪೃಥಿವೀರಾಜ್ಯಲಕ್ಷ್ಮೀಂ ದದೌ ಪ್ರಭುಃ ॥ ೫೦ ॥

ದುರ್ಗಾಂ ಚ ಕಾರಯಾಮಾಸ ವೈಷ್ಣವೀಂ ಗ್ರಾಮದೇವತಾಂ ।
ಯಜ್ಞಂ ಚ ಕಾರಯಾಮಾಸ ಕೋಟಿಹೋಮಾನ್ವಿತಂ ಶುಭಂ ॥ ೫೧ ॥

ನಾನಾಪ್ರಕಾರನೈವೇದ್ಯೈರ್ಧೂಪದೀಪಮನೋಹರೈಃ ।
ಬ್ರಾಹ್ಮಣಾನ್ಭೋಜಯಾಮಾಸ ಪಾರ್ವತೀಪ್ರೀತಯೇ ತಥಾ ॥ ೫೨ ॥

ರೈವತೇ ಪರ್ವತೇ ರಮ್ಯೇ ಚಾಮೂಲ್ಯರತ್ನಮಂದಿರೇ ।
ಗಣೇಶಂ ಪೂಜಯಾಮಾಸ ದೇವನಾಮೀಶ್ವರಂ ಪರಂ ॥ ೫೩ ॥

ಲಡ್ಡುಕಾನಾಂ ತಿಲಾನಾಂ ಚ ಸುಸ್ವಾದು ಸುಮನೋಹರಂ ।
ಪರಿತುಷ್ಟಿಂ ಪಂಚಲಕ್ಷಂ ನೈವೇದ್ಯಂ ಚ ದದೌ ಮುದಾ ॥ ೫೪ ॥

---

೫೦. ದಯಾಮಯನಾದ ಶ್ರೀಹರಿಯು ದಯೆಯಿಂದ ಕೂಡಿದವನಾಗಿ ರಾಜ್ಯವನ್ನು ಶತ್ರುಬಾಧೆಯಿಲ್ಲದಂತೆ ಮಾಡಿ ಭೂಮಿಯ ರಾಜ್ಯಲಕ್ಷ್ಮಿಯನ್ನು ಯುಧಿಷ್ಠಿರನಿಗೆ ಕೊಟ್ಟನು.

೫೧. ವಿಷ್ಣುಶಕ್ತಿಯಾದ ದುರ್ಗೆಯನ್ನು ಗ್ರಾಮದೇವತೆಯನ್ನಾಗಿಮಾಡಿದನು. ಕೋಟಿ ಹೋಮದಿಂದ ಕೂಡಿದ ಮಂಗಳಕರವಾದ ಯಾಗವನ್ನು ಮಾಡಿಸಿದನು.

೫೨. ಅನೇಕ ವಿಧಗಳಾದ ನೈವೇದ್ಯಗಳಿಂದಲೂ ಮನೋಹರವಾದ ಧೂಪದೀಪಗಳಿಂದಲೂ ಪಾರ್ವತಿಯ ಸಂತುಷ್ಟಿಗಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಿದನು.

೫೩. ರೈವತ ಪರ್ವತದ ಮನೋಹರವಾದ ರತ್ನಮಂದಿರದಲ್ಲಿ ಸಕಲ ದೇವತೆಗಳಿಗೂ ಈಶ್ವರನಾದ ಶ್ರೇಷ್ಠನಾದ ಗಣೇಶನ ಪೂಜೆಯನ್ನು ನೆರವೇರಿಸಿದನು.

೫೪. ಅತ್ಯಂತ ರುಚಿಕರವಾಗಿಯೂ ಮನೋಹರವಾಗಿಯೂ ಇರುವ ಆನಂದವನ್ನುಂಟುಮಾಡುವ ಐದು ಲಕ್ಷ ಎಳ್ಳುಂಡೆಗಳ ನೈವೇದ್ಯವನ್ನು ಸಂತೋಷದಿಂದ ಕೊಟ್ಟನು.

ಲಡ್ಡುಕಂ ಸ್ವಸ್ತಿಕಾನಾಂ ಚ ಸಪ್ತಲಕ್ಷಂ ಸುಧೋಪಮಂ ।
ಗಣೇಶ್ವರಾಯ ಪ್ರದದೌ ಶರ್ಕರಾಶತರಾಶಿಕಂ ।
ಪಕ್ವರಂಭಾಫಲಾನಾಂ ಚ ದಶಲಕ್ಷಮಪೂಪಕಂ || ೫೫ ||

ಮಿಷ್ಟಾನ್ನಂ ಪಾಯಸಂ ರಮ್ಯಂ ಸ್ವಾದು ಸ್ವಸ್ತಿಕಪಿಷ್ಟಕಂ ।
ಘೃತಂ ಚ ನವನೀತಂ ಚ ದಧಿ ದುಗ್ಧಂ ಸುಧೋಪಮಂ || ೫೬ ||

ಧೂಪಂ ದೀಪಂ ಪಾರಿಜಾತಪುಷ್ಪಮಾಲ್ಯಮಭೀಪ್ಸಿತಂ ।
ಸುಗಂಧಿ ಚಂದನಂ ಗಂಧಂ ವಹ್ನಿಶುದ್ಧಾಂಶುಕಂ ದದೌ || ೫೭ ||

ಯಜ್ಞಂ ಚ ಕಾರಯಾಮಾಸ ಕೋಟಿಹೋಮಾನ್ವಿತಂ ಶುಭಂ ।
ಬ್ರಾಹ್ಮಣಾನ್ಭೋಜಯಾಮಾಸ ತುಷ್ಟಾವ ಸಗಣೇಶ್ವರಂ || ೫೮ ||

ವಾದ್ಯಂ ದಶವಿಧಂ ಚೈವ ವಾದಯಾಮಾಸ ತತ್ರ ವೈ ।
ಸೂರ್ಯಂ ಚ ಪೂಜಯಾಮಾಸ ಸಾಂಬಃ ಕುಷ್ಠಕ್ಷಯಾಯ ಚ || ೫೯ ||

---

೫೫. ಇನ್ನೂ ಅನೇಕ ವಿಧವಾದ ಉಂಡೆಗಳನ್ನೂ ಅಮೃತದಂತಿರುವ ಏಳು ಲಕ್ಷ ಕಡುಬುಗಳನ್ನೂ ನೂರಾರು ಸಕ್ಕರೆಯ ರಾಶಿಯನ್ನೂ ಗಣೇಶ್ವರನಿಗೆ ಕೊಟ್ಟನು. ಮತ್ತು ಕಳಿತ ಬಾಳೆಹಣ್ಣನ್ನೂ ಹತ್ತು ಲಕ್ಷ ಹೋಳಿಗೆಗಳನ್ನೂ ಕೊಟ್ಟನು.

೫೬. ರುಚಿಕರವಾದ ಅನ್ನವನ್ನೂ ಮನೋಹರವಾದ ಪಾಯಸವನ್ನೂ ರುಚಿಕರವಾದ ಹಿಟ್ಟಿನ ಕಡುಬನ್ನೂ ತುಪ್ಪವನ್ನೂ ಬೆಣ್ಣೆಯನ್ನೂ ಮೊಸರನ್ನೂ ಅಮೃತದಂತಿರುವ ಹಾಲನ್ನೂ ಕೊಟ್ಟನು.

೫೭. ಧೂಪವನ್ನೂ ದೀಪವನ್ನೂ ಹಿತಕರವಾದ ಪಾರಿಜಾತದ ಹೂವಿನ ಮಾಲಿಕೆಯನ್ನೂ ಸುವಾಸನೆಯಾದ ಗಂಧವನ್ನೂ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನೂ ಕೊಟ್ಟನು.

೫೮. ಕೋಟಿ ಹೋಮದಿಂದ ಕೂಡಿದ ಮಂಗಳಕರವಾದ ಯಜ್ಞವನ್ನು ಮಾಡಿಸಿದನು. ಬ್ರಾಹ್ಮಣ ಭೋಜನವನ್ನು ಮಾಡಿಸಿ ಗಣೇಶ್ವರನನ್ನು ಸ್ತೋತ್ರ ಮಾಡಿದನು.

೫೯. ಆ ಯಾಗದಲ್ಲಿ ಹತ್ತು ವಿಧವಾದ ವಾದ್ಯಗಳನ್ನು ಮಾಡಿಸಿದನು. ಸಾಂಬನೆಂಬುವವನ ಕುಷ್ಠರೋಗ ಪರಿಹಾರಕ್ಕಾಗಿ ಸೂರ್ಯನ ಪೂಜೆಯನ್ನು ಮಾಡಿಸಿದನು.

ಹವಿಷ್ಯಂ ಕಾರಯಾಮಾಸ ತಂ ಚ ಸಾಬಂ ಸಮಾತರಂ ।
ಪರಿಪೂರ್ಣಂ ವತ್ಸರಂ ಚಾಪ್ಯುಪಹಾರೈರನುತ್ತಮೈಃ ॥ ೬೦ ॥

ವರಂ ದದೌ ಚ ಸಾಂಬಾಯ ಸ್ತೋತ್ರಂ ಚ ಭಾಸ್ಕರಃ ಸ್ವಯಂ ॥ ೬೧ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೆ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಗಣೇಶಪೂಜಾನಾಮ
ತ್ರಯೋದಶಾಧಿಕಶತತಮೋಽಧ್ಯಾಯಃ.

---

೬೦–೬೧. ಆ ಸಾಂಬನನ್ನೂ ಅವನ ತಾಯಿಯನ್ನೂ ಹವಿಷ್ಯಾನ್ನನಿಯಮದಿಂದಿರುವಂತೆ ಮಾಡಿಸಿದನು. ಒಂದು ವರ್ಷದ ವರೆಗೂ ಶ್ರೇಷ್ಠವಾದ ಉಪಹಾರಗಳಿಂದ ಪೂಜೆ ಮಾಡಿಸಿ, ಸ್ತೋತ್ರ ಮಾಡಿಸಿದನು. ಆಗ ಸೂರ್ಯನು ಪ್ರತ್ಯಕ್ಷನಾಗಿ ಬಂದು ಸಾಂಬನಿಗೆ ವರವನ್ನು ಕೊಟ್ಟನು.

ಇಂತು ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣನಾರದಸಂವಾದದಲ್ಲಿ ಗಣೇಶಪೂಜೆಯೆಂಬ
ನೂರ ಹದಿಮೂರನೆಯ ಅಧ್ಯಾಯವು ಪೂರ್ತಿಯಾದುದು.



॥ ಓಂ॥

॥ ಓಂ ಶ್ರೀ ಗುರುಭ್ಯೋ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

॥ ಅಥ ಚತುರ್ದಶಾಧಿಕಶತತಮೋಽಧ್ಯಾಯಃ ॥

॥ ಶ್ರೀ ನಾರಾಯಣ ಉವಾಚ ॥

ಕೃಷ್ಣಪುತ್ರಶ್ಚ ಪ್ರದ್ಯುಮ್ನೋ ಮಹಾಬಲಪರಾಕ್ರಮಃ ।
ತತ್ಪುತ್ರೋಽಪ್ಯನಿರುದ್ಧಶ್ಚ ವಿಧಾತುರಂಶ ಏವ ಚ ॥ ೧ ॥

ಏಕದಾಸಾವನಿರುದ್ಧೋ ನವಯೌವನಸಂಯುತಃ ।
ಸುಪ್ತೋ ರಹಸಿ ಪರ್ಯಂಕೇ ಪುಷ್ಪಚಂದನಚರ್ಚಿತೇ ॥ ೨ ॥

ಸ್ವಪ್ನೇ ದದರ್ಶ ಯುವತೀಂ ಪುಷ್ಪೋದ್ಯಾನೇ ಸುಪುಷ್ಪಿತೇ ।
ಸುಗಂಧಿಪುಷ್ಪೇ ತತ್ಪ್ರೇಮಸ್ನಿಗ್ಧಚಂದನಚರ್ಚಿತೇ ॥ ೩ ॥

---

## ನೂರಹದಿನಾಲ್ಕನೆಯ ಅಧ್ಯಾಯವು.

೧. ಶ್ರೀನಾರಾಯಣನು ಹೇಳುತ್ತಾನೆ: ಕೃಷ್ಣನ ಮಗನಾದ ಪ್ರದ್ಯುಮ್ನನು ಮಹಾ ಬಲ ಪರಾಕ್ರಮವುಳ್ಳವನಾಗಿದ್ದನು. ಅವನ ಮಗನು ಅನಿರುದ್ಧನೆಂಬವನು. ಅವನು ಬ್ರಹ್ಮನ ಅಂಶದಿಂದ ಹುಟ್ಟಿದವನು.

೨. ಹೊಸ ಪ್ರಾಯದಿಂದ ಕೂಡಿದ ಈ ಅನಿರುದ್ಧನು ಒಂದಾನೊಂದು ದಿನ ಏಕಾಂತ ಸ್ಥಳದಲ್ಲಿ ಹೂವುಗಳಿಂದಲೂ ಗಂಧದಿಂದಲೂ ಅಲಂಕಾರ ಮಾಡಿರುವ ಹಾಸಿಗೆಯಲ್ಲಿ ಮಲಗಿದ್ದನು.

೩-೪. ಆಗ ಅವನು ಕನಸಿನಲ್ಲಿ ಒಂದಾನೊಂದು ಸುವಾಸನೆಯಾದ ಹೂವುಗಳಿಂದ ಕೂಡಿದ ಹೂದೋಟದಲ್ಲಿ ಅವಳ ಪ್ರೀತಿಯಂತೆ ಮನೋಹರವಾದ ಗಂಧವನ್ನು ಹಚ್ಚಿಕೊಂಡು ಮಲಗಿರುವ ಮುಗುಳುನಗೆಯನ್ನು ಬೀರುತ್ತಿರುವ ಮನೋಹರ

ಶಯಾನಾಂ ಸುಸ್ಮಿತಾಂ ರಮ್ಯಾಂ ನವಯೌವನಸಂಯುತಾಂ ।
ಅಮೂಲ್ಯರತ್ನನಿರ್ಮಾಣಭೂಷಣೇನ ವಿಭೂಷಿತಾಂ ॥ ೪ ॥

ಚಾರುಕೇಯೂರವಲಯಶಂಖಕಂಕಣಶೋಭಿತಾಂ ।
ಮಣಿಕುಂಡಲಯುಗ್ಮೇನ ಗಂಡಸ್ಥಲವಿರಾಜಿತಾಂ ॥ ೫ ॥

ಅತೀವ ಸೂಕ್ಷ್ಮವಸನಾಂ ಕ್ವಣನ್ಮಂಜೀರರಂಜಿತಾಂ ।
ಪಕ್ವಬಿಂಬಾಧರೋಷ್ಠೀಂ ಚ ಶರತ್ಕಮಲಲೋಚನಾಂ ॥ ೬ ॥

ಶರತ್ಪದ್ಮಪ್ರಭಾಮುಷ್ಟಕೋಟೀಂದುನಿಂದಿತಾನನಾಂ ।
ಮುಕ್ತಾಪಂಕ್ತಿಸಮಾಸಾದ್ಯದಂತಪಂಕ್ತಿಮನೋಹರಾಂ ॥ ೭ ॥

ತ್ರಿವಕ್ರಕಬರೀಭಾರಾಂ ಮಾಲತೀಮಾಲ್ಯಭೂಷಿತಾಂ ।
ಕಸ್ತೂರೀಕುಂಕುಮಾಲಕ್ತಸ್ನಿಗ್ಧಚಂದನಕಜ್ಜಲೈಃ ॥ ೮ ॥

---

ಳಾದ ಹೊಸ ಪ್ರಾಯದಿಂದ ಕೂಡಿದ ಬೆಲೆಬಾಳುವ ರತ್ನಗಳಿಂದ ಮಾಡಿರುವ ಆಭರಣಗಳಿಂದ ಅಲಂಕಾರ ಮಾಡಿಕೊಂಡಿರುವ ಸ್ತ್ರೀಯನ್ನು ನೋಡಿದನು.

೫–೭. ಮತ್ತು ಮನೋಹರವಾದ ಭುಜಕೀರ್ತಿ ಬಳೆ ಕಂಕಣ ಇವುಗಳಿಂದ ಪ್ರಕಾಶಮಾನಳಾದ, ರತ್ನ ಮಣಿಗಳಿಂದ ಮಾಡಿದ ಎರಡು ಕುಂಡಲಗಳಿಂದ ಕೂಡಿದ ಕಪೋಲಗಳಿಂದ ಪ್ರಕಾಶಮಾನಳಾದ ಅತ್ಯಂತ ನವಿರಾದ ಸೀರೆಯನ್ನು ಧರಿಸಿಕೊಂಡಿರುವ, ಧ್ವನಿಮಾಡುತ್ತಿರುವ ಕಾಲ್ಕಡಗಗಳಿಂದ ಅಲಂಕೃತವಾದ, ಮಾಗಿದ ತೊಂಡೆಹಣ್ಣಿನಂತಿರುವ ಕೆಳತುಟಿಯುಳ್ಳ, ಶರದೃತುವಿನ ಕಮಲದಂತಿರುವ ಕಣ್ಣುಳ್ಳ ಶರತ್ಕಮಲದ ಕಾಂತಿಯನ್ನಪಹರಿಸಿದ ಕೋಟಿ ಚಂದ್ರರಿಗಿಂತಲೂ ಮಿಗಿಲಾದ ಮುಖವುಳ್ಳ, ಮುತ್ತಿನ ಸಾಲುಗಳಂತೆ ಪ್ರಕಾಶಮಾನವಾದ ಹಲ್ಲಿನ ಸಾಲಿನಿಂದ ಮನೋಹರಳಾದ ಯುವತಿಯನ್ನು ಕಂಡನು.

೮–೧೦. ಮತ್ತು ಮೂರು ಕಡೆ ವಕ್ರವಾಗಿರುವ ಜಡೆಯುಳ್ಳ ಮಾಲತೀ ಹೂವಿನ ದಂಡೆಯಿಂದ ಅಲಂಕರಿಸಿಕೊಂಡಿರುವ, ಕಸ್ತೂರಿ, ಕೇಸರಿ, ಅರಗಿನ ರಸ, ಗಂಧ, ಕಾಡಿಗೆ ಇವುಗಳಿಂದ ಅಲಂಕರಿಸಿಕೊಂಡಿರುವ, ಮಕರಿಕಾಪತ್ರಗಳಿಂದ

ಪತ್ರಾವಲೀವಿರಚಿತಸುಕಪೋಲಸ್ಥಲೋಜ್ಜ್ವಲಾಂ ।
ದಾಡಿಮೀಕುಸುಮಾಕಾರಸಿಂಧೂರಬಿಂದುಭೂಷಿತಾಂ ॥ ೯ ॥

ಶ್ರೀರಾಮಕದಲೀಸ್ತಂಭನಿಂದಿತೋರುಸ್ಥಲೋಜ್ಜ್ವಲಾಂ ।
ಅತ್ಯುಚ್ಚೈರ್ವರ್ತುಲಾಕಾರಸ್ತನಯುಗ್ಮವಿಭೂಷಿತಾಂ ॥ ೧೦ ॥

ನಿತಂಬಭಾರನಮ್ರಾಂ ಚ ಕಾಮಬಾಣಪ್ರಪೀಡಿತಾಂ ।
ಕಾಮುಕೀಂ ಕಮನೀಯಾಂ ಚ ಪಶ್ಯಂತೀಂ ವಕ್ರಚಕ್ಷುಷಾ ॥ ೧೧ ॥

ಕುಂಕುಮಾಲಕ್ತರಕ್ತಾಕ್ತಪಾದಪದ್ಮವಿರಾಜಿತಾಂ ।
ವಾಯುಪ್ರೇರಣವಸ್ತ್ರೇಣ ವ್ಯಕ್ತಗುಪ್ತಸ್ಥಲೋಜ್ಜ್ವಲಾಂ ॥ ೧೨ ॥

ತಾಂ ದೃಷ್ಟ್ವಾ ಕಾಮಪುತ್ರಶ್ಚ ಕಾಮೋನ್ಮಥಿತಮಾನಸಃ ।
ಉವಾಚ ಮಧುರಂ ಮತ್ತಃ ಕಾಮಮತ್ತಾಂ ಸುಕೋಮಲಾಂ ॥ ೧೩ ॥

---

ಕೂಡಿರುವ ಸುಂದರವಾದ ಕಪೋಲಪ್ರದೇಶದಿಂದ ಬೆಳಗುತ್ತಿರುವ, ದಾಳಿಂಬೆಯ ಹೂವಿನ ಆಕಾರವಾಗಿ ಇಟ್ಟುಕೊಂಡಿರುವ ಚಂದ್ರದ ಬಿಂದುವಿನಿಂದ ಅಲಂಕಾರ ಮಾಡಿಕೊಂಡಿರುವ, ಬಿಳುಪಾದ ಬಾಳೆಯ ಕಂಬವನ್ನು ಹೀಯಾಳಿಸುತ್ತಿರುವ ತೊಡೆಗಳಿಂದ ಪ್ರಕಾಶಮಾನಳಾದ, ಅತ್ಯಂತ ಮೇಲಾದ ಗುಂಡಾಗಿರುವ ಸ್ತನಗಳೆರಡರಿಂದ ಶೋಭಿಸುತ್ತಿರುವ ಯುವತಿಯನ್ನು ಕಂಡನು.

೧೧–೧೨. ಕಟಿಪಶ್ಚಾದ್ಭಾಗದ ಭಾರದಿಂದ ಬಾಗಿರುವ, ಮನ್ಮಥಬಾಣದಿಂದ ಪೀಡಿತಳಾದ ಕಾಮುಕಿಯೂ ಮನೋಹರಳೂ ಆದ, ಓರೆಗಣ್ಣಿನಿಂದ ನೋಡುತ್ತಿರುವ ಕೇಸರಿ ಮತ್ತು ಅರಗಿನ ರಸದಿಂದ ಬಳಿಯಲ್ಪಟ್ಟ ಪಾದಕಮಲಗಳಿಂದ ಕಂಗೊಳಿಸುತ್ತಿರುವ, ಗಾಳಿಯಿಂದ ಹಾರಿಸಲ್ಪಟ್ಟ ಬಟ್ಟೆಯಿಂದ ಕಾಣುತ್ತಿರುವ ಗುಹ್ಯಪ್ರದೇಶದಿಂದ ಕಂಗೊಳಿಸುತ್ತಿರುವ ಯುವತಿಯನ್ನು ಕಂಡನು.

೧೩–೧೪. ಕಾಮಪುತ್ರನು ಆ ಯುವತಿಯನ್ನು ನೋಡಿ ಕಾಮದಿಂದ ಕದಡಿದ ಮನಸ್ಸುಳ್ಳವನಾಗಿ, ಮದದಿಂದ ಕೂಡಿದವನಾಗಿ, ಕಾಮದಿಂದ ಮದಿಸಿದ ಅತ್ಯಂತ ಕೋಮಲಳಾದ, ಮನೋಹರವಾದ ಸಂಪಿಗೆಯ ಬಣ್ಣದ ಕಾಂತಿಯಿಂದ

ಚಾರುಚಂಪಕವರ್ಣಾಭಾಂ ಕಾಮೇನ ಪುಲಕಾನ್ವಿತಾಂ ।
ಅತಿಪ್ರೌಢಾಂ ನವೋಢಾಂ ಚ ಶೃಂಗಾರೇಚ್ಛಾಸುಚಂಚಲಾಂ　　॥ ೧೪ ॥

॥ ಅನಿರುದ್ಧ ಉವಾಚ ॥

ಕಿಂ ದೇವೀ ಕಿಂ ಚ ಗಾಂಧರ್ವೀ ಕಾ ತ್ವಂ ಕಾಮಿನಿ ಕಾನನೇ ।
ಕಸ್ಯ ಸ್ತ್ರೀ ಕಸ್ಯ ಕನ್ಯಾ ವಾ ಕಂ ವಾ ವಾಂಛಸಿ ಸುಂದರಿ　　॥ ೧೫ ॥

ತ್ರೈಲೋಕ್ಯಾತುಲಸೌಂದರ್ಯಾ ಮುನಿಮಾನಸಮೋಹಿನೀ ।
ನ ಬಿಭೇಷಿ ಕಥಂ ಬ್ರೂಹಿ ಸ್ವಯಮೇಕಾಕಿನೀ ಚ ಮಾಂ　　॥ ೧೬ ॥

ಅಹಂ ತ್ರೈಲೋಕ್ಯನಾಥಸ್ಯ ಪೌತ್ರಃ ಕಾಮಾತ್ಮಜೋಽಧುನಾ ।
ಕಾಂತೇಽಹಮನಿರುದ್ಧಶ್ಚ ನವೀನಯೌವನಾಹತಃ　　॥ ೧೭ ॥

ಕಮನೀಯಶ್ಚ ಕಾಮೀ ಚ ಕಾಮಶಾಸ್ತ್ರವಿಶಾರದಃ ।
ಕಾಮುಕೀಕಾಮನಾಂ ಪೂರ್ಣಾಂ ಕರ್ತುಮೇವೇಶ್ವರಃ ಸ್ವಯಂ ॥ ೧೮ ॥

---

ಕೂಡಿದ, ಕಾಮದಿಂದ ನವಿರೆದ್ದ ಮೈಯಿಂದ, ಕೂಡಿದ ಅತ್ಯಂತ ಪ್ರೌಢಳಾದ ಮತ್ತು ನವೋಢಳಾದ, ಶೃಂಗಾರಕ್ರೀಡೆಯ ಇಚ್ಛೆಯಿಂದ ಬಹಳ ಚಪಲಳಾದ ಆ ಯುವತಿಯನ್ನು ಕುರಿತು ಮೃದುಮನೋಹರವಾಗಿ ಮಾತನಾಡಿದನು.

೧೫–೧೬. ಅನಿರುದ್ಧನು ಹೇಳುತ್ತಾನೆ: ಎಲೈ ಕಾಮಿನಿಯೇ! ಈ ಕಾಡಿನಲ್ಲಿರುವ ನೀನು ಯಾರು? ದೇವಸ್ತ್ರೀಯೋ? ಗಂಧರ್ವಳೋ? ಯಾರ ಮಗಳು? ಯಾರ ಹೆಂಡತಿ? ಯಾವನನ್ನಪೇಕ್ಷಿಸುತ್ತಿರುವೆ? ಎಲೈ ಸುಂದರಿಯೇ! ಮೂರು ಲೋಕದಲ್ಲಿಯೂ ಎಣೆಯಿಲ್ಲದ ಸೌಂದರ್ಯವುಳ್ಳವಳಾಗಿ ಮುನಿಗಳ ಮನಸ್ಸನ್ನೂ ಮೋಹಿಸುವವಳಾದ ನೀನು ಒಬ್ಬಳೇ ಇದ್ದರೂ ಭಯವಿಲ್ಲದವಳಾಗಿರಲು ಕಾರಣವೇನು? ನನಗೆ ಹೇಳು.

೧೭–೧೮. ನಾನು ಮೂರು ಲೋಕಗಳಿಗೊಡೆಯನಾದ ಹರಿಯ ಮೊಮ್ಮಗನೂ ಕಾಮನ ಮಗನೂ ಆಗಿರುವೆನು. ಎಲೈ ಕಾಂತೆಯೇ! ನಾನು ಹೊಸ ಪ್ರಾಯದಿಂದ ಕೂಡಿದ ಅನಿರುದ್ಧನೆಂಬವನು. ಸುಂದರನೂ ಕಾಮಿಯೂ ಕಾಮಶಾಸ್ತ್ರವನ್ನು ಚೆನ್ನಾಗಿ ಬಲ್ಲವನೂ ಆದ ನಾನು ಕಾಮುಕಿಯ ಇಚ್ಛೆಯನ್ನು ಪೂರ್ತಿಗೊಳಿಸಲು ಸಮರ್ಥನಾಗಿರುವೆನು.

ಮಾಂ ಭಜಸ್ವ ಸುಶೀಲೇ ತ್ವಂ ಸುವೇಷಂ ಚ ಸುಶೀಲಕಂ ।
ರತಿಶೂರಂ ರತಿರಸಪ್ರಾಜ್ಞಂ ರತಿರಸಪ್ರಿಯಂ ॥ ೧೯ ॥

ರತಿಪುತ್ರಂ ರತಿರಸಂ ಪ್ರಮತ್ತಂ ರಸಿಕಂ ಪ್ರಿಯೇ ।
ಯುವಾನಂ ವ್ಯಾಧಿಹೀನಂ ಚ ಕಾಮುಕಂ ಕಾಮುಕೀಚ್ಛತಿ ॥ ೨೦ ॥

ವಿದಗ್ಧಾಸು ವಿದಗ್ಧಂ ಚ ಕಾಂತಮಾಯಾತಿ ಕಾಮತಃ ।
ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ಭವೇತ್ ॥ ೨೧ ॥

ಪ್ರಚ್ಛಾದ್ಯ ಲೋಚನಾಸ್ಯಂ ಚ ನವಸಂಗಮಲಜ್ಜಿತಾ ।
ವಿಲೋಕಯಂತೀ ವಕ್ರಾಕ್ಷಿಕೋಣೇನ ತಮುವಾಚ ಸಾ ॥ ೨೨ ॥

॥ ಕಾಮಿನ್ಯುವಾಚ ॥

ಕಾಮುಕಃ ಕಾಮಪುತ್ರೋಽಸಿ ಕಾಮೇನ ವ್ಯಾಕುಲೋಽಧುನಾ ।
ಭವಾಂಶ್ಚೇತ್ಕಾಮುಕೀಯೋಗ್ಯೋ ನ ಕಾಮಶ್ಚಿಂತಿತಃ ಕಥಂ ॥ ೨೩ ॥

---

೧೯-೨೦. ಎಲೈ ಒಳ್ಳೆಯ ಸ್ವಭಾವದವಳೇ! ಉತ್ತಮವಾದ ಅಲಂಕಾರವುಳ್ಳ ಉತ್ತಮವಾದ ಸ್ವಭಾವವುಳ್ಳ ರತಿಕ್ರೀಡೆಯಲ್ಲಿ ಶೂರನೂ ರತಿರಸ ವಿಷಯದಲ್ಲಿ ನಿಪುಣನೂ ರತಿಕ್ರೀಡೆಯಲ್ಲಿ ಪ್ರೀತಿಯುಳ್ಳವನೂ ರತಿಯ ಮಗನೂ ರತಿಸೌಖ್ಯವನ್ನು ಸವಿಯುವವನೂ ಯುವಕನೂ ಮದಿಸಿದವನೂ ರಸಿಕನೂ ಆದ ನನ್ನನ್ನು ಹೊಂದುವವಳಾಗು. ಎಲೈ ಪ್ರೀತಿಪಾತ್ರಳೇ! ಲೋಕದಲ್ಲಿ ಕಾಮುಕಿಯು ಯುವಕನೂ ರೋಗವಿಲ್ಲದವನೂ ಕಾಮುಕನೂ ಆದ ಪುರುಷನನ್ನು ಅಪೇಕ್ಷಿಸುತ್ತಾಳೆ.

೨೧. ವಿಲಾಸಿನಿಯಾದವಳು ತನಗಿಂತಲೂ ಅತ್ಯಂತ ವಿಲಾಸವಂತನಾದ ಪ್ರಿಯನನ್ನು ಕಾಮವಶದಿಂದ ಸೇರುತ್ತಾಳೆ. ವಿಲಾಸವತಿಯು ವಿಲಾಸವಂತನೊಡನೆ ಸೇರಿದರೆ ಅದು ಉತ್ತಮ ಗುಣವನ್ನುಂಟುಮಾಡುತ್ತದೆ ಎಂದು ಹೇಳಿದನು.

೨೨. ಆ ಯುವತಿಯು ಹೊಸದಾಗಿ ಬಂದು ನಿಂತಿರುವವನನ್ನು ನೋಡಿ ನಾಚಿಕೆಗೊಂಡವಳಾಗಿ ಮುಖವನ್ನೂ ಕಣ್ಣನ್ನೂ ಮುಚ್ಚಿಕೊಂಡು ಓರೆಗಣ್ಣಿನ ನೋಟದಿಂದ ಅವನನ್ನು ನೋಡುತ್ತ ಇಂತೆಂದಳು.

೨೩. ಕಾಮಿನಿಯು ಹೇಳುತ್ತಾಳೆ: ನೀನು ಕಾಮುಕನೂ ಕಾಮನ ಮಗನೂ ಆಗಿರುವೆ. ಇಂದು ನೀನು ಕಾಮದಿಂದ ವ್ಯಾಕುಲನಾಗಿರುವೆ. ಕಾಮುಕನಾದ ನೀನು ಯೋಗ್ಯನಾಗಿರುವುದಾದರೆ ಕಾಮನು ಏಕೆ ಇದನ್ನು ಯೋಚಿಸಲಿಲ್ಲ?

ಪೌತ್ರಸ್ತ್ರೈಲೋಕ್ಯನಾಥಸ್ಯ ಸ್ವತಃ ಸಂಭಾವಿತಸ್ಯ ಚ ।
ಸ್ವಯಂ ಯೋಗ್ಯೋ ಯೋಗ್ಯಪುತ್ರೋ ವಿವಾಹಂ ನ ಕಥಂ ಕುರು ॥೨೪॥

ವಿವಾಹಿತಾ ಯಜ್ಞಪತ್ನೀ ಸಾ ಚ ಪುಣ್ಯವ್ರತಾ ಸತೀ ।
ನಿಶ್ಚಲಾ ಸತತಂ ಸಾಧ್ವೀ ವರ್ಧಿನೀ ಸಂಗಿನೀ ಸದಾ ॥ ೨೫ ॥

ಭಯಪ್ರೀತಿದಾನಸಾಧ್ಯಾ ಗುಪ್ತಪತ್ನೀ ತ್ವನಿಶ್ಚಲಾ ।
ನೈಮಿತ್ತಿಕಾ ನ ನಿತ್ಯಾ ಸಾ ಸಾ ಚ ವೇದವಿವರ್ಜಿತಾ ॥ ೨೬ ॥

ಪರಂ ನರಕಸೋಪಾನಾ ಪರತ್ರೇಹಾಯಶಸ್ಕರಾ ।
ಸಾಧುಸ್ತತ್ರ ನ ಹಿ ರತೋ ವಂಶಜೋ ವೈಷ್ಣವೋ ಯದಿ ॥ ೨೭ ॥

ಯದ್ಧಿಪೂರ್ವಂ ಭವೇದ್ಭ್ರಾಂತೋ ನಿವೃತ್ತಃ ಸಾಧುಸಂಗಮಃ ।
ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ ॥ ೨೮ ॥

---

೨೪. ನೀನು ಮೂರು ಲೋಕಗಳೊಡೆಯನಾದ ಮತ್ತು ಗೌರವಯುಕ್ತನಾದ ಶ್ರೀಹರಿಯ ಮೊಮ್ಮಗನಾಗಿರುವೆ. ಯೋಗ್ಯನಾದ ನಿನ್ನ ತಂದೆಯು ಯೋಗ್ಯನಾದ ಮಗನಿಗೆ ವಿವಾಹವನ್ನೇಕೆ ಮಾಡುವುದಿಲ್ಲ ?

೨೫. ಲೋಕದಲ್ಲಿ ವಿವಾಹ ಮಾಡಿಕೊಂಡ ಪತ್ನಿಯು ಯಜ್ಞಪತ್ನಿಯೆನಿಸಿ ಕೊಳ್ಳುವಳು. ಅವಳು ಪುಣ್ಯವಂತಳೂ ಪತಿವ್ರತೆಯೂ ಯಾವಾಗಲೂ ಚಂಚಲ ವಾಗದ ಮನಸ್ಸುಳ್ಳವಳೂ ಸಕಲ ಧರ್ಮಕಾರ್ಯಗಳನ್ನು ಮಾಡುವವಳೂ ಕುಲವನ್ನು ವೃದ್ಧಿಪಡಿಸುವವಳೂ ಯಾವಾಗಲೂ ಪತಿಯೊಡನೆ ಆಸಕ್ತಳೂ ಆಗಿರುತ್ತಾಳೆ.

೨೬. ಗುಪ್ತಳಾದ ಹೆಂಡತಿಯು ಯಾವಾಗಲೂ ಚಂಚಲಳು. ಮತ್ತು ಹೆದರಿಕೆಯಿಂದ ಪ್ರೀತಿಯನ್ನು ತೋರಿಸತಕ್ಕವಳು. ಅವಳು ಯಾವಾಗಲೂ ಪತ್ನಿ ಯಾಗಿರಲಾರಳು. ಯಾವುದೋ ಕಾರಣದಿಂದ ಪತ್ನಿಯಾಗಿರುವವಳು. ಅಂಥವಳು ವೇದೋಕ್ತವಾದ ಕರ್ಮಗಳಿಗೆ ಅರ್ಹಳಲ್ಲ.

೨೭. ಮತ್ತು ನರಕಕ್ಕೆ ಮೆಟ್ಟಿಲಾಗುತ್ತಾಳೆ. ಅಲ್ಲದೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅಪಕೀರ್ತಿಯನ್ನುಂಟುಮಾಡುತ್ತಾಳೆ. ಉತ್ತಮ ಕುಲದಲ್ಲಿ ಹುಟ್ಟಿದ ವಿಷ್ಣುಭಕ್ತನಾದವನು ಅಂಥಾ ಸ್ತ್ರೀಯಲ್ಲಿ ಆಸಕ್ತನಾಗುವುದಿಲ್ಲ.

೨೮. ಸಂಪೂರ್ಣವಾಗಿ ಭ್ರಾಂತನಾದ ಪಕ್ಷದಲ್ಲಿ ಸತ್ಪುರುಷರೊಂದಿಗೆ ಸೇರು ವುದರಿಂದ ಭ್ರಾಂತಿಯು ನಾಶವಾಗುತ್ತದೆ. ಹೀಗೆ ಪ್ರಾಣಿಗಳಿಗೆ ಪ್ರವೃತ್ತಿ ಮಾರ್ಗ ಎಂಬುದುಂಟಾಗುತ್ತದೆ. ನಿವೃತ್ತಿಮಾರ್ಗವಾದರೋ ಉತ್ತಮ ಫಲವನ್ನುಂಟು ಮಾಡುತ್ತದೆ.

ಪ್ರಾಯಶ್ಚಿತ್ತೀ ಪುನರ್ಲಿಪ್ತೋ ನಿವೃತ್ತಃ ಪಾತಕೀ ಯದಿ ।
ಉಪಹಾಸ್ಯೋ ಭುವಿ ಭವೇತ್ಸರ್ವಂ ಕುಂಜರಶೌಚವತ್ ॥ ೨೯ ॥

ಸುಶೀಲಾ ಸುಂದರೀ ಶಾಂತಾ ಧರ್ಮಪತ್ನೀ ಪ್ರಶಂಸಿತಾ ।
ಪತಿವ್ರತಾ ಸುಸಾಧ್ವ್ಯಾ ಸಾ ಶಶ್ವತ್ಸುಪ್ರಿಯವಾದಿನೀ ॥ ೩೦ ॥

ಕೋಮಲಾಂಗೀ ವಿದಗ್ಧಾ ಚ ಶ್ಯಾಮಾ ರತಿಸುಖಪ್ರದಾ ।
ಏವಂಭೂತಾಂ ಪರಿತ್ಯಜ್ಯ ವೈಷ್ಣವಸ್ತಪಸೇ ವ್ರಜೇತ್ ॥ ೩೧ ॥

ಸಾ ಚೇತ್ಪರಿಣತಾ ಸಾಧ್ವೀ ಶಾಂತಾ ಪುತ್ರವತೀ ಯದಾ ।
ಅನ್ಯಥಾ ಚ ವೃಥಾ ಸರ್ವಂ ತಪಸಸ್ಖಲನಂ ಭವೇತ್ ॥ ೩೨ ॥

ಅಸಾಧುಶ್ಚ ಕುವಂಶಶ್ಚೇತ್ಪರನಾರೀಂ ಪ್ರಯಾತಿ ಚೇತ್ ।
ಸ ಯಾತಿ ನರಕಂ ಘೋರಂ ಪಿತೃಭಿಃ ಸಪ್ತಭಿಃ ಸಹ ॥ ೩೩ ॥

---

೨೯. ಪ್ರಾಯಶ್ಚಿತ್ತವನ್ನು ಮಾಡಿಕೊಂಡು ನಿವೃತ್ತನಾದವನು ಮತ್ತೆ ಸಂಗದಿಂದ ಪಾತಕಿಯಾದರೆ ಅವನು ಹಾಸ್ಯಕ್ಕೆ ಒಳಗಾಗುತ್ತಾನೆ. ಆನೆಯ ಸ್ನಾನದಂತೆ ಅವನ ಕೆಲಸಗಳೆಲ್ಲವೂ ವ್ಯರ್ಥವು.

೩೦–೩೨. ಒಳ್ಳೆಯ ಸ್ವಭಾವದವಳೂ ಸುಂದರಿಯೂ ಶಾಂತಸ್ವಭಾವದವಳೂ ಆದ ಧರ್ಮಪತ್ನಿಯು ಲೋಕದಲ್ಲಿ ಹೊಗಳಲ್ಪಡುತ್ತಾಳೆ. ಅಂಥವಳು ಪತಿವ್ರತೆಯೂ ಸಕಲ ಕೆಲಸಗಳಿಗೂ ಸಾಧಕಳೂ ಯಾವಾಗಲೂ ಹಿತವಾದ ಮಾತನ್ನಾಡುವವಳೂ ಮೃದುವಾದ ಶರೀರವುಳ್ಳವಳೂ ಜಾಣೆಯೂ ಸುಂದರಿಯೂ ರತಿಸುಖವನ್ನುಂಟು ಮಾಡುವವಳೂ ಆಗಿರುವಳು. ಇಂಥಾವಳನ್ನು ವೈಷ್ಣವನಾದವನು, ಅವಳು ವಯಸ್ಸಾದವಳೂ ಪತಿವ್ರತೆಯೂ ಶಾಂತಸ್ವಭಾವದವಳೂ ಮಕ್ಕಳುಳ್ಳವಳೂ ಆಗಿದ್ದರೆ ಬಿಟ್ಟು ತಪಸ್ಸಿಗೆ ಹೊರಡಬಹುದು. ಹಾಗಿಲ್ಲದಿದ್ದರೆ ಅವನ ತಪಸ್ಸು ನಾಶವಾಗುತ್ತದೆ. ಅವನ ಸಕಲ ಕರ್ಮಗಳೂ ವ್ಯರ್ಥವಾಗುತ್ತವೆ.

೩೩. ದುಷ್ಟನಾಗಿ ಕೆಟ್ಟವಂಶದಲ್ಲಿ ಹುಟ್ಟಿದವನು ಪರಸ್ತ್ರೀಸಂಗತನಾದ ಪಕ್ಷದಲ್ಲಿ ಅಂಥವನು ತನ್ನ ಏಳು ಪಿತೃಗಳೊಡನೆ ಭಯಂಕರವಾದ ನರಕವನ್ನು ಹೊಂದುತ್ತಾನೆ.

ಅಹಮೂಷಾ ಬಾಣಕನ್ಯಾ ಬಾಣಃ ಶಂಕರಕಿಂಕರಃ ।
ರಣೇ ತ್ರೈಲೋಕ್ಯವಿಜಯೀ ಶಂಕರೋ ಜಗತಾಂಪತಿಃ ॥ ೩೪ ॥

ನಸ್ವತಂತ್ರಾ ಪರಾಧೀನಾ ತ್ರಿಷು ಕಾಲೇಷು ಕಾಮಿನೀ ।
ಪುಂಶ್ಚಲೀ ಯಾ ಸ್ವತಂತ್ರಾ ಸಾಪ್ಯಸದ್ವಂಶಪ್ರಸೂತಿಕಾ ॥ ೩೫ ॥

ಪಿತಾ ದದಾತಿ ಕನ್ಯಾಂ ತಾಂ ಸುಯೋಗ್ಯಾಯ ವರಾಯ ಚ ।
ಕನ್ಯಾ ವರಂ ನ ಯಾಚೇತ ಧರ್ಮ ಏಷ ಸನಾತನಃ ॥ ೩೬ ॥

ತ್ವಂ ಚ ಯೋಗ್ಯೋಽಸಿ ಯೋಗ್ಯಾಹಂ ಮಾಮಿಚ್ಛಸಿ ಯದಿ ಪ್ರಭೋ ।
ಬಾಣಂ ಪ್ರಾರ್ಥಯ ಶಂಭುಂ ವಾಪ್ಯಥವಾ ಪಾರ್ವತೀಂ ಸತೀಂ ॥ ೩೭ ॥

ಇತ್ಯುಕ್ತ್ವಾ ಸುಂದರೀ ಸಾಧ್ವೀ ಸಾಂತರ್ಧಾನಾ ಬಭೂವ ಹ ।
ನಿದ್ರಾಂ ತತ್ಯಾಜ ಸಹಸಾ ಕಾಮೀ ಕಾಮಾತ್ಮಜೋ ಮುನೇ ॥ ೩೮ ॥

---

೩೪. ನಾನು ಬಾಣನ ಮಗಳಾದ ಉಷೆಯು. ಬಾಣನು ಶಂಕರನ ಸೇವಕನೂ ಮೂರು ಲೋಕಗಳನ್ನು ಗೆದ್ದವನೂ ಆಗಿರುತ್ತಾನೆ. ಶಂಕರನು ಸಕಲ ಲೋಕಗಳಿಗೂ ಒಡೆಯನು.

೩೫. ಮೂರು ಲೋಕಗಳಲ್ಲಿಯೂ ಸ್ತ್ರೀಯು ಸ್ವತಂತ್ರಳಲ್ಲ. ಪರಾಧೀನಳು. ಯಾವ ಸ್ತ್ರೀಯು ಕುಲಟೆಯಾಗಿರುತ್ತಾಳೋ ಅವಳು ಸ್ವತಂತ್ರಳು. ಆದರೆ ಅಂಥವಳು ಹೀನಕುಲದಲ್ಲಿ ಹುಟ್ಟಿದವಳಾಗಿರುತ್ತಾಳೆ.

೩೬. ತಂದೆಯು ಕನ್ಯೆಯನ್ನು ಯೋಗ್ಯನಾದ ವರನಿಗೆ ಕೊಡುತ್ತಾನೆ. ಕನ್ಯೆಯು ನನಗೆ ಇಂಥಾ ವರನೇ ಬೇಕು ಅಥವಾ ಇವನೇ ವರನಾಗಬೇಕು ಎಂದು ಅಪೇಕ್ಷಿಸಬಾರದು. ಇದು ಸನಾತನ ಧರ್ಮವು.

೩೭. ನೀನು ಯೋಗ್ಯನಾಗಿರುವೆ. ನಾನೂ ವಿವಾಹಯೋಗ್ಯಳಾಗಿರುವೆನು. ಎಲೈ ಪ್ರಭುವೇ! ನೀನು ನನ್ನನ್ನು ಹೊಂದಬೇಕೆಂಬ ಆಶೆಯಿರುವುದಾದರೆ ಬಾಣನನ್ನು ಪ್ರಾರ್ಥಿಸು. ಅಥವಾ ಈಶ್ವರನನ್ನಾಗಲೀ ಸತಿಯಾದ ಪಾರ್ವತಿಯನ್ನಾಗಲೀ ಪ್ರಾರ್ಥಿಸುವವನಾಗು.

೩೮. ಎಲೈ ಮುನಿಯೇ! ಸಾಧ್ವಿಯೂ ಸುಂದರಿಯೂ ಆದ ಆ ಬಾಣಕನ್ಯೆಯು ಇಷ್ಟು ಮಾತುಗಳನ್ನಾಡಿ ಕಣ್ಮರೆಯಾದಳು. ಕಾಮುಕನಾದಾ ಕಾಮಪುತ್ರನು ಕೂಡಲೆ ನಿದ್ರೆಯಿಂದೆಚ್ಚೆತ್ತನು.

ಬುದ್ಧ್ವಾ ಸ್ವಪ್ನಂ ಸ ವಿಜ್ಞಾಯ ಕಾಮೇನ ವ್ಯಥಿತಾಂತರಃ ।
ಬಭೂವ ವ್ಯಾಕುಲೋಽಶಾಂತೋ ನ ದೃಷ್ಟ್ವಾ ಪ್ರಾಣವಲ್ಲಭಾಂ ॥ ೩೯ ॥

ತ್ಯಕ್ತ್ವಾಹಾರಮನಿದ್ರಶ್ಚ ಪ್ರಮತ್ತಶ್ಚ ಕೃಶೋದರಃ ।
ಕ್ಷಣಂ ತಿಷ್ಠತಿ ಶೇತೇ ಚ ಕ್ಷಣಂ ರಹಸಿ ರೋದಿತಿ ॥ ೪೦ ॥

ಪುತ್ರಂ ದೃಷ್ಟ್ವಾತು ಕ್ರಂದಂತಂ ದೇವಕೀ ರುಕ್ಮಿಣೀ ರತಿಃ
ಅನ್ಯಾಶ್ಚ ಯೋಷಿತಃ ಸರ್ವಾಃ ಕಥಯಾಮಾಸುರೀಶ್ವರಂ ॥ ೪೧ ॥

ತಾಸಾಂ ಚ ವಚನಂ ಶ್ರುತ್ವಾ ಪ್ರಹಸ್ಯ ಮಧುಸೂದನಃ ।
ಉವಾಚ ಸರ್ವತತ್ವಜ್ಞಃ ಕೃಷ್ಣಶ್ಚ ಪೂರ್ಣಮಾನಸಃ ॥ ೪೨ ॥

॥ ಶ್ರೀ ಭಗವಾನುವಾಚ ॥

ಕಾಮಾತುರಾ ಬಾಣಕನ್ಯಾ ರತಿಂ ದೃಷ್ಟ್ವಾ ಶಿವೇಶಯೋಃ ।
ವರಂ ಸಂಪ್ರಾಪ ದುರ್ಗಾಯಾ ವ್ಯಾಕುಲಾ ಮದನಾಸ್ತ್ರತಃ ॥ ೪೩ ॥

---

೩೯. ತನಗಾದ ಸ್ವಪ್ನವನ್ನು ಯೋಚಿಸಿಕೊಂಡು, ಕಾಮನಿಂದ ವ್ಯಥೆಗೊಳಿಸಲ್ಪಟ್ಟ ಮನಸ್ಸುಳ್ಳವನಾಗಿ ತನ್ನ ಪ್ರಾಣಕಾಂತೆಯನ್ನು ಕಾಣದೆ ಸಮಾಧಾನವಿಲ್ಲದವನೂ ವ್ಯಥೆಗೊಂಡವನೂ ಆದನು.

೪೦. ಆಹಾರವನ್ನು ಬಿಟ್ಟು ನಿದ್ರೆ ಮಾಡದೆ ಹುಚ್ಚನಾಗಿ ಕೃಶವಾದ ಹೊಟ್ಟೆಯುಳ್ಳವನಾಗಿ ಕ್ಷಣಕಾಲ ನಿಂತಿರುವುದು, ಮತ್ತೊಂದು ಕ್ಷಣಕಾಲ ಮಲಗಿರುವುದು ಇನ್ನೊಂದು ಕ್ಷಣಕಾಲ ಯಾರೂ ಇಲ್ಲದ ಪ್ರದೇಶದಲ್ಲಿದ್ದುಕೊಂಡು ಅಳುವುದು ಈ ರೀತಿಯಾಗಿ ಮಾಡುತ್ತಿದ್ದನು.

೪೧. ಹೀಗೆ ಅಳುತ್ತಿರುವ ಕುಮಾರನನ್ನು ದೇವಕಿಯೂ ರುಕ್ಮಿಣಿಯೂ ರತಿದೇವಿಯೂ ಇನ್ನೂ ಅನೇಕ ಸ್ತ್ರೀಯರೆಲ್ಲರೂ ನೋಡಿದವರಾಗಿ ಪರಮಾತ್ಮನಾದ ಹರಿಗೆ ಈ ಸಮಾಚಾರವನ್ನು ತಿಳಿಸಿದರು.

೪೨. ಮಧುಸೂದನನಾದ ಕೃಷ್ಣನು ಅವರುಗಳಾಡಿದ ಮಾತನ್ನು ಕೇಳಿ ನಕ್ಕು ಸಕಲತತ್ವಗಳನ್ನೂ ಬಲ್ಲವನಾದುದರಿಂದ ತುಂಬಿದ ಮನಸ್ಸುಳ್ಳವನಾಗಿ ಹೇಳಿದನು.

೪೩. ಶ್ರೀ ಭಗವಂತನು ಹೇಳುತ್ತಾನೆ :— ಬಾಣನ ಮಗಳು ಶಿವಪಾರ್ವತಿಯರ ರತಿಕ್ರೀಡೆಯನ್ನು ನೋಡಿ ಕಾಮಾತುರಳಾಗಿ ಕಾಮನಬಾಣದಿಂದ ಪೀಡಿತಳಾಗಿ ದುರ್ಗಾದೇವಿಯಿಂದ ವರವನ್ನು ಪಡೆದಿರುವಳು.

ಸ್ವಪ್ನಂ ಚ ದರ್ಶಯಾಮಾಸ ಸಾನಿರುದ್ಧಂ ಚ ಪಾರ್ವತೀ ।
ಮಮ ಪೌತ್ರಂ ಪ್ರಮತ್ತಂ ಚ ಚಕಾರ ಕೌತುಕೇನ ಚ ॥ ೪೪ ॥

ತತ್ಪುತ್ರೀಂ ಚ ಪ್ರಮತ್ತಾಂ ತಾಂ ಕರೋಮಿ ಸ್ವಪ್ನತೋಽಧುನಾ ।
ಸ್ವಚ್ಛಂದಂ ತಿಷ್ಠ ನ ಚಿರಂ ನಾಸ್ತಿ ಚಿಂತಾ ಮನೋವ್ಯಥಾ ॥ ೪೫ ॥

ಇತಿ ಕೃಷ್ಣಃ ಸಮಾಶ್ವಾಸ್ಯ ಸರ್ವಾತ್ಮಾ ಸರ್ವಸಿದ್ಧಿವಿತ್ ।
ಸ್ವಪ್ನಂ ಚ ದರ್ಶಯಾಮಾಸ ಬಾಣಪುತ್ರೀಂ ಚ ಕಾಮುಕೀಂ ॥ ೪೬ ॥

ಸುಪ್ತಾ ಸುತಲ್ಪೇ ಬಾಲಾ ಸಾ ಪುಷ್ಪಚಂದನಚರ್ಚಿತೇ ।
ನವಯೌವನಸಂಯುಕ್ತಾ ರತ್ನಭೂಷಣಭೂಷಿತಾ ॥ ೪೭ ॥

ಶಯಾನಾ ರತ್ನಪರ್ಯಂಕೇ ದದರ್ಶ ಸ್ವಪ್ನಮೀಪ್ಸಿತಂ ।
ಅತೀವ ನಿರ್ಜನೇ ದೇಶೇ ರತ್ನನಿರ್ಮಾಣಮಂದಿರೇ ॥ ೪೮ ॥

---

೪೪. ಆ ಪಾರ್ವತಿಯು ನನ್ನ ಮೊಮ್ಮಗನಾದ ಅನಿರುದ್ಧನಿಗೆ ಕುತೂಹಲದಿಂದ ಸ್ವಪ್ನವನ್ನು ಕಾಣಿಸಿದಳು ಮತ್ತು ಅವನನ್ನು ಉನ್ಮತ್ತನನ್ನು ಮಾಡಿದಳು.

೪೫. ಈಗ ನಾನು ಆ ಬಾಣನ ಮಗಳನ್ನೂ ಸ್ವಪ್ನದರ್ಶನದಿಂದ ಉನ್ಮತ್ತಳನ್ನಾಗಿ ಮಾಡುತ್ತೇನೆ. ನೀವೆಲ್ಲರೂ ಸ್ವೇಚ್ಛೆಯಿಂದಿರಿ. ಚಿಂತಿಸಬೇಡಿರಿ. ಮನೋವ್ಯಥೆಯನ್ನು ಬಿಡಿರಿ.

೪೬. ಸರ್ವಾತ್ಮನೂ ಸಕಲ ಸಿದ್ಧಿಯನ್ನೂ ತಿಳಿದವನಾದ ಕೃಷ್ಣನು ಈ ಪ್ರಕಾರ ಸಮಾಧಾನಪಡಿಸಿ ಕಾಮುಕಿಯಾದ ಬಾಣನ ಮಗಳಿಗೆ ಸ್ವಪ್ನವನ್ನು ತೋರಿಸಿದನು.

೪೭–೪೮. ಆ ಬಾಲಕಿಯು ಹೂವು ಗಂಧಗಳಿಂದ ಸುವಾಸಿತವಾದ ಮನೋವಾದ ಹಾಸಿಗೆಯಲ್ಲಿ ಮಲಗಿದವಳಾಗಿ ಹೊಸ ಪ್ರಾಯದಿಂದ ಕೂಡಿದವಳಾಗಿ, ರತ್ನಾಭರಣಗಳಿಂದ ಅಲಂಕಾರಮಾಡಿಕೊಂಡವಳಾಗಿ ಅತ್ಯಂತ ನಿರ್ಜನವಾದ ರತ್ನಗಳಿಂದ ಮಾಡಿದ ಮನೆಯಲ್ಲಿ ರತ್ನಮಯವಾದ ಮಂಚದಮೇಲೆ ಮಲಗಿ ನಿದ್ರಿಸುತ್ತ ಇಷ್ಟವಾದ ಸ್ವಪ್ನವನ್ನು ಕಂಡಳು.

ನವೀನನೀರದಶ್ಯಾಮಮತೀವ ನವಯೌವನಂ ।
ಕೋಟಿಕಂದರ್ಪಲೀಲಾಭಂ ಸಸ್ಮಿತಂ ಸುಮನೋಹರಂ ॥ ೪೯ ॥

ರತ್ನಕೇಯೂರವಲಯಂ ರತ್ನಮಂಜೀರರಂಜಿತಂ ।
ರತ್ನಕುಂಡಲಯುಗ್ಮೇನ ಗಂಡಸ್ಥಲವಿರಾಜಿತಂ ॥ ೫೦ ॥

ಚಂದನೋಕ್ಷಿತಸರ್ವಾಂಗಂ ಭೂಷಿತಂ ಪೀತವಾಸಸಾ ।
ಸುಚಾರುಮಾಲತೀಮಾಲ್ಯವಕ್ಷಸ್ಥಲಸಮುಜ್ಜ್ವಲಂ ॥ ೫೧ ॥

ಶಯಾನಂ ರತ್ನಪರ್ಯಂಕೇ ಪುಷ್ಪಚಂದನಚರ್ಚಿತೇ ।
ತಂದೃಷ್ಟ್ವಾ ಸ ಹಸಾ ಸಾಧ್ವೀ ತನ್ಮೂಲಂ ಪ್ರಯಯೌ ಮುದಾ ॥ ೫೨ ॥

ಉವಾಚ ಮಧುರಂ ಸಾಧ್ವೀ ಹೃದಯೇನ ವಿದೂಯತಾ ।
ಕಾಮಾತ್ಮಜ ಪ್ರಿಯಾ ಕಾಂತಾ ಕಾಮಬಾಣಪ್ರಪೀಡಿತಾ ॥ ೫೩ ॥

---

೪೯–೫೨. ಆ ಸ್ವಪ್ನದಲ್ಲಿ ಕಪ್ಪುಮೋಡದಂತೆ ಬಣ್ಣವುಳ್ಳ ಹೊಸದಾದ ಯೌವನದಿಂದ ಕೂಡಿದ ಕೋಟಿ ಮನ್ಮಥ ವಿಲಾಸದಿಂದ ಕೂಡಿದ ಮುಗುಳುನಗೆಯಿಂದ ಕೂಡಿದ ಅತ್ಯಂತ ಮನೋಹರವಾದ ರತ್ನಮಯವಾದ ಭುಜಕೀರ್ತಿ ಮತ್ತು ಬಳೆಗಳನ್ನುಧರಿಸಿರುವ ರತ್ನಮಯವಾದ ಕಾಲುಕಡಗದಿಂದ ಮನೋಹರನಾದ ರತ್ನಮಯವಾದ ಕರ್ಣಕುಂಡಲಗಳಿಂದ ಕೂಡಿದ ಕೆನ್ನೆಗಳಿಂದ ಪ್ರಕಾಶಮಾನನಾದ ಸರ್ವಾಂಗಗಳಿಗೂ ಸುಗಂಧವನ್ನು ಹಚ್ಚಿಕೊಂಡಿರುವ ಪೀತಾಂಬರದಿಂದ ಅಲಂಕೃತನಾದ ಮನೋಹರವಾದ ಮಾಲತೀ ಹೂವಿನ ಮಾಲಿಕೆಯಿಂದ ಪ್ರಕಾಶಮಾನವಾದ ಎದೆಯುಳ್ಳ ಹೂವು ಮತ್ತು ಸುಗಂಧಗಳಿಂದ ಸುವಾಸನೆಯಾಗಿರುವ ರತ್ನಮಯವಾದ ಮಂಚದಮೇಲೆ ಮಲಗಿರುವ ಅನಿರುದ್ಧನನ್ನು ಕಂಡಳು. ಸಾಧ್ವಿಯಾದ ಬಾಣಪುತ್ರಿಯು ಅವನನ್ನು ಕಂಡು ಸಂತೋಷಗೊಂಡವಳಾಗಿ ಬೇಗನೆ ಅವನ ಹತ್ತಿರಕ್ಕೆ ಹೋದಳು.

೫೩. ಕಾಮಪುತ್ರನಿಗೆ ಪ್ರಿಯಳೂ ಮನೋಹರಳೂ ಆದ ಆ ಸಾಧ್ವಿಯು ವ್ಯಥೆಗೊಂಡ ಮನಸ್ಸಿನಿಂದ ಕೂಡಿದವಳಾಗಿಯೂ ಕಾಮಬಾಣದಿಂದ ಪೀಡಿತಳಾಗಿಯೂ ಮಧುರವಾಗಿ ಮಾತನಾಡಿದಳು.

|| ಊಷೋವಾಚ ||

ಕಸ್ತ್ವಂ ಕಾಮುಕ ಭದ್ರಂ ತೇ ಮಾಂ ಭಜಸ್ವ ಸ್ಮರಾತುರಾಂ |
ಅತಿಪ್ರೌಢಾಂ ನವೋಢಾಂ ಚ ನವಸಂಗಮಲಾಲಸಾಂ || ೫೪ ||

ತವಾನುರಕ್ತಾಂ ಭಕ್ತಾಂ ಚ ಗಾಂಧರ್ವೇಣ ಸಮುದ್ವಹ |
ವಿವಾಹಾಷ್ಟಪ್ರಕಾರೇಷು ಗಾಂಧರ್ವಃ ಸುಲಭೋ ನೃಣಾಂ || ೫೫ ||

ಅನುರಕ್ತಾಂ ಪ್ರಿಯಾಂ ಪ್ರಾಪ್ಯ ತ್ಯಜೇದ್ಯಃ ಕಪಟೀ ಪುಮಾನ್ |
ತಸ್ಮಾದ್ಯಾತಿ ಮಹಾಲಕ್ಷ್ಮೀಃ ಶಾಪಂ ದತ್ವಾ ಸುದಾರುಣಂ || ೫೬ ||

|| ಪುಮಾನುವಾಚ ||

ಅಹಂ ಕೃಷ್ಣಸ್ಯ ಪೌತ್ರಶ್ಚ ಕಾಮದೇವಾತ್ಮಜಃ ಸ್ವಯಂ |
ಕಥಂ ಗೃಹ್ಣಾಮಿ ತ್ವಾಂ ಕಾಂತೇ ತಯೋರನುಮತಿಂ ವಿನಾ || ೫೭ ||

---

೫೪. ಊಷೆಯು ಹೇಳುತ್ತಾಳೆ;—ಎಲೈ ಕಾಮುಕನೇ! ನಿನಗೆ ಮಂಗಳವಾಗಲಿ. ನೀನು ಯಾರು? ಅತ್ಯಂತ ಪ್ರೌಢಳೂ ನವೋಢಳೂ ಹೊಸದಾದ ಪ್ರಿಯಸಮಾಗಮದಲ್ಲಿ ಆಸೆಯುಳ್ಳವಳೂ ಕಾಮಾತುರಳೂ ಆದ ನನ್ನನ್ನು ಹೊಂದುವವನಾಗು.

೫೫. ನಿನ್ನಲ್ಲಿ ಅನುರಾಗವನ್ನು ಹೊಂದಿರುವ ನಿನ್ನ ಭಕ್ತಳಾದ ನನ್ನನ್ನು ಗಾಂಧರ್ವ ವಿವಾಹದಿಂದ ಮದುವೆಮಾಡಿಕೊ. ಎಂಟು ವಿಧವಾದ ವಿವಾಹಗಳಲ್ಲಿ ಮನುಷ್ಯರಿಗೆ ಗಾಂಧರ್ವವಿವಾಹವೆಂಬುದು ಸುಲಭವಾದುದು.

೫೬. ಅನುರಾಗವನ್ನು ಹೊಂದಿವಳಾಗಿರುವ ಪ್ರಿಯಳು ಎದುರಿನಲ್ಲಿ ಬಂದಿದ್ದರೂ ಯಾವ ಕಪಟಿಯಾದ ಪುರುಷನು ಅವಳನ್ನು ಸ್ವೀಕರಿಸದೇ ತಿರಸ್ಕರಿಸುತ್ತಾನೊ ಅಂಥವನಿಗೆ ಘೋರವಾದ ಶಾಪವನ್ನು ಕೊಟ್ಟು ಮಹಾಲಕ್ಷ್ಮಿಯು ಅವನನ್ನು ಬಿಟ್ಟುಹೋಗುತ್ತಾಳೆ.

೫೭. ಪುರುಷನು ಹೇಳುತ್ತಾನೆ:— ನಾನು ಕೃಷ್ಣನ ಮೊಮ್ಮಗನು ಸಾಕ್ಷಾತ್ ಕಾಮದೇವನ ಮಗನು. ಎಲೈ ಸುಂದರಿಯೇ? ಅವರೀರ್ವರ ಅಪ್ಪಣೆಯನ್ನು ಪಡೆಯದೆ ನಿನ್ನನ್ನು ನಾನು ಹೇಗೆ ಸ್ವೀಕರಿಸಲಿ?

ಇತ್ಯೇವಮುಕ್ತ್ವಾ ಸ ಪುಮಾನಂತರ್ಧಾನಂ ಚಕಾರ ಸಃ ।
ಕಾಮೇನ ವ್ಯಾಕುಲಾ ಕಾಂತಾ ನ ದೃಷ್ಟ್ವಾ ಕಾಂತಮೀಪ್ಸಿತಂ ॥ ೫೮ ॥

ನಿದ್ರಾಂ ತ್ಯಕ್ತ್ವಾ ಸಮುತ್ಥಾಯ ತಲ್ಪಾದೇವ ಮನೋಹರಾತ್ ।
ವಿಷಸಾದ ಸಖೀಮಧ್ಯೇ ಪ್ರಮತ್ತಾ ರುದತೀ ಭೃಶಂ ॥ ೫೯ ॥

ಪಪ್ರಚ್ಛ ತಾಂ ವರಾಲೀನಾಂ ಕಿಂಕಿಮಿತ್ಯೇವ ನಿಶ್ಚಿತಂ ।
ಉವಾಚ ಬೋಧಯಾಮಾಸ ಚಿತ್ರಲೇಖಾ ಸುಯೋಗಿನೀ ॥ ೬೦ ॥

॥ ಚಿತ್ರಲೇಖೋವಾಚ ॥

ಚೇತನಂ ಕುರು ಕಲ್ಯಾಣಿ ಕಸ್ಮಾತ್ತೇ ಭೀತಿರುಲ್ಬಣಾ ।
ಸ್ವಯಂ ಶಂಭುಃ ಶಿವಾ ಸಾಕ್ಷಾದ್ದುರ್ಲಂಘ್ಯೇ ನಗರೇ ಸತಿ ॥ ೬೧ ॥

ಶಿವಸ್ಮರಣಮಾತ್ರೇಣ ಸರ್ವಾರಿಷ್ಟಂ ಪಲಾಯತೇ ।
ಶಿವಂ ಭವತಿ ಸರ್ವತ್ರ ಶಿವ ಏವ ಶಿವಾಲಯಃ ॥ ೬೨ ॥

---

೫೮–೫೯. ಈ ರೀತಿಯಾಗಿ ಹೇಳಿ ಆ ಪುರುಷನು ಮಾಯವಾದನು. ಆ ಕಾಂತೆಯು ತನ್ನ ಇಷ್ಟನಾದ ಕಾಂತನನ್ನು ಕಾಣದೆ ಮನ್ಮಥನಿಂದ ವ್ಯಥೆಗೊಳಿಸಲ್ಪ ವಳಾಗಿ ನಿದ್ರೆಯನ್ನು ಬಿಟ್ಟು ಅತ್ಯಂತ ಮನೋಹರವಾದ ಹಾಸಿಗೆಯಿಂದೆದ್ದು ಭ್ರಾಂತ ಳಾಗಿ ಅಳುತ್ತ ಸಖಿಯರ ಮಧ್ಯದಲ್ಲಿ ವ್ಯಾಕುಲಳಾಗಿದ್ದಳು.

೬೦. ಪ್ರಿಯಸಖಿಯರ ಮಧ್ಯದಲ್ಲಿ ಚಿತ್ರಲೇಖೆಯೆಂಬ ಸಖಿಯು ಅವಳನ್ನು ಕುರಿತು ಏನಾಯಿತು ಎಂದು ಕೇಳಿದಳು. ಮತ್ತು ಯೋಗಿನಿಯಾದ ಆ ಚಿತ್ರ ಲೇಖೆಯು ಯಥಾರ್ಥವಾದ ಮಾತನ್ನು ಹೇಳಿ ಅವಳನ್ನು ಎಚ್ಚರಿಸಿದಳು.

೬೧. ಚಿತ್ರಲೇಖೆಯು ಹೇಳುತ್ತಾಳೆ : ಎಲೈ ಮಂಗಳಕರಳೇ ! ಪ್ರಜ್ಞೆಯನ್ನು ಹೊಂದುವವಳಾಗು. ಈ ನಗರದಲ್ಲಿ ಸಾಕ್ಷಾತ್ ಪರಮೇಶ್ವರನೂ ಪಾರ್ವತಿಯೂ ವಾಸವಾಗಿರುವುದರಿಂದ ಯಾರಿಂದಲೂ ಮೀರಲಸಾಧ್ಯವಾಗಿರುತ್ತದೆ. ಆದುದರಿಂದ ನಿನಗೆ ಈ ಅತ್ಯಂತವಾದ ಭಯವು ಯಾವುದರಿಂದುಂಟಾಗಿರುತ್ತದೆ ?

೬೨. ಶಿವನನ್ನು ಸ್ಮರಣೆ ಮಾಡಿದ ಮಾತ್ರದಿಂದ ಎಲ್ಲ ಅನಿಷ್ಟಗಳೂ ಓಡಿ ಹೋಗುತ್ತವೆ. ಎಲ್ಲೆಡೆಯಲ್ಲಿಯೂ ಮಂಗಳವುಂಟಾಗುತ್ತದೆ. ಆ ಶಿವನೆಂಬುವನೇ ಮಂಗಳಗಳಿಗೆ ಮನೆಯಾಗಿರುವನು.

ಧ್ಯಾನಾದ್ದುರ್ಗತಿನಾಶಿನ್ಯಾಃ ಸರ್ವದುರ್ಗಂ ವಿನಶ್ಯತಿ ।
ದದಾತಿ ಮಂಗಲಂ ತಸ್ಮೈ ಸರ್ವಮಂಗಲಮಂಗಲಾ ॥ ೬೩ ॥

ಚಿತ್ರಲೇಖಾ ವಚಃ ಶ್ರುತ್ವಾ ಕಿಂಚಿನ್ನೋವಾಚ ಸುಂದರೀ ।
ತ್ಯಕ್ತ್ವಾಽಹಾರಂ ಚ ನಿದ್ರಾಂ ಚ ಪುರುಷಂ ಚಿಂತಯೇತ್ಸದಾ ॥ ೬೪ ॥

ಚಿತ್ರಲೇಖಾ ಸಖೀ ಗತ್ವಾ ಬಾಣಮಾಹ ಚ ತತ್ಪ್ರಿಯಾಂ ।
ದುರ್ಗಾಂ ಚ ಶಂಕರಂ ಸ್ಕಂದಂ ಗಣೇಶಂ ಯೋಗಿನಾಂ ಗುರುಂ ॥ ೬೫ ॥

ಚಿತ್ರಲೇಖಾ ವಚಃ ಶ್ರುತ್ವಾ ರುರೋದೋಚ್ಚೈರ್ಭೃಶಂ ಸತೀ ।
ಬಾಣಶ್ಚ ಶಂಕರಾಭ್ಯಾಶೇ ವಿಷಸಾದ ಪ್ರಮೂರ್ಚ್ಛಿತಃ ॥
ಜಹಾಸ ಶಂಕರೋ ದುರ್ಗಾ ಕಾರ್ತಿಕೇಯೋ ಗಣೇಶ್ವರಃ ॥ ೬೬ ॥

---

೬೩. ದುರ್ಗತಿಯನ್ನು ನಾಶಮಾಡುವವಳಾದ ದುರ್ಗಿಯನ್ನು ಧ್ಯಾನಮಾಡುವುದರಿಂದ ಸಮಸ್ತ ಕಷ್ಟಗಳೂ ನಾಶವಾಗುತ್ತವೆ. ಸಮಸ್ತ ಮಂಗಲಗಳಿಗೂ ಮಂಗಲರೂಪಳಾದ ಆ ದೇವಿಯು ಧ್ಯಾನ ಮಾಡುವವನಿಗೆ ಮಂಗಲವನ್ನುಂಟು ಮಾಡುತ್ತಾಳೆ.

೬೪. ಸುಂದರಿಯಾದ ಬಾಣಪುತ್ರಿಯು ಚಿತ್ರಲೇಖೆಯಾಡಿದ ಮಾತನ್ನು ಕೇಳಿ ಏನೊಂದು ಮಾತನಾಡಲಿಲ್ಲ. ಊಟ ನಿದ್ರೆಗಳನ್ನು ಬಿಟ್ಟು ಯಾವಾಗಲೂ ಸ್ವಪ್ನದಲ್ಲಿ ಕಂಡ ಪುರುಷನನ್ನೇ ಚಿಂತಿಸುತ್ತಿದ್ದಳು.

೬೫. ಸಖಿಯಾದ ಚಿತ್ರಲೇಖೆಯು ಹೋಗಿ ಈ ಸಮಾಚಾರವನ್ನು ಬಾಣನಿಗೂ ಅವನ ಹೆಂಡತಿಗೂ ದುರ್ಗಾದೇವಿಗೂ ಯೋಗಿಗಳಿಗೂ ಗುರುವಾದ ಶಂಕರನಿಗೂ ಗಣೇಶನಿಗೂ ಕುಮಾರಸ್ವಾಮಿಗೂ ತಿಳಿಸಿದಳು.

೬೬. ಚಿತ್ರಲೇಖೆಯ ಮಾತನ್ನು ಕೇಳಿ ಬಾಣನ ಹೆಂಡತಿಯು ಗಟ್ಟಿಯಾಗಿ ಅತ್ತಳು. ಬಾಣನೂ ಕೂಡ ಶಂಕರನೆದುರಿನಲ್ಲಿ ಅತ್ಯಂತ ದುಃಖಗೊಂಡವನಾಗಿ ಮೂರ್ಛೆಗೊಂಡನು. ಶಂಕರನೂ ಪಾರ್ವತಿಯೂ ಗಣೇಶ್ವರನೂ ಕುಮಾರಸ್ವಾಮಿಯೂ ನಕ್ಕರು.

|| ಗಣೇಶ್ವರ ಉವಾಚ ||

ಯೋ ದದಾತಿ ಧ್ರುವಂ ದುಃಖಮನ್ಯಸ್ಮೈ ದಂಭಮೋಹಿತಃ ।
ಸೂಕ್ಷ್ಮಧರ್ಮವಿಚಾರೇಣ ಸ ವಿಂದತಿ ಚತುರ್ಗುಣಂ || ೬೭ ||

ಶಿವೇಶಯೋಶ್ಚ ಕ್ರೀಡಾಂ ಚ ದೃಷ್ಟ್ವಾ ಯಾ ಕಾಮಮೋಹಿತಾ ।
ವರಂ ತಸ್ಮೈ ದದೌ ದುರ್ಗಾ ವರಮೇವ ಸುದುರ್ಲಭಂ || ೬೮ ||

ಸ್ವಪ್ನೇ ಗತ್ವಾ ಸ್ವಯಂ ದೇವೀ ಮತ್ತಂ ಕೃತ್ವಾ ಸ್ಮರಾತ್ಮಜಂ ।
ಅಧುನಾ ವಾಮಪಾರ್ಶ್ವಂ ಚ ಶಂಭೋಸ್ತಿಷ್ಠತಿ ಮೂಕವತ್ || ೬೯ ||

ಸರ್ವಂ ಜ್ಞಾತ್ವಾ ಚ ಸರ್ವಜ್ಞೋ ಭಗವಾನ್ಹರಿರೀಶ್ವರಃ ।
ಸ್ವಪ್ನೇ ಸುವೇಷಂ ಪುರುಷಂ ದರ್ಶಯಾಮಾಸ ಕನ್ಯಕಾಂ || ೭೦ ||

ಸುವೇಷಂ ಪುರುಷಂ ದೃಷ್ಟ್ವಾ ಯುವಾನಂ ಯುವತೀ ಸತೀ ।
ಪರಮೇಚ್ಛಾ ಭವೇತ್ತಸ್ಯಾ ಧರ್ಮಭೀತ್ಯಾ ನಿವರ್ತತೇ || ೭೧ ||

---

೬೭ ಗಣೇಶ್ವರನು ಹೇಳುತ್ತಾನೆ :— ಧರ್ಮಸೂಕ್ಷ್ಮವನ್ನು ವಿಚಾರ ಮಾಡಿದರೆ ಯಾವನು ಕಪಟದಿಂದ ಮೋಹಿತನಾಗಿ ಪರರಿಗೆ ದುಃಖವನ್ನುಂಟು ಮಾಡುತ್ತಾನೋ ಅವನು ಖಂಡಿತವಾಗಿಯೂ ಅದರ ನಾಲ್ಕರಷ್ಟು ದುಃಖವನ್ನು ಹೊಂದುತ್ತಾನೆಂಬುದು ತಿಳಿದುಬರುತ್ತದೆ.

೬೮. ಯಾವ ಬಾಣಪುತ್ರಿಯು ಶಿವಪಾರ್ವತಿಯರ ರತಿಯನ್ನು ನೋಡಿ ಕಾಮವಶಳಾದಳೋ ಅವಳಿಗೆ ದುರ್ಗಾದೇವಿಯು ಸುಲಭವಾಗಿ ಹೊಂದಲಸಾಧ್ಯ ವಾದ ಉತ್ತಮವರವನ್ನು ಕೊಟ್ಟಳು.

೬೯. ಆ ದೇವಿಯು ಕಾಮಪುತ್ರನನ್ನು ಸ್ವಪ್ನದಲ್ಲಿ ತಾನೇಹೋಗಿ ಅವನನ್ನು ಉನ್ಮತ್ತನನ್ನಾಗಿ ಮಾಡಿ ಈಗ ಮೂಕಳಂತೆ ಶಂಕರನ ವಾಮಭಾಗದಲ್ಲಿ ವಾಸಿಸು ತ್ತಿರುವಳು.

೭೦. ಇದೆಲ್ಲವನ್ನೂ ತಿಳಿದು ಸರ್ವಜ್ಞನೂ ಷಡ್ಗುಣೈಶ್ವರ್ಯ ಸಂಪನ್ನನೂ ಸರ್ವೇಶ್ವರನೂ ಆದ ಹರಿಯು ಸ್ವಪ್ನದಲ್ಲಿ ಆ ಕನ್ನಿಕೆಗೆ ಸುಂದರನಾದ ಪುರುಷನನ್ನು ಕಾಣಿಸಿದನು.

೭೧. ಯುವತಿಯಾದ ಆ ಸತಿಯು ಯುವಕನೂ ಸುಂದರನೂ ಆದ ಪುರುಷ ನನ್ನು ನೋಡಿ ಅವಳಿಗೆ ಅವನನ್ನು ಸೇರುವ ಆಸೆಯುಂಟಾಯಿತು, ಧರ್ಮಭಯದಿಂದ ಅದನ್ನು ತಡೆದಳು.

ಸುವೇಷಂ ಪುರುಷಂ ದೃಷ್ಟ್ವಾ ಪುಂಶ್ಚಲೀ ಪಾಪವಂಶಜಾ ।
ತ್ಯಜೇನ್ನಿದ್ರಾಂ ಚ ಸ್ವಾಹಾರಂ ಪತಿಂ ಪುತ್ರಂ ಧನಂ ಗೃಹಂ ॥ ೭೨ ॥

ಚೇತನಂ ಗೃಹಕಾರ್ಯಂ ಚ ಕುಲಲಜ್ಜಾಂ ಕುಲದ್ವಯಂ ।
ಯುವಾನಂ ರತಿಶೂರಂ ಚಾಪ್ಯತಿನೀಚಂ ನ ಹಿ ತ್ಯಜೇತ್ ॥ ೭೩ ॥

ತ್ಯಜೇಜ್ಜಾತಿಂ ಚ ಧರ್ಮಂ ಚ ಪ್ರಾಣಾಂಶ್ಚ ಪರಿಣಾಮತಃ ।
ತಸ್ಮಾತ್ಪ್ರಾಜ್ಞಃ ಪ್ರಯತ್ನೇನ ಪ್ರಾಣೇಭ್ಯೋ ಯುವತೀಂ ಸದಾ ॥ ೭೪ ॥

ಪರಿರಕ್ಷೇಚ್ಚ ಸತತಂ ಮಾಯಾಯುಕ್ತಾಂ ನ ವಿಶ್ವಸೇತ್ ।
ಹೃದಯಂ ಕ್ಷುರಧಾರಾಭಂ ನಾರೀಣಾಂ ಮಧುರಂ ವಚಃ ॥ ೭೫ ॥

ತಾಸಾಂ ಮನೋ ನ ಜಾನಂತಿ ಸಂತೋ ವೇದಾಶ್ಚ ವೈದಿಕಾಃ ।
ಪ್ರಯಾತು ದ್ವಾರಕಾಂ ಸದ್ಯಶ್ಚಿತ್ರಲೇಖಾ ಸುಯೋಗಿನೀ ॥ ೭೬ ॥

---

೭೨–೭೩. ಕುಲಟೆಯೂ ಪಾಪವಂಶದಲ್ಲಿ ಹುಟ್ಟಿದವಳೂ ಆದ ಸ್ತ್ರೀಯು ಸುಂದರನಾದ ಪುರುಷನನ್ನು ನೋಡಿ ನಿದ್ದೆಯನ್ನೂ ಆಹಾರವನ್ನೂ ಗಂಡನನ್ನೂ ಮಕ್ಕಳನ್ನೂ ಮನೆಯನ್ನೂ ಧನವನ್ನೂ ಕೂಡ ಬಿಡುತ್ತಾಳೆ ಮತ್ತು ಜ್ಞಾನವನ್ನೂ ಮನೆಕೆಲಸಗಳನ್ನೂ ಕುಲಭೂಷಣವಾದ ಲಜ್ಜೆಯನ್ನೂ ತಾನುಹುಟ್ಟಿದ ತಾನು ಸೇರಿದ ಎರಡುಕುಲಗಳನ್ನೂ ಬಿಡುತ್ತಾಳೆ. ಅತಿನೀಚನಾಗಿದ್ದರೂ ರತಿಕ್ರೀಡೆಯಲ್ಲಿ ನಿಪುಣನಾದ ಯುವಕನನ್ನು ಬಿಡುವುದೇ ಇಲ್ಲ.

೭೪–೭೫. ಜಾತಿಯನ್ನೂ ಧರ್ಮವನ್ನೂ ಕೊನೆಗೆ ಪ್ರಾಣವನ್ನೂ ಬಿಡುತ್ತಾಳೆ. ಆದುದರಿಂದ ತಿಳಿದವನು ಯಾವಾಗಲೂ ಸ್ತ್ರೀಯನ್ನು ಪ್ರಾಣಕ್ಕಿಂತಲೂ ಮಿಗಿಲೆಂದು ರಕ್ಷಣೆಮಾಡಬೇಕು. ಮಾಯೆಯಿಂದ ಕೂಡಿದ ಅವಳಲ್ಲಿ ಯಾವಾಗಲೂ ನಂಬಿಕೆಯನ್ನಿಡಬಾರದು. ಯಾಕೆಂದರೆ ಸ್ತ್ರೀಯರ ಮನಸ್ಸು ಕತ್ತಿಯ ಮೊನೆಗೆ ಸಮಾನವಾದುದು. ಮಾತು ಮಾತ್ರ ಅಮೃತದಂತಿರುವುದು.

೭೬–೭೭. ಸ್ತ್ರೀಯರ ಮನಸ್ಸನ್ನು ಸಾಧುಗಳಾಗಲೀ ವೇದಗಳಾಗಲೀ ವೈದಿಕರಾಗಲಿ ತಿಳಿಯಲಾರರು. ಈಗಲೇ ಯೋಗಿನಿಯಾದ ಚಿತ್ರಲೇಖೆಯು

ಅನಿರುದ್ಧಂ ಸಮಾಹರ್ತುಂ ಪ್ರಮತ್ತಮುಪಲೀಲಯಾ ।
ತತ್ ಶ್ರುತ್ವಾ ಮಹಾದೇವೋ ಗಣೇಶಂ ತಮುವಾಚ ಹ ॥ ೭೭ ॥

ನ ಶೃಣೋತಿ ಯಥಾ ಬಾಣಃ ಶುಭಕಾರ್ಯಂ ತಥಾ ಕುರು ।
ಚಿತ್ರಲೇಖಾ ಯಯೌ ತೂರ್ಣಂ ದ್ವಾರಕಾ ಭವನಂ ಹರೇಃ ॥ ೭೮ ॥

ಸರ್ವೇಷಾಮಪಿ ದುರ್ಲಕ್ಷ್ಯಂ ಲೀಲಯಾ ಪ್ರವಿವೇಶ ಸಾ ।
ನಿದ್ರಿತಂ ಚಾನಿರುದ್ಧಂ ಚ ಸಮಾಹೃತ್ಯ ಚ ಯೋಗತಃ ॥ ೭೯ ॥

ರಥಮಾರೋಹಯಾಮಾಸ ನಿದ್ರಿತಂ ಬಾಲಕಂ ಮುದಾ ।
ಸಾ ಮನೋಯಾಯಿನೀ ಭದ್ರಾ ಗೃಹೀತ್ವಾ ಬಾಲಕಂ ಮುನೇ ॥ ೮೦ ॥

ಮುಹೂರ್ತಾಚ್ಛೋಣಿತಪುರಂ ಕೃತ್ವಾ ಶಂಖಧ್ವನಿಂ ಯಯೌ ।
ಅಥಾಶ್ರಮಾಭ್ಯಂತರೇ ಚ ರುರುದುಃ ಸರ್ವಯೋಷಿತಃ ॥ ೮೧ ॥

ಅಹೋ ಬಾಣಹರೋ ವತ್ಸಃ ಕ್ವ ಗತಃ ಪ್ರಾಣವಲ್ಲಭಃ ।
ಕೃಷ್ಣಸ್ತಾಶ್ಚ ಸಮಾಶ್ವಾಸ್ಯ ಸರ್ವಜ್ಞಃ ಸರ್ವತತ್ತ್ವವಿತ್ ॥ ೮೨ ॥

---

ಅತ್ಯಂತಮತ್ತನಾಗಿರುವ ಅನಿರುದ್ಧನನ್ನು ಕರೆತರಲು ದ್ವಾರಕಾಪಟ್ಟಣಕ್ಕೆ ಹೋಗಲಿ. ಹೀಗೆ ಹೇಳಿದ ಮಾತನ್ನು ಕೇಳಿ ಮಹಾದೇವನು ಆ ಗಣೇಶನನ್ನು ಕುರಿತಿಂತೆಂದನು.

೭೮. ಬಾಣನು ತಿಳಿಯದಂತೆ ಈ ಶುಭಕಾರ್ಯವನ್ನು ಮಾಡು ಎಂದನು. ಚಿತ್ರಲೇಖೆಯು ದ್ವಾರಕೆಯಲ್ಲಿರುವ ಹರಿಯ ಮನೆಯನ್ನುಕುರಿತು ಶೀಘ್ರವಾಗಿಹೋದಳು.

೭೯–೮೨. ಆ ಚಿತ್ರಲೇಖೆಯು ಯಾರಿಗೂ ಪ್ರವೇಶಿಸಲಸಾಧ್ಯವಾದ ಆ ಹರಿಮಂದಿರವನ್ನು ಸುಲಭವಾಗಿ ಪ್ರವೇಶಮಾಡಿದಳು. ತನ್ನ ಯೋಗಶಕ್ತಿಯಿಂದ ನಿದ್ರೆಮಾಡುತ್ತಿದ್ದ ಅನಿರುದ್ಧನನ್ನು ಎತ್ತಿಕೊಂಡು ನಿದ್ದೆ ಮಾಡುತ್ತಿದ್ದಂತೆಯೇ ರಥದ ಮೇಲಿಟ್ಟುಕೊಂಡಳು. ಎಲೈ ನಾರದಮುನಿಯೇ! ಮನೋವೇಗದಿಂದ ಸಂಚರಿಸುವವಳಾದ ಮಂಗಳಕರಳಾದ ಆ ಚಿತ್ರಲೇಖೆಯು ಕುಮಾರನನ್ನು ಸಂತೋಷದಿಂದ ಎತ್ತಿಕೊಂಡು ಶಂಖಧ್ವನಿಯನ್ನು ಮಾಡುತ್ತ ಕ್ಷಣಕಾಲದಲ್ಲಿಯೇ ಶೋಣಿತಪುರಕ್ಕೆ ಬಂದಳು. ಅನಂತರ ದ್ವಾರಕಾಪಟ್ಟಣದ ಅರಮನೆಯಲ್ಲಿ ಸ್ತ್ರೀಯರೆಲ್ಲರೂ ಅಯ್ಯೋ ಬಾಣನಿಂದ ಹೃತನಾದ ಪ್ರಾಣಪ್ರಿಯನಾದ ಅನಿರುದ್ಧನು ಎಲ್ಲಿಗೆಹೋದನು ಎಂದು ಅಳತೊಡಗಿದರು. ಸರ್ವಜ್ಞನೂ ನಡೆದಿರುವ ಸಕಲ ವಿಚಾರಗಳನ್ನೂ ತಿಳಿದಿರುವವನೂ ಆದ ಕೃಷ್ಣನು ಅವರೆಲ್ಲರನ್ನೂ ಸಮಾಧಾನಮಾಡಿದನು.

ಸಾಂಬಕಾಮಬಲೈಃ ಸಾರ್ಧಂ ಕೃಷ್ಣಃ ಸಾತ್ಯಕಿನಾ ತಥಾ ।
ಗೃಹೀತ್ವಾ ಗರುಡಂ ವೀರಂ ರಥಮಾರುಹ್ಯ ಸತ್ವರಂ || ೮೩ ||

ಸುದರ್ಶನಂ ಪಾಂಚಜನ್ಯಂ ಪದ್ಮಂ ಕೌಮೋದಕೀಂ ಗದಾಂ ।
ಪಶ್ಚಾದ್ಯಾಸ್ಯತಿ ದೇವೇಶೋ ನಗರಂ ಶೋಣಿತಂ ತಥಾ || ೮೪ ||

ಸಗಣೈಃ ಶಂಕರೇಣೈವ ಪಾರ್ವತ್ಯಾ ಪರಿರಕ್ಷಿತುಂ ।
ಅಥ ಸಾ ಯೋಗಿನೀ ಧನ್ಯಾ ಪುಣ್ಯಾ ಮಾನ್ಯಾ ಚ ಯೋಷಿತಾಂ || ೮೫ ||

ಶಿಷ್ಯಾ ದುರ್ವಾಸಸಃ ಶಾಂತಾ ಸಿದ್ಧಯೋಗೇನ ಸಿದ್ಧಿದಾ ।
ಬಾಲಕಂ ಬೋಧಯಾಮಾಸ ರುದಂತಂ ಮಾತರಂ ಸ್ಮರನ್ || ೮೬ ||

ಸ್ನಾಪಯಿತ್ವಾ ದದೌ ತಸ್ಮೈ ಮಾಲ್ಯಚಂದನಭೂಷಣಂ ।
ಕೃತ್ವಾ ಸುವೇಷಂ ಬಾಲಸ್ಯ ಕನ್ಯಾಂತಃಪುರಮೀಪ್ಸಿತಂ || ೮೭ ||

ಚಕ್ರೇ ಪ್ರವೇಶಂ ಯೋಗೇನ ರಕ್ಷಕೈಶ್ಚಾಪಿ ರಕ್ಷಿತಂ ।
ತಾಮೂಷಾಂ ರಕ್ಷಿತಾಂ ದೃಷ್ಟ್ವಾ ನಿರಾಹಾರಾಂ ಕೃಶೋದರೀಂ || ೮೮ ||

---

೮೩–೮೬. ಅನಂತರ ಕೃಷ್ಣನು ಸಾಂಬನಿಂದೊಡಗೂಡಿದ ಕಾಮನ ಸೈನ್ಯದೊಡನೆ ಸಾತ್ಯಕಿಸಮೇತನಾಗಿ ವೀರನಾದ ಗರುಡನನ್ನು ಕರೆದುಕೊಂಡು ಶೀಘ್ರವಾಗಿ ರಥವನ್ನೇರಿ ಸುದರ್ಶನ ಪಾಂಚಜನ್ಯ ಕೌಮೋದಕಿಯೆಂಬ ಗದೆ ಇವುಗಳೊಡನೆ ಶೋಣಿತಪುರಕ್ಕೆ ಹಿಂಭಾಗದಿಂದ ಬರಲು ಆ ನಗರವು ಈಶ್ವರನ ಗಣಗಳಿಂದಲೂ ಈಶ್ವರನಿಂದಲೂ ಪಾರ್ವತಿಯಿಂದಲೂ ರಕ್ಷಿಸಲ್ಪಡುತ್ತಿದ್ದಿತು. ಅನಂತರ ಧನ್ಯಳೂ ಪುಣ್ಯವತಿಯೂ ಸ್ತ್ರೀಯರಲ್ಲಿ ಮಾನ್ಯಳೂ ದೂರ್ವಾಸಮುನಿಗಳ ಶಿಷ್ಯಳೂ ಶಾಂತಳೂ ಯೋಗಸಿದ್ಧಿಯನ್ನು ಹೊಂದಿ ಸಕಲರಿಗೂ ಸಿದ್ಧಿಯನ್ನುಂಟುಮಾಡುವವಳೂ ಆದ ಆ ಯೋಗಿನಿಯು ತಾಯಿಯನ್ನು ಜ್ಞಾಪಿಸಿಕೊಂಡು ಅಳುತ್ತಲಿರುವ ಬಾಲಕನಾದ ಅನಿರುದ್ಧನನ್ನು ಸಮಾಧಾನವಚನಗಳಿಂದ ಎಚ್ಚರಿಸಿದಳು.

೮೭–೮೯. ಅವಳು ಅವನಿಗೆ ಸ್ನಾನಮಾಡಿಸಿ ಹೂಮಾಲಿಕೆ ಗಂಧ ಮುಂತಾದ ಅಲಂಕಾರಗಳನ್ನು ಕೊಟ್ಟಳು. ಹೀಗೆ ಅವನಿಗೆ ಚೆನ್ನಾಗಿ ಅಲಂಕಾರವನ್ನು ಮಾಡಿ ತನ್ನ ಯೋಗ ಶಕ್ತಿಯಿಂದ, ಬಾಗಿಲುಕಾಯುವವರಿಂದ ರಕ್ಷಿಸಲ್ಪಡುತ್ತಿರುವ ಕನ್ಯಾಂತಃಪುರಕ್ಕೆ ಅವನನ್ನು ಕರೆದುಕೊಂಡು ಹೋದಳು. ಅಲ್ಲಿ ಆಹಾರ

ಶೀಘ್ರಂ ಚ ಬೋಧಯಾಮಾಸ ಸಖೀಭಿಃ ಪರಿವಾರಿತಾಂ ।
ಊಷಾಂ ಕೃತ್ವಾ ಚ ಸುಸ್ನಾತಾಂ ವಸ್ತ್ರಭೂಷಣಭೂಷಿತಾಂ ॥ ೮೯ ॥

ವಸ್ತ್ರೈರ್ಮಾಲ್ಯೈಶ್ಚಂದನೈಶ್ಚ ಸಿಂಧೂರಪತ್ರಕೈಃ ಶುಭೈಃ ।
ದ್ವಯೋಃ ಸಂಭಾಷಣಂ ತತ್ರ ಮಹೇಂದ್ರೇ ಚ ಶುಭಕ್ಷಣೇ ॥ ೯೦ ॥

ಕಾರಯಾಮಾಸ ಗೋಷ್ಠ್ಯಾಂ ಚ ಸಖೀನಾಂ ಸಂಗಮೇನ ಚ ।
ಪತಿವ್ರತಾ ಪತಿಂ ದೃಷ್ಟ್ವಾ ಸಾ ರೇಮೇ ವಿಗತಜ್ವರಾ ॥ ೯೧ ॥

ಗಾಂಧರ್ವೇಣ ವಿವಾಹೇನ ತಾಮುವಾಹ ಸ್ಮರಾತ್ಮಜಃ ।
ರತಿರ್ಬಭೂವ ಸುಚಿರಮುಭಯೋಃ ಸುಖಕಾರಣಂ ॥ ೯೨ ॥

ದಿವಾನಿಶಂ ನ ಬುಬುಧೇ ಸ್ಮರಪುತ್ರಃ ಸ್ಮರಾತುರಃ ।
ಊಷಾ ಕಾಮಾತುರಾ ಪ್ರೌಢಾ ನವೋಢಾ ನವಸಂಗಮಾತ್ ॥ ೯೩ ॥

---

ವಿಲ್ಲದವಳಾಗಿ ಕೃಶವಾದ ನಡುವುಳ್ಳವಳಾದ ಸಖಿಯರಿಂದ ರಕ್ಷಿಸಲ್ಪಡುತ್ತಿರುವ ಆ ಊಷೆಯನ್ನು ನೋಡಿ ಸಖಿಯರಿಂದೊಡಗೂಡಿದ ಅವಳನ್ನು ತನ್ನ ಹಿತವಚನಗಳಿಂದ ಎಚ್ಚರಿಸಿದಳು. ಆ ಊಷೆಯನ್ನು ಸ್ನಾನಮಾಡಿಸಿ ಪೀತಾಂಬರ ಆಭರಣಗಳಿಂದ ಅಲಂಕರಿಸಿದಳು.

೯೦–೯೧. ಉತ್ತಮ ವಸ್ತ್ರಗಳಿಂದಲೂ ಹೂವಿನ ಹಾರಗಳಿಂದಲೂ ಸುಗಂಧದಿಂದಲೂ ಚಂದ್ರದ ಪತ್ರಕಗಳಿಂದಲೂ ಅಲಂಕೃತರಾದ ಅವರಿಬ್ಬರಿಗೂ ಮಹೇಂದ್ರವೆಂಬ ಶುಭಕಾಲದಲ್ಲಿ ಸಖಿಯರ ಸಮ್ಮುಖದಲ್ಲಿ ಪರಸ್ಪರ ಸಂಭಾಷಣೆಯನ್ನು ಮಾಡಿಸಿದಳು. ಪತಿವ್ರತೆಯಾದ ಅ ಊಷೆಯು ತನ್ನ ಪತಿಯನ್ನು ನೋಡಿ ಸಂತೋಷಗೊಂಡಳು.

೯೨. ಕಾಮಪುತ್ರನಾದ ಅನಿರುದ್ಧನು ಗಾಂಧರ್ವ ವಿವಾಹ ವಿಧಿಯಿಂದ ಆ ಊಷೆಯನ್ನು ಮದುವೆಯಾದನು. ಬಹುಕಾಲ ಅವರೀರ್ವರ ಸುಖಕ್ಕೆ ಕಾರಣವಾದ ಪ್ರೀತಿಯು ಉಂಟಾಯಿತು.

ಕಾಮಾತುರನಾದ ಮನ್ಮಥಪುತ್ರನು ಹಗಲುರಾತ್ರಿಗಳನ್ನೇ ತಿಳಿಯದವನಾದನು. ಕಾಮಾತುರಳೂ ಹೊಸದಾಗಿ ಮದುವೆಯಾದವಳೂ ಪ್ರೌಢಳೂ ಆದ ಊಷೆಯು ಹೊಸದಾದ ಪ್ರಿಯಸಮಾಗಮದಿಂದ ಕಾಮಾಸಕ್ತಳಾಗಿ ಪುರುಷನ ಸ್ಪರ್ಶ

ಮೂರ್ಚ್ಛಾಂ ಸಂಪ್ರಾಪ ಪುಂಸಶ್ಚ ಸ್ಪರ್ಶಮಾತ್ರೇಣ ಕಾಮುಕೀ ।
ಏವಂ ನಿತ್ಯಂ ಚ ರಹಸಿ ಸಂಗಮಃ ಸುಮನೋಹರಃ ॥
ಬಭೂವ ಸುಚಿರಂ ವಿಪ್ರ ರಾಜಾ ಶುಶ್ರಾವ ರಕ್ಷಕಾತ್ ॥ ೯೪ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ ಬಾಣಯುದ್ಧೇ
ಊಷಾನಿರುದ್ಧಯೋಃ ಸಂವಾದೇ
ಚತುರ್ದಶಾಧಿಕಶತತಮೋಽಧ್ಯಾಯಃ.

---

ಮಾತ್ರದಿಂದಲೇ ಮೂರ್ಚ್ಛೆಯನ್ನು ಹೊಂದಿದಳು. ಎಲೈ ನಾರದನೇ! ಈ ರೀತಿ ಯಾಗಿ ಅತ್ಯಂತ ಮನೋಹರವಾದ ಊಷಾ ಅನಿರುದ್ಧರ ಸಮಾಗಮವು ಪ್ರತಿ ನಿತ್ಯವೂ ಗುಟ್ಟಾಗಿ ಬಹುಕಾಲದವರೆಗೆ ನಡೆಯುತ್ತಿದ್ದಿತು. ರಾಜನು ಬಾಗಿಲು ಕಾಯುವವರಿಂದ ಈ ಸಮಾಚಾರವನ್ನು ತಿಳಿದನು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿನ
ಬಾಣಯುದ್ಧದಲ್ಲಿ ಊಷಾನಿರುದ್ಧಸಂವಾದದ
ನೂರಹದಿನಾಲ್ಕನೆಯ ಅಧ್ಯಾಯವು ಸಂಪೂರ್ಣವು.



|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಪಂಚದಶಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಅಥ ಭೀತಾ ರಕ್ಷಕಾಸ್ತೇ ಸಮೂಚುರ್ಬಾಣಮೀಶ್ವರಂ |
ಸ್ಕಂದಂ ಗಣೇಶಂ ದುರ್ಗಾಂ ಚ ದಂಡವತ್ಪ್ರಣಿಪತ್ಯ ಚ || ೧ ||

|| ರಕ್ಷಕಾ ಊಚುಃ ||

ಅಹೋ ದುಷ್ಟಶ್ಚ ಕಾಲೋಽಯಮತೀವದುರತಿಕ್ರಮಃ |
ಸ್ವತಂತ್ರಾ ಬಾಲಿಕಾ ಪ್ರೌಢಾ ಪತಿಮಿಚ್ಛತಿ ಸಾಂಪ್ರತಂ || ೨ ||

ಅಸಂಗಸಂಗಮಂ ನಾಥ ಸಾಧೂನಾಂ ದುಃಖಕಾರಣಂ |
ಸಂಸರ್ಗಜಾ ಗುಣಾ ದೋಷಾ ಭವಂತಿ ಸತತಂ ನೃಣಾಂ || ೩ ||

---

### ನೂರ ಹದಿನೈದನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ:— ಅನಂತರ ಭಯಗೊಂಡ ಬಾಗಿಲು ಕಾಯುವವರು ಸ್ಕಂದನಿಗೂ ಗಣೇಶನಿಗೂ ಪಾರ್ವತಿಗೂ ಈಶ್ವರನಿಗೂ ನಮಸ್ಕರಿಸಿ ಬಾಣನನ್ನು ಕುರಿತು ಇಂತೆಂದರು.

೨. ಕಾವಲುಗಾರರು ಹೇಳುತ್ತಾರೆ:—ಏನಾಶ್ಚರ್ಯವು! ಕಾಲವು ಕೆಟ್ಟು ಹೋಯಿತು. ಕಾಲವನ್ನು ಮೀರಲಸಾಧ್ಯವಾಗಿದೆ. ಪ್ರಕೃತ ಬಾಲಕಿಯು ಪ್ರೌಢಳಾಗಿ ಸ್ವತಂತ್ರಳಾಗಿ ಪತಿಯನ್ನಪೇಕ್ಷಿಸುತ್ತಾಳೆ.

೩. ರಾಜನೇ, ಸಮಾಗಮಕ್ಕೆ ಯೋಗ್ಯನಲ್ಲದವನೊಡನೆ ಸಮಾಗಮವು ಸತ್ಪುರುಷರಾದ ಮಾನವರಿಗೆ ಯಾವಾಗಲೂ ದುಃಖವನ್ನುಂಟುಮಾಡತಕ್ಕುದು.

ಚಿತ್ರಲೇಖಾ ಸ್ವಯಂ ದೂತೀ ಸಮಾನೀಯ ಪರಂ ವರಂ ।
ರಣಶೂರಂ ಮಹಾವೀರಂ ನೃಪೇಂದ್ರಂ ಚ ಮಹಾರಥಂ ॥ ೪ ॥

ಯುವಾನಂ ವ್ಯಾಧಿಹೀನಂ ಚ ಕಂದರ್ಪಾದಪಿ ಸುಂದರಂ ।
ಸಂಭೋಗಂ ಕಾರಯಾಮಾಸ ಬುಬುಧೇ ನ ದಿವಾನಿಶಂ ॥ ೫ ॥

ಸಾಂಪ್ರತಂ ತವ ಕನ್ಯಾ ಸಾಪ್ಯೂಷಾ ಗರ್ಭವತೀ ಸತೀ ।
ಕುಲಜಾ ಕುಲಯೋಃಶ್ಚೈವ ತಪ್ತಾಂಗಾರಸ್ವರೂಪಿಣೀ ॥ ೬ ॥

ದೌಹಿತ್ರೋ ವಾಪಿ ದೌಹಿತ್ರೀ ಬಭೂವ ಸಾಂಪ್ರತಂ ತವ ।
ಕನ್ಯಾಂ ಪಶ್ಯ ಮಹಾಪ್ರೌಢಾಂ ನಗರೀಂ ನಾಗರಾನ್ವಿತಾಂ ॥ ೭ ॥

ನಖವಿಕ್ಷತಸರ್ವಾಂಗೀಂ ವರಾಧೀನಾಂ ಚ ಚಂಚಲಾಂ ।
ಪುಂಸಶ್ಚ ಸಂಗಿನೀಂ ಶಶ್ವದ್ರಹಸ್ಯೇ ರತಿಸಂಗಿನೀಂ ॥ ೮ ॥

---

೪–೫. ಚಿತ್ರಲೇಖೆಯು ತಾನೇ ದೂತಿಯಾಗಿ ಉತ್ತಮನೂ ಯುದ್ಧದಲ್ಲಿ ನಿಪುಣನೂ ಮಹಾಪರಾಕ್ರಮಿಯೂ ರಾಜಶ್ರೇಷ್ಠನೂ ಮಹಾರಥನೂ ಯುವಕನೂ ರೋಗವಿಲ್ಲದವನೂ ಮನ್ಮಥನಿಗಿಂತಲೂ ಸುಂದರನೂ ಆದ ವರನನ್ನುಕರೆತಂದು ನಿನ್ನ ಮಗಳೊಡನೆ ಸಂಭೋಗವನ್ನು ಮಾಡಿಸಿರುವಳು. ಅವಳು ಹಗಲುರಾತ್ರಿಗಳನ್ನೂ ತಿಳಿಯದವಳಾಗಿರುತ್ತಾಳೆ.

೬. ಈಗ ನಿನ್ನ ಮಗಳಾದ ಆ ಊಷೆಯು ಗರ್ಭಿಣಿಯಾಗಿರುತ್ತಾಳೆ. ಉತ್ತಮ ಕುಲದಲ್ಲಿ ಹುಟ್ಟಿದವಳಾದರೂ ಎರಡು ಕುಲಗಳಿಗೂ ಉರಿದು ಆರಿದ ಇದ್ದಿಲಿನಂತಾಗಿರುತ್ತಾಳೆ.

೭. ಈಗ ನಿನಗೆ ಮೊಮ್ಮಗನೋ ಮೊಮ್ಮಗಳೋ ಆಗಿದ್ದಾರೆ. ಅತ್ಯಂತ ಪ್ರೌಢಳಾದ ನಿನ್ನ ಕನ್ನಿಕೆಯನ್ನು ನೋಡು. ಪಟ್ಟಣಿಗರಿಂದ ಕೂಡಿದ ಈ ಪಟ್ಟಣವನ್ನು ನೋಡು.

೮–೯. ಉಗುರಿನ ಗಾಯದಿಂದ ಕೂಡಿದ ಸಕಲಾವಯವಗಳುಳ್ಳ ವರನ ವಶದಲ್ಲಿರುವ ಚಪಲಳಾದ ಪುರುಷನೊಡಗೂಡಿದ ಯಾವಾಗಲೂ ಗುಟ್ಟಿನಲ್ಲಿ ರತಿಸುಖವನ್ನನುಭವಿಸುತ್ತಿರುವ ಮುಗುಳು ನಗೆಯಿಂದ ಕೂಡಿರುವ ಚಂಚಲವಾದ

ಸಸ್ಮಿತಾಂ ಸಕಟಾಕ್ಷಂ ಚ ಚಂಚಲೇಕ್ಷಣವೀಕ್ಷಿತಾಂ ।
ಏವಂ ಶ್ರುತ್ವಾ ಲಜ್ಜಿತಶ್ಚ ಬಾಣಸ್ತತ್ರ ಚುಕೋಪ ಹ ॥ ೯ ॥

ಯುದ್ಧಾಯ ಚ ಮತಿಂ ಚಕ್ರೇ ವಾರಿತಃ ಶಂಭುನಾ ಭೃಶಂ ।
ವಾರಿತಶ್ಚ ಗಣೇಶೇನ ಸ್ಕಂದೇನ ಶಿವಯಾ ತಥಾ ॥ ೧೦ ॥

ಭೈರವ್ಯಾ ಭದ್ರಕಾಲ್ಯಾ ಚ ಯೋಗಿನೀಭಿಶ್ಚ ಸಂತತಂ ।
ಅಷ್ಟಭಿರ್ಭೈರವೀಶ್ಚೈವ ರುದ್ರೈರೇಕಾದಶಾತ್ಮಕೈಃ ॥ ೧೧ ॥

ಭೂತೈಃ ಪ್ರೇತೈಶ್ಚ ಕೂಷ್ಮಾಂಡೈರ್ವೇತಾಲೈರ್ಬ್ರಹ್ಮರಾಕ್ಷಸೈಃ ।
ಯೋಗೀಂದ್ರೈರಪಿ ಸಿದ್ಧೇಂದ್ರೈ ರುದ್ರೈಶ್ಚಂಡಾದಿಭಿಸ್ತಥಾ ॥ ೧೨ ॥

ಕೋಟರ್ಯಾ ಗ್ರಾಮದೇವ್ಯಾ ಚ ಯಥಾ ಮಾತ್ರಾ ಹಿತಾಯ ಚ ।
ಉವಾಚ ಶಂಕರೋ ಬಾಣಂ ಮೂಢಂ ಪಂಡಿತಮಾನಿನಂ ॥
ಹಿತಂ ಸತ್ಯಂ ನೀತಿಶಾಸ್ತ್ರಂ ಪರಿಣಾಮಸುಖಾವಹಂ ॥ ೧೩ ॥

---

ಓರೆಗಣ್ಣಿನ ನೋಟವುಳ್ಳ ಮುಗಳನ್ನು ನೋಡು. ಈ ರೀತಿಯಲ್ಲಿ ಹೇಳಿದ ಮಾತನ್ನು ಕೇಳಿ ಬಾಣನು ನಾಚಿಕೊಂಡನು ಮತ್ತು ಕೋಪಗೊಂಡನು.

೧೦–೧೨. ಅವನು ಯುದ್ಧ ಮಾಡಬೇಕೆಂದು ನಿಶ್ಚಯ ಮಾಡಿದನು. ಈಶ್ವರನಿಂದಲೂ ಗಣೇಶನಿಂದಲೂ ಸ್ಕಂದನಿಂದಲೂ ಪಾರ್ವತಿಯಿಂದಲೂ ಭೈರವಿಯಿಂದಲೂ ಭದ್ರಕಾಲಿಯಿಂದಲೂ ಯೋಗಿನಿಯರಿಂದಲೂ ಅಷ್ಟ ಭೈರವರಿಂದಲೂ ಏಕಾದಶರುದ್ರರಿಂದಲೂ ಭೂತಗಳಿಂದಲೂ ಪ್ರೇತಗಳಿಂದಲೂ ಕೂಷ್ಮಾಂಡಗಳಿಂದಲೂ ಬೇತಾಳಗಳಿಂದಲೂ ಬ್ರಹ್ಮರಾಕ್ಷಸಗಳಿಂದಲೂ ಯೋಗೀಂದ್ರರಿಂದಲೂ ಸಿದ್ಧೇಂದ್ರರಿಂದಲೂ ಚಂಡನೇ ಮೊದಲಾದವರಿಂದಲೂ ತಡೆಯಲ್ಪಟ್ಟವನಾದನು

೧೩. ಕೋಟರಿಯಿಂದಲೂ ಗ್ರಾಮದೇವತೆಯಿಂದಲೂ ತಾಯಿಯು ಮಗನ ಹಿತಕ್ಕಾಗಿ ಹೇಳುವಂತೆ ಯುದ್ಧಮಾಡಬೇಡವೆಂದು ತಡೆಯಲ್ಪಟ್ಟನು. ಶಂಕರನು ಮೂರ್ಖನೂ ಪಂಡಿತನೆಂಬ ಅಭಿಮಾನವುಳ್ಳವನೂ ಆದ ಬಾಣನನ್ನು ಕುರಿತು ಹಿತವೂ ಸತ್ಯವೂ ನೀತಿಶಾಸ್ತ್ರದಲ್ಲಿ ಹೇಳಿರುವುದೂ ಕೊನೆಗೆ ಸುಖವನ್ನುಂಟುಮಾಡತಕ್ಕುದೂ ಆದ ಮಾತನ್ನು ಹೇಳಿದನು.

|| ಶ್ರೀ ಮಹಾದೇವ ಉವಾಚ ||

ಶೃಣು ಬಾಣ ಪ್ರವಕ್ಷ್ಯಾಮಿ ಕಥಾಮೇತಾಂ ಪುರಾತನೀಂ || ೧೪ ||

ಭುವೋ ಭಾರಾವತರಣೇ ಭಾರತೇ ಸ್ವಯಮೀಶ್ವರಃ |
ನಿಹತ್ಯ ಸರ್ವಾನ್ರಾಜೇಂದ್ರಾನ್ದ್ವಾರಕಾಯಾಂ ವಿರಾಜತೇ || ೧೫ ||

ಯಸ್ಯ ಲೋಮಸು ವಿಶ್ವಾನಿ ತಸ್ಯ ವಾಸಃ ಸದೀಶ್ವರಃ |
ವಾಸುದೇವ ಇತಿ ಖ್ಯಾತಃ ಕಥ್ಯತೇ ತೇನ ಕೋವಿದೈಃ || ೧೬ ||

ಧಾತುರ್ವಿಧಾತಾ ಭಗವಾಂಶ್ಚಕ್ರಪಾಣಿಃ ಸ್ವಯಂ ಭುವಿ |
ಬ್ರಹ್ಮವಿಷ್ಣುಶಿವಾದೀನಾಮೀಶ್ವರಃ ಪ್ರಕೃತೇಃ ಪರಃ || ೧೭ ||

ನಿರ್ಗುಣಶ್ಚ ನಿರೀಹಶ್ಚ ಭಕ್ತಾನುಗ್ರಹವಿಗ್ರಹಃ |
ಪರಂ ಬ್ರಹ್ಮ ಪರಂ ಧಾಮ ಪರಮಾತ್ಮಾ ಚ ದೇಹಿನಃ || ೧೮ ||

---

೧೪. ಶ್ರೀ ಮಹಾದೇವನು ಹೇಳುತ್ತಾನೆ:— ಎಲೈ ಬಾಣನೇ, ಹಿಂದಿನ ಕಥೆಯನ್ನು ಹೇಳುತ್ತೇನೆ. ಅದನ್ನು ಸಾವಧಾನವಾಗಿ ಕೇಳುವವನಾಗು.

೧೫. ಭೂಮಿಯ ಭಾರವನ್ನಿಳುಹಲೋಸ್ಕರ ಸಾಕ್ಷಾದೀಶ್ವರನು ಭರತಭೂಮಿಯಲ್ಲಿ ಸಕಲ ರಾಜರುಗಳನ್ನೂ ಕೊಂದು ದ್ವಾರಕಿಯಲ್ಲಿ ಪ್ರಕಾಶಮಾನನಾಗಿರುವನು.

೧೬. ಯಾವನ ರೋಮಗಳಲ್ಲಿ ಪ್ರಪಂಚಗಳು ವಾಸಮಾಡುತ್ತವೆಯೋ ಅವನಿಗೆ ಒಡೆಯರಿಲ್ಲವು, ಆದುದರಿಂದಲೇ ವಿದ್ವಾಂಸರಿಂದ ವಾಸುದೇವ ಎಂದು ಹೇಳಲ್ಪಟ್ಟು ಪ್ರಸಿದ್ಧನಾಗಿರುವನು.

೧೭. ಪೂಜ್ಯನಾದ ಚಕ್ರಪಾಣಿಯು ಬ್ರಹ್ಮನಿಗೂ ಕಾರಣನು. ಪ್ರಕೃತಿಗಿಂತಲೂ ಶ್ರೇಷ್ಠನು. ಬ್ರಹ್ಮವಿಷ್ಣುಶಿವನೇ ಮುಂತಾದವರಿಗೆ ಅಧಿಪತಿಯು. ಇಂಥಾ ಪರಮಾತ್ಮನು ತಾನು ಭೂಮಿಯಲ್ಲಿ ಅವತರಿಸಿರುವನು.

೧೮. ಅವನು ಗುಣರಹಿತನೂ ಆಶೆಯಿಲ್ಲದವನೂ ಭಕ್ತರಿಗೆ ಅನುಗ್ರಹ ಮಾಡಲೋಸ್ಕರ ದೇಹವನ್ನು ಧರಿಸಿದವನೂ ಆಗಿರುವನು. ಅವನೇ ಪರಬ್ರಹ್ಮನು ಅವನೇ ಮೋಕ್ಷಸ್ವರೂಪನು ಪ್ರಾಣಿಗಳಿಗೆ ಪರಮಾತ್ಮನೂ ಅವನೇ.

ಯಸ್ಮಿನ್ಗತೇ ಶವೋ ಜೀವೋ ಸಂಗ್ರಾಮಸ್ತೇನ ಸಂಭವೇತ್ ।
ಶಸ್ತ್ರವಿದ್ಧೋ ಮಹಾಕಾಶೋ ಯಥಾ ಮೂಢ ದಿಶಸ್ತಥಾ ॥ ೧೯ ॥

ತಥಾತ್ಮಾ ಚ ನಿರಾಕಾರೋ ದೇಹೀ ಚ ಧ್ಯಾನಹೇತುನಾ ।
ತಸ್ಯ ಪುತ್ರೋಽನಿರುದ್ಧಶ್ಚ ಮಹಾಬಲಪರಾಕ್ರಮಃ ॥ ೨೦ ॥

ತ್ರೈಲೋಕ್ಯಮಪಿ ಸಂಹರ್ತುಂ ಕ್ಷಣೇನ ಚ ಕ್ಷಮಃ ಸ್ವಯಂ ।
ಸರ್ವೇ ದೇವಾಶ್ಚ ದೈತ್ಯಾಶ್ಚ ಬಲವಂತೋ ಮಹಾರಥಾಃ ॥ ೨೧ ॥

ತೇ ಸರ್ವೇ ಚಾನಿರುದ್ಧಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಬಲಂ ॥ ೨೨ ॥

ತಯೋರ್ವಿವಾಹೋ ಮೈತ್ರೀ ಚ ನ ತು ಪುಷ್ಟವಿಪುಷ್ಟಯೋಃ ।
ಬಲಿಃ ಪಿತಾ ತೇ ದೈತ್ಯಾನಾಂ ಸಾರಭೂತೋ ಮಹಾರಥಃ ॥ ೨೩ ॥

---

೧೯–೨೦. ಯಾವ ಪರಮಾತ್ಮನು ದೇಹವನ್ನು ಬಿಟ್ಟರೆ ಜೀವವು ಹೋಗಿ ಶವವೆನಿಸಿಕೊಳ್ಳುವುದು. ಅವನೊಡನೆ ಯುದ್ಧವು ನಿನಗೆ ಸರಿಯಲ್ಲ. ಶಸ್ತ್ರಗಳಿಂದ ಹೊಡೆಯಲ್ಪಟ್ಟರೂ ಮಹಾಕಾಶವು ಹೇಗೆ ಇರುವುದೋ ದಿಕ್ಕುಗಳು ಹೇಗೆ ಇರುವುವೋ ಎಲೈ ಮೂಢನೇ ! ಹಾಗೆಯೇ ಆತ್ಮನು ಆಕಾರವಿಲ್ಲದವನು. ಧ್ಯಾನಕ್ಕೆ ಕಾರಣವಾದ ಶರೀರದ ಸಂಬಂಧದಿಂದ ದೇಹಿಯೆನಿಸಿಕೊಳ್ಳುತ್ತಾನೆ. ಅಂಥಾ ಪರಮಾತ್ಮನ ಮೊಮ್ಮಗನು ಅನಿರುದ್ಧನೆಂಬುವವನು. ಅವನು ಮಹಾಬಲ ಪರಾಕ್ರಮಶಾಲಿಯು.

೨೧–೨೩. ಅವನು ತಾನೊಬ್ಬನೇ ಒಂದು ಕ್ಷಣಕಾಲದಲ್ಲಿ ಮೂರುಲೋಕಗಳನ್ನೂ ಸಂಹಾರಮಾಡಲು ಸಮರ್ಥನಾಗಿರುವನು. ಮಹಾಬಲಸಂತರಾದ ದೇವತೆಗಳೂ ರಾಕ್ಷಸರೂ ಮಹಾರಥರೂ ಆದವರಾರಿರುತ್ತಾರೋ ಅವರೆಲ್ಲರೂ ಅನಿರುದ್ಧನ ಹದಿನಾರನೆಯ ಒಂದು ಕಲೆಗೆ ಸಮಾನರಾಗುವುದಿಲ್ಲ. ಯಾವ ವಧೂವರರಿಗೆ ಐಶ್ವರ್ಯವು ಸಮನಾಗಿರುವುದೋ ಮತ್ತು ಬಲವು ಸಮನಾಗಿರುವುದೋ ಆ ಈರ್ವರಿಗೇನೆ ವಿವಾಹವೂ ಸ್ನೇಹವೂ ಯೋಗ್ಯವಾದುದು. ಐಶ್ವರ್ಯವಂತನಿಗೂ ಬಡವನಿಗೂ ವಿವಾಹವೂ ಸ್ನೇಹವೂ ಸಲ್ಲತಕ್ಕುದಲ್ಲ. ನಿನ್ನ ತಂದೆಯಾದ ಬಲಿಯು ರಾಕ್ಷಸರಲ್ಲಿ ಶ್ರೇಷ್ಠನೂ ಮಹಾರಥನೂ ಆಗಿರುವನು. ಯಾವ ಬಲಿಯಿಂದ ಪರಮಾತ್ಮನ ಕಲೆಯು ನಿಮಿಷಮಾತ್ರದಲ್ಲಿ ಪಾತಾಳಕ್ಕೆ ಒಯ್ಯಲ್ಪಟ್ಟಿತು. ಸಮಸ್ತ

ಕ್ಷಣೇನ ಯೇನ ನೀತಶ್ಚ ಸುತಲಂ ಸ ಹರೇಃ ಕಲಾ ।
ಸರ್ವೇ ಚಾಂಶಕಲಾಃ ಪುಂಸಃ ಪರಿಪೂರ್ಣತಮಸ್ಯ ಚ ॥
ವೃಂದಾವನೇಶ್ವರಸ್ಯಾಪಿ ಕೃಷ್ಣಸ್ಯ ಪರಮಾತ್ಮನಃ ॥ ೨೪ ॥

॥ ಪಾರ್ವತ್ಯುವಾಚ ॥

ಧ್ಯಾಯತೇ ಧ್ಯಾನನಿಷ್ಠಶ್ಚ ಹೃತ್ಪದ್ಮೇ ಚ ದಿವಾನಿಶಂ ॥ ೨೫ ॥

ಬ್ರಹ್ಮಾ ಮಹೇಶಃ ಶೇಷಶ್ಚ ಭಗವಂತಂ ಸನಾತನಂ ।
ದಿನೇಶಶ್ಚ ಗಣೇಶಶ್ಚ ಯೋಗೀಂದ್ರಾಣಾಂ ಗುರೋರ್ಗುರುಃ ॥
ಧ್ಯಾಯತೇ ಪರಮಾತ್ಮಾನಂ ಭಗವಂತಂ ಸನಾತನಂ ॥ ೨೬ ॥

ಸನತ್ಕುಮಾರಃ ಕಪಿಲೋ ನರೋ ನಾರಾಯಣಸ್ತಥಾ ।
ಧ್ಯಾಯಂತೇ ಹೃದಯಾಂಭೋಜೇ ಭಗವಂತಂ ಸನಾತನಂ ॥ ೨೭ ॥

ಮನವಶ್ಚ ಮುನೀಂದ್ರಾಶ್ಚ ಸಿದ್ಧೇಂದ್ರಾ ಯೋಗಿನಾಂ ವರಾಃ ।
ಧ್ಯಾನಾಸಾಧ್ಯಂ ಚ ಧ್ಯಾಯಂತೇ ಭಗವಂತಂ ಸನಾತನಂ ॥ ೨೮ ॥

---

ಪುರುಷರೂ ಕೂಡ ಅತ್ಯಂತ ಪರಿಪೂರ್ಣನಾದ ವೃಂದಾವನಾಧಿಪತಿಯಾದ ಶ್ರೀಕೃಷ್ಣ ಪರಮಾತ್ಮನ ಅಂಶದ ಕಲಾಸ್ವರೂಪರಾಗಿರುತ್ತಾರೆ.

೨೫–೨೭. ಪಾರ್ವತಿಯು ಹೇಳುತ್ತಾಳೆ :— ಬ್ರಹ್ಮನೂ ಮಹೇಶ್ವರನೂ ಶೇಷನೂ ಕೂಡ ಸನಾತನನಾದ ಪರಮಾತ್ಮನನ್ನು ಧ್ಯಾನನಿಷ್ಠರಾಗಿ ಹಗಲು ರಾತ್ರಿಯೂ ತಮ್ಮ ಹೃದಯಕಮಲದಲ್ಲಿ ಧ್ಯಾನಮಾಡುತ್ತಾರೆ ಮತ್ತು ಸೂರ್ಯನೂ ಗಣೇಶನೂ ಯೋಗಿ ಶ್ರೇಷ್ಠರಿಗೆಲ್ಲ ಗುರುಗಳಾದವರಿಗೆ ಗುರುವಾದವರೂ ಕೂಡ ಸನಾತನನಾದ ಭಗವಂತನನ್ನು ಧ್ಯಾನಮಾಡುತ್ತಾರೆ. ಅಲ್ಲದೆ ಸನತ್ಕುಮಾರನೂ ಕಪಿಲ ಮುನಿಯೂ ನರನೂ ನಾರಾಯಣನೂ ಕೂಡ ತಮ್ಮ ಹೃದಯಕಮಲದಲ್ಲಿ ಆ ಪರಮಾತ್ಮನನ್ನು ಧ್ಯಾನಮಾಡುತ್ತಾರೆ.

೨೮. ಮನುಗಳೂ ಮುನೀಂದ್ರರೂ ಸಿದ್ಧಶ್ರೇಷ್ಠರೂ ಯೋಗಿಶ್ರೇಷ್ಠರೂ ಧ್ಯಾನಕ್ಕೂ ಸಿಲುಕದವನಾದ ಆ ಭಗವಂತನನ್ನು ಧ್ಯಾನಮಾಡುತ್ತಾರೆ.

ಸರ್ವಾದಿಂ ಸರ್ವಬೀಜಂ ಚ ಸರ್ವೇಶಂ ಚ ಪರಾತ್ಪರಂ ।
ಧ್ಯಾಯಂತೇ ಜ್ಞಾನಿನಃ ಸರ್ವೇ ಭಗವಂತಂ ಸನಾತನಂ ॥ ೨೯ ॥

॥ ಗಣೇಶ ಉವಾಚ ॥

ಅಭಾಗ್ಯಂ ಚ ಬಲೇಶ್ಚಾಪಿ ವೈಷ್ಣವಸ್ಯ ಮಹಾತ್ಮನಃ ।
ಮೂಢೋಯಮೀದೃಶಃ ಪುತ್ರಃ ಪ್ರಹ್ಲಾದಸ್ಯ ಚ ಧೀಮತಃ ॥ ೩೦ ॥

॥ ಸ್ಕಂದ ಉವಾಚ ॥

ಅಯೇ ಭ್ರಾತರ್ನ ಶ್ರುತಾ ಚ ಹಿರಣ್ಯಕಶಿಪೋಃ ತಥಾ ।
ಹಿರಣ್ಯಾಕ್ಷಸ್ಯ ಚ ಮಧೋಃ ಕೈಟಭಸ್ಯ ಮಹಾತ್ಮನಃ ॥
ಪೂರ್ವಜಾಸ್ತೇಪಿ ತೇ ದೈತ್ಯಾ ಮಹಾಬಲಪರಾಕ್ರಮಾಃ ॥ ೩೧ ॥

ಕ್ರಮೇಣ ವಿಷ್ಣುನಾ ನೀತಾ ಲೀಲಯಾ ಯಮಸಾದನಂ ।
ಭಗವಾನ್ಯಸ್ಯ ಸಂಹರ್ತಾ ಸ್ವಯಂ ನಾರಾಯಣಃ ಪ್ರಭುಃ ॥ ೩೨ ॥

---

೨೯. ಸಕಲ ಪ್ರಪಂಚಕ್ಕೂ ಮೊದಲನೆಯವನೂ ಸಕಲಕ್ಕೂ ಕಾರಣನೂ ಸಕಲರಿಗೂ ಪ್ರಭುವೂ ಪರಾತ್ಪರನೂ ಸನಾತನನೂ ಆದ ಭಗವಂತನನ್ನು ಸಕಲ ಮುನಿಗಳೂ ಧ್ಯಾನಮಾಡುತ್ತಾರೆ.

೩೦. ಗಣೇಶನು ಹೇಳುತ್ತಾನೆ:— ಮಹಾತ್ಮನೂ ವಿಷ್ಣುಭಕ್ತನೂ ಪ್ರಹ್ಲಾದನ ಮಗನೂ ಬುದ್ಧಿವಂತನೂ ಆದ ಬಲಿಚಕ್ರವರ್ತಿಗೆ ಇಂಥಾ ಮೂಢನಾದ ಮಗನು ಹುಟ್ಟಿದುದು ಅವನ ದುರದೃಷ್ಟವೇ ಸರಿ.

೩೧. ಸ್ಕಂದನು ಹೇಳುತ್ತಾನೆ:— ಎಲೈ ತಮ್ಮನೇ! ಮಹಾತ್ಮನಾದ ಹಿರಣ್ಯಕಶಿಪು ಹಿರಣ್ಯಾಕ್ಷ ಮಧುಕೈಟಭ ಇವರುಗಳ ಕಥೆಯನ್ನು ಕೇಳಿಲ್ಲವೇ. ಆ ದೈತ್ಯರೆಲ್ಲರೂ ನಿನ್ನ ಪೂರ್ವಜರೂ ಮಹಾಬಲಪರಾಕ್ರಮವುಳ್ಳವರೂ ಆಗಿದ್ದರು.

೩೨–೩೪. ಅವರೆಲ್ಲರೂ ಕ್ರಮವಾಗಿ ವಿಷ್ಣುವಿನಿಂದ ಸುಲಭವಾಗಿ ಯಮನ ಮನೆಗೆ ಕಳುಹಿಸಲ್ಪಟ್ಟರು. ಪ್ರಭುವಾದ ಸಾಕ್ಷಾನ್ನಾರಾಯಣನು ಯಾವನನ್ನು ಸಂಹಾರಮಾಡುತ್ತಾನೋ ಅವನನ್ನು ರಕ್ಷಿಸುವವನಾವನಿದ್ದಾನೆ? ಎಲೈ ತಮ್ಮನೇ!

ತಸ್ಯ ಕೋ ರಕ್ಷಿತಾ ಭ್ರಾತರ್ನಿವರ್ತಸ್ವ ಶುಭಾಯ ಚ ।
ತೇಷಾಂ ಚ ವಚನಂ ಶ್ರುತ್ವಾ ತಾನುವಾಚಾಸುರೇಶ್ವರಃ || ೩೩ ||

ಕೋಪರಕ್ತಾಸ್ಯನಯನೋ ಧನುಷ್ಪಾಣಿರ್ಯಥಾಂತಕಃ ।
ಶೃಣು ಮಾತಃ ಪ್ರವಕ್ಷ್ಯಾಮಿ ಶೃಣು ತಾತ ಮಹೇಶ್ವರ || ೩೪ ||

ಶೃಣು ಭ್ರಾತರ್ಗಣಪತೇ ಶೃಣು ಭ್ರಾತಶ್ಚ ಕಾರ್ತಿಕ ।
ಶುಭಾಶುಭಂ ಪ್ರಾಕ್ತನೇನ ಪ್ರಾಣಿನಾಂ ಕರ್ಮಣಾಂ ತಥಾ || ೩೫ ||

ಕೃತಕರ್ಮಾತಿರಿಕ್ತಂ ಚ ಕಾರ್ಯಂ ಕೇಷಾಂ ಚ ವರ್ತತೇ ।
ನಾನಾಪ್ತಕಾಲೇ ಮ್ರಿಯತೇ ವಿದ್ಧಃ ಶರಶತೈರಪಿ || ೩೬ ||

ತೃಣಾಗ್ರೇಣಾಪಿ ಸಂಸ್ಪೃಷ್ಟಃ ಪ್ರಾಪ್ತಕಾಲೋ ನ ಜೀವತಿ ।
ಯಸ್ಮಾಚ್ಚ ಯಸ್ಯ ನಿರ್ವಾಣಂ ವಿಧಾತ್ರಾ ಲಿಖಿತಂ ಪುರಾ || ೩೭ ||

---

ನಿನ್ನ ಹಿತಕ್ಕಾಗಿ ಈ ಯುದ್ಧಮಾಡುವ ಮನಸ್ಸನ್ನು ಹಿಂದಿರುಗಿಸು. ಈ ರೀತಿಯಾಗಿ ಹೇಳಿದ ಅವರ ಮಾತನ್ನು ಕೇಳಿ ಅಸುರೇಶ್ವರನಾದ ಬಾಣನು ಕೋಪದಿಂದ ಕೆಂಪೇರಿದ ಮುಖ ಮತ್ತು ಕಣ್ಣುಗಳುಳ್ಳವನಾಗಿ ಯಮನಂತೆ ಕೈಯಲ್ಲಿ ಬಿಲ್ಲನ್ನು ಹಿಡಿದುಕೊಂಡು ಅವರನ್ನು ಕುರಿತು ಹೇಳಿದನು. ಎಲೈ ತಾಯಿಯೇ! ನಾನು ಹೇಳುವ ಮಾತನ್ನು ಕೇಳು, ಎಲೈ ತಂದೆಯಾದ ಮಹೇಶ್ವರನೇ ನೀನೂ ಕೇಳುವವ ನಾಗು.

೩೫. ಎಲೈ ಸಹೋದರನಾದ ಗಣಪತಿಯೇ! ಸಹೋದರನಾದ ಷಣ್ಮುಖನೇ! ನೀವುಗಳೂ ಕೇಳಿರಿ, ಲೋಕದಲ್ಲಿ ಪ್ರಾಣಿಗಳಿಗುಂಟಾಗುವ ಶುಭಾ ಶುಭಗಳು ಅವರವರ ಪೂರ್ವಜನ್ಮದ ಕರ್ಮಗಳಿಗನುಸಾರವಾಗಿರುತ್ತವೆ.

೩೬. ಯಾರಿಗೆ ತಾನೆ ತಾನು ಮಾಡಿದ ಪೂರ್ವಜನ್ಮದ ಕರ್ಮಕ್ಕೆ ವಿರುದ್ಧ ವಾದ ಶುಭಾಶುಭಗಳುಂಟಾಗುತ್ತವೆ. ಕಾಲವು ಬಾರದಿದ್ದರೆ ನೂರಾರು ಬಾಣಗಳಿಂದ ಹೊಡೆಯಲ್ಪಟ್ಟರೂ ಸಾಯುವುದಿಲ್ಲ.

೩೭–೩೮. ಕಾಲವು ಬಂದಿತೆಂದರೆ ಹುಲ್ಲಿನ ತುದಿಯು ಸೋಕಿದರೂ ಸಾಕು ಅವನು ಬದುಕುವುದಿಲ್ಲ. ಜನ್ಮವೆತ್ತುವ ಮುನ್ನ ಬ್ರಹ್ಮನು ಯಾವನಿಗೆ ಯಾವುದ ರಿಂದ ಮರಣವೆಂದು ಬರೆದಿರುತ್ತಾನೋ ಅದೇ ನಿತ್ಯವೂ ಸತ್ಯವೂ ಆಗಿರುತ್ತದೆ. ಈ

ತದೇವ ನಿತ್ಯಂ ಸತ್ಯಂ ಚ ನಿಷೇಕಃ ಕೇನ ವಾರ್ಯತೇ ।
ಸಂಗ್ರಾಮೇ ಕಾತರೋ ಯೋಹಿ ನಿಷ್ಫಲಂ ತಸ್ಯ ಜೀವನಂ ॥ ೩೮ ॥

ಜಯೀ ಯಶಶ್ಚ ಲಭತೇ ಮೃತಃ ಸ್ವರ್ಗಂ ಚ ಗಚ್ಛತಿ ।
ಪ್ರವಿಶ್ಯ ಕನ್ಯಾಂ ಗೃಹ್ಣಾತಿ ನಗರಂ ಶಿವರಕ್ಷಿತಂ ॥ ೩೯ ॥

ಪಾರ್ವತ್ಯಾ ಚ ಗಣೇಶೇನ ಯುದ್ಧೇನ ಬಲಿನಾ ತಥಾ ।
ಕೋ ವಾ ಗೃಹ್ಣಾತಿ ಕನ್ಯಾಂ ಚ ಕಸ್ಯ ವಾ ಜೀವಿತಸ್ಯ ಚ ॥ ೪೦ ॥

ಸಗರ್ಭಾ ತವ ಕನ್ಯೇತಿ ಸಭಾಯಾಂ ರಕ್ಷಕೋ ವದೇತ್ ।
ಇತಿ ಮೇ ವಜ್ರತುಲ್ಯಂ ಚ ಶ್ರುತಿಕಾಟಂ ಪರಂ ವಚಃ ॥ ೪೧ ॥

ಅತೋಽನಿರುದ್ಧಂ ಹತ್ವಾ ಚ ಘಾತಯಿಷ್ಯಾಮಿ ಕನ್ಯಕಾಂ ।
ಅನ್ಯಥಾ ಜ್ವಲದಗ್ನೌ ಚ ತ್ಯಕ್ಷ್ಯಾಮಿ ಚ ಕಲೇಬರಂ ॥ ೪೨ ॥

---

ರೀತಿಯಾದ ಮರಣವು ಯಾವನಿಂದ ತಡೆಯಲ್ಪಡುತ್ತದೆ. ಯಾವನು ಯುದ್ಧ ವಿಷಯದಲ್ಲಿ ಭಯಗೊಂಡವನಾಗುತ್ತಾನೋ ಅವನ ಜನ್ಮವು ವ್ಯರ್ಥವು.

೩೯–೪೦. ಯುದ್ಧದಲ್ಲಿ ಗೆದ್ದವನಾದರೆ ಕೀರ್ತಿಯನ್ನು ಹೊಂದುತ್ತಾನೆ. ಸತ್ತರೆ ವೀರಸ್ವರ್ಗವನ್ನು ಪಡೆಯುತ್ತಾನೆ. ಶಿವನಿಂದಲೂ, ಪಾರ್ವತಿಯಿಂದಲೂ, ಗಣೇಶನಿಂದಲೂ, ಬಲಿಷ್ಠನಾದ ಕುಮಾರಸ್ವಾಮಿಯಿಂದಲೂ ರಕ್ಷಿಸಲ್ಪಟ್ಟ ನಗರವನ್ನು ಪ್ರವೇಶಿಸಿ ನನ್ನ ಮಗಳನ್ನು ಸ್ವೀಕರಿಸಿರುವನಲ್ಲವೆ. ಬದುಕುವ ಆಶೆಯುಳ್ಳ ಯಾವನು ಈ ರೀತಿಯಾಗಿ ನನ್ನ ಮಗಳನ್ನು ಸ್ವೀಕರಿಸುತ್ತಾನೆ?

೪೧. ಸಭೆಯಲ್ಲಿ ನಿನ್ನ ಮಗಳು ಗರ್ಭಿಣಿಯಾಗಿರುವಳೆಂದು ಕಾವಲುಗಾರನು ಹೇಳಿದನು. ಈರೀತಿಯಾದ ವಜ್ರಾಯುಧದ ಹೊಡೆತಕ್ಕೆ ಸಮನಾದ ಮಾತು ನನಗೆ ಅತ್ಯಂತ ಕರ್ಣಕಠೋರವಾಗಿದೆ.

೪೨. ಆದುದರಿಂದ ಮೊದಲು ಅನಿರುದ್ಧನನ್ನು ಕೊಂದು, ಅನಂತರ ನನ್ನ ಮಗಳನ್ನು ಕೊಲ್ಲುತ್ತೇನೆ. ಹಾಗಲ್ಲದಿದ್ದರೆ ಉರಿಯುತ್ತಿರುವ ಬೆಂಕಿಯಲ್ಲಿ ಈ ದೇಹವನ್ನು ತೊರೆಯುತ್ತೇನೆ.

|| ಕೋಟರ್ಯುವಾಚ ||

ಶೃಣು ವತ್ಸ ಪ್ರವಕ್ಷ್ಯಾಮಿ ಮಾತಾಹಂ ತೇಽಪಿ ಧರ್ಮತಃ ।
ದುರಂತೇನಾಪಿ ಪುತ್ರೇಣ ಪಿತ್ರೋರ್ದುಃಖಂ ಪದೇಪದೇ || ೪೩ ||

ಕನ್ಯಾ ವರಗೃಹೀತಾ ಸಾಪ್ಯನ್ಯಸ್ಮೈ ದಾತುಮಕ್ಷಮಾ ।
ಶ್ರೀಕೃಷ್ಣಸ್ಯಾಪಿ ಪೌತ್ರಾಯ ಪ್ರದ್ಯುಮ್ನಸ್ಯ ಸುತಾಯ ಚ || ೪೪ ||

ಅನಿರುದ್ಧಾಯ ಮಹತೇ ಸ್ವೇಚ್ಛಯಾ ದೇಹಿ ಕನ್ಯಕಾಂ ।
ಪೂತೋಽಸಿ ಭಾರತೇ ವರ್ಷೇ ಸಪ್ತಭಿಃ ಪಿತೃಭಿಃ ಸಹ || ೪೫ ||

ಯೌತಕಂ ದೇಹಿ ಸರ್ವಸ್ವಂ ಯಶಸೇ ಮಹತೇ ಭುವಿ ।
ಅನ್ಯಥಾ ರಣಮಧ್ಯೇ ಚ ತ್ವಾಂ ಹನಿಷ್ಯತಿ ಮಾಧವಃ || ೪೬ ||

ಸುದರ್ಶನೇನ ಚಕ್ರೇಣ ಕೋ ವಾ ತ್ವಾಂ ರಕ್ಷಿತುಂ ಕ್ಷಮಃ ।
ಕೋಟರೀ ವಚನಂ ಶ್ರುತ್ವಾ ಚುಕೋಪ ದೈತ್ಯಪುಂಗವಃ || ೪೭ ||

---

೪೩. ಕೋಟರಿಯು ಹೇಳುತ್ತಾಳೆ:— ಎಲೈ ಮಗನೇ! ನಾನು ಹೇಳುವ ಮಾತನ್ನು ಕೇಳುವವನಾಗು. ನಿನಗೆ ನಾನು ಧರ್ಮದಿಂದ ತಾಯಿಯಾಗಿರುವೆನು. ದುಷ್ಟನಾದ ಮಗನಿಂದ ತಾಯಿ ತಂದೆಗಳಿಗೆ ಮತ್ತೆಮತ್ತೆ ದುಃಖವುಂಟಾಗುತ್ತದೆ.

೪೪–೪೫. ಕನ್ಯೆಯು ಪರಪುರುಷನಿಂದ ಸ್ವೀಕರಿಸಲ್ಪಟ್ಟರೆ ಅವಳನ್ನು ಮತ್ತೊಬ್ಬನಿಗೆ ಕೊಡಲು ಸಾಧ್ಯವಿಲ್ಲ. ಶ್ರೀಕೃಷ್ಣನ ಮೊಮ್ಮಗನೂ, ಪ್ರದ್ಯುಮ್ನನ ಮಗನೂ ಮಹಾತ್ಮನೂ ಆದ ಅನಿರುದ್ಧನಿಗೆ ನಿನ್ನ ಮಗಳನ್ನು ಸಂತೋಷದಿಂದ ಕೊಡುವವನಾಗು. ಹಾಗೆ ಮಾಡಿದರೆ ಈ ಭರತಭೂಮಿಯಲ್ಲಿ ನೀನು ನಿನ್ನ ಹಿಂದಿನ ಏಳುತಲೆಯ ಪಿತೃಗಳೊಡನೆ ಪವಿತ್ರನಾಗುವೆ.

೪೬–೪೭. ನಿನ್ನ ಸರ್ವಸ್ವವನ್ನೂ ಬಳುವಳಿಯಾಗಿ ಕೊಟ್ಟು, ಭೂಮಿಯಲ್ಲಿ ಹೆಚ್ಚಾದ ಕೀರ್ತಿಯನ್ನು ಹೊಂದು, ಹಾಗಿಲ್ಲದಿದ್ದರೆ ಯುದ್ಧರಂಗದಲ್ಲಿ ಮಾಧವನು ಸುದರ್ಶನ ಚಕ್ರದಿಂದ ನಿನ್ನನ್ನು ಕೊಲ್ಲುತ್ತಾನೆ. ಆಗ ನಿನ್ನನ್ನು ಕಾಪಾಡಲು ಯಾವನು ಸಮರ್ಥನಾಗುತ್ತಾನೆ? ದೈತ್ಯರಾಜನು ಕೋಟರಿಯ ಮಾತನ್ನು ಕೇಳಿ ಕೋಪಗೊಂಡನು.

ಪ್ರಿಯಯಾ ರಥಮಾರುಹ್ಯ ಯತ್ರ ಪುತ್ರೋ ಹರೇರ್ಮುನೇ ।
ಸ್ಕಂದಃ ಸೇನಾಪತಿರ್ಭೂತ್ವಾ ಪ್ರಿಯಯಾ ಶಂಕರಾಜ್ಞಯಾ ॥ ೪೮ ॥

ಬಾಣಃ ಸ್ವಸ್ತ್ಯಯನಂ ಚಕ್ರೇ ಗಣೇಶಶ್ಚ ಶಿವಃ ಸ್ವಯಂ ।
ಬಾಣಂ ಶುಭಾಶಿಷಂ ಚಕ್ರೇ ಪಾರ್ವತೀ ಕೋಟರೀ ತಥಾ ॥ ೪೯ ॥

ಅಷ್ಟೌ ಚ ಭೈರವಾಶ್ಚೈವ ರುದ್ರಾಶ್ಚೈಕಾದಶೈವ ತೇ ।
ಸರ್ವೇ ಯುದ್ಧಾಯ ಹಂತಾರೋ ಬಭೂವುಃ ಶಸ್ತ್ರಪಾಣಯಃ ॥ ೫೦ ॥

ಏತಸ್ಮಿನ್ನಂತರೇ ದೂತೋಽಪ್ಯನಿರುದ್ಧಮುವಾಚ ಹ ।
ಪಾರ್ವತ್ಯಾ ಪ್ರೇರಿತಶ್ಚೈವ ಬಾಣಪತ್ನ್ಯಾ ಚ ಸತ್ವರಂ ॥ ೫೧ ॥

॥ ದೂತ ಉವಾಚ ॥

ಅನಿರುದ್ಧೋತ್ತಿಷ್ಠ ಭದ್ರಂ ಪಾರ್ವತೀವಚನಂ ಶೃಣು ।
ಭವ ಸಾನ್ನಾಹಿಕೋ ವತ್ಸ ಕುರುಯುದ್ಧಂ ಬಹಿರ್ಭವ ॥ ೫೨ ॥

---

೪೮. ಎಲೈ ನಾರದಮುನಿಯೇ! ಬಾಣನು ರಥವನ್ನೇರಿದವನಾಗಿ ಶ್ರೀ ಹರಿಯ ಮೊಮ್ಮಗನಾದ ಅನಿರುದ್ಧನಿದ್ದೆಡೆಗೆ ಹೊರಟನು. ಶಂಕರನ ಅಪ್ಪಣೆಯಿಂದ ಸ್ಕಂದನು ಸೇನಾಪತಿಯಾಗಿ ಹೊರಟನು.

೪೯. ಬಾಣನು ಮಂಗಳಕರ್ಮವನ್ನು ಮಾಡಿದನು. ಆಗ ಗಣೇಶನೂ ಶಿವನೂ ಪಾರ್ವತಿಯೂ ಕೋಟರಿಯೂ ಬಾಣನಿಗೆ ಮಂಗಳಾಶೀರ್ವಾದವನ್ನು ಮಾಡಿದರು.

೫೦. ಅಷ್ಟಭೈರವರೂ ಏಕಾದಶರುದ್ರರೂ ಎಲ್ಲರೂ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವುದಕ್ಕೋಸ್ಕರ ಕೈಯಲ್ಲಿ ಶಸ್ತ್ರಗಳನ್ನು ಧರಿಸಿದವರಾದರು.

೫೧. ಈ ಮಧ್ಯದಲ್ಲಿ ಪಾರ್ವತಿಯಿಂದಲೂ ಬಾಣನ ಹೆಂಡತಿಯಿಂದಲೂ ಕಳುಹಿಸಲ್ಪಟ್ಟ ದೂತನೊಬ್ಬನು ಜಾಗ್ರತೆಯಾಗಿ ಬಂದು ಅನಿರುದ್ಧನನ್ನು ಕುರಿತು ಹೇಳಿದನು.

೫೨. ದೂತನು ಹೇಳುತ್ತಾನೆ:— ಅನಿರುದ್ಧನೇ! ಮೇಲಕ್ಕೇಳು, ನಿನಗೆ ಮಂಗಳವಾಗಲಿ. ಪಾರ್ವತಿಯು ಹೇಳಿದ ಮಾತನ್ನು ಕೇಳುವವನಾಗು. "ಎಲೈ ಕುಮಾರನೇ! ಯುದ್ಧಕ್ಕೆ ಸಿದ್ಧನಾಗು. ಹೊರಕ್ಕೆ ಬಾ. ಯುದ್ಧವನ್ನು ಮಾಡು."

ಭೀತೋಷಾ ರುದತೀ ತ್ರಸ್ತಾ ಸಸ್ಮಾರ ಪಾರ್ವತೀಂ ಸತೀಂ ।
ರಕ್ಷರಕ್ಷ ಮಹಾಮಾಯೇ ಮತ್ಪ್ರಾಣೇಶ್ವರಮೀಪ್ಸಿತಂ || ೫೩ ||

ಅಭಯೇಪ್ಯಭಯಂ ದೇಹಿ ಸಂಗ್ರಾಮೇ ಘೋರದಾರುಣೇ ।
ತ್ವಮೇವ ಜಗತಾಂ ಮಾತಾ ಸ್ನೇಹಸ್ತೇ ಸರ್ವತಃ ಸಮಃ || ೫೪ ||

ತಥಾನಿರುದ್ಧಃ ಸನ್ನಾಹೀ ಶಸ್ತ್ರಪಾಣಿರ್ಬಭೂವ ಹ ।
ಉಷಾದತ್ತಂ ರಥಂ ಪ್ರಾಪ್ಯ ಚಕಾರಾರೋಹಣಂ ಮುದಾ || ೫೫ ||

ಬಹಿಃಸಂಭೂಯ ಶಿಬಿರಾದ್ದದರ್ಶ ಬಾಣಮೀಶ್ವರಃ ।
ಸಾನ್ನಾಹಿಕಂ ಶಸ್ತ್ರಪಾಣಿಂ ರಕ್ತಾಸ್ಯಲೋಚನಂ ಪರಂ || ೫೬ ||

ಧೃಷ್ಟ್ವಾನಿರುದ್ಧಂ ಬಾಣಶ್ಚ ತಮುವಾಚ ರುಷಾನ್ವಿತಃ ।
ಘೋರಸಂಗ್ರಾಮಮಧ್ಯೇ ಚ ವಿಷೋಕ್ತಿಂ ಪ್ರಜ್ವಲನ್ನಿವ || ೫೭ ||

---

೫೩. ಈ ಮಾತನ್ನು ಕೇಳಿ ಊಷೆಯು ಭಯದಿಂದ ನಡುಗಿದವಳಾಗಿ ಅಳುತ್ತ ಸತಿಯಾದ ಪಾರ್ವತಿಯನ್ನು ಸ್ಮರಿಸಿದಳು. ಎಲೈ ಮಹಾಮಾಯಾಸ್ವರೂಪಳಾದ ಪಾರ್ವತಿಯೇ! ನನ್ನ ಪ್ರಾಣನಾಥನನ್ನು ಕಾಪಾಡು ಕಾಪಾಡು.

೫೪. ಅತ್ಯಂತ ಭಯಂಕರವಾದ ಯುದ್ಧದಲ್ಲಿ ಭಯವಿಲ್ಲದವನಾದಾಗ್ಯೂ ನನ್ನ ಪತಿಗೆ ಅಭಯವನ್ನು ಕರುಣಿಸುವವಳಾಗು. ನೀನೇ ಸಕಲ ಪ್ರಪಂಚಗಳಿಗೂ ತಾಯಿಯು. ನಿನಗೆ ಪ್ರೀತಿ ಎಂಬುದು ಎಲ್ಲರಲ್ಲಿಯೂ ಸಮನಾಗಿರುತ್ತದೆಯಲ್ಲವೇ.

೫೫. ಆ ಮಾತಿನಂತೆ ಅನಿರುದ್ಧನು ಯುದ್ಧಸಿದ್ಧನಾಗಿ ಕೈಯಲ್ಲಿ ಶಸ್ತ್ರವನ್ನು ಹಿಡಿದವನಾದನು. ಉಷೆಯಿಂದ ಕೊಡಲ್ಪಟ್ಟ ರಥವನ್ನು ಸಂತೋಷದಿಂದ ಹತ್ತಿದವನಾದನು.

೫೬. ತನ್ನ ಶಿಬಿರದಿಂದ ಹೊರಕ್ಕೆ ಬಂದವನಾಗಿ, ಯುದ್ಧಕ್ಕೆ ಸಿದ್ಧನಾಗಿ, ಕೈಯಲ್ಲಿ ಶಸ್ತ್ರವನ್ನು ಹಿಡಿದು, ಅತಿ ಕೆಂಪೇರಿದ ಮುಖ ಮತ್ತು ಕಣ್ಣುಗಳುಳ್ಳ ಬಾಣನನ್ನು ನೋಡಿದನು.

೫೭. ಬಾಣನು ಭಯಂಕರವಾದ ಯುದ್ಧಭೂಮಿಯಲ್ಲಿ ಅನಿರುದ್ಧನನ್ನು ನೋಡಿ ಕೋಪದಿಂದ ಉರಿಯುತ್ತಿರುವನೋ ಎಂಬಂತೆ ಆ ಅನಿರುದ್ಧನನ್ನು ಕುರಿತು ವಿಷದಂತೆ ತೀಕ್ಷ್ಣವಾದ ಮಾತುಗಳನ್ನಾಡಿದನು.

|| ಬಾಣ ಉವಾಚ ||

ಅಯೆ ವೀರ ಮಹಾದುಷ್ಟ ನೀತಿಶಾಸ್ತ್ರವಿವರ್ಜಿತ ।
ಚಂದ್ರವಂಶ ಕುಲಾಂಗಾರ ಪುಣ್ಯಕ್ಷೇತ್ರೇಽಯಶಸ್ಕರ ||೫೮||

ಪಿತಾ ತೇ ಶಂಬರಂ ಹತ್ವಾ ಜಗ್ರಾಹ ತಸ್ಯ ಕಾಮಿನೀಂ ।
ತತೋ ಜಾತೋ ಭವಾನೇವ ನಿರೋಧಂ ಸ್ವಕುಲಕ್ಷಮಂ ||೫೯||

ಪಿತಾಮಹೋ ವಾಸದೇವೋ ಮಧುರಾಯಾಂ ಚ ಕ್ಷತ್ರಿಯಃ ।
ಗೋಕುಲೇ ವೈಶ್ಯಪುತ್ರಶ್ಚ ನಾಮ್ನಾ ಚ ನಂದನಂದನಃ ||೬೦||

ವೃಂದಾವನೇ ಚ ಗೋಪಸ್ಯ ನಂದಸ್ಯ ಪಶುರಕ್ಷಕಃ ।
ಸಾಕ್ಷಾಜ್ಜಾರಶ್ಚ ಗೋಪೀನಾಂ ದುಷ್ಟಃ ಪರಮಲಂಪಟಃ ||೬೧||

ಜಘಾನ ಪೂತನಾಂ ಸದ್ಯೋ ನಾರೀಘಾತೀ ಹ್ಯಧಾರ್ಮಿಕಃ ।
ಆಗತ್ಯ ಮಧುರಾಂ ಕುಬ್ಜಾಂ ಜಘಾನ ಮೈಥುನೇನ ಚ ||೬೨||

---

೫೮–೫೯. ಎಲೈ ದುಷ್ಟನೇ! ವೀರನೇ! ನೀತಿಶಾಸ್ತ್ರವನ್ನು ಬಿಟ್ಟವನೇ! ಚಂದ್ರವಂಶದಲ್ಲಿ ಅಂಗಾರದಂತಿರುವವನೇ! ಪುಣ್ಯಕ್ಷೇತ್ರದಲ್ಲಿ ಅಪಕೀರ್ತಿಯನ್ನುಂಟು ಮಾಡುವವನೇ! ನಿನ್ನ ತಂದೆಯು ಶಂಬರಾಸುರನನ್ನು ಕೊಂದು ಅವನ ಪ್ರಿಯೆಯನ್ನು ಸ್ವೀಕರಿಸಿದನು. ಅವನಿಂದ ನೀನು ಹುಟ್ಟಿದವನಾದುದರಿಂದ ನೀನು ಮಾಡಿದ ಕೆಲಸವು ನಿನ್ನ ವಂಶಕ್ಕೆ ತಕ್ಕುದಾಗಿದೆ.

೬೦. ನಿನ್ನ ತಾತನಾದ ವಾಸುದೇವನು ಮಧುರಾಪಟ್ಟಣದಲ್ಲಿ ಕ್ಷತ್ರಿಯನಾಗಿರುವನು. ಗೋಕುಲದಲ್ಲಿ ನಂದಕುಮಾರನೆಂಬ ಹೆಸರಿನಿಂದ ವೈಶ್ಯನಾಗಿರುವನು.

೬೧. ವೃಂದಾವನದಲ್ಲಿ ನಂದನೆಂಬ ಗೋಪನ ದನಕಾಯುವವನು ಮತ್ತು ಸಾಕ್ಷಾತ್ತಾಗಿ ಗೋಪಿಯರ ಜಾರನೂ ದುಷ್ಟನೂ ಅತ್ಯಂತವಾಗಿ ಸ್ತ್ರೀಲಂಪಟನೂ ಆಗಿರುತ್ತಾನೆ.

೬೨. ಹುಟ್ಟಿದೊಡನೆಯೇ ಪೂತನಿಯನ್ನು ಕೊಂದನು. ಸ್ತ್ರೀಹತ್ಯೆಯನ್ನು ಮಾಡಿದ ಅಧಾರ್ಮಿಕನಾಗಿರುತ್ತಾನೆ. ಮಧುರಾಪಟ್ಟಣಕ್ಕೆ ಬಂದು ಕುಬ್ಜೆಯೆಂಬುವಳನ್ನು ಮೈಥುನದಿಂದ ಕೊಂದಿರುತ್ತಾನೆ.

ದುರ್ಬಲಂ ನರಕಂ ಹತ್ವಾ ಸ್ತ್ರೀಸಮೂಹಂ ಮನೋಹರಂ ।
ಜಗ್ರಾಹ ಯೋನಿಲುಬ್ಧಂ ಚ ಸ್ವಪುತ್ರಮತಿನಿಷ್ಠುರಃ　　|| ೬೩ ||

ಭೀಷ್ಮಕಂ ಮಾನವಂ ಜಿತ್ವಾ ತತ್ಪುತ್ರಂ ಚಾಪಿ ದುರ್ಬಲಂ ।
ಜಗ್ರಾಹ ಕನ್ಯಕಾಂ ತಸ್ಯ ದೇವಯೋಗ್ಯಾಂ ಚ ರುಕ್ಮಿಣೀಂ　　|| ೬೪ ||

ಸತ್ರಾಜಿತಃ ಸೂರ್ಯಭೃತ್ಯೋ ದೇವಾತ್ಪ್ರಾಪ್ಯ ಮಣೀಶ್ವರಂ ।
ಘಾತಯಿತ್ವಾ ಹ್ಯುಪಾಯೇನ ಜಗ್ರಾಹ ಮಣಿಕನ್ಯಕಾಂ　　|| ೬೫ ||

ಕುರುಪಾಂಡವಯುದ್ಧಂ ಚ ಕಾರಯಿತ್ವಾ ಚ ದಾರುಣಂ ।
ಯುಧಿಷ್ಠಿರಸ್ಯ ಯಜ್ಞೇ ಚ ಶಿಶುಪಾಲಂ ಜಘಾನ ಸಃ　　|| ೬೬ ||

ದಂತವಕ್ತ್ರಂ ಚ ಶಾಲ್ವಂ ಚ ಜರಾಸಂಧಂ ಚ ದಾರುಣಃ ।
ಸಂಜಹಾರ ಭುವೋ ಭೂಪಸಮೂಹಮತಿದಾರುಣಂ　　|| ೬೭ ||

---

೬೩. ಬಲಹೀನನಾದ ನರಕಾಸುರನನ್ನು ಕೊಂದು ಮನೋಹರವಾದ ಸ್ತ್ರೀ ಸಮೂಹವನ್ನು ಸ್ವೀಕರಿಸಿರುವನು. ಯೋನಿಗೆ ಆಶೆಪಟ್ಟವನಾದ ತನ್ನ ಪುತ್ರನನ್ನು ಮನ್ನಿಸಿರುವನು.

೬೪. ದುರ್ಬಲನಾದ ಭೀಷ್ಮಕನನ್ನೂ ಅವನ ಮಗನನ್ನೂ ಹಿಂಸಿಸಿ, ಅವನ ಮಗಳಾದ ದೇವತೆಗಳಿಗೆ ಯೋಗ್ಯಳಾದ ರುಕ್ಮಿಣಿಯನ್ನು ತೆಗೆದುಕೊಂಡನು.

೬೫. ಸತ್ರಾಜಿತನೆಂಬುವನು ಸೂರ್ಯನ ಭಕ್ತನಾಗಿ ಆ ಸೂರ್ಯದೇವನಿಂದ ಸ್ಯಮಂತಕಮಣಿಯನ್ನು ಪಡೆದಿದ್ದನು. ಉಪಾಯದಿಂದ ಅವನನ್ನು ಕೊಂದು ಆ ಮಣಿಯನ್ನೂ ಅವನ ಮಗಳನ್ನೂ ಪಡೆದನು.

೬೬. ಕೌರವರಿಗೂ ಪಾಂಡವರಿಗೂ ಭಯಂಕರವಾದ ಯುದ್ಧವಾಗುವಂತೆ ಮಾಡಿ ಧರ್ಮರಾಜನು ಮಾಡಿದ ರಾಜಸೂಯ ಯಾಗದಲ್ಲಿ ಶಿಶುಪಾಲನನ್ನು ಕೊಂದನು.

೬೭. ದಂತವಕ್ರನನ್ನೂ ಶಾಲ್ವನನ್ನೂ ಜರಾಸಂಧನನ್ನೂ ಭೂಮಿಯಲ್ಲಿರುವ ಘೋರ ರಾಜಸಮೂಹವನ್ನೂ ಮಹಾಭಯಂಕರನಾದ ಆ ಕೃಷ್ಣನು ಸಂಹಾರ ಮಾಡಿದನು.

ಉಪಾಯೇನ್ನರಕಂ ಹತ್ವಾ ಸರ್ವಸ್ವಂ ತಜ್ಜಹಾರ ಸಃ ।
ದುರ್ಬಲೋ ರಾಜಭೀತಶ್ಚ ಸಮುದ್ರಂ ಶರಣಂ ಗತಃ ॥ ೧೮ ॥

ಜಿತ್ವಾ ಚ ಭ್ರಾತರಂ ಶಕ್ರಂ ಭಾರ್ಯಾಯಾ ವಚನೇನ ಚ ।
ಜಗ್ರಾಹ ಪಾರಿಜಾತಂ ಚ ಪುಷ್ಪಂ ಚ ಸ್ವರ್ಗ ದುರ್ಲಭಂ ॥ ೧೯ ॥

ಕಂಸಂ ನಿಹತ್ಯಾಧರ್ಮಿಷ್ಠೋ ಭ್ರಾತರಂ ಮಾತುರೇವ ಚ ।
ಜಗ್ರಾಹ ತಸ್ಯ ಸರ್ವಸ್ವಂ ಪರಂ ಕಿಂ ಕಥಯಾಮಿ ತೇ ॥ ೨೦ ॥

ಜಿತ್ವಾ ಚ ಭಲ್ಲುಕಂ ಯುದ್ಧೇ ಜಗ್ರಾಹ ತಸ್ಯ ಕನ್ಯಕಾಂ ।
ತತ್ಪಿತುರ್ಭಗಿನೀ ಕುಂತೀ ಚತುರ್ಣಾಂ ಕಾಮಿನೀ ಭುವಿ ॥ ೨೧ ॥

ದ್ರೌಪದೀ ಭ್ರಾತೃಪತ್ನೀ ಚ ಪಂಚಾನಾಂ ಕಾಮಿನೀ ತಥಾ ।
ಗೋಪ್ತೀನೋ ಯೋನಿಲುಬ್ಧಶ್ಚ ಶಶ್ವತ್ಪರಮಲಂಪಟಃ ॥ ೨೨ ॥

---

೧೮. ಉಪಾಯದಿಂದ ನರಕನನ್ನು ಕೊಂದು ಅವನ ಸರ್ವಸ್ವವನ್ನೂ ಅಪಹರಿಸಿದನು. ಬಲವಿಲ್ಲದವನಾಗಿ ರಾಜನಿಗೆ ಹೆದರಿ ಸಮುದ್ರನನ್ನು ಮರೆಹೊಕ್ಕನು.

೧೯. ಹೆಂಡತಿಯಾದ ಸತ್ಯಭಾಮೆಯ ಮಾತನ್ನು ಕೇಳಿ ಸೋದರನಾದ ಇಂದ್ರನನ್ನು ಗೆದ್ದು ಸ್ವರ್ಗಲೋಕಕ್ಕೂ ದುರ್ಲಭವಾದ ಪಾರಿಜಾತವನ್ನು ತನ್ನ ವಶಮಾಡಿಕೊಂಡನು.

೨೦. ತಾಯಿಯ ತಮ್ಮನಾದ ಕಂಸನನ್ನು ಅಧರ್ಮನಿರತನಾದ ಕೃಷ್ಣನು ಕೊಂದು ಅವನ ಸರ್ವಸ್ವವನ್ನೂ ತೆಗೆದುಕೊಂಡನು. ಇದಕ್ಕಿಂತಲೂ ಹೆಚ್ಚಾಗಿ ನಿನಗೇನನ್ನು ಹೇಳಲಿ.

೨೧. ಕರಡಿಯನ್ನು ಯುದ್ಧದಲ್ಲಿ ಗೆದ್ದು ಅವನ ಮಗಳನ್ನು ಸ್ವೀಕರಿಸಿದನು. ಆ ಕೃಷ್ಣನ ತಂದೆಯ ಸಹೋದರಿಯಾದ ಕುಂತಿಯಾದರೊ ಭೂಮಿಯಲ್ಲಿ ನಾಲ್ವರನ್ನು ಕಾಮಿಸಿರುವಳು. (ಧರ್ಮ, ವಾಯು, ಇಂದ್ರ, ಪಾಂಡು)

೨೨. ದ್ರೌಪದಿಯು ಐವರು ಸಹೋದರರಿಗೂ ಪ್ರಿಯಳಾಗಿ ಅವರ ಹೆಂಡತಿಯಾಗಿರುವಳು. ಕೃಷ್ಣನು ರಹಸ್ಯವಾಗಿ ಯೋನಿಯಲ್ಲಿ ಆಶೆಯುಳ್ಳವನೂ ಯಾವಾಗಲೂ ಸ್ತ್ರೀಲಂಪಟನೂ ಆಗಿರುವನು.

ತಜ್ಜ್ಯೇಷ್ಠೋ ಬಲದೇವಶ್ಚ ಶಶ್ವತ್ಪಿಬತಿ ವಾರುಣೀಂ ।
ಯಮುನಾಂ ಭ್ರಾತೃಪತ್ನೀಂ ಚ ಕರೋತ್ಯಾಹ್ವಾನಮೀಪ್ಸಿತಂ ॥ ೭೩ ॥

ಜಹಾರ ಭಗಿನೀಂ ತಸ್ಯ ಕೌಂತೇಯಃ ಶಕ್ರನಂದನಃ ।
ಸುಭದ್ರಾಂ ಮಾತುಲಸುತಾಂ ಸನ್ನಿಬೋಧ ಕುಲಕ್ರಮಂ ॥ ೭೪ ॥

ಬಾಣಸ್ಯ ವಚನಂ ಶ್ರುತ್ವಾ ಚುಕೋಪ ಕಾಮನಂದನಃ ।
ಉವಾಚ ಪರಮಾರ್ಥಂ ಚ ಯೋಗ್ಯಂ ಪ್ರತ್ಯುತ್ತರಂ ಮುನೇ ॥ ೭೫ ॥

॥ ಅನಿರುದ್ಧ ಉವಾಚ ॥

ಪಿತಾ ಮೇ ಕಾಮದೇವಶ್ಚ ಬ್ರಹ್ಮಪುತ್ರಃ ಪುರಾ ಶುಚಿಃ ।
ಯಸ್ಯಾಸ್ತ್ರೇಣ ವಶೀಭೂತಂ ತ್ರೈಲೋಕ್ಯಂ ಸತತಂ ಶೃಣು ॥ ೭೬ ॥

ಶಿವಕೋಪಾನಲೇನೈವ ಭಸ್ಮೀಭೂತಃ ಸ್ವಕರ್ಮತಃ ।
ಕೃಷ್ಣಸ್ಯ ಪುತ್ರೋಽಪ್ಯಧುನಾ ಸರ್ವೇಷಾಂ ಪರಮಾತ್ಮನಃ ॥ ೭೭ ॥

---

೭೩. ಅವನ ಅಣ್ಣನಾದ ಬಲರಾಮನು ಯಾವಾಗಲೂ ಮದ್ಯಪಾನವನ್ನು ಮಾಡುತ್ತಾನೆ. ಸೋದರನ ಹೆಂಡತಿಯಾದ ಯಮುನೆಯನ್ನು ಇಷ್ಟಪಟ್ಟು ಕರೆಯುತ್ತಾನೆ.

೭೪. ಅವನ ತಂಗಿಯೂ, ತನ್ನ ಸೋದರಮಾವನ ಮಗಳೂ ಆದ ಸುಭದ್ರೆಯನ್ನು ಕುಂತಿಯ ಮಗನೂ ಇಂದ್ರನ ಮಗನೂ ಆದ ಅರ್ಜುನನು ಅಪಹರಿಸಿದನು. ನಿನ್ನ ವಂಶದ ಚರಿತ್ರೆಯನ್ನು ಚೆನ್ನಾಗಿ ತಿಳಿದುಕೋ.

೭೫. ಬಾಣನಾಡಿದ ಮಾತನ್ನು ಕೇಳಿ ಮನ್ಮಥನ ಮಗನಾದ ಅನಿರುದ್ಧನು ಕೋಪಗೊಂಡನು. ಮತ್ತು ಯಥಾರ್ಥವಾಗಿಯೂ ಯೋಗ್ಯವಾಗಿಯೂ ಇರುವ ಪ್ರತ್ಯುತ್ತರವನ್ನು ಹೇಳಿದನು.

೭೬. ಅನಿರುದ್ಧನು ಹೇಳುತ್ತಾನೆ:— ನನ್ನ ತಂದೆಯಾದ ಕಾಮದೇವನು ಹಿಂದೆ ಬ್ರಹ್ಮನ ಮಗನು. ಪರಿಶುದ್ಧನಾದವನು. ಯಾವ ಕಾಮದೇವನ ಅಸ್ತ್ರದಿಂದ ಯಾವಾಗಲೂ ಮೂರುಲೋಕಗಳೂ ಸ್ವಾಧೀನವಲ್ಲಿರುವುವು.

೭೭. ಅವನು ತಾನುಮಾಡಿದ ಕರ್ಮದ ಫಲವಾಗಿ ಈಶ್ವರನ ಕೋಪದಿಂದುಂಟಾದ ಬೆಂಕಿಯಿಂದ ಸುಟ್ಟು ಬೂದಿಯಾದನು. ಈಗ ಅವನು ಸಕಲರಿಗೂ ಪರಮಾತ್ಮನಾದ ಶ್ರೀಕೃಷ್ಣನ ಮಗನಾಗಿರುವನು.

ಪತಿವ್ರತಾ ರತಿರ್ಮಾತಾ ಪತಿಶೋಕೇನ ಸಾಂಪ್ರತಂ ।
ಶಂಬರಸ್ಯ ಗೃಹೇ ತಸ್ಥೌ ಹೃತಾ ತೇನ ಬಲೇನ ಚ ॥ ೭೮ ॥

ಛಾಯಾಂ ಮಾಯಾವತೀಂ ದತ್ತ್ವಾ ಮಾಯಯಾ ಶಯನೇನ ಚ ।
ರತಿಂ ಸ್ವಧರ್ಮಂ ಸಂರಕ್ಷ್ಯ ಧರ್ಮಸಾಕ್ಷೀ ಚ ತದ್ಗೃಹೇ ॥ ೭೯ ॥

ನಿಹತ್ಯ ಶಂಬರಂ ಶತ್ರುಂ ಗೃಹೀತ್ವಾ ಸ್ವಪ್ರಿಯಾಂ ಸತೀಂ ।
ಆಜಗಾಮ ದ್ವಾರಕಾಂ ಚ ಚಂದ್ರಸೂರ್ಯೌ ಚ ಸಾಕ್ಷಿಣೌ ॥ ೮೦ ॥

ಪಿತಾಮಹಂ ವಾಸುದೇವಂ ತ್ವಂ ಕಿಂ ಜಾನಾಸಿ ಮೂಢವತ್ ।
ಯಂ ಚ ಸಂತೋ ನ ಜಾನಂತಿ ವೇದಾಶ್ಚತ್ವಾರ ಏವ ಚ ॥ ೮೧ ॥

ವಾಸುಃ ಸರ್ವನಿವಾಸಶ್ಚ ವಿಶ್ವಾನಿ ಯಸ್ಯ ಲೋಮಸು ।
ತಸ್ಯ ದೇವಃ ಪರಂ ಬ್ರಹ್ಮ ವಾಸುದೇವ ಇತಿ ಸ್ಮೃತಃ ॥ ೮೨ ॥

---

೭೮. ಪತಿವ್ರತೆಯಾದ ನನ್ನ ತಾಯಿಯಾದ ರತಿಯು ಗಂಡನ ಮರಣದಿಂದ ಉಂಟಾದ ದುಃಖದಿಂದ ವ್ಯಥೆಗೊಂಡಿದ್ದಳು. ಶಂಬರನು ಅವಳನ್ನು ಬಲಾತ್ಕಾರದಿಂದ ಅಪಹರಿಸಲು ಅವನ ಮನೆಯಲ್ಲಿದ್ದಳು.

೭೯. ಅವಳು ಮಾಯೆಯಿಂದ ಮಾಯಾವತಿಯೆಂಬುವಳಲ್ಲಿ ತನ್ನ ನೆರಳನ್ನಿಟ್ಟು ಶಂಬರನ ಶಯನಮಂದಿರದಲ್ಲಿ ಅವಳನ್ನು ಬಿಟ್ಟು ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡಳು. ಇದಕ್ಕೆ ಧರ್ಮನು ಸಾಕ್ಷಿಯಾಗಿರುವನು.

೮೦. ನನ್ನ ತಂದೆಯು ಶತ್ರುವಾದ ಶಂಬರನನ್ನು ಕೊಂದು ತನ್ನ ಪತ್ನಿಯಾದ ರತಿಯನ್ನು ಕರೆದುಕೊಂಡು ದ್ವಾರಕಾನಗರಕ್ಕೆ ಬಂದನು. ಈ ವಿಷಯದಲ್ಲಿ ಸೂರ್ಯ ಮತ್ತು ಚಂದ್ರ ಇವರುಗಳು ಸಾಕ್ಷಿಗಳು.

೮೧. ನನ್ನ ತಾತನಾದ ವಾಸುದೇವನನ್ನು ಜ್ಞಾನಿಗಳು ನಾಲ್ಕುವೇದಗಳೂ ಕೂಡ ತಿಳಿಯಲಾರರು. ಹೀಗಿರುವಲ್ಲಿ ಮೂಢನಾದ ನೀನೇನು ತಿಳಿಯುವೆ.

೮೨. ವಾಸು ಎಂದರೆ ಸಕಲ ಪ್ರಪಂಚಕ್ಕೂ ಆಧಾರಭೂತನಾದವನು. ಯಾವನ ರೋಮಗಳಲ್ಲಿ ಈ ಪ್ರಪಂಚವು ವಾಸಿಸಿರುವುದು. ಅದಕ್ಕೆ ದೇವನೆಂದರೆ ಪರಬ್ರಹ್ಮನೆಂದರ್ಥ. ಆದುದರಿಂದಲೇ ವಾಸುದೇವನೆಂದು ಪ್ರಸಿದ್ಧನಾಗಿರುವನು.

ಶಂಕರಂ ಪೃಚ್ಛ ಸಾಕ್ಷಾಚ್ಚ ಯಸ್ಯ ಭೃತ್ಯೋಽಧುನಾ ಭವಾನ್ ।
ಕೃಷ್ಣಭೃತ್ಯಸ್ಯ ಚ ಬಲೇಃ ಪುತ್ರೋಽಸಿ ಕಿಂಕರಾತ್ಮಜ ॥ ೮೩ ॥

ಗೋಕುಲೇ ವೈಶ್ಯಪುತ್ರಸ್ತ್ವಂ ಬ್ರೂಹಿ ತ್ವಂ ಜ್ಞಾನದುರ್ಬಲಾ ।
ಭೋಜನಂ ವೇದವಿಹಿತಂ ಶಶ್ವತ್ಕ್ಷತ್ರಿಯವೈಶ್ಯಯೋಃ ॥ ೮೪ ॥

ದ್ರೋಣಃ ಪ್ರಜಾಪತಿಃ ಶ್ರೇಷ್ಠೋ ಧರಾ ತಸ್ಯ ಪ್ರಿಯಾ ಸತೀ ।
ಪುತ್ರಂ ಚ ತಪಸಾ ಲೇಭೇ ಪರಮಾತ್ಮಾನಮೀಶ್ವರಂ ॥ ೮೫ ॥

ದ್ರೋಣೋ ನಂದೋ ವೈಶ್ಯರಾಜೋ ಯಶೋದಾ ಸಾ ಧರಾ ಸತೀ ।
ವೃಷಭಾನಸುತಾ ರಾಧಾ ಸುದಾಮ್ನಃ ಶಾಪಕಾರಣಾತ್ ॥ ೮೬ ॥

ತ್ರಿಂಶತ್ಕೋಟಿಂ ಚ ಗೋಪೀನಾಂ ಗೃಹೀತ್ವಾ ಭರ್ತುರಾಜ್ಞಯಾ ।
ಪುಣ್ಯಂ ಚ ಭಾರತಂ ಕ್ಷೇತ್ರಂ ಗೋಲೋಕಾದಾಜಗಾಮ ಸಾ ॥ ೮೭ ॥

---

೮೩. ಅಲ್ಲದೆ ನೀನು ಈಶ್ವರನ ಸೇವಕನಾಗಿರುವುದರಿಂದ ಈ ವಿಷಯವನ್ನು ಈಶ್ವರನಲ್ಲಿಯೇ ಕೇಳಿ ತಿಳಿದುಕೊ. ನೀನು ಕೃಷ್ಣನ ಸೇವಕನಾದ ಬಲಿಯ ಮಗನಾಗಿರುವುದರಿಂದ ಕೃಷ್ಣನ ಸೇವಕನ ಮಗನಾಗಿರುವೆ.

೮೪. ನೀನು ಜ್ಞಾನವಿಲ್ಲದವನಾಗಿ ವಾಸುದೇವನನ್ನು ಗೋಕುಲದಲ್ಲಿ ವೈಶ್ಯನ ಮಗನೆಂದು ಹೇಳುತ್ತಿರುವೆ. ಕ್ಷತ್ರಿಯರಿಗೂ ವೈಶ್ಯರಿಗೂ ಯಾವಾಗಲೂ ಪರಸ್ಪರ ರೊಡನೆ ಭೋಜಮಾಡುವುದೆಂಬುದು ವೇದದಲ್ಲಿ ಹೇಳಲ್ಪಟ್ಟಿದೆ.

೮೫. ದ್ರೋಣಯೆಂಬುವನೊಬ್ಬ ಶ್ರೇಷ್ಠನಾದ ಬ್ರಹ್ಮನು. ಭೂಮಿಯು ಅವನ ಪತ್ನಿಯು. ಆ ದ್ರೋಣನು ತಪಸ್ಸನ್ನು ಮಾಡಿ ಸರ್ವೇಶ್ವರನಾದ ಪರಮಾತ್ಮನು ಮಗನಾಗುವಂತೆ ವರವನ್ನು ಪಡೆದನು.

೮೬. ಈಗ ದ್ರೋಣನೆಂಬುವವನೇ ನಂದನೆಂಬ ವೈಶ್ಯರಾಜನಾಗಿರುವನು. ಭೂಮಿಯೇ ಯಶೋದೆಯ ರೂಪದಲ್ಲಿ ಅವನ ಹೆಂಡತಿಯಾಗಿರುವಳು. ಸುದಾಮನ ಶಾಪದಿಂದ ರಾಧೆಯು ವೃಷಭಾನನ ಮಗಳಾಗಿರುವಳು.

೮೭. ಅವಳು ಸ್ವಾಮಿಯ ಅಪ್ಪಣೆಯಪ್ರಕಾರ ಮೂವತ್ತುಕೋಟಿ ಗೋಪಿಯರನ್ನು ಕರೆದುಕೊಂಡು ಗೋಕುಲದಿಂದ ಪುಣ್ಯಕರವಾದ ಭಾರತಕ್ಷೇತ್ರಕ್ಕೆ ಬಂದಿರುವಳು.

ತಾಭಿಃ ಸಾರ್ಧಂ ಸ ರೇಮೇ ಚ ಸ್ವಪತ್ನೀಭಿರ್ಮುದಾನ್ವಿತಃ ।
ತೇಜಸಾ ಹರಿತುಲ್ಯಾಸ್ತೇ ಪಾರ್ಷದಪ್ರವರಾ ಹರೇಃ ॥ ೮೯ ॥

ಗೋರಕ್ಷಣಂ ಹರೇರೇವ ಗೋಪವೇಷಸ್ಯ ಚಾತ್ಮನಃ ।
ಗೋಪಾನಾಂ ಶಿಶುರಕ್ಷಾಥ ಮಾಯೇಶಸ್ಯಾಪಿ ಮಾಯಯಾ ॥ ೯೦ ॥

ಪೂತನಾ ಬಲಿಕನ್ಯಾ ಚ ಭಗಿನೀ ಚ ತವಾಸುರ ।
ದೃಷ್ಟ್ವಾ ಚ ವಾಮನಂ ವಿಂಧ್ಯಾ ಚಕಾರ ಪುತ್ರಮಾನಸಂ ॥ ೯೧ ॥

ಏವಂ ಭೂತೋ ಯದಿ ಮಮ ಪುತ್ರೋ ಭವತಿ ಸಾಂಪ್ರತಂ ।
ಸ್ತನಂ ದದಾಮಿ ತನಯಂ ಕೃತ್ವಾ ವಕ್ಷಸಿ ಸುಂದರಂ ॥ ೯೨ ॥

ತಸ್ಯಾಃ ಪೂರ್ಣಂ ಮಾನಸಂ ಚ ಚಕಾರ ಭಗವಾನ್ಪ್ರಭುಃ ।
ಸ್ತನಂ ದತ್ವಾ ಚ ಗೋಲೋಕಂ ಯಯೌ ಸಾ ರತ್ನಯಾನತಃ ॥ ೯೩ ॥

---

೮೮. ಪರಮಾತ್ಮನು ತನ್ನ ಪತ್ನಿಯರಾದ ಅವರೊಂದಿಗೆ ವಿಹರಿಸುವವನಾದನು. ರಾಧೆಯ ಪಾಣಿಗ್ರಹಣವನ್ನು ಮಾಡಿದನು. ಬ್ರಹ್ಮನೇ ಸಾಕ್ಷಾತ್ತಾಗಿ ಪುರೋಹಿತನಾಗಿದ್ದನು.

೮೯. ಗೋಲೋಕದಿಂದ ಗೋಪರುಗಳು ಆನಂದದಿಂದ ಗುಂಪುಗುಂಪಾಗಿ ಬಂದರು. ಅವರೆಲ್ಲರೂ ಹರಿಯ ಸೇವಕರು ಅವರು. ಕಾಂತಿಯಿಂದ ಹರಿಗೆ ಸಮಾನರಾಗಿರುವರು.

೯೦. ಮಾಯೆಗೆ ಒಡೆಯನಾಗಿ ತನ್ನ ಮಾಯೆಯಿಂದ ಗೋಪವೇಷವನ್ನು ಧರಿಸಿರುವ ಹರಿಗೆ ಹಸುಗಳನ್ನು ಕಾಪಾಡುವುದು ಗೋಪರ ಮಕ್ಕಳನ್ನು ಕಾಪಾಡುವುದು ಇವುಗಳು ಸಹಜವಾದವುಗಳೇ ಆಗಿವೆ.

೯೧–೯೨. ಎಲೈ ಅಸುರನೇ! ಪೂತನಿಯೆಂಬುವಳು ಬಲಿಯ ಮಗಳೂ ನಿನ್ನ ತಂಗಿಯೂ ಆಗಿರುವಳು. ವಾಮನನನ್ನು ನೋಡಿ ಬಂಜೆಯಾದ ಅವಳು ಮಗನನ್ನು ಪಡೆಯುವ ಇಷ್ಟವುಳ್ಳವಳಾಗಿ ನನಗೆ ಇಂಥಾವನು ಮಗನಾದಪಕ್ಷದಲ್ಲಿ ಸುಂದರವಾದ ಆ ಮಗನನ್ನು ಎದೆಗಪ್ಪಿಕೊಂಡು ಸ್ತನ್ಯವನ್ನು ಕೊಡುತ್ತೇನೆ ಎಂದುಕೊಂಡಳು.

೯೩. ಪೂಜ್ಯನಾದ ಪರಮಾತ್ಮನು ಅವಳ ಇಷ್ಟವನ್ನು ಪೂರ್ತಿಗೊಳಿಸಿದನು. ಅವಳು ಕೃಷ್ಣನಿಗೆ ಸ್ತನ್ಯಪಾನಮಾಡಿಸಿ ರತ್ನಮಯವಾದ ವಿಮಾನದಲ್ಲಿ ಕುಳಿತು ಗೋಲೋಕಕ್ಕೆ ಹೋದಳು.

ಕುಬ್ಜಾ ಸಾ ಭಗಿನೀ ಪೂರ್ವಂ ರಾವಣಸ್ಯ ದುರಾತ್ಮನಃ ।
ಶ್ರೀರಾಮಂ ಚಕಮೇ ಕಾಮಾನ್ನಾಮ್ನಾ ಶೂರ್ಪನಖಾ ಸತೀ ॥ ೯೪ ॥

ನಾಸಾಂ ಚಿಚ್ಛೇದ ತಸ್ಯಾಶ್ಚ ಲಕ್ಷ್ಮಣೋ ಧಾರ್ಮಿಕೇಶ್ವರಃ ।
ತಪಸಾ ಚ ವರಂ ಲೇಭೇ ಬ್ರಹ್ಮಣಃ ಪ್ರಿಯಮೀಶ್ವರಂ ॥ ೯೫ ॥

ತೇನ ಪುಣ್ಯೇನ ತಂ ಲಬ್ಧ್ವಾ ಗೋಲೋಕಂ ಸಾ ಜಗಾಮ ಹ ।
ಗೋಪೀ ಬಭೂವ ಗೋಲೋಕೇ ಕೃಷ್ಣಸ್ಯಾಲಿಂಗನೇನ ಚ ॥ ೯೬ ॥

ನರಕೋ ಹರಿವಧ್ಯಶ್ಚ ಸ್ವಪೂರ್ವಪ್ರಾಕ್ತನೇನ ಚ ।
ಪಾಣಿಂ ಜಗ್ರಾಹ ಕನ್ಯಾನಾಂ ಸಾಕ್ಷಿಣೌ ಶಶಿಭಾಸ್ಕರೌ ॥ ೯೭ ॥

ಭೀಷ್ಮಕನ್ಯಾ ಮಹಾಲಕ್ಷ್ಮೀಃ ಶ್ರೀಕೃಷ್ಣಸ್ಯ ಪ್ರಿಯಾಸತೀ।
ವೈಕುಂಠಾದಾಗತಾ ಸಾಧ್ವೀ ಬ್ರಹ್ಮಣೋನುಮತೇನ ಚ ॥ ೯೮ ॥

---

೯೪ ಆ ಕುಬ್ಜೆಯೆಂಬುವಳು ಹಿಂದಿನ ಜನ್ಮದಲ್ಲಿ ದುಷ್ಟನಾದ ರಾವಣನ ತಂಗಿಯಾದ ಶೂರ್ಪಣಖಿಯೆಂಬುವಳು. ಅವಳು ಆಗ ಶ್ರೀರಾಮನನ್ನು ನೋಡಿ ಅವನನ್ನು ಕಾಮಿಸಿದಳು.

೯೫. ಧಾರ್ಮಿಕರಲ್ಲಿ ಶ್ರೇಷ್ಠನಾದ ಲಕ್ಷ್ಮಣನು ಅವಳ ಮೂಗನ್ನು ಕುಯಿದನು. ಅವಳು ತಪಸ್ಸನ್ನು ಮಾಡಿ ಬ್ರಹ್ಮನಿಂದ ತನಗೆ ಪರಮಾತ್ಮನು ಗಂಡನಾಗುವಂತೆ ವರವನ್ನು ಹೊಂದಿದಳು.

೯೬. ಆ ಪುಣ್ಯದಿಂದ ಅವನನ್ನು ಪಡೆದು ಅವಳು ಗೋಲೋಕಕ್ಕೆ ಹೋದಳು. ಕೃಷ್ಣನ ಆಲಿಂಗನ ಪ್ರಭಾವದಿಂದ ಗೋಲೋಕದಲ್ಲಿ ಅವಳೂ ಕೂಡ ಗೋಪಿಯಾದಳು.

೯೭ ನರಕನು ತನ್ನ ಹಿಂದಿನ ಜನ್ಮದ ಕರ್ಮದಿಂದ ಹರಿಯಿಂದ ಕೊಲ್ಲಲ್ಪಡತಕ್ಕವನಾಗಿದ್ದನು. ಅವನ ಮನೆಯಲ್ಲಿದ್ದ ಕನ್ಯೆಯರನ್ನು ಶ್ರೀಕೃಷ್ಣನು ಮದುವೆ ಮಾಡಿಕೊಂಡನು. ಇದಕ್ಕೆ ಸೂರ್ಯಚಂದ್ರರು ಸಾಕ್ಷಿಗಳಾಗಿರುವರು.

೯೮. ಭೀಷ್ಮಪುತ್ರಿಯು ಸಾಕ್ಷಾತ್ ಮಹಾಲಕ್ಷ್ಮಿಯು. ಬ್ರಹ್ಮನ ಇಷ್ಟದಂತೆ ವೈಕುಂಠದಿಂದ ಬಂದು ಶ್ರೀಕೃಷ್ಣನ ಪತ್ನಿಯಾಗಿರುವಳು

ಸತ್ರಾಜಿತಸ್ಯ ಕನ್ಯಾ ಸಾ ಸತ್ಯಭಾಮಾ ವಸುಂಧರಾ ।
ದದೌ ಕೃಷ್ಣಾಯ ರಾಜಾ ಸ ತಂ ಮಣಿಂ ಯೌತುಕೇನ ಚ ॥ ೯೯ ॥

ಭುವೋ ಭಾರಾವತರಣ ಹೇತುನಾ ಗಮನಂ ಹರೇಃ ।
ಸಂಜಹಾರ ಭುವೋ ಭಾರಂ ಕುರುಪಾಂಡವಯುದ್ಧತಃ ॥ ೧೦೦ ॥

ಶಿಶುಪಾಲೋ ದಂತವಕ್ರೋ ಜಯೋ ವಿಜಯ ಏವ ಚ ।
ದ್ವಾರಿಣೋ ದ್ವಾರಷಟ್ಕೇ ಚ ವೈಕುಂಠೇ ಶ್ರೀಹರೇರಪಿ ॥ ೧೦೧ ॥

ಕುಮಾರಶಾಪಾತ್ಪತಿತೌ ಪ್ರಾಪ್ಯ ಜನ್ಮತ್ರಯಂ ಧ್ರುವಂ ।
ಹಿರಣ್ಯಕಶಿಪುಶ್ಚೈವ ತನ್ವೈವ ಪೂರ್ವ ಪೂರುಷಃ ॥ ೧೦೨ ॥

ತಸ್ಯ ಭ್ರಾತಾ ಹಿರಣ್ಯಾಕ್ಷಸ್ತೇನೈವ ವರುಣೋ ಜಿತಃ ।
ಹರಿರ್ನೃಸಿಂಹರೂಪೇಣ ತಂ ಜಘಾನಾವಲೀಲಯಾ ॥ ೧೦೩ ॥

---

೯೯. ಸತ್ರಾಜಿತನ ಮಗಳಾದ ಆ ಸತ್ಯಭಾಮೆಯು ಭೂಮಿದೇವಿಯು. ರಾಜನಾದ ಸತ್ರಾಜಿತನು ಅವಳನ್ನು ಕೃಷ್ಣನಿಗೆ ಮದುವೆಮಾಡಿಕೊಟ್ಟನು. ಮತ್ತು ಆ ಮಣಿಯನ್ನು ಬಳುವಳಿಯಾಗಿ ಕೊಟ್ಟನು.

೧೦೦. ಶ್ರೀಹರಿಯು ಭೂಮಿಯ ಭಾರವನ್ನು ಇಳುಹುವುದಕ್ಕಾಗಿ ಭೂಮಿಯಲ್ಲಿ ಅವತರಿಸಿರುವನು. ಕೌರವ ಪಾಂಡವ ಯುದ್ಧ ಮೂಲಕವಾಗಿ ಭೂಮಿಯ ಭಾರವನ್ನು ನಾಶಮಾಡಿದನು.

೧೦೧. ಶಿಶುಪಾಲ ಮತ್ತು ದಂತವಕ್ರ ಇವರಿಬ್ಬರೂ ವೈಕುಂಠದಲ್ಲಿ ಶ್ರೀಹರಿಯ ದ್ವಾರಪಾಲಕರಾದ ಜಯ ಮತ್ತು ವಿಜಯ ಎಂಬುವರು.

೧೦೨–೧೦೩. ಸನತ್ಕುಮಾರ ಶಾಪದಿಂದ ಮೂರು ಜನ್ಮಗಳನ್ನು ಪಡೆದು ಭೂಮಿಯಲ್ಲಿ ಬಿದ್ದರು. ಅದರಲ್ಲಿ ಹಿರಣ್ಯಕಶಿಪು ಎಂಬುವನು ನಿನ್ನ ಪೂರ್ವ ಪುರುಷನು. ಅವನ ಸೋದರನು ಹಿರಣ್ಯಾಕ್ಷನೆಂಬುವನು. ಅವನಿಂದ ವರುಣನು ಜಯಿಸಲ್ಪಟ್ಟನು. ಪರಮಾತ್ಮನು ನರಸಿಂಹರೂಪದಿಂದ ಹಿರಣ್ಯಕಶಿಪುವನ್ನು ಸುಲಭವಾಗಿ ಕೊಂದನು.

ಸೂಕರೇಣ ಹತೋನ್ಯಶ್ಚ ಪೂರ್ವಜನ್ಮ ಕಥಾಂ ಶೃಣು ।
ದ್ವಿತೀಯೇ ಜನ್ಮನಿ ಪುರಾ ರಾವಣಃ ಕುಂಭಕರ್ಣಕಃ ॥ ೧೦೪ ॥

ಶ್ರೀರಾಮೇಣ ಹತೌ ತೌ ದ್ವೌ ಶೇಷಜನ್ಮ ಕಲೌ ತಯೋಃ ।
ಶ್ರೀಕೃಷ್ಣೇನ ಹತೌ ತೌ ದ್ವೌ ಧರ್ಮಪುತ್ರಾವುಭೌ ತಥಾ ॥ ೧೦೫ ॥

ಜರಾಸಂಧಶ್ಚ ಶಾಲ್ವಶ್ಚ ದುರಾತ್ಮಾ ಕಂಸ ಏವ ಚ ।
ಪ್ರಾಕ್ತನಾತ್ತಸ್ಯ ವಧ್ಯಾಸ್ತೇ ಭುವೋ ಭಾರಜಿಹೀರ್ಷಯಾ ॥ ೧೦೬ ॥

ಮಾಂಧಾತುಃ ಸುತಮಧ್ಯೇ ಚ ಯವನಶ್ಚಾಪಿ ಪ್ರಾಕ್ತನಾತ್ ।
ಲಕ್ಷ್ಮೀಶ್ವರಸ್ಯ ಕೃಷ್ಣಸ್ಯ ಧನೇನ ಕಿಂ ಪ್ರಯೋಜನಂ ॥ ೧೦೭ ॥

ಪ್ರತಿಜ್ಞಯಾ ಚ ಸತ್ಯಾಯಾಃ ಪುಣ್ಯಕವ್ರತಕಾರಣಾತ್ ।
ಪಾರಿಜಾತಂ ಸಮಾನೀಯ ಚಕಾರ ಸ್ವಾತ್ಮನೋ ವ್ರತಂ ॥ ೧೦೮ ॥

---

೧೦೪. ಇನ್ನೊಬ್ಬನಾದ ಹಿರಣ್ಯಾಕ್ಷನು ಹಂದಿಯರೂಪವನ್ನು ಧರಿಸಿದ ಪರಮಾತ್ಮನಿಂದ ಕೊಲ್ಲಲ್ಪಟ್ಟನು. ಹಿಂದಿನ ಜನ್ಮದ ಕಥೆಯನ್ನು ಕೇಳುವವನಾಗು. ಎರಡನೆಯ ಜನ್ಮದಲ್ಲಿ ರಾವಣ ಕುಂಭಕರ್ಣ ಎಂದು ಹುಟ್ಟಿದರು.

೧೦೫. ಅವರಿಬ್ಬರೂ ಶ್ರೀರಾಮನಿಂದ ಕೊಲ್ಲಲ್ಪಟ್ಟರು. ಅವರಿಬ್ಬರ ಉಳಿದ ಮತ್ತೊಂದು ಜನ್ಮವು ಕಲಿಯುಗದ ಆದಿಯಲ್ಲಾಗಿರುವುದು. ಧರ್ಮಪುತ್ರರಾದ ಅವರಿಬ್ಬರೂ ಶ್ರೀಕೃಷ್ಣನಿಂದ ಹತರಾದರು.

೧೦೬. ಜರಾಸಂಧ ಶಾಲ್ವ ದುಷ್ಟನಾದ ಕಂಸ ಇವರುಗಳು ತಮ್ಮ ಪೂರ್ವ ಜನ್ಮದ ಕರ್ಮಕ್ಕನುಸಾರವಾಗಿ ಭೂಭಾರವನ್ನು ಹೋಗಲಾಡಿಸುವುದಕ್ಕಾಗಿ ಆ ಕೃಷ್ಣನಿಂದ ಕೊಲ್ಲಲ್ಪಟ್ಟರು.

೧೦೭. ಮಾಂಧಾತ ಚಕ್ರವರ್ತಿಯ ಮಕ್ಕಳ ಮಧ್ಯದಲ್ಲಿ ಯವನನೆಂಬುವನೂ ಕೂಡ ತನ್ನ ಪೂರ್ವ ಕರ್ಮಾನುಸಾರವಾಗಿ ಹತನಾದನು. ಲಕ್ಷ್ಮಿಯ ಪತಿಯಾದ ಶ್ರೀಕೃಷ್ಣನಿಗೆ ಧನದಿಂದಾಗಬೇಕಾದುದೇನು ?

೧೦೮. ಸತ್ಯಭಾಮೆಯು ಪುಣ್ಯಪ್ರದವಾದ ವ್ರತವನ್ನು ಮಾಡುವುದಾಗಿ ಸಂಕಲ್ಪ ಮಾಡಿದ ಕಾರಣ ಪಾರಿಜಾತ ವೃಕ್ಷವನ್ನು ತರುವುದರ ಮೂಲಕ ಅವಳು ಸಂಕಲ್ಪಿಸಿದ ವ್ರತವನ್ನು ಪೂರ್ತಿಗೊಳಿಸಿದನು.

ಸ್ವಯಂ ಜಾಂಬವತೀ ದೇವೀ ದುರ್ಗಾಂಶಾ ಭಲ್ಲುಕಾತ್ಮಜಾ।
ಪಾಣಿಂ ಜಗ್ರಾಹ ತಸ್ಯಾಶ್ಚ ತಪಸಾ ಭಾರತೇ ಹರಿಃ ॥ ೧೦೯ ॥

ಕುಂತ್ಯಾಶ್ಚ ಕ್ಷೇತ್ರಜಾಃ ಪುತ್ರಾಃ ಕೇವಲಂ ಭರ್ತುರಾಜ್ಞಯಾ।
ಕಲೌ ನಿಷಿದ್ಧಂ ತ್ರಿಯುಗೇ ಪ್ರಸಿದ್ಧಂ ಪಲಪೈತೃಕಂ ॥ ೧೧೦ ॥

ಯುಧಿಷ್ಠಿರೋ ಧರ್ಮಪುತ್ರೋ ಭೀಮಶ್ಚ ಪವನಾತ್ಮಜಃ।
ಮಹೇಂದ್ರಪುತ್ರೋ ಧರ್ಮಿಷ್ಠಃ ಫಾಲ್ಗುನೋ ವಿಜಯೀ ಭುವಿ ॥ ೧೧೧ ॥

ಯಸ್ಮೈ ಪಾಶುಪತಂ ಶಂಭುಃ ಪ್ರದದೌ ಚ ಸ್ವಯಂ ಪುರಾ।
ಅಶ್ವಮೇಧಂ ಗವಾಲಂಭಂ ಸಂನ್ಯಾಸಂ ಪಲಪೈತೃಕಂ ॥ ೧೧೨ ॥

ದೇವರೇಣ ಸುತೋತ್ಪತ್ತಿಂ ಕಲೌ ಪಂಚ ವಿವರ್ಜಯೇತ್।
ದ್ರೌಪದ್ಯಾಃ ಪಂಚ ಭರ್ತಾರಃ ಶಾಂಕರೇಣ ವರೇಣ ಚ ॥ ೧೧೩ ॥

---

೧೦೯. ಕರಡಿಯ ಮಗಳಾಗಿದ್ದರೂ ಜಾಂಬವತಿಯು ಸಾಕ್ಷಾತ್ ದುರ್ಗಾದೇವಿಯ ಅಂಶದಿಂದ ಹುಟ್ಟಿದವಳು. ಅವಳ ತಪಸ್ಸಿನ ಫಲವಾಗಿ ಶ್ರೀಹರಿಯು ಭಾರತದಲ್ಲಿ ಅವಳನ್ನು ಮದುವೆಯಾದನು.

೧೧೦. ಕುಂತಿಗೆ ಅವಳ ಗಂಡನ ಅಪ್ಪಣೆಯ ಪ್ರಕಾರ ಅವಳಲ್ಲಿ ಮಕ್ಕಳುಗಳು ಹುಟ್ಟಿದರು. ಈ ಧರ್ಮವು (ಪತಿಯ ಆಜ್ಞೆಯಿಂದ ಇತರರಿಂದ ಸಂತಾನವನ್ನು ಪಡೆಯುವುದು, ಮಾಂಸದಿಂದ ಪಿತೃಶ್ರಾದ್ಧವನ್ನು ಮಾಡುವುದು ಮುಂತಾದುವುಗಳು) ಕಲಿಯುಗದಲ್ಲಿ ನಿಷೇಧಿಸಲ್ಪಟ್ಟಿರುತ್ತದೆ. ಉಳಿದ ಮೂರು ಯುಗಗಳಲ್ಲಿ ಪ್ರಸಿದ್ಧವಾಗಿರುವುದು.

೧೧೧-೧೧೩. ಯುಧಿಷ್ಠಿರನು ಧರ್ಮನ ಮಗನು. ಭೀಮನು ವಾಯುತನಯನು. ಅರ್ಜುನನು ಮಹೇಂದ್ರನ ಮಗನು. ಇವನು ಧರ್ಮನಿರತನೂ ಭೂಮಿಯಲ್ಲಿ ವಿಜಯಶೀಲನೆಂದು ಪ್ರಸಿದ್ಧನೂ ಆಗಿರುವನು. ಯಾವ ಆ ಅರ್ಜುನನಿಗೆ ಪೂರ್ವದಲ್ಲಿ ಸಾಕ್ಷಾದೀಶ್ವರನು ಮೆಚ್ಚಿದವನಾಗಿ ಪಾಶುಪತಾಸ್ತ್ರವನ್ನು ಕೊಟ್ಟಿರುವನು. ಅಶ್ವಮೇಧಯಾಗ, ಗೋವನ್ನು ಪಶುಮಾಡುವಯಾಗ, ಸನ್ಯಾಸ. ಮಾಂಸದಿಂದ ಪಿತೃಶ್ರಾದ್ಧ, ಗಂಡನ ಸೋದರರಿಂದ ಸಂತಾನ ಪಡೆಯುವಿಕೆ, ಈ ಐದನ್ನು ಕಲಿಯುಗದಲ್ಲಿ ಮಾಡಬಾರದು. ದ್ರೌಪದಿಗೆ ಐದುಮಂದಿ ಗಂಡಂದಿರಾಗಿರುವುದೆಂಬರೆ ಅದು ಶ್ರೀಶಂಕರನ ವರಪ್ರದಾನದಿಂದಾಗಿರುವುದು.

ಬಲದೇವಃ ಪುಷ್ಪಮಧು ಪೂತಂ ಪಿಬತಿ ನಿತ್ಯಶಃ ।
ಚಕಾರ ಯಮುನಾಸ್ನಾನಂ ಸ್ನಾನಾರ್ಥಂ ಧಾರ್ಮಿಕಃ ಶುಚಿಃ ॥ ೧೧೪ ॥

ಸುಭದ್ರಾಂ ಚ ದದೌ ಕೃಷ್ಣಃ ಫಲ್ಗುನಾಯ ಮಹಾತ್ಮನೇ ।
ಕನ್ಯಕಾ ಮಾತುಲಾನಾಂ ಚ ದಾಕ್ಷಿಣಾತ್ಯಃ ಪರಿಗ್ರಹಃ ॥ ೧೧೫ ॥

ದೇಶೇಷ್ವನ್ಯೇಷು ದೋಷೋಽಯಮಿತ್ಯಾಹ ಕಮಲೋದ್ಭವಃ ॥ ೧೧೬ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಬಾಣಾನಿರುದ್ಧಸಂವಾದೇ
ಪಂಚದಶಾಧಿಕಶತತಮೋಽಧ್ಯಾಯಃ.

---

೧೧೪. ಬಲದೇವನು ಯಾವಾಗಲೂ ಶುದ್ಧವಾದ ಹೂವಿನ ಮಕರಂದವನ್ನು ಕುಡಿಯುತ್ತಾನೆ. ಧಾರ್ಮಿಕನೂ ಪರಿಶುದ್ಧನೂ ಆದ ಬಲದೇವನು ಸ್ನಾನಮಾಡುವುದಕ್ಕಾಗಿ ಯಮುನೆಯನ್ನು ಆಹ್ವಾನಮಾಡುತ್ತಾನೆ.

೧೧೫. ಶ್ರೀಕೃಷ್ಣನು ಮಹಾತ್ಮನಾದ ಅರ್ಜುನನಿಗೆ ಸುಭದ್ರೆಯನ್ನು ಕೊಟ್ಟನು. ದಕ್ಷಿಣದೇಶದವರು ಸೋದರಮಾವನ ಮಗಳನ್ನು ಮದುವೆಮಾಡಿಕೊಳ್ಳುವುದು ವಾಡಿಕೆಯಾಗಿರುತ್ತದೆ.

೧೧೬. ಈ ವಾಡಿಕೆಯು ಬೇರೆದೇಶದಲ್ಲಿ ನಿಂದಿತವಾಗಿರುತ್ತದೆಂದು ಬ್ರಹ್ಮನು ಹೇಳಿರುವನು.

ಇಂತು ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣನಾರದ ಸಂವಾದದಲ್ಲಿ
ಬಾಣ ಅನಿರುದ್ಧರ ಸಂವಾದವೆಂಬ
ನೂರಹದಿನೈದನೆಯ ಅಧ್ಯಾಯವು ಸಮಾಪ್ತವು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಷೋಡಶಾಧಿಕಶತತಮೋಽಧ್ಯಾಯಃ ||

|| ಬಾಣ ಉವಾಚ ||

ಅನಿರುದ್ಧ ಬುಧೋಽಸಿ ತ್ವಂ ತ್ವಯೋಕ್ತಂ ಸತ್ಯಮೇವ ಚ |
ಶಂಭುನಾ ಚೈವ ಮುಕ್ತಂ ಚ ಸರ್ವಂ ಬುದ್ಧಂ ಸ್ವಚೇತಸಾ || ೧ ||

ತ್ವಯೋಕ್ತಂ ಶಂಕರವರಾತ್ಪಂಚಾನಾಂ ಸ್ವಾಮಿನಾಂ ಪ್ರಿಯಾ |
ದ್ರೌಪದೀ ಚ ಮಹಾಭಾಗಾ ತನ್ಮೇ ವ್ಯಾಖ್ಯಾತುಮರ್ಹಸಿ || ೨ ||

ಶಂಬರೇಣ ಹೃತಾ ಪೂರ್ವಂ ತವ ಮಾತಾ ಕಥಂ ರತಿಃ |
ದೇವೈರಪಿ ಕಥಂ ದತ್ತಾ ದೇವಾಸ್ತೇನ ಜಿತಾ ಕಥಂ || ೩ ||

---

### ನೂರ ಹದಿನಾರನೆಯ ಅಧ್ಯಾಯವು.

೧. ಬಾಣನು ಹೇಳುತ್ತಾನೆ :— ಎಲೈ ಅನಿರುದ್ಧನೇ! ನೀನು ಮಹಾ ನಿಪುಣನು. ನೀನು ಹೇಳಿದುದು ಸತ್ಯವಾಗಿದೆ. ಶಂಭುವೂ ಕೂಡ ಹೀಗೆ ಹೇಳಿರುವನು. ಅದೆಲ್ಲವನ್ನೂ ನಾನು ಮನಸ್ಸಿನಲ್ಲಿ ತಿಳಿದಿರುವೆನು.

೨. ಮಹಾತ್ಮಳಾದ ದ್ರೌಪದಿಯು ಶಂಕರನ ವರದಿಂದ ಐವರು ಪತಿಗಳಿಗೆ ಹೆಂಡತಿಯಾದಳೆಂದು ನೀನು ಹೇಳಿದೆಯಲ್ಲವೇ? ಅದನ್ನು ನನಗೆ ವಿವರವಾಗಿ ಹೇಳುವವನಾಗು.

೩. ನಿನ್ನ ತಾಯಿಯಾದ ರತಿಯು ಈ ಹಿಂದೆ ಶಂಬರನಿಂದ ಹೇಗೆ ಅಪಹರಿಸಲ್ಪಟ್ಟಳು? ದೇವತೆಗಳು ಅವಳ ಪತಿಯನ್ನು ಮತ್ತೆ ಹೇಗೆ ಕೊಟ್ಟರು? ಅವನಿಂದ ದೇವತೆಗಳು ಹೇಗೆ ಜಯಿಸಲ್ಪಟ್ಟರು? ಈ ವಿವರಗಳನ್ನು ತಿಳಿಸುವವನಾಗು.

|| ಅನಿರುದ್ಧ ಉವಾಚ ||

ಏಕದಾ ರಘುನಾಥಶ್ಚ ಸೀತಯಾ ಲಕ್ಷ್ಮಣೇನ ಚ ।
ಸ್ನಾತಃ ರಹಸಿ ತತ್ರಸ್ಥೋ ರಮ್ಯೇ ಪಂಚವಟೀತಟೇ || ೪ ||

ಉವಾಚ ಸೀತಾ ಹೇಮಂತೇ ಜಲಂ ಸುಸ್ವಾದು ನಿರ್ಮಲಂ ।
ತಥಾನ್ನಂ ವ್ಯಂಜನಂ ರಮ್ಯಂ ಸರ್ವಂ ವಸ್ತು ಸುಶೀತಲಂ || ೫ ||

ಫಲಾವಚಯನಂ ಚಕ್ರೇ ಸೀತಾಯೈ ಪ್ರದದೌ ಮುದಾ ।
ತತೋ ದದೌ ಲಕ್ಷ್ಮಣಾಯ ಪಶ್ಚಾದ್ಭುಂಕ್ತೇ ಸ್ವಯಂ ಪ್ರಭುಃ || ೬ ||

ಲಕ್ಷ್ಮಣಸ್ತದ್ಗೃಹೀತ್ವಾ ಚ ನೈವ ಭುಂಕ್ತೇ ಫಲಂ ಜಲಂ ।
ಮೇಘನಾದವಧಾರ್ಥಂ ಚ ಸೀತೋದ್ಧಾರಣಕಾರಣಾತ್ || ೭ ||

ನಿದ್ರಾಂ ನ ಯಾತಿ ನೋ ಭುಂಕ್ತೇ ವರ್ಷಾಣಾಂ ಚ ಚತುರ್ದಶ ।
ಯ ಏವಂ ಪುರುಷೋ ಯೋಗೀ ತದ್ವಧ್ಯೋ ರಾವಣಾತ್ಮಜಃ || ೮ ||

---

೪. ಅನಿರುದ್ಧನು ಹೇಳುತ್ತಾನೆ:— ಒಂದಾನೊಂದುದಿನ ಶ್ರೀರಾಮನು ಸೀತೆಯೊಡನೆಯೂ ಲಕ್ಷ್ಮಣನೊಡನೆಯೂ ಸ್ನಾನಮಾಡಿ ಮನೋಹರವಾದ ಪಂಚವಟಿಯ ಆಶ್ರಮ ಪ್ರದೇಶದಲ್ಲಿದ್ದನು.

೫. ಸೀತೆಯು ರಾಮನನ್ನು ಕುರಿತು ಈ ಹೇಮಂತಋತುವಿನಲ್ಲಿ ನೀರು ಅತಿ ರುಚಿಯಾಗಿಯೂ ಶುಭ್ರವಾಗಿಯೂ ಇರುತ್ತದೆ. ಹಾಗೆಯೇ ಅನ್ನವೂ ಇತರ ಆಹಾರ ಪದಾರ್ಥಗಳೂ ಮಧುರವಾಗಿಯೂ ಶೀತಲವಾಗಿಯೂ ಇರುತ್ತವೆ ಎಂದು ಹೇಳಿದಳು.

೬. ಆಗ ರಾಮನು ದಿವ್ಯವಾದ ಹಣ್ಣುಗಳನ್ನು ಕುಯಿದು ತಂದನು. ಅದನ್ನು ಸಂತೋಷದಿಂದ ಸೀತೆಗೆ ಕೊಟ್ಟನು. ಆಮೇಲೆ ಲಕ್ಷ್ಮಣನಿಗೆ ಕೊಟ್ಟನು. ಅನಂತರ ತಾನು ತಿನ್ನುತ್ತಿದ್ದನು.

೭. ಲಕ್ಷ್ಮಣನು ಆ ಹಣ್ಣನ್ನು ತೆಗೆದುಕೊಂಡು ತಿನ್ನುತ್ತಿರಲಿಲ್ಲ ಮತ್ತು ನೀರನ್ನು ಕೂಡ ಕುಡಿಯುತ್ತಿರಲಿಲ್ಲ. ಏಕೆಂದರೆ ಮುಂದೆ ರಾವಣನಿಂದ ಅಪಹೃತಳಾದ ಸೀತೆಯನ್ನು ಬಿಡಿಸುವ ಸಮಯದಲ್ಲಿ ಮೇಘನಾದನನ್ನು ಕೊಲ್ಲಬೇಕಾಗುವುದು.

೮. ಆದುದರಿಂದಲೇ ಲಕ್ಷ್ಮಣನು ನಿದ್ರೆಮಾಡುತ್ತಿರಲಿಲ್ಲ ಊಟಮಾಡುತ್ತಿರಲಿಲ್ಲ. ಈ ರೀತಿ ಹದಿನಾಲ್ಕು ವರುಷಗಳವರೆಗೆ ಯಾವನಿರುತ್ತಾನೋ ಅವನು ರಾವಣನ ಮಗನಾದ ಮೇಘನಾದನನ್ನು ಕೊಲ್ಲಲು ಸಮರ್ಥನು.

ಏತಸ್ಮಿನ್ನಂತರೇ ರಾಮಂ ದ್ರಷ್ಟುಂ ಕಮಲಲೋಚನಂ ।
ವಹ್ನಿಸ್ತತ್ರ ಸಮಾಯಾತೋ ದ್ವಿಜರೂಪೀ ಕೃಪಾನಿಧಿಃ ।
ಭವಿಷ್ಯತ್ಕಥಯಾಮಾಸ ಶೃತಿಕಾಟಿಪರಂ ವಚಃ ॥ ೯ ॥

॥ ವಹ್ನಿರುವಾಚ ॥

ಶೃಣು ರಾಮ ಮಹಾಭಾಗ ಸೀತಾ ಸಂಗೋಪನಂ ಕುರು ॥ ೧೦ ॥

ಸಪ್ತಾಹಾಭ್ಯಂತರೇ ಚೈವ ರಾವಣೋ ದುಷ್ಟರಾಕ್ಷಸಃ ।
ದುರ್ನಿವಾರ್ಯಃ ಪ್ರಾಕ್ತನೇನ ಜಾನಕೀಂ ಚ ಹರಿಷ್ಯತಿ ॥ ೧೧ ॥

ವಿಧಾತ್ರಾ ಲಿಖಿತಂ ಕರ್ಮ ಪ್ರಾಕ್ತನಂ ಕೇನ ವಾರ್ಯತೇ ।
ದೇವೈಶ್ಚತುರ್ಭಿಃ ಕಥಿತಂ ನ ಚ ದೈವಾತ್ಪರಂ ವರಂ ॥ ೧೨ ॥

॥ ಶ್ರೀರಾಮ ಉವಾಚ ॥

ಸೀತಾಂ ಗೃಹೀತ್ವಾ ತ್ವಂ ಗಚ್ಛ ಛಾಯಾತ್ರೈವ ತು ತಿಷ್ಠತು ।
ಕಲತ್ರವರ್ಜನಂ ಕರ್ಮ ಸರ್ವೇಷಾಂ ಚ ಜುಗುಪ್ಸಿತಂ ॥ ೧೩ ॥

---

೯. ಈ ಸಮಯದಲ್ಲಿ ತಾವರೆಯಂತೆ ಮನೋಹರವಾದ ಕಣ್ಣುಳ್ಳ ಶ್ರೀರಾಮನನ್ನು ನೋಡುವುದಕ್ಕಾಗಿ ಅಗ್ನಿಯು ದಯೆಯಿಂದ ಬ್ರಾಹ್ಮಣ ವೇಷವನ್ನು ಧರಿಸಿದವನಾಗಿ ರಾಮನಿದ್ದೆಡೆಗೆ ಬಂದನು. ಮತ್ತು ಮುಂದಿನ ಕರ್ಣಕಠೋರವಾದ ಮಾತನ್ನು ಹೇಳಿದನು.

೧೦. ಅಗ್ನಿಯು ಹೇಳುತ್ತಾನೆ:—ಎಲೈ ಮಹಾತ್ಮನಾದ ರಾಮನೇ! ನಾನು ಹೇಳುವ ಮಾತನ್ನು ಕೇಳುವವನಾಗು. ಸೀತೆಯನ್ನು ಸಂರಕ್ಷಣೆ ಮಾಡುವವನಾಗು.

೧೧. ದುಷ್ಟನಾದ ರಾವಣನೆಂಬ ರಾಕ್ಷಸನು ಇನ್ನು ಏಳುದಿನಗಳೊಳಗಾಗಿ ಜಾನಕಿಯನ್ನು ಕದ್ದೊಯ್ಯುವನು. ಹಿಂದಿನ ಜನ್ಮದ ಕರ್ಮ ಪರಿಪಾಕದ ಫಲವಾಗಿ ಇದು ಪರಿಹರಿಸಲಸಾಧ್ಯವಾದುದು.

೧೨. ಬ್ರಹ್ಮನಿಂದ'ಬರೆಯಲ್ಪಟ್ಟ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದ ಫಲವು ಯಾರಿಂದತಾನೆ ನಿವಾರಿಸಲ್ಪಡುತ್ತದೆ. ಈ ಅಂಶವು ನಿಪುಣರಾದ ದೇವತೆಗಳಿಂದ "ಅದೃಷ್ಟಕ್ಕಿಂತಲೂ ಮಿಗಿಲಾದುದಾವುದೂ ಇಲ್ಲ" ಎಂಬುದಾಗಿ ಹೇಳಲ್ಪಟ್ಟಿರುವುದು.

೧೩. ಶ್ರೀರಾಮನು ಹೇಳುತ್ತಾನೆ:— ಪತ್ನಿಯಿಲ್ಲದೆ ಕರ್ಮಮಾಡುವುದು ಸಕಲರಿಗೂ ನಿಂದಿತವು, ಆದುದರಿಂದ ನೀನು ಸೀತೆಯನ್ನು ಕರೆದುಕೊಂಡು ಹೋಗು. ಅವಳ ಛಾಯೆಯು ಮಾತ್ರ ಇಲ್ಲಿ ನನ್ನೊಡನೆ ಇರಲಿ.

ಸೀತಾಂ ಗೃಹೀತ್ವಾ ಪ್ರಯಯೌ ರುದಂತೀಂ ಚ ಹುತಾಶನಃ ।
ಸೀತಯಾ ಸದೃಶೀ ಛಾಯಾ ಯಾ ತಸ್ಥೌ ರಾಮಸನ್ನಿಧೌ　　　॥ ೨೪ ॥

ಸಾ ಚ ಚ್ಛಾಯಾ ಹೃತಾ ಪೂರ್ವಂ ರಾವಣೇನಾವಲೀಲಯಾ ।
ಸಮುದ್ದಧಾರ ತಾಂ ರಾಮೋ ನಿಹತ್ಯ ತಂ ಸಬಾಂಧವಂ　　　॥ ೧೫ ॥

ವಹ್ನಾ ಪರೀಕ್ಷಾಕಾಲೇ ಚ ಛಾಯಾ ವಹ್ನಾ ವಿವೇಶ ಯಾ ।
ಅಗ್ನಿಚ್ಛಾಯಾಂ ಚ ಸಂರಕ್ಷ್ಯ ದದೌ ರಾಮಾಯ ಜಾನಕೀಂ　　　॥ ೧೬ ॥

ರಾಮಸ್ತಾಂ ಚ ಗೃಹೀತ್ವಾ ಚ ಪ್ರಯಯೌ ಸ್ವಾಶ್ರಮಂ ಮುದಾ ।
ಛಾಯಾ ತಸ್ಥೌ ವಹ್ನಿಪಾರ್ಶ್ವೇ ಹೃದಯೇನ ವಿದೂಯತಾ　　　॥ ೧೭ ॥

ಸಾ ಚ ಛಾಯಾ ತಪಶ್ಚಕ್ರೇ ನಾರಾಯಣಸರೋವರೇ ।
ತಪಶ್ಚಕಾರ ದಿವ್ಯಂ ಚ ಶತವರ್ಷಂ ಚ ಶೂಲಿನಃ　　　॥ ೧೮ ॥

---

೧೪–೧೫. ಅಗ್ನಿಯು ಅಳುತ್ತಲಿರುವ ಸೀತೆಯನ್ನು ಕರೆದುಕೊಂಡು ಹೊರಟು ಹೋದನು. ರಾಮನೊಡನೆ ಸೀತೆಯಂತೆಯೇ ಇರುವ ಛಾಯೆಯು ಮಾತ್ರ ಇರಲು ಆ ಚ್ಛಾಯಾಸೀತೆಯನ್ನೇ ಪೂರ್ವದಲ್ಲಿ ಬಲವಂತನಾದ ರಾವಣನು ಕದ್ದೊಯಿದನು. ರಾಮನು ಬಂಧುಗಳಿಂದೊಡಗೊಂಡ ಆ ರಾವಣನನ್ನು ಕೊಂದು ಸೀತೆಯನ್ನು ಬಿಡಿಸಿ ಕೊಂಡನು.

೧೬. ಅಗ್ನಿಪರೀಕ್ಷೆಯ ಕಾಲದಲ್ಲಿ ಆ ಚ್ಛಾಯಾಸೀತೆಯು ಬೆಂಕಿಯಲ್ಲಿ ಬೀಳಲು ಅಗ್ನಿಯು ಆ ಚ್ಛಾಯೆಯನ್ನು ಕಾಪಾಡಿ ನಿಜವಾದ ಸೀತೆಯನ್ನು ರಾಮನಿಗೆ ತಂದೊಪ್ಪಿಸಿದನು.

೧೭. ರಾಮನು ಸಂತೋಷದಿಂದ ಆ ಸೀತೆಯನ್ನು ಸ್ವೀಕರಿಸಿದವನಾಗಿ ತನ್ನ ಆಶ್ರಮವನ್ನು ಸೇರಿದನು. ಛಾಯೆಯು ಮಾತ್ರ ಮನಸ್ಸಿನಲ್ಲಿಯೇ ವ್ಯಥೆಗೊಳ್ಳುತ್ತ ಅಗ್ನಿಯ ಸಮೀಪದಲ್ಲಿಯೇ ಇದ್ದಳು.

೧೮. ಆ ಚ್ಛಾಯೆಯು ನಾರಾಯಣ ಸರೋವರದಲ್ಲಿ ದೈವಮಾನದ ಒಂದು ನೂರುವರುಷಗಳವರೆಗೆ ಶಂಕರನನ್ನು ಕುರಿತು ತಪಸ್ಸನ್ನು ಮಾಡಿದಳು.

ಏತಸ್ಮಿನ್ನಂತರೇ ರಾಮಂ ದ್ರಷ್ಟುಂ ಕಮಲಲೋಚನಂ ।
ವಹ್ನಿಸ್ತತ್ರ ಸಮಾಯಾತೋ ದ್ವಿಜರೂಪೀ ಕೃಪಾನಿಧಿಃ ।
ಭವಿಷ್ಯತ್ಕಥಯಾಮಾಸ ಶ್ರುತಿಕಟುಪರಂ ವಚಃ ॥ ೯ ॥

॥ ವಹ್ನಿರುವಾಚ ॥

ಶೃಣು ರಾಮ ಮಹಾಭಾಗ ಸೀತಾ ಸಂಗೋಪನಂ ಕುರು ॥ ೧೦ ॥

ಸಪ್ತಾಹಾಭ್ಯಂತರೇ ಚೈವ ರಾವಣೋ ದುಷ್ಟರಾಕ್ಷಸಃ ।
ದುರ್ನಿವಾರ್ಯಃ ಪ್ರಾಕ್ತನೇನ ಜಾನಕೀಂ ಚ ಹರಿಷ್ಯತಿ ॥ ೧೧ ॥

ವಿಧಾತ್ರಾ ಲಿಖಿತಂ ಕರ್ಮ ಪ್ರಾಕ್ತನಂ ಕೇನ ವಾರ್ಯತೇ ।
ದೇವೈಶ್ಚತುರ್ಭಿಃ ಕಥಿತಂ ನ ಚ ದೈವಾತ್ಪರಂ ವರಂ ॥ ೧೨ ॥

॥ ಶ್ರೀರಾಮ ಉವಾಚ ॥

ಸೀತಾಂ ಗೃಹೀತ್ವಾ ತ್ವಂ ಗಚ್ಛ ಛಾಯಾತ್ರೈವ ತು ತಿಷ್ಠತು ।
ಕಲತ್ರವರ್ಜನಂ ಕರ್ಮ ಸರ್ವೇಷಾಂ ಚ ಜುಗುಪ್ಸಿತಂ ॥ ೧೩ ॥

---

೯. ಈ ಸಮಯದಲ್ಲಿ ತಾವರೆಯಂತೆ ಮನೋಹರವಾದ ಕಣ್ಣುಳ್ಳ ಶ್ರೀರಾಮನನ್ನು ನೋಡುವುದಕ್ಕಾಗಿ ಅಗ್ನಿಯು ದಯೆಯಿಂದ ಬ್ರಾಹ್ಮಣ ವೇಷವನ್ನು ಧರಿಸಿದವನಾಗಿ ರಾಮನಿದ್ದೆಡೆಗೆ ಬಂದನು. ಮತ್ತು ಮುಂದಿನ ಕರ್ಣಕಠೋರವಾದ ಮಾತನ್ನು ಹೇಳಿದನು.

೧೦. ಅಗ್ನಿಯು ಹೇಳುತ್ತಾನೆ:—ಎಲೈ ಮಹಾತ್ಮನಾದ ರಾಮನೇ! ನಾನು ಹೇಳುವ ಮಾತನ್ನು ಕೇಳುವವನಾಗು. ಸೀತೆಯನ್ನು ಸಂರಕ್ಷಣೆ ಮಾಡುವವನಾಗು.

೧೧. ದುಷ್ಟನಾದ ರಾವಣನೆಂಬ ರಾಕ್ಷಸನು ಇನ್ನು ಏಳುದಿನಗಳೊಳಗಾಗಿ ಜಾನಕಿಯನ್ನು ಕದ್ದೊಯ್ಯುವನು. ಹಿಂದಿನ ಜನ್ಮದ ಕರ್ಮ ಪರಿಪಾಕದ ಫಲವಾಗಿ ಇದು ಪರಿಹರಿಸಲಸಾಧ್ಯವಾದುದು.

೧೨. ಬ್ರಹ್ಮನಿಂದ 'ಬರೆಯಲ್ಪಟ್ಟ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದ ಫಲವು ಯಾರಿಂದತಾನೆ ನಿವಾರಿಸಲ್ಪಡುತ್ತದೆ. ಈ ಅಂಶವು ನಿಪುಣರಾದ ದೇವತೆಗಳಿಂದ "ಅದೃಷ್ಟಕ್ಕಿಂತಲೂ ಮಿಗಿಲಾದುದಾವುದೂ ಇಲ್ಲ" ಎಂಬುದಾಗಿ ಹೇಳಲ್ಪಟ್ಟಿರುವುದು.

೧೩. ಶ್ರೀರಾಮನು ಹೇಳುತ್ತಾನೆ :— ಪತ್ನಿಯಿಲ್ಲದೆ ಕರ್ಮಮಾಡುವುದು ಸಕಲರಿಗೂ ನಿಂದಿತವು, ಆದುದರಿಂದ ನೀನು ಸೀತೆಯನ್ನು ಕರೆದುಕೊಂಡು ಹೋಗು. ಆವಳ ಛಾಯೆಯು ಮಾತ್ರ ಇಲ್ಲಿ ನನ್ನೊಡನೆ ಇರಲಿ.

ಸೀತಾಂ ಗೃಹೀತ್ವಾ ಪ್ರಯಯೌ ರುದಂತೀಂ ಚ ಹುತಾಶನಃ ।
ಸೀತಯಾ ಸದೃಶೀ ಛಾಯಾ ಯಾ ತಸ್ಥೌ ರಾಮಸನ್ನಿಧೌ ॥ ೨೪ ॥

ಸಾ ಚ ಚ್ಛಾಯಾ ಹೃತಾ ಪೂರ್ವಂ ರಾವಣೇನಾವಲೀಲಯಾ ।
ಸಮುದ್ದಧಾರ ತಾಂ ರಾಮೋ ನಿಹತ್ಯ ತಂ ಸಬಾಂಧವಂ ॥ ೧೫ ॥

ವಹ್ನೌ ಪರೀಕ್ಷಾಕಾಲೇ ಚ ಛಾಯಾ ವಹ್ನೌ ವಿವೇಶ ಯಾ ।
ಅಗ್ನಿಚ್ಛಾಯಾಂ ಚ ಸಂರಕ್ಷ್ಯ ದದೌ ರಾಮಾಯ ಜಾನಕೀಂ ॥ ೧೬ ॥

ರಾಮಸ್ತಾಂ ಚ ಗೃಹೀತ್ವಾ ಚ ಪ್ರಯಯೌ ಸ್ವಾಶ್ರಮಂ ಮುದಾ ।
ಛಾಯಾ ತಸ್ಥೌ ವಹ್ನಿಪಾರ್ಶ್ವೇ ಹೃದಯೇನ ವಿದೂಯತಾ ॥ ೧೭ ॥

ಸಾ ಚ ಛಾಯಾ ತಪಶ್ಚಕ್ರೇ ನಾರಾಯಣಸರೋವರೇ ।
ತಪಶ್ಚಕಾರ ದಿವ್ಯಂ ಚ ಶತವರ್ಷಂ ಚ ಶೂಲಿನಃ ॥ ೧೮ ॥

---

೧೪–೧೫. ಅಗ್ನಿಯು ಅಳುತ್ತಲಿರುವ ಸೀತೆಯನ್ನು ಕರೆದುಕೊಂಡು ಹೊರಟು ಹೋದನು. ರಾಮನೊಡನೆ ಸೀತೆಯಂತೆಯೇ ಇರುವ ಛಾಯೆಯು ಮಾತ್ರ ಇರಲು ಆ ಚ್ಛಾಯಾಸೀತೆಯನ್ನೇ ಪೂರ್ವದಲ್ಲಿ ಬಲವಂತನಾದ ರಾವಣನು ಕದ್ದೊಯ್ದಿದನು. ರಾಮನು ಬಂಧುಗಳಿಂದೊಡಗೊಂಡ ಆ ರಾವಣನನ್ನು ಕೊಂದು ಸೀತೆಯನ್ನು ಬಿಡಿಸಿ ಕೊಂಡನು.

೧೬. ಅಗ್ನಿಪರೀಕ್ಷೆಯ ಕಾಲದಲ್ಲಿ ಆ ಚ್ಛಾಯಾಸೀತೆಯು ಬೆಂಕಿಯಲ್ಲಿ ಬೀಳಲು ಅಗ್ನಿಯು ಆ ಚ್ಛಾಯೆಯನ್ನು ಕಾಪಾಡಿ ನಿಜವಾದ ಸೀತೆಯನ್ನು ರಾಮನಿಗೆ ತಂದೊಪ್ಪಿಸಿದನು.

೧೭. ರಾಮನು ಸಂತೋಷದಿಂದ ಆ ಸೀತೆಯನ್ನು ಸ್ವೀಕರಿಸಿದವನಾಗಿ ತನ್ನ ಆಶ್ರಮವನ್ನು ಸೇರಿದನು. ಛಾಯೆಯು ಮಾತ್ರ ಮನಸ್ಸಿನಲ್ಲಿಯೇ ವ್ಯಥೆಗೊಳ್ಳುತ್ತ ಅಗ್ನಿಯ ಸಮೀಪದಲ್ಲಿಯೇ ಇದ್ದಳು.

೧೮. ಆ ಚ್ಛಾಯೆಯು ನಾರಾಯಣ ಸರೋವರದಲ್ಲಿ ದೈವಮಾನದ ಒಂದು ನೂರುವರುಷಗಳವರೆಗೆ ಶಂಕರನನ್ನು ಕುರಿತು ತಪಸ್ಸನ್ನು ಮಾಡಿದಳು.

ವರಂ ವೃಣುಷ್ವ ಭದ್ರೇ ತ್ವಮುವಾಚ ಶಂಕರಶ್ಚ ತಾಂ ।
ಉವಾಚ ಸಾ ಶಿವಂ ವ್ಯಗ್ರಾ ಭರ್ತುರ್ದುಃಖೇನ ದುಃಖಿತಾ ॥ ೧೯ ॥

ಪತಿಂ ದೇಹಿ ಪಂಚಧಾ ಸಾ ವರಂ ವವ್ರೇ ತ್ರಿಲೋಚನಂ ।
ಸರ್ವಸಂಪತ್ಪ್ರದಸ್ತುಷ್ಟಸ್ತಸ್ಯೈ ಶರ್ವೋ ವರಂ ದದೌ ॥ ೨೦ ॥

॥ ಶ್ರೀ ಮಹಾದೇವ ಉವಾಚ ॥

ಸಾಧ್ವಿ ತಂ ಪಂಚಧಾ ಬ್ರೂಹಿ ಪತಿಂ ದೇಹೀತಿ ವ್ಯಾಕುಲಾ ।
ಪಂಚೇಂದ್ರಾಶ್ಚ ಹರೇರಂಶಾ ಭವಿಷ್ಯಂತಿ ಪ್ರಿಯಾಸ್ತವ ॥ ೨೧ ॥

ತೇ ಚ ಸರ್ವೇ ಚ ಪಂಚೇಂದ್ರಾಶ್ಚಾಧುನಾ ಪಂಚಪಾಂಡವಾಃ ।
ಸಾ ಚ ಛಾಯಾ ದ್ರೌಪದೀ ಚ ಯಜ್ಞಕುಂಡಸಮುದ್ಭವಾ ॥ ೨೨ ॥

ಕೃತೇ ಯುಗೇ ವೇದವತೀ ತ್ರೇತಾಯಾಂ ಜನಕಾತ್ಮಜಾ ।
ದ್ವಾಪರೇ ದ್ರೌಪದೀ ಛಾಯಾ ತೇನ ಕೃಷ್ಣಾ ತ್ರಿಹಾಯಣೀ ॥ ೨೩ ॥

---

೧೯–೨೦. ಶಂಕರನು ಪ್ರತ್ಯಕ್ಷನಾಗಿ ಬಂದು, ಎಲೈ ಮಂಗಳಕರಳೇ! ನಿನಗೆ ಇಷ್ಟವಾದ ವರವನ್ನು ಬೇಡಿಕೋ ಎಂದು ಹೇಳಿದನು. ಆಗ ಪತಿದುಃಖದಿಂದ ವ್ಯಥೆಗೊಂಡಿದ್ದ ಆ ಛಾಯೆಯು ತ್ವರೆಗೊಂಡವಳಾಗಿ ಪತಿಂದೇಹಿ (ಗಂಡನನ್ನು ಕೊಡು) ಎಂಬುದಾಗಿ ಐದುಬಾರಿ ಹೇಳಿ ಶಂಕರನಲ್ಲಿ ವರವನ್ನು ಬೇಡಿದಳು. ಸಕಲ ಸಂಪತ್ತನ್ನೂ ಕೊಡುವವನಾದ ಶಂಕರನು ಸಂತೋಷಗೊಂಡವನಾಗಿ ಅವಳಿಗೆ ವರ ವನ್ನು ಕೊಟ್ಟನು.

೨೧. ಶ್ರೀ ಮಹಾದೇವನು ಹೇಳುತ್ತಾನೆ:— ಎಲೈ ಪತಿವ್ರತೆಯೇ! ನೀನು ದುಃಖಗೊಂಡವಳಾಗಿ ಪತಿಂದೇಹಿ (ಗಂಡನನ್ನು ಕೊಡು) ಎಂದು ಐದುಬಾರಿ ಕೇಳಿ ರುವಿಯಾದುದರಿಂದ ಹರಿಯ ಅಂಶದಿಂದ ಆಗಿರುವ ಐವರು ಇಂದ್ರರು ನಿನಗೆ ಪತಿ ಗಳಾಗುತ್ತಾರೆ.

೨೨. ಆ ಪಂಚೇಂದ್ರರು ಈಗ ಪಂಚಪಾಂಡವರಾಗಿರುವರು. ಯಜ್ಞಕುಂಡ ದಿಂದ ಹುಟ್ಟಿದ ದ್ರೌಪದಿಯೇ ಆ ಛಾಯೆಯು.

೨೩. ಕೃತಯುಗದಲ್ಲಿ ವೇದವತಿಯಾಗಿಯೂ ತ್ರೇತಾಯುಗದಲ್ಲಿ ಜನಕರಾಜ ಪುತ್ರಿಯಾಗಿಯೂ ದ್ವಾಪರಯುಗದಲ್ಲಿ ಛಾಯಾರೂಪದಿಂದ ದ್ರೌಪದಿಯಾಗಿಯೂ ಹುಟ್ಟಿರುವಳು. ಮೂರುಜನ್ಮಗಳನ್ನು ಹೊಂದಿದುದರಿಂದಲೇ ಕೃಷ್ಣಾ ಎಂಬ ಹೆಸರನ್ನು ಪಡೆದಿರುವಳು.

ವೈಷ್ಣವೀ ಕೃಷ್ಣಭಕ್ತಾ ಚ ತೇನ ಕೃಷ್ಣಾ ಪ್ರಕೀರ್ತಿತಾ ।
ಸ್ವರ್ಗಲಕ್ಷ್ಮೀರ್ಮಹೇಂದ್ರಾಣಾಂ ಸಾ ಚ ಪಶ್ಚಾದ್ಭವಿಷ್ಯತಿ || ೨೪ ||

ರಾಜಾ ದದೌ ಫಾಲ್ಗುನಾಯ ಕನ್ಯಾಯಾಶ್ಚ ಸ್ವಯಂ ವರೇ
ಪಪ್ರಚ್ಛ ಮಾತರಂ ವೀರೋ ವಸ್ತು ಪ್ರಾಪ್ತಂ ಮಯಾಧುನಾ || ೨೫ ||

ತಮುವಾಚ ಸ್ವಯಂ ಮಾತಾ ಗೃಹಾಣ ಭ್ರಾತೃಭಿಃಸಹ ।
ಶಂಭೋರ್ವರೇಣ ಪೂರ್ವಂ ಚ ಪರತ್ರ ಮಾತುರಾಜ್ಞಯಾ || ೨೬ ||

ದ್ರೌಪದ್ಯಾಂ ಸ್ವಾಮಿನಸ್ತೇನ ಹೇತುನಾ ಪಂಚ ಪಾಂಡವಾಃ ।
ಚತುರ್ದಶಾನಾಮಿಂದ್ರಾಣಾಂ ಪಂಚೇಂದ್ರಾಃ ಪಂಚಪಾಂಡವಾಃ || ೨೭ ||

ಶಂಕರೇಣಾಭಿಸಂಶಪ್ತಾ ಸಾ ಮಾತ್ರಾ ಭರ್ತ್ಸಿತೇನ ಚ ।
ಭರ್ತಾ ತೇ ಭಸ್ಮಸಾದ್ಭೂತೋ ಹರಕೋಪಾನಲೇನ ಚ || || ೨೮ ||

---

೨೪. ಅಲ್ಲದೆ ವಿಷ್ಣುಶಕ್ತಿಸ್ವರೂಪಳೂ ಶ್ರೀಕೃಷ್ಣನಲ್ಲಿ ಅತ್ಯಂತಭಕ್ತಿಯುಳ್ಳವಳೂ ಆಗಿರುವುದರಿಂದ ಕೃಷ್ಣಾ ಎಂದು ಕರೆಯಲ್ಪಡುತ್ತಾಳೆ. ಮುಂದೆ ಅವಳು ಮಹೇಂದ್ರರಿಗೆ ಸ್ವರ್ಗಲಕ್ಷ್ಮಿಯಾಗುವಳು.

೨೫. ದ್ರುಪದರಾಜನು ಮಗಳನ್ನು ಸ್ವಯಂವರದಲ್ಲಿ ಅರ್ಜುನನಿಗೆ ಕೊಟ್ಟನು. ವೀರನಾದ ಅರ್ಜುನನು ತಾಯಿಯನ್ನು ಕುರಿತು ಈ ದಿನ ನಾನು ಒಂದು ಅಪೂರ್ವವಸ್ತುವನ್ನು ಪಡೆದಿರುವೆನು ಎಂದನು.

೨೬–೨೭. ತಾಯಿಯು, ಅವನನ್ನು ಕುರಿತು ಅಣ್ಣತಮ್ಮಂದಿರೊಡನೆ ನೀನೂ ತೆಗೆದುಕೋ ಎಂದಳು. ಮೊದಲು ಶಂಕರನ ವರದಿಂದಲೂ ಅನಂತರ ತಾಯಿಯ ಅಪ್ಪಣೆಯಿಂದಲೂ ದ್ರೌಪದಿಗೆ ಪಂಚಪಾಂಡವರು ಗಂಡಂದಿರಾಗಿರುತ್ತಾರೆ. ಹದಿನಾಲ್ಕು ಇಂದ್ರರಲ್ಲಿ ಪಂಚಪಾಂಡವರು ಐವರು ಇಂದ್ರರಾಗಿರುತ್ತಾರೆ.

೨೮–೨೯. ನನ್ನ ತಾಯಿಯು ಶಂಕರನನ್ನು ಎದುರಿಸಿ ಗದರಿಸಿಕೊಂಡ ಕಾರಣ ಶಂಕರನಿಂದ ನಿನ್ನ ಗಂಡನು ಹರನ ಕೋಪಾಗ್ನಿಯಿಂದ ಸುಟ್ಟುಬೂದಿಯಾಗುತ್ತಾನೆಂದೂ ಅಪಹರಿಸಲ್ಪಡುವವಳಾಗೆಂದು ನನ್ನಿಂದ ಶಪಿಸಲ್ಪಟ್ಟವಳಾದ

ಹರೇತಿ ತ್ವಂ ಮಯಾ ಶಪ್ತಾ ದೈತ್ಯಗ್ರಸ್ತಾ ಭವಾಧುನಾ ।
ವಿಜಿತ್ಯ ದೇವಾನ್ಸೇಂದ್ರಾಶ್ಚ ಶಂಬರಸ್ತ್ವಾಂ ಹರಿಷ್ಯತಿ ॥ ೨೯ ॥

ಪುನರುಕ್ತ್ವಂ ವರಂ ಪ್ರಾದಾತ್ಸತೀತ್ವಂ ತೇನ ಯಾಸ್ಯತಿ ।
ಛಾಯಾಂ ದತ್ವಾ ತಿಷ್ಠ ಗೇಹೇ ಯಾವಜ್ಜೀವತಿ ತೇ ಪತಿಃ ॥ ೩೦ ॥

ಇತಿ ತೇ ಕಥಿತಂ ಸರ್ವಮಿತಿಹಾಸಂ ಪುರಾತನಂ ।
ದೇವಾನಾಂ ಗುಪ್ತಚರಿತಂ ಶೃಣು ದೈತ್ಯೇಂದ್ರ ಸಾಂಪ್ರತಂ ॥ ೩೧ ॥

ಏತಸ್ಮಿನ್ನಂತರೇ ತತ್ರ ಸುಭದ್ರಶ್ಚ ಮಹಾಬಲಃ ।
ಕುಭಾಂಡಭ್ರಾತಾ ಬಲವಾನ್ಬಾಣಸೇನಾಪತೀಶ್ವರಃ ॥ ೩೨ ॥

ನಿರ್ಭರ್ತ್ಸ್ಯ ಬಾಣಂ ಸಮರೇ ಶಸ್ತ್ರಪಾಣಿರ್ಮಹಾರಥಃ ।
ಶ್ರೀಕೃಷ್ಣಪೌತ್ರಂ ಶೂಲಂ ಚ ಚಿಕ್ಷೇಪ ಪ್ರಲಯಾಗ್ನಿವತ್ ॥ ೩೩ ॥

---

ಕಾರಣ ರಾಕ್ಷಸನ ಅಧೀನಳಾಗುಎಂದೂ ಶಂಬರನು ಇಂದ್ರನಿಂದೊಡಗೂಡಿದ ಸಕಲ ದೇವತೆಗಳನ್ನೂ ಗೆದ್ದು ನಿನ್ನನ್ನು ಅಪಹರಿಸುತ್ತಾನೆಂದೂ ಶಪಿಸಲ್ಪಟ್ಟಳು.

೩೦. ಮತ್ತೆ ಅವಳಿಂದ ಪ್ರಾರ್ಥಿಸಲ್ಪಟ್ಟವನಾಗಿ ನಿನ್ನ ಪಾತಿವ್ರತ್ಯವು ಹೋಗುವುದಿಲ್ಲ. ನೀನು ನಿನ್ನ ನೆರಳನ್ನು ಆ ದೈತ್ಯನೊಡನೆ ಇಟ್ಟು ನಿನ್ನ ಗಂಡನು ಮತ್ತೆ ಬದುಕಿಬರುವವರೆಗೆ ಆ ರಾಕ್ಷಸನ ಮನೆಯಲ್ಲಿರು ಎಂದು ವರವನ್ನು ಕೊಟ್ಟನು.

೩೧, ಎಲೈ ದೈತ್ಯೇಂದ್ರನೇ! ಕೇಳುವವನಾಗು. ಈಗ ದೇವತೆಗಳ ರಹಸ್ಯವಾದ ಚರಿತ್ರೆಯನ್ನೊಳಗೊಂಡ ಹಿಂದಿನ ಕಥೆಯನ್ನು ಸಂಪೂರ್ಣವಾಗಿ ನಿನಗೆ ಹೇಳಿರುವೆನು.

೩೨–೩೩. ಈ ಸಮಯಕ್ಕೆ ಸರಿಯಾಗಿ ಕುಭಾಂಡನ ಸಹೋದರನೂ ಬಾಣನ ಸೇನಾಪತಿಯೂ ಮಹಾಬಲಶಾಲಿಯೂ ಆದ ಸುಭದ್ರನು ಅಲ್ಲಿಗೆ ಬಂದು ಬಾಣನನ್ನು ಗದರಿಸುತ್ತ ಯುದ್ಧರಂಗದಲ್ಲಿ ಶಸ್ತ್ರವನ್ನು ಕೈಯಲ್ಲಿ ಹಿಡಿದುಕೊಂಡು ಮಹಾಪರಾಕ್ರಮದಿಂದ ಕೂಡಿ ಪ್ರಳಯಕಾಲದ ಅಗ್ನಿಗೆ ಸಮನಾಗಿರುವ ಶೂಲಾಯುಧವನ್ನು ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನ ಮೇಲೆಸೆದನು.

ಅರ್ಧಚಂದ್ರೇಣ ತಚ್ಛೂಲಂ ಚಿಚ್ಛೇದ ಕಾಮಪುತ್ರಕಃ ।
ಶಕ್ತಿಂ ಚಿಕ್ಷೇಪ ಭದ್ರಶ್ಚ ಶತಸೂರ್ಯಸಮಪ್ರಭಾಂ ॥ ೩೪ ॥

ವೈಷ್ಣವಾಸ್ತ್ರೇಣ ಚಿಚ್ಛೇದ ತಾಂ ಶಕ್ತಿಂ ಕಾಮಪುತ್ರಕಃ ।
ನಾರಾಯಣಾಸ್ತ್ರಂ ಚಿಕ್ಷೇಪ ಸುಭದ್ರೋ ರಣಮೂರ್ಧನಿ ॥ ೩೫ ॥

ಪ್ರಣಮ್ಯ ಶೇತೇ ನಿರ್ಭೀತೋ ಮದನಸ್ಯ ಸುತೋ ಬಲೀ ।
ಊರ್ಧ್ವಮಸ್ತ್ರಂ ಚ ಬಭ್ರಾಮ ಶತಸೂರ್ಯಸಮಪ್ರಭಂ ॥ ೩೬ ॥

ಪ್ರಲೀನಮಸ್ತ್ರಮಾಕಾಶೇ ವಿಶ್ವಸಂಹಾರಕಾರಣಂ ।
ಅಸ್ತ್ರೇ ಗತೇ ಸೋಽನಿರುದ್ಧೋ ಗೃಹೀತ್ವಾ ಚ ಮಹಾಸಿಂ ॥ ೩೭ ॥

ಪ್ರಬಭಂಜ ಭದ್ರರಥಂ ಜಗಾಮಾಶ್ವಾಂಶ್ಚ ಸಾರಥಿಂ ।
ಜಘಾನ ತಂ ಸುಭದ್ರಂ ಚ ಲೀಲಯಾ ರಣಮೂರ್ಧನಿ ॥ ೩೮ ॥

---

೩೪. ಕಾಮಪುತ್ರನು ಅರ್ಧಚಂದ್ರದಿಂದ ಆ ಶೂಲವನ್ನು ತುಂಡುಮಾಡಿದನು. ಸುಭದ್ರನು ನೂರುಸೂರ್ಯರಿಗೆ ಸಮನಾದ ಕಾಂತಿಯುಳ್ಳ ಶಕ್ತ್ಯಾಯುಧವನ್ನು ಎಸೆದನು.

೩೫. ಅನಿರುದ್ಧನು ವೈಷ್ಣವಾಸ್ತ್ರದಿಂದ ಆ ಶಕ್ತ್ಯಾಯುಧವನ್ನು ತುಂಡುಮಾಡಿದನು. ಯುದ್ಧರಂಗದಲ್ಲಿ ಆ ಸುಭದ್ರನು ನಾರಾಯಣಾಸ್ತ್ರವನ್ನು ಅನಿರುದ್ಧನ ಮೇಲೆಸೆದನು.

೩೬. ಮನ್ಮಥಕುಮಾರನಾದ ಅನಿರುದ್ಧನು ಆ ನಾರಾಯಣಾಸ್ತ್ರಕ್ಕೆ ನಮಸ್ಕಾರಮಾಡಿ ಧೈರ್ಯವಾಗಿ ಕುಳಿತುಕೊಂಡನು. ಒಂದು ನೂರು ಸೂರ್ಯರ ಕಾಂತಿಗೆ ಸಮನಾಗಿ ಪ್ರಕಾಶಿಸುತ್ತಿರುವ ನಾರಾಯಣಾಸ್ತ್ರವು ಮೇಲ್ಭಾಗದಲ್ಲಿ ಸುತ್ತಾಡಿತು.

೩೭–೩೮. ಪ್ರಪಂಚವನ್ನೇ ಸಂಹಾರಮಾಡಲು ಸಮರ್ಥವಾದ ನಾರಾಯಣಾಸ್ತ್ರವು ಆಕಾಶದಲ್ಲಿಯೇ ಮಾಯವಾಯಿತು. ಆ ಅಸ್ತ್ರವು ಶಾಂತವಾದ ಮೇಲೆ ಆ ಅನಿರುದ್ಧನು ಬಲವಾದ ಖಡ್ಗವನ್ನು ತೆಗೆದುಕೊಂಡು ಸುಭದ್ರನ ರಥವನ್ನೂ ಅವನ ಕುದುರೆಗಳನ್ನೂ ಸಾರಥಿಯನ್ನೂ ಕೂಡ ನಾಶಮಾಡಿದನು. ಯುದ್ಧರಂಗದಲ್ಲಿ ಸುಭದ್ರನನ್ನೂ ಕೂಡ ಸರಾಗವಾಗಿ ಕೊಂದನು.

ಹತೇ ಸುಭದ್ರೇ ಬಾಣಶ್ಚ ಮಹಾಬಲಪರಾಕ್ರಮಃ ।
ಬಾಣಾನಾಂ ಶತಕಂ ಚಾಪಿ ಚಿಕ್ಷೇಪ ರಣಮೂರ್ಧನಿ ॥ ೩೯ ॥

ಕಾಮಾತ್ಮಜೋಽಗ್ನಿಬಾಣೇನ ಬಾಣೌಘಂ ಪ್ರದದಾಹ ಸಃ ।
ಬಾಣಶ್ಚಿಕ್ಷೇಪ ಬ್ರಹ್ಮಾಸ್ತ್ರಂ ಸೃಷ್ಟಿಸಂಹಾರಕಾರಣಂ ॥ ೪೦ ॥

ದೃಷ್ಟ್ವಾ ಕಾಮಾತ್ಮಜಃ ಶೀಘ್ರಂ ಸಬೀಜಂ ಮಂತ್ರಪೂರ್ವಕಂ ।
ಬ್ರಹ್ಮಾಸ್ತ್ರೇಣೈವ ಸಹಸಾ ಸಂಜಹಾರಾವಲೀಲಯಾ ॥ ೪೧ ॥

ಬಾಣಃ ಪಾಶುಪತಂ ಕ್ಷೇಪ್ತುಂ ಸಮಾರೇಭೇ ಚ ಕೋಪತಃ ।
ನಿಷಿದ್ಧಶ್ಚ ಗಣೇಶೇನ ಸ್ಕಂದೇನ ಶಂಭುನಾ ತಥಾ ॥ ೪೨ ॥

ತದ್ದೃಷ್ಟ್ವಾ ಸೋಽನಿರುದ್ಧಸ್ತಂ ಧನುರ್ಬಾಣೌಘಸಂಯುತಂ ।
ಮುಮೋಚ ಜೃಂಭಣಂ ಯುದ್ಧೇ ಶೀಘ್ರಂ ತಂ ಚ ಮಹಾರಥಂ ॥ ೪೩ ॥

---

೩೯. ಮಹಾಬಲಪರಾಕ್ರಮಶಾಲಿಯಾದ ಬಾಣನು ಸುಭದ್ರನು ಹತನಾಗಲು ಯುದ್ಧರಂಗದಲ್ಲಿ ಒಂದುನೂರು ಬಾಣಗಳ ಗುಂಪನ್ನೆಸೆದನು.

೪೦. ಕಾಮಪುತ್ರನಾದ ಅನಿರುದ್ಧನು ಅಗ್ನಿಬಾಣದಿಂದ ಆ ಬಾಣಸಮೂಹವನ್ನು ಸುಟ್ಟುಹಾಕಿದನು. ಆಗ ಬಾಣನು ಸೃಷ್ಟಿ ಸಂಹಾರಗಳನ್ನು ಮಾಡಲು ಶಕ್ತವಾದ ಬ್ರಹ್ಮಾಸ್ತ್ರವನ್ನೆಸೆದನು.

೪೧. ಕಾಮಪುತ್ರನಾದ ಅನಿರುದ್ಧನು ಬೀಜಾಕ್ಷರಗಳಿಂದ ಕೂಡಿ ಮಂತ್ರಪೂರ್ವಕವಾಗಿ ಬರುತ್ತಿರುವ ಬ್ರಹ್ಮಾಸ್ತ್ರವನ್ನು ನೋಡಿ ಜಾಗ್ರತೆಯಾಗಿ ಬ್ರಹ್ಮಾಸ್ತ್ರದಿಂದಲೇ ಸುಲಭವಾಗಿ ನಿವಾರಿಸಿಕೊಂಡನು.

೪೨. ಆಗ ಬಾಣನು ಕೋಪಗೊಂಡವನಾಗಿ ಪಾಶುಪತಾಸ್ತ್ರವನ್ನು ಅನಿರುದ್ಧನ ಮೇಲೆಸೆಯಲು ಪ್ರಾರಂಭಿಸಿದನು. ಗಣೇಶನೂ ಷಣ್ಮುಖನೂ ಶಂಕರನೂ ಅದನ್ನು ತಡೆದರು.

೪೩. ಆಗ ಅನಿರುದ್ಧನು ಬಿಲ್ಲುಬಾಣಗಳಿಂದ ಕೂಡಿ ಯುದ್ಧಮಾಡಲು ನಿಂತಿರುವ ಮಹಾರಥನಾದ ಆ ಬಾಣನನ್ನು ನೋಡಿ ಜಾಗ್ರತೆಯಾಗಿ ಜೃಂಭಣಾಸ್ತ್ರವನ್ನು ಬಿಟ್ಟನು.

ಜಡೋ ಬಭೂವ ಬಾಣಶ್ಚ ನಿಶ್ಚೇಷ್ಟೋ ರಣಮೂರ್ಧನಿ ।
ಪುನಶ್ಚಿಕ್ಷೇಪ ನಿದ್ರಾಸ್ತ್ರಂ ನಿದ್ರಿತಂ ತಂ ಚಕಾರ ಸಃ ॥ ೪೪ ॥

ಬಾಣಂ ತಂ ನಿದ್ರಿತಂ ದೃಷ್ಟ್ವಾ ಗೃಹೀತ್ವಾ ಖಡ್ಗಮುತ್ತಮಂ ।
ಬಾಣಂ ಹಂತುಂ ಸಮುದ್ಯಂತಂ ವಾರಯಾಮಾಸ ಕಾರ್ತಿಕಃ ॥ ೪೫ ॥

ಸ್ಕಂದಶ್ಚ ಶತಬಾಣೈಶ್ಚ ವಾರಯಾಮಾಸ ಲೀಲಯಾ ।
ಅನಿರುದ್ಧಂ ಮಹಾಭಾಗಂ ಬಲವಂತಂ ಧನುರ್ಧರಂ ॥ ೪೬ ॥

ಅನಿರುದ್ಧಶ್ಚ ಸಹಸಾ ತಯಾ ಶಕ್ತ್ಯಾ ದುರತ್ಯಯಾ ।
ಬಭಂಜ ಕಾರ್ತಿಕರಥಂ ರತ್ನೇಂದ್ರಸಾರನಿರ್ಮಿತಂ ॥ ೪೭ ॥

ಗದಯಾ ಕಾರ್ತಿಕಃ ಕ್ರುದ್ಧೋಽಪ್ಯನಿರುದ್ಧರಥಂ ಮುದಾ ।
ಬಭಂಜ ಲೀಲಯಾ ತತ್ರ ಕ್ಷಣೇನ ರಣಮೂರ್ಧನಿ ॥ ೪೮ ॥

---

೪೪. ಆಗ ಬಾಣನು ಯುದ್ಧರಂಗದಲ್ಲಿ ಜಡನಾಗಿ ಅಲುಗಾಡದಂತಾದನು. ಅನಿರುದ್ಧನು ಮತ್ತೆ ನಿದ್ರಾಸ್ತ್ರವನ್ನು ಬಿಟ್ಟು, ಅವನನ್ನು ನಿದ್ದೆಮಾಡುವಂತೆ ಮಾಡಿದನು.

೪೫. ಬಾಣನು ನಿದ್ದೆಮಾಡುತ್ತಿರುವುದನ್ನು ನೋಡಿ ಅನಿರುದ್ಧನು ಉತ್ತಮವಾದ ಖಡ್ಗವನ್ನು ತೆಗೆದುಕೊಂಡು ಬಾಣನನ್ನು ಕೊಲ್ಲಲು ಬರುತ್ತಿರಲು, ಷಣ್ಮುಖನು ಅವನನ್ನು ತಡೆದನು.

೪೬. ಆ ಷಣ್ಮುಖನು ನೂರು ಬಾಣಗಳಿಂದ ಮಹಾತ್ಮನೂ, ಬಲಶಾಲಿಯೂ ಬಿಲ್ಲನ್ನು ಹಿಡಿದಿರುವವನೂ ಆದ ಅನಿರುದ್ಧನನ್ನು ಸುಲಭವಾಗಿ ತಡೆದನು.

೪೭. ಅನಿರುದ್ಧನು ಕೂಡಲೆ ವಿಾರಲಸಾಧ್ಯವಾದ ಶಕ್ತ್ಯಾಯುಧದಿಂದ ಆ ಷಣ್ಮುಖನ ದಿವ್ಯ ರತ್ನಶ್ರೇಷ್ಠಗಳಿಂದ ಮಾಡಲ್ಪಟ್ಟಿರುವ ರಥವನ್ನು ಮುರಿದು ಹಾಕಿದನು.

೪೮. ಷಣ್ಮುಖನು ಕೋಪಗೊಂಡವನಾಗಿ ಗದೆಯನ್ನು ತೆಗೆದುಕೊಂಡು ಆ ಯುದ್ಧರಂಗದಲ್ಲಿ ಮಹಾರಥನಾದ ಅನಿರುದ್ಧನನ್ನು ಕ್ಷಣಕಾಲದಲ್ಲಿ ಸುಲಭವಾಗಿ ಹೊಡೆದನು.

ಅನಿರುದ್ಧೋರ್ಧಚಂದ್ರೇಣ ಕ್ಷುರಧಾರೇಣ ಲೀಲಯಾ ।
ಚಿಚ್ಛೇದ ಕಾರ್ತಿಕಧನುರ್ಭಲ್ಲಾಸ್ತ್ರೇಣ ನಿಯೋಜಿತಂ ॥ ೪೯ ॥

ಜಘಾನ ಕಾರ್ತಿಕಸ್ತಂ ಚ ಗದಯಾ ಚ ದುರಂತಯಾ ।
ಗದಾಂ ಜಗ್ರಾಹ ತದ್ಧಸ್ತಾಜ್ಜವೇನ ಮದನಾತ್ಮಜಃ ॥ ೫೦ ॥

ಶೂಲಂ ಗೃಹೀತ್ವಾ ಸ್ಕಂದಂ ಚ ತಮೇವ ಹಂತುಮುದ್ಯತಂ ।
ಅನಿರುದ್ಧಶ್ಚ ಕೋಪೇನ ಪ್ರೇರಯಾಮಾಸ ದೂರತಃ ॥ ೫೧ ॥

ಕಾರ್ತಿಕಃ ಪುನರಾಗತ್ಯ ಗೃಹೀತ್ವಾ ಕಾಮಪುತ್ರಕಂ ।
ಗೃಹೀತ್ವಾ ಚ ಕರೇಣೈವ ಪಾತಯಾಮಾಸ ಭೂತಲೇ ॥ ೫೨ ॥

ಅನಿರುದ್ಧೋ ಗೃಹೀತ್ವಾಽಸಿಂ ಸಮುತ್ತಸ್ಥೌ ಮಹಾಬಲಃ ।
ತಯೋರ್ವಿರೋಧಂ ದೂರಂ ಚ ಪ್ರಚಕಾರ ಗಣೇಶ್ವರಃ ॥ ೫೩ ॥

---

೪೯. ಅನಿರುದ್ಧನು ಕತ್ತಿಯ ಧಾರೆಯಂತೆ ಹರಿತವಾದ ಅರ್ಧಚಂದ್ರಾಕಾರವಾದ ಭಲ್ಲಾಯುಧದಿಂದ ಷಣ್ಮುಖನ ಬಿಲ್ಲನ್ನು ಸುಲಭವಾಗಿ ಕತ್ತರಿಸಿದನು.

೫೦. ಷಣ್ಮುಖನು ಮರಣವನ್ನುಂಟುಮಾಡುವ ಗದೆಯಿಂದ ಅನಿರುದ್ಧನನ್ನು ಹೊಡೆದನು. ಮನ್ಮಥಕುಮಾರನಾದ ಅನಿರುದ್ಧನು ಅವನ ಕೈಯಿಂದ ಬೇಗನೆ ಗದೆಯನ್ನು ಸೆಳೆದುಕೊಂಡನು.

೫೧. ಶೂಲಾಯುಧವನ್ನು ತೆಗೆದುಕೊಂಡು ಅನಿರುದ್ಧನು ತನ್ನನ್ನು ಕೊಲ್ಲಲು ಬರುತ್ತಿರುವ ಷಣ್ಮುಖನಮೇಲೆ ದೂರದಿಂದ ಎಸೆದನು.

೫೨. ಷಣ್ಮುಖನು ಮತ್ತೆ ಬಂದು ಮನ್ಮಥ ಪುತ್ರನಾದ ಅನಿರುದ್ಧನನ್ನು ಕೈಯಲ್ಲಿ ಹಿಡಿದುಕೊಂಡು ನೆಲದಮೇಲೆ ಎಸೆದನು.

೫೩. ಮಹಾ ಬಲಶಾಲಿಯಾದ ಅನಿರುದ್ಧನು ಕತ್ತಿಯನ್ನು ಹಿಡಿದುಕೊಂಡು ಮೇಲಕ್ಕೆದ್ದನು. ಗಣೇಶ್ವರನು ಅವರಿಬ್ಬರ ವಿರೋಧವನ್ನು ದೂರಮಾಡಿದನು.

ಕಾರ್ತಿಕಃ ಪ್ರಿಯಯಾ ಗೇಹಮುಮಾಗೇಹಂ ಸ್ಮರಾತ್ಮಜಃ ।
ಸರ್ವಂ ನಿವೇದಿತುಂ ಶಂಭುಂ ಪ್ರಯಯೌ ಸ ಗಣೇಶ್ವರಃ　　　॥ ೫೪ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ ಬಾಣಯುದ್ಧೇ
ಷೋಡಶಾಧಿಕಶತತಮೋಽಧ್ಯಾಯಃ.

---

೫೪. ಷಣ್ಮುಖನು ಮನೆಗೆ ಹೋದನು. ಮನ್ಮಥಕುಮಾರನು ಉಷೆಯ ಮನೆಗೆ ಹೋದನು. ಈ ಸಮಾಚಾರವೆಲ್ಲವನ್ನೂ ಶಂಭುವಿಗೆ ತಿಳಿಸಲೋಸ್ಕರ ಗಣೇಶ್ವರನು ಹೊರಟುಹೋದನು.

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣ ನಾರದಸಂವಾದದಲ್ಲಿನ
ಬಾಣಯುದ್ಧವೆಂಬ
ನೂರ ಹದಿನಾರನೆಯ ಅಧ್ಯಾಯವು ಸಮಾಪ್ತವಾದುದು.



|| ಓಂ ||

|| ಓಂ ಶ್ರೀ ಗುರುಭ್ಯೋ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಸಪ್ತದಶಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಗಣೇಶಸ್ತು ಶಿವಸ್ಥಾನಂ ಗತ್ವಾ ನತ್ವಾ ಮಹೇಶ್ವರಂ ।
ಸರ್ವಂ ವಿಜ್ಞಾಪಯಾಮಾಸ ಕ್ರಮೇಣ ಚ ಪೃಥಕ್ಪೃಥಕ್ || ೧ ||

ಬಾಣಾನಿರುದ್ಧಯೋರ್ಯುದ್ಧಂ ಸುಭದ್ರನಿಧನಂ ತಥಾ ।
ಸ್ಕಂದಾನಿರುದ್ಧಯೋರ್ಯುದ್ಧಮನಿರುದ್ಧಸ್ಯ ವಿಕ್ರಮಂ || ೨ ||

ಗಣೇಶವಚನಂ ಶ್ರುತ್ವಾ ಪ್ರಹಸ್ಯ ಭಗವಾನ್ಭವಃ ।
ಉವಾಚ ಶ್ಲಕ್ಷ್ಣಯಾ ವಾಚಾ ಸುಗುಪ್ತಂ ವೇದಸಂಮತಂ || ೩ ||

---

### ನೂರ ಹದಿನೇಳನೆಯ ಅಧ್ಯಾಯವು.

೧–೨. ಶ್ರೀ ನಾರಾಯಣನು ಹೇಳುತ್ತಾನೆ:— ಗಣೇಶನು ಶಿವನ ಮನೆಗೆ ಹೋಗಿ, ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ, ಕ್ರಮವಾಗಿ ಬಾಣ ಮತ್ತು ಅನಿರುದ್ಧ ಇವರುಗಳಿಗಾದ ಯುದ್ಧವನ್ನೂ ಮತ್ತು ಸುಭದ್ರನು ಮಡಿದುದನ್ನೂ, ಷಣ್ಮುಖ ಮತ್ತು ಅನಿರುದ್ಧ ಇವರುಗಳಿಗಾದ ಯುದ್ಧವನ್ನೂ, ಅನಿರುದ್ಧನ ಪರಾಕ್ರಮವನ್ನೂ ಕೂಡ ಸಂಪೂರ್ಣವಾಗಿ ಬೇರೆಬೇರೆಯಾಗಿ ವಿಜ್ಞಾಪಿಸಿಕೊಂಡನು.

೩. ಗಣೇಶನಾಡಿದ ಮಾತನ್ನು ಕೇಳಿ ಪೂಜ್ಯನಾದ ಈಶ್ವರನು ನಕ್ಕು, ಮೃದುವಾದ ಮಾತಿನಿಂದ ಅತ್ಯಂತ ರಹಸ್ಯವೂ ವೇದಸಂಮತವೂ ಆದ ಮಾತನ್ನು ಹೇಳಿದನು.

|| ಶ್ರೀ ಮಹಾದೇವ ಉವಾಚ ||

ಗಣೇಶ್ವರ ಮಹಾಭಾಗ ಶ್ರೂಯತಾಂ ವಚನಂ ಮಮ |
ಹಿತಂ ತಥ್ಯಂ ನೀತಿಸಾರಂ ಪರಿಣಾಮಸುಖಾವಹಂ || ೪ ||

ಅಸಂಖ್ಯವಿಶ್ವಸಂಘಂ ಚ ಸರ್ವಂ ಕೃಷ್ಣಾತ್ಮಜಂ ಸುತಂ |
ಕೃಷ್ಣಂ ಜಾನೀಹಿ ಯತ್ಕಾರ್ಯಂ ಕಾರಣಾನಾಂ ಚ ಕಾರಣಂ || ೫ ||

ಬ್ರಹ್ಮಾದಿ ತೃಣಪರ್ಯಂತಂ ಜಗತ್ಸರ್ವಂ ಗಣೇಶ್ವರ |
ನಿಬೋಧ ಸತ್ಯಂ ಕೃಷ್ಣಂ ಚ ಭಗವಂತಂ ಸನಾತನಂ || ೬ ||

ಗೋಲೋಕೇ ದ್ವಿಭುಜಂ ಶಾಂತಂ ರಾಧಾಕಾಂತಂ ಮನೋಹರಂ |
ಶಿಶುರೂಪಂ ಗೋಪವೇಷಂ ಪರಿಪೂರ್ಣತಮಂ ಪ್ರಭುಂ || ೭ ||

ಗೋಪೀಭಿರ್ಗೋಪನಿಕರೈಃ ಸಹಿತಂ ಕಾಮಧೇನುಭಿಃ |
ಪುಣ್ಯೇ ವೃಂದಾವನೇ ರಮ್ಯೇ ಸುಂದರೇ ರಾಸಮಂಡಲೇ || ೮ ||

---

೪. ಶ್ರೀ ಮಹಾದೇವನು ಹೇಳುತ್ತಾನೆ:— ಎಲೈ ಮಹಾತ್ಮನಾದ ಗಣೇಶ್ವರನೇ! ಹಿತವೂ ಸತ್ಯವೂ ನೀತಿಶಾಸ್ತ್ರದ ಸಾರಾಂಶವೂ, ಕೊನೆಯಲ್ಲಿ ಸುಖವನ್ನುಂಟುಮಾಡುವುದೂ ಆದ ನನ್ನ ಮಾತನ್ನು ಕೇಳುವವನಾಗು.

೫. ಎಲೈ ಮಗನೇ! ಲೆಕ್ಕವಿಲ್ಲದಷ್ಟು ಬ್ರಹ್ಮಾಂಡಗಳ ಸಮೂಹವು ಕೂಡ ಶ್ರೀ ಕೃಷ್ಣಸ್ವರೂಪವು. ಶ್ರೀ ಕೃಷ್ಣನನ್ನು ಸಕಲ ಕಾರ್ಯಗಳಿಗೂ ಕಾರಣಗಳಿಗೂ ಕಾರಣನೆಂಬುದಾಗಿ ತಿಳಿಯುವವನಾಗು.

೬. ಎಲೈ ಗಣೇಶ್ವರನೇ! ಬ್ರಹ್ಮ ಮೊದಲ್ಗೊಂಡು ಹುಲ್ಲಿನವರೆಗೆ ಇರುವ ಸಕಲ ಪ್ರಪಂಚವೂ ಸತ್ಯಸ್ವರೂಪನೂ ಭಗವಂತನೂ ಸನಾತನನೂ ಆದ ಶ್ರೀಕೃಷ್ಣನ ಸ್ವರೂಪವೆಂದು ತಿಳಿಯುವವನಾಗು.

೭. ಗೋಲೋಕದಲ್ಲಿ ಎರಡು ಕೈಗಳನ್ನು ಧರಿಸಿ ಶಾಂತರೂಪನಾಗಿ ಸುಂದರನಾಗಿ ರಾಧೆಯಕಾಂತನಾಗಿಯೂ ಇರುವನು. ಸರ್ವಸಂಪೂರ್ಣನಾಗಿ ಸಕಲರಿಗೂ ಪ್ರಭುವಾಗಿ ಗೋಪಾಲರ ವೇಷವನ್ನು ಧರಿಸಿದವನೂ ಶಿಶುವಿನ ರೂಪವನ್ನು ಧರಿಸಿರುವವನೂ ಆಗಿರುವನು.

೮–೧೦. ಗೋಪಿಯರಿಂದಲೂ ಗೋಪಸಮೂಹದಿಂದಲೂ ಕಾಮಧೇನುಗಳಿಂದಲೂ ಸಹಿತನಾಗಿ, ಪುಣ್ಯಕರವಾದ ವೃಂದಾವನದಲ್ಲಿಯೂ, ಮನೋಹರವೂ

ಚರಂತಂ ಮುರಲೀಹಸ್ತಂ ಬ್ರಹ್ಮೇಶಶೇಷವಂದಿತಂ ।
ಶತಶೃಂಗೇ ಚ ಶೈಲೇಶೇ ವಟಮೂಲೇ ನಿರಾಕುಲೇ ॥ ೯ ॥

ಗೋಷ್ಠೇ ಭಾಂಡೀರನಿಕಟೇ ನಿರ್ಮಲೇ ವಿರಜಾತಟೇ ।
ನವೀನನೀರದಶ್ಯಾಮಂ ಶೋಭಿತಂ ಪೀತವಾಸಸಾ ॥ ೧೦ ॥

ಯಥಾ ನವಂ ಘನೌಘಂ ಚ ಸೌದಾಮಿನ್ಯಾ ವಿರಾಜಿತಂ ।
ಆವಿರ್ಭಾವಶ್ಚ ತೇಷಾಂ ವೈ ಗೋಲೋಕೇ ರಾಸಮಂಡಲೇ ॥ ೧೧ ॥

ತಾವಂತೋ ಗೋಕುಲೇ ರಮ್ಯೇ ಪುಣ್ಯೇ ವೃಂದಾವನೇ ವನೇ ।
ಸರ್ವೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ಸ್ವಯಂ ॥ ೧೨ ॥

ಪರಿಪೂರ್ಣತಮಃ ಕಾಮೋ ಬ್ರಹ್ಮಶಾಪಾತ್ಸವಿಸ್ಮೃತಃ ।
ತಸ್ಯ ಪುತ್ರೋಽನಿರುದ್ಧಶ್ಚ ಮಹಾಬಲಪರಾಕ್ರಮಃ ॥ ೧೩ ॥

---

ಸುಂದರವೂ ಆದ ರಾಸಮಂಡಲದಲ್ಲಿಯೂ, ಸಂಚಾರಮಾಡುವವನೂ ಕೈಯಲ್ಲಿ ಮುರಳಿಯನ್ನು ಹಿಡಿದಿರುವವನೂ, ಬ್ರಹ್ಮ ಈಶ್ವರ ಶೇಷ ಇವರುಗಳಿಂದಲೂ ನಮಸ್ಕರಿಸಲ್ಪಡುವವನೂ, ಶತಶೃಂಗ ಪರ್ವತದಲ್ಲಿಯೂ ಸುಖಕರವಾದ ಆಲದ ಮರದ ಬುಡದಲ್ಲಿಯೂ, ಭಾಂಡೀರ ಮರದ ಹತ್ತಿರದಲ್ಲಿ ಸಭೆಯಲ್ಲಿಯೂ, ಪರಿಶುಭ್ರವಾದ ವಿರಜಾನದಿಯ ದಡದಲ್ಲಿಯೂ, ವಿಹರಿಸುವವನೂ ಹೊಸದಾದ ಮೋಡದಂತೆ ಶ್ಯಾಮಳವರ್ಣನೂ, ಪೀತಾಂಬರದಿಂದ ಅಲಂಕರಿಸಲ್ಪಟ್ಟವನೂ ಆಗಿರುವನು.

೧೧. ಯಾವರೀತಿಯಾಗಿ ಹೊಸದಾದ ಮೋಡದ ಗುಂಪು ಮಿಂಚಿನೊಡಗೂಡಿ ಕಂಗೊಳಿಸುತ್ತಿದೆಯೋ, ಹಾಗೆಯೇ ಗೋಕುಲದಲ್ಲಿ ರಾಸಮಂಡಲದಲ್ಲಿ ಶ್ರೀ ಕೃಷ್ಣನೊಡನೆ ಗೋಪಗೋಪಿಯರು ಪ್ರಕಾಶಿಸುತ್ತಿರುವರು.

೧೨. ಹಾಗೆಯೇ ಮನೋಹರವಾದ ಗೋಕುಲದಲ್ಲಿಯೂ ಪುಣ್ಯಕರವಾದ ವೃಂದಾವನದಲ್ಲಿಯೂ ವಿರಾಜಿಸುತ್ತಾರೆ. ಆ ಪುರುಷರೆಲ್ಲರೂ ಶ್ರೀಕೃಷ್ಣನ ಅಂಶ ರೂಪರಾಗಿರುವರು. ಶ್ರೀಕೃಷ್ಣನಾದರೋ ಸಾಕ್ಷಾತ್ಪರಮಾತ್ಮನೇ ಆಗಿರುವನು.

೧೩. ಮನ್ಮಥನು ಅತ್ಯಂತ ಪರಿಪೂರ್ಣನಾದವನಾದರೂ ಬ್ರಹ್ಮಶಾಪದಿಂದ ತನ್ನನ್ನು ತಾನು ಮರೆತಿರುವನು. ಮಹಾ ಬಲಪರಾಕ್ರಮಶಾಲಿಯಾದ ಅನಿರುದ್ಧನು ಅವನ ಮಗನು.

ಮಯಾ ಪ್ರಸ್ಥಾಪಿತಃ ಸ್ಕಂದೋ ಮಹಾಯುದ್ಧೇ ಸುದಾರುಣೇ ।
ಮೃತೋ ಬಾಣಶ್ಚ ಸಂಗ್ರಾಮೇ ತೇನ ಸ್ಕಂದೇನ ರಕ್ಷಿತಃ ॥ ೧೪ ॥

ಸ್ಕಂದಾನಿರುದ್ಧಯೋರ್ಯುದ್ಧೇ ಸಮತ್ವಂ ತು ಗಣೇಶ್ವರ ।
ಅಷ್ಟೌ ಚ ಭೈರವಾಃ ಸರ್ವೇ ರುದ್ರಾಶ್ಚೈಕಾದಶೈವ ತೇ ॥ ೧೫ ॥

ಅಷ್ಟೌ ಚ ವಸವಶ್ಚೈತೇ ದೇವಾಃ ಶಕ್ರಾದಯಸ್ತಥಾ ।
ತಥೈವ ದ್ವಾದಶಾದಿತ್ಯಾಃ ಸರ್ವೇ ದೈತ್ಯೇಶ್ವರಾಸ್ತಥಾ ॥ ೧೬ ॥

ದೇವಾನಾಮಗ್ರಣೀಃ ಸ್ಕಂದೋ ಬಾಣಶ್ಚ ಸಗಣಸ್ತಥಾ ।
ಸರ್ವೇ ತೇ ಚಾನಿರುದ್ಧಂ ಚ ಸಂಗ್ರಾಮೇ ಜೇತುಮಕ್ಷಮಾಃ ॥ ೧೭ ॥

ಅನಿರುದ್ಧಃ ಸ್ವಯಂ ಬ್ರಹ್ಮಾ ಪ್ರದ್ಯುಮ್ನಃ ಕಾಮ ಏವ ಚ ।
ಬಲದೇವಃ ಸ್ವಯಂ ಶೇಷಃ ಕೃಷ್ಣಶ್ಚ ಪ್ರಕೃತೇಃ ಪರಃ ॥ ೧೮ ॥

---

೧೪. ಅತ್ಯಂತ ಭಯಂಕರವಾದ ಮಹಾ ಯುದ್ಧದಲ್ಲಿ ಹೋರಾಡುವುದಕ್ಕಾಗಿ ಷಣ್ಮುಖನು ನನ್ನಿಂದಲೇ ಕಳುಹಿಸಲ್ಪಟ್ಟನು. ಬಾಣನೂ ಕೂಡ ಯುದ್ಧದಲ್ಲಿ ಸಾಯುವಸ್ಥಿತಿಗೆ ಬಂದಿದ್ದನು. ಆದರೆ ಷಣ್ಮುಖನಿಂದ ಕಾಪಾಡಲ್ಪಟ್ಟನು.

೦೫–೧೭. ಎಲೈ ಗಣೇಶ್ವರನೇ! ಯುದ್ಧದಲ್ಲಿ ಷಣ್ಮುಖ ಮತ್ತು ಅನಿರುದ್ಧ ಇವರ ಶಕ್ತಿಯು ಸಮಾನವಾದುದು. ಅಷ್ಟಭೈರವರೂ ಏಕಾದಶರುದ್ರರೂ ಅಷ್ಟವಸುಗಳೂ ಇಂದ್ರನೇ ಮೊದಲಾದ ದೇವತೆಗಳೂ ದ್ವಾದಶಾದಿತ್ಯರೂ ಸಕಲ ರಾಕ್ಷಸ ಶ್ರೇಷ್ಠರೂ ದೇವತೆಗಳ ಸೇನಾಪತಿಯಾದ ಷಣ್ಮುಖನೂ ಸೈನ್ಯಪರಿವಾರಸಮೇತನಾದ ಬಾಣನೂ ಇವರೆಲ್ಲರೂ ಕೂಡ ಯುದ್ಧದಲ್ಲಿ ಅನಿರುದ್ಧನನ್ನು ಗೆಲ್ಲಲು ಸಮರ್ಥರಾಗುವುದಿಲ್ಲ.

೧೮. ಅನಿರುದ್ಧನು ಸಾಕ್ಷಾತ್ ಬ್ರಹ್ಮಸ್ವರೂಪನಾಗಿರುವನು. ಪ್ರದ್ಯುಮ್ನನು ಮನ್ಮಥರೂಪನು. ಬಲದೇವನು ಸಾಕ್ಷಾತ್ ಶೇಷನ ಅವತಾರನಾಗಿರುವನು. ಶ್ರೀ ಕೃಷ್ಣನಾದರೋ ಪ್ರಕೃತಿಗಿಂತಲೂ ಶ್ರೇಷ್ಠನಾದವನು.

ಏತತ್ತೇ ಕಥಿತಂ ಸರ್ವಂ ಬಾಣಂ ರಕ್ಷ ಗಣೇಶ್ವರ ।
ಭವಾನ್ಮಂಗಳಸ್ವರೂಪಶ್ಚ ವಿಘ್ನಖಂಡನಕಾರಕಃ ॥ ೧೯ ॥

ಆರಾದಾಯಾಸ್ಯತಿ ಹರಿರ್ಗೃಹೀತ್ವಾ ಚ ಸುದರ್ಶನಂ ।
ಅವ್ಯರ್ಥಮಸ್ತ್ರಪ್ರವರಂ ಸೂರ್ಯಕೋಟಿಸಮಪ್ರಭಂ ॥ ೨೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ ಬಾಣಯುದ್ಧೇ
ಶಿವಲಂಬೋದರಸಂವಾದೇ
ಸಪ್ತದಶಾಧಿಕಶತತಮೋಽಧ್ಯಾಯಃ.

---

೧೯. ಎಲೈ ಗಣೇಶ್ವರನೇ! ಈ ಸಕಲ ವೃತ್ತಾಂತವನ್ನೂ ನಿನಗೆ ಹೇಳಿರುವೆನು. ನೀನು ಮಂಗಳರೂಪನೂ ವಿಘ್ನಗಳನ್ನು ನಾಶಮಾಡುವವನೂ ಆಗಿರುತ್ತೀಯೆ. ಆದುದರಿಂದ ಬಾಣನನ್ನು ಕಾಪಾಡುವವನಾಗು.

೨೦. ಶ್ರೀಹರಿಯು ಕೋಟಿಸೂರ್ಯರ ಕಾಂತಿಯಿಂದ ಬೆಳಗುವ ವ್ಯರ್ಥವಾಗದಿರುವ ಸುದರ್ಶನವೆಂಬ ಶ್ರೇಷ್ಠವಾದ ಅಸ್ತ್ರವನ್ನು ತೆಗೆದುಕೊಂಡು ಜಾಗ್ರತೆಯಾಗಿ ಬರುತ್ತಾನೆ.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿನ ಬಾಣ
ಯುದ್ಧದಲ್ಲಿ ಶಿವಲಂಬೋದರಸಂವಾದವೆಂಬ
ನೂರ ಹದಿನೇಳನೆಯ ಅಧ್ಯಾಯವು ಸಮಾಪ್ತವಾದುದು

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಅಷ್ಟಾದಶಾಧಿಕಶತತಮೋಽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಗಣೇಶಂ ಬೋಧಯಿತ್ವಾ ತು ಶಂಭುರಭ್ಯಂತರಂ ಯಯೌ ।
ತತ್ರ ಸಿಂಹಾಸನೇ ರಮ್ಯೇ ದುರ್ಗಾ ದುರ್ಗತಿನಾಶಿನೀ || ೧ ||

ಭೈರವೀ ಭದ್ರಕಾಲೀ ಚ ಉಗ್ರಚಂಡಾ ಚ ಕೋಟರೀ ।
ತಾಃ ಸಮುತ್ಥಾಯ ಸಹಸಾ ಪ್ರಣೇಮುರ್ಜಗದೀಶ್ವರಂ || ೨ ||

ತತ್ರಾಯಯೌ ಗಣೇಶಶ್ಚ ಕಾರ್ತಿಕೇಯಶ್ಚ ವೀರ್ಯವಾನ್ ।
ಬಾಣಶ್ಚ ವೀರಭದ್ರಶ್ಚ ಸ್ವಯಂ ನಂದೀ ಸುನಂದಕಃ || ೩ ||

---

### ನೂರ ಹದಿನೆಂಟನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ:— ಶಂಭುವು ಗಣೇಶನನ್ನು ಕುರಿತು ಹೀಗೆ ಹೇಳಿ ತಾನು ಅಂತಃಪುರಕ್ಕೆ ಹೋದನು. ಅಲ್ಲಿ ಮನೋಹರವಾದ ಸಿಂಹಾಸನದಲ್ಲಿ ಭಕ್ತರ ದುರ್ಗತಿಯನ್ನು ನಾಶಮಾಡುವವಳಾದ ದುರ್ಗಾದೇವಿಯು ಕುಳಿತಿದ್ದಳು.

೨. ಭೈರವಿಯೂ ಭದ್ರಕಾಳಿಯೂ ಉಗ್ರಚಂಡಳೂ ಕೋಟರಿಯೂ ಇವರುಗಳೂ ಇದ್ದರು. ಅವರೆಲ್ಲರೂ ಮೇಲಕ್ಕೆದ್ದು ಜಗದೀಶ್ವರನಾದ ಶಂಕರನಿಗೆ ನಮಸ್ಕಾರಮಾಡಿದರು.

೩–೪. ಅಲ್ಲಿಗೆ ಗಣೇಶ್ವರನೂ ಪರಾಕ್ರಮಶಾಲಿಯಾದ ಷಣ್ಮುಖನೂ ಬಾಣನೂ ವೀರಭದ್ರನೂ ನಂದಿಯೂ ಸುನಂದಕನೂ ಮಹಾಮಂತ್ರಿಯಾದ ಮಹಾ

ಮಹಾಕಾಲೋ ಮಹಾಮಂತ್ರೀ ಹ್ಯಥಾಷ್ಟೌ ಭೈರವಾಸ್ತಥಾ ।
ಸಿದ್ಧೇಂದ್ರಾಶ್ಚಾಪಿ ಯೋಗೀಂದ್ರಾ ರುದ್ರಾಶ್ಚೈಕಾದಶೈವ ತೇ ॥ ೪ ॥

ಏತಸ್ಮಿನ್ನಂತರೇ ತತ್ರ ಮಣಿಭದ್ರಃ ಸಮಾಯಯೌ ।
ಸಿಂಹದ್ವಾರೇ ಸ್ವಯಂ ದ್ವಾರೇ ತಮೀಶ್ವರಮುವಾಚ ಸಃ ॥ ೫ ॥

॥ ಮಣಿಭದ್ರ ಉವಾಚ ॥

ಅಸಂಖ್ಯಾನಿ ಚ ಸೈನ್ಯಾನಿ ಯಾದವಾನಾಂ ಮಹೇಶ್ವರ ।
ಬಲದೇವಶ್ಚ ಪ್ರದ್ಯುಮ್ನಃ ಸಾಂಬಶ್ಚ ಸಾತ್ಯಕಿಸ್ತಥಾ ॥ ೬ ॥

ರಾಜಾ ಮಹೋಗ್ರಸೇನಶ್ಚ ಭೀಮಶ್ಚ ಸ್ವಯಮರ್ಜುನಃ ।
ಅಕ್ರೂರಶ್ಚೋದ್ಧವಶ್ಚೈವ ಜಯಂತಃ ಶಕ್ರನಂದನಃ ॥ ೭ ॥

ರತ್ನೇಂದ್ರಸಾರನಿರ್ಮಾಣರಥೇಂದ್ರೇ ಸುಮನೋಹರೇ ।
ವಿಧೇರ್ವಿಧಾತಾ ಭಗವಾನ್ಶ್ರೀಕೃಷ್ಣಃ ಪರಮೇಶ್ವರಃ ॥ ೮ ॥

---

ಕಾಲನೂ ಅಷ್ಟಭೈರವನೂ ಸಿದ್ಧೇಂದ್ರರೂ ಯೋಗೀಂದ್ರರೂ ಏಕಾದಶರುದ್ರರೂ ಎಲ್ಲರೂ ಬಂದು ಸೇರಿದರು.

೫. ಈ ಮಧ್ಯದಲ್ಲಿ ಅಲ್ಲಿಗೆ ಮಣಿಭದ್ರನೆಂಬುವನು ಬಂದು ಸಿಂಹದ ಬಾಗಿಲಿನಲ್ಲಿ ದ್ವಾರಪಾಲಕನಾಗಿ ನಿಂತುಕೊಂಡು ಈಶ್ವರನನ್ನು ಕುರಿತು ಹೇಳಿದನು.

೬-೭. ಮಣಿಭದ್ರನು ಹೇಳುತ್ತಾನೆ :— ಎಲೈ ಮಹೇಶ್ವರನೇ! ಯಾದವರ ಸೈನ್ಯವು ಲೆಕ್ಕಮಾಡಲಸಾಧ್ಯವಾದಷ್ಟು ಬಂದಿದೆ. ಬಲದೇವ ಪ್ರದ್ಯುಮ್ನ ಸಾಂಬ ಸಾತ್ಯಕಿ ರಾಜನಾದ ಮಹೋಗ್ರಸೇನ ಭೀಮ ಅರ್ಜುನ ಅಕ್ರೂರ ಉದ್ಧವ ಜಯಂತ ಇವರೆಲ್ಲರೂ ಬಂದಿರುವರು.

೮. ಶ್ರೇಷ್ಠವಾಗಿ ಮಾಡಿರುವ ಅತ್ಯಂತ ಮನೋಹರವಾದ ಉತ್ತಮ ರಥದಲ್ಲಿ ಕುಳಿತು ಬ್ರಹ್ಮನಿಗೂ ಸೃಷ್ಟಿಕರ್ತೃವಾದ ಪೂಜ್ಯನೂ ಪರಮೇಶ್ವರನೂ ಆದ ಕೃಷ್ಣನು ಬಂದಿರುವನು.

ಸಪ್ತಭಿಃ ಪಾರ್ಷದೈರ್ಗೋಪೈಃ ಸೇವಿತಃ ಶ್ವೇತಚಾಮರೈಃ ।
ಕಂದರ್ಪಕೋಟಿಲೀಲಾಭೋ ವನಮಾಲಾವಿಭೂಷಿತಃ ॥ ೯ ॥

ಷಧಾರ ಚಕ್ರಮತುಲಂ ಕೋಟಿಸೂರ್ಯಸಮಪ್ರಭಂ ।
ಗದಾಂ ಕೌಮೋದಕೀಂ ಶೂಲಮವ್ಯರ್ಥಂ ಸನ್ನಿಧಾಯ ಚ ॥ ೧೦ ॥

ರಥಮಧ್ಯೇ ಮಹಾಶಂಖಂ ವಿಶ್ವಸಂಹಾರಕಾರಣಂ ।
ಮಹಾರಥಾನಾಂ ಲಕ್ಷೈಶ್ಚ ರಥಾನಾಂ ಚ ತ್ರಿಕೋಟಿಭಿಃ ॥ ೧೧ ॥

ತ್ರಿಕೋಟಿಭಿರ್ಗಜೇಂದ್ರಾಣಾಂ ಮಲ್ಲಾನಾಂ ಚ ತ್ರಿಕೋಟಿಭಿಃ ।
ಶತಕೋಟಿಭಿರಶ್ವಾನಾಂ ಚರ್ಮಿಣಾಂ ತಚ್ಚತುರ್ಗುಣೈಃ ॥ ೧೨ ॥

ಖಡ್ಗಿನಾಂ ತತ್ಸಪ್ತಗುಣೈರ್ದ್ವಿಗುಣೈಸ್ತದ್ಧನುಷ್ಮತಾಂ ।
ಏಭಿಃ ಸಾರ್ಧಂ ಚ ತ್ವರಿತಮಾಯಯೌ ಶೋಣಿತಂ ಪುರಂ ॥ ೧೩ ॥

ಪರಿತೋ ವೇಷ್ಟಯಾಮಾಸ ಲಂಕಾಂ ದಾಶರಥಿರ್ಯಥಾ ।
ಸಹಸ್ರತಾಲಮಾನಾಂ ಚ ಜ್ವಲದಗ್ನಿಶಿಖೋಜ್ವಲಾಂ ॥ ೧೪ ॥

---

೯. ಅವನು ಸೇವಕರಾದ ಏಳುಮಂದಿ ಗೋಪರಿಂದ ಬಿಳಿಯ ಚಾಮರದಿಂದ ಬೀಸಲ್ಪಡುತ್ತಿರುವವನಾಗಿ ಕೋಟಿ ಮನ್ಮಥರಂತೆ ಪ್ರಕಾಶಮಾನನಾಗಿ ವನಮಾಲೆಯಿಂದಲಂಕೃತನಾಗಿರುವನು.

೧೦. ಕೋಟಿಸೂರ್ಯರಂತೆ ಕಾಂತಿಯುಳ್ಳ ತನಗೆಣೆಯಿಲ್ಲದ ಚಕ್ರವನ್ನೂ, ಕೌಮೋದಕಿಯೆಂಬ ಗದೆಯನ್ನೂ, ವ್ಯರ್ಥವಾಗದಿರುವ ಶೂಲವನ್ನೂ, ಧರಿಸಿರುವನು.

೧೧–೧೩. ರಥದ ಮಧ್ಯದಲ್ಲಿ ಪ್ರಪಂಚವನ್ನೇ ಸಂಹಾರಮಾಡಲು ಸಮರ್ಥವಾದ ಮಹಾ ಶಂಖವನ್ನಿಟ್ಟುಕೊಂಡು ಒಂದುಲಕ್ಷ ಮಹಾರಥರಿಂದಲೂ, ಮೂರು ಕೋಟಿ ರಥಗಳಿಂದಲೂ, ನೂರುಕೋಟಿ ಕುದುರೆಗಳಿಂದಲೂ, ಅದರ ಏಳರಷ್ಟು ಖಡ್ಗಧಾರಿಗಳಿಂದಲೂ, ಅದರ ಎರಡರಷ್ಟು ಧನುರ್ಧಾರಿಗಳಿಂದಲೂ ಕೂಡಿದವನಾಗಿ ವೇಗವಾಗಿ ಶೋಣಿತಪುರಕ್ಕೆ ಬಂದಿರುವನು.

೧೪–೧೫. ಶ್ರೀರಾಮಚಂದ್ರನು ಲಂಕಾಪಟ್ಟಣವನ್ನು ಮುತ್ತಿದಂತೆ ಸಾವಿರ ತಾಳೆಮರದ ಎತ್ತರವಿರುವ ಉರಿಯುತ್ತಿರುವ ಬೆಂಕಿಯ ಜ್ವಾಲೆಗೆ ಸಮನಾದ ಕಂದಕ

ಉರ್ಧ್ವೈರ್ಗೀ ಚ ಪರಿಖಾಯುಕ್ತಾಂ ದುರ್ಲಂಘ್ಯಾಮಸುರೈಃ ಸುರೈಃ ।
ಸ್ವರ್ಗಗಂಗಾಂಬುರಾಶೀನಾಂ ಸಮೂಹೈರ್ವೃಷ್ಟಿಭಿಸ್ತಥಾ ॥ ೧೫ ॥

ಪಕ್ಷೀಂದ್ರೋ ಗರುಡಃ ಸಾಕ್ಷಾನ್ನಿರ್ವಾಣಂ ಚ ಚಕಾರ ಸಃ ।
ಮಣೀಂದ್ರಸಾರನಿರ್ಮಾಣಂ ಪ್ರಾಕಾರಾಭ್ರಲಿಹಂ ಪುರಂ ॥ ೧೬ ॥

ಬಭಂಜ ಲಕ್ಷಂ ಮಲ್ಲಾನಾಂ ಬಲದೇವಶ್ಚ ಲಾಂಗಲೈಃ ।
ಉದ್ಯಾನಾನಾಂ ತ್ರಿಲಕ್ಷಂ ಚ ಪ್ರಾಕಾರೋತ್ಪಾಟನಂ ಪ್ರಭೋಃ ॥ ೧೭ ॥

ಪ್ರವಿವೇಶ ಮಹಾದ್ವಾರಂ ದ್ವಾರಪಾಲಾನ್ನಿಹತ್ಯ ಚ ।
ಏವಂ ಶ್ರುತ್ವಾ ಮಹಾದೇವಶ್ಚೋವಾಚ ಸುರಸಂಸದಿ ॥ ೧೮ ॥

ಪಾರ್ವತೀಂ ಭದ್ರಕಾಲೀಂ ಚ ಸ್ಕಂದಂ ಗಣಪತಿಂ ತಥಾ ।
ಅಷ್ಟೌ ಚ ಭೈರವಾಂಶ್ಚೈವ ರುದ್ರಾಂಶ್ಚ ವೀರಭದ್ರಕಂ ॥
ಮಹಾಕಾಲಂ ನಂದಿನಂ ಚ ಸರ್ವಾನ್ಸೇನಾಪತೀನ್ನವ ॥ ೧೯ ॥

---

ದಿಂದ ಕೂಡಿರುವ ರಾಕ್ಷಸರಿಂದಲೂ, ವೀರರಲಸಾಧ್ಯವಾದ ಪಟ್ಟಣದ ಸುತ್ತಲೂ ಸ್ವರ್ಗಂಗೆಯ ನೀರಿನ ರಾಶಿಯಿಂದ ಮಳೆ ಸುರಿಸುತ್ತ ಮುತ್ತಿಗೆ ಹಾಕಿರುವನು.

೧೬. ಪಕ್ಷಿರಾಜನಾದ ಗರುಡನು ತಾನು ಬಂದು ಶ್ರೇಷ್ಠವಾದ ರತ್ನಮಣಿಗಳ ಸಾರದಿಂದ ನಿರ್ಮಿತವಾದ ಆಕಾಶವನ್ನು ಮುಟ್ಟುತ್ತಿರುವ ಕೋಟೆಗಳುಳ್ಳ ಪಟ್ಟಣವನ್ನು ನಾಶಗೊಳಿಸುತ್ತಿರುವನು.

೧೭. ಬಲದೇವನು ತನ್ನ ನೇಗಿಲಿನಿಂದ ಒಂದುಲಕ್ಷ ಜಟ್ಟಿಗಳನ್ನು ಸದೆಬಡಿದಿರುವನು. ಮೂರುಲಕ್ಷ ಉದ್ಯಾನವನಗಳನ್ನು ನಾಶಪಡಿಸಿರುವನು. ರಾಜಧಾನಿಯ ಕೋಟೆಯನ್ನು ಕಿತ್ತುಹಾಕಿರುವನು.

೧೮–೧೯. ಮತ್ತು ದ್ವಾರಪಾಲಕರನ್ನು ಕೊಂದು ಮಹಾದ್ವಾರದಿಂದ ಒಳಕ್ಕೆ ಪ್ರವೇಶಮಾಡಿರುವನು. ಈಪ್ರಕಾರ ಮಣಿಭದ್ರನು ಹೇಳಿದ ಮಾತನ್ನು ಕೇಳಿ ಮಹಾದೇವನು ದೇವತೆಗಳ ಮುಂಭಾಗದಲ್ಲಿ ಪಾರ್ವತಿಯನ್ನೂ ಭದ್ರಕಾಲಿಯನ್ನೂ ಕುಮಾರಸ್ವಾಮಿಯನ್ನೂ ಗಣೇಶನನ್ನೂ ಅಷ್ಟಭೈರವರನ್ನೂ ರುದ್ರರನ್ನೂ ವೀರಭದ್ರನನ್ನೂ ಮಹಾಕಾಲನನ್ನೂ ನಂದಿಯನ್ನೂ ಸಮಸ್ತ ಸೇನಾನಾಯಕರನ್ನೂ ಕುರಿತು ಹೇಳಿದನು.

॥ ಶ್ರೀ ಮಹಾದೇವ ಉವಾಚ ॥
ಗೋಲೋಕನಾಥೋ ಭಗವಾಂಶ್ಚಕ್ರಪಾಣಿಃ ಸಮಾಗತಃ ॥ ೨೦ ॥

ವಿಶ್ವೌಘಂ ಭಂಕ್ತುಮೀಶೋ ಯಃ ಕ್ಷಣೇನ ನಗರಂಚ ಕಿಂ ।
ಸರ್ವೋಪಾಯೈಶ್ಚ ಸರ್ವೇ ತೇ ಬಾಣಂ ರಕ್ಷಂತು ಯತ್ನತಃ ॥ ೨೧ ॥

ಬಾಣೋ ಗಚ್ಛತು ಸಂಗ್ರಾಮಂ ಸ್ಮೃತ್ವಾ ಲಂಬೋದರಂ ವರಂ ।
ಬಾಣಸ್ಯ ದಕ್ಷಿಣೇ ಸ್ಕಂದಃ ಪುರತಶ್ಚ ಗಣೇಶ್ವರಃ ॥ ೨೨ ॥

ವಾಮೇ ಚ ಭೈರವಾ ರುದ್ರಾಃ ಸ್ವಯಂ ನಂದೀ ಮಹಾರಥಃ ।
ಮಹಾಕಾಲೋ ವೀರಭದ್ರೋ ಯೇಚಾನ್ಯೇ ಸೈನಿಕಾಸ್ತಥಾ ॥ ೨೩ ॥

ಊರ್ಧ್ವೇ ದುರ್ಗಾ ಭದ್ರಕಾಲೀ ಹ್ಯುಗ್ರಚಂಡಾ ಚ ಕೋಟರೀ ।
ಬಾಣಂ ರಕ್ಷ ಮಹಾಭಾಗೇ ದುರ್ಗೇ ದುರ್ಗತಿನಾಶಿನಿ ॥ ೨೪ ॥

ಕೃಷ್ಣಸ್ಯ ಭವತೀಶಕ್ತಿಸ್ತೇನ ನಾರಾಯಣೀಸ್ಮೃತಾ ।
ವಿಷ್ಣುಮಾಯೇ ಜಗನ್ಮಾತಃ ಸರ್ವಮಂಗಲಮಂಗಲೇ ॥ ೨೫ ॥

---

೨೦–೨೧. ಶ್ರೀ ಮಹಾದೇವನು ಹೇಳುತ್ತಾನೆ; ಗೋಲೋಕಾಧಿಪತಿಯಾದ ಪೂಜ್ಯನಾದ ಕೃಷ್ಣನು ಬಂದಿರುವನು. ಯಾವನು ಕ್ಷಣಮಾತ್ರದಲ್ಲಿ ಸಕಲ ಪ್ರಪಂಚ ಸಮೂಹವನ್ನೇ ನಾಶಮಾಡಲು ಸಮರ್ಥನಾಗಿರುವನೋ ಅಂಥಾ ಪರಮಾತ್ಮನಿಗೆ ಈ ಪಟ್ಟಣವು ಯಾವಲೆಕ್ಕ. ನೀವೆಲ್ಲರೂ ಸಕಲ ವಿಧವಾದ ಉಪಾಯಗಳನ್ನು ಮಾಡಿ ಪ್ರಯತ್ನಪೂರ್ವಕವಾಗಿ ಬಾಣನನ್ನು ಕಾಪಾಡಿರಿ.

೨೨–೨೩. ಬಾಣನು ಪೂಜ್ಯನಾದ ಗಣಪತಿಯನ್ನು ಸ್ಮರಿಸಿಕೊಂಡು ಯುದ್ಧಕ್ಕೆ ಹೋಗಲಿ. ಬಾಣನ ಬಲಭಾಗದಲ್ಲಿ ಕುಮಾರಸ್ವಾಮಿಯೂ, ಮುಂಭಾಗದಲ್ಲಿ ಗಣೇಶ್ವರನೂ, ಎಡಭಾಗದಲ್ಲಿ ಭೈರವರು ರುದ್ರರು ಮಹಾರಥನಾದ ನಂದಿಯೂ ಮಹಾಕಾಲ ವೀರಭದ್ರ ಇನ್ನೂ ಉಳಿದ ಸೈನಿಕರೂ ಕೂಡ ಹೊರಡಲಿ.

೨೪–೨೫. ಮೇಲ್ಭಾಗದಲ್ಲಿ ದುರ್ಗಿ ಭದ್ರಕಾಳಿ ಉಗ್ರಚಂಡಾ ಕೋಟರಿ ಇವರುಗಳು ಹೊರಡಲಿ. ಭಕ್ತರ ದುರ್ಗತಿಯನ್ನು ನಾಶಪಡಿಸುವ ಮಹಾತ್ಮಳಾದ ದುರ್ಗಿಯೇ! ಬಾಣನನ್ನು ಕಾಪಾಡು. ಪೂಜ್ಯಳಾದ ನೀನು ಶ್ರೀಕೃಷ್ಣನ ಶಕ್ತಿಯಾಗಿರುವೆ. ಆದುದರಿಂದಲೇ ನಿನ್ನನ್ನು ನಾರಾಯಣಿಯೆನ್ನುವರು. ಸಕಲ ಮಂಗಳ

ಅವ್ಯರ್ಥಾಚ್ಚಕ್ರಸಾರಾಚ್ಚ ರಕ್ಷ ಬಾಣಂ ಸುದರ್ಶನಾತ್ ।
ಬಾಣಃ ಪ್ರಿಯೋ ಮೇ ಸರ್ವೇಭ್ಯೋ ಗಣೇಶಾತ್ಕಾರ್ತಿಕಾದಪಿ ॥ ೨೬ ॥

ಬಾಣಮೂರ್ಧ್ನಿ ಕರಂ ಧೇಹಿ ಪಾದಾಬ್ಜರಜಸಾ ಸಹ ।
ಶಿವಸ್ಯ ವಚನಂ ಶ್ರುತ್ವಾ ದುರ್ಗಾ ದುರ್ಗತಿನಾಶಿನೀ ॥
ಪ್ರಹಸ್ಯೋವಾಚ ಮಧುರಂ ಯಾಥಾರ್ಥ್ಯಂ ಸಮಯೋಚಿತಂ ॥ ೨೭ ॥

॥ ಪಾರ್ವತ್ಯುವಾಚ ॥
ಮಣಿರತ್ನಾದಿಕಂ ಯದ್ಯನ್ಮುಕ್ತಾಮಾಣಿಕ್ಯಹೀರಕಂ ॥ ೨೮ ॥

ಸರ್ವಸ್ವಂ ಕನ್ಯಕಾಮೂಷಾಂ ರತ್ನಭೂಷಣಭೂಷಿತಾಂ ।
ರತ್ನಭೂಷಣಭೂಷಾಢ್ಯಮನಿರುದ್ಧಂ ಪರಂ ವರಂ ॥ ೨೯ ॥

ಪುರಸ್ಕೃತ್ಯ ದೇಹಿ ಬಾಣ ಕೃಷ್ಣಾಯ ಪರಮಾತ್ಮನೇ ।
ರಾಜ್ಯಂ ಕುರುಷ್ವ ನಿರ್ವಿಘ್ನಂ ಕಿಂ ಯುದ್ಧಮಾತ್ಮನಾ ಸಹ ॥ ೩೦ ॥

---

ಗಳಿಗೂ ಮಂಗಳರೂಪಳಾಗಿರುವ ವಿಷ್ಣುಮಾಯೆಯಾದ ಲೋಕಗಳ ತಾಯಿಯೇ! ಯಾವಾಗಲೂ ವ್ಯರ್ಥವಾಗದಿರುವ ಸುದರ್ಶನವೆಂಬ ಶ್ರೇಷ್ಠ ಚಕ್ರದ ದೆಸೆಯಿಂದ ಬಾಣನನ್ನು ಕಾಪಾಡುವವಳಾಗು. ಬಾಣನು ನನಗೆ ಗಣೇಶ ಕುಮಾರಸ್ವಾಮಿ ಇವರುಗಳಿಗಿಂತಲೂ ಅತ್ಯಂತ ಪ್ರೀತಿಪಾತ್ರನು.

೨೭. ನೀನು ಬಾಣನ ತಲೆಯಮೇಲೆ ನಿನ್ನ ಕಾಲಿನ ಧೂಳಿನೊಡನೆ ಕೈಯನ್ನಿಡುವವಳಾಗು. ಶಿವನು ಹೇಳಿದ ಮಾತನ್ನು ಕೇಳಿ ದುರ್ಗತಿಯನ್ನು ನಾಶಮಾಡುವವಳಾದ ದುರ್ಗಿಯು ನಗುತ್ತ ಮೃದುಮಧುರವಾದ, ಸಮಯಕ್ಕೆ ತಕ್ಕ ಯಥಾರ್ಥವಾದ ಮಾತನ್ನಾಡಿದಳು.

೨೮-೩೦. ಪಾರ್ವತಿಯು ಹೇಳುತ್ತಾಳೆ:— ಎಲೈ ಬಾಣನೇ! ಮುತ್ತು ಮಾಣಿಕ್ಯ ಹೀರಕ ಮುಂತಾದ ರತ್ನಗಳು ಮಣಿಗಳು ಯಾವುವಿವೆಯೋ ಅವೆಲ್ಲವನ್ನೂ ರತ್ನಾಭರಣಗಳಿಂದ ಅಲಂಕೃತಳಾದ ಮಗಳಾದ ಊಷೆಯನ್ನೂ, ರತ್ನಾಭರಣಗಳಿಂದ ಸಿಂಗರಿಸಿಕೊಂಡಿರುವ ಉತ್ತಮ ವರನಾದ ಅನಿರುದ್ಧನನ್ನೂ ಮುಂದಿಟ್ಟುಕೊಂಡು ಹೋಗಿ ಪರಮಾತ್ಮನಾದ ಕೃಷ್ಣನಿಗೆ ಒಪ್ಪಿಸುವವನಾಗು. ಅಡಚಣೆಯಿಲ್ಲದಂತೆ ರಾಜ್ಯಭಾರವನ್ನು ಮಾಡು. ಪರಮಾತ್ಮನೊಡನೆ ಯುದ್ಧಮಾಡುವುದರಿಂದ ಪ್ರಯೋಜನವೇನು.

ಯಸ್ಮಿನ್ಗತೇ ಗತಾಃ ಪ್ರಾಣಾಃ ಸ ಜೀವಶ್ಚೇಂದ್ರಿಯೈಃ ಸಹ ।
ಶಕ್ತಿಶ್ಚಾಹಂ ಮನೋ ಬ್ರಹ್ಮಾ ಸ್ವಯಂ ಜ್ಞಾನಾತ್ಮಕಂ ಶಿವಃ ॥ ೩೧ ॥

ಸದ್ಯಃ ಪತತಿ ದೇಹಶ್ಚ ಶಿವಂ ತ್ಯಕ್ತ್ವಾ ಶವೋ ಭವೇತ್ ।
ಕೋ ವಾ ತಿಷ್ಠತಿ ಸಂಗ್ರಾಮೇ ಚಕ್ರಸ್ಯ ತೇಜಸಾ ಶಿವ ॥ ೩೨ ॥

ನಾತ್ಮಾಕಾಶೋ ಬಾಣವಿದ್ಧೋ ಯುದ್ಧಂ ಕಿಂ ಸ್ವಾತ್ಮನಾ ಸಹ ।
ಪರಮಾತ್ಮಾ ಚ ಸರ್ವೇಷಾಂ ಭಕ್ತಾನುಗ್ರಹವಿಗ್ರಹಃ ॥ ೩೩ ॥

ನಿತ್ಯಃ ಸತ್ಯೋ ಹಿ ಕೃಷ್ಣಶ್ಚ ಪರಿಪೂರ್ಣತಮಃ ಪ್ರಭುಃ ।
ಗಣೇಶಃ ಕಾರ್ತಿಕೇಯಶ್ಚ ಭವಾನಪಿ ತಯೋಃ ಪರಃ ॥ ೩೪ ॥

---

೩೧. ಆ ಪರಮಾತ್ಮನು ಹೊರಟುಹೋದೊಡನೆಯೇ ಪ್ರಾಣಗಳು ಇಂದ್ರಿಯಗಳೊಡನೆ ಹೊರಟುಹೋಗುತ್ತವೆಯೋ ಅವನೇ ಜೀವನು. ನಾನೇ ಶಕ್ತಿಯು, ಬ್ರಹ್ಮನೇ ಮನಸ್ಸು, ಸಾಕ್ಷಾತ್ ಶಿವನೇ ಜ್ಞಾನಸ್ವರೂಪನು.

೩೨. ಈ ದೇಹವು ಪರಮಾತ್ಮನ ಚಕ್ರದ ತೇಜಸ್ಸಿನಿಂದ ಜ್ಞಾನರಹಿತವಾಗಿ ಅಜ್ಞಾನಮಯವಾಗಿ ಕೂಡಲೇಬೀಳುವುದು. ಎಲೈ ಶಿವನೇ! ಯಾವನು ತಾನೆ ಪರಮಾತ್ಮನೊಡನೆ ಯುದ್ಧಮಾಡಲು ನಿಲ್ಲುತ್ತಾನೆ ?

೩೩. ಎಲೈ ಬಾಣನೇ! ಯುದ್ಧಮಾಡುವ ಸಮಯದಲ್ಲಿ ಆ ಪರಮಾತ್ಮನು ಆಕಾಶದಂತೆ ಸರ್ವವ್ಯಾಪಿಯಲ್ಲವೇ ? ಅವನು ಸರ್ವರಿಗೂ ಪರಮಾತ್ಮನು ಮತ್ತು ಭಕ್ತರಿಗೆ ಅನುಗ್ರಹಮಾಡುವುದಕ್ಕಾಗಿಯೇ ಶರೀರವನ್ನು ಧರಿಸಿರುವನು. ಇಂಥಾ ಸ್ವಸ್ವರೂಪನಾದ ಪರಮಾತ್ಮನೊಡನೆ ಯುದ್ಧಮಾಡುವುದರಿಂದೇನುಪ್ರಯೋಜನ ?

೩೪. ಆ ಕೃಷ್ಣನಾದರೋ ನಿತ್ಯನೂ ಸತ್ಯಸ್ವರೂಪನೂ ಅತ್ಯಂತ ಪರಿಪೂರ್ಣನೂ ಆದ ಜಗತ್ಪ್ರಭುವು. ನನಗೆ ಗಣೇಶ ಷಣ್ಮುಖ ಇವರಿಬ್ಬರಿಗಿಂತಲೂ ನೀನು ಅತ್ಯಂತ ಪ್ರೀತಿಪಾತ್ರನು.

ಕಿಂಕರೇಷು ಪ್ರಿಯೋ ಬಾಣೋ ನ ಹಿ ಕೃಷ್ಣಾತ್ಪರಃ ಪ್ರಿಯಃ ।
ವೈಕುಂಠೇಹಂ ಮಹಾಲಕ್ಷ್ಮೀರ್ಗೋಲೋಕೇ ರಾಧಿಕಾ ಸ್ವಯಂ ॥ ೩೫ ॥

ಶಿವಾಹಂ ಶಿವಲೋಕೇಪಿ ಬ್ರಹ್ಮಲೋಕೇ ಸರಸ್ವತೀ ।
ಅಹಂ ನಿಹತ್ಯ ದೈತ್ಯಾಂಶ್ಚ ದಕ್ಷಕನ್ಯಾ ಸತೀ ಪುರಾ ॥ ೩೬ ॥

ತ್ವನ್ನಿಂದಯಾ ತ್ಯಕ್ತದೇಹಾ ಸಾ ಚಾಹಂ ಶೈಲಕನ್ಯಕಾ ।
ರಕ್ತಬೀಜಸ್ಯ ಯುದ್ಧೇ ಚ ಕಾಲೀ ಚ ಮೂರ್ತಿಭೇದತಃ ॥ ೩೭ ॥

ಸಾವಿತ್ರೀ ವೇದಮಾತಾಹಂ ಸೀತಾ ಜನಕಕನ್ಯಕಾ ।
ರುಕ್ಮಿಣೀ ದ್ವಾರವತ್ಯಾಂ ಚ ಭಾರತೇ ಭೀಷ್ಮಕನ್ಯಕಾ ॥ ೩೮ ॥

ಸುದಾಮ್ನಃ ಶಾಪತೋ ದೈವಾದ್ವೃಷಭಾನಸುತಾಽಧುನಾ ।
ಧರ್ಮಪತ್ನೀ ಚ ಕೃಷ್ಣಸ್ಯ ಪುಣ್ಯೇ ವೃಂದಾವನೇ ವನೇ ॥ ೩೯ ॥

---

೩೫. ಕಿಂಕರರಲ್ಲಿ ಬಾಣನು ಪ್ರೀತಿಪಾತ್ರನು. ಕೃಷ್ಣನಿಗಿಂತಲೂ ಪ್ರೀತಿಪಾತ್ರರಾದವರು ಬೇರೊಬ್ಬರು ಇರುವುದಿಲ್ಲ. ನಾನು ವೈಕುಂಠದಲ್ಲಿ ಮಹಾಲಕ್ಷ್ಮಿಯೂ ಗೋಲೋಕದಲ್ಲಿ ರಾಧಿಕೆಯೂ ಆಗಿರುವೆನು.

೩೬–೩೭. ಮತ್ತು ಶಿವಲೋಕದಲ್ಲಿ ನಾನು ಶಿವೆಯೂ ಬ್ರಹ್ಮಲೋಕದಲ್ಲಿ ಸರಸ್ವತಿಯೂ ಆಗಿರುವೆನು. ಪೂರ್ವದಲ್ಲಿ ನಾನು ದೈತ್ಯರನ್ನೆಲ್ಲ ಕೊಂದು ದಕ್ಷಬ್ರಹ್ಮನ ಮಗಳಾದ ಸತೀ ದೇವಿಯಾಗಿದ್ದೆನು. ನಿನ್ನನ್ನು ನನ್ನ ತಂದೆಯು ನಿಂದೆಮಾಡಿದ ಕಾರಣ ಆ ನಾನು ಆ ಶರೀರವನ್ನು ಬಿಟ್ಟು ಹಿಮವಂತನ ಮಗಳಾಗಿರುವೆನು. ರಕ್ತಬೀಜನೊಡನೆ ಯುದ್ಧಮಾಡುವಾಗ ಬೇರೆ ಶರೀರವನ್ನು ಧರಿಸಿದ ಕಾಳಿಯಾಗಿದ್ದೆನು.

೩೮. ನಾನು ದೇವತೆಗಳಿಗೆ ತಾಯಿಯಾದ ಸಾವಿತ್ರಿಯೂ ಜನಕರಾಜನ ಮಗಳಾದ ಸೀತೆಯೂ ದ್ವಾರಾವತಿಯಲ್ಲಿ ರುಕ್ಮಿಣಿಯೂ ಭಾರತದಲ್ಲಿ ಭೀಷ್ಮಕನ್ಯೆಯೂ ಆಗಿರುವೆನು.

೩೯. ಅದೃಷ್ಟದಿಂದುಂಟಾದ ಸುದಾಮನ ಶಾಪದಿಂದ ಈಗ ವೃಷಭಾನನ ಮಗಳಾಗಿಯೂ ಪುಣ್ಯಕರವಾದ ವೃಂದಾವನದಲ್ಲಿ ಶ್ರೀಕೃಷ್ಣನ ಧರ್ಮಪತ್ನಿಯೂ ಆಗಿರುವೆನು.

ಭಗವಂತಂ ಚ ಸರ್ವಜ್ಞಂ ತ್ವಾಂ ಶಿವಂ ಚ ಸನ ತನಂ ।
ಕಿಂ ವಾಹಂ ಕಥಯಾಮೀತಿ ಕರ್ತವ್ಯಂ ಸಮಯೋಚಿತಂ ॥ ೪೦ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ
ಉತ್ತರಾರ್ಧೇ ನಾರಾಯಣನಾರದಸಂವಾದೇ ಬಾಣಯುದ್ಧೇ
ಅಷ್ಟಾದಶಾಧಿಕಶತತಮೋಽಧ್ಯಾಯಃ.

---

೪೦. ಷಡ್ಗುಣೈಶ್ವರ್ಯಸಂಪನ್ನನೂ ಸಕಲವನ್ನೂ ತಿಳಿದವನೂ ಸನಾತನನೂ ಮಂಗಳಸ್ವರೂಪನೂ ಆದ ನಿನಗೆ ಸಮಯೋಚಿತವಾಗಿ ಮಾಡಬೇಕಾದ ಕೆಲಸವನ್ನು ನಾನೇನೆಂದು ಹೇಳಲಿ ?

ಇಂತು ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣ ನಾರದಸಂವಾದದಲ್ಲಿನ
ಬಾಣಯುದ್ಧದಲ್ಲಿ
ನೂರ ಹದಿನೆಂಟನೆಯ ಅಧ್ಯಾಯವು ಸಮಾಪ್ತವಾದುದು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ಏಕೋನವಿಂಶಾಧಿಕಶತತಮೋಽಧ್ಯಾಯಃ ||

|| ನಾರಾಯಣ ಉವಾಚ ||

ಪಾರ್ವತೀ ವಚನಂ ಶ್ರುತ್ವಾ ಗಣೇಶಶ್ಚ ಶಿವಃ ಸ್ವಯಂ ।
ಕಾರ್ತಿಕೇಯಶ್ಚ ಕಾಲೀ ಚ ತಾಂ ಪ್ರಶಂಸಾಂ ಚಕಾರ ಹ || ೧ ||

ಉವಾಚ ಭಗವಾಞ್ಶಂಭುರ್ಜಗತಾಂ ಮಾತರಂ ಪರಾಂ ।
ಜ್ಯೋತಿಃಸ್ವರೂಪಾಂ ಪರಮಾಂ ಮೂಲಪ್ರಕೃತಿಮೀಶ್ವರೀಂ || ೨ ||

|| ಶ್ರೀ ಮಹಾದೇವ ಉವಾಚ ||

ತ್ವಯಾ ಯದುಕ್ತಂ ದೇವೇಶಿ ಸರ್ವಂ ವೇದೋಕ್ತಮೀಪ್ಸಿತಂ ।
ಅಯುಕ್ತಮುಪಹಾಸ್ಯಂ ಚ ಸಮರಂ ಪರಮಾತ್ಮನಾ || ೩ ||

---

### ನೂರಹತ್ತೊಂಬತ್ತನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ :— ಪಾರ್ವತಿಯು ಹೇಳಿದ ಮಾತನ್ನು ಕೇಳಿ ಗಣೇಶನೂ ಶಿವನೂ ಕಾರ್ತಿಕೇಯನೂ ಕಾಲಿಯೂ ಆ ಪಾರ್ವತಿಯನ್ನು ಹೊಗಳಿದರು.

೨. ಪೂಜ್ಯನಾದ ಶಂಭುವು ಶ್ರೇಷ್ಠಳೂ ಲೋಕಕ್ಕೆ ತಾಯಿಯೂ ಉತ್ತಮ ಜ್ಯೋತಿಸ್ಸ್ವರೂಪಳೂ ಮೂಲಪ್ರಕೃತಿಯೂ ಆದ ದೇವಿಯನ್ನು ಕುರಿತು ಹೇಳಿದನು.

೩. ಶ್ರೀ ಮಹಾದೇವನು ಹೇಳುತ್ತಾನೆ :— ಎಲೈ ದೇವೇಶ್ವರಿಯೇ ! ನೀನು ಇದುವರೆಗೆ ಹೇಳಿದುದೆಲ್ಲವೂ ವೇದದಲ್ಲಿ ಹೇಳಲ್ಪಟ್ಟುದು ಮತ್ತು ಅವಶ್ಯಕವಾದುದು. ಪರಮಾತ್ಮನೊಡನೆ ಯುದ್ಧಮಾಡುವುದು ಅನ್ಯಾಯವು ಮತ್ತು ಹಾಸ್ಯಾಸ್ಪದವೂ ಆದುದು.

ಬಾಣೋ ಪದಾತು ಕನ್ಯಾಂ ತಾಂ ಸ್ವರ್ಣಭೂಷಣಭೂಷಿತಾಂ ।
ಸಾಮಂಜಸ್ಯಂ ಯಶಸ್ಯಂ ಚ ಶುಭದಂ ಸರ್ವಕರ್ಮಸು ॥ ೪ ॥

ನ ದದಾತಿ ಯದಾ ಬಾಣೋ ಹಿರಣ್ಯಕಶಿಪೋಃ ಪ್ರಜಾ ।
ಯುದ್ಧೇ ಪರಾಙ್ಮುಖೋ ಭೀತೋ ಭಗವತ್ಯಯಶಸ್ಕರಃ ॥ ೫ ॥

ಬಾಣೋ ಗಚ್ಛತು ಸನ್ನಾಹೀ ರಣಶಾಸ್ತ್ರವಿಶಾರದಃ ।
ಪಶ್ಚಾಚ್ಚಾಗಮನಂ ಕುರ್ಮೋ ವಯಂ ಸಾನ್ನಾಹಿಕಾಃ ಶಿವೇ ॥ ೬ ॥

ಉವಾಚ ಬಾಣಂ ತಾಂ ದಾತುಂ ಸ ಚ ನ ಸ್ವೀಚಕಾರ ಹ ।
ದುರ್ಗಾ ತಂ ಬೋಧಯಾಮಾಸ ನ ಬುಬೋಧ ಚ ತದ್ವಚಃ ॥ ೭ ॥

ಏತಸ್ಮಿನ್ನಂತರೇ ತಾಂ ಚ ಸಭಾಮೇವ ಮನೋರಮಾಂ ।
ಆಜಗಾಮ ಮಹಾಧರ್ಮಿ ಬಲಿಶ್ಚ ವೈಷ್ಣವಾಗ್ರಣೀಃ ॥ ೮ ॥

---

೪. ಬಾಣನು ತನ್ನ ಮಗಳನ್ನು ಚಿನ್ನದ ಒಡವೆಗಳಿಂದ ಅಲಂಕಾರಮಾಡಿ ಅನಿರುದ್ಧನಿಗೆ ಕೊಡಲಿ. ಇದು ಸಮಂಜಸವಾದುದು, ಕೀರ್ತಿಯನ್ನು ತರುವುದು ಮತ್ತು ಸಕಲ ಕೆಲಸಗಳಲ್ಲಿಯೂ ಶುಭವನ್ನುಂಟುಮಾಡತಕ್ಕುದಾಗಿದೆ.

೫. ಹಿರಣ್ಯಕಶಿಪುವಿನ ವಂಶದಲ್ಲಿ ಹುಟ್ಟಿದ ಬಾಣನು ಮಗಳನ್ನು ಕೊಡದಿದ್ದರೆ ಯುದ್ಧದಲ್ಲಿ ಹೆದರಿ ಹಿಮ್ಮೆಟ್ಟುವನು. ಎಲೈ ಭಗವತಿಯೇ ಇದು ಅಪಕೀರ್ತಿಯನ್ನುಂಟುಮಾಡುತ್ತದೆ.

೬. ಎಲೈ ಶಿವೆಯೇ! ಯುದ್ಧಶಾಸ್ತ್ರದಲ್ಲಿ ನಿಪುಣನಾದ ಬಾಣನು ಸೇನಾಸಮೇತನಾಗಿ ಹೊರಡಲಿ. ಆಮೇಲೆ ನಾವೆಲ್ಲರೂ ಸಿದ್ಧರಾಗಿ ಹೋಗೋಣ.

೭. ಮಗಳನ್ನು ಕೊಡುವಂತೆ ಬಾಣನಿಗೆ ಹೇಳಿದೆನು. ಅವನು ಆ ಮಾತನ್ನು ಒಪ್ಪಿಕೊಳ್ಳಲಿಲ್ಲ. ದುರ್ಗಾದೇವಿಯೂ ಅವನಿಗೆ ಬೋಧನೆಮಾಡಿದಳು. ಅವಳ ಮಾತನ್ನೂ ಅವನು ನಡೆಸಲಿಲ್ಲ.

೮. ಇಷ್ಟು ಹೊತ್ತಿಗೆ ಆ ಮನೋಹರವಾದ ಸಭೆಯನ್ನು ಕುರಿತು ಮಹಾಧರ್ಮಿಷ್ಠನೂ ವಿಷ್ಣುಭಕ್ತರಲ್ಲಿ ಶ್ರೇಷ್ಠನೂ ಆದ ಬಲಿಯು ಬಂದನು.

ರಥಂ ರತ್ನೇಂದ್ರನಿರ್ಮಾಣಂ ಸಮಾರುಹ್ಯ ಮಹಾಬಲಃ ।
ಪ್ರತತ್ಯೈಃ ಸಪ್ತಭಿರ್ದೈತ್ಯೈಃ ಸೇವಿತಃ ಶ್ವೇತಚಾಮರೈಃ ॥ ೯ ॥

ದೈತ್ಯೇಂದ್ರಾಣಾಂ ಸಪ್ತಲಕ್ಷೈರಾವೃತಃ ಪರಮಾಸ್ತ್ರವಿತ್ ।
ಅವರುಹ್ಯ ರಥಾತ್ತೂರ್ಣಂ ಗಣೇಶಂ ಚ ಶಿವಾಂ ಶಿವಂ ॥ ೧೦ ॥

ಪ್ರಣಮ್ಯ ಕಾರ್ತಿಕೇಯಂ ಚ ಸ ಉವಾಸ ಚ ಸಂಸದಿ ।
ಉತ್ತಸ್ಥುರಾರಾತ್ತಂ ದೃಷ್ಟ್ವಾ ತೇ ಸರ್ವೇ ಶಂಕರಂ ವಿನಾ ॥
ತಮುವಾಚ ಮಹಾದೇವಃ ಸಂಭಾಷ್ಯ ಪ್ರಿಯಭಾಷಣಂ ॥ ೧೧ ॥

॥ ಶ್ರೀ ಮಹಾದೇವ ಉವಾಚ ॥

ಭಗವಂಶ್ಚತುರಸ್ತ್ವಂ ಚ ಪ್ರದಾತಾ ಸರ್ವಸಂಪದಾಂ ॥ ೧೨ ॥

ಅಯಂ ಹಿ ಪರಮೋ ಲಾಭೋ ವೈಷ್ಣವಾನಾಂ ಸಮಾಗಮಃ ।
ತೀರ್ಥಾನ್ಯಪಿ ಚ ಪೂತಾನಿ ವೈಷ್ಣವಸ್ಪರ್ಶಮಾತ್ರತಃ ॥ ೧೩ ॥

---

೯—೧೧. ಮಹಾಬಲಶಾಲಿಯಾದ ಬಲಿಯು ಉತ್ತಮರತ್ನಗಳಿಂದ ಮಾಡಿದ ರಥವನ್ನು ಹತ್ತಿಕೊಂಡವನಾಗಿ ಬಲಿಷ್ಠರಾದ ಏಳುಮಂದಿ ರಾಕ್ಷಸರಿಂದ ಬಿಳಿಯ ಚಾಮರಗಳಿಂದ ಬೀಸಲ್ಪಡುತ್ತಿರುವವನಾಗಿ ಉತ್ತಮಾಸ್ತ್ರಗಳೆಲ್ಲವನ್ನೂ ಬಲ್ಲ ಆ ಬಲಿಯು ಏಳುಲಕ್ಷ ರಾಕ್ಷಸರಿಂದೊಡಗೂಡಿದವನಾಗಿ ಬಂದು ರಥದಿಂದ ಜಾಗ್ರತೆಯಾಗಿ ಇಳಿದು ಗಣೇಶನಿಗೂ ಶಿವನಿಗೂ ಪಾರ್ವತಿಗೂ ಷಣ್ಮುಖನಿಗೂ ನಮಸ್ಕರಿಸಿ ಸಭೆಯಲ್ಲಿ ಕುಳಿತುಕೊಂಡನು. ಅವನನ್ನು ನೋಡಿ ಶಂಕರನನ್ನು ಬಿಟ್ಟು ಉಳಿದೆಲ್ಲರೂ ಮೇಲಕ್ಕೆದ್ದರು ಮಹಾದೇವನು ಹಿತವಾಗಿ ಮಾತನಾಡುವ ಆ ಬಲಿಯನ್ನು ಕುರಿತು ಮಾತನಾಡಿ ಹೀಗೆ ಹೇಳಿದನು.

೧೨. ಶ್ರೀ ಮಹಾದೇವನು ಹೇಳುತ್ತಾನೆ :— ಪೂಜ್ಯನೇ ! ನೀನು ಮಹಾ ನಿಪುಣನು. ಮತ್ತು ಸಕಲ ಸಂಪತ್ತುಗಳನ್ನೂ ಕೊಡುವವನಾಗಿರುತ್ತೀಯೆ.

೧೩. ಈ ವಿಷ್ಣುಭಕ್ತರ ಜೊತೆ (ಬರುವಿಕೆ) ಯೆಂಬುದು ಒಂದು ದೊಡ್ಡ ಲಾಭವು. ವೈಷ್ಣವನು ಮುಟ್ಟಿದ ಮಾತ್ರದಿಂದಲೇ ಸಕಲ ತೀರ್ಥಗಳೂ ಪವಿತ್ರಗಳಾಗುತ್ತವೆ.

ಸರ್ವೇಷಾಮಾಶ್ರಮಾಣಾಂ ಚ ಪೂಜಿತೋ ಬ್ರಾಹ್ಮಣಃ ಶುಚಿಃ ।
ತತೋಽಧಿಕಃ ಪೂಜಿತೋಽಪಿ ಬ್ರಾಹ್ಮಣೋ ಯದಿ ವೈಷ್ಣವಃ ॥ ೧೪ ॥

ನ ಹಿ ಪೂತಂ ಚ ಪಶ್ಯಾಮಿ ವೈಷ್ಣವಬ್ರಾಹ್ಮಣಾತ್ಪರಂ ।
ಸ ಪೂತಃ ಪವನಾದೇವ ಸ ಪೂತಶ್ಚ ಹುತಾಶನಾತ್ ॥ ೧೫ ॥

ತೀರ್ಥೇಭ್ಯೋಽಪಿ ಚ ಸರ್ವೇಭ್ಯೋ ಬಿಭೇತಿ ಚ ಽಽಸುರ ।
ನ ಹಿ ಪಾಪಾನಿ ತದ್ದೇಹೇ ವಹ್ನೌ ಶುಷ್ಕತೃಣಾದಿವತ್ ॥ ೧೬ ॥

॥ ಬಲಿರುವಾಚ ॥

ಕಥಂ ಸ್ತೌಷಿ ಜಗನ್ನಾಥ ಭೃತ್ಯಮುಸ್ತ್ವಮ್ಯಮೀಶ್ವರ ।
ಪ್ರಪತ್ತಂ ಪರಮೈಶ್ವರ್ಯಂ ತ್ವಯಾ ನಾಥ ಸುದುರ್ಲಭಂ ॥ ೧೭ ॥

ಅಧುನಾ ಸ್ಥಾಪಿತೋ ದೈವಾತ್ಸರ್ವಾಧಃ ಸುತಲೇಽಪಿ ಚ ।
ಇಂದ್ರಾಯ ದತ್ತಮೈಶ್ವರ್ಯಂ ಮತ್ತೋ ಭಕ್ತಾತ್ಸುರೇಶ್ವರ ॥ ೧೮ ॥

---

೧೪. ಸಕಲ ಆಶ್ರಮಗಳಿಗೂ ಶುಚಿಯಾದ ಬ್ರಾಹ್ಮಣನು ಪೂಜಿಸಲು ಯೋಗ್ಯನು. ಅದಕ್ಕಿಂತಲೂ ಬ್ರಾಹ್ಮಣನು ವಿಷ್ಣುಭಕ್ತನಾಗಿದ್ದರೆ ಅತ್ಯಂತ ಪೂಜ್ಯನು.

೧೫, ವಿಷ್ಣುಭಕ್ತನಾದ ಬ್ರಾಹ್ಮಣನಿಗಿಂತಲೂ ಪರಿಶುದ್ಧನಾದವನನ್ನು ನಾನೆಲ್ಲಿಯೂ ಕಾಣೆನು. ಅವನು ವಾಯುವಿಗಿಂತಲೂ ಅಗ್ನಿಗಿಂತಲೂ ಪರಿಶುದ್ಧನಾಗಿರುತ್ತಾನೆ.

೧೬. ಪಾಪಗಳು ಸಕಲ ತೀರ್ಥಗಳ ದೆಸೆಯಿಂದ ಹೆದರುವುದಕ್ಕಿಂತಲೂ ವಿಷ್ಣುಭಕ್ತನಾದ ಬ್ರಾಹ್ಮಣನನ್ನು ನೋಡಿ ಹೆದರುತ್ತವೆ. ಬೆಂಕಿಯಲ್ಲಿ ಒಣಗಿದ ಹುಲ್ಲುಗಳು ಉಳಿಯದಿರುವಂತೆ ಅವನ ದೇಹದಲ್ಲಿ ಪಾಪಗಳಿರುವುದಿಲ್ಲ.

೧೭. ಬಲಿಯು ಹೇಳುತ್ತಾನೆ:— ಜಗನ್ನಾಥನೇ! ಮಹೇಶ್ವರನೇ! ಒಡೆಯನೇ! ನಾನು ನಿನ್ನ ಸೇವಕನಾಗಿರುವೆನು. ನನ್ನನ್ನೇಕೆ ಹೊಗಳುತ್ತಿರುವೆ, ಇತರರಿಗೆ ಹೊಂದಲಸಾಧ್ಯವಾದ ಐಶ್ವರ್ಯವನ್ನು ನೀನೇ ನನಗೆ ಕೊಟ್ಟದ್ದೆ.

೧೮–೧೯. ಈಗ ಅದೃಷ್ಟವಶದಿಂದ ಎಲ್ಲಕ್ಕಿಂತಲೂ ಕೆಳಗಿರುವ ಸುತಲದಲ್ಲಿಟ್ಟಿರುವೆ. ದೇವೇಶ್ವರನೇ ನನ್ನಲ್ಲಿದ್ದ ಐಶ್ವರ್ಯವನ್ನು ಸರ್ವರೂಪನಾದ ನೀನು

ತ್ವಯಾ ವಾಮನರೂಪೇಣ ಸರ್ವರೂಪೋಽಸಿ ಸರ್ವತಃ ।
ಬಾಣಂ ಬೋಧಯ ಭದ್ರಂ ಚ ಮಮ ಪ್ರಾಣಾತ್ಮಜಂ ಪರಂ ॥ ೧೯ ॥

ಆತ್ಮನಾ ಸಹ ಯುದ್ಧಂ ಚ ದೇವೇಷ್ವಪಿ ವಿಗರ್ಹಿತಂ ।
ಇತ್ಯುಕ್ತ್ವಾ ಚ ಶಿವಂ ನತ್ವಾ ಶಿರಸಾ ಪ್ರಣನಾಮ ತಂ ॥ ೨೦ ॥

ಸಾಮವೇದೋಕ್ತಸ್ತೋತ್ರೇಣ ತುಷ್ಟಾವ ಪರಮೇಶ್ವರಂ ।
ಪುಲಕಾಂಚಿತಸರ್ವಾಂಗಃ ಸಾಶ್ರುನೇತ್ರೋಽತಿವಿಹ್ವಲಃ ॥ ೨೧ ॥

ಧ್ಯಾಯಮಾನಶ್ಚ ನಿತ್ಯಂ ಯೋ ಹೃತ್ಪದ್ಮೇ ಸುಮನೋಹರಃ ।
ಶುಕ್ರೇಣ ದತ್ತಂ ಮಂತ್ರಂ ಚ ಜಪ್ತ್ವಾ ಚೈಕಾದಶಾಕ್ಷರಂ ॥ ೨೨ ॥

॥ ಬಲಿರುವಾಚ ॥

ಆದಿತ್ಯಾಃ ಪ್ರಾರ್ಥನೇನೈವ ಮಾತುರ್ದೇವ್ಯಾ ವ್ರತೇನ ಚ ।
ಪುರಾ ವಾಮನರೂಪೇಣ ತ್ವಯಾಹಂ ವಂಚಿತಃ ಪ್ರಭೋ ॥ ೨೩ ॥

---

ವಾಮನರೂಪದಿಂದ ಬಂದು ಇಂದ್ರನಿಗೆ ಕೊಟ್ಟಿರುವೆ. ನನ್ನ ಪ್ರಾಣಕ್ಕೆ ಸಮನಾದ ಮಗನಾದ ಬಾಣನನ್ನು ಕುರಿತು ಹಿತೋಕ್ತಿಯನ್ನು ಹೇಳು.

೨೦. ಪರಮಾತ್ಮನೊಡನೆ ಯುದ್ಧಮಾಡುವುದೆಂಬುದು ದೇವತೆಗಳಿಗೂ ನಿಂದಿತವಾದುದು. ಹೀಗೆಂದು ಹೇಳಿ ಪಾರ್ವತಿಗೆ ತಲೆಬಾಗಿ ನಮಸ್ಕಾರಮಾಡಿ ಶಿವನಿಗೆ ನಮಸ್ಕಾರವನ್ನು ಮಾಡಿದನು.

೨೧-೨೨. ಯಾವನು ಸರ್ವದಾ ಹೃದಯಕಮಲದಲ್ಲಿ ಮನೋಹರನಾಗಿರುವನೋ ಅಂಥಾ ಪರಮೇಶ್ವರನನ್ನು ಧ್ಯಾನಮಾಡುತ್ತ ಸಕಲ ಶರೀರದಲ್ಲಿಯೂ ರೋಮಾಂಚವನ್ನು ಹೊಂದಿದವನಾಗಿ ಕಣ್ಣಿನಲ್ಲಿ ಆನಂದ ಬಾಷ್ಪವನ್ನು ಸುರಿಸುತ್ತ ಶುಕ್ರಾಚಾರ್ಯರಿಂದ ಉಪದೇಶಿಸಲ್ಪಟ್ಟ ಏಕಾದಶಾಕ್ಷರೀ ಮಂತ್ರವನ್ನು ಜಪ ಮಾಡಿದವನಾಗಿ ಸಾಮವೇದದಲ್ಲಿ ಹೇಳಿದ ಸ್ತೋತ್ರದಿಂದ ಸ್ತುತಿಗೈದನು.

೨೩. ಬಲಿಯು ಹೇಳುತ್ತಾನೆ :— ಎಲೈ ಪ್ರಭುವೇ ! ಪೂರ್ವದಲ್ಲಿ ಅದಿತಿಯ ಪ್ರಾರ್ಥನೆಯಿಂದಲೂ ತಾಯಿಯಾದ ದೇವಿಯ ನಿಯಮದಿಂದಲೂ ವಾಮನ ರೂಪವನ್ನು ಧರಿಸಿದ ನೀನು ನನ್ನನ್ನು ವಂಚಿಸಿದೆ.

ಸಂಪದ್ರೂಪಾ ಮಹಾಲಕ್ಷ್ಮೀರ್ದತ್ತಾ ಭಕ್ತಾಯ ಭಕ್ತಿತಃ ।
ಶಕ್ರಾಯ ಮತ್ತೋ ಭಕ್ತಾಯ ಭ್ರಾತ್ರೇ ಪುಣ್ಯವತೇ ಧ್ರುವಂ ॥ ೨೪ ॥

ಅಧುನಾ ಮಮ ಪುತ್ರೋಽಯಂ ಬಾಣಃ ಶಂಕರ ಕಿಂಕರಃ ।
ಆರಾಚ್ಚ ರಕ್ಷಿತಃ ಸೋಽಪಿ ತೇನೈವ ಭಕ್ತಬಂಧುನಾ ॥ ೨೫ ॥

ಪರಿಪುಷ್ಟಶ್ಚ ಪಾರ್ವತ್ಯಾ ಯಥಾ ಮಾತ್ರಾ ಸುತಸ್ತಥಾ ।
ಗೃಹೀತವಾಂಶ್ಚ ತತ್ಕನ್ಯಾಂ ಬಲೇನ ಯುವತೀಂ ಸತೀಂ ॥ ೨೬ ॥

ಸಮುದ್ಯತಶ್ಚ ತಂ ಹಂತುಂ ಕಾರ್ತಿಕೇನಾಪಿ ವಾರಿತಃ ।
ಆಗತೋಽಸಿ ಪುನರ್ಹಂತುಂ ಪೌತ್ರಸ್ಯ ದಮನೇ ಕ್ಷಮಃ ॥ ೨೭ ॥

ಸರ್ವಾತ್ಮನಶ್ಚ ಸರ್ವತ್ರ ಸಮಭಾವಃ ಶ್ರುತೌ ಶ್ರುತಃ ।
ಕರೋಷಿ ಜಗತಾಂ ನಾಥ ಕಥಮೇವಂ ವ್ಯತಿಕ್ರಮಃ । ೨೮ ॥

---

೨೪. ಐಶ್ವರ್ಯರೂಪಳಾದ ಮಹಾಲಕ್ಷ್ಮಿಯನ್ನು ಭಕ್ತನಾದ ನನ್ನಿಂದ ತೆಗೆದು ಪ್ರೀತಿಯಿಂದ ನಿನ್ನಭಕ್ತನೂ ನನ್ನ ಸೋದರನೂ ಪುಣ್ಯವಂತನೂ ಆದ ಇಂದ್ರನಿಗೆ ಶಾಶ್ವತವಾಗಿರುವಂತೆ ಕೊಟ್ಟಿರುವೆ.

೨೫–೨೭. ಶಂಕರನ ಸೇವಕನಾದ ಈ ಬಾಣನು ನನ್ನ ಮಗನು. ಅವನು ಭಕ್ತರ ಬಂಧುವಾದ ಶಂಕರನಿಂದಲೇ ಈಗ ಕಾಪಾಡಲ್ಪಟ್ಟಿರುವನು. ತಾಯಿಯು ಮಗನನ್ನು ಪೋಷಿಸಿದಂತೆ ಪಾರ್ವತಿಯಿಂದ ಸಲಹಲ್ಪಟ್ಟವನಾಗಿರುತ್ತಾನೆ. ಯುವತಿಯಾದ ಅವನ ಮಗಳನ್ನು ಬಲಾತ್ಕಾರವಾಗಿ ಅನಿರುದ್ಧನು ತೆಗೆದುಕೊಂಡಿರುತ್ತಾನೆ ಮತ್ತು ಬಾಣನನ್ನು ಕೊಲ್ಲುವುದಕ್ಕಾಗಿ ಮೇಲೆಬೀಳಲು ಬಂದಿದ್ದನು. ಆದರೆ ಕಾರ್ತಿಕೇಯನು ತಡೆದನು. ನಿನ್ನ ಮೊಮ್ಮಗನನ್ನು ಶಿಕ್ಷಿಸಲು ಸಾಮರ್ಥ್ಯವಿಲ್ಲದವನಾಗಿ ಮತ್ತೆ ಬಾಣನನ್ನು ಕೊಲ್ಲಲೋಸ್ಕರ ಬಂದಿರುವೆಯಲ್ಲವೇ!

೨೮. ವೇದದಲ್ಲಿ ಸರ್ವಾತ್ಮಕನಾದ ನಿನಗೆ ಎಲ್ಲೆಡೆಯಲ್ಲಿಯೂ ಎಲ್ಲರಲ್ಲಿಯೂ ಸಮಾನವಾದ ಭಾವನೆಯಿರುತ್ತದೆಯೆಂದು ಹೇಳಲ್ಪಟ್ಟಿದೆ. ಎಲೈ ಜಗದೊಡೆಯನೇ! ಈಗ ನೀನು ಹೀಗೇಕೆ ಕ್ರಮವಿರುದ್ಧವಾದ ಕಾರ್ಯವನ್ನು ಮಾಡುತ್ತಿರುವೆ?

ತ್ವಯಾ ಚ ನಿಹತೋ ಯೋ ಹಿ ತಸ್ಯ ಕೋ ರಕ್ಷಿತಾ ಭುವಿ ।
ಸುದರ್ಶನಸ್ಯ ತೇಜೋ ಹಿ ಸೂರ್ಯಕೋಟಿನಿಭಂ ಪರಂ ॥ ೨೯ ॥

ತೇಷಾಂ ಸುರಾಣಾಮಸ್ತ್ರೇಣ ತದೇವಮನಿವಾರಿತಂ ।
ಯಥಾ ಸುದರ್ಶನಂ ಚೈವಮಸ್ತ್ರಾಣಾಂ ಪ್ರವರಂ ವರಂ ॥ ೩೦ ॥

ತಥಾ ಭವಾಂಶ್ಚ ದೇವಾನಾಂ ಸರ್ವೇಷಾಮೀಶ್ವರಃ ಪರಃ ।
ಯಥಾ ಭವಾಂಸ್ತಥಾ ಕೃಷ್ಣೋ ವಿಧಾತಾ ವೇಧಸಾಮಪಿ ॥ ೩೧ ॥

ವಿಷ್ಣುಃ ಸತ್ತ್ವಗುಣಾಧಾರಃ ಶಿವಃ ಸತ್ತ್ವಾಶ್ರಯಸ್ತಥಾ ।
ಸ್ವಯಂ ವಿಧಾತಾ ರಜಸಃ ಸೃಷ್ಟಿಕರ್ತಾ ಪಿತಾಮಹಃ ॥ ೩೨ ॥

ಕಾಲಾಗ್ನಿರುದ್ರೋಭಗವಾನ್ನಿಶ್ವಸಂಹಾರಕಾರಕಃ ।
ತಮಸಶ್ಚಾಶ್ರಯಃ ಸೋಽಪಿ ರುದ್ರಾಣಾಂ ಪ್ರವರೋ ಮಹಾನ್ ॥ ೩೩ ॥

---

೨೯. ಯಾವನು ನಿನ್ನಿಂದ ಹತನಾಗುತ್ತಾನೆಯೋ ಅಂಥವನನ್ನು ಕಾಪಾಡಲು ಭೂಮಿಯಲ್ಲಿ ಸಮರ್ಥನಾವನಿರುವನು ? ಸುದರ್ಶನದ ತೇಜಸ್ಸಾದರೋ ಕೋಟಿಸೂರ್ಯರ ತೇಜಸ್ಸಿಗಿಂತಲೂ ಮಿಗಿಲಾದುದು.

೩೦–೩೧. ಆ ದೇವತೆಗಳ ಅಸ್ತ್ರದಿಂದ ಆ ಸುದರ್ಶನವು ತಡೆಯಲ್ಪಡಲಿಲ್ಲ. ಸುದರ್ಶನವು ಯಾವ ರೀತಿಯಾಗಿ ಸಕಲಾಸ್ತ್ರಗಳಿಗಿಂತಲೂ ಅತ್ಯಂತ ಮಿಗಿಲಾದುದೋ ಹಾಗೆ ನೀನೂ ಕೂಡ ಸಕಲದೇವತೆಗಳಿಗಿಂತಲೂ ಮಿಗಿಲಾದವನು ಮತ್ತು ಶ್ರೇಷ್ಠನಾದವನು. ನೀನು ಹೇಗೆ ಶ್ರೇಷ್ಠನಾಗಿರುವೆಯೋ ಹಾಗೆ ಬ್ರಹ್ಮನಿಗೂ ಕಾರಣನಾದ ಕೃಷ್ಣನೂ ಸರ್ವೋತ್ಕೃಷ್ಟನಾಗಿರುವನು.

೩೨. ವಿಷ್ಣುವು ಸತ್ವಗುಣಾಶ್ರಯನಾಗಿರುವನು. ಹಾಗೆಯೇ ಶಿವನೂ ಸತ್ವಗುಣಾಶ್ರಯನಾಗಿರುವನು. ಪಿತಾಮಹನೂ ಸೃಷ್ಟಿಕರ್ತನೂ ಆದ ಬ್ರಹ್ಮನು ತಾನು ರಜೋಗುಣಾಶ್ರಯನಾಗಿರುವನು.

೩೩. ಮಹಾತ್ಮನೂ ರುದ್ರರಿಗೆಲ್ಲ ಮುಖ್ಯನೂ ಪೂಜ್ಯನೂ ಆದ ಕಾಲಾಗ್ನಿರುದ್ರನು ಪ್ರಪಂಚವನ್ನು ಸಂಹಾರಮಾಡುವವನು. ಅವನೂಕೂಡ ತಮೋಗುಣಾಶ್ರಯನಾಗಿರುವನು.

ಸ ಏವ ಶಂಕರಾಂಶಶ್ಚಾಪ್ಯನ್ಯೇ ರುದ್ರಾಶ್ಚ ತತ್ಕಲಾಃ ।
ಭವಾಂಶ್ಚ ನಿರ್ಗುಣಸ್ತೇಷಾಂ ಪ್ರಕೃತೇಶ್ಚ ಪರಸ್ತಥಾ ॥ ೩೪ ॥

ಸರ್ವೇಷಾಂ ಪರಮಾತ್ಮಾ ವೈ ಪ್ರಾಣಾ ವಿಷ್ಣುಸ್ವರೂಪಿಣಃ ।
ಮಾನಸಂ ಚ ಸ್ವಯಂ ಬ್ರಹ್ಮಾ ಸ್ವಯಂ ಜ್ಞಾನಾತ್ಮಕಃ ಶಿವಃ ॥ ೩೫ ॥

ಪ್ರವರಾ ಸರ್ವಶಕ್ತೀನಾಂ ಬುದ್ಧಿಃ ಪ್ರಕೃತಿರೀಶ್ವರೀ ।
ಸ್ವಾತ್ಮನಃ ಪ್ರತಿಬಿಂಬಸ್ತೇ ಜೀವಃ ಸರ್ವೇಷು ದೇಹಿಷು ॥ ೩೬ ॥

ಜೀವಃ ಸ್ವಕರ್ಮಣಾಂ ಭೋಗೀ ಸ್ವಯಂ ಸಾಕ್ಷೀ ಭವಾಂಸ್ತಥಾ ।
ಸರ್ವೇ ಯಾಂತಿ ತ್ವಯಿ ಗತೇ ನರದೇವೇ ಯಥಾನುಗಃ ॥ ೩೭ ॥

ಸದ್ಯಃ ಪತತಿ ದೇಹಶ್ಚ ಶವೋಽಸ್ಪೃಶ್ಯಸ್ತ್ವಯಾ ವಿನಾ ।
ಬುದ್ಧಾಃ ಸಂತೋ ನ ಜಾನಂತಿ ವಂಚಿತಾಸ್ತವ ಮಾಯಯಾ ॥ ೩೮ ॥

---

೩೪. ಆ ಕಾಲಾಗ್ನಿ ರುದ್ರನೇ ಶಂಕರನ ಅಂಶದಿಂದ ಹುಟ್ಟಿದವನು. ಇನ್ನುಳಿದ ರುದ್ರರೆಲ್ಲರೂ ಅವನ ಕಲಾಂಶದಿಂದುದಿಸಿದವರು. ಅವರಲ್ಲಿ ನೀನು ನಿರ್ಗುಣನೂ, ಪ್ರಕೃತಿಗಿಂತಲೂ ಉತ್ತಮನೂ ಆಗಿರುವೆ.

೩೫. ಎಲ್ಲರಿಗಿಂತಲೂ ಆತ್ಮನು ಉತ್ತಮನು. ಪ್ರಾಣಗಳು ವಿಷ್ಣುಸ್ವರೂಪಗಳು. ಸಾಕ್ಷಾತ್ ಬ್ರಹ್ಮನು ಮನೋರೂಪನು. ಸಾಕ್ಷಾಚ್ಛಿವನು ಜ್ಞಾನಸ್ವರೂಪನು.

೩೬. ಸಕಲ ಶಕ್ತಿಗಳಿಗೂ ಮುಖ್ಯಳೂ ಈಶ್ವರಿಯೂ ಆದ ಮೂಲಪ್ರಕೃತಿಯು ಬುದ್ಧಿಸ್ವರೂಪಳು. ಸಕಲ ಪ್ರಾಣಿಗಳಲ್ಲಿಯೂ ಜೀವನು ಪರಮಾತ್ಮನ ಪ್ರತಿಬಿಂಬರೂಪನು.

೩೭. ಜೀವನು ತಾನು ಮಾಡಿದ ಕರ್ಮಫಲವನ್ನನುಭವಿಸುವವನು. ನೀನು ಮಾತ್ರ ಅದಕ್ಕೆ ಸಾಕ್ಷಿಯಾಗಿರುವವನು. ರಾಜನು ಹೊರಟೊಡನೆ ಅವನ ಅನುಯಾಯಿಗಳೆಲ್ಲರೂ ಅವನನ್ನು ಹಿಂಬಾಲಿಸಿ ಹೊರಟಂತೆ ನೀನು ಹೊರಟುಹೋದ ಕೂಡಲೆ ಬುದ್ಧಿ ಮುಂತಾದುವು ಹೊರಟುಹೋಗುತ್ತವೆ.

೩೮. ನೀನು ಹೊರಟು ಹೋದೊಡನೆ ದೇಹವು ಬಿದ್ದು ಹೋಗುತ್ತದೆ. ಮತ್ತು ಅದು ಹೆಣವೆನಿಸಿಕೊಂಡು ಮುಟ್ಟಲಯೋಗ್ಯವಾಗುತ್ತದೆ. ಸತ್ಪುರುಷರಾದ ಜ್ಞಾನಿಗಳೂ ಕೂಡ ನಿನ್ನ ಮಾಯೆಯಿಂದ ವಂಚಿತರಾಗಿ ನಿನ್ನ ತತ್ವವನ್ನು ತಿಳಿಯದವರಾಗುತ್ತಾರೆ.

ತ್ವಾಂ ಭಜಂತ್ಯೇವ ಯೇ ಸಂತೋ ಮಾಯಾಮೇತಾಂ ತರಂತಿ ತೇ ।
ತ್ರಿಗುಣಾ ಪ್ರಕೃತಿರ್ದುರ್ಗಾ ವೈಷ್ಣವೀ ಚ ಸನಾತನೀ ॥ ೩೯ ॥

ಪರಾ ನಾರಾಯಣೀಶಾನೀ ತವ ಮಾಯಾ ದುರತ್ಯಯಾ ।
ತ್ವದಂಶಾಃ ಪ್ರತಿವಿಶ್ವೇಷು ಬ್ರಹ್ಮವಿಷ್ಣುಶಿವಾತ್ಮಕಾಃ ॥ ೪೦ ॥

ಸರ್ವೇಷಾಮಪಿ ವಿಶ್ವೇಷಾಮಾಶ್ರಯೋ ಯೋ ಮಹಾನ್ವಿರಾಟ್ ।
ಸ ಶೇತೇ ಚ ಜಲೇ ಯೋಗಾದ್ವಿಶ್ವೇಶೋ ಗೋಕುಲೇ ಯಥಾ ॥ ೪೧ ॥

ಸ ಏವ ವಾಸುರ್ಭಗವಾಂಸ್ತಸ್ಯ ದೇವೋ ಭವಾನ್ಪರಃ ।
ವಾಸುದೇವ ಇತಿ ಖ್ಯಾತಃ ಪುರಾವಿದ್ಭಿಃ ಪ್ರಕೀರ್ತಿತಃ ॥ ೪೨ ॥

ತ್ವಮೇವ ಕಲಯಾ ಸೂರ್ಯಸ್ತ್ವಮೇವ ಕಲಯಾ ಶಶೀ ।
ಕಲಯಾಚ ಹುತಾಶಶ್ಚ ಕಲಯಾ ಪವನಃ ಸ್ವಯಂ ॥ ೪೩ ॥

---

೩೯–೪೦. ಯಾವ ಮಹಾತ್ಮನು ನಿನ್ನನ್ನು ಸೇವಿಸುತ್ತಾನೋ ಅವನು ಈ ಮಾಯೆಯನ್ನು ದಾಟುತ್ತಾನೆ. ಮೂರುಗುಣಗಳುಳ್ಳವಳೂ ಮೂಲಪ್ರಕೃತಿಯೂ ದುರ್ಗೆಯೂ ವಿಷ್ಣುಶಕ್ತಿಯೂ ನಾಶರಹಿತಳೂ ಶ್ರೇಷ್ಠಳೂ ನಾರಾಯಣಿಯೂ ಈಶಾನಿಯೂ ಆದ ನಿನ್ನ ಮಾಯೆಯು ಯಾರಿಂದಲೂ ಮೀರಲು ಸಾಧ್ಯವಿಲ್ಲದುದು. ಸಕಲಪ್ರಪಂಚಗಳಲ್ಲಿರುವ ಬ್ರಹ್ಮ ವಿಷ್ಣು ಶಿವರುಗಳು ನಿನ್ನ ಅಂಶದಿಂದ ಉತ್ಪನ್ನರಾಗಿರುವವರು.

೪೧. ಯಾವನು ಸಕಲ ಬ್ರಹ್ಮಾಂಡಗಳಿಗೂ ಆಶ್ರಯನಾಗಿರುವ ಮಹಾವಿರಾಟ್ಪುರುಷನಾಗಿರುವನೋ ಅವನು ಗೋಕುಲದಲ್ಲಿ ಜಗದೀಶನಿದ್ದಂತೆ ಯೋಗನಿರತನಾಗಿ ಸಮುದ್ರದಲ್ಲಿ ಮಲಗಿರುವನು.

೪೨. ಅವನೇ ಷಡ್ಗುಣೈಶ್ವರ್ಯ ಸಂಪನ್ನನಾದ ವಾಸುವು. ನೀನು ಅವನಿಗೂ ಶ್ರೇಷ್ಠನಾದ ದೇವತೆಯು. ಆದರಿಂದ ವಾಸುದೇವನೆಂಬ ಪ್ರಖ್ಯಾತಿಯುಂಟಾಗಿರುವುದೆಂದು ಪುರಾಣವನ್ನು ಬಲ್ಲವರು ಹೇಳಿರುವರು.

೪೩–೪೪. ನೀನೇ ನಿನ್ನ ಕಲೆಯಿಂದ ಸೂರ್ಯನೂ ಚಂದ್ರನೂ ಅಗ್ನಿಯೂ

ಕಲಯಾ ವರುಣಶ್ಚೈವ ಕುಬೇರಶ್ಚ ಯಮಸ್ತಥಾ ।
ಕಲಯಾ ತ್ವಂ ಮಹೇಂದ್ರಶ್ಚ ಕಲಯಾ ಧರ್ಮ ಏವ ಚ　　॥ ೪೪ ॥

ತ್ವಮೇವ ಕಲಯಾ ಶೇಷ ಈಶಾನೋ ನೈರ್ಋತಿಸ್ತಥಾ ।
ಮುನಯೋ ಮನವಶ್ಚೈವ ಗ್ರಹಾಶ್ಚ ಫಲದಾಯಕಾಃ　　॥ ೪೫ ॥

ಕಲಾ ಕಲಾಯಾಶ್ಚಾಂಶೇನ ಸರ್ವೇ ಜೀವಾಶ್ಚರಾಚರಾಃ ।
ತ್ವಂ ಬ್ರಹ್ಮ ಪರಮಂ ಜ್ಯೋತಿರ್ಧ್ಯಾಯಂತೇ ಯೋಗಿನಃ ಸದಾ　　॥ ೪೬ ॥

ತಂ ತ್ವಾದ್ರಿಯಂತೇ ಭಕ್ತಾಸ್ತೇ ಧ್ಯಾಯಂತೇ ಚ ತದಂತರೇ ।
ನವೀನನೀರದಶ್ಯಾಮಂ ಪೀತಕೌಶೇಯವಾಸಸಂ　　॥ ೪೭ ॥

ಈಷದ್ಧಾಸ್ಯಪ್ರಸನ್ನಾಸ್ಯಂ ಭಕ್ತೇಶಂ ಭಕ್ತವತ್ಸಲಂ ।
ಚಂದನೋಕ್ಷಿತಸರ್ವಾಂಗಂ ದ್ವಿಭುಜಂ ಮುರಲೀಧರಂ　　॥ ೪೮ ॥

---

ಸಾಕ್ಷಾದ್ವಾಯುವೂ ಆಗಿರುವೆ. ನಿನ್ನ ಕಲೆಯಿಂದ ನೀನೇ ವರುಣನೂ ಕುಬೇರನೂ ಯಮನೂ ಮಹೇಂದ್ರನೂ ಧರ್ಮನೂ ಆಗಿರುವೆ.

೪೫–೪೬. ನೀನೇ ನಿನ್ನ ಕಲೆಯಿಂದ ಶೇಷನೂ ಈಶಾನನೂ ನೈಋತಿಯೂ ಮುನಿಗಳೂ ಮನುಗಳೂ ಫಲಗಳನ್ನು ಕೊಡುವ ಗ್ರಹಗಳೂ ಆಗಿರುವೆ. ಚಲಿಸುವ ಮತ್ತು ಚಲಿಸದಿರುವ ಸಕಲ ಜೀವಗಳೂ ನಿನ್ನ ಕಲೆಯ ಕಲಾಂಶದಿಂದ ಉತ್ಪನ್ನರಾದವರು. ನೀನು ಸಾಕ್ಷಾತ್ ಜ್ಯೋತಿರೂಪನಾದ ಪರಬ್ರಹ್ಮನು. ನಿನ್ನನ್ನು ಯೋಗಿಗಳು ಸರ್ವದಾ ಧ್ಯಾನಮಾಡುತ್ತಾರೆ.

೪೭–೪೮. ಆ ಭಕ್ತರುಗಳು ಆದರದಿಂದ ತಮ್ಮ ಹೃದಯದಲ್ಲಿ ಹೊಸ ಮೋಡದಂತೆ ಕಪ್ಪಾಗಿರುವ ಪೀತಾಂಬರವನ್ನು ಧರಿಸಿರುವ ಮಂದಹಾಸದಿಂದ ಕೂಡಿದ ಪ್ರಸನ್ನಮುಖವುಳ್ಳ ಭಕ್ತರಿಗೆ ಒಡೆಯನೂ ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ, ಗಂಧದಿಂದ ಬಳಿಯಲ್ಪಟ್ಟ ಸಕಲ ಶರೀರವುಳ್ಳ ಎರಡು ತೋಳುಗಳುಳ್ಳ ಮುರಳಿಯನ್ನು ಹಿಡಿದಿರುವ ನಿನ್ನನ್ನು ಧ್ಯಾನಿಸುತ್ತಾರೆ.

ಮಯೂರಪಿಚ್ಛಚೂಡಂ ಚ ಮಾಲತೀಮಾಲ್ಯಭೂಷಿತಂ ।
ಅಮೂಲ್ಯರತ್ನನಿರ್ಮಾಣಕೇಯೂರವಲಯಾನ್ವಿತಂ ॥ ೪೯ ॥

ಮಣಿಕುಂಡಲಯುಗ್ಮೇನ ಗಂಡಸ್ಥಲವಿರಾಜಿತಂ ।
ರತ್ನಸಾರಾಂಗುಲೀಯಂ ಚ ಕ್ವಣನ್ಮಂಜೀರರಂಜಿತಂ ॥ ೫೦ ॥

ಕೋಟಿಕಂದರ್ಪಲೀಲಾಭಂ ಶರತ್ಕಮಲಲೋಚನಂ ।
ಶರತ್ಪೂರ್ಣೇಂದುನಿಂದಾಸ್ಯಂ ಚಂದ್ರಕೋಟಿಸಮಪ್ರಭಂ ॥ ೫೧ ॥

ವೀಕ್ಷಿತಂ ಸಸ್ಮಿತಾಭಿಶ್ಚ ಗೋಪೀನಾಂ ಕೋಟಿಕೋಟಿಭಿಃ ।
ವಯಸ್ಯೈಃ ಪಾರ್ಷದೈರ್ಗೋಪೈಃ ಸೇವಿತಂ ಶ್ವೇತಚಾಮರೈಃ ॥ ೫೨ ॥

ಗೋಪಬಾಲಕವೇಷಂ ಚ ರಾಧಾವಕ್ಷಃಸ್ಥಲಸ್ಥಿತಂ ।
ಧ್ಯಾನಾಸಾಧ್ಯಂ ದುರಾರಾಧ್ಯಂ ಬ್ರಹ್ಮೇಶಶೇಷವಂದಿತಂ ॥ ೫೩ ॥

---

೪೯–೫೧. ಮತ್ತು ನವಿಲುಗರಿಯನ್ನು ತಲೆಯಲ್ಲಿ ಧರಿಸಿದವನೂ, ಮಾಲತೀ ಹೂವಿನ ಮಾಲಿಕೆಯಿಂದ ಅಲಂಕರಿಸಿಕೊಂಡವನೂ, ಬೆಲೆಬಾಳುವ ರತ್ನಗಳಿಂದ ಮಾಡಿದ ಎರಡು ಕುಂಡಲಗಳಿಂದ ಪ್ರಕಾಶಿಸುತ್ತಿರುವ ಕಪೋಲ ಪ್ರದೇಶವುಳ್ಳ ದಿವ್ಯ ರತ್ನಗಳ ಉಂಗುರಗಳನ್ನು ಧರಿಸಿರುವ ಧ್ವನಿಗೈಯುತ್ತಿರುವ ಕಾಲುಕಡಗಗಳಿಂದ ಪ್ರಕಾಶಿಸುತ್ತಿರುವ ಕೋಟಿ ಮನ್ಮಥರ ವಿಲಾಸದಂತೆ ಕಂಗೊಳಿಸುತ್ತಿರುವ ಶರತ್ಕಾಲದ ಕಮಲದಂತಿರುವ ಕಣ್ಣುಗಳುಳ್ಳ ಶರತ್ಕಾಲದ ಪೂರ್ಣಿಮೆಯ ಚಂದ್ರನನ್ನು ನಿಂದಿಸುತ್ತಿರುವ ಮುಖವುಳ್ಳ ಕೋಟಿಚಂದ್ರರಿಗೆ ಸಮನಾದ ಕಾಂತಿಯುಳ್ಳ ನಿನ್ನನ್ನು ಧ್ಯಾನಿಸುತ್ತಾರೆ.

೫೨–೫೩. ಮತ್ತು ಮುಗುಳು ನಗುತ್ತಿರುವ ಕೋಟಿ ಗೋಪಿಯರ ಗುಂಪಿನಿಂದ ನೋಡಲ್ಪಡುತ್ತಿರುವ ಸ್ನೇಹಿತರುಗಳಿಂದ ಕೂಡಿದ ಸೇವಕರಾದ ಗೋಪರುಗಳಿಂದ ಬಿಳಿಯ ಚಾಮರಗಳನ್ನು ಹಿಡಿದುಕೊಂಡು ಸೇವಿಸಲ್ಪಡುತ್ತಿರುವ ಗೋಪಬಾಲಕರಂತೆ ವೇಷಧರಿಸಿರುವ ರಾಧೆಯ ಹೃದಯದಲ್ಲಿರುವ ಧ್ಯಾನದಿಂದಲೂ ಹೊಂದಲಸಾಧ್ಯನಾದ ಕಷ್ಟಪಟ್ಟು ಸೇವಿಸಲರ್ಹನಾದ ಬ್ರಹ್ಮ ಈಶ್ವರ ಶೇಷ ಇವರಿಂದಲೂ ನಮಸ್ಕರಿಸಲ್ಪಡುವ ನಿನ್ನನ್ನು ಧ್ಯಾನಿಸುತ್ತಾರೆ.

ಸಿದ್ಧೇಂದ್ರೈಶ್ಚ ಮುನೀಂದ್ರೈಶ್ಚ ಯೋಗೀಂದ್ರೈಃ ಪ್ರಣತಂ ಸ್ತುತಂ ।
ವೇದಾನಿರ್ವಚನೀಯಂ ಚ ಪರಂ ಸ್ವೇಚ್ಛಾಮಯಂ ವಿಭುಂ ॥ ೫೪ ॥

ಸ್ಥೂಲಸ್ಥೂಲತಮಂ ರೂಪಂ ಸೂಕ್ಷ್ಮಾತ್ಸೂಕ್ಷ್ಮತರಂ ಪರಂ ।
ಸತ್ಯಂ ನಿತ್ಯಂ ಪ್ರಶಸ್ತಂ ಚ ಪ್ರಕೃತೇಃ ಪರಮೀಶ್ವರಂ ॥ ೫೫ ॥

ನಿರ್ಲಿಪ್ತಂ ಚ ನಿರೀಹಂ ಚ ಭಗವಂತಂ ಸನಾತನಂ ।
ಏವಂ ಧ್ಯಾತ್ವಾ ಚ ತೇ ಪೂತಾಃ ಸ್ನಿಗ್ಧದೂರ್ವಾಕ್ಷತಾಜಲಂ ॥ ೫೬ ॥

ಪದ್ಮಾಪದ್ಮಾರ್ಚಿತೇ ಪಾದಪದ್ಮೇ ಚ ದಾತುಮುತ್ಸುಕಾಃ ।
ವೇದಾಃ ಸ್ತೋತುಮಶಕ್ತಾಸ್ತ್ವಾಮಶಕ್ತಾ ಸಾ ಸರಸ್ವತೀ ॥ ೫೭ ॥

ಶೇಷಃ ಸ್ತೋತುಮಶಕ್ತಶ್ಚ ಸ್ವಯಂಭೂಃ ಶಂಭುರೀಶ್ವರಂ ।
ಗಣೇಶಶ್ಚ ದಿನೇಶಶ್ಚ ಮಹೇಂದ್ರಶ್ಚಂದ್ರ ಏವ ಚ ॥ ೫೮ ॥

---

೫೪–೫೫. ಸಿದ್ಧೇಂದ್ರರಿಂದಲೂ ಮುನೀಂದ್ರರಿಂದಲೂ ಯೋಗೀಂದ್ರರಿಂದಲೂ ಸ್ತೋತ್ರಮಾಡಲ್ಪಟ್ಟು ನಮಸ್ಕರಿಸಲ್ಪಡುತ್ತಿರುವ ವೇದಗಳಿಗೂ ಹೇಳಲಸಾಧ್ಯವಾದ ಮಹಿಮೆಯುಳ್ಳ ಶ್ರೇಷ್ಠನೂ ಸ್ವತಂತ್ರನೂ ಆದ ಪ್ರಭುವಾದ ಅತಿ ದೊಡ್ಡದಾದ ರೂಪವುಳ್ಳವನೂ ಉತ್ತಮನೂ ಮೂಲಪ್ರಕೃತಿಗಿಂತಲೂ ಶ್ರೇಷ್ಠನೂ ಈಶ್ವರನೂ ಆದ ನಿನ್ನನ್ನು ಧ್ಯಾನಿಸುತ್ತಾರೆ

೫೬–೫೭. ಮತ್ತು ನಿರ್ಲಿಪ್ತನೂ ಆಶೆಯಿಲ್ಲದವನೂ ಷಡ್ಗುಣೈಶ್ವರ್ಯಸಂಪನ್ನನೂ ಸನಾತನನೂ ಆದ ನಿನ್ನನ್ನು ಈಪ್ರಕಾರ ಧ್ಯಾನಮಾಡಿ ದೂರ್ವಾಕ್ಷತೆಗಳಿಂದ ಕೂಡಿದ ನೀರನ್ನು ಲಕ್ಷ್ಮೀದೇವಿಯು ಕಮಲಗಳಿಂದ ಪೂಜೆ ಮಾಡಿದ ಪಾದಕಮಲಗಳಲ್ಲಿ ಸಮರ್ಪಿಸಲುದ್ಯುಕ್ತಳಾಗುತ್ತಾಳೆ. ನಿನ್ನನ್ನು ಸ್ತೋತ್ರಮಾಡಲು ವೇದಗಳೂ ಕೂಡ ಅಸಮರ್ಥಗಳಾಗಿವೆ. ಆ ಸರಸ್ವತೀದೇವಿಯೂ ನಿನ್ನನ್ನು ಸ್ತೋತ್ರಮಾಡಲಸಮರ್ಥಳಾಗಿದ್ದಾಳೆ.

೫೮–೫೯. ಶೇಷನೂ ನಿನ್ನನ್ನು ಸ್ತೋತ್ರಮಾಡಲಸಮರ್ಥನಾಗಿದ್ದಾನೆ. ಬ್ರಹ್ಮನೂ ಶಂಭುವೂ ಸ್ತೋತ್ರಮಾಡಲಶಕ್ತರಾಗಿದ್ದಾರೆ. ಗಣೇಶನೂ ಸೂರ್ಯನೂ ಮಹೇಂದ್ರನೂ ಚಂದ್ರನೂ ಕುಬೇರನೂ ಸ್ತೋತ್ರಮಾಡಲಶಕ್ತರಾಗಿರುವರು. ಇನ್ನು

ಸ್ತೋತುಂ ನಾಲಂ ಧನೇಶಶ್ಚ ಕಿಮನ್ಯೇ ಜಡಬುದ್ಧಯಃ ।
ಗುಣಾತೀತಮನೀಹಂ ಚ ಕಿಂ ಸ್ತೌಮಿ ನಿರ್ಗುಣಂ ಪರಂ ॥ ೫೯ ॥

ಅಪಂಡಿತೋಯಮಸುರೋ ನ ಸುರಃ ಕ್ಷಂತುಮರ್ಹಸಿ ।
ಬಲೇಸ್ತು ವಚನಂ ಶ್ರುತ್ವಾ ತಮುವಾಚ ಜಗತ್ಪತಿಃ ॥
ಪರಿಪೂರ್ಣತಮಃ ಶ್ರೀಮಾನ್ಭಕ್ತಂ ಚ ಭಕ್ತವತ್ಸಲಃ ॥ ೬೦ ॥

॥ ಶ್ರೀ ಭಗವಾನುವಾಚ ॥
ಮಾಭೈರ್ವತ್ಸ ಗೃಹಂ ಗಚ್ಛ ಸುತಲಂ ರಕ್ಷಿತಂ ಮಯಾ ॥ ೬೧ ॥

ಮದ್ವರೇಣ ಪ್ರಸಾದೇನ ತ್ವತ್ಪುತ್ರೋಽಪ್ಯಜರಾಮರಃ ।
ದರ್ಪಹಾನಿಂ ಕರಿಷ್ಯಾಮಿ ತಸ್ಯ ಮೂರ್ಖಸ್ಯ ದರ್ಪಿಣಃ ॥ ೬೨ ॥

ಪ್ರಹ್ಲಾದಾಯ ವರೋ ದತ್ತೋ ಭಕ್ತಾಯ ಚ ತಪಸ್ವಿನೇ ।
ಮಮಾವಧ್ಯಶ್ಚ ತ್ವದ್ವಂಶಶ್ಚೇತಿ ಪ್ರೀತೇನ ಚೇತಸಾ ॥ ೬೩ ॥

---

ಮಂದಬುದ್ಧಿಗಳಾದವರ ವಿಷಯವನ್ನು ಹೇಳತಕ್ಕುದೇನಿದೆ. ಗುಣಗಳನ್ನು ಮೀರಿದವನೂ ಇಚ್ಛೆಯಿಲ್ಲದವನೂ ನಿರ್ಗುಣನೂ ಶ್ರೇಷ್ಠನೂ ಆದ ನಿನ್ನನ್ನು ನಾನು ಏನೆಂದು ಸ್ತೋತ್ರಮಾಡಲಿ.

೬೦. ಈ ರಾಕ್ಷಸನು ವಿದ್ವಾಂಸನಲ್ಲ ದೇವತೆಯೂ ಅಲ್ಲ. ಆದುದರಿಂದ ಕ್ಷಮಿಸುವವನಾಗು. ಬಲಿಯು ಹೇಳಿದ ಮಾತನ್ನು ಕೇಳಿ ಅತ್ಯಂತ ಪರಿಪೂರ್ಣನೂ ಸಂಪದ್ಯುಕ್ತನೂ ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ಜಗದೊಡೆಯನು ಭಕ್ತನಾದ ಬಲಿಯನ್ನು ಕುರಿತು ಈಪ್ರಕಾರ ಹೇಳಿದನು.

೬೧. ಶ್ರೀ ಭಗವಂತನು ಹೇಳುತ್ತಾನೆ :— ಎಲೈ ಮಗನೇ! ಹೆದರಬೇಡ. ಮನೆಗೆ ಹೋಗು. ಪಾತಾಲಲೋಕವು ನನ್ನಿಂದ ಕಾಪಾಡಲ್ಪಟ್ಟಿದೆ.

೬೨. ನನ್ನ ವರದಿಂದಲೂ ಅನುಗ್ರಹದಿಂದಲೂ ಕೂಡ ನಿನ್ನ ಮಗನು ಮುಪ್ಪಿಲ್ಲದವನೂ ಸಾವಿಲ್ಲದವನೂ ಆಗಿರುತ್ತಾನೆ. ಮೂರ್ಖನೂ ದರ್ಪವುಳ್ಳವನೂ ಆದ ಅವನ ದರ್ಪವನ್ನು ನಾಶಮಾಡುತ್ತೇನೆ.

೬೩. ತಪಸ್ಸನ್ನು ಮಾಡುತ್ತಿದ್ದ ನನ್ನ ಭಕ್ತನಾದ ಪ್ರಹ್ಲಾದನಿಗೆ ನಿನ್ನ ವಂಶದವರು ಯಾರೂ ನನಗೆ ವಧ್ಯರಾಗದಿರಲೆಂದು ಸಂತೋಷದಿಂದ ಕೂಡಿದ ಮನಸ್ಸಿನಿಂದ ನಾನು ವರವನ್ನು ಕೊಟ್ಟಿರುವೆನು.

ತವ ಪುತ್ರಾಯ ದಾಸ್ಯಾಮಿ ಜ್ಞಾನಂ ಮೃತ್ಯುಂಜಯಂ ಪರಂ ।
ತ್ವಯಾ ಕೃತಮಿದಂ ಸ್ತೋತ್ರಂ ಸಾಮವೇದೋಕ್ತಮೀಪ್ಸಿತಂ || ೬೪ ||

ಪುರಾ ಸನತ್ಕುಮಾರಾಯ ಪ್ರದತ್ತಂ ಬ್ರಹ್ಮಣಾ ತಥಾ ।
ಸಿದ್ಧಾಶ್ರಮೇ ಪುಣ್ಯತಮೇ ಪ್ರಶಸ್ತೇ ಸೂರ್ಯಪರ್ವಣಿ || ೬೫ ||

ಗೌತಮಾಯ ಪ್ರದತ್ತಂ ಚ ಗೌರ್ಯಾ ಮಂದಾಕಿನೀತಟೇ ।
ಶಂಕರೇಣ ಚ ಶಿಷ್ಯಾಯ ಭಕ್ತಾಯ ಚ ದಯಾಲುನಾ || ೬೬ ||

ಬ್ರಹ್ಮಣೇ ಚ ಮಯಾ ದತ್ತಂ ಶಿವಾಯ ವಿರಜಾತಟೇ ।
ಭೃಗವೇ ಚ ಪುರಾ ದತ್ತಂ ಕುಮಾರೇಣ ಚ ಧೀಮತಾ || ೬೭ ||

ತ್ವಂ ಚ ದಾಸ್ಯಸಿ ಬಾಣಾಯ ಬಾಣಃ ಸ್ತೋಷ್ಯತ್ಯನೇನ ಮಾಂ ।
ಇದಂ ಸ್ತೋತ್ರಂ ಮಹಾಪುಣ್ಯಮುಪದಿಶ್ಯ ಗುರೋರ್ಮುಖಾತ್ || ೬೮ ||

ಮೃತಸ್ಯ ಪೂಜಿತಸ್ಯಾಪಿ ವಸ್ತ್ರಭೂಷಣಚಂದನೈಃ ।
ಸುಸ್ನಾತೋ ಯಃ ಪಠೇನ್ನಿತ್ಯಂ ಪೂಜಾಕಾಲೇ ಚ ಭಕ್ತಿತಃ || ೬೯ ||

---

೬೪. ನಿನ್ನ ಮಗನಿಗೆ ಉತ್ತಮವಾದ, ಮೃತ್ಯುವನ್ನು ಗೆಲ್ಲುವ ಜ್ಞಾನವನ್ನು ಕೊಡುತ್ತೇನೆ. ನೀನು ಮಾಡಿದ ಈ ಸ್ತೋತ್ರವು ಸಾಮವೇದದಲ್ಲಿ ಹೇಳಲ್ಪಟ್ಟಿದು ಮತ್ತು ಇಷ್ಟದಾಯಕವಾದುದು.

೬೫. ಈ ಸ್ತೋತ್ರವನ್ನು ಪೂರ್ವದಲ್ಲಿ ಪುಣ್ಯತಮವಾದ ಸಿದ್ಧಾಶ್ರಮದಲ್ಲಿ ಉತ್ತಮವಾದ ಸೂರ್ಯಗ್ರಹಣ ಕಾಲದಲ್ಲಿ ಬ್ರಹ್ಮನು ಸನತ್ಕುಮಾರನಿಗೆ ಉಪದೇಶ ಮಾಡಿದನು.

೬೬–೬೭. ಗೌರಿಯು ಗಂಗಾ ನದಿಯ ದಡದಲ್ಲಿ ಗೌತಮನಿಗುಪದೇಶಿಸಿದಳು. ಮತ್ತು ದಯಾಳುವಾದ ಶಂಕರನು ತನ್ನ ಶಿಷ್ಯನೂ ಭಕ್ತನೂ ಆದ ಬ್ರಹ್ಮನಿಗುಪದೇಶಿಸಿದನು. ವಿರಜಾನದಿಯ ದಡದಲ್ಲಿ ನಾನು ಶಿವನಿಗುಪದೇಶಮಾಡಿದೆನು. ಹಿಂದೆ ಕುಮಾರನು ಭೃಗುವಿಗುಪದೇಶಮಾಡಿದನು.

೬೮–೭೦. ನೀನು ಕೂಡ ಬಾಣನಿಗುಪದೇಶಮಾಡು. ಬಾಣನು ಈ ಸ್ತೋತ್ರದಿಂದ ನನ್ನನ್ನು ಸ್ತುತಿಸಲಿ. ಈ ಸ್ತೋತ್ರವನ್ನು ಗುರು ಮುಖದಿಂದ ಉಪದೇಶ

ಕೋಟಿಜನ್ಮಾರ್ಜಿತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ವಿಪದಾಂ ಖಂಡನಂ ಸ್ತೋತ್ರಂ ಕಾರಣಂ ಸರ್ವಸಂಪದಾಂ ॥ ೭೦ ॥

ವಾರಣಂ ದುಃಖಶೋಕಾನಾಂ ಭವಾಬ್ಧಿಘೋರತಾರಣಂ ।
ಖಂಡನಂ ಗರ್ಭವಾಸಾನಾಂ ಜರಾಮೃತ್ಯುಹರಂ ಪರಂ ॥ ೭೧ ॥

ಬಂಧನಾನಾಂ ಚ ರೋಗಾಣಾಂ ಖಂಡನಂ ಭಕ್ತಮಂಡನಂ ।
ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ॥ ೭೨ ॥

ವ್ರತಾವ್ರತೇಷು ಸರ್ವೇಷು ತಪಸ್ವೀ ಚ ತಪಃಸು ಚ ।
ಸ ಸತ್ಯಂ ಸರ್ವದಾನಾನಾಂ ಫಲಂ ಚ ಲಭತೇ ಧ್ರುವಂ ॥ ೭೩ ॥

---

ಪಡೆದವನಾಗಿ ವಸ್ತ್ರಾಲಂಕಾರ ಗಂಧಗಳಿಂದ ಪೂಜೆಯನ್ನು ಮಾಡಿ ಯಾವನು ಪ್ರಾರ್ಥನೆ ಮಾಡುತ್ತಾನೋ ಮತ್ತು ಸ್ನಾನಮಾಡಿ ಪ್ರತಿದಿನವೂ ಪೂಜಾಕಾಲದಲ್ಲಿ ಯಾವನು ಭಕ್ತಿಯಿಂದ ಪಠನ ಮಾಡುತ್ತಾನೋ ಅವನು ಕೋಟಿ ಜನ್ಮಗಳಿಂದ ಮಾಡಿದ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಈ ಸ್ತೋತ್ರ ಆಪತ್ತುಗಳನ್ನು ನಾಶ ಮಾಡತಕ್ಕದ್ದು. ಸಕಲ ಸಂಪತ್ತುಗಳಿಗೆ ಕಾರಣವೂ, ಆದುದು.

೭೧. ದುಃಖಗಳನ್ನು ನಾಶ ಮಾಡಿ ಭಯಂಕರವಾದ ಸಂಸಾರ ಸಮುದ್ರವನ್ನು ದಾಟಿಸತಕ್ಕುದು. ಗರ್ಭದಲ್ಲಿ ವಾಸಮಾಡುವಿಕೆಯನ್ನು ಕತ್ತರಿಸಿ ಮುಪ್ಪು ಸಾವುಗಳನ್ನು ನಾಶಮಾಡತಕ್ಕುದೂ ಶ್ರೇಷ್ಠವೂ ಆದುದು.

೭೨. ಬಂಧನಗಳನ್ನೂ ರೋಗಗಳನ್ನೂ ನಾಶಮಾಡಿ ಭಕ್ತರಿಗೆ ಅಲಂಕಾರವಾಗಿರುತ್ತದೆ. ಈ ಸ್ತೋತ್ರವನ್ನು ಹೊಂದಿದವನು ಸಕಲ ತೀರ್ಥಗಳಲ್ಲಿಯೂ ಸ್ನಾನ ಮಾಡಿದವನೂ ಸಕಲ ಯಾಗಗಳಲ್ಲಿಯೂ ದೀಕ್ಷಿತನೂ ಆಗುತ್ತಾನೆ.

೭೩. ಸಕಲ ವ್ರತಗಳನ್ನು ಮಾಡಿದವನೂ ತಪಸ್ವಿಯಾದವನು ಸಕಲ ತಪಸ್ಸನ್ನು ಮಾಡಿದವನೂ ಆಗುತ್ತಾನೆ. ಅವನು ಸತ್ಯವಾಗಿಯೂ ಸಕಲ ವಿಧವಾದ ದಾನಫಲಗಳನ್ನು ಪಡೆಯುತ್ತಾನೆ.

ಲಕ್ಷಧಾ ಸ್ತೋತ್ರಪಾಠೇನ ಸ್ತೋತ್ರಸಿದ್ಧಿರ್ಭವೇನ್ನೃಣಾಂ ।
ಸರ್ವ ಸಿದ್ಧಿಂ ಚ ಲಭತೇ ಸಿದ್ಧಸ್ತೋತ್ರೋ ಭವೇದ್ಯದಿ || ೭೪ ||

ಇಹ ಲೋಕೇ ದೇವತುಲ್ಯೋಽಪ್ಯಂತೇ ಯಾತಿ ಪರೇಃ ಪದಂ || ೭೫ ||

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ ಬಾಣಯುದ್ಧೇ
ಬಲಿಕೃತ ಶ್ರೀಕೃಷ್ಣಸ್ತೋತ್ರಂ ನಾಮೈಕೋನ-
ವಿಂಶಾಧಿಕಶತತಮೋಽಧ್ಯಾಯಃ ||

---

೭೪–೭೫. ಈ ಸ್ತೋತ್ರವನ್ನು ಒಂದು ಲಕ್ಷ ಸಾರಿ ಪಠನಮಾಡಿದ ಮಾನವನಿಗೆ ಸ್ತೋತ್ರಸಿದ್ಧಿಯುಂಟಾಗುತ್ತದೆ. ಸ್ತೋತ್ರಸಿದ್ಧಿಯನ್ನು ಪಡೆದವನಾದ ಪಕ್ಷದಲ್ಲಿ ಸಕಲಸಿದ್ಧಿಯನ್ನೂ ಪಡೆಯುತ್ತಾನೆ. ಮತ್ತು ಈ ಲೋಕದಲ್ಲಿ ದೇವತೆಗಳಿಗೆ ಸಮನಾಗಿದ್ದು ಕೊನೆಗೆ ಹರಿಯ ಪಾದಾರವಿಂದವನ್ನು ಸೇರುತ್ತಾನೆ.

ಇಂತು ಶ್ರೀಬ್ರಹ್ಮವೈವರ್ತಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ
ನಾರಾಯಣನಾರದ ಸಂವಾದದಲ್ಲಿನ ಬಾಣಯುದ್ಧದಲ್ಲಿ ಬಲಿಯು ಮಾಡಿದ
ಶ್ರೀಕೃಷ್ಣಸ್ತೋತ್ರವೆಂಬ ನೂರಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ವಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರಾಯಣ ಉವಾಚ ||

ಅಥ ಕೃಷ್ಣಶ್ಚ ಭಗವಾನುದ್ಧವೇನ ಬಲೇನ ಚ ।
ದೂತಂ ಪ್ರಸ್ಥಾಪಯಾಮಾಸ ವಿಧಾಯ ಮಂತ್ರಿಣಂ ಶುಭಂ ॥ ೧ ॥

ಶಿವೋ ಗಣಪತಿರ್ಯತ್ರ ದುರ್ಗಾ ದುರ್ಗತಿನಾಶಿನೀ ।
ಕಾರ್ತಿಕೇಯೋ ಭದ್ರಕಾಲೀ ಚೋಗ್ರಚಂಡಾ ಚ ಕೋಟರೀ ॥ ೨ ॥

ಆಗತ್ಯ ನತ್ವಾ ದೂತಶ್ಚ ಗಣೇಶಂ ಚ ಶಿವಂ ಶಿವಾಂ ।
ಮಾನವಾಂಶ್ಚಾಪಿ ಪೂಜ್ಯಾಂಶ್ಚ ಸಮುವಾಚ ಯಥೋಚಿತಂ ॥ ೩ ॥

---

### ನೂರಇಪ್ಪತ್ತನೆಯ ಅಧ್ಯಾಯವು.

ಶ್ರೀನಾರಾಯಣನು ಹೇಳುತ್ತಾನೆ :

೧-೨. ಅನಂತರ ಪೂಜ್ಯನಾದ ಕೃಷ್ಣನು ಉದ್ಧವ ಬಲರಾಮರಿಂದೊಡಗೂಡಿ ಉತ್ತಮವೂ ಶುಭಕರವೂ ಆದ ಮಂತ್ರಾಲೋಚನೆಯನ್ನು ಮಾಡಿ ಯಾವ ಸ್ಥಳದಲ್ಲಿ ಶಿವನೂ ಗಣಪತಿಯೂ ಭಕ್ತರ ದುರ್ಗತಿಯನ್ನು ನಾಶಮಾಡುವ ದುರ್ಗಿಯೂ ಕಾರ್ತಿಕೇಯನೂ ಭದ್ರಕಾಳಿಯೂ ಉಗ್ರಚಂಡಳೂ ಕೋಟರಿಯೂ ಇರುವರೋ ಅಲ್ಲಿಗೆ ದೂತನನ್ನು ಕಳುಹಿಸಿದನು.

೩. ಆ ದೂತನು ಅಲ್ಲಿಗೆ ಬಂದು ಗಣೇಶನಿಗೂ ಶಿವನಿಗೂ ಪಾರ್ವತಿಗೂ ಮತ್ತು ಪೂಜ್ಯರಾದ ಮನುಷ್ಯರಿಗೂ ನಮಸ್ಕಾರ ಮಾಡಿ ಆ ಸಮಯಕ್ಕೆ ಉಚಿತವಾದ ಮಾತನ್ನಾಡಿದನು.

|| ದೂತ ಉವಾಚ ||

ಬಾಣಮಾಹ್ವಯತೇ ಕೃಷ್ಣಃ ಸಂಗ್ರಾಮಾರ್ಥಂ ಮಹೇಶ್ವರ ।
ಕಿಂ ವಾನಿರುದ್ಧಮೂಷಾಂ ಚ ಗೃಹೀತ್ವಾ ಶರಣಂ ವ್ರಜ || ೪ ||

ರಣೇ ನಿಮಂತ್ರಿತೋ ಯೋ ಹಿ ನ ಯಾತಿ ಭಯಕಾತರಃ ।
ಪರತ್ರ ನರಕಂ ಯಾತಿ ಸಪ್ತಭಿಃ ಪಿತೃಭಿಃ ಸಹ || ೫ ||

ದೂತಸ್ಯ ವಚನಂ ಶ್ರುತ್ವಾ ಸಭಾಮಧ್ಯೇ ಯಥೋಚಿತಂ ।
ಉವಾಚ ಪಾರ್ವತೀದೇವೀ ಸ್ವಯಂ ಶಂಕರಸನ್ನಿಧೌ || ೬ ||

|| ಪಾರ್ವತ್ಯುವಾಚ ||

ಗಚ್ಛ ಬಾಣ ಮಹಾಭಾಗ ಗೃಹೀತ್ವಾ ವಪ ಕನ್ಯಕಾಂ ।
ಸರ್ವಸ್ವಂ ಯೌತಕಂ ದತ್ವಾ ಶ್ರೀಕೃಷ್ಣಂ ಶರಣಂ ವ್ರಜ || ೭ ||

ಸರ್ವೇಷಾಮೀಶ್ವರಂ ಬೀಜಂ ದಾತಾರಂ ಸರ್ವಸಂಪದಾಂ ।
ವರಂ ವರೇಣ್ಯಂ ಶರಣಂ ಕೃಪಾಲುಂ ಭಕ್ತವತ್ಸಲಂ || ೮ ||

---

೪. ದೂತನು ಹೇಳುತ್ತಾನೆ:— ಮಹೇಶ್ವರನೇ : ಕೃಷ್ಣನು ಬಾಣನನ್ನು ಯುದ್ಧಕ್ಕೋಸ್ಕರ ಕರೆಯುತ್ತಾನೆ. ಇಲ್ಲದಿದ್ದರೆ ಅನಿರುದ್ಧನನ್ನೂ ಉಷೆಯನ್ನೂ ಕರೆದುಕೊಂಡು ಹೋಗಿ ಅವನು ಕೃಷ್ಣನನ್ನು ಮರೆಹೊಗಲಿ.

೫. ಯಾವನಾದರೂ ಯುದ್ಧಕ್ಕೆ ಕರೆಯಲ್ಪಟ್ಟವನಾಗಿ ಹೆದರಿ ಕಂಗೆಟ್ಟು ಹೋಗದೆ ಹಿಂಜರಿಯುವನೋ ಅವನು ಪರಲೋಕದಲ್ಲಿ ತಮ್ಮ ಹಿಂದಿನ ಏಳು ಮಂದಿ ಪಿತೃಗಳೊಡನೆ ನರಕವನ್ನು ಹೊಂದುತ್ತಾನೆ.

೬. ಸಭೆಯ ಮಧ್ಯದಲ್ಲಿ ದೂತನು ಸಮಯೋಚಿತವಾಗಿ ನುಡಿದ ಮಾತನ್ನು ಕೇಳಿ ಪಾರ್ವತೀದೇವಿಯು ತಾನು ಶಂಕರನೆದುರಿನಲ್ಲಿಂತೆಂದಳು.

೭-೮. ಪಾರ್ವತಿಯು ಹೇಳುತ್ತಾಳೆ:— ಮಹಾತ್ಮನಾದ ಬಾಣನೇ! ಮಗಳನ್ನು ಕರೆದುಕೊಂಡು ಹೋಗಿ ಶ್ರೀಕೃಷ್ಣನಿಗೆ ನಿನ್ನ ಸರ್ವಸ್ವವನ್ನೂ ಬಳುವಳಿಯಾಗಿ ಕೊಟ್ಟು, ಸಕಲರಿಗೂ ಒಡೆಯನೂ ಸಕಲಕ್ಕೂ ಕಾರಣನೂ ಸಕಲಸಂಪತ್ತುಗಳನ್ನೂ ಕೊಡುವವನೂ ಶ್ರೇಷ್ಠರಲ್ಲಿ ಶ್ರೇಷ್ಠನೂ ರಕ್ಷಕನೂ ದಯಾಮಯನೂ ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ಆ ಶ್ರೀಕೃಷ್ಣನನ್ನು ಶರಣುಹೊಂದುವವನಾಗು.

ಪಾರ್ವತೀ ವಚನಂ ಶ್ರುತ್ವಾ ತೆಮೂಚುಸ್ತೇ ಸುರೇಶ್ವರಾಃ ।
ಪ್ರಶಶಂಸುಃ ಸಭಾಮಧ್ಯೇ ಧನ್ಯಧನ್ಯೇತಿ ಸರ್ವದಾ ॥ ೯ ॥

ಕೋಪಾವಿಷ್ಟಶ್ಚ ಬಾಣೋಯಮುತ್ತಸ್ಥೌ ಸಹಸಾಸುರಃ ।
ಸಾನ್ನಾಹಿಕೋ ಧನುಷ್ಪಾಣಿಃ ಪ್ರಣಮ್ಯ ಶಂಕರಂ ಯಯೌ ॥ ೧೦ ॥

ಸರ್ವೈರ್ನಿಷಿಧ್ಯಮಾನಶ್ಚ ಕಂಪಿತೋ ರಕ್ತಲೋಚನಃ ।
ಸಾನ್ನಾಹಿಕಶ್ಚ ದೈತ್ಯಾನಾಂ ತ್ರಿಕೋಟ್ಯಾ ಚ ಮಹಾಬಲಃ ॥ ೧೧ ॥

ಕುಭಾಂಡಃ ಕೂಪಕರ್ಣಶ್ಚ ನಿಕುಂಭಃ ಕುಂಭ ಏವ ಚ ।
ಸೇನಾಪತೀಶ್ವರಶ್ಚೈತೇ ಯಯುಃ ಸಾನ್ನಾಹಿಕಾಸ್ತಥಾ ॥ ೧೨ ॥

ಉನ್ಮತ್ತಭೈರವಶ್ಚೈವ ಸಂಹಾರಭೈರವಸ್ತಥಾ ।
ಅಸಿತಾಂಗೋ ಭೈರವಶ್ಚ ರುರುಭೈರವ ಏವ ಚ ॥ ೧೩ ॥

---

೯. ಪಾರ್ವತಿಯು ಹೇಳಿದ ಮಾತನ್ನು ಕೇಳಿ ದೇವಶ್ರೇಷ್ಠರೆಲ್ಲರೂ ಸಭೆಯ ಮಧ್ಯದಲ್ಲಿ ಅವನನ್ನು ಹೊಗಳಿದರು. ಮತ್ತು ನೀನು ಎಲ್ಲ ವಿಧದಿಂದಲೂ ಧನ್ಯನು ಎಂದು ನುಡಿದರು.

೧೦. ಅಸುರನಾದ ಬಾಣನು ಕೋಪಗೊಂಡವನಾಗಿ ಕೂಡಲೆ ಮೇಲಕ್ಕೆದ್ದನು. ಸಕಲಸೈನ್ಯಸಮೇತನಾಗಿ ಬಿಲ್ಲನ್ನು ಹಿಡಿದುಕೊಂಡು ಶಂಕರನಿಗೆ ನಮಸ್ಕಾರ ಮಾಡಿ ಹೊರಟನು.

೧೧. ಎಲ್ಲರೂ ತಡೆಯುತ್ತಲಿದ್ದರೂ ಕೋಪದಿಂದ ನಡುಗುತ್ತ ಕೆಂಪಾದ ಕಣ್ಣುಳ್ಳವನಾಗಿ ಮೂರು ಕೋಟಿ ದೈತ್ಯಸೇನೆಯಿಂದೊಡಗೂಡಿದವನಾಗಿ ಮಹಾ ಬಲಶಾಲಿಯಾದ ಬಾಣನು ಹೊರಟನು.

೧೨. ಕುಂಭಾಂಡನು ಕೂಪಕರ್ಣನು ನಿಕುಂಭನು ಮತ್ತು ಕುಂಭನು ಈ ಪ್ರಮುಖ ಸೇನಾಪತಿಗಳೆಲ್ಲರೂ ಸೈನ್ಯಸಮೇತರಾಗಿ ಹೊರಟರು.

೧೩-೧೫. ಉನ್ಮತ್ತಭೈರವನು ಸಂಹಾರಭೈರವನು ಅಸಿತಾಂಗಭೈರವನು ರುರುಭೈರವನು ಮಹಾಭೈರವನು ಕಾಲಭೈರವನು ಪ್ರಚಂಡಭೈರವನು ಕ್ರೋಧ ಭೈರವನು ಇವರೆಲ್ಲರೂ ತಮ್ಮತಮ್ಮ ಶಕ್ತಿಗಳಿಂದ ಸಮೇತರಾಗಿ ಸೈನ್ಯಗಳೊಡನೆ

ಮಹಾಭೈರವಸಂಜ್ಞಶ್ಚ ಕಾಲಭೈರವ ಏವ ಚ ।
ಪ್ರಚಂಡಭೈರವಶ್ಚೈವ ಕ್ರೋಧಭೈರವ ಏವ ಚ ॥ ೧೪ ॥

ಪ್ರಯಯುಃ ಶಕ್ತಿಭಿಃ ಸಾರ್ಧಂ ಸರ್ವೇ ಸಾನ್ನಾಹಿಕಾಶ್ಚ ತೇ ।
ಕಾಲಾಗ್ನಿರುದ್ರೋ ಭಗವಾನ್ರುದ್ರೈಃ ಸಾನ್ನಾಹಿಕೋ ಯಯೌ ॥ ೧೫ ॥

ಉಗ್ರಚಂಡಾ ಪ್ರಚಂಡಾ ಚ ಚಂಡಿಕಾ ಚಂಡಿನಾಯಿಕಾ ।
ಚಂಡೇಶ್ವರೀ ಚ ಚಾಮುಂಡಾ ಚಂಡೀ ಚಂಡಕಪಾಲಿಕಾ ॥ ೧೬ ॥

ಅಷ್ಟಾ ಚ ನಾಯಿಕಾಃ ಸರ್ವಾಃ ಪ್ರಯಯುಃ ಖರ್ಪರಾನ್ವಿತಾಃ ।
ಕೋಟರೀ ರತ್ನಯಾನಸ್ಥಾ ಶೋಣಿತಗ್ರಾಮದೇವತಾ ॥ ೧೭ ॥

ಪ್ರಯಯೌ ಸಾ ಪ್ರಫುಲ್ಲಾಸ್ಯಾ ಖಡ್ಗಖರ್ಪರಧಾರಿಣೀ ।
ಚಂದ್ರಾಣೀ ವೈಷ್ಣವೀ ಶಾಂತಾ ಬ್ರಹ್ಮಾಣೀ ಬ್ರಹ್ಮವಾದಿನೀ ॥ ೧೮ ॥

ಕೌಮಾರೀ ನಾರಸಿಂಹೀ ಚ ವಾರಾಹೀ ವಿಕಟಾಕೃತಿಃ ।
ಮಾಹೇಶ್ವರೀ ಮಹಾಮಾಯಾ ಭೈರವೀ ಭೀಮರೂಪಿಣೀ ॥ ೧೯ ॥

ಅಷ್ಟಾ ಚ ಶಕ್ತಯಃ ಸರ್ವಾ ರಥಸ್ಥಾಃ ಪ್ರಯಯುರ್ಮುದಾ ।
ರತ್ನೇಂದ್ರಸಾರಯಾನಸ್ಥಾ ಪ್ರಯಯೌ ಭದ್ರಕಾಲಿಕಾ ॥ ೨೦ ॥

---

ಯುದ್ಧಮಾಡಲು ಹೊರಟರು. ಷಡ್ಗುಣೈಶ್ವರ್ಯಸಂಪನ್ನನಾದ ಕಾಲಾಗ್ನಿರುದ್ರನು ರುದ್ರರಿಂದೊಡಗೂಡಿ ಸೇನಾಸಮೇತನಾಗಿ ಹೊರಟನು.

೧೬–೧೮. ಉಗ್ರಚಂಡಳು ಪ್ರಚಂಡಳು ಚಂಡಿಕೆಯು ಚಂಡಿನಾಯಕಿಯು ಚಂಡೇಶ್ವರಿಯು ಚಾಮುಂಡಿಯು ಚಂಡಿಯು ಚಂಡಕಪಾಲಿಕೆಯು ಈ ಎಂಟು ಮಂದಿ ನಾಯಕಿಯರೆಲ್ಲರೂ ಖರ್ಪರವೆಂಬ ಆಯುಧವನ್ನು ಹಿಡಿದು ಹೊರಟರು. ಶೋಣಿತಪುರದ ಗ್ರಾಮದೇವತೆಯಾದ ಕೋಟರಿಯು ರತ್ನಮಯವಾದ ವಿಮಾನದಲ್ಲಿ ಕುಳಿತುಕೊಂಡು ಖಡ್ಗ ಮತ್ತು ಖರ್ಪರವನ್ನು ಹಿಡಿದುಕೊಂಡು ಅರಳಿದ ಮುಖವುಳ್ಳವಳಾಗಿ ಹೊರಟಳು. ಚಂದ್ರಾಣಿಯೂ ವೈಷ್ಣವಿಯೂ ಶಾಂತೆಯೂ ಬ್ರಹ್ಮಾಣಿಯೂ ಬ್ರಹ್ಮವಾದಿನಿಯೂ ಹೊರಟರು.

೧೯–೨೧ಕೌಮಾರಿಯೂ ನಾರಸಿಂಹಿಯೂ ವಾರಾಹಿಯೂ ವಿಕಟಾಕೃತಿಯೂ ಮಾಹೇಶ್ವರಿಯೂ ಮಹಾಮಾಯೆಯೂ ಭೀಮರೂಪಿಣಿಯೂ ಭೈರವಿಯೂ ಎಂಟು

ರಕ್ತವರ್ಣಾ ತ್ರಿನಯನಾ ಜಿಹ್ವಾಲಲನಭೀಷಣಾ ।
ಶೂಲಶಕ್ತಿಗದಾಹಸ್ತಾ ಖಡ್ಗಖರ್ಪರಧಾರಿಣೀ ॥ ೨೧ ॥

ಪ್ರಯಯೌ ಶೂಲಹಸ್ತಶ್ಚ ವೃಷಭಸ್ಥೋ ಮಹೇಶ್ವರಃ ।
ಸ್ಕಂದಶ್ಚ ಶಿಖಿಯಾನಸ್ಥಃ ಶಸ್ತ್ರಪಾಣಿರ್ಧನುರ್ಧರಃ ॥೨೨ ॥

ಏವಂ ಚ ಪ್ರಯಯುಃ ಸರ್ವೇ ಗಣೇಶಂ ಪಾರ್ವತೀಂ ವಿನಾ ।
ಏಭಿರ್ಯುಕ್ತಂ ಮಹಾದೇವಂ ದೃಷ್ಟ್ವಾ ಚ ಭಕ್ತಕಾಲಿಕಾಂ ॥ ೨೩ ॥

ಪ್ರಚಕ್ರೇ ಚಕ್ರಪಾಣಿಶ್ಚ ಸಂಭಾಷಾಂ ಚ ಯಥೋಚಿತಾಂ ।
ಬಾಣಃ ಶಂಖಧ್ವನಿಂ ಕೃತ್ವಾ ಪ್ರಣಮ್ಯ ಪಾರ್ವತೀಶ್ವರಂ ॥ ೨೪ ॥

ಧನುರ್ಧರಾಯ ಸಗುಣಂ ದಿವ್ಯಾಸ್ತ್ರೇಣ ನಿಯೋಜಿತಂ ।
ಬಾಣಂ ಸಮುದ್ಯತಂ ದೃಷ್ಟ್ವಾ ಸಾತ್ಯಕಿಃ ಪರವೀರಹಾ ॥ ೨೫ ॥

---

ಶಕ್ತಿದೇವಿಯರೂ ಇವರೆಲ್ಲರೂ ರಥದ ಮೇಲೆ ಕುಳಿತುಕೊಂಡು ಸಂತೋಷದಿಂದ ಪ್ರಯಾಣ ಮಾಡಿದರು. ಭದ್ರಕಾಳಿಯು ರತ್ನಶ್ರೇಷ್ಠಗಳಿಂದ ಮಾಡಿದ್ದ ವಿಮಾನದಲ್ಲಿ ಕುಳಿತು ಪ್ರಯಾಣ ಮಾಡಿದಳು. ಮತ್ತು ಅವಳು ಕೆಂಪು ಬಣ್ಣವುಳ್ಳವಳಾಗಿ ಮೂರು ಕಣ್ಣುಗಳಿಂದ ಪ್ರಕಾಶಿಸುತ್ತ ನಾಲಿಗೆಯನ್ನು ಮುಂದಕ್ಕೆ ನೀಡಿರುವುದರಿಂದ ಭಯಂಕರಳೂ ಶೂಲ ಶಕ್ತಿ ಗದೆ ಇವುಗಳನ್ನು ಕೈಯಲ್ಲಿ ಹಿಡಿದು ಖಡ್ಗ ಮತ್ತು ಖರ್ಪರಗಳನ್ನು ಧರಿಸಿದವಳೂ ಆಗಿದ್ದಳು.

೨೨. ಮಹೇಶ್ವರನು ಬಸವನ ಮೇಲೆ ಕುಳಿತುಕೊಂಡು ಕೈಯಲ್ಲಿ ಶೂಲಾಯುಧವನ್ನು ಹಿಡಿದುಕೊಂಡು ಹೊರಟನು. ಸ್ಕಂದನು ನವಿಲುವಾಹನವನ್ನು ಹತ್ತಿಕೊಂಡು ಕೈಯಲ್ಲಿ ಬಿಲ್ಲನ್ನೂ ಶಸ್ತ್ರಗಳನ್ನೂ ಹಿಡಿದು ಹೊರಟನು.

೨೩–೨೪. ಹೀಗೆ ಗಣೇಶ ಮತ್ತು ಪಾರ್ವತಿ ಇವರನ್ನು ಬಿಟ್ಟು ಉಳಿದವರೆಲ್ಲರೂ ಹೊರಟರು. ಇವರೆಲ್ಲರಿಂದಲೂ ಕೂಡಿರುವ ಮಹಾದೇವನನ್ನೂ ಭಕ್ತ ಕಾಲಿಕೆಯನ್ನೂ ನೋಡಿ ಕೃಷ್ಣನು ಯಥಾರೀತಿಯಾಗಿ ಮಾತನಾಡಿದನು. ಬಾಣನು ಪಾರ್ವತಿಯ ಪತಿಯಾದ ಹರನಿಗೆ ನಮಸ್ಕಾರಮಾಡಿ ಶಂಖಧ್ವನಿಯನ್ನುಮಾಡಿದನು.

೨೫. ಅವನು ಹುರಿಯಿಂದ ಕೂಡಿದ ಮತ್ತು ಉತ್ತಮವಾದ ಅಸ್ತ್ರದಿಂದ ಸೇರಿಸಲ್ಪಟ್ಟ ಬಿಲ್ಲನ್ನು ಕೈಯಲ್ಲಿ ಹಿಡಿದನು. ಬಾಣನು ಸಿದ್ಧವಾಗುತ್ತಿರುವುದನ್ನು ಶತ್ರುವೀರರನ್ನು ನಾಶಮಾಡುವವನಾದ ಸಾತ್ಯಕಿಯು ನೋಡಿದನು.

ನಿಷಿಧ್ಯಮಾನಸ್ತೈಃ ಸರ್ವೈಃ ಸನ್ನಾಹೀ ಪ್ರಯಯೌ ಮುದಾ ।
ಬಾಣಶ್ಚಿಕ್ಷೇಪ ದಿವ್ಯಾಸ್ತ್ರಮಂಜನಂ ನಾಮ ನಾರದ ॥ ೨೬ ॥

ಅವ್ಯಕ್ತಂ ಗ್ರೀಷ್ಮಮಧ್ಯಾಹ್ನಮಾರ್ತಾಂಡಾಭಂ ಸುತೀಕ್ಷ್ಣಕಂ ।
ದೃಷ್ಟ್ವಾಸ್ತ್ರಂ ಸಾತ್ಯಕಿಃ ಸಾಕ್ಷಾತ್ಕಿಂಚಿನ್ನಮ್ರೋ ಬಭೂವ ಸಃ ॥ ೨೭ ॥

ಕಿಂ ವಾ ನ ದಗ್ಧಃ ಪ್ರಯಯೌ ನಭೋಮಧ್ಯಂ ಸುದಾರುಣಂ ।
ವಹ್ನಿಂ ಚಿಕ್ಷೇಪ ಬಾಣಶ್ಚ ಸಾತ್ಯಕಿರ್ವಾರುಣೇನ ಚ ॥ ೨೮ ॥

ಪ್ರಜ್ವಲಂತಂ ಶಾಲಮಾನಂ ನಿರ್ವಾಣಂ ಚ ಚಕಾರ ಸಃ ।
ಚಿಕ್ಷೇಪ ಪಾವನಂ ಬಾಣಃ ಪ್ರಚಂಡಂ ಘೋರಮುಲ್ಬಣಂ ॥ ೨೯ ॥

ಚಿಚ್ಛೇದ ಸಾತ್ಯಕಿಶ್ಚೈವ ಪರ್ವತಾಸ್ತ್ರೇಣ ಲೀಲಯಾ ।
ನಾರಾಯಣಾಸ್ತ್ರಂ ಚಿಕ್ಷೇಪ ಬಾಣಶ್ಚ ರಣಮೂರ್ಧನಿ ॥ ೩೦ ॥

ಸಾತ್ಯಕಿರ್ದಂಡವದ್ಭೂಮೌ ಪಪಾತಾರ್ಜುನ ಶಿಷ್ಯಯಾ ।
ಮಹೇಶ್ವರಂ ಪ್ರಚಿಕ್ಷೇಪ ಬಾಣಃ ಶಸ್ತ್ರವಿದಾಂವರಃ ॥ ೩೧ ॥

ಸಾತ್ಯಕಿರ್ವೈಷ್ಣವಾಸ್ತ್ರೇಣ ಪ್ರಚಿಚ್ಛೇದಾವಲೀಲಯಾ ।
ಬ್ರಹ್ಮಾಸ್ತ್ರಂ ಚಾಪಿ ಚಿಕ್ಷೇಪ ಬಾಣಶ್ಚ ರಣಮೂರ್ಧನಿ ॥ ೩೨ ॥

---

೨೬–೨೭. ಬಾಣನು ಅಲ್ಲಿರುವವರೆಲ್ಲರೂ ತಡೆಯುತ್ತಿದ್ದರೂ ಲೆಕ್ಕಿಸದೆ ಸೈನ್ಯ ಸಮೇತನಾಗಿ ಯುದ್ಧಕ್ಕೆ ಹೊರಟನು. ಎಲೈ ನಾರದನೇ! ಅವನು ಅಂಜನವೆಂಬ ಗ್ರೀಷ್ಮಕಾಲದ ಮಧ್ಯಾಹ್ನ ಸಮಯದ ಸೂರ್ಯನಂತೆ ಕಾಂತಿಯುಳ್ಳ ಅತಿಪ್ರಚಂಡ ವಾದ ಮತ್ತು ಅವ್ಯಕ್ತವಾದ ಅಸ್ತ್ರವನ್ನೆಸೆದನು. ಆ ಅಸ್ತ್ರವನ್ನು ನೋಡಿ ಸಾತ್ಯಕಿಯು ಸ್ವಲ್ಪ ತಲೆಬಾಗಿದವನಾದನು.

೨೮-೨೯. ಆ ಭಯಂಕರವಾದ ಅಸ್ತ್ರವು ಯಾವುದನ್ನೂ ಸುಡದೆ ಆಕಾಶ ಮಧ್ಯವನ್ನು ಸೇರಿತು. ಬಾಣನು ಅಗ್ನೇಯಾಸ್ತ್ರವನ್ನೆಸೆದನು. ಸಾತ್ಯಕಿಯು ಕಾಳವೃಕ್ಷದಂತಿರುವ ಮತ್ತು ಉರಿಯುತ್ತಿರುವ ಆ ಅಸ್ತ್ರವನ್ನು ವಾರುಣಾಸ್ತ್ರದಿಂದ ಶಮನವಮಾಡಿದನು. ಬಾಣನು ಅತಿಭಯಂಕರವೂ ತೀಕ್ಷ್ಣವೂ ಆದ ವಾಯವ್ಯಾಸ್ತ್ರ ವನ್ನೆಸೆದನು.

೩೦–೩೨. ಸಾತ್ಯಕಿಯು ಪರ್ವತಾಸ್ತ್ರದಿಂದ ವಾಯ್ವಾಸ್ತ್ರವನ್ನು ಸುಲಭವಾಗಿ ಕತ್ತರಿಸಿದನು. ಬಾಣನು ಯುದ್ಧರಂಗದಲ್ಲಿ ನಾರಾಯಣಾಸ್ತ್ರವನ್ನು ಬಿಟ್ಟನು.

ಕ್ಷಣಂ ಚಕಾರ ನಿರ್ವಾಣಂ ಬ್ರಹ್ಮಾಸ್ತ್ರೇಣ ಚ ಸಾತ್ಯಕಿಃ ।
ನಾಗಾಸ್ತ್ರಂ ಚಾಪಿ ಚಿಕ್ಷೇಪ ಬಾಣೋ ರಣವಿಶಾರದಃ ॥ ೩೩ ॥

ಸಾತ್ಯಕಿರ್ಗರುಡೇನೈವ ಸಂಜಹಾರ ಕ್ಷಣೇನ ಚ ।
ಜಗ್ರಾಹ ಶೂಲಮವ್ಯರ್ಥಂ ಶಂಕರಸ್ಯ ಸುದಾರುಣಂ ॥ ೩೪ ॥

ತುಷ್ಟಾವ ಸಾತ್ಯಕಿರ್ದುರ್ಗಾಂ ಗಲೇ ಮಾಲ್ಯಂ ಬಭೂವ ಹ ।
ಜಗ್ರಾಹ ಧನುಷಾ ಬಾಣೋ ಬಾಣಂ ಪಾಶುಪತಂ ತಥಾ ॥ ೩೫ ॥

ಬಾಣಂ ಸಬಾಣಂ ಜೃಂಭಂ ಚ ಸಾತ್ಯಕಿಶ್ಚ ಚಕಾರ ಹ ।
ಬಾಣಂ ತಂ ಜೃಂಭಿತಂ ದೃಷ್ಟ್ವಾ ಕಾರ್ತಿಕೇಯೋ ಮಹಾಬಲಃ ॥ ೩೬ ॥

ಅರ್ಧಚಂದ್ರಂ ಚ ಚಿಕ್ಷೇಪ ಕಾಮಶ್ಚಿಚ್ಛೇದ ಲೀಲಯಾ ।
ಗದಾಂ ಚಿಕ್ಷೇಪ ಚ ಸ್ಕಂದಃ ಪ್ರಾತಃಸೂರ್ಯಸಮಪ್ರಭಾಂ ॥ ೩೭ ॥

---

ಸಾತ್ಯಕಿಯು ಅರ್ಜುನನ ಉಪದೇಶದಂತೆ ದಂಡವಂತೆ ನೆಲದ ಮೇಲೆ ಬಿದ್ದನು. ಶಸ್ತ್ರವಿದ್ಯೆಯಲ್ಲಿ ನಿಪುಣನಾದ ಬಾಣನು ಮಾಹೇಶ್ವರಾಸ್ತ್ರವನ್ನೆಸೆದನು. ಸಾತ್ಯಕಿಯು ಅದನ್ನು ವೈಷ್ಣವಾಸ್ತ್ರದಿಂದ ಸುಲಭವಾಗಿ ಕತ್ತರಿಸಿದನು. ಬಾಣನು ಯುದ್ಧರಂಗದಲ್ಲಿ ನಿಂತು ಬ್ರಹ್ಮಾಸ್ತ್ರವನ್ನೆಸೆದನು.

೩೩–೩೪. ಸಾತ್ಯಕಿಯು ಆ ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದ ಕ್ಷಣಕಾಲದಲ್ಲಿ ಶಮನಮಾಡಿದನು. ಯುದ್ಧನಿಪುಣನಾದ ಬಾಣನು ನಾಗಾಸ್ತ್ರವನ್ನೂ ಎಸೆದನು. ಸಾತ್ಯಕಿಯು ಗರುಡಾಸ್ತ್ರದಿಂದ ಕ್ಷಣಕಾಲದಲ್ಲಿ ಅದನ್ನು ಸಂಹಾರ ಮಾಡಿದನು. ಆಗ ಬಾಣನು ಯಾವಾಗಲೂ ವ್ಯರ್ಥವಾಗದ ಭಯಂಕರವಾದ ಶಂಕರನ ಶೂಲವನ್ನು ತೆಗೆದುಕೊಂಡನು.

೩೫–೩೭. ಸಾತ್ಯಕಿಯು ದುರ್ಗಾದೇವಿಯನ್ನು ಸ್ತೋತ್ರಮಾಡಿದನು. ಆಗ ಆ ಶೂಲವು ಸಾತ್ಯಕಿಯ ಕೊರಳಿನಲ್ಲಿ ಹೂಮಾಲಿಕೆಯಾಯಿತು. ಬಾಣನು ಪಾಶುಪತವೆಂಬ ಬಾಣವನ್ನು ಬಿಲ್ಲಿನಲ್ಲಿ ಸೇರಿಸಿದನು. ಸಾತ್ಯಕಿಯು ಬಾಣಸಮೇತನಾದ ಬಾಣನನ್ನು ಆಕಳಿಕೆಯುಳ್ಳವನನ್ನಾಗಿ ಮಾಡಿದನು. ಬಾಣನು ಆಕಳಿಸುತ್ತಿರುವುದನ್ನು ನೋಡಿ ಮಹಾಬಲಶಾಲಿಯಾದ ಸ್ಕಂದನು ಅರ್ಧಚಂದ್ರವೆಂಬ ಬಾಣವನ್ನು ಹೊಡೆದನು. ಅದನ್ನು ಕಾಮನು ಸುಲಭವಾಗಿ ಕತ್ತರಿಸಿದನು. ಸ್ಕಂದನು ಪ್ರಾತಃಕಾಲದ ಸೂರ್ಯನಂತೆ ಪ್ರಕಾಶಮಾನವಾದ ಗದೆಯನ್ನೆಸೆದನು.

ವೈಷ್ಣವಾಸ್ತ್ರೇಣ ಕಾಮುಶ್ಚ ನಿರ್ವಾಣಂ ಚ ಚಕಾರ ಸಃ ।
ನಾರಾಯಣಾಸ್ತ್ರಂ ಸ್ಕಂದಶ್ಚ ಪ್ರಾಕ್ಷಿಪಚ್ಚ ತ್ವರಾನ್ವಿತಃ || ೩೮ ||

ಪಪಾತ ದಂಡವದ್ಭೂಮೌ ಪ್ರದ್ಯುಮ್ನಃ ಕೃಷ್ಣಶಿಕ್ಷಯಾ ।
ಸ್ಕಂದಃ ಶಕ್ತಿಂ ಚ ಚಿಕ್ಷೇಪ ಪ್ರಲಯಾಗ್ನಿಸಮಪ್ರಭಾಂ || ೩೯ ||

ಕಾಮೋ ನಾರಾಯಣಾಸ್ತ್ರೇಣ ನಿರ್ವಾಣಂ ಚ ಚಕಾರ ತಾಂ ।
ಬ್ರಹ್ಮಾಸ್ತ್ರಂ ಚ ಪ್ರಚಿಕ್ಷೇಪ ಕಾರ್ತಿಕೋ ರಣಮೂರ್ಧನಿ || ೪೦ ||

ಬ್ರಹ್ಮಾಸ್ತ್ರೇಣಾಪಿ ಕಾಮುಶ್ಚ ನಿರ್ವಾಣಂ ಚ ಚಕಾರ ಸಃ ।
ಜಗ್ರಾಹ ಕಾರ್ತಿಕಃ ಕೋಪಾದ್ದಿವ್ಯಂ ಪಾಶುಪತಂ ತಥಾ || ೪೧ ||

ನಿದ್ರಾಸ್ತ್ರೇಣಾಪಿ ಮದನೋ ನಿದ್ರಿತಂ ಚ ಚಕಾರ ತಂ ।
ಕಾರ್ತಿಕಂ ನಿದ್ರಿತಂ ದೃಷ್ಟ್ವಾ ಬಾಣಂ ಚ ಜೃಂಭಿತ ತಥಾಂ || ೪೨ ||

ಕೋಪಾತ್ಕಾಮಂ ಚ ಸರಥಂ ಜಗ್ರಾಹ ಭದ್ರಕಾಲಿಕಾ ॥
ಕ್ರೋಡೇ ಕೃತ್ವಾ ಚ ಬಾಣಂ ಚ ಸ್ಕಂದಂ ಚ ಜಗತಾಂ ಪ್ರಸೂಃ || ೪೩ ||

ರಣಸ್ಥಲಾಚ್ಚ ಪ್ರಯಯೌ ಯತ್ರೈವ ಪಾರ್ವತೀ ಸತೀ ।
ಕಾರ್ತಿಕಂ ಬೋಧಯಾಮಾಸ ಬಾಣಂ ಸುಸ್ಥಂ ಚಕಾರ ಸಾ || ೪೪ ||

---

೩೮–೩೯. ಆ ಕಾಮನು ಗದೆಯನ್ನು ವೈಷ್ಣವಾಸ್ತ್ರದಿಂದ ಶಾಂತಮಾಡಿದನು. ಷಣ್ಮುಖನು ಜಾಗ್ರತೆಯಾಗಿ ನಾರಾಯಣಾಸ್ತ್ರವನ್ನೆಸೆದನು. ಪ್ರದ್ಯುಮ್ನನು ಕೃಷ್ಣನ ಶಿಕ್ಷೆಯಿಂದ ಕೋಲಿನಂತೆ ನೆಲದ ಮೇಲೆ ಬಿದ್ದನು. ಷಣ್ಮುಖನು ಪ್ರಳಯಕಾಲದ ಅಗ್ನಿಗೆ ಸಮನಾದ ಕಾಂತಿಯುಳ್ಳ ಶಕ್ತ್ಯಾಯುಧವನ್ನೆಸೆದನು.

೪೦–೪೧. ಕಾಮನು ನಾರಾಯಣಾಸ್ತ್ರವನ್ನು ಬಿಟ್ಟು ಆ ಶಕ್ತ್ಯಾಯುಧವನ್ನು ಶಾಂತಿಗೊಳಿಸಿದನು. ಕಾರ್ತಿಕೇಯನು ಯುದ್ಧರಂಗದಲ್ಲಿ ಬ್ರಹ್ಮಾಸ್ತ್ರವನ್ನೆಸೆದನು. ಕಾಮನು ಬ್ರಹ್ಮಾಸ್ತ್ರದಿಂದಲೇ ಅದನ್ನು ಶಮನ ಮಾಡಿದನು. ಕಾರ್ತಿಕೇಯನು ಕೋಪ ದಿಂದ ಉತ್ತಮವಾದ ಪಾಶುಪತವೆಂಬ ಅಸ್ತ್ರವನ್ನು ಕೈಗೆ ತೆಗೆದುಕೊಂಡನು.

೪೨–೪೪. ಮದನನು ನಿದ್ರಾಸ್ತ್ರದಿಂದ ಅವನನ್ನು ನಿದ್ರೆಮಾಡುವಂತೆ ಮಾಡಿದನು. ಕಾರ್ತಿಕೇಯನು ನಿದ್ರೆಮಾಡಿದುದನ್ನೂ ಬಾಣನು ಆಕಳಿಸುತ್ತಿರುವುದನ್ನೂ

ಸಹಸಾ ಸರಥಃ ಕಾಮೋ ನಾಸಾರಂಧ್ರೇಣ ವರ್ತ್ಮನಾ |
ಬಹಿರ್ಬಭೂವ ಸಂತ್ರಸ್ತಃ ಪ್ರಯಯೌ ಚ ರಣಸ್ಥಲಂ || ೪೫ ||

ದೃಷ್ಟ್ವಾ ಕಾಮಂ ಚ ಸರಥಂ ಜಹಸುರ್ಯಾದವಾಸ್ತದಾ |
ಸರ್ವೇ ಶೈವಾಶ್ಚ ತತ್ರಸ್ಥಾಃ ಶುಷ್ಕಕಂಠಾ ಭಯಾಕುಲಾಃ || ೪೬ ||

ಅಥ ಬಾಣಃ ಪುನಃ ಕ್ರುದ್ಧೋ ರಥಮಾರುಹ್ಯ ಕೋಪತಃ |
ಕಾರ್ತಿಕೇಯಶ್ಚ ಭಗವಾನ್ಯುದ್ಧಾಯ ಪುನರಾಗತಃ || ೪೭ ||

ಬಾಣಃ ಪಂಚಶರಾಂಶ್ಚೈವ ಚಿಕ್ಷೇಪ ರಣಮೂರ್ಧನಿ |
ಅರ್ಧಚಂದ್ರೇಣ ಚಿಚ್ಛೇದ ಬಲದೇವೋ ಮಹಾಬಲಃ || ೪೮ ||

---

ನೋಡಿ ಭದ್ರಕಾಳಿಯು ಕೋಪಗೊಂಡವಳಾಗಿ ರಥಸಮೇತನಾದ ಕಾಮನನ್ನು ಹಿಡಿದಳು. ಜಗನ್ಮಾತೆಯಾದ ಆ ಕಾಳಿಕೆಯು ಕಾಮನನ್ನೂ ಸ್ಕಂದನನ್ನೂ ಎತ್ತಿಕೊಂಡು ಯುದ್ಧರಂಗದಿಂದ ಸತಿಯಾದ ಪಾರ್ವತೀದೇವಿಯಿದ್ದೆಡೆಗೆ ಹೋದಳು. ಆ ಪಾರ್ವತಿಯು ಕಾರ್ತಿಕನನ್ನು ಎಚ್ಚರ ಗೊಳಿಸಿದಳು. ಮತ್ತು ಬಾಣನನ್ನು ಸುಖವಾಗಿರುವಂತೆ ಮಾಡಿದಳು.

೪೫. ಕಾಮನು ಕೂಡಲೆ ರಥಸಮೇತನಾಗಿ ಮೂಗಿನದ್ವಾರದ ಮೂಲಕವಾಗಿ ಹೊರಗೆ ಬಂದನು. ಭಯಗೊಂಡವನಾಗಿ ಯುದ್ಧರಂಗಕ್ಕೆ ಓಡಿದನು.

೪೬. ಯಾದವರೆಲ್ಲರೂ ರಥಸಹಿತನಾದ ಕಾಮನನ್ನು ನೋಡಿ ನಕ್ಕರು. ಅಲ್ಲಿದ್ದ ಎಲ್ಲ ಶಿವನ ಸೈನಿಕರೂ ಭಯದಿಂದ ಕೂಡಿದವರಾಗಿ ಒಣಗಿದ ಗಂಟಲುಳ್ಳವರಾದರು.

೪೭. ಅನಂತರ ಬಾಣನು ಮತ್ತೆ ಕೋಪಗೊಂಡವನಾಗಿ ರಥವನ್ನು ಹತ್ತಿಕೊಂಡು ಯುದ್ಧಮಾಡಲು ಬಂದನು. ಪೂಜ್ಯನಾದ ಕಾರ್ತಿಕೇಯನೂ ಕೂಡ ಕೋಪಗೊಂಡವನಾಗಿ ಯುದ್ಧಮಾಡಲು ಬಂದನು.

೪೮. ಬಾಣನು ಯುದ್ಧರಂಗದಲ್ಲಿ ಐದು ಬಾಣಗಳನ್ನೆಸೆದನು. ಮಹಾಬಲಶಾಲಿಯಾದ ಬಲದೇವನು ಅರ್ಧಚಂದ್ರಾಕಾರವಾದ ಬಾಣದಿಂದ ಆ ಬಾಣಗಳನ್ನು ತುಂಡುಮಾಡಿದನು.

ರಥಂ ಬಭಂಜ ಬಾಣಸ್ಯ ಲಾಂಗಲೇನಚ ಲಾಂಗಲೀ |
ಜಘಾನ ಸೂತಮಶ್ವಾಂಶ್ಚ ಮುಸಲೇನಾವಲೀಲಯಾ || ೪೯ ||

ಕುರ್ವಂತಮುದ್ಯಮಂ ಚ್ಛೇತ್ತುಂ ಹಲಿನಂ ಚ ಮಹಾಬಲಃ |
ಕಾಲಾಗ್ನಿರುದ್ರೋ ಭಗವಾನ್ವಾರಯಾಮಾಸ ಲೀಲಯಾ || ೫೦ ||

ರಥಂ ಕಾಲಾಗ್ನಿರುದ್ರಸ್ಯ ಬಭಂಜ ಲಾಂಗಲೀ ರುಷಾ
ಹಲೇನ ಸೂತಮಶ್ವಾಂಶ್ಚ ಜಘಾನ ರಣಮೂರ್ಧನಿ || ೫೧ ||

ಕಾಲಾಗ್ನಿರುದ್ರಃ ಕೋಪೇನ ಚಿಕ್ಷೇಪ ಜ್ವರಮುಲ್ಬಣಂ |
ಬಭೂವುರ್ಯಾದವಾಃ ಸರ್ವೇ ಜ್ವರಾಕ್ರಾಂತಾ ಹರಿಂ ವಿನಾ || ೫೨ ||

ತಂ ದೃಷ್ಟ್ವಾ ಭಗವಾನ್ಕೃಷ್ಣಃ ಸಸರ್ಜ ವೈಷ್ಣವಂ ಜ್ವರಂ |
ತಂ ಚಿಕ್ಷೇಪ ಜ್ವರಂ ಹಂತುಂ ಮಾಹೇಶಂ ರಣಮೂರ್ಧನಿ || ೫೩ ||

---

೪೯. ಬಲದೇವನು ತನ್ನ ಹಲಾಯುಧದಿಂದ ಬಾಣನ ರಥವನ್ನು ಮುರಿದು ಹಾಕಿದನು. ಮತ್ತು ಮುಸಲಾಯುಧದಿಂದ ಸಾರಥಿಯನ್ನೂ ಕುದುರೆಗಳನ್ನೂ ತಿರಸ್ಕಾರದಿಂದ ಕೊಂದನು.

೫೦. ಕಡಿಯಲು ಪ್ರಯತ್ನ ಮಾಡುತ್ತಿರುವ ಬಲದೇವನನ್ನು ಮಹಾಬಲ ಶಾಲಿಯಾದ ಪೂಜ್ಯನಾದ ಕಾಲಾಗ್ನಿರುದ್ರನು ತಡೆದನು.

೫೧. ಬಲದೇವನು ಕೋಪಗೊಂಡವನಾಗಿ ಕಾಲಾಗ್ನಿರುದ್ರನ ರಥವನ್ನು ಮುರಿದನು. ಮತ್ತು ಯುದ್ಧರಂಗದಲ್ಲಿ ತನ್ನ ಹಲಾಯುಧದಿಂದ ಅವನ ಸಾರಥಿಯನ್ನೂ ಕುದುರೆಗಳನ್ನೂ ಹೊಡೆದನು.

೫೨. ಕಾಲಾಗ್ನಿರುದ್ರನು ಕೋಪಗೊಂಡವನಾಗಿ ತೀಕ್ಷ್ಣವಾದ ಜ್ವರಾಸ್ತ್ರವನ್ನೆಸೆದನು. ಅದರಿಂದ ಹರಿಯನ್ನು ಬಿಟ್ಟು ಉಳಿದ ಸಕಲ ಯಾದವರೂ ಜ್ವರದಿಂದ ಆವರಿಸಲ್ಪಟ್ಟವರಾದರು.

೫೩. ಅದನ್ನು ನೋಡಿ ಪೂಜ್ಯನಾದ ಕೃಷ್ಣನು ಯುದ್ಧರಂಗದಲ್ಲಿ ಮಾಹೇಶ್ವರ ಜ್ವರವನ್ನು ನಾಶಮಾಡಲೋಸ್ಕರ ವೈಷ್ಣವ ಜ್ವರವನ್ನು ಸೃಷ್ಟಿಮಾಡಿ ಅದನ್ನೆಸೆದನು.

ಬಭೂವ ಜ್ವರಯೋರ್ಯುದ್ಧಂ ಮುಹೂರ್ತಮತಿದಾರುಣಂ ।
ವೈಷ್ಣವಜ್ವರನಿಷ್ಕ್ರಾಂತೋ ರಣಮೂರ್ಧ್ನಿ ಪಪಾತ ಸಃ ॥
ಪರಂ ಬಭೂವ ನಿಶ್ಚೇಷ್ಟಸ್ತುಷ್ಟಾವ ಮಾಧವಂ ಪುನಃ ॥ ೫೪ ॥

॥ ಜ್ವರ ಉವಾಚ ॥

ಪ್ರಾಣಾನ್ರಕ್ಷ ಜಗನ್ನಾಥ ಭಕ್ತಾನುಗ್ರಹವಿಗ್ರಹ ।
ತ್ವಮಾತ್ಮಾ ಪುರುಷಃ ಪೂರ್ಣಃ ಸರ್ವತ್ರ ಸಮತಾ ತವ ॥ ೫೫ ॥

ಜ್ವರಸ್ಯ ವಚನಂ ಶ್ರುತ್ವಾ ಸಂಜಹಾರ ಸ್ವಕಂ ಜ್ವರಂ ।
ಮಾಹೇಶ್ವರೋ ಜ್ವರೋ ಭೀತೋ ರಣಾದೇವ ಹಿ ನಿರ್ಯಯೌ ॥ ೫೬ ॥

ಬಾಣಶ್ಚ ಪುನರಾಗತ್ಯ ಬಾಣಾನಾಂ ಚ ಸಹಸ್ರಕಂ ।
ಚಿಕ್ಷೇಪ ಮಂತ್ರಪೂತಂ ಚ ಪ್ರಲಯಾಗ್ನಿಶಿಖೋಪಮಂ ॥ ೫೭ ॥

---

೫೪. ಈ ಎರಡು ಜ್ವರಗಳಿಗೂ ಒಂದು ಮುಹೂರ್ತಕಾಲ ಮಹಾ ಭಯಂಕರವಾದ ಯುದ್ಧವಾಯಿತು. ವೈಷ್ಣವ ಜ್ವರದಿಂದ ಆವರಿಸಲ್ಪಟ್ಟ ಮಾಹೇಶ್ವರ ಜ್ವರವು ರಣರಂಗದಲ್ಲಿ ಬಿದ್ದಿತು. ಮತ್ತು ಚಲಿಸದಂತಾಯಿತು. ಆಗ ಜ್ವರವು ಮಾಧವನನ್ನು ಸ್ತೋತ್ರಮಾಡಿತು

ಜ್ವರವು ಹೇಳುವುದು:-

೫೫-೫೬. ಜಗದೊಡನೇ ! ಭಕ್ತರಿಗೆ ಅನುಗ್ರಹ ಮಾಡಲೋಸ್ಕರ ಶರೀರವನ್ನು ಧರಿಸಿರುವವನೇ! ನನ್ನ ಪ್ರಾಣಗಳನ್ನು ಕಾಪಾಡು. ನೀನು ಪುರುಷನೂ ಪರಿಪೂರ್ಣನೂ ಆದ ಆತ್ಮನಾಗಿರುವಿ. ನಿನಗೆ ಎಲ್ಲ ವಸ್ತುವಿನಲ್ಲಿಯೂ ಸಮಭಾವನೆಯಿರುವುದು. ಜ್ವರವಾಡಿದ ಮಾತನ್ನು ಕೇಳಿ ಪರಮಾತ್ಮನು ತನ್ನ ಜ್ವರವನ್ನು ಹಿಂದಕ್ಕೆ ತೆಗೆದುಕೊಂಡನು. ಮಾಹೇಶ್ವರ ಜ್ವರವು ಹೆದರಿ ಯುದ್ಧರಂಗದಿಂದ ಶೀಘ್ರವಾಗಿ ಓಡಿಹೋಯಿತು.

೫೭. ಬಾಣನೂ ಮತ್ತೆ ಬಂದು ಮಂತ್ರದಿಂದ ಪರಿಶುದ್ಧವಾದ ಪ್ರಳಯ ಕಾಲದ ಅಗ್ನಿಯ ಜ್ವಾಲೆಗೆ ಸಮನಾದ ಸಾವಿರ ಬಾಣಗಳನ್ನೆಸೆದನು.

ಫಾಲ್ಗುನಃ ಶರಜಾಲೇನ ವಾರಯಾಮಾಸ ಲೀಲಯಾ ।
ಚಿಕ್ಷೇಪ ಶಕ್ತಿಂ ಬಾಣಶ್ಚ ಗ್ರೀಷ್ಮಸೂರ್ಯಸಮಪ್ರಭಾಂ ॥ ೫೮ ॥

ಚಿಚ್ಛೇದ ಲೀಲಯಾ ತಾಂ ಚ ಸವ್ಯಸಾಚೀ ಮಹಾಬಲಃ ।
ಸ ಜಗ್ರಾಹ ಪಾಶುಪತಂ ಶತಸೂರ್ಯಸಮಪ್ರಭಂ ॥ ೫೯ ॥

ಅವ್ಯರ್ಥಮತಿಘೋರಂ ಚ ವಿಶ್ವಸಂಹಾರಕಾರಕಂ ।
ತದ್ದೃಷ್ಟ್ವಾ ಚಕ್ರಪಾಣಿಶ್ಚ ಚಕ್ರಂ ಚಿಕ್ಷೇಪ ದಾರುಣಂ ॥ ೬೦ ॥

ಹಸ್ತಿನಾಂ ಚ ಸಹಸ್ರಂ ಚ ಸ ಪಾಶುಪತಮುಲ್ಬಣಂ ।
ಚಿಚ್ಛೇದ ರಣಮಧ್ಯೇ ಚ ಪಪಾತಾಚಲಸಿಂಹವತ್ ॥ ೬೧ ॥

ಶಸ್ತ್ರಂ ಪಾಶುಪತಂ ಚೈವ ಯಯೌ ಪಶುಪತೇಃ ಕರಂ ।
ಅವ್ಯರ್ಥಂ ದಾರುಣಂ ಲೋಕೇ ಪ್ರಲಯಾಗ್ನಿಶಿಖೋಪಮಂ ॥ ೬೨ ॥

---

೫೮. ಅರ್ಜುನನು ಬಾಣಗಳ ಸಮೂಹದಿಂದ ಸುಲಭವಾಗಿ ಅದನ್ನು ಪರಿಹರಿಸಿದನು. ಬಾಣನು ಗ್ರೀಷ್ಮಕಾಲ ಸೂರ್ಯನಿಗೆ ಸಮನಾದ ಕಾಂತಿಯಿಂದ ಕೂಡಿದ ಶಕ್ತ್ಯಾಯುಧವನ್ನೆಸೆದನು.

೫೯-೬೦. ಮಹಾ ಬಲಶಾಲಿಯಾದ ಅರ್ಜುನನು ಸುಲಭವಾಗಿ ಆ ಶಕ್ತ್ಯಾಯುಧವನ್ನು ಕತ್ತರಿಸಿದನು. ಬಾಣನು ಅತ್ಯಂತ ಭಯಂಕರವೂ ಜಗತ್ತನ್ನೇ ಸಂಹಾರ ಮಾಡಲು ಸಮರ್ಥವೂ ನೂರು ಸೂರ್ಯರಿಗೆ ಸಮನಾದ ಕಾಂತಿಯಿಂದ ಕೂಡಿದುದೂ ಆದ ಪಾಶುಪತಾಸ್ತ್ರವನ್ನು ತೆಗೆದುಕೊಂಡನು. ಅದನ್ನು ನೋಡಿ ಕೃಷ್ಣನು ಘೋರನಾದ ಚಕ್ರವನ್ನು ಬಿಟ್ಟನು.

೬೧. ಅದರಿಂದ ಒಂದು ಸಾವಿರ ಆನೆಗಳನ್ನು ಭಯಂಕರವಾದ ಪಾಶುಪತಾಸ್ತ್ರವನ್ನೂ ಕತ್ತರಿಸಿದನು ಅದು ಯುದ್ಧರಂಗದಲ್ಲಿ ದೊಡ್ಡ ಬೆಟ್ಟದಂತೆ ಬಿದ್ದಿತು.

೬೨. ಲೋಕದಲ್ಲಿ ಯಾವತ್ತೂ ವ್ಯರ್ಥವಾಗದ ಭಯಂಕವಾದ ಪ್ರಳಯ ಕಾಲದ ಅಗ್ನಿ ಜ್ವಾಲೆಗೆ ಸಮನಾದ ಪಾಶುಪತಾಸ್ತ್ರವು ಈಶ್ವರನ ಕೈಯನ್ನು ಸೇರಿತು.

ಬಾಣರಕ್ತಸಮೂಹೇನ ಬಭೂವ ಚ ಮಹಾನದಃ ।
ಬಾಣಃ ಪಪಾತ ನಿಶ್ಚೇಷ್ಟೋ ವ್ಯಥಿತೋ ಹತಚೇತನಃ ॥ ೬೩ ॥

ತತ್ರಾಜಗಾಮ ಭಗವಾನ್ಮಹಾದೇವೋ ಜಗದ್ಗುರುಃ ।
ರುರೋದಾಗತ್ಯ ಮೋಹೇನ ಬಾಣಂ ಕೃತ್ವಾ ಸ್ವವಕ್ಷಸಿ ॥ ೬೪ ॥

ಶಿವಾಶ್ರುಪತನೇನೈವ ಸಂಬಭೂವ ಸರೋವರಂ ।
ಚೇತನಂ ಕಾರಯಾಮಾಸ ಕರುಣಾಸಾಗರಃ ಪ್ರಭುಃ ॥ ೬೫ ॥

ಬಾಣಂ ಗೃಹೀತ್ವಾ ಪ್ರಯಯೌ ಯತ್ರ ದೇವೋ ಜನಾರ್ದನಃ ।
ಚಕ್ರೇ ಪದ್ಮಾರ್ಚಿತೇ ಪಾದಪದ್ಮೇ ಬಾಣಸಮರ್ಪಣಂ ॥ ೬೬ ॥

ತುಷ್ಟಾವ ಜಗತಾಂ ನಾಥಂ ಭಕ್ತೇಶಂ ಚಂದ್ರಶೇಖರಃ ।
ಬಲಿನಾ ಚ ಸ್ತುತಂ ಯೇನ ವೇದೋಕ್ತೇನ ಚ ತೇನ ಚ ॥ ೬೭ ॥

ಹರಿರ್ಮೃತ್ಯುಂಜಯಂ ಜ್ಞಾನಂ ದದೌ ಬಾಣಾಯ ಧೀಮತೇ ।
ಕರಪದ್ಮಂ ದದೌ ಗಾತ್ರೇ ತಂ ಚಕಾರಾಜರಾಮರಂ ॥ ೬೮ ॥

---

೬೩. ಬಾಣನ ರಕ್ತಸಮೂಹದಿಂದ ದೊಡ್ಡದಾದ ನದಿಯೇ ಆಯಿತು. ಬಾಣನೂ ಕೂಡ ವ್ಯಥೆಗೊಂಡವನಾಗಿ ಪ್ರಜ್ಞೆಇಲ್ಲದವನಾಗಿ ಬಿದ್ದನು.

೬೪ ಅಲ್ಲಿಗೆ ಪೂಜ್ಯನೂ ಜಗತ್ತಿಗೆ ಗುರುವೂ ಆದ ಮಹಾದೇವನು ಬಂದನು. ಅವನು ಬಂದು ಬಾಣನನ್ನು ತನ್ನ ಎದೆಗೆ ಅಪ್ಪಿಕೊಂಡು ಭ್ರಾಂತಿಯಿಂದ ಅತ್ತನು.

೬೫. ಈಶ್ವರನ ಕಣ್ಣೀರು ಬಿದ್ದುದರಿಂದ ಅದೊಂದು ಸರೋವರವಾಯಿತು. ದಯಾ ಸಮುದ್ರನಾದ ಪ್ರಭುವು ಬಾಣನಿಗೆ ಜ್ಞಾನವನ್ನುಂಟುಮಾಡಿದನು.

೬೬. ಬಾಣನನ್ನು ಕರೆದುಕೊಂಡು ಜನಾರ್ಧನನಾದ ದೇವನಿರುವಲ್ಲಿಗೆ ಹೋದನು. ಲಕ್ಷ್ಮಿಯಿಂದ ಪೂಜಿಸಲ್ಪಟ್ಟ ಆದೇವನ ಪಾದ ಕಮಲಗಳಲ್ಲಿ ಬಾಣನನ್ನರ್ಪಿಸಿದನು.

೬೭. ಚಂದ್ರಶೇಖರನಾದ ಪರಮೇಶ್ವರನು ಜಗನ್ನಾಥನೂ ಭಕ್ತರಿಗೆ ಈಶ್ವರನೂ ಆದ ಆ ಪರಮಾತ್ಮನನ್ನು ಬಲಿಯು ಯಾವ ವೇದೋಕ್ತವಾದ ಸ್ತುತಿಗಳಿಂದ ಸ್ತೋತ್ರ ಮಾಡಿದ್ದನೋ ಅದರಿಂದ ಸ್ತೋತ್ರ ಮಾಡಿದನು.

೬೮. ಹರಿಯು ಮೃತ್ಯುಂಜಯ ಜ್ಞಾನವನ್ನು ಬುದ್ಧಿವಂತವಾದ ಬಾಣನಿಗೆ ಕೊಟ್ಟನು. ಮತ್ತು ಅವನ ಶರೀರದಮೇಲೆ ತನ್ನ ಕಮಲದಂತಿರುವ ಕೈಯನ್ನಿಟ್ಟು ಅವನನ್ನು ಮುಪ್ಪು ಸಾವುಗಳಿಲ್ಲದವನನ್ನಾಗಿ ಮಾಡಿದನು.

ಬಾಣಃ ಸ್ತೋತ್ರೇಣ ತುಷ್ಟಾವ ಭಕ್ತ್ಯಾ ಬಲಿಕೃತೇನ ಚ ।
ವರಾಂ ಕನ್ಯಾಂ ಸಮಾನೀಯ ರತ್ನಭೂಷಣಭೂಷಿತಾಂ ॥ ೧೯ ॥

ಪ್ರದದೌ ಹರಯೇ ಭಕ್ತ್ಯಾ ತತ್ರೈವ ದೇವಸಂಸದಿ ।
ಗಜೇಂದ್ರಾಣಾಂ ಪಂಚಲಕ್ಷಮಶ್ವಾನಾಂ ಚ ಚತುರ್ಗುಣಂ ॥ ೨೦ ॥

ದಾಸೀನಾಂ ಚ ಸಹಸ್ರಂ ಚ ರತ್ನಭೂಷಣಭೂಷಿತಂ ।
ಸಹಸ್ರಂ ಕಾಮಧೇನೂನಾಂ ವತ್ಸಯುಕ್ತಂ ಚ ಸರ್ವದಂ ॥ ೨೧ ॥

ಮಾಣಿಕ್ಯಾನಾಂ ಚ ಮುಕ್ತಾನಾಂ ರತ್ನಾನಾಂ ಶತಲಕ್ಷಕಂ ।
ಮಣೀಂದ್ರಾಣಾಂ ಹೀರಕಾಣಾಂ ಶತಲಕ್ಷಂ ಮನೋಹರಂ ॥ ೨೨ ॥

ಜಲಭಾಜನಪಾತ್ರಾಣಿ ಸುವರ್ಣನಿರ್ಮಿತಾನಿ ಚ ।
ಸಹಸ್ರಾಣಿ ದದೌ ತಸ್ಮೈ ಭಕ್ತಿನಮ್ರಾತ್ಮಕಂಧರಃ ॥ ೨೩ ॥

ವರಾಣಿ ಸೂಕ್ಷ್ಮವಸ್ತ್ರಾಣಿ ವಹ್ನಿಶುದ್ಧಾಂಶುಕಾನಿ ಚ ।
ದದೌ ಬಾಣಶ್ಚ ಸರ್ವಾಣಿ ಸ್ವಭಕ್ತ್ಯಾ ಶಂಕರಾಜ್ಞಯಾ ॥ ೨೪ ॥

---

೧೯–೨೧ ಬಾಣನು ಭಕ್ತಿಪೂರ್ವಕವಾಗಿ ಬಲಿಯು ಮಾಡಿದ ವೇದೋಕ್ತವಾದ ಸ್ತೋತ್ರಗಳಿಂದ ಸ್ತುತಿಸಿದನು. ಮತ್ತು ರತ್ನಾಭರಣಗಳಿಂದ ಅಲಂಕರಿಸಲ್ಪಟ್ಟ ಉತ್ತಮಳಾದ ಕನ್ಯೆಯನ್ನು ಕರೆತಂದು ಅಲ್ಲಿಯೇ ದೇವತೆಗಳಿರ್ದುದಸಲ್ಲಿ ಭಕ್ತಿಯಿಂದ ಹರಿಗೆ ಕೊಟ್ಟನು. ಐದುಲಕ್ಷ ಆನೆಗಳನ್ನೂ ಅದರ ನಾಲ್ಕರಷ್ಟು ಕುದುರೆಗಳನ್ನೂ ಸಾವಿರ ದಾಸಿಯರನ್ನೂ ರತ್ನಾಭರಣಗಳಿಂದ ಅಲಂಕರಿಸಲ್ಪಟ್ಟ ಕರುಗಳಿಂದ ಕೂಡಿದ ಸಾವಿರ ಕಾಮಧೇನುಗಳನ್ನೂ ಕೊಟ್ಟನು.

೨೨ ಮಾಣಿಕ್ಯ ಮುತ್ತು ರತ್ನಗಳ ಒಂದು ನೂರು ಲಕ್ಷಗಳನ್ನು ಕೊಟ್ಟನು. ಹೀರಕವೆಂಬ ಶ್ರೇಷ್ಠವಾದ ಮತ್ತು ಮನೋಹರವಾದ ಒಂದು ಲಕ್ಷ ಮಣಿ ಶ್ರೇಷ್ಠಗಳನ್ನು ಕೊಟ್ಟನು.

೨೩ ಚಿನ್ನದಿಂದ ಮಾಡಿದ ಒಂದು ಸಾವಿರ ನೀರಿನ ಪಾತ್ರೆಗಳನ್ನು ಭಕ್ತಿಯಿಂದ ತಲೆ ಬಾಗಿಸಿದವನಾಗಿ ಆ ಪರಮಾತ್ಮನಿಗೆ ಕೊಟ್ಟನು.

೨೪ ಉತ್ತಮವಾದ ಸೂಕ್ಷ್ಮವಾದ ಬಟ್ಟೆಗಳನ್ನೂ ಅಗ್ನಿಯಂತೆ ಶುಭ್ರವಾದ ಬಟ್ಟೆಗಳನ್ನೂ ಶಂಕರನ ಅಪ್ಪಣೆಯಿಂದ ಬಾಣನು ಹರಿಗೆ ಅರ್ಪಿಸಿದನು.

ತಾಂಬೂಲಾನಾಂ ಚ ಚೂರ್ಣಾನಾಂ ಪೂರ್ಣಪಾತ್ರಾಣಿ ನಾರದ ।
ಸಹಸ್ರಾಣಿ ದದೌ ಭಕ್ತ್ಯಾ ವರಾಣಿ ವಿವಿಧಾನಿ ಚ ॥ ೭೫ ॥

ಕನ್ಯಾಂ ಸಮರ್ಪಯಾಮಾಸ ಪಾದಪದ್ಮೇ ಹರೇರಪಿ ।
ರುರೋದೋಚ್ಚೈಃ ಸ್ವಭಕ್ತ್ಯಾ ಚ ಪರಿಹಾರಂ ಚಕಾರ ಸಃ ॥ ೭೬ ॥

ಕೃಷ್ಣಸ್ತಸ್ಮೈ ವರಂ ದತ್ವಾ ವೇದೋಕ್ತಂ ಚ ಸುಭಾಷಿತಂ ।
ಶಂಕರಾನುಮತೇನೈವ ಪ್ರಯಯೌ ದ್ವಾರಕಾಂ ಪುರೀಂ ॥ ೭೭ ॥

ಗತ್ವಾ ಕನ್ಯಾಂ ನವೋಢಾಂ ತಾಂ ಬಾಣಸ್ಯಾಪಿ ಮಹಾತ್ಮನಃ ।
ರುಕ್ಮಿಣ್ಯೈ ಪ್ರದದೌ ಶೀಘ್ರಂ ದೇವಕ್ಯೈ ಚ ಹರಿಃ ಸ್ವಯಂ ॥ ೭೮ ॥

ಮಹೋತ್ಸವಂ ಮಂಗಲಂ ಚ ಕಾರಯಾಮಾಸ ಯತ್ನತಃ ।
ಬ್ರಾಹ್ಮಣಾನ್ಭೋಜಯಾಮಾಸ ಬ್ರಾಹ್ಮಣೇಭ್ಯೋ ಧನಂ ದದೌ ॥ ೭೯ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ ಉತ್ತರಾರ್ಧೇ ನಾರಾಯಣನಾರದ ಸಂವಾದೇ ಬಾಣಯುದ್ಧಂ ನಾಮ ವಿಂಶತ್ಯಧಿಕಶತತಮೋಽಧ್ಯಾಯಃ ॥

---

೭೫ ಎಲೈ ನಾರದನೇ! ನಾನಾವಿಧವಾದ ಅತ್ಯುತ್ತಮವಾದ ತಾಂಬೂಲ ಚೂರ್ಣಗಳಿಂದ ತುಂಬಿದ ಸಾವಿರ ಪಾತ್ರೆಗಳನ್ನು ಭಕ್ತಿಯಿಂದ ಕೊಟ್ಟನು.

೭೬ ಶ್ರೀಹರಿಯ ಪಾದಕಮಲಗಳಲ್ಲಿ ಕನ್ಯೆಯನ್ನು ಸಮರ್ಪಿಸಿದನು. ಮತ್ತು ಗಟ್ಟಿಯಾಗಿ ಅತ್ತನು. ತನ್ನ ಭಕ್ತಿಗನುಸಾರವಾಗಿ ಉಪಚರಿಸಿದನು.

೭೭ ಕೃಷ್ಣನು ಆ ಬಾಣನಿಗೆ ವರವನ್ನು ಕೊಟ್ಟು ವೇದೋಕ್ತವಾದ ಮಂಗಳಾ ಶೀರ್ವಾದವನ್ನು ಮಾಡಿ ಶಂಕರನ ಅನುಮತಿಯೊಡನೆ ದ್ವಾರಕಾಪಟ್ಟಣಕ್ಕೆಹೋದನು.

೭೮ ದ್ವಾರಕಿಗೆ ಹೋಗಿ ಮಹಾತ್ಮನಾದ ಬಾಣನ ಹೊಸ ಯೌವನದಿಂದ ಕೂಡಿದ ಆ ಕನ್ಯೆಯನ್ನು ಹರಿಯು ರುಕ್ಮಿಣಿಗೂ ದೇವಕಿಗೂ ಒಪ್ಪಿಸಿದನು.

೭ ಮತ್ತು ಮಂಗಲಕರವಾದ ಮಹೋತ್ಸವವನ್ನು ಆಸಕ್ತಿಯಿಂದ ಮಾಡಿಸಿದನು. ಬ್ರಾಹ್ಮಣ ಸಮಾರಾಧನೆಯನು ಮಾಡಿಸಿದನು. ಬ್ರಾಹ್ಮಣರಿಗೆ ಧನವನ್ನು ಕೊಟ್ಟನು.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣ ಜನ್ಮಖಂಡದ ಉತ್ತರಾರ್ಧದ ನಾರಾಯಣ ನಾರದ ಸಂವಾದದಲ್ಲಿ ಬಾಣಯುದ್ಧವೆಂಬ ನೂರಇಪ್ಪತ್ತನೆಯ ಅಧ್ಯಾಯವು ಸಮಾಪ್ತವಾದುದು.

---

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಏಕವಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರಾಯಣ ಉವಾಚ ||

ಅಥ ಕೃಷ್ಣಃ ಸುಧರ್ಮಾಯಾಂ ನಿವಸನ್ಸ್ವಗಣಸ್ತಥಾ |
ತತ್ರಾಜಗಾಮ ವಿಪ್ರಶ್ಚ ಪ್ರಜ್ವಲನ್ಬ್ರಹತೇಜಸಾ || ೧ ||

ಆಗತ್ಯ ದೃಷ್ಟ್ವಾ ತುಷ್ಟಾವ ಭಕ್ತ್ಯಾ ಚ ಪುರುಷೋತ್ತಮಂ |
ಉವಾಚ ಮಧುರಂ ಶಾಂತೋ ಭೀತೋ ವಿನಯಪೂರ್ವಕಂ || ೨ ||

|| ಬ್ರಾಹ್ಮಣ ಉವಾಚ ||

ಶೃಗಾಲೋ ವಾಸುದೇವಶ್ಚ ರಾಜೇಶೋ ಮಂಡಲೇಶ್ವರಃ |
ತ್ವಾಮುವಾಚ ಸ ಯದ್ವಾಕ್ಯಂ ಸಾವಧಾನಂ ನಿಶಾಮಯ || ೩ ||

---

ನಾರಾಯಣನು ಹೇಳುತ್ತಾನೆ :—

೧ ಅನಂತರ ಕೃಷ್ಣನು ತನ್ನ ಪರಿವಾರದೊಡನೆ ದೇವತೆಗಳ ಸಭಾ ಮಧ್ಯದಲ್ಲಿರಲು ಒಬ್ಬಾನೊಬ್ಬ ಬ್ರಾಹ್ಮಣನು ಬ್ರಹ್ಮ ತೇಜಸ್ಸಿನಿಂದ ಪ್ರಕಾಶಿಸುತ್ತಿರುವವನಾಗಿ ಅಲ್ಲಿಗೆ ಬಂದನು.

೨ ಅಲ್ಲಿಗೆ ಬಂದು ಪುರುಷೋತ್ತಮನನ್ನು ನೋಡಿ ಭಕ್ತಿಯಿಂದ ಸ್ತೋತ್ರ ಮಾಡಿದನು. ಮತ್ತು ಶಾಂತನಾಗಿ ಭಯದಿಂದ ಕೂಡಿದವನಾಗಿ ವಿನಯಪೂರ್ವಕವಾಗಿ ಮಧುರವಾದ ಮಾತನಾಡಿದನು.

ಬ್ರಾಹ್ಮಣನು ಹೇಳುತ್ತಾನೆ :—

೩ ರಾಜಶ್ರೇಷ್ಠನೂ ಮಂಡಲೇಶ್ವರನೂ ಆದ ಶೃಗಾಲವಾಸುದೇವನು ನಿನ್ನನ್ನು ಕುರಿತು ಹೇಳಿಕಳುಹಿಸಿರುವ ಮಾತನ್ನು ನೀನು ಸಮಾಧಾನ ಮನಸ್ಸಿನಿಂದ ಕೇಳುವವನಾಗು.

|| ಶೃಗಾಲ ಉವಾಚ ||

ವೈಕುಂಠೇ ವಾಸುದೇವೋಽಹಂ ದೇವೇಶಶ್ಚ ಚತುರ್ಭುಜಃ |
ಲಕ್ಷ್ಮೀಪತಿಶ್ಚ ಜಗತಾಂ ಧಾತಾ ಧಾತುಶ್ಚ ಪಾಲಕಃ || ೪ ||

ಬ್ರಹ್ಮಣಾ ಪ್ರಾರ್ಥಿತೋಽಹಂ ಚ ಭಾರಾವತರಣಾಯ ಚ |
ಭುವೋ ಭಾರತವರ್ಷಂ ಚ ತದರ್ಥಂ ಗಮನಂ ಮಮ || ೫ ||

ವಸುದೇವಸುತೋ ವೈಶ್ಯಃ ಕ್ಷತ್ರಿಯಶ್ಚಾಪ್ಯಹಂ ಕೃತಃ |
ಜನಂ ಜನೇನ ನಿರ್ಜಿತ್ಯ ದುರ್ಬಲಂ ಬಲಿನಾ ಸಹ |
ಯೋಧಯಿತ್ವಾ ಮಹಾಧೂರ್ತೋ ಘಾತಯಾಮಾಸ ಭೂಪತೀನ್ || ೬ ||

ದುರ್ಯೋಧನಂ ಜರಾಸಂಧಂ ಭೂಪಮನ್ಯಂ ಚ ದುರ್ಬಲಂ |
ಭೀಮೇನ ಘಾತಯಾಮಾಸ ಬಲಿನಾಲ್ಪೇನ ಭೂತಲೇ || ೭ ||

---

ಶೃಗಾಲನು ಹೇಳುತ್ತಾನೆ :—

೪ "ನಾನು ವೈಕುಂಠದಲ್ಲಿ ವಾಸುದೇವನಾಗಿ ನಾಲ್ಕು ತೋಳುಗಳನ್ನು ಹೊಂದಿ ದೇವೇಶನೂ ಲಕ್ಷ್ಮೀಪತಿಯೂ ಪ್ರಪಂಚಗಳನ್ನು ಸೃಷ್ಟಿಮಾಡುವವನೂ ಬ್ರಹ್ಮನಿಗೂ ರಕ್ಷಕನೂ ಆಗಿರುವೆನು.

೫ ಭೂಮಿಯ ಭಾರವನ್ನಿಳುಹುವುದಕ್ಕೋಸ್ಕರ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿರುತ್ತೇನೆ. ಅದಕ್ಕಾಗಿಯೇ ಭರತಖಂಡಕ್ಕೆ ನಾನು ಬಂದಿರುವುದು".

೬ ಈ ಪ್ರಕಾರವಾಗಿ ಹೇಳಿಕೊಳ್ಳುತ್ತ ವಸುದೇವನ ಮಗನಾದ ವೈಶ್ಯನು ಕ್ಷತ್ರಿಯನಾಗಿ ಅಹಂಕಾರದಿಂದ ಮಹಾಧೂರ್ತನಾಗಿ ಜನರನ್ನು ಜನರಿಂದಲೇ ಜಯಿಸಿ ದುರ್ಬಲರಾದ ರಾಜರನ್ನು ಬಲಿಷ್ಠರಾದವರಿಂದ ಯುದ್ಧಮಾಡಿಸಿ ಕೊಲ್ಲಿಸಿರುವನು.

೭ ಭೂಮಿಯಲ್ಲಿ ಅಲ್ಪಬಲವುಳ್ಳ ಭೀಮನಿಂದ ದುರ್ಯೋಧನನನ್ನೂ ಜರಾಸಂಧನನ್ನೂ ಇನ್ನೂ ದುರ್ಬಲರಾದ ಇತರ ರಾಜರನ್ನೂ ಕೊಲ್ಲಿಸಿದನು.

ದ್ರೋಣಂ ಭೀಷ್ಮಂ ಚ ಕರ್ಣಂ ಚ ಯಂ ಯಮನ್ಯಂ ಚ ಭೂತಲೇ ।
ಬಲೀಯಸಾರ್ಜುನೇನೈವ ಘಾತಯಾಮಾಸ ಲೀಲಯಾ ॥ ೮ ॥

ಯಂ ಯಮನ್ಯಂ ದುರ್ಬಲಂ ಚ ಪ್ರಸಿದ್ಧಮಪ್ರಸಿದ್ಧಕಂ ।
ಪ್ರಸಿದ್ಧೇನ ಬಲವತಾ ಘಾತಯಾಮಾಸ ಲೀಲಯಾ ॥ ೯ ॥

ಶಿಶುಪಾಲಂ ದಂತವಕ್ತ್ರಂ ಕಂಸಂ ಚ ಚಿರರೋಗಿಣಂ ।
ಮತ್ಪುತ್ರಂ ನರಕಂ ಚೈವ ದುರ್ಬಲಂ ಕೇಶಿನಂ ಮುರಂ ॥ ೧೦ ॥

ಸ್ವಯಂ ಜಘಾನ ಸಂಕೇತಾಚ್ಛಲೇನ ಸಹಸಾ ಬತ ।
ನ ಧರ್ಮಯುದ್ಧೇ ಕಪಟೇ ಸ ಚ ಬಾಲೋಽಹ್ಯಧಾರ್ಮಿಕಃ ॥ ೧೧ ॥

ಜಘಾನ ಪೂತನಾಂ ಕುಬ್ಜಾಂ ಸ್ತ್ರೀಘಾತೀ ವಸ್ತ್ರಹೇತುನಾ ।
ಜಘಾನ ರಜಕಂ ಶಿಷ್ಟಮಶಿಷ್ಟಶ್ಚ ಪ್ರತಾರಕಃ ॥ ೧೨ ॥

ಹಿರಣ್ಯಕಶಿಪುಂ ದೈತ್ಯಂ ಹಿರಣ್ಯಾಕ್ಷಂ ಮಹಾಬಲಂ ।
ಮಧುಂ ಚ ಕೈಟಭಂ ಚೈವ ಹತ್ವಾಹಂ ಸೃಷ್ಟಿರಕ್ಷಕಃ ॥ ೧೩ ॥

---

೮ ದ್ರೋಣನನ್ನೂ ಭೀಷ್ಮನನ್ನೂ ಕರ್ಣನನ್ನೂ ಇನ್ನೂ ಭೂಮಿಯಲ್ಲಿರುವ ಬೇರೆಬೇರೆಯವರನ್ನೂ ಬಲವಂತನಾದ ಅರ್ಜುನನಿಂದ ಸುಲಭವಾಗಿ ಕೊಲ್ಲಿಸಿದನು.

೯ ಇನ್ನೂ ಬೇರೆಯ ದುರ್ಬಲರೂ ಪ್ರಸಿದ್ಧರೂ ಆದವರನ್ನೆಲ್ಲ ಪ್ರಸಿದ್ಧನೂ ಬಲಿಷ್ಠನೂ ಆದ ಅರ್ಜುನನಿಂದ ಕೊಲ್ಲಿಸಿದನು.

೧೦–೧೧. ಶಿಶುಪಾಲನನ್ನೂ ದಂತವಕ್ರನನ್ನೂ ಚಿರರೋಗಿಯಾದ ಕಂಸನನ್ನೂ ನನ್ನ ಮಗನಾದ ನರಕನನ್ನೂ ಬಲವಿಲ್ಲದ ಕೇಶಿಯನ್ನೂ ಮುರನನ್ನೂ ಬಾಲಕನೂ ಕಪಟಿಯೂ ಧರ್ಮದಿಂದ ದೂರನಾದವನೂ ಆದ ಆ ವಾಸುದೇವನು ಧರ್ಮಯುದ್ಧದಿಂದಲ್ಲದೆ ಕೇವಲ ಕಪಟ ಯುದ್ಧದಿಂದ ತಾನೇ ಕೊಂದನು.

೧೨. ಪೂತನಿಯನ್ನೂ ಕುಬ್ಜೆಯನ್ನೂ ಕೊಂದು ಸ್ತ್ರೀಘಾತುಕನಾಗಿರುವನು. ಬಟ್ಟೆಗೋಸ್ಕರವಾಗಿ ಧಾರ್ಮಿಕನಾದ ಅಗಸನನ್ನು ಕೊಂದು ಅಧರ್ಮ ನಿಂತನೂ ಮೋಸಗಾರನೂ ಆಗಿರುವನು.

೧೩–೧೪. "ದೈತ್ಯನಾದ ಹಿರಣ್ಯಕಶಿಪುವನ್ನೂ ಮಹಾಬಲಿಷ್ಠನಾದ ಹಿರಣ್ಯಾಕ್ಷನನ್ನೂ ಮಧುವನ್ನೂ ಕೈಟಭನನ್ನೂ ಕೊಂದು ನಾನೇ ಈ ಸೃಷ್ಟಿಯನ್ನು ಪಾಲಿಸುತ್ತಿರು

ಅಹಮೇವ ಸ್ವಯಂ ಬ್ರಹ್ಮಾ ಹ್ಯಹಮೇವ ಸ್ವಯಂ ಶಿವಃ ।
ಅಹಂ ವಿಷ್ಣುಶ್ಚ ಜಗತಾಂ ಪಾತಾ ದುಷ್ಟಾಪಹಾರಕಃ ॥ ೧೪ ॥

ಅಂಶೇನ ಕಲಯಾ ಸರ್ವೇ ಮನವೋ ಮುನಯಸ್ತಥಾ ।
ಸ್ವಯಂ ನಾರಾಯಣೋಽಹಂ ಚ ನಿರ್ಗುಣಃ ಪ್ರಕೃತೇಃ ಪರಃ ॥ ೧೫ ॥

ಲಜ್ಜಯಾ ಕೃಪಯಾ ಚೈವ ಮಿತ್ರಬುದ್ಧ್ಯಾ ಕ್ಷಮಾ ಕೃತಾ ।
ಯದ್ಗತಂ ತದ್ಗತಂ ಭದ್ರ ಯುದ್ಧಂ ಕುರು ಮಯಾ ಸಹ ॥ ೧೬ ॥

ಶೃಣೋಮಿ ದೂತದ್ವಾರೇಣ ಹ್ಯತೀವೋಚ್ಚೈರಹಂಕೃತಂ ।
ಉಚಿತಂ ದಮನಂ ತಸ್ಯಾಪ್ಯುನ್ನತಾನಾಂ ನಿಪಾತನಂ ॥ ೧೭ ॥

ರಾಜ್ಞಶ್ಚ ಪರಮೋ ಧರ್ಮೋಽಪ್ಯಹಂ ಶಾಸ್ತಾ ಭುವೋಽಧುನಾ ।
ಶಂಖಂ ಚಕ್ರಂ ಗದಾಂ ಪದ್ಮಂ ಗೃಹೀತ್ವಾಹಂ ಚತುರ್ಭುಜಃ ॥ ೧೮ ॥

ದ್ವಾರಕಾಂ ತಾಂ ಗಮಿಷ್ಯಾಮಿ ಯುದ್ಧಾಯ ಸಗಣಃ ಸ್ವಯಂ ।
ಯುದ್ಧಂ ಕುರು ಯದೀಚ್ಛಾಸ್ತಿ ನ ಮಾಂ ಚ ಶರಣಂ ವ್ರಜ ॥ ೧೯ ॥

---

ವೆನು. ನಾನೇ ಸಾಕ್ಷಾತ್ ಬ್ರಹ್ಮನು. ನಾನೇ ಸಾಕ್ಷಾತ್ ಶಿವನು ನಾನೇ ಪ್ರಪಂಚಗಳನ್ನು ಕಾಪಾಡುವ ದುಷ್ಟರನ್ನು ನಿಗ್ರಹಿಸುವ ವಿಷ್ಣುವು.

೧೫–೧೬. ಎಲ್ಲ ಮನುಗಳೂ ಮತ್ತು ಮುನಿಗಳೂ ಕೂಡ ನನ್ನ ಅಂಶದಿಂದಲೂ ಕಲೆಯಿಂದಲೂ ಆಗಿರುವರು. ನಾನು ನಿರ್ಗುಣನೂ ಪ್ರಕೃತಿಗಿಂತಲೂ ಶ್ರೇಷ್ಠನೂ ಆದ ಸಾಕ್ಷಾನ್ನಾರಾಯಣನಾಗಿರುವೆನು". ಎಂಬೀ ಅಂಶಗಳನ್ನು ಲಜ್ಜೆಯಿಂದಲೂ ದಯೆಯಿಂದಲೂ ಮಿತ್ರಭಾವನೆಯಿಂದಲೂ ಕ್ಷಮಿಸಿದುದಾಯಿತು. ಹಿಂದೆ ನಡೆದುದೆಲ್ಲವೂ ಆಗಿಹೋಯಿತು. ಈಗ ನನ್ನೊಡನೆ ಯುದ್ಧವನ್ನು ಮಾಡುವವನಾಗು.

೧೭–೧೯. ದೂತರ ಮೂಲಕವಾಗಿ ನೀನು ಬಹಳ ಅಹಂಕಾರಿಯೆಂದು ಕೇಳುತ್ತಿರುವೆನು. ಅಂಥಾ ಮೇಲೇರಿದವನನ್ನು ನಿಗ್ರಹಮಾಡಬೇಕಾದದು ಉಚಿತವು. ಮತ್ತು ಅದು ರಾಜನ ಮುಖ್ಯಧರ್ಮವು. ಈಗ ನಾನು ಭೂಮಿಯನ್ನಾಳುತ್ತಿರುವೆನು. ನಾನು ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿ ನಾಲ್ಕು

ಯದಿ ಮಾ ಯಾಸ್ಯತಿ ಮಮ ಶರಣಂ ಶರಣಾಗತಃ ।
ಭಸ್ಮೀಭೂತಾಂ ಕರಿಷ್ಯಾಮಿ ದ್ವಾರಕಾಂ ಚ ಕ್ಷಣೇನ ಚ ॥ ೨೦ ॥

ಸಬಲಂ ಚ ಸಪುತ್ರಂ ತ್ವಾಂ ಸಗಣಂ ಚ ಸ ಬಾಂಧವಂ ।
ಕ್ಷಣೇನ ದಗ್ಧುಂ ಶಕ್ತೋಽಹಮಸಹಾಯೇನ ಲೀಲಯಾ ॥ ೨೧ ॥

ತಪಸ್ವಿನಂ ಚ ವೃದ್ಧಂ ಚ ಜಿತ್ವಾ ಯುದ್ಧೇ ಚ ಶಂಕರ ।
ಶಕ್ರಂ ಭಗಾಂಗಂ ಜಿತ್ವಾ ಚ ರೋಗಿಣಂ ಬ್ರಹ್ಮಶಾಪತಃ ॥ ೨೨ ॥

ಮತ್ತೋಽಸಿ ವೀರಮಾತ್ಮಾನಂ ಮನ್ಯಮಾನಸ್ತ್ವಮೇವ ಚ ।
ಸ್ತ್ರೀಜಿತೋ ಹಿ ವೃಥಾರ್ಥಂ ಚ ಪಾರಿಜಾತಸ್ಯ ಹೇತುನಾ ॥ ೨೩ ॥

ಲಂಪಟೋ ಯೋನಿಲುಬ್ಧಶ್ಚ ರಾಧಾಧೀನಶ್ಚ ಗೋಕುಲೇ ।
ಅಧುನಾ ಕಿಂಕರಸಮಃ ಸತ್ಯಾದೀನಾಂ ಚ ಯೋಷಿತಾಂ ॥ ೨೪ ॥

---

ತೋಳುಳ್ಳವನಾಗಿ ನನ್ನ ಪರಿವಾರದೊಡನೆ ದ್ವಾರಾಕಾಪಟ್ಟಣಕ್ಕೆ ಯುದ್ಧಕ್ಕೋಸ್ಕರ ವಾಗಿ ಬರುತ್ತೇನೆ. ನಿನಗೆ ಇಷ್ಟವಿದ್ದರೆ ಯುದ್ಧವನ್ನು ಮಾಡು. ಇಲ್ಲದಿದ್ದರೆ ನನಗೆ ಶರಣಾಗತನಾಗು.

೨೦–೨೧. ನೀನು ನನಗೆ ಶರಣಾಗತನಾಗದಿದ್ದರೆ ನಿಮಿಷ ಮಾತ್ರದಲ್ಲಿಯೇ ದ್ವಾರಕಾಪಟ್ಟಣವನ್ನು ಸುಟ್ಟು ಬೂದಿಮಾಡುತ್ತೇನೆ. ಸೈನ್ಯದಿಂದಲೂ, ಮಕ್ಕಳಿಂದಲೂ ಪರಿವಾರದಿಂದಲೂ ಬಂಧುಗಳಿಂದಲೂ ಕೂಡಿದ ನಿನ್ನನ್ನು ನಾನು ಕ್ಷಣಮಾತ್ರದಲ್ಲಿ ಯಾವ ಸಹಾಯವೂ ಇಲ್ಲದೆ ಸುಲಭವಾಗಿ ಸುಡಲು ಸಮರ್ಥ ನಾಗಿರುವೆನು.

೨೨–೨೩. ತಪಸ್ವಿಯೂ ವೃದ್ಧನೂ ಆದ ಶಂಕರನನ್ನು ಯುದ್ಧದಲ್ಲಿ ಗೆದ್ದು ಬ್ರಾಹ್ಮಣಶಾಪದಿಂದ ಭಗಗಳಿಂದ ಕೂಡಿದ ರೋಗಿಯಾದ ಇಂದ್ರನನ್ನೂ ಸೋಲಿಸಿ ಮತ್ತನಾಗಿ ನಾನೇ ವೀರನೆಂದು ತಿಳಿದುಕೊಂಡಿರುವೆ. ಹೆಂಗಸಿಗೆ ಸೋತವನಾಗಿ ಪಾರಿಜಾತಕ್ಕಾಗಿ ವ್ಯರ್ಥವಾಗಿ ಯುದ್ಧವನ್ನು ಮಾಡಿದೆ.

೨೪. ಸ್ತ್ರೀಲಂಪಟನೂ ಯೋನಿಯಲ್ಲಿ ಆಶೆಯುಳ್ಳವನೂ ಗೋಕುಲದಲ್ಲಿ ರಾಧೆಯ ಅಧೀನನೂ ಆಗಿರುವೆ. ಈಗಲೂ ಸತ್ಯಭಾಮೆಯೇ ಮುಂತಾದವರಿಗೆ ಸೇವಕನಂತೆ ಆಗಿರುವೆ.

ಇತ್ಯೇವಮುಕ್ತ್ವಾ ವಿಪ್ರಶ್ಚ ತೂಷ್ಣೀಂ ಭೂಯ ಸ್ಥಿತೋ ಮುನೇ ।
ಶ್ರೀಕೃಷ್ಣಃ ಸಗಣಃ ಶ್ರುತ್ವಾ ಭೃಶಮುಚ್ಚೈರ್ಜಹಾಸ ಸಃ ॥ ೨೫ ॥

ಭೋಜಯಿತ್ವಾ ಚ ಸಂಪೂಜ್ಯ ಬ್ರಾಹ್ಮಣಂ ಚ ಚತುರ್ವಿಧಂ ।
ನಿನಾಯ ರಜನೀಂ ದುಃಖಾದ್ವಾಕ್ಶಲ್ಯಮಾನಸಜ್ವರಾತ್ ॥ ೨೬ ॥

ಪ್ರಭಾತೇ ರಥಮಾರುಹ್ಯ ಸಗಣಃ ಸತ್ವರಂ ಮುದಾ ।
ಲೀಲಾಮಾತ್ರೇಣ ಪ್ರಯಯೌ ಶೃಗಾಲೋ ನೃಪತಿರ್ಯತಃ ॥ ೨೭ ॥

ಶ್ರುತ್ವಾ ಶೃಗಾಲೋ ವಾರ್ತಾಂ ತಾಂ ಕೃತ್ರಿಮಶ್ಚ ಚತುರ್ಭುಜಃ ।
ಆಜಗಾಮ ಹರೇಃ ಸ್ಥಾನಂ ಯುದ್ಧಾಯ ಸಗಣಃ ಸ್ವಯಂ ॥ ೨೮ ॥

ಕೃಷ್ಣಶ್ಚಕ್ರೇ ಚ ಸಂಭಾಷಾಂ ಮಿತ್ರಬುದ್ಧ್ಯಾ ಚ ಲೌಕಿಕೀಂ ।
ಆಶ್ಲೇಷಂ ಮಧುರಾಲಾಪಂ ಸ್ನಿಗ್ಧನೇತ್ರಶ್ಚ ಸಸ್ಮಿತಃ ॥ ೨೯ ॥

---

೨೫. ಎಲೈ ನಾರದ ಮುನಿಯೇ ಈ ಪ್ರಕಾರವಾಗಿ ಹೇಳಿ ಆ ಬ್ರಾಹ್ಮಣನು ಸುಮ್ಮನಾದನು. ಪರಿವಾರ ಸಮೇತನಾದ ಆ ಶ್ರೀ ಕೃಷ್ಣನು ಇವನಾಡಿದ ಮಾತುಗಳನ್ನು ಕೇಳಿ ಗಟ್ಟಿಯಾಗಿ ನಕ್ಕನು.

೨೬. ಬ್ರಾಹ್ಮಣನನ್ನು ಮೃಷ್ಟಾನ್ನಗಳಿಂದ ಭೋಜನಮಾಡಿಸಿ ಸತ್ಕರಿಸಿ ಆ ಕಠಿಣವಾದ ಮಾತುಗಳನ್ನು ಕೇಳುವುದರಿಂದುಂಟಾದ ಮನೋವ್ಯಥೆಯಿಂದ ಕೂಡಿದವನಾಗಿ ಆ ರಾತ್ರಿಯನ್ನು ದುಃಖದಿಂದ ಕಳೆದನು.

೨೭. ಬೆಳಗಾದಮೇಲೆ ಪರಿವಾರ ಸಮೇತನಾಗಿ ರಥವನ್ನು ಹತ್ತಿಕೊಂಡು ವಿಲಾಸದಿಂದಲೇ ಶೃಗಾಲ ರಾಜ ನಿದ್ದಲ್ಲಿಗೆ ಜಾಗ್ರುತೆಯಾಗಿ ಹೋದನು.

೨೮ ಶೃಗಾಲರಾಜನು ಕೃಷ್ಣನು ಬಂದಿರುವ ಸಮಾಚಾರವನ್ನು ಕೇಳಿ ಕೃತ್ರಿಮವಾದ ನಾಲ್ಕು ತೋಳುಗಳನ್ನು ಧರಿಸಿದವನಾಗಿ ಪರಿವಾರದಿಂದ ಸಹಿತನಾಗಿ ಯುದ್ಧಮಾಡಲೋಸ್ಕರ ಹರಿಯಿದ್ದ ಸ್ಥಳಕ್ಕೆ ಬಂದನು.

೨೯. ಕೃಷ್ಣನು ಸ್ನೇಹಭಾವದಿಂದ ಲೌಕಿಕವಾದ ಸಂಭಾಷಣೆಯನ್ನು ಮಾಡಿದನು. ಮತ್ತು ಮಂದಹಾಸದಿಂದ ಕೂಡಿ ಸ್ನೇಹದಿಂದ ನೋಡುತ್ತ ಆಲಿಂಗಿಸಿಕೊಂಡು ಮಧುರನಾಗಿ ಮಾತನಾಡಿದನು.

ರಾಜಾ ನಿಮಂತ್ರಣಂ ಚಕ್ರೇ ಕೃಷ್ಣೋ ನ ಸ್ವೀಚಕಾರ ತತ್ ।
ಉವಾಚ ಕೃಷ್ಣಭೀತಶ್ಚ ತ್ಯಕ್ತ್ವಾ ದಂಭಂ ಚ ದರ್ಶನಾತ್ ॥ ೩೦ ॥

॥ ಶೃಗಾಲ ಉವಾಚ ॥

ಚಕ್ರೇಣ ಮಚ್ಛಿರಚ್ಛಿತ್ವಾ ಸುಶೀಘ್ರಂ ದ್ವಾರಕಾಂ ವ್ರಜ ।
ಪಾಪಃ ಪತತು ದೇಹೋಽಯಮನಿತ್ಯೋ ನಶ್ವರಸ್ತಥಾ ॥ ೩೧ ॥

ಅಹಂ ಸುಭದ್ರಸ್ತೇ ದ್ವಾರಿ ಜಯಶ್ಚ ವಿಜಯೋ ಯಥಾ ।
ಸರ್ವಂ ಜಾನಾಸಿ ಸರ್ವಜ್ಞ ಮಾ ವಿಲಂಬಂ ಕುರು ಪ್ರಭೋ ॥ ೩೨ ॥

ಲಕ್ಷ್ಮೀಶಾಪೇನ ಭ್ರಷ್ಟೋಽಹಂ ಕಾಲಃ ಪೂರ್ಣೋ ಬಭೂವ ಮೇ ।
ಶತವರ್ಷೇಣ ಶಾಪಾಂತೇ ಯಾಸ್ಯಾಮಿ ಭವನಂ ತವ ॥ ೩೩ ॥

---

೩೦. ಶೃಗಾಲರಾಜನು ಕೃಷ್ಣನನ್ನು ಊಟಕ್ಕೆ ಆಹ್ವಾನ ಮಾಡಿದನು. ಕೃಷ್ಣನು ಅದನ್ನು ಒಪ್ಪಿಕೊಳ್ಳಲಿಲ್ಲ. ರಾಜನು ಕೃಷ್ಣನನ್ನು ನೋಡಿದ ಮಾತ್ರದಿಂದಲೇ ಭಯಗೊಂಡವನಾಗಿ ಅಹಂಕಾರವನ್ನು ಬಿಟ್ಟು ಈ ಪ್ರಕಾರ ಹೇಳಿದನು.

ಶೃಗಾಲನು ಹೇಳುತ್ತಾನೆ:—

೩೧. ನಿನ್ನ ಚಕ್ರದಿಂದ ಜಾಗ್ರತೆಯಾಗಿ ನನ್ನ ತಲೆಯನ್ನು ಕಡಿದು ದ್ವಾರಕಿಗೆ ಹೋಗುವವನಾಗು. ಅನಿತ್ಯವೂ ನಶ್ವರವೂ ಆದ ಈ ಪಾಪದಿಂದ ಕೂಡಿದ ದೇಹವು ನಾಶವಾಗಲಿ.

೩೨ ನಾನು ಸುಭದ್ರನೆಂಬುವನು. ಜಯವಿಜಯರಂತೆ ನಿನ್ನ ಬಾಗಿಲು ಕಾಯುವವನು. ಸರ್ವಜ್ಞನಾದ ಪ್ರಭುವೇ? ನೀನು ಸಕಲವನ್ನೂ ತಿಳಿದವನಾಗಿರುತ್ತೀಯೆ. ಸಾವಕಾಶಮಾಡಬೇಡ.

೩೩. ನಾನು ಲಕ್ಷ್ಮಿಯ ಶಾಪದಿಂದ ಭ್ರಷ್ಟನಾಗಿರುವೆನು. ಆ ಶಾಪದ ಕಾಲವು ಸಂಪೂರ್ಣವಾಗಿ ಕಳೆಯಿತು. ನೂರುವರುಷಗಳ ಅವಧಿಯುಳ್ಳ ಶಾಪದ ಕೊನೆಯಲ್ಲಿ ನಿನ್ನ ಮಂದಿರಕ್ಕೆ ಹೋಗುವೆನು.

॥ ಶ್ರೀಕೃಷ್ಣ ಉವಾಚ ॥

ಪೂರ್ವಂ ಮಾಂ ಮಿತ್ರ ಪ್ರಹರ ಪಶ್ಚಾದ್ಯುದ್ಧಂ ಕರೋಮ್ಯಹಂ ।
ಸರ್ವಂ ಜಾನಾಮಿ ವೈಕುಂಠಂ ಗಚ್ಛ ವತ್ಸ ಯಥಾಸುಖಂ ॥ ೩೪ ॥

ಶೃಗಾಲೋ ದಶಬಾಣಾಂಶ್ಚ ಚಿಕ್ಷೇಪ ಮಾಧವಂ ಪ್ರತಿ ।
ತೇ ಪ್ರಣಮ್ಯ ಯಯುಃ ಶೀಘ್ರಮಾಕಾಶಂ ಕಾಲರೂಪಿಣಃ ॥ ೩೫ ॥

ಗದಾಂ ಚಿಕ್ಷೇಪ ರಾಜಾ ಸ ಪ್ರಲಯಾಗ್ನಿಶಿಖೋಪಮಾಂ ।
ಕೃಷ್ಣಾಂಗಸ್ಪರ್ಶಮಾತ್ರೇಣ ಬಭಂಜ ಚ ಕ್ಷಣೇನ ಚ ॥ ೩೬ ॥

ಧನುಶ್ಚಿಕ್ಷೇಪ ಖಡ್ಗಂ ಚ ಕಾಲರೂಪಂ ಸುದಾರುಣಂ ।
ಕೃಷ್ಣಾಂಗಸ್ಪರ್ಶಮಾತ್ರೇಣ ಬಭಂಜ ಚ ಕ್ಷಣೇನ ಚ ॥ ೩೭ ॥

---

ಶ್ರೀಕೃಷ್ಣನು ಹೇಳುತ್ತಾನೆ:—

೩೪. ಎಲೈ ಮಿತ್ರನೇ? ಮೊದಲು ನೀನು ನನ್ನನ್ನು ಹೊಡೆ. ಅನಂತರ ನಾನು ಯುದ್ಧವನ್ನು ಮಾಡುತ್ತೇನೆ. ಮಗುವೇ! ನಾನು ಎಲ್ಲವನ್ನೂ ತಿಳಿದಿರುವೆನು. ನೀನು ಮೊದಲಿನಂತೆ ಸುಖವಾಗಿ ವೈಕುಂಠಕ್ಕೆ ಹೋಗು.

೩೫. ಶೃಗಾಲನು ಹತ್ತು ಬಾಣಗಳನ್ನು ಮಾಧವನ ಮೇಲೆಸೆದನು. ಕಾಲ ರೂಪಿಗಳಾದ ಆ ಬಾಣಗಳು ಕೃಷ್ಣನಿಗೆ ನಮಸ್ಕಾರಮಾಡಿ ವೇಗವಾಗಿ ಆಕಾಶವನ್ನು ಕುರಿತು ಹೋದುವು.

೩೬. ಆ ರಾಜನು ಪ್ರಳಯ ಕಾಲದ ಅಗ್ನಿಜ್ವಾಲೆಗೆ ಸಮನಾದ ಗದೆ ಯನ್ನೆಸೆದನು. ಆ ಗದೆಯು ಕೃಷ್ಣನ ಶರೀರವನ್ನು ತಗುಲಿದ ಮಾತ್ರದಿಂದಲೇ ಕ್ಷಣಕಾಲದಲ್ಲಿ ಮುರಿದುಹೋಯಿತು.

೩೭. ರಾಜನು ಮೃತ್ಯು ಸ್ವರೂಪವೂ ಭಯಂಕರವೂ ಆದ ಖಡ್ಗವನ್ನೆಸೆದನು. ಅದೂಕೂಡ ಶ್ರೀಕೃಷ್ಣನ ಶರೀರವನ್ನು ಮುಟ್ಟಿದೊಡನೆಯೆ ನಿಮಿಷಮಾತ್ರದಲ್ಲಿ ಮುರಿದುಹೋಯಿತು.

ದೃಷ್ಟ್ವಾ ನಿರಸ್ತ್ರಂ ರಾಜಾನಮಿತ್ಯುವಾಚ ಕೃಪಾನಿಧಿಃ ।
ಗೃಹಂ ಗತ್ವಾ ಸುತೀಕ್ಷ್ಣಂ ಚ ಮಿತ್ರಾಸ್ತ್ರಮಾನಯೇತಿ ಚ ॥ ೩೮ ॥

॥ ಶೃಗಾಲ ಉವಾಚ ॥

ನಾತ್ಮಾಕಾಶೋಽಸ್ತ್ರವಿದ್ಧಶ್ಚ ಕಿಂ ಯುದ್ಧಮಾತ್ಮನಾ ಸಹ ।
ಮಾಮುದ್ಧರ ಭವಾಬ್ಧೇಶ್ಚ ಧರೋದ್ಧಾರಣಕಾರಣ ॥ ೩೯ ॥

ಭವಾಬ್ಧಿಂ ವಿಷಮಂ ನಾಥ ವಿಷಯಂ ಚ ವಿಷಾಧಿಕಂ ।
ಛಿಂಧಿ ಮೇ ನಿಗಡಂ ಮಾಯಾಂ ಮೋಹಜಾಲಂ ಸ್ವಕರ್ಮಣಃ ॥ ೪೦ ॥

ಕರ್ಮಣಾಮೀಶ್ವರಸ್ತ್ವಂ ಚ ವಿಧಾತಾ ಧಾತುರೇವ ಚ ।
ದಾತಾ ಶುಭಫಲಾನಾಂ ಚ ಪ್ರದಾತಾ ಸರ್ವಸಂಪದಾಂ ॥ ೪೧ ॥

---

೩೮. ದಯಾನಿಧಿಯಾದ ಹರಿಯು ಅಸ್ತ್ರ ಹೀನನಾದ ಶೃಗಾಲರಾಜನನ್ನು ಕಂಡು, ಮಿತ್ರ, ಮನೆಗೆ ಹೋಗಿ ಅತಿತೀಕ್ಷ್ಣವಾದ ಅಸ್ತ್ರವನ್ನು ತೆಗೆದುಕೊಂಡುಬಾ ಎಂದು ಹೇಳಿದನು.

ಶೃಗಾಲನು ಹೇಳುತ್ತಾನೆ :—

೩೯. ಆತ್ಮನೂ ಆಕಾಶವೂ ಅಸ್ತ್ರಗಳಿಂದ ಭೇದಿಸತಕ್ಕವುಗಳಲ್ಲ. ಆತ್ಮ ಸ್ವರೂಪಿಯಾದ ನಿನ್ನೊಡನೆ ಯುದ್ಧವೆಂತಹುದು? ಭೂಮಿಯನ್ನು ಉದ್ಧಾರ ಮಾಡಲು ಕಾರಣನಾದ ನೀನು ನನ್ನನ್ನು ಸಂಸಾರಸಮುದ್ರದಿಂದುದ್ಧಾರಮಾಡು.

೪೦. ಎಲೈ ಒಡೆಯನೇ! ವಿಷಮನಾದ ಈ ಸಂಸಾರ ಸಮುದ್ರವನ್ನೂ ವಿಷಕ್ಕಿಂತಲೂ ಹೆಚ್ಚಾದ ವಿಷಯಾಭಿಲಾಷೆಯನ್ನೂ ನನ್ನಪೂರ್ವಕರ್ಮದಿಂದುಂಟಾದ ಮೋಹವೆಂಬ ಬಲೆಯನ್ನೂ ಮಾಯೆಯೆಂಬ ಬೇಡಿಯನ್ನೂ ನಾಶಮಾಡು.

೪೧. ನೀನು ಸಕಲ ಕರ್ಮಗಳಿಗೂ ಒಡೆಯನು. ಬ್ರಹ್ಮನಿಗೂ ಬ್ರಹ್ಮನಾಗಿರುವಿ. ಮತ್ತು ಶುಭಕರ್ಮಗಳ ಫಲವನ್ನು ಕೊಡುವವನೂ ಸಕಲ ಸಂಪತ್ತುಗಳನ್ನು ಕೊಡುವವನೂ ಆಗಿರುವಿ.

ಕಾರಣಂ ಪ್ರಾಕ್ತನಾನಾಂ ಚ ತೇಷಾಂ ಚ ಖಂಡನೇ ಕ್ಷಮಃ ।
ಯಾಮಿ ಗೇಹಂ ಚ ವೈಕುಂಠಂ ತವೈವ ದ್ವಾರಸಪ್ತಮಂ ॥ ೪೨ ॥

ತ್ಯಕ್ತ್ವಾ ಚ ನಶ್ವರಂ ದೇಹಂ ಪ್ರಾಕೃತಂ ಪಾಂಚಭೌತಿಕಂ ।
ಮಿತ್ರಸ್ಯ ಸ್ತವನಂ ಶ್ರುತ್ವಾ ವಚನಂ ಚ ಸುಧೋಪಮಂ ॥ ೪೩ ॥

ರುರೋದ ಸಮರೇ ತತ್ರ ಕೃಪಯಾ ಚ ಕೃಪಾನಿಧಿಃ ।
ಬಭೂವ ತತ್ರ ಸಹಸಾ ಕೃಷ್ಣನೇತ್ರಾಶ್ರುಬಿಂದುನಾ ॥ ೪೪ ॥

ದಿವ್ಯಂ ಬಿಂದುಸರೋ ನಾಮ ತೀರ್ಥಾನಾಂ ಪ್ರವರಂ ಪರಂ ।
ತತ್ತೋಯಸ್ಪರ್ಶಮಾತ್ರೇಣ ಜೀವನ್ಮುಕ್ತೋ ಭವೇನ್ನರಃ ॥
ಸಪ್ತಜನ್ಮಾರ್ಜಿತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೪೫ ॥

---

೪೨. ಪೂರ್ವಜನ್ಮದ ಕರ್ಮ ಫಲಗಳನ್ನು ಕೊಡುವವನೂ ನಾಶ ಮಾಡುವವನೂ ನೀನೇ. ಪ್ರಾಕೃತವೂ ಪಂಚಭೂತಾತ್ಮಕವೂ ನಶ್ವರವೂ ಆದ ಈ ದೇಹವನ್ನು ಬಿಟ್ಟು ನಿನ್ನ ಮನೆಯಾದ ವೈಕುಂಠದ ಏಳನೆಯ ಬಾಗಿಲಿಗೆ ಹೋಗುತ್ತೇನೆ.

೪೩. ಕೃಪಾನಿಧಿಯಾದ ಕೃಷ್ಣನು ಮಿತ್ರನ ಸ್ತೋತ್ರವನ್ನೂ ಅಮೃತದಂತಿರುವ ಮಾತನ್ನೂ ಕೇಳಿ ದಯೆಯಿಂದ ಕೂಡಿದವನಾಗಿ ಯುದ್ಧರಂಗದಲ್ಲಿ ನಿಂತು ಅತ್ತನು.

೪೪. ಆ ಕ್ಷಣದಲ್ಲಿಯೇ ಯುದ್ಧರಂಗದಲ್ಲಿ ಕೃಷ್ಣನ ಕಣ್ಣೀರಿನ ಹನಿಯಿಂದ ಉತ್ತಮವಾದ ಬಿಂದುಸರಸ್ಸೆಂಬ ಶ್ರೇಷ್ಠವಾದ ತೀರ್ಥವು ಹುಟ್ಟಿತು.

೪೫. ಆ ಬಿಂದುಸರೋವರದ ನೀರನ್ನು ಸ್ಪರ್ಶ ಮಾಡಿದ ಮಾತ್ರದಿಂದಲೇ ಮಾನವನ್ನು ಜೀವನ್ಮುಕನಾಗತ್ತಾನೆ ಏಳು ಜನ್ಮಗಳಲ್ಲಿ ಮಾಡಿದ ಪಾಪದಿಂದ ಸಂಶಯವಿಲ್ಲದೆ ಬಿಡುಗಡೆಯನ್ನು ಹೊಂದುತ್ತಾನೆ.

|| ಶ್ರೀ ಭಗವಾನುವಾಚ ||

ಕಥಮೇತಾದೃಶೀಬುದ್ಧಿರ್ನಿರ್ಮಿತ್ರ ತೇ ನಿರ್ಮಲಂ ಮನಃ ।
ದೂತದ್ವಾರಾ ಕಥಂ ಚೋಕ್ತಂ ನಿಷ್ಠುರಂ ದಾರುಣಂ ವಚಃ || ೪೬ ||

|| ಶೃಗಾಲ ಉವಾಚ ||

ಏವಮುಕ್ತೋ ಮಯಾ ತ್ವಂ ಚ ತೇನ ಕ್ರೋಧಾದಿಹಾಗತಃ ।
ಅನ್ಯಥಾ ದುರ್ಲಭಂ ನಾಥ ಸ್ವಪ್ನೇಽಪಿ ತವ ದರ್ಶನಂ || ೪೭ ||

ಏತಸ್ಮಿನ್ನಂತರೇ ಯೋಗಾದ್ದೇಹಂ ತ್ಯಕ್ತ್ವಾ ಚ ಪ್ರಾಕೃತಂ ।
ದೃಷ್ಟ್ವಾ ಕೃಷ್ಣಂ ಚ ಯಾನೇನ ವೈಕುಂಠಂ ಪ್ರಯಯೌ ಮುದಾ || ೪೮ ||

ಸಪ್ತತಾಲಪ್ರಮಾಣಂ ಚ ಜ್ಯೋತಿಸ್ತತ್ರ ಮಹೋಲ್ಬಣಂ ।
ಪದ್ಮೈಃ ಪದ್ಮಾರ್ಚಿತಂ ಪಾದಪದ್ಮಂ ನತ್ವಾ ಜಗಾಮ ಹ || ೪೯ ||

---

ಶ್ರೀ ಭಗವಂತನು ಹೇಳುತ್ತಾನೆ:—

೪೬. ಎಲೈ ಮಿತ್ರನೇ! ನಿನಗೆ ಈ ರೀತಿಯಾದ ಬುದ್ಧಿಯೂ ಶುದ್ಧವಾದ ಮನಸ್ಸೂ ಹೇಗೆ ಉಂಟಾಯಿತು? ದೂತನ ಮೂಲಕ ಅತಿನಿಷ್ಠುರವೂ ಕಠಿಣವೂ ಆದ ಮಾತನ್ನೇಕೆ ಹೇಳಿದೆ.

ಶೃಗಾಲನು ಹೇಳುತ್ತಾನೆ:—

೪೭. ನಾನು ಆ ಪ್ರಕಾರವಾಗಿ ಹೇಳಿದ ಕಾರಣ ನೀನು ಕೋಪಗೊಂಡವನಾಗಿ ಇಲ್ಲಿಗೆ ಬರುವವನಾದೆ. ಒಡೆಯನೇ! ಇಲ್ಲದಿದ್ದರೆ ನಿನ್ನ ದರುಶನವು ಕನಸಿನಲ್ಲಿಯೂ ದೊರೆಯಲಾಗದು.

೪೮. ಹೀಗೆ ಹೇಳುತ್ತಿರುವಾಗಲೇ ಯೋಗದಿಂದ ಪ್ರಾಕೃತ ದೇಹವನ್ನು ಬಿಟ್ಟು ಶ್ರೀ ಕೃಷ್ಣನನ್ನು ನೋಡಿ ಆನಂದದಿಂದ ವಿಮಾನದಲ್ಲಿ ಕುಳಿತು ವೈಕುಂಠವನ್ನು ಕುರಿತು ಹೊರಟನು.

೪೯. ಏಳು ತಾಳೇಮರದಷ್ಟು ಎತ್ತರವಾದ ಪ್ರಕಾಶಮಾನವಾದ ತೇಜಸ್ಸು ಅಲ್ಲಿ ಹೊರ ಹೊರಟು ಲಕ್ಷ್ಮೀದೇವಿಯಿಂದ ಕಮಲದ ಹೂವುಗಳಿಂದ ಪೂಜಿಸಲ್ಪಟ್ಟ ಪರಮಾತ್ಮನ ಪಾದಕಮಲಗಳಿಗೆ ನಮಸ್ಕರಿಸಿ ಹೊರಟು ಹೋಯಿತು.

ಗತ್ವಾ ಚ ದ್ವಾರಕಾಂ ಕೃಷ್ಣೋ ನತ್ವಾ ಚ ಪಿತರಂ ಪ್ರಸೂಂ ।
ಶ್ರೀಕೃಷ್ಣಃ ಸಗಣಃ ಶೀಘ್ರಂ ದೃಷ್ಟ್ವಾ ಚ ಪರಮಾದ್ಭುತಂ ॥ ೫೦ ॥

ಪ್ರಫುಲ್ಲವದನಃ ಶ್ರೀಮಾನ್ದ್ವಾರಕಾಭಿಮುಖಂ ಯಯೌ ।
ಜಗಾಮ ರುಕ್ಮಿಣೀ ಗೇಹಂ ಪುಷ್ಪಚಂದನವಾಸಿತಂ ॥ ೫೧ ॥

ಪುಷ್ಪಚಂದನತಲ್ಪೇ ಚ ನಕ್ತಂ ರೇಮೇ ತಯಾ ಸಹ ।
ಮೂರ್ಛಾಂ ಸಂಪ್ರಾಪ ಸಾ ಭೈಷ್ಮೀ ಕೃಷ್ಣಂ ಕೃತ್ವಾ ಸ್ವವಕ್ಷಸಿ ॥ ೫೨ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಶೃಗಾಲವಾಸುದೇವಮೋಕ್ಷಣಂ
ನಾಮೈಕವಿಂಶತ್ಯಧಿಕಶತತಮೋಽಧ್ಯಾಯಃ ॥

---

೫೦. ಶ್ರೀಕೃಷ್ಣನು ಆ ಅದ್ಭುತವನ್ನು ನೋಡಿ ಆಶ್ಚರ್ಯಗೊಂಡವನಾಗಿ ತನ್ನ ಪರಿವಾರದೊಡನೆ ಜಾಗ್ರತೆಯಾಗಿ ದ್ವಾರಕಾಪಟ್ಟಣದ ಕಡೆಗೆ ಹೊರಟನು.

೫೧. ದ್ವಾರಕಾಪಟ್ಟಣಕ್ಕೆ ಹೋದ ಕೃಷ್ಣನು ತಾಯಿಗೂ ತಂದೆಗೂ ನಮಸ್ಕಾರವನ್ನು ಮಾಡಿದವನಾಗಿ ಹೂವಿನಿಂದಲೂ ಗಂಧದಿಂದಲೂ ಸುವಾಸಿತವಾದ ರುಕ್ಮಿಣಿಯ ಮನೆಗೆ ಹೋದನು.

ರುಕ್ಮಿಣಿಯೊಡನೆ ಆ ರಾತ್ರಿಯಲ್ಲಿ ಹೂವಿನಿಂದಲೂ ಗಂಧದಿಂದಲೂ ಶೋಭಿಸುತ್ತಿರುವ ಹಾಸಿಗೆಯಮೇಲೆ ವಿಹರಿಸಿದನು. ಆಗ ರುಕ್ಮಿಣಿಯು ಕೃಷ್ಣನನ್ನು ತನ್ನ ಎದೆಗಪ್ಪಿಕೊಂಡು ಆನಂದದಿಂದ ಮೂರ್ಛಿತಳಾದಳು.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣ ಜನ್ಮಖಂಡದ
ಉತ್ತರಾರ್ಧದ ನಾರಾಯಣ ನಾರದ ಸಂವಾದದಲ್ಲಿ
ಶೃಗಾಲ ವಾಸುದೇವ ಮೋಕ್ಷಣವೆಂಬ
ನೂರಇಪ್ಪತ್ತೊಂದನೆಯ ಅಧ್ಯಾಯವು
ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರದ ಉವಾಚ ||

ಸರ್ವಾಸಾಂ ರಮಣೀನಾಂ ಚ ಕೃಷ್ಣೇನ ಪರಮಾತ್ಮನಾ ।
ಸಮುದ್ವಾಹಶ್ಚ ಕಥಿತಸ್ತ್ವಯಾ ಭಗವತಾ ಮುದಾ || ೧ ||

ಸ್ಯಮಂತಕಸ್ಯ ಚ ಮಣೇರುಪಾಖ್ಯಾನಮಭೀಪ್ಸಿತಂ ।
ತನ್ನ ಶ್ರುತಂ ಮಹಾಭಾಗ ತನ್ಮಾಂ ವ್ಯಾಖ್ಯಾತುಮರ್ಹಸಿ || ೨ ||

|| ನಾರಾಯಣ ಉವಾಚ ||

ಭಾದ್ರಶುಕ್ಲಚತುರ್ಥ್ಯಾಂ ಚ ತಾರಕಾಂ ಧೃತವಾಞ್ಛಶೀ ।
ತಾಂ ತತ್ಯಾಜ ಸ ಕೃಷ್ಣಾಯಾಂ ಗುರುಃ ಪ್ರಾಪ್ತಂ ಚ ಗೃಹೀತವಾನ್ || ೩ ||

---

### ನೂರಇಪ್ಪತ್ತೆರಡನೆಯ ಅಧ್ಯಾಯವು.

ನಾರದನು ಹೇಳುತ್ತಾನೆ :—

೧. ಪೂಜ್ಯನಾದ ನೀನು ಪರಮಾತ್ಮನಾದ ಶ್ರೀಕೃಷ್ಣನಿಂದ ಸಕಲಸ್ತ್ರೀಯರ ವಿವಾಹವು ಮಾಡಿಕೊಳ್ಳಲ್ಪಟ್ಟ ಕಥೆಯನ್ನು ಹೇಳಿರುವೆ.

೨. ಎಲೈ ಮಹಾತ್ಮನೇ! ಸ್ಯಮಂತಕಮಣಿಯ ಉಪಾಖ್ಯಾನವು ಅತ್ಯಂತ ಇಷ್ಟವಾದುದು. ಅದು ನನ್ನಿಂದ ಕೇಳಲ್ಪಟ್ಟಿಲ್ಲ. ಆದುದರಿಂದ ಆ ಕಥೆಯನ್ನು ನನಗೆ ಹೇಳುವವನಾಗು.

ನಾರಾಯಣನು ಹೇಳುತ್ತಾನೆ :—

೩. ಚಂದ್ರನು ಭಾದ್ರಪದ ಶುಕ್ಲಚೌತಿಯದಿನ ತಾರೆಯನ್ನು ಸ್ವೀಕರಿಸಿದನು. ಅವಳನ್ನು ಕೃಷ್ಣಪಕ್ಷದಲ್ಲಿ ಬಿಟ್ಟನು. ಗುರುವು ಅವಳನ್ನು ತೆಗೆದುಕೊಂಡನು.

ಗುರುಣಾ ಭರ್ತ್ಸಿತಾ ತಾರಾ ಸಗರ್ಭಾ ಲಜ್ಜಿತಾ ಸತೀ ।
ಶಶಾಪ ಲಜ್ಜಯಾ ಕೋಪಾಚ್ಚಂದ್ರಂ ಕಾಮಾತುರಂ ಪುರಾ ॥ ೪ ॥

॥ ತಾರೋವಾಚ ॥

ಭವ ಶಾಪಕಲಂಕೀ ತ್ವಂ ಯಸ್ತ್ವಾಂ ಪಶ್ಯತಿ ದೇಹಭೃತ್ ।
ಪಾಪಂ ದೃಷ್ಟ್ವಾ ಸ ಪಾಪೀ ಚ ಕಲಂಕೀ ಚ ಭವಿಷ್ಯತಿ ॥ ೫ ॥

ಇತಿ ಶ್ರುತ್ವಾ ಸ ಚಂದ್ರಶ್ಚ ನಾರಾಯಣಸರೋವರೇ ।
ನಾರಾಯಣತಪಸ್ತಪ್ತ್ವಾ ಮುಮೋಚ ಕೃತಪಾತಕಾತ್ ॥ ೬ ॥

ತಪಃಕ್ಲಿಷ್ಟಂ ಚ ತಂ ದೃಷ್ಟ್ವಾ ಭಗವಾನ್ಪುರುಷೋತ್ತಮಃ ।
ತಮುವಾಚ ಮಹಾಭೀತಂ ಕೃಪಯಾ ಚ ಕೃಪಾನಿಧಿಃ ॥ ೭ ॥

---

೪. ಗರ್ಭಿಣಿಯಾದ ತಾರೆಯು ಗುರುವಿನಿಂದ ಗದರಿಸಲ್ಪಟ್ಟವಳಾಗಿ ಲಜ್ಜೆಗೊಂಡು ಕಾಮಾತುರನಾದ ಚಂದ್ರನನ್ನು ಕೋಪದಿಂದ ಶಪಿಸಿದಳು.

ತಾರೆಯು ಹೇಳುತ್ತಾಳೆ:—

೫. ನೀನು ಶಾಪದಿಂದ ಕಲಂಕ ಯುಕ್ತನಾಗು. ಯಾವ ಮನುಷ್ಯನು ನಿನ್ನನ್ನು ನೋಡುತ್ತಾನೋ ಅವನು ಪಾಪಿಯಾದ ನಿನ್ನನ್ನು ನೋಡಿದ ಕಾರಣ ಪಾಪಿಯೂ ಕಳಂಕವುಳ್ಳವನೂ ಆಗುತ್ತಾನೆ.

೬. ಈ ರೀತಿಯಾಗಿ ಶಪಿಸಿದುದನ್ನು ಕೇಳಿ ಆ ಚಂದ್ರನು ನಾರಾಯಣ ಸರೋವರಕ್ಕೆ ಹೋಗಿ ಅಲ್ಲಿ ನಾರಾಯಣನನ್ನು ಕುರಿತು ತಪಸ್ಸನ್ನು ಮಾಡಿದವನಾಗಿ ತಾನು ಮಾಡಿದ ಪಾಪದಿಂದ ಮುಕ್ತನಾದನು.

೭. ತಪಸ್ಸಿನಿಂದ ಕ್ಲೇಶಗೊಂಡ ಆ ಚಂದ್ರನನ್ನು ನೋಡಿ ಪೂಜ್ಯನಾದ ಪುರುಷೋತ್ತಮನು ದಯೆಯನ್ನು ಹೊಂದಿದವನಾಗಿ ಭಯಗೊಂಡಿರುವ ಚಂದ್ರನನ್ನು ಕುರಿತು ಈ ರೀತಿ ಹೇಳಿದನು.

|| ಶ್ರೀ ಭಗವಾನುವಾಚ ||

ಮುಕ್ತೋ ಭವ ಕಲಂಕೀ ತ್ವಂ ಸರ್ವಕಾಲಂ ಕಲಾನಿಧೇ ।
ಶಾಪಸ್ಥಾನಂ ತಾರಕಾಯಾ ಭಾದ್ರೇ ಮಾಸಿ ಸಿತಾಸಿತೇ || ೮ ||

ಚತುರ್ಥ್ಯಾಮುದಿತಂ ಚಂದ್ರಂ ಯಸ್ತು ಪಶ್ಯತಿ ಕಾಮತಃ ।
ತಂ ಯಾತಿ ತತ್ಕಲಂಕಶ್ಚ ಸ ಕಲಂಕೀ ಭವಿಷ್ಯತಿ || ೯ ||

ಹರಿಣಾ ದೀಯತೇ ಕಾಲೀ ಭಾದ್ರೇಮಾಸಿ ಸಿತಾಸಿತೇ ।
ಚತುರ್ಥ್ಯಾಮುದಿತಂ ಚಂದ್ರಂ ನೇಕ್ಷಿತವ್ಯಂ ಕದಾಚನ || ೧೦ ||

ಸ್ವಯಂ ದೃಷ್ಟ್ವಾ ಸ್ವವಾಕ್ಯಂಚ ಪಾಲನಂ ಕರ್ತುಮರ್ಹತಿ ।
ಭಾದ್ರೇ ಚಂದ್ರಂ ಚತುರ್ಥ್ಯಾಂ ತು ಸ ಕಲಂಕೀ ಬಭೂವ ಹ || ೧೧ ||

ಕಲಂಕೀ ಯೇನರೂಪೇಣ ತದ್ವಕ್ಷ್ಯಾಮಿ ನಿಶಾಮಯ ।
ಸ ಮುಮೋಚ ಕಲಂಕಾಚ್ಚ ಲೋಕಶಿಕ್ಷಾರ್ಥಮೀಶ್ವರಃ || ೧೨ ||

---

ಶ್ರೀ ಭಗವಂತನು ಹೇಳುತ್ತಾನೆ :—

೮–೯. ಕಲಂಕಿಯಾದ ನೀನು ಎಲ್ಲ ಕಾಲದಲ್ಲಿಯೂ ಕಲಂಕಮುಕ್ತನಾಗು. ತಾರೆಯ ಶಾಪವು ಭಾದ್ರಪದ ಮಾಸದ ಶುಕ್ಲಪಕ್ಷದ ಮತ್ತು ಕೃಷ್ಣಪಕ್ಷದ ಚತುರ್ಥೀ ದಿವಸದಲ್ಲಿರುತ್ತದೆ. ಆ ದಿನ ಯಾವನು ಮನಃಪೂರ್ವಕವಾಗಿ ಚಂದ್ರನನ್ನು ನೋಡುತ್ತಾನೋ ಅವನನ್ನು ಆ ಕಲಂಕವು ಸೇರುತ್ತದೆ. ಆ ಮನುಷ್ಯನು ಕಲಂಕ ದಿಂದ ಕೂಡಿದವನಾಗುತ್ತಾನೆ.

೧೦. ಭಾದ್ರಪದಮಾಸದ ಶುಕ್ಲ ಕೃಷ್ಣಪಕ್ಷಗಳಲ್ಲಿ ಹರಿಯಿಂದ ಕಲಂಕವು ಕೊಡಲ್ಪಡುತ್ತದೆ. ಆದುದರಿಂದ ಆ ಚತುರ್ಥಿಯದಿನ ಹುಟ್ಟಿದ ಚಂದ್ರನನ್ನು ಯಾರು ಯಾವಾಗಲೂ ನೋಡಬಾರದು

೧೧. ಹರಿಯು ತಾನೇ ಭಾದ್ರಪದ ಮಾಸದಲ್ಲಿ ಚಂದ್ರನನ್ನು ನೋಡಿ ತನ್ನ ಮಾತನ್ನು ನಡೆಸುವುದಕ್ಕಾಗಿ ತಾನು ಕಲಂಕ ಯುಕ್ತನಾದನು.

೧೨. ಈಶ್ವರನಾದ ಹರಿಯು ಲೋಕಕ್ಕೆ ಬೋಧಿಸುವುದಕ್ಕೋಸ್ಕರ ಯಾವ ರೀತಿಯಲ್ಲಿ ಕಲಂಕವನ್ನು ಹೊಂದಿದನು ಮತ್ತು ಯಾವ ರೀತಿಯಿಂದ ಆ ಕಲಂಕವನ್ನು ಹೋಗಲಾಡಿಸಿಕೊಂಡನೆಂಬುದನ್ನು ಕೇಳುವವನಾಗು.

ಸತ್ರಾಜಿತಃ ಸೂರ್ಯಭಕ್ತಸ್ತಪಸ್ತಪ್ತ್ವಾ ಚ ಪುಷ್ಕರೇ ।
ಸ್ಯಮಂತಕಂ ಮಣಿಶ್ರೇಷ್ಠಂ ಸಂಪ್ರಾಪ ಭಾಸ್ಕರಾದಪಿ ॥ ೧೩ ॥

ಅಷ್ಟೌ ಭಾರಾನ್ಸುವರ್ಣಾನಾಂ ಪ್ರಸೂತೇ ನಿತ್ಯಮೇವ ಚ ।
ವಿಷ್ಣೋರ್ಮಣಾವಧಿಷ್ಠಾನಂ ಮಹಾಪೂತೇ ಚ ಪುಣ್ಯದೇ ॥ ೧೪ ॥

ಸತ್ರಾಜಿತಃ ಸತ್ಯಭಾಮಾಂ ದತ್ವಾ ಕೃಷ್ಣಾಯ ಭಕ್ತಿತಃ ।
ಯೌತುಕಾರ್ಥೇ ಮಣಿಂ ದಾತುಮುದ್ಯತೋ ಮಹತೇ ಮಹಾನ್ ॥ ೧೫ ॥

ತಂ ನಿಷಿಧ್ಯ ಪ್ರಸೇನಶ್ಚ ದುರ್ಮತಿಃ ಕಾಲಪೀಡಿತಃ ।
ಮಣಿಂ ಗೃಹೀತ್ವಾ ಪ್ರಯಯೌ ಪುಣ್ಯಾಂ ವಾರಾಣಸೀಂ ಪುರೀಂ ॥ ೧೬ ॥

ನಿಹತ್ಯ ತಂ ಪಥಿ ಬಲಾತ್ಸಿಂಹಃ ಸಬಲ ಏವ ಚ ।
ಮಣಿಂ ಜಗ್ರಾಹ ರುಚಿರಂ ಸೂತ್ರಬದ್ಧಂ ಗಲೇ ದಧೌ ॥ ೧೭ ॥

---

೧೩. ಸತ್ರಾಜಿತನೆಂಬ ಸೂರ್ಯ ಭಕ್ತನು ಪುಷ್ಕರ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಿ ಸೂರ್ಯನಿಂದ ಸ್ಯಮಂತಕವೆಂಬ ಶ್ರೇಷ್ಠವಾದ ಮಣಿಯನ್ನು ಪಡೆದುಕೊಂಡನು.

೧೪. ಆ ಮಣಿಯು ಪ್ರತಿನಿತ್ಯವೂ ಇಪ್ಪತ್ತು ಸಾವಿರ ವರಹತೂಕ ಚಿನ್ನವನ್ನು ಹಡೆಯುತ್ತದೆ. ಅತಿ ಪವಿತ್ರವಾದ ಪುಣ್ಯಕರವಾದ ಆ ಮಣಿಯಲ್ಲಿ ಶ್ರೀ ವಿಷ್ಣುವು ವಾಸವಾಗಿರುವನು.

೧೫. ಸತ್ರಾಜಿತನು ಸತ್ಯಭಾಮೆಯನ್ನು ಭಕ್ತಿಯಿಂದ ಕೃಷ್ಣನಿಗೆ ಕೊಟ್ಟು, ಮಹಾತ್ಮನಾದ ಅವನಿಗೆ ಬಳುವಳಿಯಾಗಿ ಸ್ಯಮಂತಕಮಣಿಯನ್ನು ಕೊಡಬೇಕೆಂದು ಪ್ರಯತ್ನಮಾಡಿದನು.

೧೬. ದುರ್ಬುದ್ಧಿಯುಳ್ಳ ಪ್ರಸೇನನು ಮೃತ್ಯುವಿನಿಂದ ಪ್ರೇರಿತನಾಗಿ ಅದನ್ನು ತಪ್ಪಿಸಿ ಮಣಿಯನ್ನು ತೆಗೆದುಕೊಂಡು ಪುಣ್ಯಕರವಾದ ವಾರಾಣಸೀ ಪಟ್ಟಣಕ್ಕೆ ಹೋದನು.

೧೭. ದಾರಿಯಲ್ಲಿ ಒಂದು ಬಲವಾದ ಸಿಂಹವು ಅವನನ್ನು ಕೊಂದು ಮನೋಹರವಾದ ಆ ಮಣಿಯನ್ನು ತೆಗೆದುಕೊಂಡು ದಾರದಿಂದ ಕಟ್ಟಿ ತನ್ನ ಕತ್ತಿನಲ್ಲಿರಿಸಿಕೊಂಡಿತು.

ಕಲಿಂಗರಾಜಪುತ್ರಶ್ಚ ಬ್ರಹ್ಮಶಾಪಾತ್ಸುದಾರುಣಾತ್ ।
ವಿಪ್ರೇಣಾಭ್ಯುದಿತಸ್ತೇನ ಪಶುಯೋನಿಂ ಜಗಾಮ ಸಃ || ೧೮ ||

ನಿಹತ್ಯ ಸಿಂಹಂ ಗಹನೇ ಭಲ್ಲೂಕೋ ಜಾಂಬವಾನ್ಬಲೀ ।
ಮಣಿಂ ಗೃಹೀತ್ವಾ ಪ್ರಯಯೌ ಸ್ವಪುರಂ ರತ್ನನಿರ್ಮಿತಂ || ೧೯ ||

ಊಚುಃ ಸರ್ವೇ ದ್ವಾರಕಾಯಾಂ ಮಣಿಂ ಜಗ್ರಾಹ ಮಾಧವಃ ।
ತಸ್ಯ ಬುದ್ಧಿಂ ನ ಜಾನೀಮಃ ಕೇನೋಪಾಯೇನ ವೇತಿ ಚ || ೨೦ ||

ಇತಿ ಶ್ರುತ್ವಾ ತು ಭಗವಾನ್ಕಲಂಕಕೃಂತನಾಯ ಚ ।
ಪ್ರಯಯೌ ಕಾನನಂ ಘೋರಂ ಚೌರಚಿಹ್ನೇನ ವರ್ತ್ಮನಾ || ೨೧ ||

ಮೃತಂ ಪ್ರಸೇನಂ ದೃಷ್ಟ್ವಾ ಚ ದುಃಖೀ ಸಿಂಹಂ ದದರ್ಶ ಸಃ ।
ಮಣಿಶೂನ್ಯಂ ಚ ತಂ ದೃಷ್ಟ್ವಾ ವಿಷಸಾದ ಚ ಮಾಧವಃ || ೨೨ ||

---

೧೮. ಕಲಿಂಗರಾಜನ ಮಗನು ಬ್ರಾಹ್ಮಣನ ಶಾಪದಿಂದ (ಪಶುಜನ್ಮವನ್ನು ಹೊಂದುಯೆಂದು ಬ್ರಾಹ್ಮಣನು ಶಾಪ ಕೊಟ್ಟ ಕಾರಣ ಅದರಂತೆ) ಕರಡಿಯ ಜನ್ಮವನ್ನು ಹೊಂದಿದನು.

೧೯. ಕಾಡಿನಲ್ಲಿ ಜಾಂಬವಂತನೆಂಬ ಪ್ರಬಲವಾದ ಕರಡಿಯು ಆ ಸಿಂಹವನ್ನು ಕೊಂದು ಮಣಿಯನ್ನು ತೆಗೆದುಕೊಂಡು ತನ್ನ ಪಟ್ಟಣಕ್ಕೆ ಹೋದನು.

೨೦. ದ್ವಾರಕೆಯಲ್ಲಿ ಎಲ್ಲರೂ ಮಾಧವನೇ ಸ್ಯಮಂತಕಮಣಿಯನ್ನು ತೆಗೆದುಕೊಂಡಿರುವನು. ಯಾವರೀತಿಯಾದ ಉಪಾಯದಿಂದ ತೆಗೆದುಕೊಂಡನೋ ಅವನ ಬುದ್ಧಿಯು ಎಂತಹುದೋ ನಾವರಿಯೆವು ಎಂದು ಹೇಳಿಕೊಂಡರು.

೨೧. ಭಗವಂತನು ಈ ರೀತಿಯಾದ ಮಾತನ್ನು ಕೇಳಿ ತನ್ನಮೇಲೆ ಬಂದಿರುವ ಈ ಅಪವಾದವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಭಯಂಕರವಾದ ಕಾಡಿನಲ್ಲಿ ಕಳ್ಳರ ದಾರಿಯ ಗುರುತನ್ನು ಅನುಸರಿಸಿಕೊಂಡು ಹೊರಟನು.

೨೨. ಪ್ರಸೇನನು ಮೃತನಾದುದನ್ನು ಕಂಡು ದುಃಖಗೊಂಡವನಾಗಿ ಮುಂದೆ ಸಿಂಹವನ್ನು ಕಂಡನು. ಮಾಧವನು ಸಿಂಹದಲ್ಲಿ ಮಣಿಯಿಲ್ಲದಿರುವುದನ್ನು ನೋಡಿ ಮತ್ತಷ್ಟು ವ್ಯಥೆಗೊಂಡನು.

ಸತ್ರಾಜಿತಃ ಸೂರ್ಯಭಕ್ತಸ್ತಪಸ್ತತ್ವಾ ಚ ಪುಷ್ಕರೇ ।
ಸ್ಯಮಂತಕಂ ಮಣಿಶ್ರೇಷ್ಠಂ ಸಂಪ್ರಾಪ ಭಾಸ್ಕರಾದಪಿ ॥ ೧೩ ॥

ಅಷ್ಟೌ ಭಾರಾನ್ಸುವರ್ಣಾನಾಂ ಪ್ರಸೂತೇ ನಿತ್ಯಮೇವ ಚ ।
ವಿಷ್ಣೋರ್ಮಣಾವಧಿಷ್ಠಾನಂ ಮಹಾಪೂತೇ ಚ ಪುಣ್ಯದೇ ॥ ೧೪ ॥

ಸತ್ರಾಜಿತಃ ಸತ್ಯಭಾಮಾಂ ದತ್ವಾ ಕೃಷ್ಣಾಯ ಭಕ್ತಿತಃ ।
ಯೌತುಕಾರ್ಥೇ ಮಣಿಂ ದಾತುಮುದ್ಯತೋ ಮಹತೇ ಮಹಾನ್ ॥ ೧೫ ॥

ತಂ ನಿಷಿಧ್ಯ ಪ್ರಸೇನಶ್ಚ ದುರ್ಮತಿಃ ಕಾಲಪೀಡಿತಃ ।
ಮಣಿಂ ಗೃಹೀತ್ವಾ ಪ್ರಯಯೌ ಪುಣ್ಯಾಂ ವಾರಾಣಸೀಂ ಪುರೀಂ ॥ ೧೬ ॥

ನಿಹತ್ಯ ತಂ ಪಥಿ ಬಲಾತ್ಸಿಂಹಃ ಸಬಲ ಏವ ಚ ।
ಮಣಿಂ ಜಗ್ರಾಹ ರುಚಿರಂ ಸೂತ್ರಬದ್ಧಂ ಗಲೇ ದಧೌ ॥ ೧೭ ॥

---

೧೩. ಸತ್ರಾಜಿತನೆಂಬ ಸೂರ್ಯ ಭಕ್ತನು ಪುಷ್ಕರ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಿ ಸೂರ್ಯನಿಂದ ಸ್ಯಮಂತಕವೆಂಬ ಶ್ರೇಷ್ಠವಾದ ಮಣಿಯನ್ನು ಪಡೆದುಕೊಂಡನು.

೧೪. ಆಮಣಿಯು ಪ್ರತಿನಿತ್ಯವೂ ಇಪ್ಪತ್ತುಸಾವಿರ ವರಹತೂಕ ಚಿನ್ನವನ್ನು ಹಡೆಯುತ್ತದೆ. ಅತಿ ಪವಿತ್ರವಾದ ಪುಣ್ಯಕರವಾದ ಆ ಮಣಿಯಲ್ಲಿ ಶ್ರೀ ವಿಷ್ಣುವು ವಾಸವಾಗಿರುವನು.

೧೫. ಸತ್ರಾಜಿತನು ಸತ್ಯಭಾಮೆಯನ್ನು ಭಕ್ತಿಯಿಂದ ಕೃಷ್ಣನಿಗೆ ಕೊಟ್ಟು ಮಹಾತ್ಮನಾದ ಅವನಿಗೆ ಬಳುವಳಿಯಾಗಿ ಸ್ಯಮಂತಕಮಣಿಯನ್ನು ಕೊಡಬೇಕೆಂದು ಪ್ರಯತ್ನಮಾಡಿದನು.

೧೬. ದುರ್ಬುದ್ಧಿಯುಳ್ಳ ಪ್ರಸೇನನು ಮೃತ್ಯುವಿನಿಂದ ಪ್ರೇರಿತನಾಗಿ ಅದನ್ನು ತಪ್ಪಿಸಿ ಮಣಿಯನ್ನು ತೆಗೆದುಕೊಂಡು ಪುಣ್ಯಕರವಾದ ವಾರಾಣಸೀ ಪಟ್ಟಣಕ್ಕೆ ಹೋದನು.

೧೭. ದಾರಿಯಲ್ಲಿ ಒಂದು ಬಲವಾದ ಸಿಂಹವು ಅವನನ್ನು ಕೊಂದು ಮನೋಹರವಾದ ಆ ಮಣಿಯನ್ನು ತೆಗೆದುಕೊಂಡು ದಾರದಿಂದ ಕಟ್ಟಿ ತನ್ನ ಕತ್ತಿನಲ್ಲಿರಿಸಿಕೊಂಡಿತು.

ಕಲಿಂಗರಾಜಪುತ್ರಶ್ಚ ಬ್ರಹ್ಮಶಾಪಾತ್ಸುದಾರುಣಾತ್ ।
ವಿಪ್ರೇಣಾಭ್ಯುದಿತಸ್ತೇನ ಪಶುಯೋನಿಂ ಜಗಾಮ ಸಃ ॥ ೧೮ ॥

ನಿಹತ್ಯ ಸಿಂಹಂ ಗಹನೇ ಭಲ್ಲೂಕೋ ಜಾಂಬವಾನ್ಬಲೀ ।
ಮಣಿಂ ಗೃಹೀತ್ವಾ ಪ್ರಯಯೌ ಸ್ವಪುರಂ ರತ್ನನಿರ್ಮಿತಂ ॥ ೧೯ ॥

ಊಚುಃ ಸರ್ವೇ ದ್ವಾರಕಾಯಾಂ ಮಣಿಂ ಜಗ್ರಾಹ ಮಾಧವಃ ।
ತಸ್ಯ ಬುದ್ಧಿಂ ನ ಜಾನೀಮಃ ಕೇನೋಪಾಯೇನ ವೇತಿ ಚ ॥ ೨೦ ॥

ಇತಿ ಶ್ರುತ್ವಾ ತು ಭಗವಾನ್ಕಲಂಕಕ್ಷಂತನಾಯ ಚ ।
ಪ್ರಯಯೌ ಕಾನನಂ ಘೋರಂ ಚೌರಚಿಹ್ನೇನ ವರ್ತ್ಮನಾ ॥ ೨೧ ॥

ಮೃತಂ ಪ್ರಸೇನಂ ದೃಷ್ಟ್ವಾ ಚ ದುಃಖೀ ಸಿಂಹಂ ದದರ್ಶ ಸಃ ।
ಮಣಿಶೂನ್ಯಂ ಚ ತಂ ದೃಷ್ಟ್ವಾ ವಿಷಸಾದ ಚ ಮಾಧವಃ ॥ ೨೨ ॥

---

೧೮. ಕಲಿಂಗರಾಜನ ಮಗನು ಬ್ರಾಹ್ಮಣನ ಶಾಪದಿಂದ (ಪಶುಜನ್ಮವನ್ನು ಹೊಂದುಯೆಂದು ಬ್ರಾಹ್ಮಣನು ಶಾಪ ಕೊಟ್ಟ ಕಾರಣ ಅದರಂತೆ) ಕರಡಿಯ ಜನ್ಮವನ್ನು ಹೊಂದಿದನು.

೧೯. ಕಾಡಿನಲ್ಲಿ ಜಾಂಬವಂತನೆಂಬ ಪ್ರಬಲವಾದ ಕರಡಿಯು ಆ ಸಿಂಹವನ್ನು ಕೊಂದು ಮಣಿಯನ್ನು ತೆಗೆದುಕೊಂಡು ತನ್ನ ಪಟ್ಟಣಕ್ಕೆ ಹೋದನು.

೨೦. ದ್ವಾರಕಿಯಲ್ಲಿ ಎಲ್ಲರೂ ಮಾಧವನೇ ಸ್ಯಮಂತಕಮಣಿಯನ್ನು ತೆಗೆದುಕೊಂಡಿರುವನು. ಯಾವರೀತಿಯಾದ ಉಪಾಯದಿಂದ ತೆಗೆದುಕೊಂಡನೋ ಅವನ ಬುದ್ಧಿಯು ಎಂತಹುದೋ ನಾವರಿಯೆವು ಎಂದು ಹೇಳಿಕೊಂಡರು.

೨೧. ಭಗವಂತನು ಈ ರೀತಿಯಾದ ಮಾತನ್ನು ಕೇಳಿ ತನ್ನಮೇಲೆ ಬಂದಿರುವ ಈ ಅಪವಾದವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಭಯಂಕರವಾದ ಕಾಡಿನಲ್ಲಿ ಕಳ್ಳರ ದಾರಿಯ ಗುರುತನ್ನು ಅನುಸರಿಸಿಕೊಂಡು ಹೊರಟನು.

೨೨. ಪ್ರಸೇನನು ಮೃತನಾದುದನ್ನು ಕಂಡು ದುಃಖಗೊಂಡವನಾಗಿ ಮುಂದೆ ಸಿಂಹವನ್ನು ಕಂಡನು. ಮಾಧವನು ಸಿಂಹದಲ್ಲಿ ಮಣಿಯಿಲ್ಲದಿರುವುದನ್ನು ನೋಡಿ ಮತ್ತಷ್ಟು ವ್ಯಥೆಗೊಂಡನು.

ಸರ್ವಂ ಜ್ಞಾತ್ವಾ ಚ ಸರ್ವಜ್ಞೋ ಭಲ್ಲೂಕಭವನಂ ಯಯೌ ।
ರುದಂತಂ ಬಾಲಕಂ ತತ್ರ ಧಾತ್ರೀ ಕ್ರೋಡೇ ದದರ್ಶ ಸಃ ॥ ೨೩ ॥

ಬಾಲಕಂ ಬೋಧಯಾಮಾಸ ಸಾ ಧಾತ್ರೀ ಕರುಣಾನ್ವಿತಾ ।
ಮಣಿಂ ಗೃಹಾಣ ಬಾಲೇತಿ ತವ ಹ್ಯೇಷಃ ಸ್ಯಮಂತಕಃ ॥ ೨೪ ॥

ಸಿಂಹಃ ಪ್ರಸೇನಮವಧೀತ್ಸಿಂಹೋ ಜಾಂಬವತಾ ಹತಃ ।
ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ ॥ ೨೫ ॥

ಇತಿ ಧಾತ್ರ್ಯುಕ್ತಸುಶ್ಲೋಕಂ ಯಶ್ಚ ಸ್ಮೃತ್ವಾ ಜಲಂ ಪಿಬೇತ್ ।
ದೈವದೃಷ್ಟನಷ್ಟಚಂದ್ರದೋಷಾದೇವ ಪ್ರಮುಚ್ಯತೇ ॥ ೨೬ ॥

ಕಾಮತೋ ಯದಿ ಪಶ್ಯಂತಿ ದಾಂಭಿಕಾ ವೇದನಿಂದಕಾಃ ।
ಕಲಂಕಿನೋ ಭವಂತ್ಯೇವಮಿತ್ಯಾಹ ಕಮಲೋದ್ಭವಃ ॥ ೨೭ ॥

---

೨೩. ಸರ್ವಜ್ಞನಾದ ಹರಿಯು ವಿಷಯವನ್ನೆಲ್ಲ ತಿಳಿದುಕೊಂಡು ಜಾಂಬವಂತನ ಮನೆಗೆ ಹೋದನು. ಅಲ್ಲಿ ಅಳುತ್ತಿರುವ ಬಾಲಕನೊಬ್ಬನು ದಾದಿಯ ತೊಡೆಯಮೇಲೆ ಮಲಗಿರುವುದನ್ನು ಕಂಡನು.

೨೪. ಆ ದಾದಿಯು ದಯೆಯಿಂದ ಬಾಲಕನನ್ನು ಎಲೈ ಮಗುವೇ ಮಣಿಯನ್ನು ತೆಗೆದುಕೋ ಈ ಸ್ಯಮಂತಕವು ನಿನ್ನದು ಎಂದು ಸಮಾಧಾನಮಾಡುತ್ತಿದ್ದಳು

೨೫. ಸಿಂಹವು ಪ್ರಸೇನನನ್ನು ಕೊಂದಿತು. ಸಿಂಹವನ್ನು ಜಾಂಬವಂತನು ಕೊಂದನು. ಎಲೈ ಸುಕುಮಾರನೇ! ಅಳಬೇಡ ಈ ಸ್ಯಮಂತಕಮಣಿಯು ನಿನಗೆ ಸಲ್ಲತಕ್ಕದು ಎಂದು ಹೇಳುತ್ತಿದ್ದಳು.

೨೬. ಈ ಪ್ರಕಾರವಾಗಿ ದಾದಿಯು ಹೇಳಿದ ಶ್ಲೋಕವನ್ನು ಸ್ಮರಿಸಿಕೊಂಡು ಯಾವನು ನೀರನ್ನು ಕುಡಿಯುತ್ತಾನೋ ಅವನು ಅಕಸ್ಮಾತ್ತಾಗಿ ಕ್ಷೀಣಚಂದ್ರನನ್ನು ನೋಡಿದುದರಿಂದುಂಟಾದ ಪಾಪದಿಂದ ಬಿಡುಗಡೆ ಹೊಂದುತ್ತಾನೆ.

೨೭. ದಾಂಭಿಕರೂ ವೇದನಿಂದಕರೂ ಆದ ಯಾರು ಮನಃಪೂರ್ವಕವಾಗಿ ಕಲಂಕಿಯಾದ ಚಂದ್ರನನ್ನು ನೋಡುತ್ತಾರೋ ಅವರು ಅಪವಾದದಿಂದ ದೂಷಿತರಾಗುತ್ತಾರೆಂದು ಬ್ರಹ್ಮನು ಹೇಳಿರುವನು.

ಕೃಷ್ಣೋ ಧಾತ್ರೀವಚಃ ಶ್ರುತ್ವಾ ಮಣಿಂ ಜಗ್ರಾಹ ಬಾಲಕಾತ್ ।
ಧಾತ್ರೀ ಗತ್ವಾ ಚ ಭಲ್ಲೂಕಂ ಕಥಯಾಮಾಸ ಕೋಪತಃ　　॥ ೨೮ ॥

ಜಾಂಬವಾಂಶ್ಚ ಸಮಾಗತ್ಯ ತುಷ್ಟಾವ ಪ್ರಣಿಪತ್ಯ ಸಃ ।
ಕನ್ಯಾಂ ಜಾಂಬವತೀಂ ತಸ್ಮೈ ಯೌತಕಾರ್ಥಂ ಮಣಿಂ ದದೌ　　॥ ೨೯ ॥

ದ್ವಾರಕಾಂ ಮಣಿಮಾನೀಯ ದರ್ಶಯಾಮಾಸ ಯಾದವಾನ್ ।
ಪ್ರಭುಶ್ಚ ಸರ್ವತಃ ಶುದ್ಧೋ ನಿಷ್ಕಲಂಕೋ ಬಭೂವ ಸಃ　　॥ ೩೦ ॥

ಏತತ್ತೇ ಕಥಿತಂ ವತ್ಸ ಮಣೇರಾಖ್ಯಾನಮುತ್ತಮಂ ।
ಅಧ್ಯಾಯಶ್ರವಣಾದೇವ ನಿಷ್ಕಲಂಕೋ ಭವೇನ್ನರಃ　　॥ ೩೧ ॥

---

೨೮. ಕೃಷ್ಣನು ದಾದಿಯು ಹೇಳಿದ ಮಾತನ್ನು ಕೇಳಿ ಬಾಲಕನ ಕೈಯಲ್ಲಿದ್ದ ಮಣಿಯನ್ನು ತೆಗೆದುಕೊಂಡನು. ದಾದಿಯು ಕೋಪಗೊಂಡವಳಾಗಿ ಜಾಂಬವಂತನಿದ್ದಲ್ಲಿಗೆ ಹೋಗಿ ಅವನಿಗೆ ತಿಳಿಸಿದಳು.

೨೯. ಆ ಜಾಂಬವಂತನು ಬಂದು ಕೃಷ್ಣನಿಗೆ ನಮಸ್ಕಾರಮಾಡಿ ಸ್ತೋತ್ರ ಮಾಡಿದನು. ತನ್ನಮಗಳಾದ ಜಾಂಬವತಿಯನ್ನು ಆವನಿಗೆ ಕೊಟ್ಟು ಬಳುವಳಿಯಾಗಿ ಸ್ಯಮಂತಕ ಮಣಿಯನ್ನೂ ಕೊಟ್ಟನು.

೩೦. ಪ್ರಭುವಾದ ಹರಿಯು ಸ್ಯಮಂತಕ ಮಣಿಯನ್ನು ದ್ವಾರಕಿಗೆ ತಂದು ಸಕಲ ಯಾದವರಿಗೂ ತೋರಿಸಿದನು. ಅಪವಾದದಿಂದ ಮುಕ್ತನೂ ಪರಿಶುದ್ಧನೂ ಆದನು.

೩೧. ಎಲೈ ನಾರದನೇ! ಉತ್ತಮವಾದ ಈ ಸ್ಯಮಂತಕ ಮಣಿಯ ಕಥೆಯನು ನಿನಗೆ ಹೇಳಿರುವೆನು. ಮಾನವನು ಈ ಅಧ್ಯಾಯವನ್ನು ಕೇಳುವ ಮಾತ್ರದಿಂದಲೇ ಕಲಂಕದಿಂದ ಮುಕ್ತನಾಗುತ್ತಾನೆ.

ಯಚ್ಛ್ರುತಂ ಧರ್ಮವಕ್ತ್ರೇಣ ತದುಕ್ತಂ ಚ ಯಥಾಗತಂ ।
ಸುದುರ್ಲಭಮುಪಾಖ್ಯಾನಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೩೨ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಸ್ಯಮಂತಕಮಣಿಹರಣಂನಾಮ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ

---

೩೨. ಧರ್ಮದೇವನ ಮುಖದಿಂದ ಯಾವ ರೀತಿಯಲ್ಲಿ ನಾನು ಕೇಳಿದ್ದೆನೋ ಹಾಗೆಯೇ ಹೇಳಿರುವೆನು. ಈ ಉಪಾಖ್ಯಾನವು ಸುಲಭವಾಗಿ ದೊರೆಯತಕ್ಕದಲ್ಲ. ಇನ್ನೇನನ್ನು ಕೇಳಲಪೇಕ್ಷಿಸುವಿ ?

ಇಂತು ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣ ಜನ್ಮ
ಖಂಡದ ಉತ್ತರಾರ್ಧದ ನಾರಾಯಣ ನಾರದ
ಸಂವಾದದಲ್ಲಿ ಸ್ಯಮಂತಕಮಣಿ ಹರಣ
ವೆಂಬ ನೂರಇಪ್ಪತ್ತೆರಡನೆಯ
ಅಧ್ಯಾಯವು



॥ ಓಂ ॥

॥ ಓಂ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### ॥ ಅಥ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ ॥

॥ ನಾರದ ಉವಾಚ ॥

ಗಣೇಶಪೂಜನಾಖ್ಯಾನಂ ಪುರಾಣೇಷು ಚ ದುರ್ಲಭಂ ।
ಶ್ರುತಂ ತದ್ಬ್ರಹ್ಮಣೋ ವಕ್ತ್ರಾತ್ಸಾಮಾನ್ಯಂ ಚ ಸಮಾಸತಃ ॥ ೧ ॥

ಮಹಿಮಾನಂ ಗಣಪತೇಃ ಸರ್ವಪೂಜ್ಯೇಶ್ವರಸ್ಯ ಚ ।
ವ್ಯಾಸೇನ ಶ್ರೋತುಮಿಚ್ಛಾಮಿ ಯೋಗೀಂದ್ರಾಣಾಂ ಗುರೋರ್ಗುರುಃ ॥೨॥

ಸಿದ್ಧಾಶ್ರಮೇ ಮಹಾಪೂಜಾ ದಿವೌಕೋಭಿಃ ಕೃತಾ ಪುರಾ ।
ರಾಧಾ ಮಾಧವಯೋಸ್ತತ್ರ ಪುನಃ ಸಂಮೀಲನಂ ಪುರಾ ॥ ೩ ॥

---

ನಾರದನು ಹೇಳುತ್ತಾನೆ :—

೧. ಗಣೇಶನ ಪೂಜೆಯ ಮಹಿಮೆಯು ಪುರಾಣಗಳಲ್ಲಿಯೂ ದುರ್ಲಭವಾಗಿರುವುದು. ಅವನ್ನು ಬ್ರಹ್ಮನಿಂದ ಸಾಮಾನ್ಯವಾಗಿ ಕೇಳಿರುವೆನು.

೨. ಸಕಲರಿಗೂ ಪೂಜ್ಯನೂ ಈಶ್ವರನೂ ಆದ ಗಣಪತಿಯ ಮಹಿಮೆಯನ್ನು ಯೋಗೀಂದ್ರರಿಗೂ ಗುರುಗಳಿಗೂ ಗುರುವಾರ ನಿನ್ನಿಂದ ಸಂಪೂರ್ಣವಾಗಿ ಕೇಳಬೇಕೆಂದಿಚ್ಛಿಸುತ್ತೇನೆ.

೩–೪. ಹಿಂದೆ ದೇವತೆಗಳು ಸಿದ್ಧಾಶ್ರಮದಲ್ಲಿ ಗಣಪತಿಯ ಮಹಾಪೂಜೆಯನ್ನು ಮಾಡಿದರು. ಮತ್ತು ಪೂರ್ವಕಾಲದಲ್ಲಿ ನೂರುವರುಷ ಶ್ರೀ ದಾಮನ ಶಾಪವನ್ನನುಭವಿಸಿ ಅದು ಮುಗಿದನಂತರ ರಾಧಾಮಾಧವರಿಗೆ ಮತ್ತೆ ಸಮಾಗಮ

ಅತೀತೇ ವರ್ಷಶತಕೇ ಶ್ರೀದಾಮ್ನಃ ಶಾಪಮೋಕ್ಷಣೇ ।
ಆದೌ ಚಕಾರ ಪೂಜಾಂ ಚ ಸಾ ಚ ರಾಧಾ ಕಥಂ ಮುನೇ ॥ ೪ ॥

ಸ್ಥಿತೇಷು ಚ ಸುರೇಂದ್ರೇಷು ಬ್ರಹ್ಮವಿಷ್ಣುಶಿವಾದಿಷು ।
ನಾಗೇಂದ್ರೇ ಚ ಸ್ಥಿತೇ ಶೇಷೇ ನಾಗೇಷು ಚ ಮಹತ್ಸು ಚ ॥ ೫ ॥

ರಾಜೇಂದ್ರೇಷು ಚ ಭೂಮೌ ಚ ಬಲಿಷ್ಠೇಷ್ವಸುರೇಷು ಚ ।
ಗಂಧರ್ವೇಷು ಚ ರಕ್ಷಃಸು ಚಾನ್ಯೇಷು ಬಲವತ್ಸು ಚ ॥ ೬ ॥

ವಿಸ್ತರೇಣ ಮಹಾಭಾಗ ತನ್ಮಾಂ ವ್ಯಾಖ್ಯಾತುಮರ್ಹಸಿ ॥ ೭ ॥

॥ ಶ್ರೀನಾರಾಯಣ ಉವಾಚ ॥

ತ್ರೈಲೋಕ್ಯೇ ಪೃಥಿವೀ ಧನ್ಯಾ ಮಾನ್ಯಾ ಪುಣ್ಯವತೀ ಸತೀ ।
ತತ್ರ ಭಾರತವರ್ಷಂ ಚ ಕರ್ಮಣಾಂ ಫಲದಂ ಶುಭಂ ॥ ೮ ॥

ಧನ್ಯಂ ಯಶಸ್ಯಂ ಪೂಜ್ಯಂ ಚ ಪುಣ್ಯಕ್ಷೇತ್ರೇ ಚ ಭಾರತೇ ।
ಸಿದ್ಧಾಶ್ರಮಂ ಮಹಾಪುಣ್ಯಕ್ಷೇತ್ರಂ ಮೋಕ್ಷಪ್ರದಂ ಶುಭಂ ॥ ೯ ॥

---

ವಾಯಿತು. ಆ ರಾಧೆಯು ಮೊದಲು ಯಾವರೀತಿಯಲ್ಲಿ ಶ್ರೀಗಣಪತಿಯ ಪೂಜೆಯನ್ನು ಮಾಡಿದಳು ?

೫–೭. ದೇವಶ್ರೇಷ್ಠರಾದ ಬ್ರಹ್ಮ ವಿಷ್ಣು ಶಿವನೇ ಮುಂತಾದವರಿರಲು ನಾಗಶ್ರೇಷ್ಠನಾದ ಶೇಷನಿರಲು, ಮಹಾತ್ಮರಾದ ನಾಗರು ಇರಲು ಭೂಮಿಯಲ್ಲಿ ಅನೇಕ ರಾಜಶ್ರೇಷ್ಠರೂ ಬಲಿಷ್ಠರಾದ ರಾಕ್ಷಸರೂ ಮತ್ತು ಗಂಧರ್ವರೂ ಇನ್ನೂ ಬಲಿಷ್ಠರಾದವರೆಷ್ಟೋಜನರಿರಲು ಅವರನ್ನು ಬಿಟ್ಟು ಗಣೇಶನನ್ನೇಕೆ ಪೂಜಿಸಿದಳು ? ಎಲೈ ಮಹಾತ್ಮನೇ! ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳುವವನಾಗು.

ಶ್ರೀನಾರಾಯಣನು ಹೇಳುತ್ತಾನೆ :—

೮–೯. ಮೂರುಲೋಕದಲ್ಲಿಯೂ ಭೂಲೋಕವು ಧನ್ಯವೂ ಮಾನ್ಯವೂ ಪುಣ್ಯವತಿಯೂ ಆಗಿರುತ್ತದೆ. ಆ ಭೂಮಿಯಲ್ಲಿ ಭಾರತವರ್ಷವು ಕರ್ಮಗಳಿಗೆ ತಕ್ಕ ಫಲಗಳನ್ನು ಕೊಡತಕ್ಕದಾಗಿ ಮಂಗಳಕರವಾಗಿ ಧನ್ಯವೂ ಯಶಸ್ಕರವೂ ಪೂಜ್ಯವೂ ಆಗಿರುವುದು. ಭಾರತದಲ್ಲಿರುವ ಪುಣ್ಯಕ್ಷೇತ್ರಗಳಲ್ಲಿ ಸಿದ್ಧಾಶ್ರಮವೆಂಬುದು ಮಹಾಪುಣ್ಯಕ್ಷೇತ್ರವೂ ಮೋಕ್ಷವನ್ನು ಕೊಡುವುದೂ ಮತ್ತು ಮಂಗಳವನ್ನುಂಟುಮಾಡುವುದೂ ಆಗಿರುತ್ತದೆ.

ಸನತ್ಕುಮಾರೋ ಭಗವಾಂಸ್ತತ್ರ ಸಿದ್ಧೋ ಬಭೂವ ಹ ।
ಸ್ವಯಂ ವಿಧಾತಾ ತತ್ರೈವ ತಪಸ್ತ್ವಾ ಸಿದ್ಧೋ ಬಭೂವ ಹ　　॥ ೧೦ ॥

ಯೋಗೀಂದ್ರಾಶ್ಚ ಮುನೀಂದ್ರಾಶ್ಚ ಸಿದ್ಧೇಂದ್ರಾ ಕಪಿಲಾದಯಃ ।
ಶತಕ್ರತೂನ್ಮಹೇಂದ್ರಶ್ಚ ತತ್ರ ಕೃತ್ವಾ ಬಭೂವ ಹ　　॥ ೧೧ ॥

ತೇನ ಸಿದ್ಧಾಶ್ರಮಂ ನಾಮ ಸರ್ವೇಷಾಮಪಿ ದುರ್ಲಭಂ ।
ಅಧಿಷ್ಠಾನಂ ಗಣೇಶಸ್ಯ ತತ್ರೈವ ಸತತಂ ಮುನೇ　　॥ ೧೨ ॥

ಅಮೂಲ್ಯರತ್ನನಿರ್ಮಾಣಗಣೇಶಪ್ರತಿಮಾಂ ಶುಭಾಂ ।
ವೈಶಾಖೀಪೂರ್ಣಿಮಾಯಾಂ ಚ ಪೂಜಾಂ ಕುರ್ವಂತಿ ದೇವತಾಃ　　॥ ೧೩ ॥

ನಾಗಾಶ್ಚ ಮಾನವಾಶ್ಚೈವ ದೈತ್ಯಾ ಗಂಧರ್ವ ರಾಕ್ಷಸಾಃ ।
ಸಿದ್ಧೇಂದ್ರಾಶ್ಚ ಮುನೀಂದ್ರಾಶ್ಚ ಯೋಗೀಂದ್ರಾಃ ಸನಕಾದಯಃ　　॥ ೧೪ ॥

---

೧೦. ಆ ಸಿದ್ಧಾಶ್ರಮದಲ್ಲಿ ಪೂಜ್ಯನಾದ ಸನತ್ಕುಮಾರ ಮುನಿಯು ಸಿದ್ಧಿಯನ್ನು ಹೊಂದಿದನು. ಸಾಕ್ಷಾತ್ ಬ್ರಹ್ಮನು ಅಲ್ಲಿಯೇ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದನು.

೧೧. ಕಪಿಲನೇ ಮುಂತಾದ ಯೋಗಿ ಶ್ರೇಷ್ಠರೂ ಮುನಿಶ್ರೇಷ್ಠರೂ ಸಿದ್ಧರೂ ಕೂಡ ಇಲ್ಲಿ ಸಿದ್ಧಿಯನ್ನು ಪಡೆದಿರುವರು. ಮಹೇಂದ್ರನೂ ಕೂಡ ನೂರು ಯಾಗಗಳನ್ನು ಈ ಕ್ಷೇತ್ರದಲ್ಲಿ ಮಾಡಿ ಸಿದ್ಧನಾದನು.

೧೨. ಆದುದರಿಂದ ಇದು ಸಿದ್ಧಾಶ್ರಮವೆಂದು ಹೆಸರುಗೊಂಡು ಎಲ್ಲರಿಗೂ ದುರ್ಲಭವಾಗಿರುವುದು. ಎಲೈ ನಾರದಮುನಿಯೇ ! ಅಲ್ಲಿಯೇ ಯಾವಾಗಲೂ ಗಣೇಶನು ವಾಸವಾಗಿರುವನು.

೧೩. ದೇವತೆಗಳು ವೈಶಾಖ ಮಾಸದ ಹುಣ್ಣಿಮೆಯಂದು ಮಹಾ ಬೆಲೆಯುಳ್ಳ ರತ್ನಗಳಿಂದ ಮಾಡಿದ ಮಂಗಳ ರೂಪವಾದ ಗಣೇಶನ ಪ್ರತಿಮೆಯನ್ನು ಪೂಜೆ ಮಾಡುತ್ತಾರೆ.

೧೪. ನಾಗರೂ ದಾನವರೂ ದೈತ್ಯರೂ ಗಂಧರ್ವರೂ ರಾಕ್ಷಸರೂ ಸಿದ್ಧಶ್ರೇಷ್ಠರೂ ಮುನಿಶ್ರೇಷ್ಠರೂ ಸನಕನೇ ಮುಂತಾದ ಯೋಗಿ ಶ್ರೇಷ್ಠರೂ ಕೂಡ ಪೂಜೆ ಮಾಡುತ್ತಾರೆ.

ತತ್ರಾಜಗಾಮ ಶಂಭುಶ್ಚ ಪಾರ್ವತ್ಯಾ ಸಹ ಶಂಕರಃ ।
ಸಗಣಃ ಕಾರ್ತಿಕೇಯಶ್ಚ ಸ್ವಯಂ ಬ್ರಹ್ಮಾ ಪ್ರಜಾಪತಿಃ ॥ ೧೫ ॥

ತತ್ರಾಜಗಾಮ ಶೇಷಶ್ಚ ನಾಗೇಂದ್ರೈಃ ಸಹ ಸತ್ವರಂ ।
ತತ್ರಾಜಗ್ಮುಃ ಸುರಾಃ ಸರ್ವೇ ಮನವೋ ಮುನಯಸ್ತಥಾ ॥ ೧೬ ॥

ಆಜಗ್ಮುಸ್ತೇ ನೃಪಾಃ ಸರ್ವೇ ಪೂಜಾರ್ಥಂ ಹೃಷ್ಟಮಾನಸಾಃ ।
ಆಯಯೌ ಭಗವಾನ್ಕೃಷ್ಣೋ ದ್ವಾರಕಾವಾಸಿಭಿಃ ಸಹ ॥ ೧೭ ॥

ಆಜಗಾಮ ತದಾ ನಂದಃ ಸಾರ್ಧಂ ಗೋಕುಲವಾಸಿಭಿಃ ।
ಗೋಪೀಭಿಃ ಶತಕೋಟೀಭಿರ್ಗೋಲೋಕವಾಸಿಭಿಃ ಸಹ ॥ ೧೮ ॥

ಗಜೇಂದ್ರಕೋಟಿತುಲ್ಯಾಭಿರ್ಬಲಿಷ್ಠಾಭಿಃ ಸಹಾಲಿಭಿಃ ।
ಆಯಯೌ ಸುಂದರೀ ರಾಧಾ ಕೃಷ್ಣಪ್ರಾಣಾಧಿದೇವತಾ ॥ ೧೯ ॥

---

೧೫. ಅಲ್ಲಿಗೆ ಶಂಕರನೂ ಪಾರ್ವತಿಯೊಡನೆ ಬಂದನು. ಪರಿವಾರ ಸಮೇತನಾದ ಷಣ್ಮುಖನೂ ಪ್ರಜಾಧಿಪನಾದ ಸಾಕ್ಷಾತ್ ಬ್ರಹ್ಮನೂ ಸಹ ಬಂದರು

೧೬. ಶೇಷನೂ ನಾಗೇಂದ್ರನೊಡನೆ ಶೀಘ್ರವಾಗಿ ಅಲ್ಲಿಗೆ ಬಂದನು. ಮತ್ತು ಅಲ್ಲಿಗೆ ಸಕಲ ದೇವತೆಗಳೂ ಮನುಗಳೂ ಮುನಿಗಳೂ ಬಂದರು.

೧೭. ಗಣೇಶನನ್ನು ಪೂಜೆ ಮಾಡಲು ಸಂತೋಷಗೊಂಡವರಾಗಿ ಸಕಲ ರಾಜರುಗಳೂ ಬಂದರು. ಪೂಜ್ಯನಾದ ಕೃಷ್ಣನೂ ದ್ವಾರಕಿಯ ಜನರೊಂದಿಗೆ ಬಂದನು

೧೮. ನಂದನೂ ಕೂಡ ಗೋಕುಲದ ಜನರೊಡನೆಯೂ ಗೋಕುಲದಲ್ಲಿರುವ ನೂರು ಗೋಪ ಗೋಪಿಯರಿಂದಲೂ ಕೂಡಿದವನಾಗಿ ಅಲ್ಲಿಗೆ ಬಂದನು.

೧೯. ಒಂದು ಕೋಟಿ ಶ್ರೇಷ್ಠವಾದ ಆನೆಗಳಷ್ಟು ಬಲವುಳ್ಳ ಸಖಿಯರಿಂದೊಡಗೂಡಿದ ಸುಂದರಿಯಾದ ಕೃಷ್ಣನ ಪ್ರಾಣಾಧಿದೇವತೆಯಾದ ರಾಧೆಯು ಅಲ್ಲಿಗೆ ಬಂದಳು.

ರಾಸೇಶ್ವರೀ ಸುರಸಿಕಾ ಶತವರ್ಷೇ ಗತೇ ಸತೀ ।
ಸುಸ್ನಾತಾ ಸುಂದರೀ ಶುದ್ಧಾ ಧೃತ್ವಾ ಧೌತೇ ಚ ವಾಸಸೀ　　॥ ೨೦ ॥

ಸಂಯತಾ ಸಾ ನಿರಾಹಾರಾ ಗತ್ವಾ ಚ ಮಣಿಮಂಟಪಂ ।
ಸುಪ್ರಕ್ಷಾಲಿತಪಾದಾಬ್ಜಾ ಕಾಂತಾ ಭುವನಪಾವನೀ　　॥ ೨೦ ॥

ಶ್ರೀಕೃಷ್ಣಪ್ರಾಪ್ತಿಕಾಮಾಢ್ಯಾ ಸುಸಂಕಲ್ಪಂ ವಿಧಾಯ ಚ ।
ಗಂಗೋದಕೇನ ಹೇರಂಬಂ ಸ್ನಾಪಯಾಮಾಸ ಭಕ್ತಿತಃ　　॥ ೨೨ ॥

ಧ್ಯಾನಂ ಚ ಸಾಮವೇದೋಕ್ತಂ ಚಕಾರ ಶುಕ್ಲಪುಷ್ಪತಃ ।
ಮಾತಾ ಚತುರ್ಣಾಂ ವೇದಾನಾಂ ವಸೋಃಶ್ಚ ಜಗತಾಮಪಿ　　॥ ೨೩ ॥

ಬುದ್ಧಿರೂಪಾ ಭಗವತೀ ಜ್ಞಾನಿನಾಂ ಜನನೀ ಪರಾ ।
ಧ್ಯಾನಾತ್ಮಕಂ ಸ್ವಪುತ್ರಂ ತಂ ಪರಾ ಧ್ಯಾನಂ ಚಕಾರ ಸಾ　　॥ ೨೪ ॥

---

೨೦–೨೨. ರಾಸೇಶ್ವರಿಯೂ ಅತ್ಯಂತ ರಸಿಕಳೂ ಆದ ಆ ರಾಧೆಯುನೂರು ವರುಷಗಳಾದನಂತರ ಬಂದು ಸ್ನಾನಮಾಡಿ ಪರಿಶುದ್ಧಳಾಗಿ ಒಣಗಿದ ವಸ್ತ್ರವನ್ನುಟ್ಟುಕೊಂಡವಳಾಗಿ ಜಿತೇಂದ್ರಿಯಳಾಗಿ ಆಹಾರವಿಲ್ಲದವಳಾಗಿ ಮಣಿ ಮಂಟಪಕ್ಕೆ ಹೋಗಿ ಮನೋಹರಳೂ ಲೋಕಗಳನ್ನು ಪರಿಶುದ್ಧಗೊಳಿಸುವಳೂ ಆದಾಗ್ಯೂ ಕಾಲುಗಳನ್ನು ತೊಳೆದುಕೊಂಡು ಶ್ರೀ ಕೃಷ್ಣನನ್ನು ಹೊಂದಬೇಕೆಂಬ ಅಪೇಕ್ಷೆಯಿಂದ ಕೂಡಿದವಳಾಗಿ ಉತ್ತಮ ಸಂಕಲ್ಪವನ್ನುಮಾಡಿ ಗಂಗಾನದಿಯ ನೀರಿನಿಂದ ಹೇರಂಬನನ್ನು ಭಕ್ತಿಯಿಂದ ಸ್ನಾನ ಮಾಡಿಸಿದಳು.

೨೩–೨೪. ನಾಲ್ಕು ವೇದಗಳಿಗೂ ಅಷ್ಟವಸುಗಳಿಗೂ ಸಕಲ ಜಗತ್ತಿಗೂ ತಾಯಿಯಾದ ಬುದ್ಧಿರೂಪಳೂ ಪೂಜ್ಯಳೂ ಜ್ಞಾನಿಗಳಿಗೆ ಉತ್ತಮ ಮಾತೆಯೂ ಉತ್ತಮಳೂ ಆದ ಆ ದೇವಿಯು ಬಿಳಿಯ ಹೂವುಗಳನ್ನು ಪೂಜಿಸಿ ಸಾಮವೇದೋಕ್ತವಾದ ಸ್ತೋತ್ರದಿಂದ ಸ್ತುತಿಸಿದಳು. ಧ್ಯಾನಸ್ವರೂಪನಾದ ತನ್ನ ಮಗನೇ ಆದ ಗಣೇಶನನು ಧ್ಯಾನ ಮಾಡಿದಳು.

ಖರ್ವಂ ಲಂಬೋದರಂ ಸ್ಥೂಲಂ ಜ್ವಲಂತಂ ಬ್ರಹ್ಮತೇಜಸಾ ।
ಗಜವಕ್ತ್ರಂ ವಹ್ನಿವರ್ಣಮೇಕದಂತಮನಂತಕಂ ॥ ೨೫ ॥

ಸಿದ್ಧಾನಾಂ ಯೋಗಿನಾಮೇವ ಜ್ಞಾನಿನಾಂಚ ಗುರೋರ್ಗುರುಂ ।
ಧ್ಯಾನಂ ಮುನೀಂದ್ರೈರ್ದೇವೇಂದ್ರೈರ್ಬ್ರಹ್ಮೇಶಶೇಷಸಂಜ್ಞಿಕೈಃ ॥ ೨೬ ॥

ಸಿದ್ಧೇಂದ್ರೈರ್ಮುನಿಭಿಃ ಸದ್ಭಿರ್ಭಗವಂತಂ ಸನಾತನಂ ।
ಬ್ರಹ್ಮಸ್ವರೂಪಂ ಪರಮಂ ಮಂಗಲಂ ಮಂಗಲಾಲಯಂ ॥ ೨೭ ॥

ಸರ್ವವಿಘ್ನಹರಂ ಶಾಂತಂ ದಾತಾರಂ ಸರ್ವಸಂಪದಾಂ ।
ಭವಾಬ್ಧಿಮಾಯಾಪೋತೇನ ಕರ್ಣಧಾರಂ ಚ ಕರ್ಮಿಣಾಂ ॥ ೨೮ ॥

ಶರಣಾಗತದೀನಾರ್ತಪರಿತ್ರಾಣಪರಾಯಣಂ ।
ಧ್ಯಾಯೇದ್ಧ್ಯಾನಾತ್ಮಕಂ ಸಾಧ್ಯಂ ಭಕ್ತೇಶಂ ಭಕ್ತವತ್ಸಲಂ ॥ ೨೯ ॥

---

೨೫–೨೭. ಕುಳ್ಳನೂ ಜೋಲುತ್ತಿರುವ ಹೊಟ್ಟೆಯುಳ್ಳವನೂ ದಪ್ಪನಾದವನೂ ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿರುವವನೂ ಆನೆಯ ಮುಖವುಳ್ಳವನೂ ಅಗ್ನಿಯಂತೆ ಬಣ್ಣವುಳ್ಳವನೂ ಒಂದು ಹಲ್ಲುಳ್ಳವನೂ ನಾಶ ರಹಿತನೂ ಸಿದ್ಧರಿಗೂ ಯೋಗಿಗಳಿಗೂ ಗುರುಗಳಿಗೂ ಗುರುವಾದ ಮುನಿಗಳಿಂದಲೂ ದೇವತೆಗಳಿಂದಲೂ ಬ್ರಹ್ಮ ಈಶ್ವರ ಶೇಷ ಮುಂತಾದವರಿಂದ ಧ್ಯಾನ ಮಾಡಲ್ಪಡುತ್ತಿರುವವನೂ ಭಗವಂತನೂ ಸನಾತನನೂ ಬಹ್ಮಸ್ವರೂಪನೂ ಉತ್ತಮನೂ ಮಂಗಲರೂಪನೂ ಮಂಗಳಕ್ಕೆ ಆಶ್ರಯನೂ ಆದ ಗಣೇಶನನ್ನು ಧ್ಯಾನಮಾಡಿದಳು.

೨೮–೨೯. ಮತ್ತು ಸಕಲ ವಿಘ್ನಗಳನ್ನು ನಾಶಮಾಡಿ ಸಕಲೈಶ್ವರ್ಯಗಳನ್ನೂ ಕೊಡುವವನೂ ಶಾಂತಸ್ವರೂಪನೂ ಸಂಸಾರವೆಂಬ ಮಾಯಾಸಮುದ್ರದ ದೋಣಿಗೆ ಅಂಬಿಗನಂತಿರುವವನೂ ಮರೆಹೊಕ್ಕವರನ್ನೂ ದೀನರನ್ನೂ ದುಃಖಿತರನ್ನೂ ಕಾಪಾಡುವುದರಲ್ಲಿ ಆಸಕ್ತನೂ ಧ್ಯಾನಸ್ವರೂಪನೂ ಸಾಧ್ಯನೂ ಭಕ್ತರಿಗೆ ಅಧಿಪತಿಯೂ ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ದೇವನನ್ನು ಧ್ಯಾನಮಾಡುತ್ತೇನೆ.

ಇತಿ ಧ್ಯಾತ್ವಾ ಸ್ವಶಿರಸಿ ದತ್ವಾ ಪುಷ್ಪಂ ಪುನಃ ಸತೀ ।
ಸರ್ವಾಂಗ ಶೋಧನಂ ಧ್ಯಾನಂ ವೇದೋಕ್ತಂ ಚ ಚಕಾರ ಸಾ ॥ ೩೦ ॥

ಪುನಶ್ಚ ಧ್ಯಾತ್ವಾ ಧ್ಯಾನೇನ ತೇನೈವ ಶುಭದಾಯಿನಾ ।
ದದೌ ಪುಷ್ಪಂ ಪಾದಪದ್ಮೇ ರಾಧಾ ಲಂಬೋದರಸ್ಯ ಚ ॥ ೩೧ ॥

ಸಪ್ತತೀರ್ಥೋದಕೇನೈವ ಶೀತೇನ ವಾಸಿತೇನ ಚ ।
ದದೌ ಪದ್ಮಂ ಪಾದಪದ್ಮೇ ತೈಃ ಪದ್ಮಾದಿಭಿರರ್ಚಿತೇ ॥ ೩೨ ॥

ದೂರ್ವಾಕ್ಷತೈಃ ಶುಕ್ಲಪುಷ್ಪೈಃ ಸುಗಂಧಿಚಂದನೋದಕೈಃ ।
ಅರ್ಘ್ಯಂ ದದೌ ತಚ್ಛಿರಸಿ ಸ್ವಯಂ ಗೋಲೋಕವಾಸಿನೀ ॥ ೩೩ ॥

ಸಚಂದನಂ ಸ್ನಿಗ್ಧಮಾಲ್ಯಂ ಪಾರಿಜಾತಸ್ಯ ಸುಂದರಂ ।
ದದೌ ಗಲೇ ಗಣೇಶಸ್ಯ ಸ್ವಯಂ ರಾಸೇಶ್ವರೀ ಮುದಾ ॥ ೩೪ ॥

---

೩೦. ಆ ರಾಧೆಯು ಈ ಪ್ರಕಾರ ಧ್ಯಾನಮಾಡಿ ಮತ್ತೆ ಹೂವುಗಳಿಂದ ಪೂಜೆ ಮಾಡಿ ಸಕಲಾಂಗಗಳನ್ನೂ ಶುದ್ಧಿಗೊಳಿಸುವ ವೇದೋಕ್ತವಾದ ಧ್ಯಾನ (ನ್ಯಾಸ) ವನ್ನು ಮಾಡಿದಳು.

೩೧. ರಾಧೆಯು ಮಂಗಳವನ್ನುಂಟು ಮಾಡುವ ಅದೇ ಧ್ಯಾನದಿಂದ ಧ್ಯಾನ ಮಾಡಿ ಆ ಗಣೇಶನ ಪಾದ ಕಮಲಗಳಲ್ಲಿ ಹೂವನ್ನು ಸಮರ್ಪಿಸಿದಳು.

೩೨. ಏಳು ನದಿಗಳಿಂದ ತಂದ ಶೀತಲವೂ ಸುವಾಸನೆಯೂ ಆದ ನೀರಿನಿಂದ ಲಕ್ಷ್ಮಿಯೇ ಮುಂತಾದವರಿಂದ ಪೂಜಿಸಲ್ಪಟ್ಟ ಪಾದಕಮಲಗಳಲ್ಲಿ ಪಾದ್ಯವನ್ನು ಅರ್ಪಣೆ ಮಾಡಿದಳು.

೩೩. ಗೋಲೋಕವಾಸಿನಿಯಾದ ತಾನು ದೂರ್ವೆ ಮತ್ತು ಅಕ್ಷತೆಗಳಿಂದಲೂ ಶುಭ್ರವಾದ ಹೂವುಗಳಿಂದಲೂ ಕೂಡಿದ ಸುವಾಸನೆಯಾದ ಗಂಧದ ನೀರಿನಿಂದ ಆ ಗಣೇಶನ ತಲೆಯ ಮೇಲೆ ಅರ್ಘ್ಯವನ್ನರ್ಪಿಸಿದಳು.

೩೪. ರಾಸೇಶ್ವರಿಯಾದ ಆ ರಾಧೆಯು ಗಂಧಮಿಶ್ರಿತವಾದ ದಟ್ಟವಾಗಿ ಕಟ್ಟಿದ ಪಾರಿಜಾತ ಪುಷ್ಪದ ಸುಂದರಮಾಲಿಕೆಯನ್ನು ಗಣೇಶನ ಕೊರಳಿನಲ್ಲಿ ಆನಂದದಿಂದರ್ಪಿಸಿದಳು.

ಕಸ್ತೂರೀಕುಂಕುಮಾಕ್ತಂ ಚ ಸುಗಂಧಿ ಸ್ನಿಗ್ಧಚಂದನಂ ।
ಸರ್ವಾಂಗೇ ಪ್ರದದೌ ತಸ್ಯ ವೃಂದಾವನವಿನೋದಿನೀ ॥ ೩೫ ॥

ಸುಗಂಧಿ ಶುಕ್ಲಪುಷ್ಪಂ ಚ ಸುಗಂಧಿ ಚಂದನಾರ್ಚಿತಂ ।
ದದೌ ತಸ್ಯ ಪದಾಂಭೋಜೇ ಮಹಾಪದ್ಮಾಲಯಾ ಸತೀ ॥ ೩೬ ॥

ಸುಗಂಧಿಯುಕ್ತಂ ಧೂಪಂ ಚ ಪೂತೈರ್ವಸ್ತುಭಿರನ್ವಿತಂ ।
ದದೌ ಕೃಷ್ಣಪ್ರಿಯಾ ತಸ್ಮೈ ಜಗತಾಮೀಶ್ವರಾಯ ಚ ॥ ೩೭ ॥

ದೀಪಂ ಘೃತಪ್ರದೀಪ್ತಂ ಚ ಧ್ವಾಂತವಿಧ್ವಂಸಕಾರಣಂ ।
ದದೌ ತಸ್ಮೈ ಸುರೇಶಾಯ ಪರಮಾದ್ಯಾ ಸನಾತನೀ ॥ ೩೮ ॥

ನೈವೇದ್ಯಂ ವಿವಿಧಂ ರಮ್ಯಂ ಸುಸ್ವಾದು ಸುಮನೋಹರಂ ।
ಚೋಷ್ಯಂ ಚರ್ವ್ಯಂ ಲೇಹ್ಯಪೇಯೇ ಸುಧಾತುಲ್ಯಂ ಚತುರ್ವಿಧಂ ॥ ೩೯ ॥

---

೩೫ ವೃಂದಾವನದಲ್ಲಿ ವಿನೋದಪಡುವ ರಾಧೆಯು ಕಸ್ತೂರಿ ಮತ್ತು ಕೇಸರಿಗಳಿಂದ ಮಿಶ್ರಿತವಾದ ಸುವಾಸನೆಯಾದ ಉತ್ತಮ ಗಂಧವನ್ನು ಆ ಗಣೇಶನ ಸಕಲಾಂಗಗಳಿಗೂ ಸಮರ್ಪಿಸಿದಳು.

೩೬. ಮಹಾಪದ್ಮವೇ ಮನೆಯಾಗಿರುವ ಆ ದೇವಿಯು ಸುವಾಸನೆಯಾದ ಗಂಧದಿಂದ ನೆನೆಸಲ್ಪಟ್ಟ ಪರಿಮಳದಿಂದ ಕೂಡಿದ ಬಿಳಿಯ ಹೂವುಗಳನ್ನು ಆ ಗಣೇಶನ ಪಾದಕಮಲಗಳಲ್ಲಿ ಸಮರ್ಪಣೆ ಮಾಡಿದಳು.

೩೭. ಕೃಷ್ಣಪ್ರಿಯಳಾದ ರಾಧೆಯು ಸುವಾಸನೆಯುಳ್ಳ ಕೂಡಿದ ಪರಿಶುದ್ಧವಾದ ವಸ್ತು ಸಮೇತವಾದ ಧೂಪವನ್ನು ಲೋಕಗಳಿಗೆ ಪ್ರಭುವಾದ ಆ ಗಣೇಶನಿಗೆ ಸಮರ್ಪಣೆ ಮಾಡಿದಳು.

೩೮. ಸಕಲಕ್ಕೂ ಆದಿಯೂ ಸನಾತನಿಯೂ ಆದ ರಾಧೆಯು ತುಪ್ಪದಿಂದ ಉರಿಸಲ್ಪಟ್ಟ ಅಜ್ಞಾನವೆಂಬ ಕತ್ತಲೆಯನ್ನು ನಿವಾರಣೆ ಮಾಡಲು ಸಮರ್ಥವಾದ ದೀಪವನ್ನು ದೇವೇಶನಾದ ಆ ಗಣಪತಿಗೆ ಸಮರ್ಪಣೆ ಮಾಡಿದಳು.

೩೯. ಚೋಷ್ಯ ಚರ್ವ್ಯ ಲೇಹ್ಯ ಪೇಯಗಳೆಂಬ ಅಮೃತಕ್ಕೆ ಸಮಾನವಾದ ಅತ್ಯಂತ ರುಚಿಕರವಾದ ನಾಲ್ಕು ಬಗೆಯ ಅನೇಕ ವಿಧವಾದ ನೈವೇದ್ಯಗಳನ್ನರ್ಪಿಸಿದಳು.

ಫಲಾನಿ ಚ ಸುಪಕ್ವಾನಿ ತ್ರೈಲೋಕ್ಯೇ ದುರ್ಲಭಾನಿ ಚ ।
ಮಧುರಾಣಿ ಚ ಮೂಲಾನಿ ಗ್ರಾಮ್ಯಾರಣ್ಯಾನಿ ನಾರದ ॥ ೪೦ ॥

ತಾನಿ ತ್ವಾನಂತ್ಯಸಂಖ್ಯಾನಿ ತಿಲಾನಾಂ ಲಡ್ಡುಕಾನಿ ಚ ।
ಸುಪಕ್ವಾನಿ ಸುರಮ್ಯಾಣಿ ಸ್ವಾದೂನಿ ಸುರಸಾನಿ ಚ ॥ ೪೧ ॥

ಯವಗೋಧೂಮಚೂರ್ಣಾನಾಂ ಪಕ್ವಾನಿ ಪಿಷ್ಟಕಾನಿ ಚ ।
ಘೃತಾಕ್ತಾನಿ ಚ ರಮ್ಯಾಣಿ ಶರ್ಕರಾಸಹಿತಾನಿ ಚ ॥ ೪೨ ॥

ಸ್ವಸ್ತಿಕಾನಾಂ ಲಡ್ಡುಕಾನಿ ಸ್ಥೂಲಾನಿ ಸುಂದರಾಣಿ ಚ ।
ಭ್ರಷ್ಟಪ್ರವ್ಯಂ ಚ ವಿವಿಧಮುಕ್ಷತಂ ಶರ್ಕರಾನ್ವಿತಂ ॥ ೪೩ ॥

ಘೃತಕುಲ್ಯಾಂ ದುಗ್ಧಕುಲ್ಯಾಂ ಮಧುಕುಲ್ಯಾಂ ಮನೋಹರಾಂ ।
ಗುಡಸ್ಯ ದಧ್ನಃ ಕುಲ್ಯಾಂ ಚ ಪಾಯಸಾನಾಂ ತಥೈವ ಚ ॥ ೪೪ ॥

---

೪೦. ಎಲೈ ನಾರದನೇ! ಮೂರು ಲೋಕಗಳಲ್ಲಿಯೂ ದುರ್ಲಭವಾದ ಚೆನ್ನಾಗಿ ಮಾಗಿರುವ ಸಿಹಿಯಾಗಿರುವ ಹಣ್ಣುಗಳನ್ನೂ ಗ್ರಾಮಗಳಲ್ಲಿ ದೊರೆಯುವ ಕಾಡುಗಳಲ್ಲಿ ಬೆಳೆಯುವ ಗೆಡ್ಡೆಗೆಣಸುಗಳನ್ನೂ ಕೂಡ ಸಮರ್ಪಿಸಿದಳು.

೪೧. ಚನ್ನಾಗಿ ಪಕ್ವವಾದ ಮನೋಹರವಾಗಿಯೂ ರುಚಿಯಾಗಿಯೂ ಇರುವ ರಸವತ್ತಾದ ಅನೇಕ ಸಂಖ್ಯೆಯ ಎಳ್ಳುಂಡೆಗಳನ್ನು ಸಮರ್ಪಿಸಿದಳು.

೪೨. ಜವೆಗೋಧಿಯ ಹಿಟ್ಟಿನಿಂದ ಮಾಡಿದ ಚಿರಿಯಪ್ಪ ದೋಸೆ ಹೋಳಿಗೆ ಮುಂತಾದುವುಗಳನ್ನು ಚನ್ನಾಗಿ ಪಕ್ವಮಾಡಿ ತುಪ್ಪದಲ್ಲಿ ಕರಿದವುಗಳನ್ನು ಸಕ್ಕರೆಯಿಂದ ಮಿಶ್ರಿತವಾದವುಗಳನ್ನು ಸಮರ್ಪಿಸಿದಳು.

೪೩. ನೋಡಲು ಅಂದವಾಗಿ ದೊಡ್ಡದಾಗಿರುವ ಸ್ವಸ್ತಿಕಗಳ ಲಡ್ಡುಕೆಗಳನ್ನೂ ನಾನಾ ವಿಧವಾದ ಸಕ್ಕರೆಯಿಂದ ಮಿಶ್ರವಾದ ಹುರಿದ ಪದಾರ್ಥಗಳನ್ನೂ ಅರ್ಪಿಸಿದಳು.

೪೪. ಸುಂದರವಾದ ತುಪ್ಪದ ಕಾಲುವೆಯನ್ನೂ ಹಾಲಿನ ಕಾಲುವೆಯನ್ನೂ ಜೇನುತುಪ್ಪದ ಕಾಲುವೆಯನ್ನೂ ಬೆಲ್ಲದ ಮತ್ತು ಮೊಸರಿನ ಕಾಲುವೆಯನ್ನೂ ಪಾಯಸಗಳ ಕಾಲುವೆಯನ್ನೂ ಕೂಡ ಸಮರ್ಪಿಸಿದಳು.

ಪಿಷ್ಟಕಾನಾಂ ಸ್ವಸ್ತಿಕಾನಾಂ ರಂಭಾಣಾಂ ರಾಶಿಮೇವ ಚ ।
ಮಿಷ್ಟವ್ಯಂಜನಯುಕ್ತಾನಿ ಶಾಲ್ಯಂನ್ನಾನಿ ಶುಭಾನಿ ಚ ॥ ೪೫ ॥

ದದೌ ತಸ್ಮೈ ಸುರೇಶಾಯ ಕೃಷ್ಣಪ್ರಾಣಾಧಿದೇವತಾ ।
ಅಮೂಲ್ಯರತ್ನನಿರ್ಮಾಣಂ ರಮ್ಯಂ ಸಿಂಹಾಸನಂ ವರಂ ॥ ೪೬ ॥

ದದೌ ವಿಘ್ನವಿನಾಶಾಯ ವಿರಜಾತಟವಾಸಿನೀ ।
ಸೂಕ್ಷ್ಮವಸ್ತ್ರಯುಗಂ ರಮ್ಯಮಮೂಲ್ಯಂ ವಹ್ನಿಶುದ್ಧಕಂ ॥ ೪೭ ॥

ದದೌ ಶೈಲಾತ್ಮಜಾಯೈವ ಶತಶೃಂಗನಿವಾಸಿನೀ ।
ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿಸುವಾಸಿತಂ ॥ ೪೮ ॥

ಸರ್ವಸಂಪತ್ಪ್ರದಾತ್ರೇ ಚ ವೃಷಭಾನಸುತಾ ದದೌ ।
ಸಪ್ತತೀರ್ಥೋದಕಂ ಶುದ್ಧಂ ಸುಪೂತಂ ಚ ಸುವಾಸಿತಂ ॥ ೪೯ ॥

---

೪೫. ಕಡುಬು ಮತ್ತು ಹೋಳಿಗೆಗಳ ಬಾಳೆಯ ಹಣ್ಣುಗಳ ರಾಶಿಯನ್ನೂ ರುಚಿಕರವಾದ ಮೇಲೋಗರಗಳಿಂದ ಕೂಡಿದ ಮಂಗಳಕರಗಳಾದ ಶಾಲ್ಯಾನ್ನಗಳನ್ನೂ ಸಮರ್ಪಿಸಿದಳು.

೪೬. ಶ್ರೀಕೃಷ್ಣನ ಪ್ರಾಣಾಧಿದೇವತೆಯಾದ ರಾಧೆಯು ದೇವೇಶನಾದ ಗಣೇಶನಿಗೆ ಮಹಾ ಬೆಲೆಯುಳ್ಳ ರತ್ನಗಳಿಂದ ಮಾಡಿದ ಮನೋಹರವಾದ ಉತ್ತಮವಾದ ಸಿಂಹಾಸನವನ್ನು ಸಮರ್ಪಿಸಿದಳು.

೪೭. ವಿರಜಾ ನದಿಯ ದಡದಲ್ಲಿ ವಾಸಮಾಡುವ ರಾಧೆಯು ವಿಘ್ನಗಳನ್ನು ನಾಶಮಾಡುವವನಾದ ಗಣೇಶನಿಗೆ ಅಗ್ನಿಯಂತೆ ಪರಿಶುದ್ಧವಾದ ಮಹಾಬೆಲೆಯುಳ್ಳ ಮನೋಹರವಾದ ಅತಿ ನವುರಾದ ಒಂದು ಜೊತೆ ವಸ್ತ್ರವನ್ನರ್ಪಿಸಿದಳು.

೪೮. ಶತಶೃಂಗದಲ್ಲಿ ವಾಸಮಾಡುವವಳಾದ ದೇವಿಯು ಪಾರ್ವತಿಯ ಪುತ್ರನಾದ ಗಣೇಶನಿಗೆ ಉತ್ತಮವೂ ಮನೋಹರವೂ ಪಚ್ಚಕರ್ಪೂರದ ವಾಸನೆಯಿಂದ ಕೂಡಿದುದೂ ಆದ ತಾಂಬೂಲವನ್ನರ್ಪಿಸಿದಳು.

೪೯–೫೧. ವೃಷಭಾನನ ಮಗಳಾದ ರಾಧೆಯು ಸಕಲಸಂಪತ್ತುಗಳನ್ನೂ ಕೊಡುವವನಾದ ಗಣೇಶನಿಗೆ ಪರಿಶುದ್ಧವೂ ಸುವಾಸನೆಯೂ ಆಗಿರುವ ಏಳು

ಪಾನಾರ್ಥಂ ಚ ಜಲಂ ತಸ್ಮೈ ದದೌ ಗೋಪೀಶ್ವರೀ ಮುದಾ ।
ಅಮೂಲ್ಯಂ ದುರ್ಲಭಂ ಚೈವ ವಿಶುದ್ಧಂ ಶ್ವೇತಚಾಮರಂ || ೫೦ ||

ದದೌ ತಸ್ಮೈ ಪರೇಶಾಯ ಮೂಲಪ್ರಕೃತಿರೀಶ್ವರೀ ।
ಅಮೂಲ್ಯರತ್ನನಿರ್ಮಾಣಂ ಮುಕ್ತಾಮಾಣಿಕ್ಯಹೀರಕೈಃ || ೫೧ ||

ಪರಿಷ್ಕೃತಂ ಸುಕಲ್ಪಂ ಚ ಪುಷ್ಪಚಂದನಚರ್ಚಿತಂ ।
ಸಿತಸೂಕ್ಷ್ಮಾಂಶುಕೇನೈವ ಪರಿತಶ್ಚ ಪರಿಷ್ಕೃತಂ || ೫೨ ||

ದದೌ ಶಿವಾತ್ಮಜಾಯೈವ ಕೃಷ್ಣವಕ್ಷಃಸ್ಥಲಸ್ಥಿತಾ ।
ದತ್ವಾ ಚ ಕಾಮಧೇನುಂ ಚ ಸವತ್ಸಾಂ ವಾಂಛಿತಪ್ರದಾಂ || ೫೩ ||

ಕೃತ್ವಾತೀವ ಪರೀಹಾರಂ ವೃಂದಾ ಪುಷ್ಪಾಂಜಲಿಂ ದದೌ ।
ದಿವ್ಯೇನಾನೇನ ಮನುನಾ ಸಬೀಜೇನೋಜ್ಜ್ವಲೇನ ಚ || ೫೪ ||

ದದೌ ಷೋಡಶೋಪಚಾರಂ ಕಾಲಿಂದೀಕೂಲವಾಸಿನೀ ।
ಓಂ ಗಂಗೌಂ ಗಣಪತಯೇ ವಿಘ್ನವಿನಾಶಿನೇ ಸ್ವಾಹಾ || ೫೫ ||

---

ಮಹಾತೀರ್ಥಗಳ ನೀರನ್ನು ಕುಡಿಯುವುದಕ್ಕಾಗಿ ಸಮರ್ಪಿಸಿದಳು ಮತ್ತು ಮೂಲ ಪ್ರಕೃತಿಯೂ ಈಶ್ವರಿಯೂ ಆದ ರಾಧೆಯು ಪರೇಶನಾದ ಗಣಪತಿಗೆ ಅಮೂಲ್ಯವೂ ದುರ್ಲಭವೂ ಪರಿಶುದ್ಧವೂ ಆದ ಅಮೂಲ್ಯವಾದ ರತ್ನಗಳಿಂದಲೂ ಮುತ್ತು ಮಾಣಿಕ್ಯ ಹೀರಕ ಮುಂತಾದುವುಗಳಿಂದ ಮಾಡಿದ ಬಿಳಿಯ ಚಾಮರವನ್ನರ್ಪಿಸಿದಳು

೫೨-೫೫. ಹೂವು ಮತ್ತು ಗಂಧಗಳಿಂದ ಕೂಡಿದ ನವುರಾದ ಬಿಳಿಯ ಬಟ್ಟೆಗಳಿಂದ ಸುತ್ತಲೂ ಅಲಂಕರಿಸಲ್ಪಟ್ಟ ಉತ್ತಮವಾದ ಹಾಸಿಗೆಯನ್ನು ಶಿವನ ಮಗನಾದ ಗಣೇಶನಿಗೆ ಶ್ರೀಕೃಷ್ಣನ ವಕ್ಷಃಸ್ಥಲದಲ್ಲಿ ವಾಸಮಾಡುವ ರಾಧೆಯು ಅರ್ಪಿಸಿದಳು ಮತ್ತು ಕಾಲಿಂದೀ ತೀರದಲ್ಲಿ ವಾಸಮಾಡುವ ರಾಧೆಯು " ಓಂ ಗಂ ಗೌಂ ಗಣಪತಯೇ ವಿಘ್ನನಾಶಿನೇ ಸ್ವಾಹಾ" ಎಂಬ ಬೀಜಸಹಿತವಾದ ಈ ದಿವ್ಯ ಮಂತ್ರದಿಂದ ಷೋಡಶೋಪಚಾರಗಳನ್ನು ಸಮರ್ಪಿಸಿದಳು.

ಇತ್ಯೇವಮೇವ ಮಂತ್ರಂ ಚ ಗಣೇಶಂ ಷೋಡಶಾಕ್ಷರಂ ।
ಸಾ ಜಜಾಪ ಸಹಸ್ರಂ ಚ ಪರಂ ಕಲ್ಪತರುಂ ವರಂ ॥ ೫೬ ॥

ತುಷ್ಟಾವ ಪರಯಾ ಭಕ್ತ್ಯಾ ಭಕ್ತಿನಮ್ರಾತ್ಮಕಂಧರಾ ।
ಸಾಶ್ರುನೇತ್ರಾ ಪುಲಕಿತಾ ಸ್ತೋತ್ರೇಣ ಕೌತುಕೇನ ಚ ॥ ೫೭ ॥

॥ ಶ್ರೀರಾಧಿಕೋವಾಚ ॥

ಪರಂ ಧಾಮ ಪರಂ ಬ್ರಹ್ಮ ಪರೇಶಂ ಪರಮೀಶ್ವರಂ ।
ವಿಘ್ನನಿಘ್ನಕರಂ ಶಾಂತಂ ಪುಷ್ಟಂ ಕಾಂತಮನಂತಕಂ ॥ ೫೮ ॥

ಸುರಾಸುರೇಂದ್ರೈಃ ಸಿದ್ಧೇಂದ್ರೈಃ ಸ್ತುತಂ ಸ್ತೌಮಿ ಪರಾತ್ಪರಂ ।
ಸುರಪದ್ಮದಿನೇಶಂ ಚ ಗಣೇಶಂ ಚ ಗಣೇಶಂ ಮಂಗಲಾಯನಂ ॥ ೫೯ ॥

---

೫೬. ಉತ್ತಮ ಕಲ್ಪವೃಕ್ಷದಂತಿರುವ ಶ್ರೀ ಗಣೇಶ ಷೋಡಾಕ್ಷರಿಯ ಮೇಲೆ ಹೇಳಿದ ಮಂತ್ರವನ್ನು ಸಾವಿರ ಬಾರಿ ಜಪ ಮಾಡಿದಳು.

೫೭. ಅತ್ಯಂತ ಭಕ್ತಿಯಿಂದ ತಲೆಯನ್ನು ಬಾಗಿಸಿಕೊಂಡು ಕಣ್ಣಿನಲ್ಲಿ ಆನಂದ ಬಾಷ್ಪವನ್ನು ಸುರಿಸುತ್ತ ರೋಮಾಂಚವಾದ ಶರೀರವುಳ್ಳವಳಾಗಿ ಕುತೂಹಲದಿಂದ ಮುಂದೆ ಹೇಳುವ ಸ್ತೋತ್ರದಿಂದ ಸ್ತುತಿಸಿದಳು.

೫೮–೫೯. ಶ್ರೀ ರಾ ಧಿ ಕೆ ಯು ಹೇಳುತ್ತಾಳೆ:–ಪರಮಪ್ರಾಪ್ಯಸ್ಥಾನನೂ ಶಾಂತನೂ ಪುಷ್ಟಿಯಾಗಿರುವವನೂ ಸುಂದರನೂ ನಾಶವಿಲ್ಲದವನೂ ದೇವಾಸುರ ಶ್ರೇಷ್ಠರಿಂದಲೂ ಸಿದ್ಧಶ್ರೇಷ್ಠರಿಂದಲೂಸ್ತೋತ್ರ ಮಾಡಲ್ಪಟ್ಟ ಪರಾತ್ಪರನಾದ ದೇವತೆಗಳೆಂಬ ಕಮಲಕ್ಕೆ ಸೂರ್ಯನಂತಿರುವ ಮತ್ತು ಮಂಗಳಗಳಿಗೆ ಮನೆಯಾದ ಗಣೇಶನನ್ನು ಸ್ತೋತ್ರಮಾಡುತ್ತೇನೆ.

ಇದಂ ಸ್ತೋತ್ರಂ ಮಹಾಪುಣ್ಯಂ ವಿಘ್ನಶೋಕಹರಂ ಪರಂ ।
ಯಃ ಪಠೇತ್ಪ್ರಾತರುತ್ಥಾಯ ಸರ್ವವಿಘ್ನಾತ್ಪ್ರಮುಚ್ಯತೇ ॥ ೬೦ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣ ನಾರದಸಂವಾದೇ
ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ॥

---

೬೦. ಮಹಾಪುಣ್ಯಕರವಾದ ವಿಘ್ನ ಮತ್ತು ದುಃಖಗಳನ್ನು ನಾಶಮಾಡುವ ಈ ಉತ್ತಮ ಸ್ತೋತ್ರವನ್ನು ಯಾವನು ಪ್ರಾತಃಕಾಲದಲ್ಲೆದ್ದು ಹೇಳುತ್ತಾನೋ ಅವನು ಸಮಸ್ತ ವಿಘ್ನಗಳಿಂದಲೂ ಮುಕ್ತನಾಗುತ್ತಾನೆ.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾ ಪುರಾಣದ ಶ್ರೀ ಕೃಷ್ಣ ಜನ್ಮ ಖಂಡದ
ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ
ನೂರ ಇಪ್ಪತ್ತ ಮೂರನೆಯ ಅಧ್ಯಾಯವು ಸಮಾಪ್ತವಾದುದು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರಾಯಣ ಉವಾಚ ||

ರಾಧಾ ಸಂಪೂಜ್ಯ ವಿಧಿನಾ ಸ್ತುತ್ವಾ ಲಂಬೋದರಂ ಸತೀ ।
ಅಮೂಲ್ಯರತ್ನನಿರ್ಮಾಣಂ ಸರ್ವಾಂಗಭೂಷಣಂ ದದೌ || ೧ ||

ರಾಧಾಯಾಃ ಸ್ತವನಂ ಶ್ರುತ್ವಾ ಪೂಜಾಂ ದೃಷ್ಟ್ವಾ ಚ ವಸ್ತು ಚ ।
ಉವಾಚ ಮಧುರಂ ಶಾಂತಃ ಶಾಂತಾಂ ತ್ರೈಲೋಕ್ಯಮಾತರಂ || ೨ ||

|| ಶ್ರೀಗಣೇಶ ಉವಾಚ ||

ತವಪೂಜಾ ಜಗನ್ಮಾತರ್ಲೋಕಶಿಕ್ಷಾಕರೀ ಶುಭೇ ।
ಬ್ರಹ್ಮಸ್ವರೂಪಾ ಭವತೀ ಕೃಷ್ಣವಕ್ಷಃಸ್ಥಲಸ್ಥಿತಾ || ೩ ||

---

### ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ:—ರಾಧೆಯು ನಿಯಮಾನುಸಾರವಾಗಿ ಲಂಬೋದರನನ್ನು ಪೂಜೆಮಾಡಿ ಸ್ತೋತ್ರಮಾಡಿ ಮಹಾ ಬೆಲೆಯುಳ್ಳ ರತ್ನಗಳಿಂದ ಮಾಡಿದ ಸಕಲಾಂಗಗಳ ಆಭರಣಗಳನ್ನು ಸಮರ್ಪಿಸಿದಳು

೨. ಗಣೇಶನು ರಾಧೆಯು ಮಾಡಿದ ಸ್ತೋತ್ರವನ್ನು ಕೇಳಿ ಅವಳು ಮಾಡಿದ ಪೂಜೆಯನ್ನೂ ಸಮರ್ಪಿಸಿದ ವಸ್ತುಗಳನ್ನೂ ನೋಡಿ ಶಾಂತಮನಸ್ಸುಳ್ಳವನಾಗಿ ಶಾಂತಳೂ ಮೂರು ಲೋಕಗಳ ತಾಯಿಯೂ ಆದ ರಾಧೆಯನ್ನು ಕುರಿತು ಮೃದುವಾಗಿ ಇಂತೆಂದನು.

೩. ಶ್ರೀ ಗಣೇಶನು ಹೇಳುತ್ತಾನೆ:—ಎಲೈ ಮಂಗಳಕರಳೇ! ಪ್ರಪಂಚದ ತಾಯಿಯೇ! ನೀನು ಮಾಡಿದ ಈ ಪೂಜೆಯು ಜನರಿಗೆ ನೀತಿಯನ್ನು ತಿಳಿಸತಕ್ಕದಾಗಿರುತ್ತದೆ. ನೀನು ಸಾಕ್ಷಾತ್ ಬ್ರಹ್ಮಸ್ವರೂಪಳೂ ಶ್ರೀ ಕೃಷ್ಣನ ವಕ್ಷಃಸ್ಥಳದಲ್ಲಿ ವಾಸವಾಗಿರುವಳೂ ಆಗಿರುತ್ತೀಯೆ.

ಯತ್ಪಾದಪದ್ಮಮತುಲ ಧ್ಯಾಯಂತೇ ತೇ ಸುದುರ್ಲಭಂ ।
ಸುರಾ ಬ್ರಹ್ಮೇಶಶೇಷಾದ್ಯಾ ಮುನೀಂದ್ರಾಃ ಸನಕಾದಯಃ ॥ ೪ ॥

ಜೀವನ್ಮುಕ್ತಾಶ್ಚ ಭಕ್ತಾಶ್ಚ ಸಿದ್ಧೇಂದ್ರಾಃ ಕಪಿಲಾದಯಃ ।
ತಸ್ಯ ಪ್ರಾಣಾಧಿದೇವೀ ತ್ವಂ ಪ್ರಿಯಾ ಪ್ರಾಣಾಧಿಕಾ ವರಾ ॥ ೫ ॥

ವಾಮಾಂಗನಿರ್ಮಿತಾ ರಾಧಾ ದಕ್ಷಿಣಾಂಗಶ್ಚ ಮಾಧವಃ ।
ಮಹಾಲಕ್ಷ್ಮೀರ್ಜಗನ್ಮಾತಾ ತವ ವಾಮಾಂಗನಿರ್ಮಿತಾ ॥ ೬ ॥

ವಸೋಃ ಸರ್ವನಿವಾಸಸ್ಯ ಪ್ರಸೂಸ್ತ್ವಂ ಪರಮೇಶ್ವರೀ ।
ವೇದಾನಾಂ ಜಗತಾಮೇವ ಮೂಲಪ್ರಕೃತಿರೀಶ್ವರೀ ॥ ೭ ॥

ಸರ್ವಾಃ ಪ್ರಾಕೃತಿಕಾ ಮಾತಃ ಸೃಷ್ಟ್ಯಾಂ ಚ ತ್ವದ್ವಿಭೂತಯಃ ।
ವಿಶ್ವಾನಿ ಕಾರ್ಯರೂಪಾಣಿ ತ್ವಂ ಚ ಕಾರಣರೂಪಿಣೀ ॥ ೮ ॥

---

೪.—೫. ಯಾವ ಪರಮಾತ್ಮನ, ಸುಲಭವಾಗಿ ದೊರಕದ ಎಣಿಕೆಯಿಲ್ಲದ ಪಾದಕಮಲವನ್ನು ಬ್ರಹ್ಮ ಈಶ್ವರ ಶೇಷ ಮುಂತಾದ ದೇವತೆಗಳೂ ಸನಕನೇ ಮುಂತಾದ ಮುನಿ ಶ್ರೇಷ್ಠರೂ ಜೀವನ್ಮುಕ್ತರೂ ಭಕ್ತರೂ ಆದ ಕಪಿಲನೇ ಮುಂತಾದ ಸಿದ್ಧಶ್ರೇಷ್ಠರೂ ಸತತ ಧ್ಯಾನ ಮಾಡುತ್ತಿರುವರೋ ಅಂಥಾ ಪರಮಾತ್ಮನಿಗೆ ನೀನು ಪ್ರಾಣಾಧಿದೇವತೆಯೂ ಪ್ರಾಣಪ್ರಿಯಳೂ ಉತ್ಕೃಷ್ಟಳೂ ಆಗಿರುವೆ.

೬. ಎಡಭಾಗದಿಂದ ರಾಧೆಯೂ ಬಲಭಾಗದಿಂದ ಮಾಧವನೂ ನಿರ್ಮಿಸಲ್ಪಟ್ಟಿರುವರು. ಜಗತ್ತಿಗೆ ತಾಯಿಯಾದ ಮಹಾಲಕ್ಷ್ಮಿಯು ನಿನ್ನ ಎಡಭಾಗದಿಂದ ನಿರ್ಮಿಸಲ್ಪಟ್ಟವಳಾಗಿರುತ್ತಾಳೆ.

೭. ನೀನು ಸಕಲ ಪ್ರಪಂಚಕ್ಕೂ ವಾಸಸ್ಥಾನನಾದ ವಸುವಿನ ತಾಯಿಯೂ ಪರಮೇಶ್ವರಿಯೂ ವೇದಗಳಿಗೂ ಪ್ರಪಂಚಕ್ಕೂ ಜನನಿಯೂ ಮೂಲಪ್ರಕೃತಿಯೂ ಈಶ್ವರಿಯೂ ಆಗಿರುವೆ.

೮. ಎಲೈ ತಾಯಿಯೇ! ಈ ಪ್ರಪಂಚದ ಸೃಷ್ಟಿಯೇ ಮುಂತಾದುವುಗಳು ಪ್ರಕೃತಿಯಾದ ನಿನ್ನಿಂದುಂಟಾದ ನಿನ್ನ ಮಹಿಮೆಗಳು. ಪ್ರಪಂಚಗಳೆಲ್ಲವೂ ಹುಟ್ಟಿದವುಗಳು. ನೀನು ಅವುಗಳಿಗೆ ಕಾರಣ ಸ್ವರೂಪಳು.

ಪ್ರಲಯೇ ಬ್ರಹ್ಮಣಃ ಪಾತೇ ತ್ವನ್ನಿಮೇಶೋ ಹರೇರಪಿ ।
ಆದೌ ರಾಧಾಂ ಸಮುಚ್ಚಾರ್ಯ ಪಶ್ಚಾತ್ಕೃಷ್ಣಂ ಪರಾತ್ಪರಂ ॥ ೯ ॥

ಸ ಏವ ಪಂಡಿತೋ ಯೋಗೀ ಗೋಲೋಕಂ ಯಾತಿ ಲೀಲಯಾ ।
ವ್ಯತಿಕ್ರಮೇ ಮಹಾಪಾಪೀ ಬ್ರಹ್ಮಹತ್ಯಾಂ ಲಭೇದ್ಧ್ರುವಂ ॥ ೧೦ ॥

ಜಗತಾಂ ಭವತೀ ಮಾತಾ ಪರಮಾತ್ಮಾ ಪಿತಾ ಹರಿಃ ।
ಪಿತುರೇವ ಗುರುರ್ಮಾತಾ ಪೂಜ್ಯಾ ವಂದ್ಯಾ ಪರಾತ್ಪರಾ ॥ ೧೧ ॥

ಭಜತೇ ದೇವಮನ್ಯಂ ವಾ ಕೃಷ್ಣಂ ವಾ ಸರ್ವಕಾರಣಂ ।
ಪುಣ್ಯಕ್ಷೇತ್ರೇ ಮಹಾಮೂಢೋ ಯದಿ ನಿಂದತಿ ರಾಧಿಕಾಂ ॥ ೧೨ ॥

ವಂಶಹಾನಿರ್ಭವೇತ್ತಸ್ಯ ದುಃಖಶೋಕಮಿಹೈವ ಚ ।
ಪಚ್ಯತೇ ನಿರಯೇ ಘೋರೇ ಯಾವಚ್ಚಂದ್ರದಿವಾಕರೌ ॥ ೧೩ ॥

---

೯–೧೦. ಪ್ರಳಯಕಾಲದಲ್ಲಿ ಬ್ರಹ್ಮನು ಮುಗಿದುಹೋಗಲು ನಿನಗೂ ಶ್ರೀಹರಿಗೂ ಒಂದು ಸಾರಿ ಕಣ್ಣುರೆಪ್ಪೆಯು ಮುಚ್ಚುತ್ತದೆ. ಮೊದಲು ರಾಧೆಯೆಂದು ಹೇಳಿ ಅನಂತರ ಪರಾತ್ಪರನಾದ ಕೃಷ್ಣನ ಹೆಸರನ್ನು ಹೇಳಬೇಕು. ಅಂಥವನೇ ಪಂಡಿತನೂ ಯೋಗಿಯೂ ಆಗಿರುತ್ತಾನೆ. ಅಂಥವನು ಸುಲಭವಾಗಿ ಗೋಲೋಕವನ್ನು ಸೇರುತ್ತಾನೆ. ವ್ಯತ್ಯಾಸಮಾಡಿದಲ್ಲಿ ಮಹಾ ಪಾಪಿಯಾಗಿ ಬ್ರಹ್ಮಹತ್ಯೆಯನ್ನು ಹೊಂದುತ್ತಾನೆ.

೧೧. ಪೂಜ್ಯಳಾದ ನೀನು ಪ್ರಪಂಚಕ್ಕೆ ತಾಯಿಯು-ಪರಮಾತ್ಮನಾದ ಹರಿಯು ತಂದೆಯು. ತಂದೆಗಿಂತಲೂ ತಾಯಿಯು ಗುರುವೂ ಪೂಜ್ಯಳೂ ನಮಸ್ಕರಿಸಲು ಯೋಗ್ಯಳೂ ಪರಾತ್ಪರಳೂ ಆಗಿರುತ್ತಾಳೆ.

೧೨–೧೩. ಯಾವನು ರಾಧೆಯನ್ನು ನಿಂದಿಸುತ್ತ ಬೇರೆ ದೇವರನ್ನಾಗಲಿ ಸರ್ವಕ್ಕೂ ಕಾರಣನಾದ ಕೃಷ್ಣನನ್ನಾಗಲೀ ಪುಣ್ಯಕ್ಷೇತ್ರದಲ್ಲಿ ಸೇವಿಸುತ್ತಾನೋ ಅವನು ಮಹಾ ಮೂಢನಾಗಿರುತ್ತಾನೆ. ಅವನ ವಂಶವು ನಾಶವಾಗುತ್ತದೆ ಮತ್ತು ಈ ಲೋಕದಲ್ಲಿಯೇ ದುಃಖ ಶೋಕಗಳು ಸಂಭವಿಸುತ್ತವಲ್ಲದೆ ಸೂರ್ಯಚಂದ್ರರಿರುವವರೆಗೂ ನರಕದಲ್ಲಿ ಯಾತನೆಯನ್ನನುಭವಿಸುತ್ತಾನೆ.

ಗುರುಶ್ಚ ಜ್ಞಾನೋದ್ಗಿರಣಾಜ್ಜ್ಞಾನಂ ಸ್ಯಾನ್ಮಂತ್ರತಂತ್ರಯೋಃ ।
ಸ ಚ ಮಂತ್ರಶ್ಚ ತತ್ತಂತ್ರಂ ಭಕ್ತಿಃ ಸ್ಯಾದ್ಧ್ರುವಯೋರ್ಯತಃ ॥ ೧೪ ॥

ನಿಷೇವ್ಯ ಮಂತ್ರಂ ದೇವಾನಾಂ ಜೀವಾ ಜನ್ಮನಿಜನ್ಮನಿ ।
ಭಕ್ತಾ ಭವಂತಿ ದುರ್ಗಾಯಾಃ ಪಾದಪದ್ಮೇ ಸುದುರ್ಲಭೇ ॥ ೧೫ ॥

ನಿಷೇವ್ಯ ಮಂತ್ರಂ ಶಂಭೋಶ್ಚ ಜಗತಾಂ ಕಾರಣಸ್ಯ ಚ ।
ತದಾ ಪ್ರಾಪ್ನೋತಿ ಯುವಯೋಃ ಪಾದಪದ್ಮಂ ಸುದುರ್ಲಭಂ ॥ ೧೬ ॥

ಯುವಯೋಃ ಪಾದಪದ್ಮಂ ಚ ದುರ್ಲಭಂ ಪ್ರಾಪ್ಯ ಪುಣ್ಯವಾನ್ ।
ಕ್ಷಣಾರ್ಧಂ ಷೋಡಶಾಂಶಂ ಚ ನಹಿ ಮುಂಚತಿ ದೈವತಃ ॥ ೧೭ ॥

ಭಕ್ತ್ಯಾ ಚ ಯುವಯೋರ್ಮಂತ್ರಂ ಗೃಹೀತ್ವಾ ವೈಷ್ಣವಾದಪಿ ।
ಸ್ತವಂ ವಾ ಕವಚಂ ವಾಪಿ ಕರ್ಮಮೂಲನಿಕೃಂತನಂ ॥ ೧೮ ॥

---

೧೪. ಜ್ಞಾನವನ್ನುಪದೇಶಿಸುವ ಕಾರಣದಿಂದ ಗುರುವೆನಿಸುತ್ತಾನೆ. ಆ ಜ್ಞಾನವಾದರೊ ಮಂತ್ರತಂತ್ರಗಳ ಮೂಲವಾದುದು. ಸ್ಥಿರರಾದ ನಿಮ್ಮಲ್ಲಿ ಭಕ್ತಿಯುಂಟಾಗುವುದೇ ಆ ಮಂತ್ರವು ಅದೇ ತಂತ್ರವು.

೧೫. ಜೀವರು ದೇವತೆಗಳ ಮಂತ್ರವನ್ನು ಜಪಿಸಿದವರಾದರೆ ಪ್ರತಿಜನ್ಮದಲ್ಲಿಯೂ ದೊರೆಯಲಸಾಧ್ಯವಾದ ದುರ್ಗಾದೇವಿಯ ಪಾದಕಮಲಗಳಲ್ಲಿ ಭಕ್ತಿಯುಳ್ಳವರಾಗುತ್ತಾರೆ.

೧೬. ಶಂಭುವಿನ ಮತ್ತು ಜಗತ್ಕಾರಣನಾದ ಪರಮಾತ್ಮನ ಮಂತ್ರವನ್ನು ಉಪಾಸನೆ ಮಾಡಿದವನಾದರೆ ಆಗ ಹೊಂದಲಸಾಧ್ಯವಾದ ನಿಮ್ಮೀರ್ವರ ಪಾದಕಮಲಗಳನ್ನು ಹೊಂದುತ್ತಾನೆ.

೧೭. ದುರ್ಲಭವಾದ ನಿಮ್ಮೀರ್ವರ ಪಾದಕಮಲವನ್ನು ಸೇರಿ ಪುಣ್ಯವಂತನಾಗಿ ಅರ್ಧಕ್ಷಣದಲ್ಲಿ ನಿಮ್ಮ ಹದಿನಾರನೆಯ ಒಂದಂಶವನ್ನು ಹೊಂದುತ್ತಾನೆ ಮತ್ತು ದೇವತಾತ್ವವನ್ನು ಬಿಡುವುದೇ ಇಲ್ಲ.

೧೮. ಯಾವನು ಭಕ್ತಿಯಿಂದ ನಿಮ್ಮೀರ್ವರ ಮಂತ್ರವನ್ನಾಗಲೀ ಸ್ತೋತ್ರವನ್ನಾಗಲೀ ಕವಚವನ್ನಾಗಲೀ ವಿಷ್ಣುಭಕ್ತನಿಂದ ಉಪದೇಶ ಹೊಂದುತ್ತಾನೋ ಅವನು ಕರ್ಮಮೂಲವನ್ನೇ ನಾಶಮಾಡಿಕೊಳ್ಳುತ್ತಾನೆ.

ಯೋಜಯೇತ್ಪರಯಾ ಭಕ್ತ್ಯಾ ಪುಣ್ಯಕ್ಷೇತ್ರೇ ಚ ಭಾರತೇ ।
ಪುರುಷಾಣಾಂ ಸಹಸ್ರಂ ಚ ಸ್ವಾತ್ಮನಾ ಸಾರ್ಧಮುದ್ಧರೇತ್ ॥ ೧೯ ॥

ಗುರುಮಭ್ಯರ್ಚ್ಯ ವಿಧಿವದ್ವಸ್ತ್ರಾಲಂಕಾರಚಂದನೈಃ ।
ಕವಚಂ ಧಾರಯೇದ್ಯೋಹಿ ವಿಷ್ಣುತುಲ್ಯೋ ಭವೇದ್ಧ್ರುವಂ ॥ ೨೦ ॥

ಯದ್ದತ್ತಂ ವಸ್ತು ಮೇ ಮಾತಸ್ತತ್ಸರ್ವಂ ಸಾರ್ಥಕಂ ಕುರು ।
ದೇಹಿ ವಿಪ್ರಾಯ ಮತ್ಪ್ರೀತ್ಯಾ ತದಾ ಭೋಕ್ಷ್ಯಾಮಿ ಸಾಂಪ್ರತಂ ॥ ೨೧ ॥

ದೇವೇ ದೇಯಾನಿ ದಾನಾನಿ ದೇವೇದೇಯಾ ಚ ದಕ್ಷಿಣಾ ।
ತತ್ಸರ್ವಂ ಬ್ರಾಹ್ಮಣೇ ದದ್ಯಾತ್ತದಾನಂತ್ಯಾಯ ಕಲ್ಪ್ಯತೇ ॥ ೨೨ ॥

ಬ್ರಾಹ್ಮಣಾನಾಂ ಮುಖಂ ರಾಧೇ ದೇವಾನಾಂ ಮುಖಮುಖ್ಯಕಂ ।
ವಿಪ್ರಭುಕ್ತಂ ಚ ಯದ್ದ್ರವ್ಯಂ ಪ್ರಾಪ್ನುವಂತ್ಯೇವ ದೇವತಾಃ ॥ ೨೩ ॥

---

೧೯. ಯಾವನು ಅತ್ಯಂತ ಭಕ್ತಿಯಿಂದ ಭಾರತದ ಪುಣ್ಯಕ್ಷೇತ್ರದಲ್ಲಿ ಮಂತ್ರ ಜಪವನ್ನು ಮಾಡುತ್ತಾನೋ ಅವನು ತನ್ನೊಡನೆ ತನ್ನ ವಂಶದ ಸಾವಿರ ಪುರುಷರನ್ನುದ್ಧರಿಸುತ್ತಾನೆ.

೨೦. ಯಾವನು ನಿಯಮಪೂರ್ವಕವಾಗಿ ವಸ್ತ್ರ ಆಭರಣ ಗಂಧ ಮುಂತಾದುವುಗಳಿಂದ ಗುರುವನ್ನು ಪೂಜೆಮಾಡಿ ಕವಚವನ್ನು ಧಾರಣೆಮಾಡುತ್ತಾನೋ ಅವನು ವಿಷ್ಣುವಿಗೆ ಸಮಾನನಾಗುತ್ತಾನೆ.

೨೧. ಎಲೈ ತಾಯಿಯೇ! ನನಗೆ ಯಾವಯಾವ ಪದಾರ್ಥಗಳನ್ನರ್ಪಿಸಿರುವಿಯೋ ಅದೆಲ್ಲವನ್ನೂ ಸಾರ್ಥಕಮಾಡು. ನನ್ನ ಪ್ರೀತಿಗಾಗಿ ಬ್ರಾಹ್ಮಣನಿಗೆ ದಾನಮಾಡು. ಈಗ ನಾನು ಅದೆಲ್ಲವನ್ನೂ ಉಪಭೋಗಿಸುತ್ತೇನೆ.

೨೨. ದೇವರಿಗೆ ಕೊಡಬೇಕಾದ ದಾನಗಳು ದೇವರಿಗೆ ಕೊಡಬೇಕಾದ ದಕ್ಷಿಣೆ ಅದೆಲ್ಲವನ್ನೂ ಬ್ರಾಹ್ಮಣನಿಗೆ ಕೊಡಬೇಕು. ಅದು ಅನಂತವಾಗುತ್ತದೆ.

೨೩. ಎಲೈ ರಾಧೆಯೇ! ಬ್ರಾಹ್ಮಣರ ಮುಖವೇ ದೇವತೆಗಳ ಮುಖ್ಯವಾದ ಮುಖವು. ಬ್ರಾಹ್ಮಣರು ಉಪಭೋಗಿಸಿದ ದ್ರವ್ಯವು ಯಾವುದುಂಟೋ ಅದನ್ನು ದೇವತೆಗಳು ಹೊಂದಿಯೇ ಹೊಂದುತ್ತಾರೆ.

ವಿಪ್ರಾಂಶ್ಚ ಭೋಜಯಾಮಾಸ ತತ್ಸರ್ವಂ ರಾಧಿಕಾ ಸತೀ ।
ಬಭೂವ ತತ್ಕ್ಷಣಾದೇವ ಪ್ರೀತೋ ಲಂಬೋದರೋ ಮುನೇ ॥ ೨೪ ॥

ಏತಸ್ಮಿನ್ನಂತರೇ ದೇವಾ ಬ್ರಹ್ಮೇಶಶೇಷಸಂಜಕಾಃ ।
ಆಯಯುರ್ವಟಮೂಲಂ ಚ ದೇವಪೂಜಾರ್ಥಮೇವ ಚ ॥ ೨೫ ॥

ತತ್ರಾಗತ್ಯ ಶಿವಚರೋ ದೇವಾನ್ದೇವೀರುವಾಚ ಸಃ ।
ಶ್ರೀಕೃಷ್ಣಂ ಶುಕ್ಲಕಂಠಶ್ಚ ಭಯಭೀತಶ್ಚ ರಕ್ಷಕಃ ॥ ೨೬ ॥

॥ ರಕ್ಷಕ ಉವಾಚ ॥

ಗಣೇಶಂ ಪೂಜಯಾಮಾಸ ಸರ್ವಾದೌ ಚ ಶುಭಕ್ಷಣೇ ।
ವೃಷಭಾನುಸುತಾ ರಾಧಾ ಪ್ರಕೃತ್ಯ ಸ್ವಸ್ತಿವಾಚನಂ ॥ ೨೭ ॥

ಸಹಿತಾ ಸಾ ಬಲವತೀ ಗೋಪೀ ತ್ರಿದಶಕೋಟಿಭಿಃ ।
ವಾರಿತೋಽಹಂ ಬಲಿಷ್ಠಾಭಿರ್ಯುಷ್ಮಾಂಶ್ಚ ಕಥಯಾಮಿ ತತ್ ॥ ೨೮ ॥

---

೨೪. ಎಲೈ ನಾರದಮುನಿಯೇ! ಸತಿಯಾದ ರಾಧೆಯು ಆ ವಸ್ತುಗಳೆಲ್ಲವನ್ನು ಬ್ರಾಹ್ಮಣರಿಗೆ ಭೋಜನ ಮಾಡಿಸಿದಳು. ಲಂಬೋದರನು ಆ ಕ್ಷಣವೇ ಸುಪ್ರೀತನಾದನು.

೨೫. ಈ ಸಮಯದಲ್ಲಿ ಬ್ರಹ್ಮ ಈಶ್ವರ ಶೇಷ ಮುಂತಾದ ದೇವತೆಗಳು ದೇವನನ್ನು ಪೂಜೆ ಮಾಡುವುದಕ್ಕಾಗಿ ಆಲದಮರದ ಹತ್ತಿರಕ್ಕೆ ಬಂದರು.

೨೬. ಶಿವನ ಚಾರಕನಾದ ರಕ್ಷಕನೊಬ್ಬನು ಭಯಗೊಂಡವನಾಗಿಯೂ ಒಣಗಿಹೋದ ಗಂಟಲುಳ್ಳವನಾಗಿಯೂ ದೇವತೆಗಳನ್ನೂ ದೇವಿಯರನ್ನೂ ಶ್ರೀಕೃಷ್ಣನನ್ನೂ ಕುರಿತು ಈ ಪ್ರಕಾರ ಹೇಳಿದನು.

೨೭. ರಕ್ಷಕನು ಹೇಳುತ್ತಾನೆ:—ವೃಷಭಾನನ ಮಗಳಾದ ರಾಧೆಯು ಶುಭಕ್ಷಣದಲ್ಲಿ ಸ್ವಸ್ತಿವಾಚನಪೂರ್ವಕವಾಗಿ ಎಲ್ಲರಿಗೂ ಮೊದಲು ಗಣೇಶನನ್ನು ಪೂಜೆ ಮಾಡಿದಳು.

೨೮. ಮುನ್ನೂರು ಕೋಟಿ ಗೋಪಿಯರಿಂದ ಸಮೇತಳಾಗಿ ಬಲಿಷ್ಠಳಾಗಿರುತ್ತಾಳೆ. ಬಲಿಷ್ಠರಾದ ಆವರಿಂದ ತಡೆಯಲ್ಪಟ್ಟ ನಾನು ನಿಮಗೆ ಅದೆಲ್ಲವನ್ನು ಹೇಳುತ್ತೇನೆ.

ಸರ್ವಾದೌ ಪೂಜಯೇದ್ಯೋ ಹಿ ಸೋನಂತಂ ಫಲಮಾಲಭೇತ್ ।
ಮಧ್ಯೇ ಮಧ್ಯವಿಧಂ ಪುಣ್ಯಂ ಶೇಷೇ ಸ್ವಲ್ಪಮಿತಿ ಸ್ಮೃತಂ ॥ ೨೯ ॥

ದೇವೇಂದ್ರೇಷು ಮುನೀಂದ್ರೇಷು ದೇವಸ್ತ್ರೀಷು ಸ್ಥಿತಾಸು ಚ ।
ಗೋಪೀಭಿಶ್ಚ ಸಹ ತಯಾ ರಾಧಯಾ ಪೂಜಿತಃ ಪರಃ ॥ ೩೦ ॥

ದೂತವಾಕ್ಯಂ ಸಮಾಕರ್ಣ್ಯ ಜಹಸುಃ ಸರ್ವದೇವತಾಃ ।
ಮುನಯೋ ಮನವಶ್ಚೈವ ರಾಜಾನೋ ದೇವಯೋಷಿತಃ ॥ ೩೧ ॥

ರುಕ್ಮಿಣ್ಯಾದ್ಯಾ ರಮಣ್ಯಶ್ಚ ಯಾ ದೇವ್ಯೋ ವಿಸ್ಮಯಂ ಯಯುಃ ।
ಸರಸ್ವತೀ ಚ ಸಾವಿತ್ರೀ ಪಾರ್ವತೀ ಪರಮೇಶ್ವರೀ ॥ ೩೨ ॥

ರೋಹಿಣೀ ಚ ಸತೀ ಸಂಜ್ಞಾ ಸ್ವಾಹಾದ್ಯಾ ದೇವಯೋಷಿತಃ ।
ಮುದಿತಾಃ ಪ್ರಯಯುಃ ಸರ್ವಾ ಮುನಿಪತ್ನ್ಯಃ ಪತಿವ್ರತಾಃ ॥ ೩೩ ॥

---

೨೯. ಯಾವನು ಎಲ್ಲರಿಗಿಂತಲೂ ಮೊದಲು ಪೂಜೆಮಾಡುತ್ತಾನೋ ಅವನು ಅನಂತವಾದ ಫಲವನ್ನು ಹೊಂದುತ್ತಾನೆ. ಮಧ್ಯದಲ್ಲಿ ಪೂಜೆ ಮಾಡಿದವನು ಮಧ್ಯಮವಾದ ಫಲವನ್ನು ಹೊಂದುತ್ತಾನೆ. ಕೊನೆಯಲ್ಲಿ ಪೂಜೆ ಮಾಡಿದವನು ಸ್ವಲ್ಪವಾದ ಫಲವನ್ನು ಹೊಂದುತ್ತಾನೆ.

೩೦. ದೇವಶ್ರೇಷ್ಠರೂ ಮುನಿಶ್ರೇಷ್ಠರೂ ದೇವತಾಸ್ತ್ರೀಯರುಗಳೂ ಇದ್ದರೂ ಕೂಡ ಗೋಪಿಯರಿಂದ ಕೂಡಿದ ಆ ರಾಧೆಯಿಂದ ಉತ್ಕೃಷ್ಟನಾದ ಆ ಗಣೇಶನು ಪೂಜಿಸಲ್ಪಟ್ಟನು.

೩೧. ದೂತನಾಡಿದ ಮಾತನ್ನು ಕೇಳಿ ಸಕಲ ದೇವತೆಗಳೂ ಮುನಿಗಳೂ ಮನುಗಳೂ ರಾಜರೂ ದೇವತಾಸ್ತ್ರೀಯರೂ ಕೂಡ ನಕ್ಕರು.

೩೨–೩೩. ರುಕ್ಮಿಣಿಯೇ ಮುಂತಾದ ರಮಣಿಯರೂ ಅಲ್ಲಿ ಇದ್ದ ಇತರ ದೇವಿಯರೂ ಕೂಡ ಆಶ್ಚರ್ಯಗೊಂಡರು. ಸರಸ್ವತಿಯೂ ಸಾವಿತ್ರಿಯೂ ಪಾರ್ವತಿಯೂ ಪರಮೇಶ್ವರಿಯೂ ರೋಹಿಣಿಯೂ ಸತಿಯೂ ಸಂಜ್ಞಾದೇವಿಯೂ ಸ್ವಾಹಾದೇವಿಯೂ ಇವರೇ ಮುಂತಾದ ದೇವತಾಸ್ತ್ರೀಯರೂ ಪತಿವ್ರತೆಯರಾದ ಮುನಿಪತ್ನಿಯರೂ ಕೂಡ ಸಂತೋಷಗೊಂಡವರಾಗಿ ಹೊರಟರು.

ಮುನಯೋ ಮನವಃ ಸರ್ವೇ ದೇವಾಶ್ಚಾಪಿ ನರಾಸ್ತಥಾ ।
ಶ್ರೀಕೃಷ್ಣಃ ಸಗಣೈಃ ಸಾರ್ಧಂ ಯೇ ಚಾನ್ಯೇ ಪ್ರಯಯುರ್ಮುದಾ ॥ ೩೪ ॥

ತೇ ಸರ್ವೇ ವಿವಿಧೈರ್ದ್ರವ್ಯೈಃ ಪೂಜಾಂ ಚಕ್ರುಃ ಶುಭಕ್ಷಣೇ ।
ಬಲಿಷ್ಠಾ ದುರ್ಬಲಾಶ್ಚೈವಂ ಕ್ರಮೇಣ ಚ ಪೃಥಕ್ಪೃಥಕ್ ॥ ೩೫ ॥

ಲಡ್ಡುಕಾನಾಂ ಚ ರಾಶೀನಾಂ ಶತಕೋಟಿರ್ಬಭೂವ ಹ ।
ಶರ್ಕರಾಣಾಂ ತದರ್ಧಂ ಚ ಸ್ವಸ್ತಿಕಾನಾಂ ತಥೈವ ಚ ॥ ೩೬ ॥

ಅನ್ನಾನಾಂ ಭವ್ಯವಸ್ತೂನಾಂ ಶತಕೋಟಿರ್ಬಭೂವ ಹ ।
ಅಸಂಖ್ಯಾನಿ ಫಲಾನ್ಯೇವ ಸ್ವಾದೂನಿ ಮಧುರಾಣಿ ಚ ॥ ೩೭ ॥

ಮಧುಕುಲ್ಯಾ ದುಗ್ಧಕುಲ್ಯಾ ದಧಿಕುಲ್ಯಾ ಘೃತಸ್ಯ ಚ ।
ಬಭೂವುಃ ಶತಸಂಖ್ಯಾಶ್ಚ ತ್ರೈಲೋಕ್ಯಾನಾಂ ಚ ಪೂಜನೇ ॥ ೩೮ ॥

---

೩೪. ಮತ್ತು ಮುನಿಗಳೂ ಮನುಗಳೂ ಸಕಲ ದೇವತೆಗಳೂ ಮನುಷ್ಯರೂ ಕೂಡ ಹೊರಟರು. ಶ್ರೀಕೃಷ್ಣನು ತನ್ನ ಪರಿವಾರಗಳೊಂದಿಗೆ ಹೊರಟನು. ಇನ್ನೂ ಅಲ್ಲಿ ಯಾರ್ಯಾರು ಇದ್ದರೋ ಅವರೆಲ್ಲರೂ ಆನಂದದಿಂದ ಹೊರಟರು.

೩೫. ಬಲಿಷ್ಠರೂ ದುರ್ಬಲರೂ ಆದ ಅವರೆಲ್ಲರೂ ಶುಭಮುಹೂರ್ತದಲ್ಲಿ ನಾನಾ ವಿಧವಾದ ದ್ರವ್ಯಗಳಿಂದ ಬೇರೆಬೇರೆಯಾಗಿ ಕ್ರಮವನ್ನನುಸರಿಸಿ ಪೂಜೆ ಮಾಡಿದರು.

೩೬. ಲಡ್ಡಿಗೆಗಳು ನೂರು ಕೋಟಿಗಳಾಗಿ ರಾಶಿಯಾದುವು. ಐವತ್ತು ಕೋಟಿ ಸಕ್ಕರೆಯು ಮತ್ತು ಹೋಳಿಗೆಗಳ ರಾಶಿಗಳು ಬಿದ್ದುವು.

೩೭. ಅನ್ನಗಳ ಮತ್ತು ಮನೋಹರವಾದ ಪದಾರ್ಥಗಳ ನೂರು ಕೋಟಿ ರಾಶಿಗಳು ಬಿದ್ದುವು. ಸಿಹಿಯಾಗಿಯೂ ರುಚಿಯಾಗಿಯೂ ಇರುವ ಹಣ್ಣುಗಳ ರಾಶಿಗಳು ಲೆಕ್ಕಮಾಡಲಸಾಧ್ಯವಾದುವು.

೩೮. ಜೇನುತುಪ್ಪದ ಕಾಲುವೆ, ಹಾಲಿನ ಕಾಲುವೆ, ಮೊಸರಿನ ಕಾಲುವೆ ಮತ್ತು ತುಪ್ಪದ ಕಾಲುವೆ ಇವುಗಳು ಮೂರು ಲೋಕದವರ ಪೂಜೆಯಿಂದ ನೂರು ಸಂಖ್ಯೆಗಳಷ್ಟಾದುವು.

ಪೂಜಾಂ ಕೃತ್ವಾ ತು ತೇ ಸರ್ವೇ ಸಮೂಷುಶ್ಚ ಸುಖಾಸನೇ ।
ಪಾರ್ವತೀ ಪರಮಪ್ರೀತ್ಯಾ ರಾಧಾಸ್ಥಾನಂ ಸಮಾಯಯೌ ॥ ೩೯ ॥

ಸಾ ರಾಧಾ ಪಾರ್ವತೀಂ ದೃಷ್ಟ್ವಾ ಸಮುತ್ಥಾಯ ಜವೇನ ಚ ।
ಯಥಾ_ಯೋಗ್ಯಾಂ ಚ ಸಂಭಾಷಾಂ ಚಕಾರ ಸಾದರಂ ಮುದಾ ॥ ೪೦ ॥

ಆಶ್ಲೇಷಣಂ ಚುಂಬನಂ ಚ ಬಭೂವ ಚ ಪರಸ್ಪರಂ ।
ಉವಾಚ ಮಧುರಂ ದುರ್ಗಾ ರಾಧಾಂ ಕೃತ್ವಾ ಸ್ವವಕ್ಷಸಿ ॥ ೪೧ ॥

॥ ಪಾರ್ವತ್ಯುವಾಚ ॥

ಕಿಂ ವಾ ಪ್ರಶ್ನಂ ಕರಿಷ್ಯಾಮಿ ತ್ವಾಂ ರಾಧಾಂ ಮಂಗಲಾಲಯಂ ।
ಗತಾ ತೇ ವಿರಹಜ್ವಾಲಾ ಶ್ರೀದಾಮ್ನಃ ಶಾಪಮೋಕ್ಷಣೇ ॥ ೪೨ ॥

ಸತತಂ ಮನ್ಮನಃ ಪ್ರಾಣಾಸ್ತ್ವಯ್ಯೇವ ಮಯಿ ತೇ ತಥಾ ।
ನ ಹ್ಯೇವಮಾವಯೋರ್ಭೇದಃ ಶಕ್ತಿಪುರುಷಯೋಸ್ತಥಾ ॥ ೪೩ ॥

---

೩೯. ಅವರೆಲ್ಲರೂ ಪೂಜೆಯನ್ನು ಮಾಡಿ ತಮ್ಮತಮ್ಮ ಆಸನಗಳಲ್ಲಿ ಸುಖವಾಗಿ ಕುಳಿತುಕೊಂಡರು. ಪಾರ್ವತಿಯು ಅತ್ಯಂತ ಸಂತೋಷದಿಂದ ರಾಧೆಯಿದ್ದೆಡೆಗೆ ಬಂದಳು.

೪೦. ಆ ರಾಧೆಯು ಪಾರ್ವತಿಯನ್ನು ನೋಡಿ ಜಾಗ್ರತೆಯಾಗಿ ಮೇಲಕ್ಕೆದ್ದು ಆನಂದದಿಂದಲೂ ಆದರದಿಂದಲೂ ಆ ಕಾಲಕ್ಕೆ ಉಚಿತವಾದ ಮಾತುಗಳನ್ನಾಡಿದಳು.

೪೧. ಅವರಿಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡು ಚುಂಬಿಸಿದರು. ಪಾರ್ವತಿಯು ರಾಧೆಯನ್ನು ತನ್ನೆದೆಗೆ ಅಪ್ಪಿಕೊಂಡು ಮೃದುವಾಗಿ ಮಾತನಾಡತೊಡಗಿದಳು.

೪೨. ಪಾರ್ವತಿಯು ಹೇಳುತ್ತಾಳೆ:— ಮಂಗಳಗಳಿಗೆ ಮನೆಯಾದ ರಾಧೆಯೇ ನಿನ್ನನ್ನು ಏನೆಂದು ಪ್ರಶ್ನೆಮಾಡಲಿ? ಶ್ರೀದಾಮನ ಶಾಪವು ಮೋಕ್ಷವಾದಮೇಲೆ ನಿನ್ನ ವಿರಹಜ್ವಾಲೆಯು ನಾಶವಾಯಿತು.

೪೩. ಯಾವಾಗಲೂ ನನ್ನ ಮನಸ್ಸು ಮತ್ತು ಪ್ರಾಣಗಳು ನಿನ್ನಲ್ಲಿರುತ್ತವೆ. ಹಾಗೆಯೇ ನಿನ್ನ ಮನಸ್ಸು ಮತ್ತು ಪ್ರಾಣಗಳು ನನ್ನಲ್ಲಿರುತ್ತವೆ. ಶಕ್ತಿಪುರುಷರುಗಳಿಗೆ

ಯೇ ತ್ವಾಂ ನಿಂದಂತಿ ಮದ್ಭಕ್ತಾಸ್ತ್ವದ್ಭಕ್ತಾಶ್ಚಾಪಿ ಮಾಮಪಿ ।
ಕುಂಭೀಪಾಕೇ ಚ ಪಚ್ಯಂತೇ ಯಾವಚ್ಚಂದ್ರದಿವಾಕರೌ　|| ೪೪ ||

ರಾಧಾಮಾಧವಯೋರ್ಭೇದಂ ಯೇ ಕುರ್ವಂತಿ ನರಾಧಮಾಃ ।
ವಂಶಹಾನಿರ್ಭವೇತ್ತೇಷಾಂ ಪಚ್ಯಂತೇ ನರಕೇ ಚಿರಂ　|| ೪೫ ||

ಯಾಂತಿ ಸೂಕರಯೋನಿಂ ಚ ಪಿತೃಭಿಃ ಶತಕೈಃ ಸಹ ।
ಷಷ್ಟಿವರ್ಷಸಹಸ್ರಾಣಿ ವಿಷ್ಟಾಯಾಂ ಕೃಮಯಸ್ತಥಾ　|| ೪೬ ||

ತ್ವಯೈವ ಪೂಜಿತಃ ಪುತ್ರೋ ನ ಮಯಾ ಚ ಗಣೇಶ್ವರಃ ।
ಸರ್ವಾದೌ ಸರ್ವಪೂಜ್ಯೋಽಯಂ ಯಥಾ ತವ ತಥಾ ಮಮ　|| ೪೭ ||

ಯಾವಜ್ಜೀವನಪರ್ಯಂತಂ ನ ವಿಚ್ಛೇದೋ ಭವಿಷ್ಯತಿ ।
ರಾಧಾಮಾಧವಯೋರ್ದೇವಿ ದುಗ್ಧಧಾವಲ್ಯಯೋರ್ಯಥಾ　|| ೪೮ ||

---

ಯಾವ ರೀತಿಯಾದ ಭೇದವಿಲ್ಲವೋ ಆ ರೀತಿಯಾಗಿ ನಮ್ಮಿರ್ವರಿಗೂ ಭೇದವಿರುವುದಿಲ್ಲ.

೪೪. ನನ್ನ ಭಕ್ತರಾದವರು ಯಾರು ನಿನ್ನನ್ನು ನಿಂದಿಸುತ್ತಾರೋ ನಿನ್ನ ಭಕ್ತರಾದ ಯಾರು ನನ್ನನ್ನು ನಿಂದಿಸುತ್ತಾರೋ ಅವರು ಸೂರ್ಯ ಚಂದ್ರರಿರುವವರೆಗೂ ಕುಂಭೀಪಾಕವೆಂಬ ನರಕದಲ್ಲಿ ಬೇಯಿಸಲ್ಪಡುತ್ತಾರೆ.

೪೫. ಯಾವ ಅಧಮರಾದ ಮಾನವರು ರಾಧೆಗೂ ಮಾಧವನಿಗೂ ಭೇದವನ್ನು ಮಾಡುತ್ತಾರೋ ಅವರ ವಂಶವು ನಾಶವಾಗುತ್ತದೆ ಮತ್ತು ಅವರು ಬಹಳ ಕಾಲದವರೆಗೆ ನರಕದಲ್ಲಿ ಬೇಯಿಸಲ್ಪಡುತ್ತಾರೆ.

೪೬. ಮತ್ತು ಅಂಥವರು ತಮ್ಮ ನೂರು ಮಂದಿ ಪಿತೃಗಳೊಡನೆ ಹಂದಿಯ ಜನ್ಮವನ್ನು ಹೊಂದುತ್ತಾರೆ, ಅಲ್ಲದೆ ಅರವತ್ತು ಸಾವಿರ ವರುಷಗಳವರೆಗೆ ಮಲದಲ್ಲಿ ಹುಳುವಾಗಿರುತ್ತಾರೆ.

೪೭. ಗಣೇಶ್ವರನು ಎಲ್ಲರಿಗಿಂತಲೂ ಮೊದಲು ನಿನ್ನಿಂದಲೇ ಪೂಜಿಸಲ್ಪಟ್ಟಿರುವನು. ನನ್ನಿಂದ ಪೂಜಿಸಲ್ಪಡಲಿಲ್ಲ. ಇವನು ಸರ್ವರಿಂದಲೂ ಪೂಜಿಸಲು ಯೋಗ್ಯನಾಗಿರುವನು. ಮತ್ತು ನನಗೆ ಹೇಗೆ ಮಗನಾಗಿರುವನೋ ಹಾಗೆ ನಿನಗೂ ಮಗನಾಗಿರುವನು.

೪೮. ಎಲೈ ದೇವಿಯೇ! ಸೌಂದರ್ಯ ಮತ್ತು ಬಿಳುಪುಗಳಂತೆ ರಾಧಾ ಮಾಧವರಿಗೆ ಇರುವವರೆಗೂ ವಿಯೋಗವುಂಟಾಗುವುದಿಲ್ಲ.

ಸಿದ್ಧಾಶ್ರಮೇ ಮಹಾತೀರ್ಥೇ ಪುಣ್ಯಕ್ಷೇತ್ರೇ ಚ ಭಾರತೇ ।
ನಿರ್ವಿಘ್ನಂ ಲಭ ಗೋವಿಂದಂ ಸಂಪೂಜ್ಯ ವಿಘ್ನಖಂಡನಂ ॥ ೪೯ ॥

ರಾಸೇಶ್ವರೀ ತ್ವಂ ರಸಿಕಾ ಶ್ರೀಕೃಷ್ಣೋ ರಸಿಕೇಶ್ವರಃ ।
ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ಭವೇತ್ ॥ ೫೦ ॥

ಶ್ರೀದಾಮ್ನಃ ಶಾಪನಿರ್ಮುಕ್ತಾ ಶತವರ್ಷಾಂತರೇ ಸತಿ ।
ಕುರುಷ್ವ ಮದ್ವರೇಣಾದ್ಯ ಕೃಷ್ಣೇನ ಸಹ ಸಂಗಮಂ ॥ ೫೧ ॥

ಮಮಾಜ್ಞಯಾ ದುರ್ಲಭಯಾ ಸುವೇಷಂ ಕುರು ಸುಂದರಿ ।
ಸುದುರ್ಲಭಃ ಕಾಮಿನೀನಾಂ ಸತ್ಪುಂಸಾ ಸಹ ಸಂಗಮಃ ॥ ೫೨ ॥

ಚಕ್ರುಃ ಸುವೇಷಂ ರಾಧಾಯಾಃ ಪ್ರಿಯಾಲ್ಯಶ್ಚ ಶಿವಾಜ್ಞಯಾ ॥ ೫೩ ॥

---

೪೯. ಭಾರತದಲ್ಲಿ ಪುಣ್ಯಕ್ಷೇತ್ರವೂ ಆದ ಸಿದ್ಧಾಶ್ರಮದಲ್ಲಿ ವಿಘ್ನ ನಾಶಕನಾದ ಗಣೇಶನನ್ನು ಪೂಜೆಮಾಡಿ ಯಾವ ಅಡ್ಡಿಯೂ ಇಲ್ಲದಂತೆ ಗೋವಿಂದನನ್ನು ಹೊಂದುವವಳಾಗು.

೫೦. ರಾಸೇಶ್ವರಿಯಾದ ನೀನು ರಸಿಕಳು, ಶ್ರೀಕೃಷ್ಣನು ರಸಿಕರಲ್ಲಿ ಮುಂದಾಳಾದವನು. ಜಾಣೆಯಾದವಳು ಜಾಣನಾದವನೊಡನೆ ಸೇರಿದರೆ ಗುಣವುಂಟು.

೫೧. ನೂರು ವರುಷಗಳು ಕಳೆಯಲು ಶ್ರೀದಾಮನ ಶಾಪದಿಂದ ಬಿಡಲ್ಪಟ್ಟವಳಾಗಿ ನನ್ನ ವರದಿಂದ ಕೃಷ್ಣನೊಡನೆ ಈಗ ಸಮಾಗಮನವನ್ನು ಹೊಂದುವಳಾಗು.

೫೨. ಹೊಂದಲಸಾಧ್ಯವಾದ ನನ್ನ ಅಪ್ಪಣೆಯಿಂದ ಚೆನ್ನಾಗಿ ಸಿಂಗರಿಸಿಕೋ. ಎಲೈ ಸುಂದರಿಯೇ! ಕಾಮಿನಿಯರಿಗೆ ಉತ್ತಮನಾದ ಪುರುಷನೊಡನೆ ಸಮಾಗಮವು ಅತ್ಯಂತ ದುರ್ಲಭವು.

೫೩. ಪಾರ್ವತಿಯ ಅಪ್ಪಣೆಯಂತೆ ರಾಧೆಯ ಪ್ರಿಯ ಸಖಿಯರು ಉತ್ತಮವಾದ ಅಲಂಕಾರವನ್ನು ಮಾಡಿದರು.

ರತ್ನಸಿಂಹಾಸನೇ ರಮ್ಯೇ ವಾಸಯಾಮಾಸುರೀಶ್ವರೀಂ ।
ಪುರತೋ ರತ್ನಮಾಲಾ ಸಾ ರತ್ನಮಾಲಾಂ ಗಲೇ ದದೌ ॥ ೫೪ ॥

ರಾಧಾಯಾ ದಕ್ಷಿಣೇ ಹಸ್ತೇ ಕ್ರೀಡಾಪದ್ಮಂ ಮನೋಹರಂ ।
ದದೌ ಪದ್ಮಮುಖೀ ಪಾದಪದ್ಮಯುಗ್ಮೇಽಪ್ಯಲಕ್ತಕಂ ॥ ೫೫ ॥

ಪ್ರದದೌ ಸುಂದರೀ ಗೋಪೀ ಸಿಂಧೂರಂ ಸುಂದರಂ ವರಂ ।
ಚಂದನೇನ ಸಮಾಯುಕ್ತಂ ಸೀಮಂತಾಧಸ್ತಲೋಜ್ಜ್ವಲಂ ॥ ೫೬ ॥

ಸುಚಾರುಕಬರೀಂ ರಮ್ಯಾಂ ಚಕಾರ ಮಾಲತೀ ಸತೀ ।
ಮನೋಹರಾಂ ಮುನೀನಾಂ ಚ ಮಾಲತೀಮಾಲ್ಯಭೂಷಿತಾಂ ॥ ೫೭ ॥

ಕಸ್ತೂರೀಕುಂಕುಮಾಕ್ತಂ ಚ ಚಾರುಚಂದನಪತ್ರಕಂ ।
ಸ್ತನಯುಗ್ಮೇ ಸುಕಠಿಣೇ ಚಕಾರ ಚಂದನಾ ಸತೀ ॥ ೫೮ ॥

---

೫೪. ಈಶ್ವರಿಯಾದ ರಾಧೆಯನ್ನು ಉತ್ತಮವಾದ ರತ್ನ ಸಿಂಹಾಸನದಲ್ಲಿ ಕುಳ್ಳಿರಿಸಿದರು. ರತ್ನಮಾಲಾ ಎಂಬುವಳು ಮುಂದೆ ಬಂದು ಅವಳ ಕೊರಳಿನಲ್ಲಿ ರತ್ನ ಮಾಲಿಕೆಯನ್ನು ಹಾಕಿದಳು

೫೫. ಪದ್ಮಮುಖಿಯೆಂಬುವಳು ರಾಧೆಯ ಬಲದಕ್ಕೈಯಲ್ಲಿ ಸುಂದರವಾದ ಆಟದ ಕಮಲವನ್ನು ಕೊಟ್ಟಳು. ಮತ್ತು ಪಾದಕಮಲಗಳಿಗೆ ರಸವನ್ನು ಬಳಿದಳು.

೫೬. ಸುಂದರಿಯಾದ ಗೋಪಿಯು ಸುಂದರವೂ ಶ್ರೇಷ್ಠವೂ ಆದ ಮತ್ತು ಗಂಧದಿಂದ ಕೂಡಿದ ಸಿಂಧೂರವನ್ನು ಬೈತಲೆಯ ಕೆಳಭಾಗದಲ್ಲಿ ಪ್ರಕಾಶಮಾನ ವಾಗಿರುವಂತೆ ಹಚ್ಚಿದಳು.

೫೭. ಮಾಲತಿಯೆಂಬ ಸಖಿಯು ಸುಂದವಾದ ತಲೆಗೂದಲನ್ನು ಹೆಣೆದು ಮುನಿಗಳ ಮನಸ್ಸನ್ನೂ ಸೆಳೆಯುವ ಆ ಜಡೆಗೆ ಮಾಲತೀಹೂವಿನ ಮಾಲಿಕೆಯಿಂದ ಅಲಂಕಾರ ಮಾಡಿದಳು.

೫೮. ಚಂದನಾ ಎಂಬ ಸಖಿಯು ರಾಧೆಯ ಅತ್ಯಂತ ಕಠಿಣವಾದ ಸ್ತನ ಗಳೆರಡರಲ್ಲಿ ಕಸ್ತೂರಿ ಮತ್ತು ಕೇಸರಿಯಿಂದ ಕೂಡಿದ ಸುಂದರವಾದ ಪತ್ರರಚನೆಯನ್ನು ಮಾಡಿದಳು.

ಚಾರುಚಂಪಕಪುಷ್ಪಾಣಾಂ ಮಾಲಾಂ ಗಂಧಮನೋಹರಾಂ ।
ಮಾಲಾವತೀ ದದೌ ತಸ್ಯೈ ಪ್ರಫುಲ್ಲಾಂ ನವಮಲ್ಲಿಕಾಂ ॥ ೫೯ ॥

ರತೀಷು ರಸಿಕಾ ಗೋಪೀ ರತ್ನಭೂಷಣಭೂಷಿತಾಂ ।
ತಾಂ ಚಕಾರಾತಿರಸಿಕಾಂ ವರಾಂ ರತಿರತೋತ್ಸುಕಾಂ ॥ ೬೦ ॥

ಶರತ್ಪದ್ಮದಲಾಭಂ ಚ ಲೋಚನಂ ಕಜ್ಜಲೋಜ್ಜ್ವಲಂ ।
ಕೃತ್ವಾ ದದೌ ಸುಲಲಿತಂ ವಸ್ತ್ರಂ ಚ ಲಲಿತಾ ಸತೀ ॥ ೬೧ ॥

ಮಹೇಂದ್ರೇಣ ಪ್ರದತ್ತಂ ಚ ಪಾರಿಜಾತಪ್ರಸೂನಕಂ ।
ಸುಗಂಧಿಯುಕ್ತಂ ತಸ್ಯಾಶ್ಚ ಪಾರಿಜಾತಂ ಕರೇ ದದೌ ॥ ೬೨ ॥

ಸುಶೀಲಂ ಮಧುರೋಕ್ತಂ ಚ ಭರ್ತೃಪಾರ್ಶ್ವೇ ಯಥೋಚಿತಂ ।
ಶಿಕ್ಷಾಂ ಚಕಾರ ನೀತಿಂ ಚ ಸುಶೀಲಾ ಗೋಪಿಕಾ ಸತೀ ॥ ೬೩ ॥

---

೫೯. ಮಾಲಾವತಿಯೆಂಬುವಳು ಗಂಧದಿಂದ ಮನೋಹರವಾದ ಸುಂದರವಾದ ಸಂಪಿಗೆಯ ಹೂವಿನ ಮಾಲಿಕೆಯನ್ನು ಮತ್ತು ಅರಳಿದ ನವಮಲ್ಲಿಗೆಯ ಹಾರವನ್ನೂ ಅರ್ಪಿಸಿದಳು.

೬೦. ರತಿ ಕ್ರೀಡೆಗಳಲ್ಲಿ ರಸಿಕಳಾದ ಗೋಪಿಯು ರತ್ನಾಭರಣಗಳಿಂದ ಅಲಂಕರಿಸಲ್ಪಟ್ಟಿರುವ ಆ ರಾಧೆಯನ್ನು ಅತ್ಯಂತ ರಸಿಕಳನ್ನಾಗಿಯೂ ರತಿ ಕ್ರೀಡೆಯಲ್ಲಿ ಕುತೂಹಲವುಳ್ಳವಳನ್ನಾಗಿಯೂ ಮಾಡಿದಳು.

೬೧. ಲಲಿತಾ ಎಂಬ ಸತಿಯು ಶರತ್ಕಾಲದ ಕಮಲ ದಳದಂತಿರುವ ರಾಧೆಯ ಕಣ್ಣನ್ನು ಕಾಡಿಗೆಯಿಂದ ಕಂಗೊಳಿಸುವುದಂತೆ ಮಾಡಿ ಅತಿ ಮನೋಹವಾದ ವಸ್ತ್ರವನ್ನು ಕೊಟ್ಟಳು.

೬೨ ಮತ್ತು ಮಹೇಂದ್ರನಿಂದ ಕೊಡಲ್ಪಟ್ಟ ಸುವಾಸನೆಯಿಂದ ಕೂಡಿದ ಪಾರಿಜಾತದ ಹೂವನ್ನು ಆ ರಾಧೆಯ ಕೈಯಲ್ಲಿ ಕೊಟ್ಟಳು.

೬೩. ಸುಶೀಲೆಯೆಂಬುವಳು ಗಂಡನ ಸಮೀಪದಲ್ಲಿ ಒಳ್ಳೆಯ ಸ್ವಭಾವವನ್ನೂ ಮೃದುವಾಗಿ ಮಾತನಾಡುವುದನ್ನೂ ನೀತಿಯನ್ನೂ ಯಥಾ ಯೋಗ್ಯವಾಗಿ ಉಪದೇಶ ಮಾಡಿದಳು.

ಸ್ತ್ರೀಣಾಂ ಚ ಷೋಡಶಕಲಾಂ ವಿಪತ್ತೌ ವಿಸ್ಮೃತಾಂ ತಯೋಃ ।
ಸ್ಮರಣಂ ಕಾರಯಾಮಾಸ ರಾಧಾಮಾತಾ ಕಲಾವತೀ || ೬೪ ||

ಶೃಂಗಾರವಿಷಯೋಕ್ತಂ ಚ ವಚನಂ ಚ ಸುಧೋಪಮಂ ।
ಸ್ಮರಣಂ ಕಾರಯಾಮಾಸ ಭಗಿನೀ ಚ ಸುಧಾಮುಖೀ || ೬೫ ||

ಕಮಲಾನಾಂ ಚಂಪಕಾನಾಂ ದಲೇ ಚಂದನಚರ್ಚಿತೇ ।
ಚಕಾರ ರತಿತಲ್ಪಂ ಚ ಕಮಲಾ ಚಾಶು ಕೋಮಲಂ || ೬೬ ||

ಚಾರುಚಂಪಕಪುಷ್ಪಂ ಚ ಕೃಷ್ಣಾರ್ಥಂ ಪುಟಕಸ್ಥಿತಂ ।
ಚಕಾರ ಚಂದನಾಕ್ತಂ ಚ ಸ್ವಯಂ ಚ ಪಾರ್ವತೀ ಸತೀ || ೬೭ ||

ಪುಷ್ಪಂ ಕೇಲಿಕದಂಬಾನಾಂ ಸ್ತಬಕಂ ಚ ಮನೋಹರಂ ।
ಕದಂಬಮಾಲಾ ಕೃಷ್ಣಾರ್ಥಂ ವಿದ್ಯಮಾನಾಂ ಚಕಾರ ಸಾ || ೬೮ ||

---

೬೪. ರಾಧೆಯ ತಾಯಿಯಾದ ಕಲಾವತಿಯು ಶಾಪರೂಪವಾದ ಆಪತ್ತಿನಿಂದ ರಾಧೆಗೆ ಮರೆತುಹೋಗಿದ್ದ ಸ್ತ್ರೀಯರ ಸಂಬಂಧವಾದ ಹದಿನಾರು ಕಲೆಗಳನ್ನು ಜ್ಞಾಪಿಸಿಕೊಟ್ಟಳು.

೬೫. ಸಹೋದರಿಯಾದ ಸುಧಾಮುಖಿಯು ಶೃಂಗಾರರಸ ವಿಷಯದಲ್ಲಿ ಹೇಳಿರುವ ಅಮೃತದಂತಿರುವ ಮಾತನ್ನು ಜ್ಞಾಪಿಸಿಕೊಟ್ಟಳು.

೬೬. ಕಮಲೆಯು ಕಮಲಗಳ ಮತ್ತು ಸಂಪಿಗೆಗಳ ದಳಗಳನ್ನು ಗಂಧದಲ್ಲದ್ದಿ ಅದರಿಂದ ಜಾಗ್ರತೆಯಾಗಿ ಕೋಮಲವಾದ ರತಿಕ್ರೀಡೆಗೆ ಯೋಗ್ಯವಾದ ಹಾಸಿಗೆಯನ್ನು ಮಾಡಿದಳು.

೬೭. ಪಾರ್ವತಿಯು ತಾನು ಕೃಷ್ಣನಿಗಾಗಿ ಗಂಧದಿಂದ ಮಿಶ್ರಿತವಾದ ಸುಂದರ ವಾದ ಸಂಪಿಗೆಯ ಹೂವನ್ನು ಪೊಟ್ಟಣದಲ್ಲಿರಿಸಿದಳು.

೬೮. ಆಟದ ಹೂವನ್ನೂ ಕದಂಬಪುಷ್ಪದ ಗೊಂಚಲನ್ನೂ ಕೂಡ ಅಂದವಾಗಿ ಮಾಡಿ ಕದಂಬಮಾಲಾ ಎಂಬುವಳು ಕೃಷ್ಣನಿಗಾಗಿ ಸಿದ್ಧಗೊಳಿಸಿದಳು.

ತಾಂಬೂಲಂ ಚ ವರಂ ರಮ್ಯಂ ಕರ್ಪೂರಾದಿಸುವಾಸಿತಂ ।
ಕೃಷ್ಣಪ್ರಿಯಾ ಚ ಕೃಷ್ಣಾರ್ಥಂ ಚಕಾರ ವಾಸಿತಂ ಜಲಂ ॥ ೭೯ ॥

ಏತಸ್ಮಿನ್ನಂತರೇ ಸರ್ವಮಾಶ್ರಮಂ ಸಜಲಸ್ಥಲಂ ।
ಸಾಕ್ಷಾದ್ಗೋರೋಚನಾಭಂ ಚ ದದೃಶುರ್ಮುನಯಃ ಸುರಾಃ ॥ ೮೦ ॥

ತೇ ಸರ್ವೇ ವಿಸ್ಮಯಂ ಗತ್ವಾ ಪಪ್ರಚ್ಛುಃ ಕೃಷ್ಣಮೀಶ್ವರಂ ।
ಉವಾಚ ಭಗವಾಂಸ್ತಾಂಶ್ಚ ಸರ್ವಜ್ಞಃ ಸರ್ವಕಾರಣಃ ॥ ೮೧ ॥

॥ ಶ್ರೀ ಭಗವಾನುವಾಚ ॥

ಅಭಿಶಪ್ತಾ ಚ ಶ್ರೀದಾಮ್ನಾ ಭ್ರಷ್ಟಶೋಭಾ ಚ ರಾಧಿಕಾ ।
ಸರ್ವಂ ಜ್ಞಾನಂ ವಿಸಸ್ಮಾರ ಮದ್ವಿಚ್ಛೇದಜ್ವರಾತುರಾ ॥ ೮೨ ॥

---

೭೯. ಕೃಷ್ಣಪ್ರಿಯೆಯು ಕೃಷ್ಣನಿಗಾಗಿ ಉತ್ಕೃಷ್ಟವೂ ಮನೋಹರವೂ ಆದ ಕರ್ಪೂರವೇ ಮುಂತಾದುವುಗಳಿಂದ ಸುವಾಸನೆಯಾದ ತಾಂಬೂಲವನ್ನೂ ಸುವಾಸನೆಯಿಂದ ಕೂಡಿದ ನೀರನ್ನೂ ಸಿದ್ಧಮಾಡಿದಳು.

೮೦. ಈ ಮಧ್ಯದಲ್ಲಿ ಜಲಸ್ಥಲಗಳಿಂದ ಕೂಡಿದ ಸಕಲ ಆಶ್ರಮಪ್ರದೇಶವೂ ಪ್ರತ್ಯಕ್ಷವಾಗಿ ಗೋರೋಚನದ ಕಾಂತಿಯನ್ನು ಹೊಂದಿರುವುದನ್ನು ಮುನಿಗಳೂ ದೇವತೆಗಳೂ ಕಂಡರು.

೮೧. ಅವರೆಲ್ಲರೂ ಆಶ್ಚರ್ಯಗೊಂಡವರಾಗಿ ಈಶ್ವರನಾದ ಶ್ರೀಕೃಷ್ಣನನ್ನು ಕುರಿತು ಪ್ರಶ್ನೆಮಾಡಿದರು. ಸರ್ವಜ್ಞನೂ ಸರ್ವಕಾರಣನೂ ಆದ ಭಗವಂತನು ಅವರನ್ನು ಕುರಿತು ಇಂತೆಂದನು.

೮೨. ಶ್ರೀಭಗವಂತನು ಹೇಳುತ್ತಾನೆ : ರಾಧೆಯು ಶ್ರೀದಾಮನಿಂದ ಶಪಿಸಲ್ಪಟ್ಟವಳಾಗಿ ಕಾಂತಿಹೀನಳಾಗಿದ್ದಳು. ನನ್ನ ವಿಯೋಗಜ್ವರದಿಂದ ಪೀಡಿತಳಾಗಿ ಸಮಸ್ತಜ್ಞಾನವನ್ನೂ ಮರೆತಿದ್ದಳು.

ವಿಮುಕ್ತೇ ವರ್ಷಶತಕೇ ಜ್ಞಾನಂ ಸಸ್ಮಾರ ಸಾ ಸತೀ ।
ಸಿದ್ಧಾಶ್ರಮಂ ಚ ಪೀತಾಭಂ ರಾಸೇಶ್ವರ್ಯಾಶ್ಚ ತೇಜಸಾ ॥ ೭೩ ॥

ಪರಮಾಹ್ಲಾದಕಂ ತೇಜಶ್ಚಂದ್ರಕೋಟಿಸಮಪ್ರಭಂ ।
ಸುಖದೃಶ್ಯಂ ಚ ಸುಖದಂ ಚಕ್ಷುಷಾ ಪ್ರಾಣಿನಾಮಪಿ ॥ ೭೪ ॥

ತಚ್ಛ್ರುತ್ವಾ ಪರಮಾಶ್ಚರ್ಯಂ ಮುನಯೋ ಮನವಸ್ತಥಾ ।
ದೇವ್ಯಶ್ಚ ಸರ್ವದೇವಾಸ್ತೇ ಬ್ರಹ್ಮೇಶಾನಾದಯಸ್ತಥಾ ॥ ೭೫ ॥

ಜವೇನ ಗತ್ವಾ ತತ್ಸ್ಥಾನಂ ಭಕ್ತಿನಮ್ರಾತ್ಮಕಂಧರಾಃ ।
ಸರ್ವೇ ಜನಾಸ್ತೇ ದದೃಶುಸ್ತ್ರೈಲೋಕ್ಯಸ್ಥಾಶ್ಚ ರಾಧಿಕಾಂ ॥ ೭೬ ॥

ಶ್ವೇತಚಂಪಕವರ್ಣಾಭಾಮತುಲಾಂ ಸುಮನೋಹರಾಂ ।
ಮೋಹಿನೀಂ ಮಾನಸಾನಾಂ ಚ ಮುನೀನಾಮೂರ್ಧ್ವರೇತಸಾಂ ॥ ೭೭ ॥

---

೭೩. ನೂರು ವರುಷಗಳಾದನಂತರ ಶಾಪವಿಮುಕ್ತಿಯಾಗಲು ಆ ಸತಿಯಾದ ರಾಧೆಯು ಸಕಲವನ್ನೂ ಜ್ಞಾಪಿಸಿಕೊಂಡಳು. ರಾಸೇಶ್ವರಿಯಾದ ಅವಳ ತೇಜಸ್ಸಿನಿಂದ ಸಿದ್ಧಾಶ್ರಮವೂ ಕೂಡ ಹಳದಿಯ ಬಣ್ಣವುಳ್ಳದ್ದಾಗಿದೆ.

೭೪. ಆ ತೇಜಸ್ಸಾದರೋ ಅತ್ಯಂತ ಸಂತೋಷವನ್ನುಂಟುಮಾಡತಕ್ಕುದಾಗಿಯೂ ಕೋಟಿ ಚಂದ್ರರಿಗೆ ಸಮನಾದ ಕ್ರಾಂತಿಯುಳ್ಳದ್ದಾಗಿಯೂ ಪ್ರಾಣಿಗಳಿಗೆ ಸುಖವನ್ನುಂಟುಮಾಡತಕ್ಕುದಾಗಿಯೂ ಕಣ್ಣಿನಿಂದ ಸುಖವಾಗಿ ನೋಡಲು ಯೋಗ್ಯವಾಗಿಯೂ ಇರುವುದು.

೭೫–೭೬. ಆಶ್ಚರ್ಯಕರವಾದ ಆಮಾತನ್ನು ಕೇಳಿ ಮುನಿಗಳೂ ಮನುಗಳೂ ದೇವಿಯರೂ ಸಕಲ ದೇವತೆಗಳೂ ಬ್ರಹ್ಮ, ಈಶಾನ ಮುಂತಾದವರೂ ಕೂಡ ಶೀಘ್ರವಾಗಿ ಅಲ್ಲಿಗೆ ಹೋಗಿ ಭಕ್ತಿಯಿಂದ ತಲೆಬಾಗಿಸಿದವರಾಗಿ ಮೂರು ಲೋಕದ ಸಕಲ ಜನರೂ ರಾಧೆಯನ್ನು ನೋಡಿದರು.

೭೭. ಬಿಳಿಯ ಸಂಪಿಗೆ ಹೂವಿನಂತೆ ಎಣೆಯಿಲ್ಲದ ಕಾಂತಿಯುಳ್ಳ ಮನೋಹರಳಾದ, ಊರ್ಧ್ವರೇತಸ್ಕರಾದ ಮುನಿಗಳ ಮನಸ್ಸನ್ನೂ ಮೋಹಗೊಳಿಸುವ ರಾಧೆಯನ್ನು ಕಂಡರು.

ಸುಕೇಶೀಂ ಸುಂದರೀಂ ಶ್ಯಾಮಾಂ ನ್ಯಗ್ರೋಧಪರಿಮಂಡಲಾಂ ।
ನಿತಂಬಕಠಿಣಶ್ರೋಣೀಂ ಸ್ತನಯುಗ್ಮೋನ್ನತಾನನಾಂ ॥ ೭೮ ॥

ಕೋಟೀಂದುನಿಂದಿತಾಸ್ಯಾಂ ತಾಂ ಸಸ್ಮಿತಾಂ ಸುದತೀಂ ಸತೀಂ ।
ಕಜ್ಜಲೋಜ್ಜ್ವಲರೂಪಾಂ ಚ ಶರತ್ಕಮಲಲೋಚನಾಂ ॥ ೭೯ ॥

ಮಹಾಲಕ್ಷ್ಮೀಂ ಬೀಜರೂಪಾಂ ಪರಾಮಾದ್ಯಾಂ ಸನಾತನೀಂ ।
ಪರಮಾತ್ಮಸ್ವರೂಪಸ್ಯ ಪ್ರಾಣಾಧಿಷ್ಠಾತೃದೇವತಾಂ ॥ ೮೦ ॥

ಸ್ತುತಾಂ ಚ ಪೂಜಿತಾಂ ಚೈವ ಪರಾಂ ಚ ಪರಮಾತ್ಮನೇ ।
ಬ್ರಹ್ಮಸ್ವರೂಪನಿರ್ಲಿಪ್ತಾಂ ನಿತ್ಯರೂಪಾಂ ಚ ನಿರ್ಗುಣಾಂ ॥ ೮೧ ॥

---

೭೮. ಸುಂದರವಾದ ತಲೆಗೂದಲುಳ್ಳ, ಸುಂದರಿಯಾದ, ಶ್ಯಾಮವರ್ಣವುಳ್ಳ, ಆಲದ ಮರದ ಸುತ್ತಲೂ ಮಂಡಲಾಕಾರವಾಗಿ ಹರಡಿದ ಕಾಂತಿಯುಳ್ಳ, ನಿತಂಬದಲ್ಲಿ ವಿರಾಜಿಸುವ ಕಠಿಣವಾದ ಶ್ರೋಣಿಭಾಗವುಳ್ಳ, ಸ್ತನದ್ವಯಗಳಿಂದ ಮೇಲಕ್ಕೆತ್ತಲ್ಪಟ್ಟ ಮುಖವುಳ್ಳ, ರಾಧೆಯನ್ನು ಕಂಡರು.

೭೯. ಕೋಟಿ ಚಂದ್ರರನ್ನು ತಿರಸ್ಕರಿಸುವ ಮುಖವುಳ್ಳ ಮಂದಹಾಸದಿಂದ ಕೂಡಿದ ಶುಭ್ರವಾದ ಹಲ್ಲುಗಳುಳ್ಳ ಕಾಡಿಗೆಯಿಂದ ಪ್ರಕಾಶಮಾನವಾದ ಶರತ್ಕಾಲದ ಕಮಲದಂತಿರುವ ಕಣ್ಣುಳ್ಳ ರಾಧೆಯನ್ನು ಕಂಡರು.

೮೦. ಮಹಾಲಕ್ಷ್ಮೀಸ್ವರೂಪಳೂ ಕಾರಣರೂಪಳೂ ಸಕಲಕ್ಕೂ ಆದಿಯೂ ನಾಶರಹಿತಳೂ ಪರಮಾತ್ಮಸ್ವರೂಪನಾದ ಶ್ರೀಕೃಷ್ಣನ ಪ್ರಾಣಾಧಿದೇವತೆಯೂ ಆದ ರಾಧೆಯನ್ನು ಕಂಡರು.

೮೧. ಆತ್ಮನಲ್ಲಿಯೇ ಸ್ತೋತ್ರಮಾಡಲ್ಪಟ್ಟವಳೂ ಪೂಜಿಸಲ್ಪಟ್ಟವಳೂ ಉತ್ಕೃಷ್ಟಳೂ ಬ್ರಹ್ಮರೂಪಳೂ ನಿರ್ಲಿಪ್ತಳೂ ನಿತ್ಯರೂಪಳೂ ಗುಣರಹಿತಳೂ ಆದ ರಾಧೆಯನ್ನು ಕಂಡರು.

ವಿಶ್ವಾನುರೋಧಾತ್ಪ್ರಕೃತಿಂ ಭಕ್ತಾನುಗ್ರಹವಿಗ್ರಹಾಂ ।
ಸತ್ಯಸ್ವರೂಪಾಂ ಶುದ್ಧಾಂ ಚ ಪೂತಾಂ ಪತಿತಪಾವನೀಂ ॥ ೮೨ ॥

ಸುತೀರ್ಥಪೂತಾಂ ಸತ್ಕೀರ್ತಿಂ ವಿಧಾತ್ರೀಂ ವೇಧಸಾಮಪಿ ।
ಮಹತ್ಪ್ರಿಯಾಂ ಚ ಮಹತೀಂ ಮಹಾವಿಷ್ಣೋಶ್ಚ ಮಾತರಂ ॥ ೮೩ ॥

ರಾಸೇಶ್ವರೇಶ್ವರೀಂ ರಮ್ಯಾಂ ರಸಿಕಾಂ ರಸಿಕೇಶ್ವರೀಂ ।
ವಹ್ನಿಶುದ್ಧಾಂಶುಕಾಧಾನಾಂ ಸ್ವೇಚ್ಛಾರೂಪಾಂ ಶುಭಾಲಯಾಂ ॥ ೮೪ ॥

ಗೋಪೀಭಿಃ ಸಪ್ತಭಿಃ ಶಶ್ವತ್ಸೇವಿತಾಂ ಶ್ವೇತಚಾಮರೈಃ ।
ಚತಸೃಭಿಃ ಪ್ರಿಯಾಲೀಭಿಃ ಪಾದಪದ್ಮೋಪಸೇವಿತಾಂ ॥ ೮೫ ॥

---

೮೨. ಪ್ರಪಂಚಕ್ಕನುಸಾರವಾಗಿ ಪ್ರಕೃತಿಸ್ವರೂಪಳೂ ಭಕ್ತರಿಗೆ ಅನುಗ್ರಹ ಮಾಡುವುದಕ್ಕೆ ಶರೀರಧರಿಸಿದವಳೂ ಸತ್ಯಸ್ವರೂಪಳೂ ಪರಿಶುದ್ಧಳೂ ಪವಿತ್ರಳೂ ಪತಿತರನ್ನು ಪಾವನಗೊಳಿಸುವವಳೂ ಆದ ರಾಧೆಯನ್ನು ಕಂಡರು.

೮೩. ಉತ್ತಮ ತೀರ್ಥದಂತೆ ಪವಿತ್ರಳಾದ ಉತ್ತಮ ಕೀರ್ತಿರೂಪಳಾದ ಬ್ರಹ್ಮರಿಗೂ ನಿಯಾಮಕಳಾದ ಮಹಾತ್ಮಳೂ ಮಹಾಪ್ರಿಯಳೂ ಮಹಾವಿಷ್ಣುವಿಗೂ ತಾಯಿಯಾದ ರಾಧೆಯನ್ನು ಕಂಡರು.

೮೪. ರಾಸೇಶ್ವರನಿಗೂ ಈಶ್ವರಿಯಾದ ಮನೋಹರಳಾದ ರಸಿಕಳೂ ರಸಿಕರಲ್ಲಿ ಶ್ರೇಷ್ಠಳೂ ಆದ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರವನ್ನು ಧರಿಸಿದವಳೂ ಆದ ಸ್ವೇಚ್ಛಾ ಸ್ವರೂಪಳೂ ಮಂಗಳಗಳಿಗೆ ಆಶ್ರಯಳೂ ಆದ ರಾಧೆಯನ್ನು ಕಂಡರು.

೮೫. ಯಾವಾಗಲೂ ಏಳು ಮಂದಿ ಗೋಪಿಯರಿಂದ ಬಿಳಿಯ ಚಾಮರವನ್ನು ಹಿಡಿದು ಸೇವಿಸಲ್ಪಡುತ್ತಿರುವ ನಾಲ್ಕು ಮಂದಿ ಪ್ರಿಯಸಖಿಯರಿಂದ ಪಾದಕಮಲಗಳ ಸೇವೆಯನ್ನು ಮಾಡಿಸಿಕೊಳ್ಳುತ್ತಿರುವ ರಾಧೆಯನ್ನು ಕಂಡರು.

ಅಮೂಲ್ಯ ರತ್ನನಿರ್ಮಾಣಭೂಷಣೋಚ್ಚೈರ್ವಿಭೂಷಿತಾಂ ।
ಚಾರುಕುಂಡಲಯುಗ್ಮೇನ ಶ್ರುತಿಗಂಡಸ್ಥಲೋಜ್ಜ್ವಲಾಂ ॥ ೮೬ ॥

ಸುನಾಸಾಂ ಗಜಮುಕ್ತಾಹಾರ್ಗಂ ಖಗೇಂದ್ರಚಂಚುನಿಂದಿತಾಂ ।
ಕುಂಕುಮಾಲಕ್ತಕಸ್ತೂರೀ ಸ್ನಿಗ್ಧಚಂದನಚರ್ಚಿತಾಂ ॥ ೮೭ ॥

ದಧಾನಾಂ ಸುಕಪೋಲಾಂ ಚ ಕೋಮಲಾಂಗೀಂ ಸುಕಾಮುಕೀಂ ।
ಗಜೇಂದ್ರಗಾಮಿನೀಂ ರಾಮಾಂ ಕಮನೀಯಾಂ ಸುಕಾಮಿನೀಂ ॥ ೮೮ ॥

ಕಾಮಾಸ್ತ್ರಜಯರೂಪಾಂ ಚ ಕಾಮಕಾಮ್ಯಾಲಯಾಂ ವರಾಂ ।
ಕ್ರೀಡಾಕಮಲಮಮ್ಲಾನಂ ಪಾರಿಜಾತಪ್ರಸೂನಕಂ ॥ ೮೯ ॥

ಅಮೂಲ್ಯರತ್ನನಿರ್ಮಾಣಂ ದಧಾನಾಂ ದರ್ಪಣೋಜ್ಜ್ವಲಂ ।
ನಾನಾರತ್ನವಿಚಿತ್ರಾಢ್ಯರತ್ನಸಿಂಹಾಸನಸ್ಥಿತಾಂ ॥ ೯೦ ॥

---

೮೬. ಮಹಾಬೆಲೆಬಾಳುವ ರತ್ನಗಳಿಂದ ಮಾಡಿದ ಆಭರಣಗಳಿಂದ ಅಲಂಕರಿಸಿಕೊಂಡಿರುವ ಮನೋಹರವಾದ ಕುಂಡಲಗಳೆರಡರಿಂದ ವಿರಾಜಮಾನವಾದ ಕಪೋಲಪ್ರದೇಶದಿಂದ ಕಂಗೊಳಿಸುತ್ತಿರುವ ರಾಧೆಯನ್ನು ಕಂಡರು.

೮೭. ಶ್ರೇಷ್ಠವಾದ ಮುತ್ತಿನಮಣಿಯಿಂದ ಕೂಡಿದ ಗರುಡನ ಕೊಕ್ಕನ್ನು ತಿರಸ್ಕರಿಸುತ್ತಿರುವ ಸುಂದರವಾದ ಮೂಗುಳ್ಳ ಕೇಸರಿ ಅರಗಿನರಸ ಕಸ್ತೂರಿ ಮತ್ತು ಸುವಾಸನೆಯಾದ ಗಂಧ ಇವುಗಳನ್ನು ಧರಿಸಿರುವ ರಾಧೆಯನ್ನು ಕಂಡರು.

೮೮. ಸುಂದರವಾದ ಕಪೋಲಗಳನ್ನು ಹೊಂದಿರುವ ಮೃದುವಾದ ಶರೀರವುಳ್ಳ ಕಾಮುಕಿಯಾದ ಶ್ರೇಷ್ಠವಾದ ಆನೆಯಂತೆ ನಡೆಯುವ ಕಾಂತಿಯುಕ್ತಳಾದ ಸುಂದರಿಯಾದ ರಾಧೆಯನ್ನು ಕಂಡರು.

೮೯–೯೦. ಮನ್ಮಥನ ಅಸ್ತ್ರಗಳ ವಿಜಯ ಸ್ವರೂಪಳಾದ ಮನ್ಮಥನ ಅಭಿಲಾಷೆಗಳಿಗೆ ಮನೆಯಂತಿರುವ ಶ್ರೇಷ್ಠಳಾದ ಬಾಡದಿರುವ ಆಟದ ಕಮಲವನ್ನೂ ಪಾರಿಜಾತದ ಹೂವನ್ನೂ ಮಹಾಬೆಲೆಯುಳ್ಳ ರತ್ನಗಳಿಂದ ಮಾಡಿದ ಪ್ರಕಾಶಮಾನವಾದ ಕನ್ನಡಿಯನ್ನೂ ಧರಿಸಿರುವ ನಾನಾ ರತ್ನಗಳಿಂದ ವಿಚಿತ್ರವಾಗಿರುವ ರತ್ನಸಿಂಹಾಸನದಲ್ಲಿ ಕುಳಿತಿರುವ ರಾಧೆಯನ್ನು ಕಂಡರು.

ಪದ್ಮಯಾ ಪದ್ಮಾರ್ಚಿತಂ ಪಾದಪದ್ಮಂ ಚ ಮಂಗಲಾಲಯಂ ।
ಹೃತ್ಪದ್ಮೇ ಧ್ಯಾಯಮಾನಾಂ ಚ ಕೃಷ್ಣಸ್ಯ ಪರಮಾತ್ಮನಃ ॥ ೯೧ ॥

ಕರ್ಮಣಾ ಮನಸಾ ವಾಚಾ ಸ್ವಪ್ನೇ ಜಾಗರಣೇಪಿ ಚ ।
ತತ್ಪ್ರೀತಿಂ ಪ್ರೇಮ ಸೌಭಾಗ್ಯಂ ಸ್ಮರಂತೀಂ ನಿತ್ಯನೂತನಂ ॥ ೯೨ ॥

ಭಾವಾನುರಕ್ತಸಂಸಿಕ್ತಾಂ ಶುದ್ಧಭಕ್ತಾಂ ಪತಿವ್ರತಾಂ ।
ಧನ್ಯಾಂ ಮಾನ್ಯಾಂ ಗೌರವರ್ಣಾಂ ಶಶ್ವದ್ವಕ್ಷಃಸ್ಥಲಸ್ಥಿತಾಂ ॥ ೯೩ ॥

ಪ್ರಿಯಾಸು ಪ್ರಿಯಭಕ್ತೇಷು ಸುಪ್ರಿಯಾಂ ಪ್ರಿಯವಾದಿನೀಂ ।
ಕೃಷ್ಣವಾಮಾಂಗಸಂಭೂತಾಮಭೇದಾಂ ಗುಣರೂಪಯೋಃ ॥ ೯೪ ॥

ಗೋಲೋಕವಾಸಿನೀಂ ದೇವದೇವೀಂ ಸರ್ವೋಪರಿಸ್ಥಿತಾಂ ।
ವೃಷಭಾನುಸುತಾಖ್ಯಾಂ ತಾಂ ಪುಣ್ಯೇಕ್ಷೇತ್ರೇ ಚ ಭಾರತೇ ॥ ೯೫ ॥

---

೯೧. ಲಕ್ಷ್ಮೀದೇವಿಯಿಂದ ಕಮಲಗಳಿಂದ ಪೂಜಿಸಲ್ಪಟ್ಟ ಪಾದಕಮಲಗಳುಳ್ಳ ಮಂಗಳಗಳಿಗೆ ಮನೆಯಾದ ಶ್ರೀ ಕೃಷ್ಣ ಪರಮಾತ್ಮನ ಪಾದಕಮಲಗಳನ್ನು ಹೃದಯ ಕಮಲದಲ್ಲಿ ಧ್ಯಾನಮಾಡುತ್ತಿರುವ ರಾಧೆಯನ್ನು ಕಂಡರು.

೯೨. ಕೆಲಸದಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಸ್ವಪ್ನದಲ್ಲಿಯೂ ಎಚ್ಚರದಿಂದಿರುವಾಗಲೂ ಯಾವಾಗಲೂ ಹೊಸದಾಗಿರುವ ಆ ಶ್ರೀಕೃಷ್ಣನ ಪ್ರೀತಿಯನ್ನೂ ಪ್ರೇಮ ಸೌಭಾಗ್ಯವನ್ನೂ ಸ್ಮರಣೆ ಮಾಡುತ್ತಲಿರುವ ರಾಧೆಯನ್ನು ಕಂಡರು.

೯೩–೯೪. ಮನಸ್ಸಿನಲ್ಲುಂಟಾದ ಅನುರಾಗದಿಂದ ನೆನೆಸಲ್ಪಟ್ಟವಳಾದ ಶುದ್ಧ ಭಕ್ತಳಾದ ಪತಿವ್ರತೆಯೂ ಧನ್ಯಳೂ ಮಾನ್ಯಳೂ ಆದ ಶುಭ್ರವರ್ಣದಿಂದ ಕೂಡಿದ ಯಾವಾಗಲೂ ಹೃದಯದಲ್ಲಿ ವಾಸಮಾಡುವ ತನಗೆ ಪ್ರಿಯರಾದವರೊಡನೆಯೂ ತನ್ನ ಪ್ರಿಯ ಭಕ್ತರೊಡನೆಯೂ ಹಿತವಾದ ಮಾತುಗಳನ್ನಾಡುವ ಅತ್ಯಂತ ಪ್ರಿಯಳಾದ ಶ್ರೀಕೃಷ್ಣನ ಎಡಭಾಗದಿಂದ ಹುಟ್ಟಿದ ಗುಣ ರೂಪಗಳೊಡನೆ ಅಭೇದವನ್ನು ಹೊಂದಿರುವ ರಾಧೆಯನ್ನು ಕಂಡರು.

೯೫–೯೬. ಗೋಲೋಕದಲ್ಲಿ ವಾಸಮಾಡುವವಳೂ ದೇವನಿಗೂ ದೇವಿಯೂ ಸಕಲರಿಗೂ ಮೇಲುಮಟ್ಟದಲ್ಲಿರುವವಳೂ ಭಾರತದ ಪುಣ್ಯಕ್ಷೇತ್ರದಲ್ಲಿ ವೃಷಭಾನನ

ಗೋಪೀಶ್ವರೀಂ ಗುಪ್ತಿರೂಪಾಂ ಸಿದ್ಧಿದಾಂ ಸಿದ್ಧಿರೂಪಿಣೀಂ ।
ಧ್ಯಾನಾಸಾಧ್ಯಾಂ ದುರಾರಾಧ್ಯಾಂ ವಂದೇ ಸದ್ಭಕ್ತವಂದಿತಾಂ ॥ ೯೬ ॥

ಧ್ಯಾನೇ ಧ್ಯಾನೇ ನ ರಾಧಾಯಾ ಧ್ಯಾಯಂತೇ ಜ್ಞಾನತತ್ಪರಾಃ ।
ಇಹೈವ ಜೀವನ್ಮುಕ್ತಾಸ್ತೇ ಪರತ್ರ ಕೃಷ್ಣಪಾರ್ಷದಾಃ ॥ ೯೭ ॥

ದೃಷ್ಟ್ವಾ ಬ್ರಹ್ಮಾ ಚ ಸರ್ವದಾ ತುಷ್ಟಾವ ಪರಮೇಶ್ವರೀಂ ।
ಸ್ವಯಂ ವಿಧಾತಾ ಜಗತಾಂ ಮಾತರಂ ವೇಧಸಾಮಪಿ ॥ ೯೮ ॥

॥ ಬ್ರಹ್ಮೋವಾಚ ॥

ಷಷ್ಟಿವರ್ಷಸಹಸ್ರಾಣಿ ದಿವ್ಯಾನಿ ಪರಮೇಶ್ವರೀ ।
ಪುಷ್ಕರೇ ಚ ತಪಸ್ತಪ್ತಂ ಪುಣ್ಯೇ ಕ್ಷೇತ್ರೇ ಚ ಭಾರತೇ ॥ ೯೯ ॥

ತ್ವತ್ಪಾದಪದ್ಮಮಧುರಮಧುಲಬ್ಧೇನ ಚೇತಸಾ ।
ಮಧುವ್ರತೇನ ಲೋಭೇನ ಪ್ರೇರಿತೇನ ಮಯಾ ಸತೀ ॥ ೧೦೦ ॥

---

ಮಗಳೆಂದು ಹೆಸರಾಂತವಳೂ ಗೋಪಿಯರಿಗೆ ಯಜಮಾನಿಯೂ ಗುಪ್ತಿಸ್ವರೂಪಳೂ ಸಿದ್ಧಿ ಸ್ವರೂಪಳೂ ಸಕಲ ಸಿದ್ಧಿಗಳನ್ನೂ ಕೊಡುವವಳೂ ಧ್ಯಾನದಿಂದಲೂ ಹೊಂದಲ ಸಾಧ್ಯಳೂ ಕಷ್ಟದಿಂದ ಆರಾಧಿಸಲು ಯೋಗ್ಯಳೂ ಉತ್ತಮರಾದ ಭಕ್ತರಿಂದ ನಮಸ್ಕರಿಸಲ್ಪಟ್ಟವಳೂ ಆದ ದೇವಿಯನ್ನು ನಮಸ್ಕರಿಸುತ್ತೇನೆ.

೯೭. ಜ್ಞಾನಿಗಳಾದವರು ಮತ್ತೆ ಮತ್ತೆ ರಾಧೆಯನ್ನು ಧ್ಯಾನಮಾಡುವುದರಿಂದ ಈ ದೇಹದಲ್ಲಿಯೇ ಜೀವನ್ಮುಕ್ತರಾಗುತ್ತಾರೆ. ಈ ದೇಹವನ್ನು ಬಿಟ್ಟನಂತರ ಪರಲೋಕದಲ್ಲಿ ಶ್ರೀಕೃಷ್ಣನ ಸೇವಕರಾಗುತ್ತಾರೆ.

೯೮. ಸಕಲ ಜಗತ್ತುಗಳನ್ನೂ ನಿರ್ಮಾಣ ಮಾಡುವವನಾದ ಸಾಕ್ಷಾತ್ ಬ್ರಹ್ಮರಿಗೂ ತಾಯಿಯೂ ಪರಮೇಶ್ವರಿಯೂ ಆದ ಜಗನ್ಮಾತೆಯನ್ನು ನೋಡಿ ಸ್ತೋತ್ರ ಮಾಡಿದನು.

೯೯–೧೦೦. ಬ್ರಹ್ಮನು ಹೇಳುತ್ತಾನೆ:—ಎಲೈ ಪರಮೇಶ್ವರಿಯೇ! ನಿನ್ನ ಪಾದಕಮಲಗಳ ಮಧುರವಾದ ಮಕರಂದದಲ್ಲಿ ಆಸೆಗೊಂಡ ಲೋಭದಿಂದ ಪ್ರೇರಿತವಾದ ಮನಸ್ಸೆಂಬ ದುಂಬಿಯಿಂದ ಕೂಡಿದ ನಾನು ಭಾರತದಲ್ಲಿ ಪುಣ್ಯಕ್ಷೇತ್ರವೆನಿಸಿದ ಪುಷ್ಕರ ಕ್ಷೇತ್ರದಲ್ಲಿ ಅರವತ್ತು ಸಾವಿರ ವರ್ಷಗಳ ವರೆಗೆ ತಪಸ್ಸನ್ನು ಮಾಡಿದೆನು.

ತಥಾಪಿ ನ ಮಯಾ ಲಬ್ಧಂ ತ್ವತ್ಪಾದಪದ್ಮಮೀಪ್ಸಿತಂ ।
ನ ದೃಷ್ಟಮಪಿ ಸ್ವಪ್ನೇಽಪಿ ಜಾತಾ ವಾಗಶರೀರಿಣೀ ॥ ೧೦೧ ॥

ವಾರಾಹೇ ಭಾರತೇ ವರ್ಷೇ ಪುಣ್ಯೇ ವೃಂದಾವನೇ ವನೇ ।
ಸಿದ್ಧಾಶ್ರಮೇ ಗಣೇಶಸ್ಯ ಪಾದಪದ್ಮಂ ಚ ದ್ರಕ್ಷ್ಯಸಿ ॥ ೧೦೨ ॥

ರಾಧಾಮಾಧವಯೋರ್ದಾಸ್ಯಂ ಕುತೋ ವಿಷಯಿಣಸ್ತವ ।
ನಿವರ್ತಸ್ವ ಮಹಾಭಾಗ ಪರಮೇತತ್ಸುದುರ್ಲಭಂ ॥ ೧೦೩ ॥

ಇತಿ ಶ್ರುತ್ವಾ ನಿವೃತ್ತೋಽಹಂ ತಪಸೇ ಭಗ್ನಮಾನಸಃ ।
ಪರಿಪೂರ್ಣಂ ತದಧುನಾ ವಾಂಛಿತಂ ತಪಸಃ ಫಲಂ ॥ ೧೦೪ ॥

॥ ಶ್ರೀ ಮಹಾದೇವ ಉವಾಚ ॥

ಪದ್ಮಯಾ ಪದ್ಮಾರ್ಚಿತಂ ಪಾದಪದ್ಮಂ ಯಸ್ಯ ಸುದುರ್ಲಭಂ ।
ಧ್ಯಾಯಂತೇ ಧ್ಯಾನನಿಷ್ಠಾಶ್ಚ ಶಶ್ವದ್ಬ್ರಹ್ಮಾದಯಃ ಸುರಾಃ ॥ ೧೦೫ ॥

---

೧೦೧. ಹಾಗಿದ್ದರೂ ನನ್ನ ಇಷ್ಟವಾದ ನಿನ್ನ ಪಾದಕಮಲ ಸ್ಥಾನವು ನನಗೆ ದೊರೆಯಲಿಲ್ಲ. ಮತ್ತು ಸ್ವಪ್ನದಲ್ಲಾದರೂ ಗೋಚರವಾಗಲಿಲ್ಲ. ಒಂದಾನೊಂದು ಅಶರೀರವಾಣಿಯು ಕೇಳಿಸಿತು.

೧೦೨–೧೦೩. ವಾರಾಹ ಕಲ್ಪದಲ್ಲಿ ಭಾರತ ವರ್ಷದಲ್ಲಿ ಪುಣ್ಯಕರವಾದ ವೃಂದಾವನದಲ್ಲಿ ಸಿದ್ಧಾಶ್ರಮದಲ್ಲಿ ಗಣೇಶನ ಪಾದಕಮಲಗಳನ್ನು ನೋಡುವಿ. ವಿಷಯ ಲಂಪಟನಾದ ನಿನಗೆ ರಾಧಾಮಾಧವರ ಸೇವಕತನವು ಹೇಗೆ ದೊರಕುತ್ತದೆ! ಎಲೈ ಮಹಾತ್ಮನೇ ! ನಿನ್ನ ಈ ಇಷ್ಟವು ಅತ್ಯಂತವಾಗಿ ದೊರಕಲಸಾಧ್ಯವಾದದು. ಆದುದರಿಂದ ಹಿಂದಿರುಗುವನಾಗು' ಎಂದು.

೧೦೪. ಈ ಪ್ರಕಾರವಾದ ಮಾತನ್ನು ಕೇಳಿ ಭಗ್ನ ಮನೋರಥನಾದ ನಾನು ತಪಸ್ಸನ್ನು ಮಾಡುವುದಕ್ಕಾಗಿ ಹಿಂದಿರುಗಿದೆನು. ಈಗ ನನ್ನ ಇಷ್ಟವಾದ ತಪಸ್ಸಿನ ಫಲವು ಸಂಪೂರ್ತಿಯಾಯಿತು.

೧೦೫-೧೦೬. ಶ್ರೀಮಹಾದೇವನು ಹೇಳುತ್ತಾನೆ : ಬ್ರಹ್ಮನೇ ಮೊದಲಾದ ದೇವತೆಗಳೂ ಮುನಿಗಳೂ ಮನುಗಳೂ ಸಿದ್ಧರೂ ಸತ್ಪುರುಷರೂ ಯೋಗಿಗಳೂ ಕೂಡ ಯಾವ ಪರಮಾತ್ಮನ ಅತ್ಯಂತ ದುರ್ಲಭವಾದ ಲಕ್ಷ್ಮೀದೇವಿಯಿಂದ ಕಮಲಗಳಿಂದ ಪೂಜಿಸಲ್ಪಟ್ಟ ಪಾದಕಮಲಗಳ ಧ್ಯಾನದಲ್ಲಿ ನಿರತರಾಗಿ ಧ್ಯಾನಿಸುತ್ತಾರೋ ಸ್ವಪ್ನ

ಮುನಯೋ ಮನವಶ್ಚೈವ ಸಿದ್ಧಾಃ ಸಂತಶ್ಚ ಯೋಗಿನಃ ।
ದ್ರಷ್ಟುಂ ನೈವ ಕ್ಷಮಾಃ ಸ್ವಪ್ನೇ ಭವತೀ ತಸ್ಯ ವಕ್ಷಸಿ ॥ ೧೦೭ ॥

॥ ಅನಂತ ಉವಾಚ ॥

ವೇದಾಶ್ಚ ವೇದಮಾತಾ ಚ ಪುರಾಣಾನಿ ಚ ಸುವ್ರತೇ ।
ಅಹಂ ಸರಸ್ವತೀ ಸಂತಃ ಸ್ತೋತುಂ ನಾಲಂ ಚ ಸಂತತಂ ॥ ೧೦೭ ॥

ಅಸ್ಮಾಕಂ ಸ್ತವನೇ ಯಸ್ಯ ಭ್ರೂಭಂಗಂ ಚ ಸುದುರ್ಲಭಂ ।
ತನ್ವೈವ ಭರ್ತ್ಸನೇ ಭೀತಾಶ್ಚಾವಯೋರಂತರಂ ಹರೇಃ ॥ ೧೦೮ ॥

ಏವಂ ದೇವಾಶ್ಚ ದೇವ್ಯಶ್ಚಾಪ್ಯನ್ಯೇ ಯೇ ಚ ಸಮಾಗತಾಃ ।
ಪ್ರಣತಾಸ್ತುಷ್ಟುವುಃ ಸರ್ವೇ ಮುನಿಮನ್ವಾದಯಸ್ತಥಾ ॥ ೧೦೯ ॥

ಲಜ್ಜಯಾ ನಮ್ರವಕ್ತ್ರಾಶ್ಚ ರುಕ್ಮಿಣ್ಯಾದ್ಯಾಶ್ಚ ಯೋಷಿತಃ ।
ಮಲೀಮಸಂ ಚ ಚಕ್ರುಸ್ತಾಃ ಶ್ವಾಸೇನ ರತ್ನದರ್ಪಣಂ ॥ ೧೧೦ ॥

---

ದಲ್ಲಿಯೂ ಆ ಪಾದಕಮಲಗಳನ್ನು ನೋಡಲಸಮರ್ಥರಾಗಿರುವರೋ ಅಂಥಾ ಪರಮಾತ್ಮನ ವಕ್ಷಃಸ್ಥಳದಲ್ಲಿ ನೀನು ವಾಸವಾಗಿರುತ್ತೀಯೆ.

೧೦೭. ಅನಂತನು ಹೇಳುತ್ತಾನೆ: ಎಲೈ ಸುವ್ರತೆಯೇ! ವೇದಗಳೂ ವೇದ ಮಾತೆಯೂ ಪುರಾಣಗಳೂ ನಾನೂ ಸರಸ್ವತಿಯೂ ಕೂಡ ಸ್ತೋತ್ರಮಾಡಲಸಮರ್ಥ ರಾಗಿರುವೆವು.

೧೦೮ ನಾವು ಸ್ತೋತ್ರಮಾಡಿದರೆ ಯಾವನ ಹುಬ್ಬುಗಂಟಿಕ್ಕುವಿಕೆಯೂ ಕೂಡ ದುರ್ಲಭವಾಗಿರುವುದೋ ಅಂಥಾ ಹರಿಗೂ ನಮಗೂ ತಾರತಮ್ಯವೆಂದರೆ ನಿನ್ನ ಗದರಿಸುವಿಕೆಯಿಂದ ನಾವು ಭಯಗೊಳ್ಳುತ್ತೇವೆ.

೧೦೯. ಇದೇ ಪ್ರಕಾರ ದೇವತೆಗಳೂ ದೇವಿಯರೂ ಮುನಿಗಳೂ ಮನುಗಳೂ ಮುಂತಾದ ಇತರರೆಲ್ಲರೂ ಬಂದರು. ಎಲ್ಲರೂ ಕೂಡ ನಮಸ್ಕಾರ ಮಾಡಿದವರಾಗಿ ಸ್ತೋತ್ರಮಾಡಿದರು.

೧೧೦. ರುಕ್ಮಿಣಿಯೇ ಮೊದಲಾದ ಸ್ತ್ರೀಯರುಗಳು ನಾಚಿಕೆಯಿಂದ ತಲೆ ಬಾಗಿಸಿದವರಾಗಿ ತಮ್ಮ ನಿಟ್ಟುಸಿರಿನಿಂದ ರತ್ನಮಯವಾದ ಕನ್ನಡಿಯನ್ನು ಮಲಿನ ವಾದುದನ್ನಾಗಿ ಮಾಡಿದರು.

ಮೃತತುಲ್ಯಾ ಸತ್ಯಭಾಮಾ ನಿರಾಹಾರಾ ಕೃಶೋದರೀ ।
ಮನಸೋಽಪ್ಯಭಿಮಾನಂ ಚ ಸರ್ವಂ ತತ್ಯಾಜ ನಾರದ ॥ ೧೧೧ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ ಸಿದ್ಧಾಶ್ರಮ
ತೀರ್ಥಯಾತ್ರಾಪ್ರಸಂಗೇ ಗಣೇಶಪೂಜನಂ
ಬ್ರಹ್ಮೇಶಶೇಷಕೃತರಾಧಿಕಾಸ್ತೋತ್ರಂ ನಾಮ
ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ ॥

---

೧೧೧. ಸತ್ಯಭಾಮೆಯು ಸತ್ತವಳಂತೆ ಆಹಾರವಿಲ್ಲದವಳಾಗಿಯೂ ಕೃಶವಾದ ಶರೀರವುಳ್ಳವಳೂ ಆಗಿ ಮನಸ್ಸಿನಲ್ಲಿದ್ದ ಆತ್ಮಾಭಿಮಾನವನ್ನು ಸಂಪೂರ್ಣವಾಗಿ ಬಿಟ್ಟಳು.

ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣನಾರದಸಂವಾದವಲ್ಲಿ ಸಿದ್ಧಾಶ್ರಮ ತೀರ್ಥಯಾತ್ರಾಪ್ರಸಂಗದಲ್ಲಿ
ಗಣೇಶಪೂಜನ ಮತ್ತು ಬ್ರಹ್ಮೇಶಶೇಷಕೃತ ರಾಧಿಕಾಸ್ತೋತ್ರವೆಂಬ
ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಪಂಚವಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರದ ಉವಾಚ ||

ಗಣೇಶ ಪೂಜನಾದೇವ ರಾಧಾಸ್ತೋತ್ರಾತ್ಪರಂ ವಿಭೋ ।
ಬಭೂವ ಕಿಂ ರಹಸ್ಯಂ ವಾ ತನ್ಮೇ ವ್ಯಾಖ್ಯಾತುಮರ್ಹಸಿ || ೧ ||

|| ಶ್ರೀ ಭಗವಾನುವಾಚ ||

ಗಣೇಶಪೂಜನೇ ತೀರ್ಥೇ ಯೇ ದೇವಾಶ್ಚ ಸಮಾಯಯುಃ ।
ಮುನಯಶ್ಚಾಪಿ ಯೋಗೀಂದ್ರಾ ವಸಂತೋ ವಟಮೂಲಕೇ || ೨ ||

ವಸುದೇವೋ ದೇವಕೀ ಚ ಪರಮಾದರಪೂರ್ವಕಂ ।
ಪಪ್ರಚ್ಛ ಶಂಭುಂ ಬ್ರಹ್ಮಾಣಮನಂತಂ ಮುನಿಪುಂಗವಾನ್ || ೩ ||

---

ನೂರ ಇಪ್ಪತ್ತ ಐದನೆಯ ಅಧ್ಯಾಯವು.

೧. ನಾರದನು ಹೇಳುತ್ತಾನೆ: ಎಲೈ ವಿಭುವೇ! ಗಣೇಶನ ಪೂಜೆಗಿಂತಲೂ ರಾಧಾಸ್ತೋತ್ರಕ್ಕಿಂತಲೂ ರಹಸ್ಯವಾದ ವಿಷಯವು ಯಾವುದಿದೆಯೋ ಅದನ್ನು ನನಗೆ ವಿವರಿಸುವವನಾಗು.

೨-೩. ಶ್ರೀಭಗವಂತನು (ನಾರಾಯಣನು) ಹೇಳುತ್ತಾನೆ: ಗಣೇಶನ ಪೂಜೆಯ ಸಮಯದಲ್ಲಿ ಯಾವ ದೇವತೆಗಳೂ ಮುನಿಗಳೂ ಮತ್ತು ಯೋಗಿಶ್ರೇಷ್ಠರೂ ಬಂದಿದ್ದರೋ ಅವರು ಆಲದ ಮರದ ಬುಡದಲ್ಲಿ ಇರುತ್ತಿರಲು ವಸುದೇವ ಮತ್ತು ದೇವಕಿ ಇವರೀರ್ವರೂ ಶಂಭುವನ್ನೂ ಬ್ರಹ್ಮನನ್ನೂ ಅನಂತನನ್ನೂ ಮುನಿಶ್ರೇಷ್ಠರನ್ನೂ ಕುರಿತು ಆನಂದದಿಂದ ಕೇಳುವವರಾದರು.

ಭವೇಚ್ಛವಾಬ್ಧಿತರಣಮಾವಯೋರುತ್ತಮಾ ಗತಿಃ ।
ಶೀಘ್ರಂ ಬ್ರೂಥ ಮಹಾಭಾಗಾ ದೀನಯೋರ್ದೀನಬಾಂಧವಾಃ ॥
ಭವಾಬ್ಧಿತರಣೇ ತರ್ಯ್ಯಾಂ ತತ್ರ ಯೂಯಂ ಚ ನಾವಿಕಾಃ ॥ ೪ ॥

ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ಯಜ್ಞರೂಪಾಣಿ ಪುಣ್ಯಾನಿ ವ್ರತಾನ್ಯನಶನಾನಿ ಚ ॥ ೫ ॥

ತಪಾಂಸಿ ನಾನಾದಾನಾನಿ ವಿಪ್ರದೇವಾರ್ಚನಾನಿ ಚ ।
ಚಿರಂ ಪುನಂತಿ ಸರ್ವಾಣಿ ದರ್ಶನಾದೇವ ವೈಷ್ಣವಾಃ ॥ ೬ ॥

ಸತಾಂ ಚ ವಿಷ್ಣುಭಕ್ತಾನಾಂ ರಜಸಾಂ ಸ್ಪರ್ಶಮಾತ್ರತಃ ।
ಪೂತಾನಾಂ ಪಾದಪದ್ಮಾನಾಂ ಸದ್ಯಃ ಪೂತಾ ವಸುಂಧರಾ ॥ ೭ ॥

ತೀರ್ಥಾನಿ ಚ ಪವಿತ್ರಾಣಿ ಸಮುದ್ರಾಃ ಪರ್ವತಾಸ್ತಥಾ ।
ಸುರಾ ದರ್ಶನಮಿಚ್ಛಂತಿ ಪಾತಕೇಂಧನಪಾವಕಂ ॥ ೮ ॥

---

೪-೬. ಎಲೈ ಮಹಾತ್ಮರೇ! ದೀನರಿಗೆ ಬಂಧುಗಳಂತಿರುವವರೇ! ನಮ್ಮಿಬ್ಬರಿಗೂ ಸಂಸಾರಸಾಗರದಿಂದ ದಾಟಿ ಉತ್ತಮವಾದ ಗತಿಯು ದೊರೆಯುತ್ತದೆಯೇ? ಜಾಗ್ರತೆಯಾಗಿ ಹೇಳಿರಿ. ನೀವುಗಳು ಸಂಸಾರವೆಂಬ ಸಮುದ್ರವನ್ನು ದಾಟಲು ಸಾಧನವಾದ ದೋಣಿಗೆ ಅಂಬಿಗರಂತಿರುವಿರಿ. ಜಲಮಯವಾದ ತೀರ್ಥಗಳಾಗಲಿ ಮಣ್ಣು ಕಲ್ಲಿನ ಮಯರಾದ ದೇವತೆಗಳಾಗಲಿ ಯಜ್ಞರೂಪಿಗಳಾದ ಪುಣ್ಯಗಳಾಗಲಿ ಉಪವಾಸವ್ರತಗಳಾಗಲಿ ತಪಸ್ಸುಗಳಾಗಲಿ ನಾನಾ ವಿಧವಾದ ದಾನಗಳಾಗಲಿ ಬ್ರಾಹ್ಮಣರು ಮತ್ತು ದೇವರುಗಳ ಪೂಜೆಗಳಾಗಲಿ ಮಾನವರನ್ನು ಪವಿತ್ರಗೊಳಿಸಲಾರವು. ವಿಷ್ಣುಭಕ್ತರು ದರ್ಶನಮಾತ್ರದಿಂದಲೇ ಜಾಗ್ರತೆಯಾಗಿ ಸಕಲರನ್ನೂ ಕೂಡ ಪವಿತ್ರಗೊಳಿಸುತ್ತಾರೆ

೭. ಸತ್ಪುರುಷರಾದ ವಿಷ್ಣುಭಕ್ತರ ಧೂಳಿಯ ಸ್ಪರ್ಶಮಾತ್ರದಿಂದ ಪವಿತ್ರರಾದವರು ಯಾರೋ ಅಂಥವರ ಕಾಲಿನ ಧೂಳಿನಿಂದ ಕೂಡಲೇ ಭೂಮಿದೇವಿಯು ಪವಿತ್ರಳಾಗುತ್ತಾಳೆ.

೮. ಸಕಲ ತೀರ್ಥಗಳೂ ಸಮುದ್ರಗಳೂ ಪರ್ವತಗಳೂ ಕೂಡ ಪವಿತ್ರಗಳಾಗುತ್ತವೆ. ಪಾಪವೆಂಬ ಸೌದೆಗೆ ಬೆಂಕಿಯಂತಿರುವ ವಿಷ್ಣುಭಕ್ತರ ದರ್ಶನವನ್ನು ದೇವತೆಗಳೂ ಅಪೇಕ್ಷಿಸುತ್ತಾರೆ.

ಸೋಽಜ್ಞಾನೀ ನೈವ ಬುಬುಧೇ ಜ್ಞಾನಂ ಚ ಜ್ಞಾನಿನಾ ಸಹ ।
ಪರಮಂ ಸ್ವಾದುರೂಪಂ ಚ ದಧಿದುಗ್ಧರಸಂ ಯಥಾ ॥ ೯ ॥

ಯಥಾ ಕೃಷ್ಣಸ್ಯ ತಾತೋಽಹಂ ಸಂಗೀ ಸುಚಿರಮೇವ ಚ ।
ತಥೈವ ದೇವಕೀ ಮಾತಾ ಜ್ಞಾನಿನಾಂ ಚ ಗುರೋರ್ಗುರೋ ॥ ೧೦ ॥

ವಸುದೇವವಚಃಶ್ರುತ್ವಾ ಪ್ರಹಸ್ಯ ಶಂಕರಃ ಸ್ವಯಂ ।
ಚತುರ್ಣಾಮಪಿ ದೇವಾನಾಮುವಾಚ ಜನಕೋ ಗುರುಃ ॥ ೧೧ ॥

॥ ಮಹಾದೇವ ಉವಾಚ ॥

ಸನ್ನಿಕರ್ಷೋ ಜ್ಞಾನಿನಾಂಚಾಪ್ಯನಾದರಣ ಕಾರಣಂ ।
ಯಾಂತಿ ಗಂಗಾಂಭಸಾ ಪೂತಾಸ್ತೀರ್ಥಾನ್ಯನ್ಯಾನಿ ಸಿದ್ಧಯೇ ॥ ೧೨ ॥

ವಾಸುದೇವಸ್ಯ ತಾತೋಽಯಂ ವಸುದೇವಶ್ಚ ಪಂಡಿತಃ ।
ಜ್ಞಾನಿನಃ ಕಶ್ಯಪಸ್ಯಾಂಶೋ ವಾಸೋಸ್ತಾತಸ್ಯ ಚಾತ್ಮನಃ ॥ ೧೩ ॥

---

೯. ಅತ್ಯಂತ ರುಚಿಕರವಾದ ಹಾಲು ಮೊಸರಿನ ಸವಿಯಂತಿರುವ ಜ್ಞಾನವನ್ನು ಜ್ಞಾನಿಯೊಡನೆ ಸೇರಿ ಯಾವ ಮನುಜನು ತಿಳಿದುಕೊಳ್ಳುವುದಿಲ್ಲವೋ ಅವನು ಕೇವಲ ಅಜ್ಞಾನಿಯೇ ಸರಿ.

೧೦. ಎಲೈ ಜ್ಞಾನಿಗಳಿಗೂ ಗುರುಗಳಿಗೂ ಗುರುಗಳೇ! ಕೃಷ್ಣನಿಗೆ ತಂದೆಯಾದ ನಾನೂ ತಾಯಿಯಾದ ದೇವಕಿಯೂ ಕೂಡ ಬಹುಕಾಲ ಕೃಷ್ಣನೊಡನೆ ಇದ್ದರೂ ಕೂಡ ಪರಮ ಜ್ಞಾನವನ್ನು ಹೊಂದಲಿಲ್ಲ.

೧೧. ವಸುದೇವನಾಡಿದ ಮಾತನ್ನು ಕೇಳಿ ನಾಲ್ವರು ದೇವರಿಗೂ ತಂದೆಯೂ ಗುರುವೂ ಆದ ಶಂಕರನು ನಕ್ಕು ಇಂತೆಂದನು.

೧೨. ಮಹಾದೇವನು ಹೇಳುತ್ತಾನೆ:—ಸಮೀಪದಲ್ಲಿರುವಿಕೆಯೆಂಬುದು ಜ್ಞಾನಿಗಳಿಗೂಕೂಡ ಅನಾದರಕ್ಕೆ ಕಾರಣವಾಗುತ್ತದೆ. ಇತರ ತೀರ್ಥಗಳೆಲ್ಲವೂ ಗಂಗಾಜಲದಿಂದ ಪವಿತ್ರಗಳಾಗಿ ಸಿದ್ಧಿಯನ್ನುಂಟುಮಾಡಲು ಸಮರ್ಥಗಳಾಗುತ್ತವೆ.

೧೩. ಈ ವಸುದೇವನು ವಾಸುದೇವನ ತಂದೆಯೂ ಪಂಡಿತನೂ ಜ್ಞಾನಿಯಾದ ಕಶ್ಯಪನ ಅಂಶದಿಂದ ಹುಟ್ಟಿದವನೂ ಆಗಿ ಕೃಷ್ಣ ಮತ್ತು ಬ್ರಹ್ಮ ಇವರು

ಪೃಚ್ಛತಿ ಜ್ಞಾನಮಸ್ಮಾಂಶ್ಚ ಕೃಷ್ಣಾ ಜಾನ್ಪುತ್ರಬುದ್ಧಿತಃ ।
ಅಹೋ ದುರ್ಗಾಮಹಾಮಾಯಾ ಜ್ಞಾನಿನಾಮಪಿ ಮೋಹಿನೀ ॥ ೧೪ ॥

ವಿಷ್ಣುಮಾಯಾ ದುರಾರಾಧ್ಯಾ ನ ಸಾಧ್ಯಾ ಜಗತಾಮಪಿ ।
ವಯಂ ಚ ಮೋಹಿತಾಃ ಶಶ್ವದ್ವೇದಾನಾಂ ಜನಕಸ್ತಥಾ ॥ ೧೫ ॥

ಬ್ರಹ್ಮಾ ಕೃಷ್ಣಂ ಪರೀಕ್ಷೇತ ಮೋಹಿತಸ್ತಸ್ಯ ಮಾಯಯಾ ।
ಧ್ಯಾಯತೇ ಯತ್ಪದಾಂಭೋಜಂ ತಪಸಾ ಜೀವನಾವಧಿ ॥ ೧೬ ॥

ಇಂದ್ರೇಷು ದಶಲಕ್ಷೇಷ್ವಷ್ಟಾಧಿಕಾಷ್ಟಾಶತೇಷು ಚ ।
ಪಾತೇಷು ಬ್ರಹ್ಮಣಃ ಪಾತೇ ನಿಮೇಷೋ ಮಾಧವಸ್ಯ ಚ ॥ ೧೭ ॥

ಸಹ ದೇವೇಂದ್ರಯುದ್ಧಂ ಚ ಪಾರಿಜಾತಸ್ಯ ಹೇತುನಾ ।
ಪಾರಿಜಾತತರುಂ ದತ್ವಾ ಮಯಾ ಶಕ್ರಶ್ಚ ರಕ್ಷಿತಃ ॥ ೧೮ ॥

---

ಗಳನ್ನು ತನ್ನ ಮಕ್ಕಳೆಂಬ ಭಾವನೆಯಿಂದ ಸಕಲ ಜಗತ್ತಿಗೂ ಕಾರಣನಾದ ಪರಮಾತ್ಮನ ಜ್ಞಾನವನ್ನು ಕುರಿತು ನಮ್ಮನ್ನು ಪ್ರಶ್ನೆಮಾಡುತ್ತಾನೆ. ಮಹಾಮಾಯೆಯಾದ ದುರ್ಗೆಯು ಜ್ಞಾನಿಗಳಿಗೂ ಮೋಹವನ್ನುಂಟುಮಾಡುತ್ತಾಳೆ. ಆ ವಿಷ್ಣು ಮಾಯೆಯು ದುರಾರಾಧ್ಯಳೂ ಜಗತ್ತಿಗೆ ಹೊಂದಲಸಾಧ್ಯಳೂ ಆಗಿರುತ್ತಾಳೆ. ನಾನು ವೇದಗಳಿಗೆ ಜನಕನಾದ ಬ್ರಹ್ಮನೂ ಕೂಡ ಮತ್ತೆ ಮತ್ತೆ ಭ್ರಾಂತರಾಗುತ್ತಿರುವೆವು.

೧೬. ಆ ವಿಷ್ಣುಮಾಯೆಯಿಂದ ಮೋಹಿತನಾದ ಬ್ರಹ್ಮನು ಯಾವನ ಪಾದ ಕಮಲಗಳನ್ನು ತಪಸ್ಸಿನಿಂದ ತಮ್ಮ ಜೀವನದ ಕೊನೆಯವರೆಗೂ ಧ್ಯಾನಮಾಡುತ್ತಾರೋ ಅಂಥಾ ಪರಮಾತ್ಮನನ್ನು ಸರ್ವದಾ ನೋಡುತ್ತಿರುವನು.

೧೭. ಇಪ್ಪತ್ತೆಂಟು ಲಕ್ಷ ಇಂದ್ರರಪಾತವಾದರೆ ಬ್ರಹ್ಮನ ಪಾತವಾಗುತ್ತದೆ ಆಗ ಮಾಧವನ ಕಣ್ಣುರೆಪ್ಪೆಯು ಒಂದುಸಾರಿ ಮುಚ್ಚಿ ತೆರೆಯುತ್ತದೆ.

೧೮. ದೇವೇಂದ್ರನೊಡನೆ ಪಾರಿಜಾತಕ್ಕಾಗಿ ಯುದ್ಧವು ನಡೆಯಲು ಶ್ರೀಕೃಷ್ಣನಿಗೆ ಪಾರಿಜಾತವನ್ನು ಕೊಟ್ಟು ಇಂದ್ರನನ್ನು ನಾನು ರಕ್ಷಿಸಿದೆನು.

ಯಜ್ಜ್ಞಾನಂ ನ ಗಿರಾಮೇವ ತತ್ತ್ವಂ ನಾ ವಿಷಯಾತ್ಮಕಂ ।
ನಾಹಂ ಕಿಂಚಿತ್ತದಜ್ಞಾನಾತ್ಸಾಧ್ಯಾನಾಂ ಚ ಸದೈವ ಹಿ ॥ ೧೯ ॥

ಪ್ರಾಣಿನಾಮಾತ್ಮನೋ ಜ್ಞಾನಮಸ್ಮಾಕಂ ಜ್ಞಾನಮಸ್ತಿ ಚ ।
ತದೂರ್ಧ್ವಂ ತತ್ಸಮಂ ನ್ಯೈವ ಕೃಷ್ಣಂ ಪೃಚ್ಛ ಶುಭಾಶುಭಂ ॥ ೨೦ ॥

ಬ್ರಹ್ಮಣಶ್ಚ ಚತುರ್ಯಾಮಂ ಕಲ್ಪಂ ಕಲ್ಪವಿದೋವಿದುಃ ।
ಸಪ್ತಕಲ್ಪಾಂತಜೀವೀ ಚ ಮಾರ್ಕಂಡೇಯೋ ಮಹಾಮುನಿಃ ॥ ೨೧ ॥

ಅಷ್ಟಾನವತಿಶಕ್ರೇಷು ಪಾತೇಷು ಪತನಂ ಮುನೇಃ ।
ತತಃ ಪ್ರಾಪ್ತಂ ಹರೇರ್ದಾಸ್ಯಂ ಮುನಿನಾ ತಪಸಃ ಫಲಾತ್ ॥ ೨೨ ॥

ಪ್ರಲಯೇ ಬ್ರಹ್ಮಣಃ ಪಾತೇ ಪತನಂ ಲೋಮಶಸ್ಯ ಚ ।
ದಿಕ್ಪಾಲಾನಾಂ ಗ್ರಹಾಣಾಂ ಚ ತದಾಯುಶ್ಚಿರಜೀವಿನಾಂ ॥ ೨೩ ॥

---

೧೯. ವಿಷಯಗಳಿಗಿಂತಲೂ ಬೇರೆಯದಾದ ತತ್ತ್ವರೂಪವಾದ ಯಾವ ಜ್ಞಾನವು ಮಾತಿಗೆ ಸಿಲುಕಲಾರದೊ ಅದನ್ನು ನಾನು ಸ್ವಲ್ಪಮಟ್ಟಿಗೆ ತಿಳಿದಿರುವೆನು. ಸಾಧ್ಯರುಗಳಿಗೆ ಯಾವಾಗಲೂ ಆ ಜ್ಞಾನವಿರುತ್ತದೆ.

೨೦. ಪ್ರಾಣಿಗಳಿಗೆ ತಮ್ಮ ಜ್ಞಾನವು ಇರುತ್ತದೆ. ನಮಗೂ ಕೂಡ ಜ್ಞಾನವಿರುತ್ತದೆ. ಅದಕ್ಕೆ ಮೇಲ್ಪಟ್ಟ ಜ್ಞಾನಕ್ಕೆ ಸಮನಾದುದಿಲ್ಲ. ಅದರ ಮೇಲಿನ ಶುಭಾಶುಭವಿಷಯಗಳನ್ನು ಕೃಷ್ಣನೊಡನೆ ಕೇಳು.

೨೧. ಬ್ರಹ್ಮನಿಗೆ ನಾಲ್ಕುಯಾಮಗಳಾದರೆ ಒಂದು ಕಲ್ಪವೆಂದು ಕಲ್ಪಪ್ರಮಾಣವನ್ನು ತಿಳಿದವರು ಹೇಳುತ್ತಾರೆ. ಮಾರ್ಕಂಡೇಯ ಮಹಾಮುನಿಯು ಏಳು ಕಲ್ಪಗಳ ಕೊನೆಯವರೆಗೂ ಜೀವಿಸಿರುತ್ತಾನೆ.

೨೨. ತೊಂಭತ್ತೆಂಟು ಇಂದ್ರರ ಪಾತವಾದರೆ ಮಾರ್ಕಂಡೇಯ ಮುನಿಯ ಆಯುಃ ಪರಿಮಿತಿಯು ಮುಗಿಯುತ್ತದೆ. ಅನಂತರ ತನ್ನ ತಪಸ್ಸಿನ ಫಲದಿಂದ ಶ್ರೀಹರಿಯ ದಾಸ್ಯವನ್ನು ಆ ಮುನಿಯು ಹೊಂದುವನು.

೨೩. ಪ್ರಳಯದಲ್ಲಿ ಬ್ರಹ್ಮನ ಪಾತವಾದರೆ ಲೋಮಶಮುನಿಯು ನಾಶಹೊಂದುತ್ತಾನೆ. ಚಿರಂಜೀವಿಗಳಾದ ದಿಕ್ಪಾಲಕರಿಗೂ ಗ್ರಹಗಳಿಗೂ ಇದೇ ಆಯುಃ ಪರಿಮಿತಿಯು.

ಅನ್ಯೇಷಾಮಪಿ ದೇವಾನಾಂ ಮುನೀನಾಮೂರ್ಧ್ವರೇತಸಾಂ ।
ತದೇವಾಯುಃ ರುದ್ರಾಣಾಂ ಮಾಂ ಚ ಮೃತ್ಯುಂಜಯಂ ವಿನಾ ॥ ೨೪ ॥

ಪ್ರಲಯೇ ಚ ವಿಧೇಃ ಪಾತೋ ಶಿವಲೋಕೇಪ್ಯಹಂ ಶಿವಃ ।
ಬ್ರಹ್ಮಭಾಲೋದ್ಭವಃ ಶಂಭುಃ ಸರ್ವಾದಿಃ ಸರ್ಗಭೂಷಣಃ ॥ ೨೫ ॥

ಕೃಷ್ಣವಾಮಾಂಗಸಂಭೂತಾ ಯಥಾ ರಾಧಾ ತಥೈವ ಚ ।
ತಥೈವ ದುರ್ಗಾ ಲಕ್ಷ್ಮೀಶ್ಚ ಸಾವಿತ್ರೀ ಚ ಸರಸ್ವತೀ ॥ ೨೬ ॥

ಆದಿತ್ಯೋಪ್ಯದಿತೇಃ ಪುತ್ರಃ ಕಾಯವ್ಯೂಹೇನ ದ್ವಾದಶ ।
ತಥೈವ ಚ ಮಹೇಂದ್ರಶ್ಚ ಕಾಯವ್ಯೂಹಾಶ್ಚತುರ್ದಶ ॥ ೨೭ ॥

ತಥೈವ ವಸವಶ್ಚಾಷ್ಟೌ ರುದ್ರಾಶ್ಚೈಕಾದಶೈವ ತೇ ।
ಮನುಪಾತೇ ಚೇಂದ್ರಪಾತೋ ವಿಷಯಾತ್ಪತನಂ ಭವೇತ್ ॥ ೨೮ ॥

---

೨೪. ಇನ್ನೂ ಇತರರಾದ ದೇವತೆಗಳಿಗೂ ಊರ್ಧ್ವರೇತಸ್ಕರಾದ ಮುನಿಗಳಿಗೂ ರುದ್ರರಿಗೂ ಲಕ್ಷ್ಮಿ, ಮತ್ತು ಮೃತ್ಯುಂಜಯ ಇವರನ್ನು ಬಿಟ್ಟು ಉಳಿದವರೆಲ್ಲರಿಗೂ ಇದೇ ಆಯುಃ ಪ್ರಮಾಣವು.

೨೫. ಪ್ರಲಯದಲ್ಲಿ ಬ್ರಹ್ಮನ ನಾಶವಾಗುತ್ತದೆ. ಶಿವಲೋಕದಲ್ಲಿ ಶಿವನಾದ ನಾನು ಬ್ರಹ್ಮನ ಹಣೆಯಿಂದುದ್ಭವಿಸಿದ ಶಂಭುವೂ ಸರ್ವಕ್ಕೂ ಆದಿಯೂ ಸೃಷ್ಟಿಗೆ ಅಲಂಕಾರನೂ ಆಗಿರುವೆನು.

೨೬. ಕೃಷ್ಣನ ಎಡಭಾಗದಿಂದುದ್ಭವಿಸಿದ ರಾಧೆಯು ಹೇಗೋ ಹಾಗೆಯೇ ದುರ್ಗಿಯೂ ಲಕ್ಷ್ಮಿಯೂ ಸಾವಿತ್ರಿಯೂ ಸರಸ್ವತಿಯೂ ಇರುವರು.

೨೭. ಅದಿತಿಯ ಮಗನಾದ ಆದಿತ್ಯನು ಕಾಯವ್ಯೂಹದಿಂದ ಹನ್ನೆರಡು ವಿಧವಾಗಿರುವನು. ಹಾಗೆಯೇ ಇಂದ್ರನೂ ಕೂಡ ಕಾಯವ್ಯೂಹದಿಂದ ಹದಿನಾಲ್ಕು ವಿಧವಾಗಿರುವನು.

೨೮. ಅದೇರೀತಿಯಾಗಿ ಎಂಟು ಜನ ವಸುಗಳೂ ಹನ್ನೊಂದು ಮಂದಿ ರುದ್ರರೂ ಕೂಡ ಕಾಯವ್ಯೂಹದಿಂದಿರುವರು. ಮನುವಿನ ಪಾತವಾದರೆ ಇಂದ್ರನಿಗೆ ಪತನವಾಗುವುದು. ತನ್ನ ಅಧಿಕಾರದಿಂದ ಪತನವುಂಟಾಗುವುದು.

ಸಮಾಯಯೌ ಚ ಸರ್ವೇಷಾಂ ನಿಧನಂ ಪ್ರಲಯೇಽಪಿ ಚ ।
ಪ್ರಲಯೇ ದರ್ಶಯಾಮಾಸ ಬ್ರಹ್ಮಾಂಡಂ ಚ ಜಲಪ್ಲುತಂ ॥ ೨೯ ॥

ಬ್ರಹ್ಮಾಣಂ ಚ ಸ್ವಲೋಕಂ ಚ ಸ್ವಾತ್ಮಾನಂ ಶಕ್ತಿಭಿಶ್ಚ ಮಾಂ ।
ಸರ್ವೇಷಾಂ ಮೂಲರೂಪಶ್ಚ ಸರ್ವೇಶಃ ಕೃಷ್ಣ ಏವ ಚ ॥ ೩೦ ॥

ಭಜ ಪುತ್ರಂ ರಾಜಸೂಯೇ ಯಜ್ಞೇಶಂ ಯಜ್ಞಕಾರಣಂ ।
ವಿಧಿವದ್ದಕ್ಷಿಣಾಂ ದತ್ವಾ ಭವಾಬ್ಧಿಂ ತರ ಯಾದವ ॥ ೩೧ ॥

ಮುಕ್ತಿಸ್ತೇ ನಾಸ್ತಿ ನಿರ್ವಾಣಾ ವಿಷಯೀ ಕಶ್ಯಪೋ ಭವಾನ್ ।
ನ ತೇ ದಾಸ್ಯಂ ಭಕ್ತಿಧನಮದಿತಿರ್ದೇವಕೀ ಯಥಾ ॥ ೩೨ ॥

ವ್ರಜ ಸ್ವರ್ಗಂ ಭೋಗಬೀಜಂ ಸ್ವಸ್ಥಾನಮಮರಾಲಯಂ ।
ಶಿವಸ್ಯ ವಚನಂ ಶ್ರುತ್ವಾ ಸಂಯತಶ್ಚ ಶುಭ ಕ್ಷಣೇ ॥ ೩೩ ॥

---

೨೯-೩೦. ಇಲ್ಲಿ ಬಂದಿರುವವರೆಲ್ಲರೂ ಪ್ರಲಯಕಾಲದಲ್ಲಿ ನಿಧನವನ್ನು ಹೊಂದುವವರು. ಸರ್ವರಿಗೂ ಮೂಲನೂ ಸರ್ವೇಶ್ವರನೂ ಆದ ಕೃಷ್ಣನು ಈ ಬ್ರಹ್ಮಾಂಡವನ್ನೂ ಬ್ರಹ್ಮನನ್ನೂ ತನ್ನ ಲೋಕವನ್ನೂ ತನ್ನನ್ನೂ ಶಕ್ತಿಸಹಿತನಾದ ನನ್ನನ್ನೂ ಕೂಡ ನೀರಿನಲ್ಲಿ ಮುಳುಗಿಸುತ್ತಾನೆ.

೩೧ ಎಲೈ ಯಾದವನೇ! ಯಜ್ಞಕ್ಕೆ ಪ್ರಭುವೂ ಯಜ್ಞಕ್ಕೆ ಕಾರಣನೂ ಆದ ನಿನ್ನ ಮಗನಾದ ಶ್ರೀಕೃಷ್ಣನನ್ನು ರಾಜಸೂಯಯಾಗ ಮಾಡಿ ಸೇವಿಸುವವನಾಗು. ವಿಧಿಗನುಸಾರವಾಗಿ ದಕ್ಷಿಣೆಯನ್ನು ಕೊಟ್ಟು ಸಂಸಾರಸಾಗರವನ್ನು ದಾಟುವವನಾಗು.

೩೨. ನೀನು ಕಶ್ಯಪನ ಅಂಶದವನು. ನಿನಗೆ ಮುಕ್ತಿಯೆಂಬುದು ಶೂನ್ಯವಾದುದಲ್ಲ. ಈ ದೇವಕಿಯಾದರೋ ಅದಿತಿಯ ಅಂಶದಿಂದುತ್ಪನ್ನಳಾದವಳು. ಎಲೈ ಭಕ್ತನೇ ಈ ಧನವೆಲ್ಲವೂ ಕೊಡಲು ಯೋಗ್ಯವಾದುದು.

೩೩-೩೫. ಭೋಗಬೀಜವಾದ ದೇವತೆಗಳ ವಾಸಸ್ಥಾನವಾದ ಮತ್ತು ನಿನ್ನ ಸ್ಥಾನವಾದ ಸ್ವರ್ಗಕ್ಕೆ ತೆರಳುವವನಾಗು. ವಸುದೇವನು ಶಿವನ ಮಾತನ್ನು ಕೇಳಿ

ತತ್ರ ಸಂಭೃತಸಂಭಾರೋ ರಾಜಸೂಯಂ ಚಕಾರ ಸಃ ।
ವಸುದೇವಸ್ಯ ಹವ್ಯಂ ಚ ಸಾಕ್ಷಾಚ್ಚ ಜಗೃಹುಃ ಸುರಾಃ ॥ ೩೪ ॥

ಯತ್ರ ಸಾಕ್ಷಾಚ್ಚ ಯಜ್ಞೇಶೋ ಯಜ್ಞೋಽಯಂ ದಕ್ಷಿಣಾ ಸಹ ।
ಪೂರ್ಣಾಹುತಿಂ ದತ್ತವಂತಂ ವಸುದೇವಮುವಾಚ ಸಃ ॥
ಸನತ್ಕುಮಾರೋ ಭಗವಾನ್ವಾಸುದೇವಾಜ್ಞಯಾ ಮುನೇ ॥ ೩೫ ॥

॥ ಸನತ್ಕುಮಾರ ಉವಾಚ ॥

ಸರ್ವಸ್ವಂ ದಕ್ಷಿಣಾಂ ದೇಹಿ ತೂರ್ಣಂ ಲಕ್ಷ್ಮೀಪತೇಃ ಪಿತಃ ॥ ೩೬ ॥

ಸಾರ್ಥಕಂ ಕುರು ಕರ್ಮೇದಂ ವೇದೋಕ್ತಂ ವಚನಂ ಶೃಣು ।
ದಕ್ಷಿಣಾಂ ವಿಪ್ರಮುದ್ದಿಶ್ಯ ಯತ್ಕಾಲಂ ಚೇನ್ನ ದೀಯತೇ ॥ ೩೭ ॥

ಮುಹೂರ್ತೇ ತು ವ್ಯತೀತೇ ಸಾ ದಕ್ಷಿಣಾ ದ್ವಿಗುಣಾ ಭವೇತ್ ।
ವಾಸರೇ ಚ ಬಹಿರ್ಭೂತೇ ಭವೇತ್ಸಾಪಿ ಚತುರ್ಗುಣಾ ॥ ೩೮ ॥

---

ಆಕ್ಷಣವೇ ಸ್ಥಿರಮನಸ್ಕನಾಗಿ ಶುಭಮುಹೂರ್ತದಲ್ಲಿ ಸಕಲ ಸಾಮಗ್ರಿಗಳನ್ನೂ ಸಿದ್ಧ ಪಡಿಸಿಕೊಂಡವನಾಗಿ ರಾಜಸೂಯ ಯಾಗವನ್ನು ಮಾಡಿದನು. ಯಾವ ಯಾಗದಲ್ಲಿ ಯಜ್ಞಾಧಿಪತಿಯಾದ ಪರಮಾತ್ಮನು ಪ್ರತ್ಯಕ್ಷನಾಗಿದ್ದನೋ ಯಜ್ಞವೂ ಕೂಡ ದಕ್ಷಿಣಾಸಹಿತವಾಗಿದ್ದಿತೋ ಅಂಥಾ ಯಾಗದಲ್ಲಿ ವಸುದೇವನು ಕೊಟ್ಟ ಹವಿರ್ಭಾಗ ಗಳನ್ನು ದೇವತೆಗಳು ಪ್ರತ್ಯಕ್ಷರಾಗಿ ಬಂದು ತೆಗೆದುಕೊಂಡರು. ಪೂರ್ಣಾಹುತಿ ಯನ್ನು ಮಾಡಿದನಂತರ ಪೂಜ್ಯನಾದ ಸನತ್ಕುಮಾರನು ವಾಸುದೇವನ ಅಪ್ಪಣೆಯ ಪ್ರಕಾರ ವಸುದೇವನನ್ನು ಕುರಿತು ಹೇಳತೊಡಗಿದನು.

೩೬-೩೮. ಸನತ್ಕುಮಾರನು ಹೇಳುತ್ತಾನೆ: ಎಲೈ ಲಕ್ಷ್ಮೀಪತಿಯ ತಂದೆಯೇ ಶೀಘ್ರವಾಗಿ ನಿನ್ನ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡು. ಈ ಕರ್ಮವನ್ನು ಸಾರ್ಥಕಮಾಡು. ವೇದದಲ್ಲಿ ಹೇಳಿರುವ ಮಾತನ್ನು ಕೇಳು. ಬ್ರಾಹ್ಮಣನಿಗೆ ಯಾವ ಕಾಲದಲ್ಲಿ ದಕ್ಷಿಣೆಯನ್ನು ಕೊಡಬೇಕೋ ಆ ಕಾಲದಲ್ಲಿ ಕೊಡದಿದ್ದರೆ ಒಂದು ಮುಹೂರ್ತವು ಕಳೆದರೆ ಆ ದಕ್ಷಿಣೆಯ ಮೊತ್ತವು ಎರಡಷ್ಟಾಗುತ್ತದೆ. ಒಂದು ದಿನವು ಕಳೆದರೆ ನಾಲ್ಕರಷ್ಟಾಗುತ್ತದೆ.

ತ್ರಿರಾತ್ರೇ ಸಮತೀತೇ ತು ಷಡ್ಗುಣಾ ದಕ್ಷಿಣಾ ಭವೇತ್ ।
ಪಕ್ಷಾಂತೇ ತು ಶತಗುಣಾ ಮಾಸಾಂತೇ ತು ಚತುರ್ಗುಣಾ ॥ ೩೯ ॥

ಷಣ್ಮಾಸೇಪ್ಯಧಿಕೇ ನ್ಯೂನೇ ಚ ಸಾಹಸ್ರಗುಣಾ ತಥಾ ।
ವರ್ಷಾಂತೇ ಸಾ ಲಕ್ಷಗುಣಾ ಬ್ರಹ್ಮಣೋಕ್ತಂ ಚ ಯಾದವ ॥
ಉಭೌ ಚ ನರಕಂ ಯಾತಃ ಕರ್ಮಕರ್ತೃಪುರೋಹಿತೌ ॥ ೪೦ ॥

ವಸುದೇವಶ್ಚ ತಚ್ಛ್ರುತ್ವಾ ಸರ್ವಸ್ವಮುತ್ಸಸರ್ಜ ಸಃ ।
ಅಧಿಕಾರಾಂಶ್ಚ ಸಾಹ್ಲಾದೋ ವಾಸುದೇವಾಜ್ಞಯಾ ತಥಾ ॥ ೪೧ ॥

ಅಮೂಲ್ಯಾನಾಂ ಚ ರತ್ನಾನಾಂ ದಶಕೋಟಿಮನುತ್ತಮಾಂ ।
ದದೌ ಸರ್ಗಾಯ ಸರ್ವಾದೌ ಸ್ವಯಂ ಲಕ್ಷ್ಮೀಪತೇಃ ಪಿತಾ ॥ ೪೨ ॥

---

೩೯. ಮೂರು ದಿನಗಳು ಕಳೆದ ಮೇಲೆ ಆ ದಕ್ಷಿಣೆಯ ಮೊತ್ತವು ಆರರಷ್ಟಾಗುತ್ತದೆ. ಒಂದು ಪಕ್ಷವು ಕಳೆದರೆ ನೂರರಷ್ಟಾಗುತ್ತದೆ. ಒಂದು ಮಾಸವು ಕಳೆದರೆ ನಾನೂರರಷ್ಟಾಗುತ್ತದೆ.

೪೦. ಆರು ತಿಂಗಳು ಕಳೆದರೆ ಅಥವಾ ಅದಕ್ಕಿಂತಲೂ ಹೆಚ್ಚು ದಿನಗಳಾಗಲಿ ಕಡಿಮೆ ದಿನಗಳಾಗಲಿ ಕಳೆದರೆ ಒಂದು ಸಾವಿರದಷ್ಟಾಗುತ್ತದೆ. ಒಂದು ವರುಷವು ಕಳೆದರೆ ಆ ದಕ್ಷಿಣೆಯ ಮೊತ್ತವು ಒಂದು ಲಕ್ಷದಷ್ಟಾಗುತ್ತದೆ. ಎಲೈ ಯಾದವನೇ! ಕರ್ಮ ಮಾಡಿದವನು ಮತ್ತು ಪುರೋಹಿತನು ಇವರಿಬ್ಬರೂ ಕೂಡ ನರಕವನ್ನು ಹೊಂದುತ್ತಾರೆ ಎಂದು ಬ್ರಹ್ಮನು ಹೇಳಿರುವನು.

೪೧–೪೨. ವಸುದೇವನು ಆ ಮಾತನ್ನು ಕೇಳಿ ಸಂತೋಷದಿಂದ ತನ್ನ ಅಧಿಕಾರಕ್ಕೆ ಒಳಪಟ್ಟ ಸಕಲವನ್ನೂ ಬಿಟ್ಟನು. ಮತ್ತು ವಾಸುದೇವನ ಅಪ್ಪಣೆಯಿಂದ ಬೆಲೆಬಾಳುವ ಅತ್ಯುತ್ತಮವಾದ ಹತ್ತು ಕೋಟಿ ರತ್ನಗಳನ್ನು ಶ್ರೀಲಕ್ಷ್ಮೀಪತಿಯ ತಂದೆಯಾದ ವಸುದೇವನು ಎಲ್ಲದಕ್ಕಿಂತಲೂ ಮೊದಲು ದಾನಮಾಡುವುದಕ್ಕಾಗಿ ಕೊಟ್ಟನು.

ಶತಕೋಟಿಂ ಮಣೀಂದ್ರಾಣಾಂ ಸ್ವರ್ಣಾನಾಂ ತಚ್ಚತುರ್ಗುಣಂ ।
ಮಾಣಿಕ್ಯಾನಾಂ ಚ ಮುಕ್ತಾನಾಂ ಹೀರಕಾಣಾಂ ತಥೈವ ಚ || ೪೩ ||

ರೌಪ್ಯ ಪ್ರವಾಲಂ ಪರಮಂ ಸ್ವರ್ಣಪಾತ್ರಾಣಿ ಯಾನಿ ಚ ।
ಸ್ವಸ್ತ್ರೀಣಾಂ ಸ್ವವಧೂನಾಂ ಚಾಪ್ಯಮೂಲ್ಯರತ್ನಭೂಷಣಂ || ೪೪ ||

ಶ್ವೇತಚಾಮರಲಕ್ಷಂ ಚ ಲಕ್ಷಂ ಚ ರತ್ನದರ್ಪಣಂ ।
ಕಾಮಧೇನುಗಣಂ ಸರ್ವಂ ಶತಕೋಟಿ ಗಜಾನಪಿ || ೪೫ ||

ಶತಕೋಟಿಂ ಗಜೇಂದ್ರಾಣಾಮಶ್ವಾನಾಂ ತಚ್ಚತುರ್ಗುಣಂ ।
ಯದ್ಧನಂ ಯಾದವಾನಾಂ ಚ ರಾಜ್ಞೋ ರಾಜಾನುಮೋದನಾತ್ || ೪೬ ||

ಗ್ರಾಮಾಣಾಂ ಶತಲಕ್ಷಂ ಚ ಸಸಸ್ಯಂ ಫಲಿತಂ ತರುಂ ।
ಧಾನ್ಯಾಚಲಾನಾಂ ಲಕ್ಷಂ ಚ ಶಾಲ್ಯನ್ನಾನಾಂ ತಥೈವ ಚ || ೪೭ ||

---

೪೩. ಮಣಿಶ್ರೇಷ್ಠಗಳ ನೂರು ಕೋಟಿಯನ್ನೂ ಅದರ ನಾಲ್ಕರಷ್ಟು ಚಿನ್ನಗಳನ್ನೂ ಮಾಣಿಕ್ಯಗಳನ್ನೂ ಮುತ್ತುಗಳನ್ನೂ ಹೀರಕಗಳನ್ನೂ ದಾನ ಮಾಡಿದನು.

೪೪. ಬೆಳ್ಳಿಯ ಮತ್ತು ಉತ್ತಮವಾದ ಹವಳದ ಮತ್ತು ಚಿನ್ನದ ಪಾತ್ರೆಗಳು ಯಾವಯಾವುವು ಇದ್ದುವೋ ಅವುಗಳನ್ನೂ ತನ್ನ ಸ್ತ್ರೀಯರ ತನ್ನ ಪತ್ನಿಯರ ಸಂಬಂಧವಾದ ಅಮೂಲ್ಯವಾದ ರತ್ನಾಭರಣಗಳನ್ನೂ ಕೊಟ್ಟನು.

೪೫. ಒಂದು ಲಕ್ಷ ಬಿಳಿಯ ಚಾಮರವನ್ನೂ ಒಂದು ಲಕ್ಷ ರತ್ನಮಯವಾದ ಕನ್ನಡಿಯನ್ನೂ ಸಮಸ್ತ ಕಾಮಧೇನು ಸಮೂಹವನ್ನೂ ಒಂದು ನೂರು ಕೋಟಿ ಆನೆಗಳನ್ನೂ ಕೊಟ್ಟನು.

೪೬. ನೂರು ಕೋಟಿ ಶ್ರೇಷ್ಠವಾದ ಆನೆಗಳನ್ನೂ ಅದರ ನಾಲ್ಕರಷ್ಟು ಕುದುರೆಗಳನ್ನೂ ಯಾದವರಿಗೆ ರಾಜನಾದ ಬಲರಾಮನ ಅಪ್ಪಣೆಯ ಪ್ರಕಾರ ಆ ಯಾದವರ ಧನವೆಲ್ಲವನ್ನೂ ಕೊಟ್ಟನು.

೪೭. ಸಸ್ಯಗಳಿಂದಲೂ ಫಲದಿಂದ ಕೂಡಿದ ಮರಗಳಿಂದಲೂ ಸಹಿತವಾದ ನೂರು ಲಕ್ಷ ಗ್ರಾಮಗಳನ್ನೂ ಬೆಟ್ಟದಂತಿರುವ ಒಂದು ಲಕ್ಷ ಧಾನ್ಯರಾಶಿಯನ್ನೂ ದಾನಮಾಡಿದನು.

ಪಾಯಸಂ ಪಿಷ್ಟಕಂ ಚೈವ ಮಿಷ್ಟಾನ್ನಂ ಚ ಸುಧೋಪಮಂ ।
ಸ್ವಸ್ತಿಕಾನಾಂ ತಿಲಾನಾಂ ಚ ರಮ್ಯಾಣಿ ಲಡ್ಡುಕಾನಿ ಚ ॥ ೪೮ ॥

ದಧ್ನಾಂ ಮಧೂನಾಂ ದುಗ್ಧಾನಾಂ ಗುಡಾನಾಂ ಹವಿಷಾಮಪಿ ।
ಕುಲ್ಯಾನಾಂ ಶತಕಂ ದತ್ವಾ ಪರಿಹಾರಂ ಚಕಾರ ಸಃ ॥ ೪೯ ॥

ಸಕರ್ಪೂರಂ ಚ ತಾಂಬೂಲಂ ಸುಶೀತಂ ವಾಸಿತಂ ಜಲಂ ।
ಸುಗಂಧಿ ಚಂದನಂ ಚೈವ ಪಾರಿಜಾತಸ್ಯ ಮಾಲಿಕಾಂ ॥ ೫೦ ॥

ಆಸನಾನಿ ಚ ರಮ್ಯಾಣಿ ವಹ್ನಿಶುದ್ಧಾಂಶುಕಾನಿ ಚ ।
ರತ್ನನಿರ್ಮಾಣತಲ್ಪಾನಿ ಪುಷ್ಪಾಣಿ ಚ ಫಲಾನಿ ಚ ॥ ೫೧ ॥

ಪ್ರದದೌ ಬ್ರಾಹ್ಮಣೇಭ್ಯಶ್ಚ ಪ್ರಫುಲ್ಲವದನೇಕ್ಷಣಃ ।
ದೇವಾಂಶ್ಚ ಭೋಜಯಾಮಾಸ ಬ್ರಾಹ್ಮಣಾನಾಂ ಮುಖೈಃ ಶುಭೈಃ ॥ ೫೨ ॥

---

೪೮. ಪಾಯಸವನ್ನೂ ಅಮೃತದಂತಿರುವ ರುಚಿಕರವಾದ ಅನ್ನವನ್ನೂ ಹೋಳಿಗೆಗಳನ್ನೂ ಮನೋಹರವಾದ ಎಳ್ಳುಂಡೆಗಳನ್ನೂ ಕೊಟ್ಟನು.

೪೯. ಮೊಸರಿನ ಜೇನುತುಪ್ಪದ ಹಾಲಿನ ಬೆಲ್ಲದ ಮತ್ತು ಹವಿಸ್ಸಿನ ನೂರು ನೂರು ಕಾಲುವೆಗಳನ್ನು ದಾನಮಾಡಿ ನಮಸ್ಕರಿಸಿದನು.

೫೦–೫೨. ಪಚ್ಚಕರ್ಪೂರ ಸಹಿತವಾದ ತಾಂಬೂಲವನ್ನೂ ತಣ್ಣಗೂ ಸುವಾಸನೆಯಾಗಿಯೂ ಇರುವ ನೀರನ್ನೂ ಸುವಾಸನೆಯಾದ ಗಂಧವನ್ನೂ ಪಾರಿಜಾತದ ಹೂವಿನ ಮಾಲೆಯನ್ನೂ ಮನೋಹರವಾದ ಆಸನಗಳನ್ನೂ ಅಗ್ನಿಯಂತೆ ಪರಿಶುದ್ಧವಾದ ವಸ್ತ್ರಗಳನ್ನೂ ರತ್ನಗಳಿಂದ ಮಾಡಿದ ಹಾಸಿಗೆಗಳನ್ನೂ ಹೂವುಗಳನ್ನೂ ಹಣ್ಣುಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದನು. ಸಂತೋಷದಿಂದರಳಿದ ಮುಖ ಮತ್ತು ಕಣ್ಣುಗಳುಳ್ಳ ವಸುದೇವನು ಮಂಗಳಕರವಾದ ಬ್ರಾಹ್ಮಣರ ಮುಖಾಂತರ ದೇವತೆಗಳಿಗೆ ಭೋಜನ ಮಾಡಿಸಿದನು.

ದೇವಾಶ್ಚ ಮುನಯೋ ರಾತ್ರೌ ಸ್ವರಾಮಾಭಿಶ್ಚ ರೇಮಿರೇ ।
ಪ್ರಭಾತೇ ಪ್ರಯಯುಃ ಸರ್ವೇ ಶ್ರೀಕೃಷ್ಣಾನುಮತೇನ ಚ ॥ ೫೩ ॥

ಯಾದವಾಃ ಪ್ರಯಯುಃ ಸರ್ವೇ ದ್ವಾರಕಾಂ ಕೃಷ್ಣಪಾಲಿತಾಂ ।
ಅಮೂಲ್ಯರತ್ನಪೂರ್ಣಾಂ ಚ ರುಕ್ಮಿಣೀದರ್ಶನೇನ ಚ ॥ ೫೪ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ದ್ಧೇ ನಾರಾಯಣನಾರದಸಂವಾದೇ
ಪಂಚವಿಂಶತ್ಯಧಿಕಶತತಮೋಽಧ್ಯಾಯಃ ॥

---

೫೩. ಆ ರಾತ್ರಿಯಲ್ಲಿ ದೇವತೆಗಳೂ ಎಲ್ಲ ಮುನಿಗಳೂ ಕೂಡ ತಮ್ಮ ಸ್ತ್ರೀಯರೊಡನೆ ವಿಹರಿಸಿದರು. ಪ್ರಾತಃಕಾಲದಲ್ಲಿ ಅವರೆಲ್ಲರೂ ಕೂಡ ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು ಹೊರಟರು.

೫೪. ಸಕಲ ಯಾದವರೂ ಕೂಡ ರುಕ್ಮಿಣಿಯನ್ನು ನೋಡುವುದಕ್ಕಾಗಿ ಬೆಲೆಯಿಲ್ಲದ ರತ್ನಗಳಿಂದ ತುಂಬಿರುವ ಶ್ರೀಕೃಷ್ಣನಿಂದ ಕಾಪಾಡಲ್ಪಟ್ಟುದಾಗಿರುವ ದ್ವಾರಕಾಪಟ್ಟಣಕ್ಕೆ ಹೊರಟರು.

ಇಂತು ಶ್ರೀ ಬ್ರಹ್ಮವೈವರ್ತ ಮಹಾ ಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದ ನಾರಾಯಣ ನಾರದ ಸಂವಾದದಲ್ಲಿ ನೂರ
ಇಪ್ಪತ್ತೈದನೆಯ ಆಧ್ಯಾಯವು ಸಂಪೂರ್ಣವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಷಡ್ಸಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರಾಯಣ ಉವಾಚ ||

ಗಣೇಶಪೂಜನಂ ಕೃತ್ವಾ ಮಾಧವೋ ಯಾದವೈಃ ಸಹ |
ದೇವೈರ್ಮುನಿಭಿರನ್ಯೈಶ್ಚ ದೇವೀಭಿಃ ಸಹ ನಾರದ ||೧||

ಅಂಶೇನ ದೇವೋ ದೇವಿಭೀ ರುಕ್ಮಿಣ್ಯಾದ್ಯಾಭಿರೇವ ಚ |
ಪ್ರಯಯೌ ದ್ವಾರಕಾಂ ರಮ್ಯಾಂ ತಸ್ಥೌ ಸಿದ್ಧಾಶ್ರಮೇ ಸ್ವಯಂ ||೨||

ಕೃತ್ವಾ ಸುಪ್ರೀತಿ ಸಂಭಾಷಾಂ ಸಾರ್ಧಂ ಗೋಲೋಕವಾಸಿಭಿಃ |
ಗೋಪ್ಯೈಃ ಸುಹೃದ್ಭಿರ್ನಂದೇನ ಮಾತ್ರಾ ಗೋಪ್ಯಾ ಯಶೋದಯಾ ||೩||

---

### ನೂರ ಇಪ್ಪತ್ತಾರನೆಯ ಅಧ್ಯಾಯವು

೧-೨. ಶ್ರೀ ನಾರಾಯಣನು ಹೇಳುತ್ತಾನೆ :—ಎಲೈ ನಾರದನೇ ! ಮಾಧವನು ಯಾದವರೊಡನೆಯೂ ದೇವತೆಗಳೊಡನೆಯೂ ಮುನಿಗಳೊಡನೆಯೂ ದೇವಿಯರೊಡನೆಯೂ ಗಣೇಶನ ಪೂಜೆಯನ್ನು ಮಾಡಿ ತನ್ನ ಅಂಶದಿಂದ ರುಕ್ಮಿಣಿಯೇ ಮುಂತಾದ ದೇವಿಯರಿಂದೊಡಗೂಡಿ ಮನೋಹರವಾದ ದ್ವಾರಕಾಪಟ್ಟಣಕ್ಕೆ ಹೋದನು. ತಾನು ಸಿದ್ಧಾಶ್ರಮದಲ್ಲಿದ್ದನು.

೩-೪. ಗೋಲೋಕ ವಾಸಿಗಳಾದ ಗೋಪಿಯರೊಡನೆಯೂ ಸ್ನೇಹಿತರೊಡನೆಯೂ ನಂದನೊಡನೆಯೂ ತಾಯಿಯಾದ ಯಶೋದೆಯೊಡನೆಯೂ ಸಂತೋಷ

ಉವಾಚ ಮಾತರಂ ತಾತಂ ಸುನೀತಂ ಚ ಯಥೋಚಿತಂ ।
ಗೋಪಾಂಶ್ಚ ಗೋಕುಲಸ್ಥಾಂಶ್ಚ ಬಂಧುವರ್ಗಾಂಶ್ಚ ಸಾಂಪ್ರತಂ ॥ ೪ ॥

॥ ಶ್ರೀ ಭಗವಾನುವಾಚ ॥

ಗಚ್ಛ ನಂದವ್ರಜಂ ನಂದ ತಾತ ಪ್ರಾಣಸ್ಯ ವಲ್ಲಭ ।
ಮಾತರ್ಯಶೋದೇ ತ್ವಮಪಿ ಪರಮಾರ್ಥೇ ಯಶಸ್ವಿನೀ ॥ ೫ ॥

ಭುಕ್ತ್ವಾ ಕಾಲಾವಶೇಷಂ ಚ ಗಚ್ಛ ಗೋಕುಲಮುತ್ತಮಂ ।
ಸಾಲೋಕ್ಯಮುಕ್ತಿಂ ದಾಸ್ಯಾಮಿ ಸಾರ್ಧಂ ಗೋಕುಲವಾಸಿಭಿಃ ॥ ೬ ॥

ಇತ್ಯುಕ್ತ್ವಾ ಭಗವಾನ್ಕೃಷ್ಣಃ ಪಿತ್ರೋರನುಮತೇನ ಚ ।
ಜಗಾಮ ರಾಧಿಕಾಸ್ಥಾನಂ ನಂದಶ್ಚ ಗೋಕುಲಂ ತಥಾ ॥ ೭ ॥

---

ದಿಂದ ಮಾತನಾಡುತ್ತಿದ್ದು ತಾಯಿಯನ್ನೂ ತಂದೆಯನ್ನೂ ಗೋಪರನ್ನೂ ಗೋಕುಲವಾಸಿಗಳನ್ನೂ ಬಂಧುವರ್ಗದವರನ್ನೂ ಕುರಿತು ಯಥಾಯೋಗ್ಯವಾಗಿಯೂ ಪ್ರಕೃತವಾಗಿಯೂ ಇರುವ ನೀತಿವಚನಗಳನ್ನು ಹೇಳಿದನು.

೫. ಶ್ರೀ ಭಗವಂತನು ಹೇಳುತ್ತಾನೆ :—ಪ್ರಾಣಪ್ರಿಯನೂ ತಂದೆಯೂ ಆದ ನಂದನೇ ! ಗೋಕುಲಕ್ಕೆ ಹೋಗಿ ಆನಂದಪಡು. ಪರಮಾತ್ಮಳೂ ಯಶಸ್ವಿನಿಯೂ ಆದ ತಾಯಿಯಾದ ಯಶೋದೆಯೇ ! ನೀನೂ ಗೋಕುಲಕ್ಕೆ ಹೋಗು.

೬. ನೀವು ಉತ್ತಮವಾದ ಗೋಕುಲಕ್ಕೆ ಹೋಗಿ ಉಳಿದ ಕಾಲಗಳನ್ನನುಭವಿಸಿ. ಅನಂತರ ಗೋಕುಲವಾಸಿಗಳೊಡನೆ ಸಾಲೋಕ್ಯಮುಕ್ತಿಯನ್ನು ಕೊಡುವೆನು.

೭. ಪೂಜ್ಯನಾದ ಕೃಷ್ಣನು ಈ ಪ್ರಕಾರವಾಗಿ ಹೇಳಿ ತಾಯಿ ತಂದೆಗಳ ಅಪ್ಪಣೆಯನ್ನು ಪಡೆದು ರಾಧೆಯಿದ್ದೆಡೆಗೆ ಹೋದನು. ನಂದನೂ ಕೂಡ ಶ್ರೀಕೃಷ್ಣನ ಮಾತಿನಂತೆ ಗೋಕುಲಕ್ಕೆ ಹೋದನು.

ಪದರ್ಶ ರಾಧಾಂ ರುಚಿರಾಂ ಮುಕ್ತಾಹಾರಾಂ ಚ ಸಸ್ಮಿತಾಂ ।
ಯಥಾ ದ್ವಾದಶವರ್ಷೀಯಾಂ ಶಶ್ವತ್ಸುಸ್ಥಿರಯೌವನಾಂ ॥ ೮ ॥

ರತ್ನೋಚ್ಚೈರಾಸನಸ್ಥಾಂ ಚ ಗೋಪೀತ್ರಿಶತಕೋಟಿಭಿಃ ।
ಆವೃತಾಂ ವೇತ್ರಹಸ್ತಾಭಿಃ ಸಸ್ಮಿತಾಭಿಶ್ಚ ಸಾಂಪ್ರತಂ ॥ ೯ ॥

ದೃಷ್ಟ್ವಾ ಚ ದೂರಕೋ ರಾಧಾ ಶ್ರೀಕೃಷ್ಣಂ ಪ್ರಾಣವಲ್ಲಭಾ ।
ಶಿಶುವೇಷಂ ಸುವೇಷಂ ಚ ಸುಂದರೇಶಂ ಚ ಸಸ್ಮಿತಂ ॥ ೧೦ ॥

ನವೀನಜಲದಶ್ಯಾಮಂ ಪೀತಕೌಶೇಯವಾಸಸಂ ।
ಚಂದನೋಕ್ಷಿತಸರ್ವಾಂಗಂ ರತ್ನಭೂಷಣಭೂಷಿತಂ ॥ ೧೧ ॥

ಮಯೂರಪಿಚ್ಛಚೂಡಂ ಚ ಮಾಲತೀಮಾಲ್ಯಶೋಭಿತಂ ।
ಈಷದ್ಧಾಸ್ಯಪ್ರಸನ್ನಾಸ್ಯಂ ಭಕ್ತಾನುಗ್ರಹವಿಗ್ರಹಂ ॥ ೧೨ ॥

---

೮–೯. ಕೃಷ್ಣನು, ಸುಂದರಿಯೂ ಆಹಾರವಿಲ್ಲದವಳೂ ಮಂದಹಾಸವುಳ್ಳವಳೂ ಹನ್ನೆರಡು ವರುಷದವಳಂತಿರುವವಳೂ ಯಾವಾಗಲೂ ಸ್ಥಿರವಾದ ಯೌವನವುಳ್ಳವಳೂ ರತ್ನಮಯವಾದ ಎತ್ತರವಾದ ಆಸನದ ಮೇಲೆ ಕುಳಿತಿರುವವಳೂ ಮುನ್ನೂರು ಕೋಟಿ ಗೋಪಿಯರಿಂದ ಕೈಯಲ್ಲಿ ಬೆತ್ತವನ್ನು ಹಿಡಿದುಕೊಂಡು ಸುತ್ತುವರಿಯಲ್ಪಟ್ಟವಳೂ ಆದ ರಾಧೆಯನ್ನು ನೋಡಿದನು.

೧೦–೧೧. ರಾಧೆಯು ಹುಡುಗನಂತೆಯೂ ಉತ್ತಮವಾದ ಅಲಂಕಾರದಿಂದ ಕೂಡಿಯೂ ಸುಂದರನಾಗಿಯೂ ಮಂದಹಾಸದಿಂದ ಕೂಡಿಯೂ ಹೊಸ ಮೋಡದಂತೆ ಕಪ್ಪಾಗಿಯೂ ಪೀತಾಂಬರವನ್ನು ಧರಿಸಿದವನಾಗಿಯೂ ಚಂದನದಿಂದ ಲೇಪಿಸಲ್ಪಟ್ಟ ಶರೀರವುಳ್ಳವನಾಗಿಯೂ ರತ್ನಾಭರಣಗಳಿಂದ ಅಲಂಕೃತನಾಗಿಯೂ ಇರುವ ತನ್ನ ಪ್ರಾಣಪ್ರಿಯನಾದ ಕೃಷ್ಣನನ್ನು ದೂರದಿಂದ ನೋಡಿದಳು.

೧೨–೧೪. ನವಿಲುಗರಿಯನ್ನು ತಲೆಯಲ್ಲಿ ಧರಿಸಿದವನೂ ಮಾಲತೀ ಹೂವಿನ ಮಾಲಿಕೆಯನ್ನು ಧರಿಸಿರುವವನೂ ಮಂದಹಾಸದಿಂದ ಗಂಭೀರವಾದ ಮುಖವುಳ್ಳವನೂ ಭಕ್ತರಿಗೆ ಅನುಗ್ರಹಮಾಡುವುದಕ್ಕಾಗಿ ಶರೀರವನ್ನು ಧರಿಸಿರುವವನೂ ಸುಂದರ

ಕ್ರೀಡಾಕಮುಲಮುಮ್ಲಾನಂ ಧೃತವಂತಂ ಮನೋಹರಂ ।
ಮುರಲೀಹಸ್ತವಿನ್ಯಸ್ತಂ ಸುಪ್ರಶಸ್ತಂ ಚ ದರ್ಪಣಂ ॥ ೧೩ ॥

ಜವೇನ ಚ ಸಮುತ್ಥಾಯ ಗೋಪೀಭಿಃ ಸಹ ಸಾದರಂ ।
ಪ್ರಣಮ್ಯ ಪರಯಾ ಭಕ್ತ್ಯಾ ತುಷ್ಟಾವ ಪರಮೇಶ್ವರಂ ॥ ೧೪ ॥

॥ ರಾಧಿಕೋವಾಚ ॥

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ।
ಯದ್ದೃಷ್ಟ್ವಾ ಮುಖಚಂದ್ರಂ ತೇ ಸುಸ್ನಿಗ್ಧಂ ಲೋಚನಂ ಮನಃ ॥ ೧೫ ॥

ಪಂಚಪ್ರಾಣಾಶ್ಚ ಸ್ನಿಗ್ಧಶ್ಚ ಪರಮಾತ್ಮಾ ಚ ಸುಪ್ರಿಯಃ ।
ಉಭಯೋರ್ಹರ್ಷಬೀಜಂ ಚ ದುರ್ಲಭಂ ಬಂಧುದರ್ಶನಂ ॥ ೧೬ ॥

ಶೋಕಾರ್ಣವೇ ನಿಮಗ್ನಾಹಂ ಪ್ರದಗ್ಧಾ ವಿರಹಾನಲೈಃ ।
ತ್ವದ್ದೃಷ್ಟ್ಯಾಮೃತವೃಷ್ಟ್ಯಾ ಚ ಸುಸಿಕ್ತಾದ್ಯ ಸುಶೀತಲಾ ॥ ೧೭ ॥

---

ವಾದ ಬಾಡದಿರುವ ಆಟದ ಕಮಲವನ್ನು ಕೈಯಲ್ಲಿ ಹಿಡಿದಿರುವವನೂ ಮುರಳಿಯನ್ನು ಹಿಡಿದಿರುವ ಕೈಯನ್ನು ನಿರ್ಮಲವಾದ ದರ್ಪಣದ ಮೇಲಿಟ್ಟು ಕೊಂಡಿರುವವನೂ ಆದ ಕೃಷ್ಣನನ್ನು ನೋಡಿ ಬೇಗನೆ ಮೇಲಕ್ಕೆದ್ದು ಗೋಪಿಯರೊಂದಿಗೆ ಆದರಪೂರ್ವಕ ವಾಗಿ ನಮಸ್ಕಾರಮಾಡಿ ಅತ್ಯಂತ ಭಕ್ತಿಯಿಂದ ಆ ಪರಮೇಶ್ವರನನ್ನು ಸ್ತೋತ್ರ ಮಾಡಿದಳು.

೧೫–೧೬. ಇಂದು ಯಾವ ನಿನ್ನ ಮನೋಹರವಾದ ಮುಖಚಂದ್ರನನ್ನು ನೋಡಿ ನನ್ನ ಕಣ್ಣುಗಳೂ ಮನಸ್ಸೂ ಪಂಚಪ್ರಾಣಗಳೂ ಆತ್ಮವೂ ಕೂಡ ಆನಂದ ಗೊಂಡಿತಾದಕಾರಣ ಇಂದು ನನ್ನ ಜನ್ಮವು ಸಫಲವಾಯಿತು. ನನ್ನ ಜೀವನವೂ ಕೂಡ ಉತ್ತಮವಾಯಿತು. ಈರ್ವರಿಗೂ ಸಂತೋಷವನ್ನುಂಟುಮಾಡುವುದಾದ ಬಂಧು ದರ್ಶನವು ದುರ್ಲಭವಾದುದು.

೧೭. ನಾನು ವಿರಹಾಗ್ನಿಯಿಂದ ಸುಡಲ್ಪಟ್ಟವಳಾಗಿ ದುಃಖ ಸಮುದ್ರದಲ್ಲಿ ಮುಳುಗಿದ್ದೆನು. ನಿನ್ನ ನೋಟವೆಂಬ ಅಮೃತದ ಮಳೆಯಿಂದ ಚೆನ್ನಾಗಿ ನೆನೆಸಲ್ಪಟ್ಟ ವಳಾಗಿ ಈಗ ತಣ್ಣಗಾಗಿರುವೆನು.

ಶಿವಾ ಶಿವಪ್ರದಾಹಂ ಚ ಶಿವಬೀಜಾ ತ್ವಯಾ ಸಹ ।
ಶಿವಸ್ವರೂಪಾ ನಿಶ್ಶೇಷಾಪ್ಯದೃಷ್ಟಾ ಚ ತ್ವಯಾ ವಿನಾ ॥ ೧೮ ॥

ತ್ವಯಿ ತಿಷ್ಠತಿ ದೇಹೇ ಚ ದೇಹೀ ಶ್ರೀಮಾನ್ಶುಚಿಃ ಸ್ವಯಂ ।
ಸರ್ವಶಕ್ತಿಸ್ವರೂಪಾ ಚ ಶಿವರೂಪಾ ಗತೇ ತ್ವಯಿ ॥ ೧೯ ॥

ಸ್ತ್ರೀಪುಂಸೋರ್ವಿರಹೋ ನಾಥ ಸಾಮಾನ್ಯಶ್ಚ ಸುದಾರುಣಃ ।
ಯಾಂತ್ಯೇವ ಶಕ್ತಿಭಿಃ ಪ್ರಾಣಾ ವಿಚ್ಛೇದಾತ್ಪರಮಾತ್ಮನಃ ॥ ೨೦ ॥

ಇತ್ಯುಕ್ತ್ವಾ ರಾಧಿಕಾ ದೇವೀ ಪರಮಾತ್ಮಾನಮೀಶ್ವರಂ ।
ಸ್ವಾಸನೇ ವಾಸಯಾಮಾಸ ಕೃತ್ವಾ ಪಾದಾರ್ಚನಂ ಮುದಾ ॥ ೨೧ ॥

ರತ್ನಸಿಂಹಾಸನೇ ಶ್ರೀಮಾನುವಾಸ ರಾಧಯಾ ಸಹ ।
ಗೋಪೀಭಿಃ ಸಹಿತಃ ಶಶ್ವತ್ಸೇವಿತಃ ಶ್ವೇತಚಾಮರೈಃ ॥ ೨೨ ॥

---

೧೮–೨೦. ನಾನು ನಿನ್ನೊಡಗೂಡಿದವಳಾಗಿ ಮಂಗಳಕರಳೂ ಮಂಗಳವನ್ನು ವನ್ನುಂಟುಮಾಡುವವಳೂ ಮಂಗಳಗಳಿಗೆ ಕಾರಣಳೂ ಆಗಿ ಸರ್ವಶಕ್ತಿಸ್ವರೂಪಳೂ ಮಂಗಳಸ್ವರೂಪಳೂ ಆಗುವೆನು. ನೀನು ಶರೀರದಲ್ಲಿರುವಾಗ ಸಕಲ ದೇಹಿಯೂ ತಾನು ಕಾಂತಿಯುಕ್ತನೂ ಶುದ್ಧನೂ ಆಗಿರುವನು. ನೀನು ಶರೀರವನ್ನು ಬಿಟ್ಟು ಹೊರಟೊಡನೆಯೇ ಪರಮಾತ್ಮನ ವಿಚ್ಛೇದವಾಗುವುದರಿಂದ ಶಕ್ತಿಗಳೊಡನೆ ಪ್ರಾಣಗಳೂ ಕೂಡ ಹೊರಟು ಹೋಗುತ್ತವೆ. ಎಲೈಪ್ರಿಯನೇ! ಸ್ತ್ರೀ ಪುರುಷರ ಅಗಲುವಿಕೆಯೆಂಬುದು ಅತ್ಯಂತ ಭಯಂಕರವಾದುದು.

೨೧. ದೇವಿಯಾದ ರಾಧಿಕೆಯು ಈ ಪ್ರಕಾರ ಹೇಳಿ ಈಶ್ವರನಾದ ಪರಮಾತ್ಮನಿಗೆ ಆನಂದದಿಂದ ಪಾದ ಪೂಜೆಯನ್ನು ಮಾಡಿ ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿದಳು.

೨೨. ಕಾಂತಿಯುಕ್ತನಾದ ಶ್ರೀಕೃಷ್ಣನು ರಾಧಾಸಮೇತನಾಗಿ ಗೋಪಿಯರಿಂದ ಬಿಳಿಯ ಚಾಮರಗಳನ್ನು ಹಿಡಿದುಕೊಂಡು ಸೇವಿಸಲ್ಪಡುತ್ತಿರುವವನಾಗಿ ರತ್ನಮಯವಾದ ಸಿಂಹಾಸನದ ಮೇಲೆ ಕುಳಿತುಕೊಂಡನು.

ಚಂದನಾ ಸಾ ದದೌ ಗಾತ್ರೇ ಸುಗಂಧಿ ಚಂದನಂ ಹರೇಃ ।
ಸಸ್ಮಿತಾ ರತ್ನಮಾಲಾ ಸಾ ರತ್ನಮಾಲಾಂ ಗಲೇ ದದೌ ॥ ೨೩ ॥

ಪದ್ಮೈಃ ಪದ್ಮಾರ್ಚಿತೇ ಪಾದಪದ್ಮೇ ಪದ್ಮಾವತೀ ಸತೀ ।
ಅರ್ಘ್ಯಂ ದದೌ ಸಾ ಸಜಲಂ ದೂರ್ವಾಂ ಪುಷ್ಪಂ ಚ ಚಂದನಂ ॥ ೨೪ ॥

ಮಾಲತೀ ಮಾಲತೀಮಾಲ್ಯಂ ಚೂಡಾಯಾಂ ಚ ಹರೇರ್ದದೌ ।
ಚಂಪಾ ಪುಷ್ಪಸ್ಯ ಪುಟಕಂ ದದೌ ಚ ಪಾರ್ವತೀ ಸತೀ ॥ ೨೫ ॥

ಪಾರಿಜಾತಾ ಚ ಹರಯೇ ಪಾರಿಜಾತಾಂ ದದೌ ಮುದಾ ।
ಸಕರ್ಪೂರಂ ಚ ತಾಂಬೂಲಂ ವಾಸಿತಂ ಶೀತಲಂ ಜಲಂ ॥
ದದೌ ಕಬಂಪಮಾಲಾ ಸಾ ಕದಂಬಮಾಲಿಕಾಂ ಶುಭಾಂ ॥ ೨೬ ॥

ಕ್ರೀಡಾಕಮಲಮಮ್ಲಾನಮಮೂಲ್ಯಂ ರತ್ನದರ್ಪಣಂ ।
ದದೌ ಹಸ್ತೇ ಹರೇತೀವ ಕಮಲಾ ಸಾ ಸುಕೋಮಲಾ ॥ ೨೭ ॥

---

೨೩. ಚಂದನಾ ಎಂಬುವಳು ಶ್ರೀಹರಿಯ ಅಂಗಗಳಿಗೆ ಪರಿಮಳದಿಂದ ಕೂಡಿದ ಗಂಧವನ್ನು ಕೊಟ್ಟಳು. ರತ್ನಮಾಲೆಯು ಮುಗುಳು ನಗೆಯನ್ನು ಬೀರುತ್ತ ಶ್ರೀಹರಿಯ ಕೊರಳಿಗೆ ರತ್ನಮಾಲಿಕೆಯನ್ನರ್ಪಿಸಿದಳು.

೨೪. ಪದ್ಮಾವತಿಯು ಲಕ್ಷ್ಮೀದೇವಿಯಿಂದ ಪೂಜಿಸಲ್ಪಟ್ಟ ಪಾದಕಮಲಗಳಿಗೆ ಪದ್ಮಗಳನ್ನರ್ಪಿಸಿ ದೂರ್ವೆ ಹೂವು ಗಂಧಗಳಿಂದ ಕೂಡಿದ ನೀರಿನಿಂದಅರ್ಘ್ಯವನ್ನಿತ್ತಳು.

೨೫. ಮಾಲತಿಯು ಶ್ರೀಹರಿಯ ತಲೆಯಮೇಲೆ ಮಾಲತೀಹೂವಿನ ಮಾಲಿಕೆಯನ್ನು ಮುಡಿಸಿದಳು. ಪಾರ್ವತಿಯು ಸಂಪಿಗೆಯ ಹೂವಿನ ಬೊಕ್ಕೆಯನ್ನು ಶ್ರೀ ಹರಿಗೆ ಅರ್ಪಿಸಿದಳು.

೨೬. ಪಾರಿಜಾತಾ ಎಂಬುವಳು ಶ್ರೀ ಹರಿಗೆ ಸಂತೋಷದಿಂದ ಪಾರಿಜಾತ ಪುಷ್ಪವನ್ನು ಕದಂಬಮಾಲೆಯು ಕರ್ಪೂರದಿಂದ ಕೂಡಿದ ತಾಂಬೂಲವನ್ನೂ ಸುವಾಸನೆಯಾಗಿಯೂ ತಣ್ಣಗೂ ಇರುವ ನೀರನ್ನೂ ಶುಭಕರವಾದ ಕದಂಬಮಾಲಿಕೆಯನ್ನೂ ಕೊಟ್ಟಳು.

೨೭. ಕಮಲೆಯು ಬಾಡದಿರುವ ಆಟದ ಕಮಲವನ್ನೂ ಅಮೂಲ್ಯವಾದ ರತ್ನಮಯವಾದ ಕನ್ನಡಿಯನ್ನೂ ಶ್ರೀಹರಿಯ ಕೈಯಲ್ಲಿ ಕೊಟ್ಟಳು.

ವರುಣೇನ ಪುರಾ ದತ್ತಂ ವಸ್ತ್ರಯುಗ್ಮಂ ಚ ಸುಂದರಂ ।
ಸಾಕ್ಷಾದ್ಗೋರೋಚನಾಭಂ ಚ ಸುಂದರೀ ಹರಯೇ ದದೌ ॥ ೨೮ ॥

ಮಧುಪಾತ್ರಂ ವಧೂಸ್ತಸ್ಮೈ ಮಧುರಂ ಮಧುಪೂರ್ಣಕಂ ।
ಸುಧಾಪೂರ್ಣಂ ಸುಧಾಪಾತ್ರಂ ದದೌ ಭಕ್ತ್ಯಾ ಸುಧಾಮುಖೀ ॥ ೨೯ ॥

ಚಕಾರ ಪುಷ್ಪಶಯ್ಯಾಂ ಚ ಗೋಪೀ ಚಂದನಚರ್ಚಿತಾಂ ।
ಅಮ್ಲಾನಮಾಲತೀಪುಷ್ಪಮಾಲಾಜಾಲವಿಭೂಷಿತಾಂ ॥ ೩೦ ॥

ರತ್ನೇಂದ್ರಸಾರನಿರ್ಮಾಣಮಂದಿರೇ ಸುಮನೋಹರೇ ।
ಮಣೀಂದ್ರಮುಕ್ತಾಮಾಣಿಕ್ಯಹೀರಹಾರವಿಭೂಷಿತೇ ॥ ೩೧ ॥

ಕಸ್ತೂರೀಕುಂಕುಮಾಕ್ತೇನ ವಾಯುನಾ ಸುರಭೀಕೃತೇ ।
ರತ್ನಪ್ರದೀಪಶತಕೈರ್ಜ್ವಲದ್ಭಿಶ್ಚ ಸುದೀಪಿತೇ ॥ ೩೨ ॥

ಧೂಪಿತೇ ಸತತಂ ಧೂಪೈರ್ನಾನಾವಸ್ತುಸಮನ್ವಿತೈಃ ।
ಕೃತ್ವಾ ಶಯ್ಯಾಂ ರತಿಕರೀಂ ಯಯುರ್ಗೋಪ್ಯಶ್ಚ ಸಸ್ಮಿತಾಃ ॥ ೩೩ ॥

---

೨೮. ಸುಂದರಿಯು ಹಿಂದೆ ತನಗೆ ವರುಣನು ಕೊಟ್ಟಿದ್ದ ಗೋರೋಚನದಂತೆ ಕಾಂತಿಯುಳ್ಳ ಸುಂದರವಾದ ಒಂದು ಜತೆ ವಸ್ತ್ರವನ್ನು ಹರಿಗರ್ಪಿಸಿದಳು.

೨೯. ವಧೂಯೆಂಬುವಳು ಮಧುವಿನಿಂದ ತುಂಬಿದ ಮಧುರವಾದ ಮಧು ಪಾತ್ರೆಯನ್ನು ಹರಿಗರ್ಪಿಸಿದಳು. ಸುಧಾಮುಖಿಯು ಅಮೃತದಿಂದ ತುಂಬಿರುವ ಅಮೃತ ಪಾತ್ರೆಯನ್ನು ಭಕ್ತಿಪೂರ್ವಕವಾಗಿ ಅರ್ಪಿಸಿದಳು.

೩೦. ಗೋಪಿಯು ಗಂಧದಿಂದ ಕೂಡಿದ ಬಾಡದಿರುವ ಮಾಲತೀ ಹೂವಿನ ಮಾಲೆಗಳಿಂದ ಕಂಗೊಳಿಸುತ್ತಿರುವ ಹೂವಿನ ಹಾಸಿಗೆಯನ್ನು ರಚಿಸಿದಳು.

೩೧–೩೩. ಗೋಪಿಯರು ರತ್ನಶ್ರೇಷ್ಠಗಳಿಂದಲೂ ಮುತ್ತುಗಳಿಂದಲೂ ಹೀರಕಗಳಿಂದಲೂ ಮಾಣಿಕ್ಯಗಳಿಂದಲೂ ಮಾಡಿದ ಹಾರಗಳಿಂದ ಅಲಂಕರಿಸಲ್ಪಟ್ಟ ಕಸ್ತೂರಿ ಮತ್ತು ಕೇಸರಿಗಳಿಂದ ಮಿಶ್ರಿತವಾದ ಗಾಳಿಯಿಂದ ಸುವಾಸನೆಯಾಗಿ ಮಾಡಲ್ಪಟ್ಟ

ದೃಷ್ಟ್ವಾ ರಹಸಿ ತಲ್ಪಂ ಚ ಸುರಮ್ಯಂ ಸುಮನೋಹರಂ ।
ಮಾಧವೋ ರಾಧಯಾ ಸಾರ್ಧಂ ವಿವೇಶ ರತಿಮಂದಿರಂ ॥ ೩೪ ॥

ನಾನಾಪ್ರಕಾರಹಾಸ್ಯಂ ಚ ಪರಿಹಾಸಂ ಸ್ಮರೋಚಿತಂ ।
ದ್ವಯೋರ್ಬಭೂವ ತಲ್ಪೇ ಚ ಮದನಾತುರಯೋಸ್ತಥಾ ॥ ೩೫ ॥

ಮಾಲ್ಯಂ ದದೌ ಚ ಕೃಷ್ಣಾಯ ತಾಂಬೂಲಂ ಚ ಸುವಾಸಿತಂ ।
ಕಸ್ತೂರೀಕುಂಕುಮಾಕ್ತಂ ಚ ಚಂದನಂ ಶ್ಯಾಮವಕ್ಷಸಿ ॥ ೩೬ ॥

ಚಾರು ಚಂಪಕಪುಷ್ಪಂ ಚ ಚೂಡಾಯಾಂ ಪ್ರದದೌ ಸತೀ ।
ಸಹಸ್ರದಲಸಂಸಕ್ತಕ್ರೀಡಾಪದ್ಮಂ ಕರೇ ದದೌ ॥ ೩೭ ॥

---

ಉರಿಯತ್ತಲಿರುವ ರತ್ನಮಯವಾದ ನೂರಾರು ದೀಪಗಳಿಂದ ಪ್ರಕಾಶಮಾನವಾದ ಅನೇಕ ವಸ್ತ್ರಗಳಿಂದ ಕೂಡಿದ ಧೂಪದಿಂದ ಯಾವಾಗಲೂ ಧೂಪಿತವಾಗಿರುವ ಮನೆಯಲ್ಲಿ ರತಿಯನ್ನುಂಟುಮಾಡುವ ಹಾಸಿಗೆಯನ್ನು ರಚಿಸಿ ತಾವುಗಳು ಮುಗುಳು ನಗೆಯನ್ನು ಬೀರುತ್ತ ಹೊರಟುಹೋದರು.

೩೪. ಮಾಧವನು ಅತ್ಯಂತ ಸುಂದರವಾಗಿಯೂ ಮನೋಹರವಾಗಿಯೂ ಏಕಾಂತಸ್ಥಳದಲ್ಲಿ ರಚಿಸಿರುವುದಾಗಿಯೂ ಇರುವ ಹಾಸಿಗೆಯನ್ನು ನೋಡಿ ರಾಧೆಯೊಡನೆ ಕ್ರೀಡಾಮಂದಿರವನ್ನು ಪ್ರವೇಶಿಸಿದನು.

೩೫. ಕಾಮಾತುರರಾದ ಆ ರಾಧಾಮಾಧವರು ಹಾಸಿಗೆಯ ಮೇಲೆ ಕುಳಿತುಕೊಂಡವರಾಗಿ ಮನ್ಮಥೋದ್ಬೋಧಕವಾದ ನಾನಾ ವಿಧವಾದ ಹಾಸ್ಯ ಪರಿಹಾಸ್ಯಗಳನ್ನು ಮಾಡಿದರು.

೩೬. ರಾಧೆಯು ಶ್ರೀಕೃಷ್ಣನಿಗೆ ಹೂವಿನ ಮಾಲಿಕೆಯನ್ನು ಹಾಕಿ ಸುವಾಸನೆಯಾದ ತಾಂಬೂಲವನ್ನು ಕೊಟ್ಟಳು. ಕಸ್ತೂರಿ ಮತ್ತು ಕೇಸರಿಗಳಿಂದ ಮಿಶ್ರಿತವಾದ ಗಂಧವನ್ನು ಶ್ರೀಹರಿಯ ಎದೆಗೆ ಹಚ್ಚಿದಳು.

೩೭. ಮನೋಹರವಾದ ಸಂಪಿಗೆಯ ಹೂವನ್ನು ಹರಿಯ ತಲೆಗೆ ಮುಡಿಸಿದಳು. ಸಾವಿರ ದಳಗಳಿಂದ ಕೂಡಿದ ಆಟದ ಕಮಲವನ್ನು ಕೈಯಲ್ಲಿ ಕೊಟ್ಟಳು.

ಪ್ರಕ್ಷಿಪ್ಯ ಮುರಲೀಂ ಹಸ್ತಾತ್ಪ್ರದದೌ ರತ್ನದರ್ಪಣಂ ।
ಪಾರಿಜಾತಸ್ಯ ಕುಸುಮಮಮ್ಲಾನಂ ಪುರತೋ ದದೌ ॥ ೩೮ ॥

ಉವಾಚ ಮಧುರಂ ರಾಧಾ ರಹಸ್ಯಂ ಮಧುರಂ ವಚಃ ।
ಸಸ್ಮಿತಾ ಸಸ್ಮಿತಂ ಶಾಂತಂ ಕಾಂತಂ ಕಾಂತಾಮನೋಹರಂ ॥ ೩೯ ॥

॥ ಶ್ರೀರಾಧಿಕೋವಾಚ ॥

ನಿಷ್ಫಲಂ ಮಂಗಲಪ್ರಶ್ನಂ ಮಂಗಲಂ ಮಂಗಲಾಲಯೇ ।
ಸರ್ವಮಂಗಲಬೀಜೇ ಚ ಮಾಂಗಲ್ಯೇ ಮಂಗಲಪ್ರದೇ ॥ ೪೦ ॥

ತಥಾಪಿ ಕುಶಲಪ್ರಶ್ನಂ ಸಾಂಪ್ರತಂ ಸಮಯೋಚಿತಂ ।
ಲೌಕಿಕೋ ವ್ಯವಹಾರೋಽಪಿ ವೇದೇಭ್ಯೋ ಬಲವಾಂಸ್ತಥಾ ॥ ೪೧ ॥

ಕುಶಲಂ ರುಕ್ಮಿಣೀಕಾಂತ ಸತ್ಯಭಾಮೇಶ ಸಾಂಪ್ರತಂ ।
ಮಹೇಂದ್ರೇಣ ಸಮಂ ಯುದ್ಧಂ ಲೀಲಯಾ ಚ ಯದಾಜ್ಞಯಾ ॥ ೪೨ ॥

---

೩೮. ಅವನ ಕೈಯಿಂದ ಮುರಳಿಯನ್ನು ತೆಗೆದಿಟ್ಟು ರತ್ನಮಯವಾದ ಕನ್ನಡಿಯನ್ನು ಕೊಟ್ಟಳು. ಬಾಡದಿರುವ ಪಾರಿಜಾತದ ಹೂವನ್ನು ಅವನ ಮುಂಭಾಗದಲ್ಲಿ ಅರ್ಪಿಸಿದಳು.

೩೯. ಮುಗುಳುನಗೆಯನ್ನು ಬೀರುತ್ತಿರುವ ಕಾಂತೆಯೊಡನೆ ಮನೋಹರನಾಗಿರುವ ಶಾಂತನಾದ ತನ್ನ ಕಾಂತನನ್ನು ಕುರಿತು ರಾಧೆಯು ಮಂದಹಾಸವನ್ನು ಬೀರುತ್ತ ಮಧುರವಾಗಿರುವ ಮಾತನ್ನು ಏಕಾಂತದಲ್ಲಿ ಹೇಳಿದಳು.

೪೦. ಶ್ರೀರಾಧಿಕೆಯು ಹೇಳುತ್ತಾಳೆ: ಮಂಗಳರೂಪನೂ ಮಂಗಲಕ್ಕೆ ಮನೆಯೂ ಸಕಲ ಮಂಗಳಗಳಿಗೂ ಕಾರಣನೂ ಮಂಗಲವನ್ನು ಕೊಡುವವನೂ ಮಂಗಳ ಸಂಬಂಧಿಯೂ ಆಗಿರುವ ನಿನ್ನನ್ನು ಕುರಿತು ಮಂಗಳಪ್ರಶ್ನೆಯನ್ನು ಮಾಡುವುದು ವ್ಯರ್ಥವು.

೪೧. ಹಾಗಿದ್ದರೂ ಕೂಡ ಕುಶಲಪ್ರಶ್ನೆ ಮಾಡಬೇಕಾದುದು ಮುಖ್ಯವೂ ಸಮಯೋಚಿತವೂ ಆಗಿರುತ್ತದೆ. ಲೋಕದ ನಡವಳಿಯೂ ಕೂಡ ವೇದಕ್ಕಿಂತಲೂ ಮುಖ್ಯವಾದುದು.

೪೨–೪೩. ಎಲೈ ರುಕ್ಮಿಣಿಯ ಕಾಂತನೇ ನಿನಗೆ ಕುಶಲವೇ? ಎಲೈ ಸತ್ಯಭಾಮೆಯ ಪತಿಯೇ ನೀನು ಸತ್ಯಭಾಮೆಯ ಅಪ್ಪಣೆಯಿಂದ ಮಹೇಂದ್ರನೊಡನೆ

ಪಾರಿಜಾತತರುಂ ಸ್ವರ್ಗಾದುತ್ಪಾಟ್ಯ ಚಾಮರಾವತೀಂ ।
ಗತ್ವಾ ವಿಜಿತ್ಯ ದೇವಾಂಶ್ಚ ತಸ್ಯೈ ದತ್ತಮಿತಿ ಶ್ರುತಂ ॥ ೪೩ ॥

ಪುಣ್ಯಕಂ ಚ ಕೃತಂ ತೇನ ಪಾರಿಜಾತೇನ ಸುವ್ರತಂ ।
ತ್ವಾಮೇವ ಸಾಧ್ಯಂ ಕಾಂತಂ ಚ ಸಂಪೂರ್ಣೇ ದಕ್ಷಿಣಾಂ ದದೌ ॥ ೪೪ ॥

ಬ್ರಹ್ಮೇಶಶೇಷಾಸಾಧ್ಯಸ್ತ್ವಂ ತಯಾ ಸಾಧ್ಯಃ ಕೃತಃ ಕಥಂ ।
ಸರ್ವಾಭ್ಯಃ ಕಾಮಿನೀಭ್ಯಶ್ಚ ಸತ್ಯಭಾಮಾಂ ಬಿಭರ್ಷಿ ಚ ॥ ೪೫ ॥

ರುಕ್ಮಿಣ್ಯಾಃ ಪ್ರೇಮಸೌಭಾಗ್ಯಮತಿರಿಕ್ತಂ ಚ ಗೌರವಂ ।
ಭಯಂ ಮಾನಂ ಚ ಧನ್ಯಾಯಾಂ ಸತ್ಯಾಯಾಂ ಸತತಂ ಶ್ರುತಂ ॥ ೪೬ ॥

ಸತ್ಯಂ ಜಾಂಬವತೀಕಾಂತಾ ವದ ಮಾಂ ಚ ಸುನಿಶ್ಚಿತಂ ।
ತಾಸು ಸರ್ವಾಸು ಕಾಂತಾಸು ಕಸ್ಯಾಸ್ತೇ ಪ್ರೇಮ ಚಾಧಿಕಂ ॥ ೪೭ ॥

---

ಸುಲಭವಾಗಿ ಯುದ್ಧವನ್ನು ಮಾಡಿ ಅಮರಾವತಿಗೆ ಹೋಗಿ ದೇವತೆಗಳೆಲ್ಲರನ್ನೂ ಗೆದ್ದು ಪಾರಿಜಾತ ಮರವನ್ನು ಸ್ವರ್ಗದಿಂದ ಕಿತ್ತು ತಂದು ಸತ್ಯಭಾಮೆಗೆ ಕೊಟ್ಟೆ ಯೆಂದು ಕೇಳಿದೆನು.

೪೪. ಆ ಪಾರಿಜಾತವು ಉತ್ತಮವಾದ ವ್ರತವನ್ನು ಮಾಡಿ ಪುಣ್ಯವನ್ನು ಪಡೆದಿತ್ತೆಂದು ಭಾವಿಸುತ್ತೇನೆ. ಆ ಸತ್ಯಭಾಮೆಯು ಸರ್ವರಿಗೂ ಸಾಧನೆ ಮಾಡಲು ಯೋಗ್ಯನೂ ತನ್ನ ಪತಿಯೂ ಆದ ನಿನ್ನನ್ನೇ ದಕ್ಷಿಣೆಯಾಗಿ ಕೊಟ್ಟಳು.

೪೫. ಬ್ರಹ್ಮ ಈಶ ಶೇಷ ಮುಂತಾದವರಿಗೂ ಕೂಡ ಅಸಾಧ್ಯನಾದ ನೀನು ಹೇಗೆ ಆ ಸತ್ಯಭಾಮೆಗೆ ಅಧೀನನಾದೆ? ನಿನ್ನೆಲ್ಲ ಕಾಮಿನಿಯರಿಗಿಂತಲೂ ಅತಿಶಯ ವಾಗಿ ಸತ್ಯಭಾಮೆಯನ್ನು ಕಾಪಾಡುತ್ತಿರುವೆ.

೪೬. ರುಕ್ಮಿಣಿಗಿಂತಲೂ ಅತಿಶಯವಾದ ಪ್ರೇಮಸೌಭಾಗ್ಯ ಗೌರವ ಭಯ ಮರ್ಯಾದೆ ಮುಂತಾದುವುಗಳು ಯಾವಾಗಲೂ ಪುಣ್ಯವತಿಯಾದ ಸತ್ಯಭಾಮೆಯಲ್ಲಿ ದೆಯೆಂದು ಕೇಳುತ್ತಿರುವೆನು.

೪೭ ಎಲೈ ಜಾಂಬವತಿಯ ಪ್ರಿಯನೇ! ನನ್ನಲ್ಲಿ ಸತ್ಯವಾಗಿರುವ ಮಾತ ನ್ನಾಡುವವನಾಗು. ಈ ಎಲ್ಲ ಕಾಂತೆಯರಲ್ಲಿ ನಿನಗೆ ಯಾರಲ್ಲಿ ಹೆಚ್ಚಾದ ಪ್ರೀತಿ ಯಿದೆ?

ಶೃಂಗಾರೇ ಸರ್ವಭಾವೇ ವಾ ತಾಸು ಕಾ ರಸಿಕಾ ಪರಾ ।
ತ್ವಯಿ ಸ್ನಿಗ್ಧಾ ವಿದಗ್ಧಾ ಕಾ ತಾಸು ಧನ್ಯಾತಿಸುವ್ರತಾ ॥ ೪೮ ॥

ಸಾ ಸ್ತ್ರೀಭಾವಾನುರಕ್ತಾ ಯಾ ಭಾರ್ಯಾಂ ಪಾತಿ ಪತಿಶ್ಚ ಸಃ ।
ಪ್ರೇಮಾತಿರಿಕ್ತಂ ಸ್ತ್ರೀಪುಂಸೋಸ್ತ್ರೈಲೋಕ್ಯೇಷು ಸುದುರ್ಲಭಂ ॥ ೪೯ ॥

ರಸಿಕಾ ಸ್ತ್ರೀ ವಿಜಾನಾತಿ ಸತೀ ಗುಣವತೀ ಪತಿಂ ।
ಗುಣಜ್ಞಂ ರಸಿಕಂ ಶೂರಂ ಸುಶೀಲಂ ಸುರತೌ ಸದಾ ॥ ೫೦ ॥

ದೂರಾದ್ಧಾವತಿ ಪದ್ಮಾರ್ಥಂ ಮಧುಲೋಭಾನ್ಮಧುವ್ರತಃ ।
ಭೇಕಸ್ತನ್ನ ಹಿ ಜಾನಾತಿ ತನ್ಮೂರ್ಧ್ನಿ ಪಾದಮುತ್ಸೃಜೇತ್ ॥ ೫೧ ॥

---

೪೮. ಶೃಂಗಾರವಿಷಯದಲ್ಲಿಯೂ ಸಕಲ ವಿಷಯದಲ್ಲಿಯೂ ಕೂಡ ಅವರುಗಳಲ್ಲಿ ಯಾವಳು ಹೆಚ್ಚು ರಸಿಕಳಾದವಳು? ಮತ್ತು ಅವರುಗಳಲ್ಲಿ ನಿನ್ನಲ್ಲಿ ಹೆಚ್ಚು ಪ್ರೀತಿಯನ್ನು ಹೊಂದಿದ ಧನ್ಯಳೂ ಸುಚರಿತ್ರಳೂ ಆದ ಜಾಣೆಯು ಯಾವಳೆಂಬುದನ್ನು ತಿಳಿಸುವವನಾಗು.

೪೯. ಯಾವಳು ಸಂಪೂರ್ಣವಾದ ಮನಸ್ಸಿನಿಂದ ಅನುರಾಗವನ್ನು ಹೊಂದಿರುತ್ತಾಳೋ ಅವಳೇ ನಿಜವಾದ ಪತ್ನಿಯು. ಯಾವನು ಸರ್ವವಿಧದಿಂದಲೂ ಹೆಂಡತಿಯನ್ನು ಕಾಪಾಡುತ್ತಾನೋ ಅವನೇ ನಿಜವಾದ ಗಂಡನು. ಅತ್ಯಂತವಾದ ಸ್ತ್ರೀ ಪುರುಷರ ಪ್ರೀತಿಯೆಂಬುದು ಮೂರು ಲೋಕದಲ್ಲಿಯೂ ದುರ್ಲಭವು.

೫೦. ರಸಿಕಳೂ ಪತಿವ್ರತೆಯೂ ಗುಣವತಿಯೂ ಆದ ಸ್ತ್ರೀಯು ತನ್ನ ಪತಿಯು ಗುಣವನ್ನು ಗ್ರಹಿಸುವವನು, ರಸಿಕನು ಒಳ್ಳೆಯ ಸ್ವಭಾವದವನು ಯಾವಾಗಲೂ ಸುರತದಲ್ಲಿ ಶೂರನು ಎಂಬಂಶವನ್ನು ತಿಳಿದುಕೊಳ್ಳುತ್ತಾಳೆ.

೫೧. ಜೇನುನೊಣವು ಜೇನಿನ ಆಶೆಯಿಂದ ಕಮಲವನ್ನರಸಿಕೊಂಡು ಬಹಳ ದೂರದ ವರೆಗೂ ಓಡುತ್ತದೆ. ಕಪ್ಪೆಯು ಅದನ್ನು ತಿಳಿಯಲಾರದೆ ಆ ಕಮಲದ ಮೇಲೆ ಕಾಲುಗಳನ್ನಿಡುತ್ತದೆ. (ಒದೆಯುತ್ತದೆ)

ಯಂತ್ರೀ ಜಾನಾತಿ ಸಂಗೀತರಸಂ ಯಂತ್ರಂ ಚ ನೈವ ಚ ।
ದುಗ್ಧಾಸ್ವಾದಂ ವಿದಗ್ಧಶ್ಚ ನ ದರ್ವೀ ನೈವ ಭಾಜನಂ ॥ ೫೨ ॥

ಪರಿಪಕ್ವಫಲಾಸ್ವಾದಂ ಜಾನಂತಿ ಭೋಗಿನಃ ಸುಖಂ ।
ಏಕತ್ರಾವಸ್ಥಿತಾಃ ಶಶ್ವನ್ನ ಕಿಂಚಿತ್ಫಲಿನೋ ಯಥಾ ॥ ೫೩ ॥

ಸುಶೀತಲಜಲಾಸ್ವಾದಂ ವಿಜಾನಂತಿ ಕೃಷೀವಲಾಃ ।
ನ ಚ ವಾಪೀ ನ ಚ ಘಟಶ್ಚೈಕತ್ರಾವಸ್ಥಿತೋ ಯಥಾ ॥ ೫೪ ॥

ಭೋಗಿನೋ ಹಿ ವಿಜಾನಂತಿ ಶಾಲಿಸ್ವಾದುರಸಂ ಪರಂ ।
ಏಕತ್ರಾವಸ್ಥಿತಂ ಚೇತ್ತು ನ ಕ್ಷೇತ್ರಂ ಭಾಜನಂ ಯಥಾ ॥ ೫೫ ॥

---

೫೨. ಸಂಗೀತದ ಮಾಧುರ್ಯವನ್ನು ಸಂಗೀತದ ಯಂತ್ರವನ್ನಿಟ್ಟು ಕೊಂಡವನು ತಿಳಿಯುತ್ತಾನಲ್ಲದೆ ಯಂತ್ರವು ತಿಳಿಯಲಾರದು. ಹಾಲಿನ ರುಚಿಯನ್ನು ಹಾಲನ್ನು ಕುಡಿದ ನಿಪುಣನು ತಿಳಿಯುತ್ತಾನಲ್ಲದೆ ಪಾತ್ರೆಯಾಗಲಿ ಸವುಟಾಗಲಿ ತಿಳಿಯಲಾರವು.

೫೩. ಮಾಗಿರುವ ಹಣ್ಣಿನ ರುಚಿಯನ್ನು ಆ ಹಣ್ಣನ್ನು ತಿಂದವರು ಸುಖವಾಗಿ ತಿಳಿಯುತ್ತಾರೆ. ನಿಂತಲ್ಲಿಯೇ ಯಾವಾಗಲೂ ನಿಂತಿರುವ ಮರಗಳು ಯಾವಾಗಲೂ ತಿಳಿಯಲಾರವು.

೫೪. ಅತ್ಯಂತ ತಣ್ಣಗಿರುವ ನೀರಿನ ರುಚಿಯನ್ನು ಶ್ರಮಪಟ್ಟು ಕೆಲಸ ಮಾಡಿದ ರೈತರು ತಿಳಿಯುತ್ತಾರೆ. ಮರವು ಹಣ್ಣಿನ ರುಚಿಯನ್ನು ಹೇಗೆ ತಿಳಿಯಲಾರದೋ ಹಾಗೆ ನೀರಿನ ರುಚಿಯನ್ನು ಬಾವಿಯಾಗಲಿ ಬಿಂದಿಗೆಯಾಗಲಿ ತಿಳಿಯಲಾರವು.

೫೫. ಊಟ ಮಾಡಿದವರು ಬತ್ತದ ಹಿತಕರವಾದ ರುಚಿಯನ್ನು ತಿಳಿಯುತ್ತಾರೆ. ಒಂದೇ ಕಡೆಯಲ್ಲಿದ್ದರೂ ಗದ್ದೆಯು ಪಾತ್ರೆಯಂತೆ ರುಚಿಯನ್ನು ತಿಳಿಯಲಾರದು.

ಬುಬುಧೇ ಚಂದನಾಘ್ರಾಣಂ ಚಂದನಾರ್ಥೀ ಚ ಭೋಗವಿತ್ ।
ನ ಗರ್ದಭೋ ಭಾರವಾಹೀ ನ ತಸ್ಯ ಪಾತ್ರಿಕಾ ಯಥಾ ॥ ೫೬ ॥

ಯಂ ನ ಜಾನಂತಿ ವೇದಾಶ್ಚ ಬ್ರಹ್ಮೇಶಾದ್ಯಾದಯಸ್ತಥಾ ।
ಯೋಗಿನೋ ಮುನಯಃ ಸಿದ್ಧಾಸ್ತಂ ಕಿಂ ಜಾನಂತಿ ಯೋಷಿತಃ ॥ ೫೭ ॥

ಸೌಭಾಗ್ಯಂ ಗೌರವಂ ಪ್ರೇಮ ದುರ್ಲಭಂ ನಿತ್ಯನೂತನಂ ।
ಯೋಷಿತಾಂ ಚ ಪರಂ ನೈವ ಚೂರ್ಣೀಭೂತಂ ಕ್ಷಣೇನ ಚ ॥ ೫೮ ॥

ಅತ್ಯುಚ್ಛ್ರಿತೋ ನಿಪತನಂ ಪ್ರಾಪ್ನೋತ್ಯೇವ ಧ್ರುವಂ ಪ್ರಭೋ ।
ಆರಾದ್ವಿಪತ್ತಿಬೀಜಂ ಚ ವೈಷ್ಣವಾನಾಂ ವಿಹಿಂಸನಂ ॥ ೫೯ ॥

ಶ್ರೀದಾಮಾ ಚ ಮಯಾ ಶಪ್ತಸ್ತ್ವದ್ಭಕ್ತೋ ಭಕ್ತವತ್ಸಲಃ ।
ಏತಾದೃಶೀ ವಿಪತ್ತಿರ್ಮೇ ಪುತ್ರ ಶ್ರೀದಾಮಶಾಪತಃ ॥ ೬೦ ॥

---

೫೬. ಗಂಧದಸುವಾಸನೆಯು ಹಿತವನ್ನು ಗಂಧವನ್ನಪೇಕ್ಷಿಸುವ ಅನುಭವಿಸುವವನು ತಿಳಿಯುತ್ತಾನೆ. ಗಂಧವನ್ನಿಟ್ಟ ಪಾತ್ರೆಯಂತೆ ಭಾರವನ್ನು ಹೊರುವ ಕತ್ತೆಯು ತಿಳಿಯಲಾರದು.

೫೭. ಯಾವನನ್ನು ವೇದಗಳೂ ಬ್ರಹ್ಮ ಈಶಾನ ಮುಂತಾದವರೂ ಮತ್ತು ಯೋಗಿಗಳೂ ಮುನಿಗಳೂ ಸಿದ್ಧರೂ ಕೂಡ ತಿಳಿಯಲಾರರೋ ಅಂಥವನನ್ನು ಸ್ತ್ರೀಯರು ತಿಳಿದುಕೊಳ್ಳುತ್ತಾರೆಯೇ ?

೫೮. ಸ್ತ್ರೀಯರಿಗೆ ಸೌಭಾಗ್ಯ ಗೌರವ ಅತಿದುರ್ಲಭವಾದ ಪ್ರೇಮ ಯಾವಾಗಲೂ ಹೊಸದಾಗಿರುವಿಕೆ ಇವುಗಳಿಗಿಂತಲೂ ಬೇರೆ ಯಾವುದೂ ಹೆಚ್ಚಲ್ಲವು. ಆದರೆ ಇದೆಲ್ಲವೂ ಕ್ಷಣಮಾತ್ರದಲ್ಲಿ ನಾಶವಾಗಿ ಹೋಯಿತು.

೫೯. ಎಲೈ ಪ್ರಭುವೇ! ಅತ್ಯಂತ ಮೇಲಕ್ಕೇರಿದವನು ನಿಶ್ಚಯವಾಗಿಯೂ ಕೆಳಕ್ಕೆ ಬೀಳುತ್ತಾನೆ. ವಿಷ್ಣುಭಕ್ತರನ್ನು ಹಿಂಸೆ ಮಾಡುವುದೆಂಬುದು ಬೇಗನೆ ಆಪತ್ತನ್ನುಂಟುಮಾಡಲು ಕಾರಣವಾಗುತ್ತದೆ.

೬೦. ಎಲೈ ಭಕ್ತರಲ್ಲಿ ಪ್ರೀತಿಯುಳ್ಳವನೇ! ನಿನ್ನ ಭಕ್ತನಾದ ಶ್ರೀದಾಮನನ್ನು ನಾನು ಶಪಿಸಿದೆನು. ಆದುದರಿಂದ ಶ್ರೀದಾಮನ ಶಾಪದಿಂದ ನನಗೆ ಈ ಪ್ರಕಾರವಾದ ಸಂಕಟವುಂಟಾಗಿರುವುದು.

ಈಶ್ವರಃ ಕಸ್ಯ ವಾ ಬಂಧುಃ ಪ್ರಿಯೋ ವಾ ವಿಪ್ರಿಯಸ್ತಥಾ ।
ಸತತಂ ಭಕ್ತಿಸಾಧ್ಯಶ್ಚ ಯೋ ಭಕ್ತಶ್ಚ ತದೀಶ್ವರಃ ॥ ೬೧ ॥

ವೇದಾಶ್ಚ ವೈದಿಕಾಃ ಸಂತಃ ಪುರಾಣಾನಿ ವದಂತಿ ಚ ।
ರಾಧಾಯಾಃ ಮಾಧವಃ ಸಾಧ್ಯೋ ಭಗವಾನಿತಿ ನಿಷ್ಫಲಂ ॥ ೬೨ ॥

ಜಿತ್ವಾ ಚ ಸಗಣಂ ಶಂಭುಂ ಬಾಣಸ್ಯ ಭುಜಕೃಂತನಂ ।
ಕೃತ್ವಾ ಚ ರುಕ್ಮಿಣೀಪೌತ್ರಃ ಸಮಾನೀತಃ ಸಭಾರ್ಯಕಃ ॥ ೬೩ ॥

ಅಹೋ ತ್ವಯಿ ಸಮಾಯಾತೇ ರುಕ್ಮಿಣೀ ಕಿಮುವಾಚ ಹ ।
ಪ್ರೇಮಸ್ಥಿತಂ ಸಮಾನಂ ತೇ ಕಿಂ ವಿವೃದ್ಧಂ ಚ ಗೌರವಂ ॥ ೬೪ ॥

ಕುರುಪಾಂಡವಯುದ್ಧೇನ ಕುರವೋ ನಿಹತಾಸ್ತ್ವಯಾ ।
ಪಾಂಡವಾರ್ಥೇ ತಥಾ ಭೂಪಾಃ ಕ್ವ ಸಾಮ್ಯಂ ಪರಮಾತ್ಮನಃ ॥ ೬೫ ॥

---

೬೧. ಈಶ್ವರನು ಯಾರಿಗೆ ತಾನೆ ಬಂಧುವೂ ಹಿತನೂ ಅಹಿತನೂ ಆಗಿರುತ್ತಾನೆ? ಅವನು ಯಾವಾಗಲೂ ಭಕ್ತಿಯಿಂದ ಹೊಂದಲು ಯೋಗ್ಯನು. ಯಾವನು ಈಶ್ವರನಲ್ಲಿ ಭಕ್ತಿಯುಳ್ಳವನೋ ಅವನಿಗೆ ಈಶ್ವರನಾಗಿರುತ್ತಾನೆ.

೬೨. ಹೀಗೆಂದು ನಾಲ್ಕು ವೇದಗಳೂ ವೇದಗಳನ್ನು ತಿಳಿದವರೂ ಸತ್ಪುರುಷರೂ ಪುರಾಣಗಳೂ ಹೇಳುತ್ತವೆ. ರಾಧೆಗೆ ಮಾಧವನು ಅಧೀನನಾಗಿರುತ್ತಾನೆಂಬುದು ವ್ಯರ್ಥವು.

೬೩. ನೀನು ತನ್ನ ಗಣಗಳಿಂದ ಸಮೇತನಾದ ಶಂಭುವನ್ನು ಜಯಿಸಿ ಬಾಣನ ಭುಜವನ್ನು ಕತ್ತರಿಸಿ ಹೆಂಡತಿಯಿಂದೊಡಗೂಡಿದ ರುಕ್ಮಿಣಿಯ ಮೊಮ್ಮಗನನ್ನು ಕರೆತಂದೆ.

೬೪. ನೀನು ಬಂದೊಡನೆ ರುಕ್ಮಿಣಿಯು ಏನೆಂದು ಹೇಳಿದಳು? ನಿನ್ನ ಮೇಲೆ ಅವಳ ಪ್ರೀತಿಯು ಮೊದಲಿನಂತೆ ಸಮನಾಗಿದ್ದಿತೇ? ಅಥವಾ ಹೆಚ್ಚಾಗಿದ್ದಿತೇ? ಮತ್ತು ನಿನ್ನಲ್ಲಿ ಗೌರವವು ಹೆಚ್ಚಾಯಿತೇ?

೬೫. ನೀನು ಕೌರವ ಪಾಂಡವ ಯುದ್ಧದ ನೆಪದಿಂದ ಕೌರವರನ್ನೆಲ್ಲ ಪಾಂಡವರಿಗೋಸ್ಕರವಾಗಿ ನಾಶಮಾಡಿದೆ. ಮತ್ತು ಅನೇಕ ರಾಜರುಗಳನ್ನೆಲ್ಲ ನಾಶಮಾಡಿದೆ. ಪರಮಾತ್ಮನಾದ ನಿನಗೆ ಸಮನಾದವರು ಇನ್ನಿಲ್ಲ.

ಸಾಕ್ಷಾನ್ಮಹೇಂದ್ರಜಾತಸ್ಯ ಕೌಂತೇಯಸ್ಯಾರ್ಜುನಸ್ಯ ಚ ।
ರಾಜಮಂಡಲಮಧ್ಯಸ್ಥೋ ಭವಾನೇವ ಹಿ ಸಾರಥಿಃ ॥ ೬೬ ॥

ತೇನ ಭಕ್ತೇನ ಶುದ್ಧೇನ ಭೀಷ್ಮೇಣ ಚ ಮಹಾತ್ಮನಾ ।
ಲಜ್ಜಿತೇನ ಕಿಮುಕ್ತಂ ತೇ ಮಹತೀಷು ಸಭಾಸು ಚ ॥ ೬೭ ॥

ದೇವೈರಪಿ ಕಥಂ ದೃಷ್ಟೋ ಬ್ರಹ್ಮೇಶಶೇಷಸಂಜ್ಞಕೈಃ ।
ಭಕ್ತಸಿಂಹೈರ್ಮೃತೈಃ ಸರ್ವೈರ್ನ ಚೋಕ್ತಂ ಕಿಂಚಿದೇವ ಸಃ ॥ ೬೮ ॥

ಯಶ್ಚಾನಿರ್ವಚನೀಯಶ್ಚ ವೇದೇಷು ಚ ಚತುರ್ಷು ಚ ।
ಪುರಾಣೇಷ್ವಿತಿಹಾಸೇಷು ಪ್ರಕೃತೇಃ ಪರ ಈಶ್ವರಃ ॥ ೬೯ ॥

ನಿರ್ಗುಣಶ್ಚ ನಿರೀಹಶ್ಚ ನಿರ್ಲಿಪ್ತಃ ಸರ್ವಕರ್ಮಣಾಂ ।
ಕರ್ಮಣಾಂ ಸಾಕ್ಷಿರೂಪಶ್ಚ ಭಕ್ತಾನುಗ್ರಹವಿಗ್ರಹಃ ॥ ೭೦ ॥

---

೬೬. ಸಾಕ್ಷಾತ್ ಮಹೇಂದ್ರನಿಂದ ಹುಟ್ಟಿದ ಕುಂತಿಯ ಮಗನಾದ ಅರ್ಜುನನಿಗೆ ಸಕಲ ರಾಜಸಮೂಹ ಮಧ್ಯದಲ್ಲಿ ನೀನೇ ಸಾರಥಿಯಾದೆ.

೬೭. ಮಹಾತ್ಮನೂ ಶುದ್ಧನೂ ಭಕ್ತನೂ ಆದ ಭೀಷ್ಮನು ನಾಚಿಕೆಗೊಂಡು ಆ ದೊಡ್ಡ ಸಭೆಯಲ್ಲಿ ಏನೆಂದು ಹೇಳಿದನು ?

೬೮. ಬ್ರಹ್ಮ ಈಶ ಶೇಷ ಮುಂತಾದ ದೇವತೆಗಳಿಂದ ನೀನು ಹೇಗೆ ನೋಡಲ್ಪಟ್ಟವನಾದೆ? ಯುದ್ಧದಲ್ಲಿ ಮೃತರಾದ ನಿನ್ನ ಸಮಸ್ತ ಭಕ್ತಶ್ರೇಷ್ಠರು ಏನೊಂದು ಮಾತನ್ನೂ ಹೇಳಲಿಲ್ಲವೇ ?

೬೯–೭೦. ಯಾವನು ನಾಲ್ಕುವೇದಗಳಲ್ಲಿಯೂ ಪುರಾಣಗಳಲ್ಲಿಯೂ ಇತಿಹಾಸಗಳಲ್ಲಿಯೂನಿಶ್ಚಯವಾಗಿ ಹೇಳಲಸಾಧ್ಯನಾಗಿರುವನೋ ಪ್ರಕೃತಿಗಿಂತಲೂ ಶ್ರೇಷ್ಠನೂ ಈಶ್ವರನೂ ಆಗಿರುವನೋ ನಿರ್ಗುಣನೂ ಆಶೆಯಿಲ್ಲದವನೂ ಸಮಸ್ತವಾದ ಕರ್ಮಗಳ ಸಂಗವಿಲ್ಲದವನೂ ಜನರು ಮಾಡುವ ಪಾಪ ಪುಣ್ಯ ಕರ್ಮಗಳಿಗೆ ಸಾಕ್ಷಿಯೂ ಭಕ್ತರಿಗೆ ಅನುಗ್ರಹ ಮಾಡುವುದಕ್ಕಾಗಿ ಶರೀರವನ್ನು ಧರಿಸಿದವನೂ ಆಗಿರುವನೋ ಉತ್ತಮವಾದ ಬ್ರಹ್ಮರೂಪನೂ ಉತ್ತಮವಾದ ಜ್ಯೋತಿರೂಪನೂ ಉತ್ತಮ

ಪರಂ ಬ್ರಹ್ಮ ಪರಂ ಜ್ಯೋತಿಃ ಪರಮೇಶಃ ಪರಾತ್ಪರಃ ।
ಪರಮಾತ್ಮಾ ಚ ಸರ್ವೇಷಾಂ ಸೂತೋ ನರರಥಸ್ಥಿತಃ ॥ ೭೦ ॥

ತ್ವಯಾ ಕುಬ್ಜಾ ಚ ಸಂಭುಕ್ತಾ ವೃದ್ಧಾ ಕ್ಷತ್ರಿಯಕಾಮಿನೀ ।
ಅಪುತ್ರಿಣೀ ಚಾಧಿಕಾಂಗೀ ಯೂನಾ ಸ್ಪೃಶ್ಯಾ ಚ ಪ್ರಾಕ್ತನಾತ್ ॥ ೭೨ ॥

ತ್ವಯಾ ಚ ನಿಹತಃ ಕಂಸೋ ಮಾತುಲಃ ಕೇನ ಹೇತುನಾ ।
ಆಯಾಸ್ಯತೀತಿ ಕೃತ್ವಾ ಚ ಗತಂ ನ ಪುನರಾಗತಂ ॥ ೭೩ ॥

ನಿಹತ್ಯ ಯಾದವಾನ್ಸರ್ವಾನ್ನಿಭಜ್ಯ ದ್ವಾರಕಾಂ ಪುರೀಂ ।
ತ್ವಾಂ ನಿಬಧ್ಯ ಸಮಾನೇತುಮೀಶ್ವರೀ ವಾರಿತಾ ಜನೈಃ ॥ ೭೪ ॥

ಇತ್ಯುಕ್ತ್ವಾ ರಾಧಿಕಾ ದೇವೀ ಭೃಶಮುಚ್ಚೈ ರುರೋದ ಸಾ ।
ಮೂರ್ಛಾಂ ಸಂಪ್ರಾಪ ಸಹಸಾ ನಿರ್ನಿಶ್ವಾಸಾ ಬಭೂವ ಹ ॥ ೭೫ ॥

---

ಈಶ್ವರನೂ ಉತ್ತಮರಾದವರಿಗೆ ಉತ್ತಮನೂ ಸಕಲರಿಗೂ ಪರಮಾತ್ಮನಾಗಿರುವನೋ ಅವನು ಮಾನವನ ರಥದಲ್ಲಿದ್ದುಕೊಂಡು ಮಾನವನಿಗೆ ಸಾರಥಿಯಾಗಿರುವನು.

೭೨. ವೃದ್ಧಳೂ ಕ್ಷತ್ರಿಯನ ಕಾಮಿನಿಯೂ ಮಕ್ಕಳಿಲ್ಲದವಳೂ ಆದ ಪೂರ್ವ ಜನ್ಮದ ಕರ್ಮದಿಂದ ವ್ಯಾಧಿಯಿಂದ ಕೂಡಿದ ಶರೀರವುಳ್ಳ ಯುವಕನಿಂದ ಮುಟ್ಟಲ ಯೋಗ್ಯ ಳಾದ ಕುಬ್ಜೆಯನ್ನು ನೀನು ಅನುಭವಿಸಿದೆ.

೭೩. ಸೋದರಮಾವನಾದ ಕಂಸನನ್ನು ಯಾವ ಕಾರಣದಿಂದ ನೀನು ಕೊಂದೆ? ಮತ್ತೆ ಬರುತ್ತಾನೆಂದು ತಿಳಿದಿದ್ದರೆ ಹೊರಟುಹೋದವನು ಪುನಃ ಬರಲೇ ಇಲ್ಲ.

೭೪. ಸಕಲ ಯಾದವರನ್ನೂ ಕೊಂದು ದ್ವಾರಕಾಪಟ್ಟಣವನ್ನು ಪುಡಿಮಾಡಿ ನಿನ್ನನ್ನು ಕಟ್ಟಿತರಲು ಈಶ್ವರಿಯು ಸಮರ್ಥಳಾಗಿದ್ದರೂ ಕೂಡ ಜನರಿಂದ ತಡೆಯಲ್ಪಟ್ಟಳು.

೭೫. ರಾಧಿಕಾ ದೇವಿಯು ಈ ಪ್ರಕಾರವಾಗಿ ಹೇಳಿ ಸುಮ್ಮನೆ ಗಟ್ಟಿಯಾಗಿ ಅತ್ತಳು. ಕೂಡಲೆ ಮೂರ್ಛೆಯನ್ನು ಹೊಂದಿದಳು. ಮತ್ತು ಉಸಿರಾಡದವಳಾದಳು.

ಗೋಪ್ಯೋ ಗವಾಕ್ಷಜಾಲಸ್ಥಾಃ ಶುಶ್ರುವುರ್ದದೃಶುಸ್ತಥಾ ।
ದೃಷ್ಟ್ವಾ ತಾಮಾಯಯುಃ ಸರ್ವಾ ಊಚೂ ರಾಧಾ ಮೃತೇತಿ ಚ ॥ ೭೬ ॥

ಉಚ್ಚೈಸ್ತಾ ರುರುದುಃ ಸರ್ವಾಃ ಕ್ರೋಡೇ ಕೃತ್ವಾ ಚ ರಾಧಿಕಾಂ ।
ಊಚುಸ್ತಾ ರಕ್ಷ ರಕ್ಷೇತಿ ಹರೇ ನರಹರೇ ಪ್ರಭೋ ॥ ೭೭ ॥

॥ ಗೋಪ್ಯ ಊಚುಃ ॥

ಕಿಂ ಕೃತಂ ಕಿಂ ಕೃತಂ ಕೃಷ್ಣ ತ್ವಯಾ ರಾಧಾ ಮೃತಾ ಚ ನಃ ।
ರಾಧಾಂ ಜೀವಯ ಭದ್ರಂ ತೇ ಯಾಸ್ಯಾಮಃ ಕಾನನಂ ವಯಂ ॥ ೭೮ ॥

ಅನ್ಯಥಾ ಸ್ತ್ರೀವಧಂ ತುಭ್ಯಂ ದಾಸ್ಯಾಮಃ ಸರ್ವಯೋಷಿತಃ ॥ ೭೯ ॥

ಗೋಪೀನಾಂ ವಚನಂ ಶ್ರುತ್ವಾ ರಾಧಿಕಾಯಾಶ್ಚ ಮಾಧವಃ ।
ಉವಾಚ ಜೀವಯಾಮಾಸ ಸುಧಾದೃಷ್ಟ್ಯಾ ಚ ನಾರದ ॥ ೮೦ ॥

---

೭೬. ಗೋಪಿಯರು ಕಿಟಕಿಯ ಕಿಂಡಿಗಳಿಂದ ನೋಡಿದರು. ರಾಧೆಯು ಮೂರ್ಛೆಗೊಂಡುದನ್ನು ಕಂಡು ಅವರೆಲ್ಲರೂ ಬಂದರು. ಮತ್ತು ರಾಧೆಯು ಸತ್ತು ಹೋದಳೆಂದುಕೊಂಡರು.

೭೭. ಅವರೆಲ್ಲರೂ ರಾಧೆಯನ್ನು ಅಪ್ಪಿಕೊಂಡು ಗಟ್ಟಿಯಾಗಿ ಅತ್ತರು. ಮತ್ತು ಎಲೈ ಹರಿಯೇ! ನರಸಿಂಹನೇ! ಪ್ರಭುವೇ! ಕಾಪಾಡು ಕಾಪಾಡು ಎಂಬುದಾಗಿ ಹೇಳಿದರು.

೭೮. ಗೋಪಿಯರು ಹೇಳಿದರು:—ಎಲೈ ಕೃಷ್ಣನೇ! ಏನು ಮಾಡಿದೆ? ಏನು ಮಾಡಿದೆ? ನಮ್ಮ ರಾಧೆಯು ಸತ್ತುಹೋದಳು. ರಾಧೆಯನ್ನು ಬದುಕಿಸು, ನಿನಗೆ ಮಂಗಳವಾಗಲಿ, ನಾವೆಲ್ಲರೂ ಕಾಡಿಗೆ ಹೋಗುತ್ತೇವೆ.

೭೯. ಇಲ್ಲದಿದ್ದರೆ ಸ್ತ್ರೀವಧೆಯ ದೋಷವನ್ನು ಸ್ತ್ರೀಯರಾದ ನಾವೆಲ್ಲರೂ ನಿನಗೆ ಕೊಡುತ್ತೇವೆ.

೮೦. ಗೋಪಿಯರಾಡಿದುದನ್ನೂ ರಾಧೆಯು ಹೇಳಿದ ಮಾತನ್ನೂ ಕೇಳಿ ಮಾಧವನು ಅಮೃತದೃಷ್ಟಿಯಿಂದ ರಾಧೆಯನ್ನು ಬದುಕಿಸಿದನು ಮತ್ತು ಈ ಮುಂದೆ ಹೇಳುವ ರೀತಿಯಲ್ಲಿ ಮಾತನಾಡಿದನು.

ಉತ್ತಸ್ಥೌ ರಾಧಿಕಾ ದೇವೀ ರುದಂತೀ ಮಾನಿನೀ ಸತೀ ।
ಗೋಪ್ಯಸ್ತಾಂ ಬೋಧಯಾಮಾಸುಃ ಕ್ರೋಡೇ ಕೃತ್ವಾ ಪುನಃ ಪುನಃ ॥ ೮೧ ॥

॥ ಶ್ರೀ ಕೃಷ್ಣ ಉವಾಚ ॥

ಶೃಣು ರಾಧೇ ಪ್ರವಕ್ಷ್ಯಾಮಿ ಜ್ಞಾನಮಾಧ್ಯಾತ್ಮಿಕಂ ಪರಂ ।
ಯಚ್ಛ್ರುತ್ವಾ ಹಲಿಕೋ ಮೂರ್ಖಃ ಸದ್ಯೋ ಭವತಿ ಪಂಡಿತಃ ॥ ೮೨ ॥

ಜಾತ್ಯಾಹಂ ಜಗತಾಂ ಸ್ವಾಮೀ ಕಿಂ ರುಕ್ಮಿಣ್ಯಾದಿಯೋಷಿತಾಂ ।
ಕಾರ್ಯಕಾರಣರೂಪೋಽಹಂ ವ್ಯಕ್ತೋ ರಾಧೇ ಪೃಥಕ್‌ಪೃಥಕ್ ॥ ೮೩ ॥

ಏಕಾತ್ಮಾನಂ ಚ ವಿಶ್ವೇಷಾಂ ಜಾತ್ಯಾ ಜ್ಯೋತಿರ್ಮಯಃ ಸ್ವಯಂ ।
ಸರ್ವಪ್ರಾಣಿಷು ವ್ಯಕ್ತ್ಯಾ ಚಾಪ್ಯಾಬ್ರಹ್ಮಾದಿತೃಣಾದಿಷು ॥ ೮೪ ॥

ಏಕಸ್ಮಿಂಶ್ಚ ಭುಕ್ತವತೀ ನ ತುಷ್ಟೋಽನ್ಯೋ ಜನಸ್ತಥಾ ।
ಮಯ್ಯಾತ್ಮನಿ ಗತೇಽಪ್ಯೇಕೋ ಮೃತೋಽಪ್ಯನ್ಯಃ ಸುಜೀವತಿ ॥ ೮೫ ॥

---

೮೧. ಮಾನವತಿಯಾದ ರಾಧಾದೇವಿಯು ಅಳುತ್ತ ಮೇಲಕ್ಕೆದ್ದಳು. ಗೋಪಿಯರು ಅವಳನ್ನಪ್ಪಿಕೊಂಡು ಮತ್ತೆ ಮತ್ತೆ ಸಮಾಧಾನಪಡಿಸಿದರು.

೮೨. ಶ್ರೀಕೃಷ್ಣನು ಹೇಳುತ್ತಾನೆ:—ಎಲೈ ರಾಧೆಯೇ! ಆತ್ಮಜ್ಞಾನ ವಿಷಯವನ್ನು ಹೇಳುತ್ತೇನೆ ಕೇಳುವವಳಾಗು. ಯಾವ ಈ ವಿಷಯವನ್ನ ಕೇಳುವುದರಿಂದ ಮೂರ್ಖನೂ ಕೂಡಲೇ ಪಂಡಿತನಾಗುತ್ತಾನೆ.

೮೩. ನಾನು ಸ್ವಾಭಾವಿಕವಾಗಿ ಸಕಲ ಜಗತ್ತಿಗೂ ಯಜಮಾನನು. ರುಕ್ಮಿಣಿಯೇ ಮುಂತಾದ ಸ್ತ್ರೀಯರಿಗೆ ಮಾತ್ರವೇನು? ರಾಧೆಯೇ! ನಾನು ಕಾರ್ಯ ರೂಪದಿಂದಲೂ ಕಾರಣ ರೂಪದಿಂದಲೂ ಬೇರೆ ಬೇರೆಯಾಗಿ ಕಾಣಿಸುತ್ತಿರುವೆನು.

೮೪. ಸ್ವಭಾವದಿಂದ ತೇಜೋಮಯನಾದ ನಾನು ನನ್ನ ಆತ್ಮವನ್ನು ಜಗತ್ತಿನ ಸಕಲ ಪ್ರಾಣಿಗಳಲ್ಲಿಯೂ ಬ್ರಹ್ಮನಿಂದ ಹುಲ್ಲುಕಡ್ಡಿಯ ವರೆಗಿರುವ ಸಕಲ ವಸ್ತುಗಳಲ್ಲಿಯೂ ಪ್ರಕಾಶಪಡಿಸುತ್ತಿರುವೆನು.

೮೫. ಜನರಲ್ಲಿ ಒಬ್ಬನು ಸುಖವನ್ನನುಭವಿಸುತ್ತಿದ್ದರೆ ಮತ್ತೊಬ್ಬನು ದುಃಖವನ್ನನುಭವಿಸುತ್ತಿರುತ್ತಾನೆ. ಆತ್ಮನಾದ ನಾನು ಹೊರಟುಹೋದರೆ ಅವನು ಸಾಯುತ್ತಾನೆ. ಇನ್ನೊಬ್ಬನು ಬದುಕಿರುತ್ತಾನೆ.

ಜಾತ್ಯಾಹಂ ಕೃಷ್ಣರೂಪಶ್ಚ ಪರಿಪೂರ್ಣತಮಃ ಸ್ವಯಂ ।
ಗೋಲೋಕೇ ಗೋಕುಲೇ ರಮ್ಯೇ ಕ್ಷೇತ್ರೇ ವೃಂದಾವನೇ ವನೇ ॥ ೮೬ ॥

ದ್ವಿಭುಜೋ ಗೋಪವೇಷಶ್ಚ ಸ್ವಯಂ ರಾಧಾಪತೀ ಶಿಶುಃ ।
ಗೋಪಾಲೈರ್ಗೋಪಿಕಾಭಿಶ್ಚ ಸಹಿತಃ ಕಾಮಧೇನುಭಿಃ ॥ ೮೭ ॥

ಚತುರ್ಭುಜೋಽಹಂ ವೈಕುಂಠೇ ದ್ವಿಧಾರೂಪಃ ಸನಾತನಃ ।
ಲಕ್ಷ್ಮೀಸರಸ್ವತೀಕಾಂತಃ ಸತತಂ ಶಾಂತವಿಗ್ರಹಃ ॥ ೮೮ ॥

ಯನ್ಮಾನಸೇ ಸಿಂಧುಕನ್ಯಾ ಮರ್ತ್ಯಲಕ್ಷ್ಮೀಪತಿರ್ಭುವಿ ।
ಶ್ವೇತದ್ವೀಪೇ ಚ ಕ್ಷೀರೋದೇ ತತ್ರಾಪಿ ಚ ಚತುರ್ಭುಜಃ ॥ ೮೯ ॥

ಅಹಂ ನಾರಾಯಣರ್ಷಿಶ್ಚ ನರೋ ಧರ್ಮಃ ಸನಾತನಃ ।
ಧರ್ಮವಕ್ತಾ ಚ ಧರ್ಮಿಷ್ಠೋ ಧರ್ಮವರ್ತ್ಮಪ್ರವರ್ತಕಃ ॥ ೯೦ ॥

---

೮೬–೮೭. ಜನ್ಮದಿಂದ ಕೃಷ್ಣರೂಪನಾದ ನಾನು ಅತ್ಯಂತ ಪರಿಪೂರ್ಣ ರೂಪನಾಗಿರುವೆನು. ಗೋಲೋಕದಲ್ಲಿಯೂ ರಮ್ಯಕ್ಷೇತ್ರದಲ್ಲಿಯೂ ವೃಂದಾವನ ವೆಂಬ ಕಾಡಿನಲ್ಲಿಯೂ ಕೂಡ ಎರಡು ತೋಳುಗಳುಳ್ಳವನಾಗಿ ಗೋಪರ ವೇಷವನು ಧರಿಸಿದವನಾಗಿ ನಾನೇ ರಾಧೆಯ ಪತಿಯಾಗಿಯೂ ಗೋಪರಿಂದಲೂ ಗೋಪಿಯ ರಿಂದಲೂ ಕೂಡಿದವನಾಗಿ ಶಿಶುರೂಪದಿಂದ ಹಸುಗಳಿಂದ ಕೂಡಿದವನಾಗಿಯೂ ಇರುವೆನು.

೮೮. ವೈಕುಂಠದಲ್ಲಿ ನಾನು ನಾಲ್ಕು ತೋಳುಗಳುಳ್ಳವನಾಗಿಯೂ ಲಕ್ಷ್ಮೀ ಪತಿ ಮತ್ತು ಸರಸ್ವತಿಯ ಪತಿಯೆಂಬ ಶಾಶ್ವತವಾದ ಎರಡು ರೂಪವುಳ್ಳವನೂ ಶಾಂತವಾದ ಶರೀರವುಳ್ಳವನೂ ಆಗಿರುವೆನು.

೮೯. ಮಾನಸಸರೋವರದಲ್ಲಿಯೂ ಶ್ವೇತದ್ವೀಪದಲ್ಲಿಯೂ ಕ್ಷೀರಸಮುದ್ರ ದಲ್ಲಿಯೂ ನಾಲ್ಕು ತೋಳುಳ್ಳವನಾಗಿ ಲಕ್ಷ್ಮೀಪತಿಯೂ ಭೂಲೋಕದಲ್ಲಿ ಮಾನವ ಲಕ್ಷ್ಮಿಯ ಪತಿಯಾಗಿಯೂ ಇರುವೆನು.

೯೦. ನಾನು ನಾರಾಯಣಮುನಿಯೂ ನರನೂ ಸನಾತನ ಧರ್ಮರೂಪನೂ ಧರ್ಮವನ್ನು ಹೇಳುವವನೂ ಧರ್ಮನಿರತನೂ ಧರ್ಮಮಾರ್ಗದಲ್ಲಿ ಹೋಗುವವನೂ ಆಗಿರುವೆನು.

ಶಾಂತಿರ್ಲಕ್ಷ್ಮೀಸ್ವರೂಪಾ ಚ ಧರ್ಮಿಷ್ಠಾ ಚ ಪತಿವ್ರತಾ ।
ಅತ್ರ ತಸ್ಯಾಃ ಪತಿರಹಂ ಪುಣ್ಯಕ್ಷೇತ್ರೇ ಚ ಭಾರತೇ ॥ ೯೧ ॥

ಸಿದ್ಧೇಶಃ ಸಿದ್ಧಿದಃ ಸಾಕ್ಷಾತ್ಕಪಿಲೋಽಹಂ ಸತೀಪತಿಃ ।
ನಾನಾರೂಪಧರೋಽಹಂ ಚ ವ್ಯಕ್ತಿಭೇದೇನ ಸುಂದರಿ ॥ ೯೨ ॥

ಅಹಂ ಚತುರ್ಭುಜಃ ಶಶದ್ದ್ವಾರ್ವತ್ಯಾಂ ರುಕ್ಮಿಣೀಪತಿಃ ।
ಅಹಂ ಕ್ಷೀರೋದಶಾಯೀ ಚ ಸತ್ಯಭಾಮಾ ಗೃಹೇ ಶುಭೇ ॥ ೯೩ ॥

ಅನ್ಯಾಸಾಂ ಮಂದಿರೇಽಹಂ ಚ ಕಾಯವ್ಯೂಹಾತ್ಪೃಥಕ್ ಪೃಥಕ್ ।
ಅಹಂ ನಾರಾಯಣರ್ಷಿಶ್ಚ ಫಾಲ್ಗುನಸ್ಯಾಸ್ಯ ಸಾರಥಿಃ ॥ ೯೪ ॥

ಸ ನರರ್ಷಿರ್ಧರ್ಮಪುತ್ರೋ ಮದಂಶೋ ಬಲವಾನ್ಭುವಿ ।
ತಪಸಾರಾಧಿತಸ್ತೇನ ಸಾರಥ್ಯೇಽಹಂ ಚ ಪುಷ್ಕರೇ ॥ ೯೫ ॥

---

೯೧. ಈ ಪುಣ್ಯಕ್ಷೇತ್ರವಾದ ಭಾರತದಲ್ಲಿ ಶಾಂತಿಯು ಲಕ್ಷ್ಮಿಯ ರೂಪದಿಂದಲೂ ಧರ್ಮದಲ್ಲಿ ಆಸಕ್ತಿಯಿಂದಲೂ ಪಾತಿವ್ರತ್ಯದಿಂದಲೂ ನೆಲಸಿರುವಳು. ಅವಳಿಗೆ ನಾನು ಪತಿಯಾಗಿರುವೆನು.

೯೨. ಎಲೈ ಸುಂದರಿಯೇ! ನಾನು ಸಿದ್ಧೇಶನೂ ಸಿದ್ಧಿಯನ್ನು ಕೊಡುವವನೂ ಸಾಕ್ಷಾತ್ ಕಪಿಲಮುನಿಯೂ ಸತೀಪತಿಯೂ ಆಗಿರುವೆನು. ನಾನು ಒಬ್ಬನೇ ಆದರೂ ವ್ಯಕ್ತಿಭೇದದಿಂದ ನಾನಾ ರೂಪಗಳನ್ನು ಧರಿಸಿದವನಾಗಿರುವೆನು.

೯೩. ನಾನು ನಾಲ್ಕು ತೋಳುಗಳುಳ್ಳವನಾಗಿ ದ್ವಾರಾವತಿಯಲ್ಲಿ ರುಕ್ಮಿಣಿಯ ಪತಿಯೆನಿಸಿಕೊಳ್ಳುವೆನು. ನಾನೇ ಕ್ಷೀರಸಮುದ್ರದಲ್ಲಿ ಮಲಗಿರುವವನೂ ಆಗಿರುವೆನು. ಮಂಗಳಕರವಾದ ಸತ್ಯಭಾಮೆಯ ಮನೆಯಲ್ಲಿಯೂ ಇರುವೆನು.

೯೪. ಮತ್ತು ನಾನು ಇನ್ನೂ ಇತರರ ಮನೆಯಲ್ಲಿ ಒಂದೇ ಸಮಯದಲ್ಲಿ ಅನೇಕ ಶರೀರಗಳನ್ನು ಹೊಂದಿ ಬೇರೆಬೇರೆಯಾಗಿರುವೆನು. ನಾನು ನಾರಾಯಣ ಋಷಿಯೂ ಮತ್ತು ಅರ್ಜುನನ ಸಾರಥಿಯೂ ಆಗಿರುವೆನು.

೯೫ ಮಾನವಶ್ರೇಷ್ಠನಾದ ಧರ್ಮಪುತ್ರನು ನನ್ನ ಅಂಶದಿಂದ ಭೂಮಿಯಲ್ಲಿ ಹುಟ್ಟಿ ಬಲಿಷ್ಠನಾಗಿರುವನು. ಅವನು ಪುಷ್ಕರಕ್ಷೇತ್ರದಲ್ಲಿ ನನ್ನನ್ನು ಸಾರಥಿಯನ್ನಾಗಿ ಮಾಡಿಕೊಳ್ಳಲು ತಪಸ್ಸಿನಿಂದ ನನ್ನನ್ನು ಸೇವಿಸಿದನು.

ಯಥಾ ತ್ವಂ ರಾಧಿಕಾದೇವೀ ಗೋಲೋಕೇ ಗೋಕುಲೇ ತಥಾ ।
ವೈಕುಂಠೇ ಚ ಮಹಾಲಕ್ಷ್ಮೀರ್ಭವತೀ ಚ ಸರಸ್ವತೀ ॥ ೯೬ ॥

ಭವತೀ ಮರ್ತ್ಯಲಕ್ಷ್ಮೀಶ್ಚ ಕ್ಷೀರೋದಶಾಯಿನಃ ಪ್ರಿಯಾ ।
ಧರ್ಮಪುತ್ರವಧೂಸ್ತ್ವಂ ಚ ಶಾಂತಿರ್ಲಕ್ಷ್ಮೀಃ ಸ್ವರೂಪಿಣೀ ॥ ೯೭ ॥

ಕಪಿಲಸ್ಯ ಪ್ರಿಯಾ ಕಾಂತಾ ಭಾರತೇ ಭಾರತೀ ಸತೀ ।
ತ್ವಂ ಸೀತಾ ಮಿಥಿಲಾಯಾಂ ಚ ತ್ವಚ್ಛಾಯಾ ದ್ರೌಪದೀ ಸತೀ ॥ ೯೮ ॥

ದ್ವಾರವತ್ಯಾಂ ಮಹಾಲಕ್ಷ್ಮೀರ್ಭವತೀ ರುಕ್ಮಿಣೀ ಸತೀ ।
ಪಂಚಾನಾಂ ಪಾಂಡವಾನಾಂ ಚ ಭವತೀ ಕಲಯಾ ಪ್ರಿಯಾ ॥ ೯೯ ॥

ರಾವಣೇನ ಹೃತಾ ತ್ವಂ ಚ ತ್ವಂ ಚ ರಾಮಸ್ಯ ಕಾಮಿನೀ ।
ನಾನಾರೂಪಾ ಯಥಾ ತ್ವಂ ಚ ಛಾಯಯಾ ಕಲಯಾ ಸತೀ ॥ ೧೦೦ ॥

---

೯೬. ಗೋಲೋಕದಲ್ಲಿ ನೀನು ಹೇಗೆ ರಾಧಾದೇವಿಯಾಗಿರುವೆಯೋ ಹಾಗೆಯೇ ಗೋಕುಲದಲ್ಲಿಯೂ ಇರುವೆ. ನೀನೇ ವೈಕುಂಠದಲ್ಲಿ ಮಹಾಲಕ್ಷ್ಮಿಯೂ ಸರಸ್ವತಿಯೂ ಆಗಿರುವೆ.

೯೭. ನೀನೇ ಮಾನವಲೋಕದ ಕ್ಷೀರಸಮುದ್ರದಲ್ಲಿ ಮಲಗಿರುವ ಶ್ರೀವಿಷ್ಣುವಿನ ಪ್ರಿಯೆಯೂ ಆಗಿರುವೆ. ನೀನೇ ಧರ್ಮಪುತ್ರನ ಪತ್ನಿಯೂ ಶಾಂತಿರೂಪಳೂ ಲಕ್ಷ್ಮೀರೂಪಳೂ ಆಗಿರುವೆ.

೯೮. ಭಾರತದಲ್ಲಿ ಕಪಿಲಮುನಿಯ ಪ್ರಿಯಪತ್ನಿಯೂ ಸರಸ್ವತಿಯೂ ಸತಿಯೂ ನೀನೇ ಆಗಿರುವೆ. ನೀನೇ ಮಿಥಿಲಾನಗರದಲ್ಲಿ ಸೀತೆಯೆಂದು ಪ್ರಸಿದ್ಧಿ ಪಡೆದಿರುವೆ. ನಿನ್ನಛಾಯೆಯೇ ಪ್ರತಿವ್ರತೆಯಾದ ದ್ರೌಪದಿಯು.

೯೯. ಸಾಕ್ಷಾತ್ ಮಹಾಲಕ್ಷ್ಮಿಯಾದ ನೀನು ದ್ವಾರಕಾಪಟ್ಟಣದಲ್ಲಿ ಪತಿವ್ರತೆಯಾದ ರುಕ್ಮಿಣಿಯೆನಿಸಿರುವೆ. ನೀನು ಕಲೆಯಿಂದ ಪಂಚಪಾಂಡವರಿಗೆ ಪ್ರಿಯೆಯಾಗಿರುವೆ.

೧೦೦–೧೦೧. ನೀನೇ ರಾವಣನಿಂದ ಅಪಹರಿಸಲ್ಪಟ್ಟ ಶ್ರೀರಾಮಚಂದ್ರನ ಪ್ರಿಯೆಯಾದ ಸೀತೆಯು. ನೀನು ಹೇಗೆ ನಿನ್ನ ಕಲೆಯಿಂದಲೂ ಛಾಯೆಯಿಂದಲೂ

ನಾನಾರೂಪಸ್ತಥಾಹಂ ಚ ಸಾಂಶೇನ ಕಲಯಾ ತಥಾ ।
ಪರಿಪೂರ್ಣತಮೋಽಹಂ ಚ ಪರಮಾತ್ಮಾ ಪರಾತ್ಪರಃ ॥ ೧೦೧ ॥

ಇತಿ ತೇ ಕಥಿತಂ ಸರ್ವಮಾಧ್ಯಾತ್ಮಿಕಮಿದಂ ಸತಿ ।
ರಾಧೇ ಸರ್ವಾಪರಾಧಂ ಮೇ ಕ್ಷಮಸ್ವ ಪರಮೇಶ್ವರಿ ॥ ೧೦೨ ॥

ಶ್ರೀಕೃಷ್ಣವಚನಂ ಶ್ರುತ್ವಾ ಪರಿತುಷ್ಟಾ ಚ ರಾಧಿಕಾ ।
ಪರಿತುಷ್ಟಾಶ್ಚ ಗೋಪ್ಯಶ್ಚ ಪ್ರಣೇಮುಃ ಪರಮೇಶ್ವರಂ ॥ ೧೦೩ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಷಡ್ವಿಂಶತ್ಯಧಿಕಶತತಮೋಽಧ್ಯಾಯಃ ॥

---

ನಾನಾ ರೂಪವನ್ನು ಹೊಂದಿರುವೆಯೋ ಹಾಗೆ ನಾನೂಕೂಡ ನನ್ನ ಅಂಶದಿಂದಲೂ ಕಲೆಯಿಂದಲೂ ನಾನಾ ರೂಪಗಳನ್ನು ಹೊಂದಿರುವೆನು. ನಾನಾದರೋ ಅತ್ಯಂತ ಪರಿಪೂರ್ಣನೂ ಪರಾತ್ಪರನೂ ಆದ ಪರಮಾತ್ಮನಾಗಿರುವೆನು.

೧೦೨. ಎಲೈ ಪರಮೇಶ್ವರಿಯಾದ ರಾಧೆಯೇ ! ಈ ಪ್ರಕಾರವಾಗಿ ಈ ಆತ್ಮ ವಿಚಾರ ವಿಷಯವನ್ನು ನಿನಗೆ ತಿಳಿಸಿರುವೆನು. ನನ್ನ ಸಕಲವಿಧವಾದ ತಪ್ಪುಗಳನ್ನೂ ನೀನು ಕ್ಷಮಿಸುವವಳಾಗು.

೧೦೩. ಶ್ರೀಕೃಷ್ಣನು ಹೇಳಿದ ಮಾತನ್ನು ಕೇಳಿ ರಾಧೆಯು ಸಂತೋಷ ಗೊಂಡಳು ಗೋಪಿಯರೂ ಕೂಡ ಸಂತೋಷಗೊಂಡವರಾಗಿ ಪರಮೇಶ್ವರನಾದ ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿದರು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮ ಖಂಡದ
ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿ ನೂರ
ಇಪ್ಪತ್ತಾರನೇ ಅಧ್ಯಾಯವು ಸಮಾಪ್ತವಾದುದು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ||

|| ನಾರಾಯಣ ಉವಾಚ ||

ಶ್ರೀ ಕೃಷ್ಣವಚನಂ ಶ್ರುತ್ವಾ ಪ್ರಹೃಷ್ಟಾ ಗೋಪಿಕಾ ಮುದಾ ।
ಮಂದಿರಂ ಪ್ರಯಯುಃ ಸರ್ವಾಃ ಪ್ರಣಮ್ಯ ರಾಧಿಕಾಂ ಪ್ರಭುಂ || ೧ ||

ರಾಧಾಶೃಂಗಾರಭಾವಂ ಚ ಕಲಾಷೋಡಶಪೂರ್ವಕಂ ।
ಚಕಾರ ಸಸ್ಮಿತಾ ಸಾಧ್ವೀ ವಕ್ರಚಂಚಲಲೋಚನಾ || ೨ ||

ದತ್ವಾ ಚ ಚಂದನಂ ಮಾಲ್ಯಂ ಸ್ವಾಮಿನೋ ಪುನರೇವ ಚ ।
ರಹಸ್ಯಂ ಚ ಪರೀಹಾಸ್ಯಂ ಪುನರೇವ ಚಕಾರ ಸಃ || ೩ ||

---

### ನೂರ ಇಪ್ಪತೇಳನೆಯ ಅಧ್ಯಾಯವು

೧. ನಾರಾಯಣನು ಹೇಳುತ್ತಾನೆ :— ಶ್ರೀಕೃಷ್ಣನ ಮಾತನ್ನು ಕೇಳಿ ಸಂತೋಷಗೊಂಡ ಗೋಪಿಯರು ಆನಂದದಿಂದ ರಾಧೆಗೂ ಶ್ರೀಕೃಷ್ಣನಿಗೂ ನಮಸ್ಕಾರವನ್ನು ಮಾಡಿ ಎಲ್ಲರೂ ತಮ್ಮತಮ್ಮ ಮನೆಗಳಿಗೆ ಹೊರಟು ಹೋದರು.

೨. ರಾಧೆಯು ವಕ್ರವಾಗಿಯೂ ಚಂಚಲವಾಗಿಯೂ ಇರುವ ಕಣ್ಣುಗಳುಳ್ಳವಳಾಗಿ ಮುಗುಳು ನಗೆಯನ್ನು ಬೀರುತ್ತ ಹದಿನಾರು ಕಲಾಪೂರ್ವಕವಾದ ಶೃಂಗಾರ ವಿಲಾಸವನ್ನು ಮಾಡಿದಳು.

೩. ಮತ್ತೆ ತನ್ನ ಸ್ವಾಮಿಯಾದ ಶ್ರೀಕೃಷ್ಣನಿಗೆ ಗಂಧವನ್ನೂ ಹೂವಿನ ಮಾಲಿಕೆಯನ್ನೂ ಕೊಟ್ಟು ಮತ್ತೆ ರಹಸ್ಯದಲ್ಲಿ ಹಾಸ್ಯವನ್ನು ಮಾಡಿದಳು.

ಆಕೃಷ್ಯ ರಾಧಿಕಾಂ ಕೃಷ್ಣಃ ಸಮಾನೀಯ ಸ್ವವಕ್ಷಸಿ ।
ಓಷ್ಠಾಧರಂ ಕಪೋಲಂ ಚ ಗಂಡಯುಗ್ಮಂ ಚುಚುಂಬ ಚ ॥ ೪ ॥

ರಾಧಾ ಚುಚುಂಬ ಕೃಷ್ಣಸ್ಯ ಮುಖಚಂದ್ರಂ ಮನೋಹರಂ ।
ಚಕಾರ ಕೃಷ್ಣಂ ಪ್ರಾಣೇಶಂ ಬಾಹುಭ್ಯಾಂ ಚ ಸ್ವವಕ್ಷಸಿ ॥ ೫ ॥

ಶೃಂಗಾರಂ ಷೋಡಶವಿಧಂ ಕಾಮಶಾಸ್ತ್ರೋಕ್ತಮೀಪ್ಸಿತಂ ।
ಸ್ತ್ರೀಪುಂಸೋಸ್ತೋಷಜನಕಂ ಚಕಾರ ಭಗವಾನ್ಪ್ರಭುಃ ॥ ೬ ॥

ನಖವಿಕ್ಷತಸರ್ವಾಂಗಾ ದಶನೇನಾಧರಕ್ಷತಾ ।
ಪುಲಕಾಂಚಿತದೇಹಾ ಸಾ ತಂದ್ರಿತಾ ವಾಮನಸ್ತನೀ ॥ ೭ ॥

ಮೂರ್ಚ್ಛಿತಾ ಸುಖಸಂಭೋಗಾದ್ವಿಲಗ್ನಾ ಹತಚೇತನಾ ।
ಶ್ವಾಸಮಾತ್ರಾವಶೇಷಾ ಚ ನಿದ್ರಾಮುದ್ರಿತಲೋಚನಾ ॥ ೮ ॥

ರತಿಶೂರಾ ಕೋಮಲಾಂಗೀ ಕಾಂತವಕ್ಷಸ್ಥಲಸ್ಥಿತಾ ।
ಶೀತೇ ಸುಖೋಷ್ಣಸರ್ವಾಂಗೀ ಗ್ರೀಷ್ಮೇ ಸಾ ಸುಖಶೀತಲಾ ॥ ೯ ॥

---

೪. ಶ್ರೀಕೃಷ್ಣನು ರಾಧೆಯನ್ನು ಸೆಳೆದುಕೊಂಡು ತನ್ನ ಎದೆಗೆ ಅಪ್ಪಿಕೊಂಡು ಕೆಳತುಟಿಯನ್ನೂ ಕಪೋಲ ಪ್ರದೇಶಗಳನ್ನೂ ಚುಂಬಿಸಿದನು.

೫. ರಾಧೆಯೂ ಕೂಡ ಮನಸ್ಸನ್ನು ಸೆಳೆಯುವ ಚಂದ್ರನಿಗೆ ಸಮಾನವಾದ ಶ್ರೀಕೃಷ್ಣನ ಮುಖವನ್ನು ಚುಂಬಿಸಿದಳು. ತನ್ನ ಪ್ರಾಣೇಶನಾದ ಶ್ರೀಕೃಷ್ಣನನ್ನು ತನ್ನೆರಡುತೋಳುಗಳಿಂದಲೂ ಎದೆಗೆ ಬಿಗಿದಪ್ಪಿಕೊಂಡಳು.

೬. ಪ್ರಭುವಾದ ಪರಮಾತ್ಮನು ಸ್ತ್ರೀಪುರುಷರಿಗೆ ಸಂತೋಷವನ್ನುಂಟು ಮಾಡುವ ಕಾಮಶಾಸ್ತ್ರದಲ್ಲಿ ಹೇಳಿರುವ ಹದಿನಾರು ವಿಧವಾದ ಶೃಂಗಾರ ಭಾವವನ್ನು ಪ್ರಕಟಿಸಿದನು.

೭-೯. ಉಗುರುಗಳಿಂದ ಗಾಯಗೊಳಿಸಲ್ಪಟ್ಟ ಸಕಲ ಶರೀರವುಳ್ಳ ಹಲ್ಲು ಗಳಿಂದಮಾಡಲ್ಪಟ್ಟ ಕೆಳತುಟಿಯು ಗಾಯವುಳ್ಳ ರೋಮಾಂಚನದಿಂದ ಕೂಡಿದ ಶರೀರ ವುಳ್ಳ ಕೆಳಕ್ಕೆ ಬಾಗಿದ ಸ್ತನಗಳುಳ್ಳ ಆಲಸ್ಯಗೊಂಡ ಆ ರಾಧೆಯು ಸುಖಸಂಭೋಗ ದಿಂದ ಮೂರ್ಛೆಗೊಂಡು ಚೈತನ್ಯವಿಲ್ಲದವಳಾಗಿ ಉಸಿರುಮಾತ್ರ ಇರುವವಳೂ ನಿದ್ರೆ ಯಿಂದ ಮುಚ್ಚಿದ ಕಣ್ಣುಳ್ಳವಳೂ ತನ್ನ ಪ್ರಿಯನ ಎದೆಯಲ್ಲಿರುವವಳೂ ಶೀತಕಾಲದಲ್ಲಿ

ಶೃಂಗಾರಕಾಲೇ ಸುಖದಾ ಸಾಂದ್ರಶ್ರೋಣಿಪಯೋಧರಾ ।
ನಿತಂಬಭಾರಾ ನಂಮ್ರಾ ಚ ಪ್ರಸಂಗೇ ಸುಖದಾಯಿಕಾ ॥ ೧೦ ॥

ವಿದಗ್ಧಾರಸಿಕಾ ಶ್ರೇಷ್ಠಾ ಕಾಮುಕೀ ಚ ವರಾಂಗನಾ ।
ಸಹಸಾ ಚೇತನಂ ಪ್ರಾಪ್ಯ ಶುಶ್ರಾವ ಕೋಕಿಲಧ್ವನಿಂ ॥ ೧೧ ॥

ಶ್ರುತ್ವಾ ಪರಮಭೀತಾ ಸಾ ದೀನಾ ದೀನವಿಶಂಕಯಾ ।
ಉವಾಚ ಪರಮಾ ಸಾ ಚ ಪರಮೇಶಂ ಪರಾತ್ಪರಂ ।
ಬಾಹುಶ್ರೋಣಿಯುಗಾಭ್ಯಾಂ ಚ ನಿಬಧ್ಯ ಚ ಪುನಃಪುನಃ ॥ ೧೨ ॥

॥ ರಾಧಿಕೋವಾಚ ॥

ರಾಸಂ ಗಚ್ಛ ಮಹಾಭಾಗ ಪುಣ್ಯಂ ವೃಂದಾವನಂ ವನಂ ।
ತತ್ರ ಕ್ರೀಡಾಂ ಕರಿಷ್ಯಾಮಿ ಜಲೇನ ಚ ಸ್ಥಲೇನ ಚ ॥ ೧೩ ॥

---

ಸುಖೋಷ್ಣವಾದ ಬೇಸಿಗೆಯಕಾಲದಲ್ಲಿ ಸುಖಶೀತಲವಾದ ಸಕಲಾವಯವವುಳ್ಳ ರಾಧೆಯು ಮೂರ್ಛೆಗೊಂಡಳು.

೧೦. ಶೃಂಗಾರ ಸಮಯದಲ್ಲಿ ಸುಖವನ್ನುಂಟುಮಾಡುವವಳಾದ ದಟ್ಟವಾದ ಕಟಿಪಶ್ಚಾದ್ಭಾಗ ಮತ್ತು ಸ್ತನಗಳುಳ್ಳ ನಿತಂಬದ ಭಾರದಿಂದ ಸ್ವಲ್ಪಬಾಗಿದವಳಾದ ಸಮಯದಲ್ಲಿ ಸುಖವನ್ನು ಕೊಡುವವಳಾದ ರಾಧೆಯು ಮೈಮರೆತಳು.

೧೧ ಜಾಣೆಯೂ ರಸಿಕರಲ್ಲಿ ಶ್ರೇಷ್ಠಳೂ ಕಾಮುಕಿಯೂ ಸ್ತ್ರೀಯರಲ್ಲಿ ಉತ್ತಮಳೂ ಆದ ರಾಧೆಯು ಜಾಗ್ರತೆಯಾಗಿ ಜ್ಞಾನವನ್ನು ಪಡೆದವಳಾಗಿ ಕೋಗಿಲೆಯ ಮಧುರವಾದ ಧ್ವನಿಯನ್ನು ಕೇಳಿದಳು.

೧೨. ಅದನ್ನು ಕೇಳಿ ಬಹಳವಾಗಿ ಹೆದರಿದ ಆ ರಾಧೆಯು ದುಃಖಿತಳಾಗಿ ಇನ್ನೂ ಹೆಚ್ಚು ಸಂಕಟವುಂಟಾಗಬಹುದೆಂಬ ಸಂಶಯದಿಂದ ಪರಾತ್ಪರನೂ ಪರಮೇಶ್ವರನೂ ಆದ ಶ್ರೀಕೃಷ್ಣನನ್ನು ತೋಳುಗಳಿಂದ ಮತ್ತೆಮತ್ತೆ ಬಿಗಿದಪ್ಪಿಕೊಂಡು ಇಂತೆಂದಳು.

೧೩. ರಾಧೆಯು ಹೇಳುತ್ತಾಳೆ :—ಎಲೈ ಮಹಾತ್ಮನೇ ಪುಣ್ಯಕರವಾದ ವೃಂದಾವನವೆಂಬ ವನದಲ್ಲಿರುವ ರಾಸಮಂಡಲಕ್ಕೆ ಹೋಗುವವನಾಗು. ಅಲ್ಲಿ ನಾನು ನೀರಿನಲ್ಲಿಯೂ ನೆಲದಲ್ಲಿಯೂ ಕ್ರೀಡೆಯನ್ನು ಮಾಡುತ್ತೇನೆ.

ಪುನರಾಸ್ಯಾಮಿ ಮಲಯಂ ಸುಂದರಂ ಮಣಿಮಂದಿರಂ ।
ಅಪರಂ ಯದ್ರಹಸ್ಯಂ ವಾ ಜನ್ಮನಾ ನ ಶ್ರುತಂ ಮಯಾ || ೧೪ ||

ತತ್ರ ಯಾಮಿ ತ್ವಯಾ ಸಾರ್ಧಮಿತಿ ಮೇ ಲಾಲಸಾ ಪರಾ ।
ಪರಸ್ಪರೈಕಾಲಾಪೇನ ಪ್ರಯಯೌ ರಜನೀ ಶುಭಾ || ೧೫ ||

ಅರುಣೋದಯಕಾಲೇಪಿ ನ ತ್ಯಜೇನ್ಮಾಧವಂ ಸತೀ ।
ಮಾಧವಃ ಪ್ರೀತಿವಚಸಾ ಬೋಧಯಾಮಾಸ ಸಾಧನಾತ್ || ೧೬ ||

ಪ್ರಾತಃಕೃತ್ಯಂ ತತಃ ಕೃತ್ವಾ ಸ್ವಾರುರೋಹ ರಥಂ ಹರಿಃ ।
ಗೋಪೀಭೀ ರಾಧಯಾ ಸಾರ್ಧಂ ಶರತ್ಕಮಲಲೋಚನಃ || ೧೭ ||

ಯೋಜನಾಯತವಿಸ್ತೀರ್ಣಂ ಗೃಹೈಸ್ತ್ರಿಶತಕೋಟಿಭಿಃ ।
ಮಣೀಂದ್ರಸಾರನಿರ್ಮಾಣೈರ್ಜ್ವಲದ್ಭಿರುಪಶೋಭಿತಂ || ೧೮ ||

---

೧೪–೧೫. ಅನಂತರ ಮಲಯಪರ್ವತದ ಸುಂದರವಾದ ಮಣಿ ಮಂದಿರಕ್ಕೆ ಹೋಗುತ್ತೇನೆ. ಮತ್ತು ಇನ್ನೂ ಯಾವಸ್ಥಳವು ರಹಸ್ಯವಾಗಿದ್ದು ನಾನು ಹುಟ್ಟಿದಂದಿನಿಂದಲೂ ಕೇಳಿಯೇಇಲ್ಲವೋ ಅಲ್ಲಿಗೆ ನಿನ್ನೊಡನೆ ಹೋಗಬೇಕೆಂದು ನನಗೆ ಬಹಳ ಆಸೆಯಾಗಿದೆ. ಹೀಗೆ ಒಬ್ಬರನ್ನೊಬ್ಬರು ಕುರಿತು ಮಾತನಾಡುತ್ತಿರುವಾಗಲೇ ಆ ಶುಭಕರವಾದ ರಾತ್ರಿಯು ಕಳೆಯಿತು.

೧೬. ಪತಿವ್ರತೆಯಾದ ರಾಧೆಯು ಅರುಣೋದಯವಾದ ಕಾಲವಾದರೂ ಆವನನ್ನು ಬಿಡಲಾರದವಳಾದಳು. ಶ್ರೀಕೃಷ್ಣನು ನಿತ್ಯಕರ್ಮಗಳನ್ನು ಮಾಡಬೇಕೆಂದು ಎಚ್ಚರಿಸಿದನು.

೧೭. ಶರದೃತುವಿನ ಕಮಲದಂತೆ ಕಣ್ಣುಳ್ಳ ಹರಿಯು ಪ್ರಾತಃಕಾಲದಲ್ಲಿ ಮಾಡಬೇಕಾದ ಕರ್ಮಗಳನ್ನು ಮಾಡಿದವನಾಗಿ ಗೋಪಿಯರಿಂದಲೂ ರಾಧೆಯಿಂದಲೂ ಸಹಿತವಾಗಿ ರಥವನ್ನು ಹತ್ತಿದನು.

೧೮–೧೯. ಆ ರಥವು ಒಂದುಯೋಜನ ವಿಸ್ತಾರವುಳ್ಳದ್ದಾಗಿಯೂ ಶ್ರೇಷ್ಠವಾದ ಮಣಿಗಳಿಂದ ಮಾಡಿದ ಮುನ್ನೂರುಕೋಟಿ ಮನೆಗಳಿಂದ ಕಂಗೊಳಿಸುತ್ತಿರುವುದಾಗಿಯೂ ಇದ್ದಿತು. ಅವು ಗೋಲೋಕದಿಂದ ಬಂದುದಾಗಿಯೂ ಮನೋವೇಗದಿಂದ

ಗೋಲೋಕಾದಾಗತಂ ತತ್ರ ಮನೋಯಾಯಿ ಮನೋಹರಂ ।
ಸಹಸ್ರಚಕ್ರಸಂಯುಕ್ತಂ ಸಹಸ್ರಾಶ್ವೈಃ ಪ್ರಚಾಲಿತಂ ॥ ೧೯ ॥

ಮಣಿಸ್ತಂಭೈಸ್ತ್ರಿಕೋಟೀಭೀ ರತ್ನರಾಜಿವಿರಾಜಿತಂ ।
ಮುಕ್ತಾಮಾಣಿಕ್ಯಪರನ್ಯೈರ್ಹೀರಹಾರೈಃ ಸುಶೋಭಿತಂ ॥ ೨೦ ॥

ನಾನಾಚಿತ್ರೈರ್ವಿಚಿತ್ರೈಶ್ಚ ಶ್ವೇತಚಾಮರದರ್ಪಣೈಃ ।
ವಹ್ನಿಶುದ್ಧಾಂಶುಕೈರ್ದೀಪ್ತೈರ್ಮಾಲಾಜಾಲೈರ್ವಿಭೂಷಿತಂ ॥ ೨೧ ॥

ರತ್ನನಿರ್ಮಾಣತಲ್ಪೈಶ್ಚ ಪುಷ್ಪಚಂದನಚರ್ಚಿತಂ ।
ಸಮಾನರೂಪವೇಷೈಶ್ಚ ಗೋಪೀಲಕ್ಷೈಃ ಸಮಾವೃತಂ ॥ ೨೨ ॥

ರಥೇನ ತೇನ ಭಗವಾನ್ಪುನರ್ವೃಂದಾವನಂ ಯಯೌ ।
ತತ್ರ ಗತ್ವಾ ನಿಶಾಕಾಲೇ ವಿಜಹಾರ ಜಲೇ ಸ್ಥಲೇ ॥ ೨೩ ॥

ಶೃಂಗಾರಂ ಸುಚಿರಂ ಕೃತ್ವಾ ವನೇಷೂಪವನೇಷು ಚ ।
ರಾಧಿಕಾಂ ದರ್ಶಯಾಮಾಸ ಯಥಾ ಸರ್ವಂ ಚ ನೂತನಂ ॥ ೨೪ ॥

---

ಹೋಗತಕ್ಕುದಾಗಿಯೂ ಮನೋಹರವಾಗಿಯೂ ಸಾವಿರಚಕ್ರಗಳಿಂದ ಕೂಡಿದುದಾಗಿಯೂ ಸಾವಿರ ಕುದುರೆಗಳಿಂದ ಸೆಳೆಯಲ್ಪಡತಕ್ಕುದಾಗಿಯೂ ಇದ್ದಿತು.

೨೦–೨೨. ಮತ್ತು ರತ್ನಮಣಿಗಳಿಂದ ಮಾಡಿದ ಮೂರು ಕೋಟಿ ಕಂಬಗಳಿಂದಲೂ ರತ್ನಸಮೂಹಗಳಿಂದಲೂ ಕಂಗೊಳಿಸುತ್ತಿದ್ದಿತು. ಮುತ್ತು ಮಾಣಿಕ್ಯ ಮತ್ತು ಹೀರಕ ಇವುಗಳಿಂದ ಮಾಡಿದ ಹಾರಗಳಿಂದಲೂ ಕನ್ನಡಿಗಳಿಂದಲೂ ಅಗ್ನಿಯಂತೆ ಪರಿಶುದ್ಧವಾದ ಬಟ್ಟೆಗಳಿಂದಲೂ ಪ್ರಕಾಶಮಾನವಾದ ಮಾಲಿಕೆಗಳ ಸಮೂಹಗಳಿಂದಲೂ ವಿರಾಜಿಸುತ್ತಲಿದ್ದಿತು. ಮತ್ತು ರತ್ನಗಳಿಂದ ಮಾಡಿದ ಹಾಸಿಗೆಗಳಿಂದಲೂ ಒಂದೇವಿಧವಾದ ರೂಪ ಮತ್ತು ವೇಷವುಳ್ಳ ಒಂದು ಲಕ್ಷಗೋಪಿಯರಿಂದ ಕೂಡಿದಾಗಿಯೂ ಹೂವು ಮತ್ತು ಗಂಧ ಇವುಗಳಿಂದಲಂಕೃತವಾಗಿಯೂ ಇದ್ದಿತು.

೨೩. ಪೂಜ್ಯನಾದ ಶ್ರೀಕೃಷ್ಣನು ಆ ರಥವನ್ನೇರಿಕೊಂಡು ವೃಂದಾವನಕ್ಕೆ ಹೋದನು. ಅಲ್ಲಿಗೆ ಹೋಗಿ ರಾತ್ರಿವೇಳೆಯಲ್ಲಿ ನೀರಿನಲ್ಲಿಯೂ ನೆಲದಮೇಲೂ ವಿಹರಿಸಿದನು.

೨೪. ವನಗಳಲ್ಲಿಯೂ ಉಪವನಗಳಲ್ಲಿಯೂ ಬಹಳ ಕಾಲ ಶೃಂಗಾರವಿಲಾಸ ಕ್ರೀಡೆಯನ್ನಾಡಿ ರಾಧೆಗೆ ಹೊಸದಾದ ಸಕಲವನ್ನೂ ತೋರಿಸಿದನು.

ವಿಸ್ಪಂದಕೇ ಸುರಸನೇ ಮಾಹೇಂದ್ರೇ ನಂದನೇ ವನೇ ।
ಸುಮೇರುಶಿಖರೇ ರಮ್ಯೇ ಪರ್ವತೇ ಗಂಧಮಾಧನೇ ॥ ೨೫ ॥

ಶೈಲೇಶೈಲೇ ಸುಂದರೇ ಚ ಕಂದರೇಕಂದರೇ ವನೇ ।
ಪುಷ್ಪೋದ್ಯಾನೇ ಸುರಹಸಿ ನದ್ಯಾಂ ನದ್ಯಾಂ ನದೇನದೇ ॥ ೨೬ ॥

ಸಮುದ್ರಪುಲಿನೇ ರಮ್ಯೇ ಪಾರಿಜಾತವನೇವನೇ ।
ಸುಭದ್ರೇ ಪುಷ್ಪಭದ್ರೇ ಚ ನಾರಾಯಣಸರೋವರೇ ॥ ೨೭ ॥

ಪವನಸ್ಯೈವ ನಿಲಯೇ ಮಲಯೇ ಚ ಸುರಾಲಯೇ ।
ತ್ರಿಕೂಟೇ ಭದ್ರಕೂಟೇ ಚ ಪಂಚಕೂಟೇ ಸುಕೂಟಕೇ ॥ ೨೮ ॥

ದೇವಾನಾಂ ಕಮನೀಯಾಯಾಂ ಕಾಂಚನ್ಯಾಂ ಚ ತಥೈವ ಚ ।
ಸಮುದ್ರೇ ಚ ಸಮುದ್ರೇ ಚ ದ್ವೀಪೇದ್ವೀಪೇ ಮನೋಹರೇ ॥ ೨೯ ॥

ಖರ್ವಟೇ ಪ್ರವರೇ ರಮ್ಯೇ ಪುಣ್ಯಚಂದ್ರಸರೋವರೇ ।
ಸುಪಾರ್ಶ್ವೇ ಮುನಿಪಾರ್ಶ್ವೇ ಚ ಸ ರೇಮೇ ರಾಮಯಾಸಹ ॥ ೩೦ ॥

---

೨೫–೨೭. ಅವನು ವಿಸ್ಪಂದಕ, ಸುರಸನ, ಮಹೇಂದ್ರನ, ನಂದನವನ, ಮನೋಹರವಾದ ಸುಮೇರು ಪರ್ವತದ ಶಿಖರ, ಗಂಧಮಾದನ ಪರ್ವತ, ಇವುಗಳಲ್ಲಿಯೂ, ಸುಂದರವಾದ ಪ್ರತಿ ಬೆಟ್ಟಗಳಲ್ಲಿಯೂ, ಕಾಡಿನ ಪ್ರತಿ ಗುಹೆಗಳಲ್ಲಿಯೂ ಅತ್ಯಂತ ಗುಪ್ತವಾದ ಹೂವಿನ ಕೈತೋಟದಲ್ಲಿಯೂ, ಪ್ರತಿ ನದಿಗಳಲ್ಲಿಯೂ, ಪ್ರತಿ ನದಗಳಲ್ಲಿಯೂ, ಮನೋಹರವಾದ ಸಮುದ್ರದ ಮರಳುದಿಣ್ಣೆಯಲ್ಲಿಯೂ,ಪಾರಿಜಾತದ ಪ್ರತಿ ವನಗಳಲ್ಲಿಯೂ, ಸುಭದ್ರ ಮತ್ತು ಪುಷ್ಪಭದ್ರಗಳಲ್ಲಿಯೂ, ನಾರಾಯಣ ಸರೋವರದಲ್ಲಿಯೂ, ಕೂಡ ಕಾಂತೆಯೊಡನೆ ವಿಹರಿಸಿದನು.

೨೮–೩೦. ಗಾಳಿಗೆ ಮನೆಯಾದ ಮಲಯಪರ್ವತದಲ್ಲಿಯೂ ದೇವತೆಗಳಿಗೆ ಮನೆಯಾದ ತ್ರಿಕೂಟಪರ್ವತದಲ್ಲಿಯೂ ಭದ್ರಕೂಟದಲ್ಲಿಯೂ ಪಂಚಕೂಟದಲ್ಲಿಯೂ ದೇವತೆಗಳಿಗೂ ಆಕರ್ಷಕವಾದ ಕಾಂಚನಿಯಲ್ಲಿಯೂ ಪ್ರತಿ ಸಮುದ್ರದಲ್ಲಿಯೂ ಮತ್ತು ಮನೋಹರವಾದ ಪ್ರತಿ ದ್ವೀಪದಲ್ಲಿಯೂ ಶ್ರೇಷ್ಠವಾದ ಮನೋಹರವಾದ ಚಂದ್ರಸರೋವರದಲ್ಲಿಯೂ ಸುಪಾರ್ಶ್ವ ಮತ್ತು ಮುನಿಪಾರ್ಶ್ವಗಳಲ್ಲಿಯೂ ಕೂಡ ತನ್ನ ಕಾಂತೆಯನ್ನೊಡಗೂಡಿದವನಾಗಿ ಕ್ರೀಡಿಸಿದನು.

ಶೀಘ್ರಂ ಚ ಪುನರಾಗತ್ಯ ಜಂಬೂದ್ವೀಪಂ ಚ ಪುಣ್ಯದಂ ।
ದ್ವಾರಕಾಂ ದರ್ಶಯಾಮಾಸ ಪರ್ವತಂ ರೈವತಂ ತಥಾ ॥ ೩೧ ॥

ಗೋಕುಲಂ ಪುನರಾಗತ್ಯ ಗೋಪಗೋಕುಲಸಂಕುಲಂ ।
ತತ್ರ ದೃಷ್ಟ್ವಾ ಚ ಭಾಂಡೀರಂ ಪುಣ್ಯಂ ವೃಂದಾವನಂ ಯಯೌ ॥ ೩೨ ॥

ಶ್ರೀಕೃಷ್ಣಾಗಮನಂ ಶ್ರುತ್ವಾ ಯಶೋದಾ ನಂದ ಏವ ಚ ।
ಗೋಪೀ ಗೋಪ್ಯಶ್ಚ ವೃದ್ಧಾಶ್ಚಾಶ್ರುನೇತ್ರಾ ನಿರಾಕುಲಾಃ ॥ ೩೩ ॥

ವಾರಣೇಂದ್ರಂ ಪುರಸ್ಕೃತ್ಯ ವೇಶ್ಯಾಂ ಚ ನಟನರ್ತಕಾಃ ।
ಪತಿಪುತ್ರವತೀಂ ಸಾಧ್ವೀಂ ಬ್ರಾಹ್ಮಣೀಂ ಬ್ರಾಹ್ಮಣಂ ತಥಾ ॥ ೩೪ ॥

ಯಥಾ ದೇವಾಶ್ಚ ವಹ್ನಿಂ ಚ ದೃಷ್ಟ್ವಾ ನಂದಂ ಚ ಮಾತರಂ ।
ಆಯಯುರ್ಬಾಲಕೃಷ್ಣಶ್ಚ ರಾಧಯಾ ಸಹ ಮಾಧವಃ ॥ ೩೫ ॥

---

೩೧. ಮತ್ತೆ ಜಾಗ್ರತೆಯಾಗಿ ಪುಣ್ಯಪ್ರದವಾದ ಜಂಬೂದ್ವೀಪಕ್ಕೆ ಬಂದು ದ್ವಾರಕೆಯನ್ನೂ ಮತ್ತು ರೈವತ ಪರ್ವತವನ್ನೂ ತೋರಿಸಿದನು.

೩೨. ಮತ್ತೆ ಗೋಕುಲಕ್ಕೆ ಬಂದು ಅಲ್ಲಿ ಗೋಪರು ಮತ್ತು ಗೋವುಗಳಿಂದ ತುಂಬಿರುವ ದೊಡ್ಡ ಫಣಿಯಾಲದ ಮರವನ್ನು ನೋಡಿಕೊಂಡು ಪುಣ್ಯಕರವಾದ ವೃಂದಾವನಕ್ಕೆ ಹೋದನು.

೩೩-೩೪. ಶ್ರೀಕೃಷ್ಣನು ಬಂದ ಸಮಾಚಾರವನ್ನು ಕೇಳಿ ಯಶೋದೆಯೂ ನಂದನೂ ಗೋಪಿಯೂ ಗೋಪಿಯರೂ ಕಣ್ಣಿನಲ್ಲಿ ನೀರನ್ನು ಸುರಿಸುತ್ತಿರುವವರಾಗಿ ಆನಂದದಿಂದ ಆನೆಯನ್ನೂ ಸೂಳೆಯರನ್ನೂ ನಟರನ್ನೂ ನರ್ತನ ಮಾಡುವವರನ್ನೂ ಗಂಡ ಮತ್ತು ಮಕ್ಕಳುಗಳುಳ್ಳ ಪ್ರತಿವ್ರತೆಯನ್ನೂ ಬ್ರಾಹ್ಮಣನನ್ನೂ ಮುಂದಿಟ್ಟು ಕೊಂಡು ಹೊರಟರು.

೩೫. ಕ್ರಮವಾಗಿ ದೇವರನ್ನು ಅಗ್ನಿಯನ್ನೂ ತಾಯಿಯನ್ನೂ ನಂದನನ್ನೂ ನೋಡಿಕೊಂಡು ಮಾಧವನು ಬಾಲಕೃಷ್ಣ ವೇಷದಿಂದ ರಾಧೆಯೊಡನೆ ಬಂದನು.

ಮಾತುಃ ಕ್ರೋಡಮಾರುರೋಹ ಪ್ರಹಸ್ಯ ಮಧುಸೂದನಃ ।
ನಂದಂ ಯಶೋದಯಾ ಸಾರ್ಧಂ ಚುಚುಂಬ ಮುಖಪಂಕಜಂ || ೩೬ ||

ಆಶ್ಲಿಷ್ಯ ಭೃಶಮುಚ್ಚೈಶ್ಚ ಸಿಷೇಚ ನೇತ್ರಜೈರ್ಜಲೈಃ ।
ಸ್ವಯಂ ಚ ಭಗವಾನ್ಕೃಷ್ಣೋ ಯಶೋದಾಯಾಸ್ತನಂ ಪಪೌ || ೩೭ ||

ತಾದೃಶಂ ದದೃಶುಃ ಸರ್ವೇ ಯಾದೃಶೋ ಮಥುರಾಂ ಯಯೌ ।
ಮುರಲೀಹಸ್ತವಿನ್ಯಸ್ತಂ ರತ್ನಭೂಷಣಭೂಷಿತಂ || ೩೮ ||

ಯಥೈಕಾದಶವರ್ಷೀಯಂ ಶೋಭಿತಂ ಪೀತವಾಸಸಾ ।
ಮಯೂರಪಿಚ್ಛಚೂಡಂ ಚ ಮಾಲತೀಮಾಲ್ಯಮಂಡಿತಂ || ೩೯ ||

ಮಂದಿರೇ ವೇಶಯಾಮಾಸ ರಾಧಯಾ ಸಹ ಮಾಧವಂ ।
ಯಶೋದಾ ಮಂಗಲಂ ಕೃತ್ವಾ ಭೋಜಯಾಮಾಸ ಬ್ರಾಹ್ಮಣಾನ್ || ೪೦ ||

ಪೂಜಾಂ ಚಕಾರ ಗೋಪೀನಾಂ ಮುನೀನಾಂ ಚ ಯಥಾ ಜನಃ ।
ಮಣಿರತ್ನಂ ಪ್ರವಾಲಂ ಚ ಸುವರ್ಣಂ ಪರಮಂ ತಥಾ || ೪೧ ||

---

೩೬. ಮಧುಸೂದನನು ನಗುತ್ತ ತಾಯಿಯ ತೊಡೆಯನ್ನೇರಿದನು. ನಂದನು ಯಶೋದೆಯೊಡನೆ ಕೃಷ್ಣನ ಮುಖಕಮಲವನ್ನು ಚುಂಬಿಸಿದನು.

೩೭. ಅವನನ್ನು ಬಲವಾಗಿ ಅಪ್ಪಿಕೊಂಡು ಆನಂದದ ಕಣ್ಣೀರಿನಿಂದ ನೆನೆಸಿದನು. ಪೂಜ್ಯನಾದ ಕೃಷ್ಣನು ಯಶೋದೆಯ ಸ್ತನ್ಯವನ್ನು ಕುಡಿದನು.

೩೮–೩೯. ಮಧುರಾ ಪಟ್ಟಣಕ್ಕೆ ಯಾವರೀತಿ ಹೋಗಿದ್ದನೋ ಆ ರೀತಿಯಾಗಿರುವ ಕೃಷ್ಣನನ್ನು ಎಲ್ಲರೂ ಕಂಡರು. ಹೇಗೆಂದರೆ ಕೈಯಲ್ಲಿ ಮುರಳಿಯನ್ನು ಹಿಡಿದಿರುವ ರತ್ನಖಚಿತವಾದ ಆಭರಣಗಳಿಂದ ಅಲಂಕೃತನಾದ ಪೀತಾಂಬರದಿಂದ ಕಂಗೊಳಿಸುತ್ತಿರುವ ಹನ್ನೊಂದು ವರುಷದವನಂತಿರುವ ತಲೆಯಲ್ಲಿ ನವಿಲುಗರಿಯನ್ನು ಕಟ್ಟಿಕೊಂಡಿರುವ ಮಾಲತೀಹೂವಿನ ಮಾಲಿಕೆಯಿಂದ ಅಲಂಕಾರ ಮಾಡಿಕೊಂಡಿರುವ ಮಾಧವನನ್ನು ಕಂಡರು.

೪೦. ಯಶೋದೆಯು ರಾಧಾದೇವಿಯೊಡನೆ ಮಾಧವನನ್ನು ಮನೆಯೊಳಕ್ಕೆ ಪ್ರವೇಶ ಮಾಡಿಸಿದಳು. ಮತ್ತು ಮಂಗಳವನ್ನು ಮಾಡಿ ಬ್ರಾಹ್ಮಣಭೋಜನವನ್ನು ಮಾಡಿಸಿದಳು.

೪೧-೪೩. ಗೋಪಿಯರಿಗೂ ಮುನಿಗಳಿಗೂ ಆಯಾಯ ಜನರಿಗೆ ತಕ್ಕಂತೆ ಪೂಜೆಯನ್ನು ಶ್ರೇಷ್ಠ ಮಣಿಗಳನ್ನೂ ಹವಳಗಳನ್ನೂ ಉತ್ತಮವಾದ ಚಿನ್ನವನ್ನೂ

ಮುಕ್ತಾಮಾಣಿಕ್ಯಹೀರಂ ಚ ಬ್ರಾಹ್ಮಣೇಭ್ಯೋ ದದೌ ಮುದಾ ।
ಗಜರತ್ನಂ ಗವಾಂ ರತ್ನಮಶ್ವರತ್ನಂ ಮನೋಹರಂ ॥ ೪೨ ॥

ಆಸನಾನಿ ಚ ಪಾತ್ರಾಣಿ ಭೂಷಣಾನಿ ತಥೈವ ಚ ।
ಧಾನ್ಯಾನ್ಯಪಿ ಚ ಸಸ್ಯಾನಿ ವಸ್ತ್ರಾಣಿ ಚ ತಥಾ ದದೌ ॥ ೪೩ ॥

ಅಪೂರ್ವಂ ದರ್ಶಯಾಮಾಸ ರಾಧಯಾ ಸಹ ಮಾಧವಂ ।
ಗೋಪೀಗಣಂ ಚ ಮಿಷ್ಟಾನ್ನಂ ಸಾದರೇಣಾಪಿ ನಾರದ ॥ ೪೪ ॥

ದುಂದುಭೀನ್ವಾದಯಾಮಾಸ ಕಾರಯಾಮಾಸ ಮಂಗಲಂ ।
ದೇವಾಂಶ್ಚ ಭೋಜಯಾಮಾಸ ಸಾನಂದಂ ಚ ಮನೋಹರಂ ॥ ೪೫ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣ ನಾರದಸಂವಾದೇ
ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ

---

ಮುತ್ತು ಮಾಣಿಕ್ಯ ಹೀರ ಮುಂತಾದುವುಗಳನ್ನೂ ಕೂಡ ಬ್ರಾಹ್ಮಣರಿಗೆ ಸಂತೋಷದಿಂದ ದಾನಮಾಡಿದಳು. ಶ್ರೇಷ್ಠವಾದ ಆನೆಗಳನ್ನೂ ಗೋವುಗಳನ್ನೂ ಕುದುರೆಗಳನ್ನೂ ಮನೋಹರವಾದ ಆಸನಗಳನ್ನೂ ಪಾತ್ರೆಗಳನ್ನೂ ಒಡವೆಗಳನ್ನೂ ಧಾನ್ಯಗಳನ್ನೂ ವಸ್ತ್ರಗಳನ್ನೂ ಸಸ್ಯಗಳನ್ನೂ ದಾನಮಾಡಿದಳು.

೪೪. ರಾಧಾಸಮೇತನಾದ ಮಾಧವನಿಗೆ ಹಿಂದೆಂದೂ ಕಾಣದ ಸಮಾರಂಭವನ್ನು ಕಾಣಿಸಿದಳು. ಗೋಪಿಯರ ಸಮೂಹವನ್ನು ಆದರಪೂರ್ವಕವಾಗಿ ಮೃಷ್ಟಾನ್ನದಿಂದ ತಣಿಸಿದಳು.

೪೫. ವಾದ್ಯಗಳನ್ನು ಊದಿಸಿದಳು. ಮಂಗಳೋತ್ಸವವನ್ನು ನೆರವೇರಿಸಿದಳು. ಆನಂದಪೂರ್ವಕವಾಗಿ ದೇವತೆಗಳಿಗೆ ಮನಸ್ಸನ್ನಾಕರ್ಷಿಸುವಂತೆ ಸಂತರ್ಪಣೆ ಮಾಡಿದಳು.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದ
ನಾರಾಯಣ ನಾರದ ಸಂವಾದದಲ್ಲಿ ನೂರ ಇಪ್ಪತ್ತೇಳನೆಯ ಅಧ್ಯಾಯವು
ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಅಷ್ಟಾವಿಂಶತ್ಯಧಿಕಶತತಮೋऽಧ್ಯಾಯಃ ||

|| ಶ್ರೀ ನಾರಾಯಣ ಉವಾಚ ||

ಶ್ರೀಕೃಷ್ಣಶ್ಚ ಸಮಾಹ್ವಾನಂ ಗೋಪಾಂಶ್ಚಾಪಿ ಚಕಾರ ಸಃ |
ಭಾಂಡೀರೇ ವಟಮೂಲೇ ಚ ತತ್ರ ಸ್ವಯಮುವಾಸ ಹ || ೧ ||

ಪುರಾನ್ನಂ ಚ ದದೌ ತಸ್ಮೈ ಯತ್ರೈವ ಬ್ರಾಹ್ಮಣೀಗಣಃ |
ಉವಾಸ ರಾಧಿಕಾದೇವಿ ವಾಮಪಾರ್ಶ್ವೇ ಹರೇರಪಿ || ೨ ||

ದಕ್ಷಿಣೇ ನಂದಗೋಪಶ್ಚ ಯಶೋದಾಸಹಿತಸ್ತಥಾ |
ತದ್ದಕ್ಷಿಣೇ ವೃಷಭಾನುಸ್ತದ್ವಾಮೇ ಸಾ ಕಲಾವತೀ || ೩ ||

---

### ನೂರ ಇಪ್ಪತ್ತೆಂಟನೆಯ ಅಧ್ಯಾಯವು.

೧. ನಾರಾಯಣನು ಹೇಳುತ್ತಾನೆ: ಶ್ರೀಕೃಷ್ಣನು ಗೋಪರೆಲ್ಲರನ್ನೂ ದೊಡ್ಡ ಫಣಿಯಾಲದ ಮರದ ಬುಡಕ್ಕೆ ಕರೆದನು. ತಾನು ಆ ಮರದ ನೆರಳಿನಲ್ಲಿ ಕುಳಿತು ಕೊಂಡನು.

೨. ಬ್ರಾಹ್ಮಣಸ್ತ್ರೀಯರ ಗುಂಪು ಅಲ್ಲಿದ್ದಿತು. ಆ ಸಮೂಹವು ಮೊದಲು ಅನ್ನವನ್ನು ಶ್ರೀಕೃಷ್ಣನಿಗೆ ಕೊಟ್ಟಿತು. ರಾಧಾದೇವಿಯು ಶ್ರೀಹರಿಯ ಎಡಭಾಗದಲ್ಲಿ ಕುಳಿತುಕೊಂಡಳು.

೩. ಮತ್ತು ಕೃಷ್ಣನ ಬಲಭಾಗದಲ್ಲಿ ನಂದಗೋಪನು ಯಶೋದೆಯಿಂದೊಡ ಗೂಡಿದವನಾಗಿ ಕುಳಿತನು. ಅವನ ಬಲಪಾರ್ಶ್ವದಲ್ಲಿ ವೃಷಭಾನುವೂ ಆ ವೃಷ ಭಾನುವಿನ ಎಡಭಾಗದಲ್ಲಿ ಕಲಾವತಿಯೂ ಕುಳಿತರು.

ಅನ್ಯೇ ಗೋಪಾಶ್ಚ ಗೋಪ್ಯಶ್ಚ ಬಾಂಧವಾಃ ಸುಹೃದಸ್ತಥಾ ।
ತಾನುವಾಚ ಸ ಗೋವಿಂದೋ ಯಥಾರ್ಥ್ಯಂ ಸಮಯೋಚಿತಂ ॥ ೪ ॥

॥ ಶ್ರೀ ಭಗವಾನುವಾಚ ॥

ಶ್ರುಣು ನಂದ ಪ್ರವಕ್ಷ್ಯಾಮಿ ಸಾಂಪ್ರತಂ ಸಮಯೋಚಿತಂ ।
ಸತ್ಯಂ ಚ ಪರಮಾರ್ಥಂ ಚ ಪರಲೋಕಸುಖಾವಹಂ ॥ ೫ ॥

ಆಬ್ರಹ್ಮಸ್ತಂಭಪರ್ಯಂತಂ ಭ್ರಮಂ ಸರ್ವಂ ನಿಶಾಮಯ ।
ವಿದ್ಯುದ್ದೀಪ್ತಿರ್ಜಲೇರೇಖಾ ಯಥಾ ತೋಯಸ್ಯ ಬುದ್ಬುದಂ ॥ ೬ ॥

ಮಥುರಾಯಾಂ ಸರ್ವಮುಕ್ತಂ ನಾವಶೇಷಂ ಚ ಕಿಂಚನ ।
ಯಶೋದಾಂ ಬೋಧಯಾಮಾಸ ರಾಧಿಕಾ ಕದಲೀವನೇ ॥ ೭ ॥

---

೪. ಇನ್ನೂ ಅನೇಕ ಮಂದಿ ಗೋಪರೂ ಗೋಪಿಯರೂ ಬಂಧುಜನಗಳೂ ಸ್ನೇಹಿತರೂ ಕೂಡ ಬಂದು ಕುಳಿತರು. ಗೋವಿಂದನು ಅವರೆಲ್ಲರನ್ನೂ ಕುರಿತು ಸತ್ಯವಾಗಿಯೂ ಸಮಯಕ್ಕೆ ತಕ್ಕುದಾಗಿಯೂ ಇರುವ ಮಾತನ್ನಾಡಿದನು.

ಶ್ರೀಭಗವಂತನು ಹೇಳುತ್ತಾನೆ :

೫. ಎಲೈನಂದನೇ! ಸಮಯಕ್ಕೆತಕ್ಕುದೂ ಉಚಿತವೂ ಸತ್ಯವೂ ಉತ್ತಮವಾದ ಪ್ರಯೋಜನವೂ ಪರಲೋಕದಲ್ಲಿ ಸುಖವನ್ನುಂಟುಮಾಡುವುದೂ ಆದ ಮಾತನ್ನು ಹೇಳುತ್ತೇನೆ ಕೇಳುವವನಾಗು.

೬. ಬ್ರಹ್ಮನಿಂದ ಮೊದಲ್ಗೊಂಡು ಕಂಬದವರೆಗೂ ಇರುವ ಸಕಲವೂ ಭ್ರಾಂತಿಯೆಂಬುದಾಗಿ ತಿಳಿದುಕೊ. ಮಿಂಚಿನ ಬೆಳಕಿನಂತೆಯೂ ನೀರಿನ ಗೆರೆಯಂತೆಯೂ ನೀರಿನ ಮೇಲಣಗುಳ್ಳೆಯಂತೆಯೂ ಎಲ್ಲವೂ ಕ್ಷಣಿಕವಾದುದು.

೭. ಮಥುರಾಪಟ್ಟಣದಲ್ಲಿಯೇ ಎಲ್ಲವನ್ನೂ ಹೇಳಿರುವೆನು. ಉಳಿದಿರುವ ಅಂಶವಾವುದೂ ಇರುವುದಿಲ್ಲ. ಕದಲೀವನದಲ್ಲಿ ರಾಧೆಯು ಯಶೋದೆಗೆ ಉಪದೇಶಿಸಿರುವಳು.

ತದೇವ ಸತ್ಯಂ ಪರಮಂ ಭ್ರಮಧ್ವಾಂತಪ್ರದೀಪಕಂ ।
ವಿಹಾಯ ಮಿಥ್ಯಾಮಾಯಾಂ ಚ ಸ್ಮರ ತತ್ಪರಮಂ ಪದಂ ॥ ೮ ॥

ಜನ್ಮಮೃತ್ಯುಜರಾವ್ಯಾಧಿಹರಂ ಹರ್ಷಕರಂ ಪರಂ ।
ಶೋಕಸಂತಾಪಹರಣಂ ಕರ್ಮಮೂಲನಿಕೃಂತನಂ ॥ ೯ ॥

ಮಾಮೇವ ಪರಮಂ ಬ್ರಹ್ಮ ಭಗವಂತಂ ಸನಾತನಂ ।
ಧ್ಯಾಯಂ ಧ್ಯಾಯಂ ಪುತ್ರಬುದ್ಧಿಂ ತ್ಯಕ್ತ್ವಾ ಲಭ ಪರಂ ಪದಂ ॥ ೧೦ ॥

ಗೋಲೋಕಂ ಗಚ್ಛ ಶೀಘ್ರಂ ತ್ವಂ ಸಾರ್ಧಂ ಗೋಕುಲವಾಸಿಭಿಃ ।
ಆರಾತ್ಕಲೇರಾಗಮನಂ ಕರ್ಮಮೂಲನಿಕೃಂತನಂ ॥ ೧೧ ॥

ಸ್ತ್ರೀಪುಂಸೋರ್ನಿಯಮೋ ನಾಸ್ತಿ ಜಾತೀನಾಂ ಚ ತಥೈವ ಚ ।
ವಿಪ್ರೇ ಸಂಧ್ಯಾದಿಕಂ ನಾಸ್ತಿ ಚಿಹ್ನಂ ಯಜ್ಞೋಪವೀತಕಂ ॥ ೧೨ ॥

---

೮. ಅದೇ ಸತ್ಯವೂ ಮುಖ್ಯವೂ ಭ್ರಾಂತಿಯೆಂಬ ಬಲವಾದಕತ್ತಲೆಗೆ ಉತ್ತಮವಾದ ದೀಪವೂ ಆಗಿರುವುದು. ಈ ಸುಳ್ಳಾಗಿರುವ ಮಾಯೆಯನ್ನು ಬಿಟ್ಟು ಆ ಉತ್ತಮವಾದ ಮೋಕ್ಷಸ್ಥಾನವನ್ನು ನೆನೆಯುವನಾಗು.

೯. ಅದು ಹುಟ್ಟುಸಾವು ಮುಪ್ಪು ಮತ್ತು ರೋಗಗಳನ್ನು ನಾಶಮಾಡತಕ್ಕುದು ಕರ್ಮದ ಬೇರನ್ನು ಕತ್ತರಿಸತಕ್ಕುದು. ದುಃಖಸಂಕಟಗಳನ್ನು ನಾಶಮಾಡಿ ಉತ್ತಮವಾದ ಸಂತೋಷವನ್ನುಂಟುಮಾಡತಕ್ಕುದು.

೧೦. ನನ್ನಲ್ಲಿ ಮಗನೆಂಬ ಭಾವನೆಯನ್ನು ಬಿಟ್ಟು ನನ್ನನ್ನೇ ಉತ್ತಮನು ಬ್ರಹ್ಮನು ಷಡ್ಗುಣೈಶ್ವರ್ಯ ಸಂಪನ್ನನು ನಾಶರಹಿತನು ಎಂಬುದಾಗಿ ಧ್ಯಾನಮಾಡುತ್ತ ಪರಮಸ್ಥಾನವನ್ನು ಹೊಂದುವವನಾಗು.

೧೧. ಕಲಿಯುಗವು ಬರುವುದರೊಳಗಾಗಿ ನೀನು ಗೋಲೋಕದಲ್ಲಿರುವ ಜನರೊಡನೆ ಕರ್ಮದ ಬೇರನ್ನು ಕತ್ತರಿಸಿಹಾಕುವ ಗೋಲೋಕಕ್ಕೆ ಜಾಗ್ರತೆಯಾಗಿ ಹೋಗುವವನಾಗು.

೧೨. ಕಲಿಯುಗದಲ್ಲಿ ಸ್ತ್ರೀಯರಿಗೂ ಪುರುಷರಿಗೂ ನಿರ್ಬಂಧವಿಲ್ಲ. ಜಾತಿಗಳ ನಿಯಮವಿರುವುದಿಲ್ಲ. ಬ್ರಾಹ್ಮಣತನದ ಗುರುತಾಗಲಿ ಜನಿವಾರವಾಗಲೀ ಇರುವುದಿಲ್ಲ.

**ಯಜ್ಞಸೂತ್ರಂ ಚ ತಿಲಕಂ ಶೇಷಂ ಲುಪ್ತಂ ಸುನಿಶ್ಚಿತಂ ।**
**ದಿವಾವ್ಯಯಾಯನಿರತಂ ವಿರತಂ ಧರ್ಮಕರ್ಮಣಿ ॥ ೧೩ ॥**

**ಯಜ್ಞಾನಾಂ ಚ ವ್ರತಾನಾಂ ಚ ತಪಸಾಂ ಲುಪ್ತಮೇವ ಚ ।**
**ಕೇದಾರಕನ್ಯಾಶಾಪೇನ ಧರ್ಮೋ ನಾಸ್ತ್ಯೇವ ಕೇವಲಂ ॥ ೧೪ ॥**

**ಸ್ವಚ್ಛಂದಗಾಮಿನೀಸ್ತ್ರೀಣಾಂ ಪತಿಶ್ಚ ಸತತಂ ವಶೇ ।**
**ತಾಡಯೇತ್ಸತತಂ ತಂ ಚ ಭರ್ತ್ಸಯೇಚ್ಚ ದಿವಾನಿಶಂ ॥ ೧೫ ॥**

**ಪ್ರಾಧಾನ್ಯಂ ಸ್ತ್ರೀಕುಟುಂಬಾನಾಂ ಸ್ತ್ರೀಣಾಂ ಚ ಸತತಂ ವ್ರಜ ।**
**ಸ್ವಾಮೀ ಚ ಭಕ್ತಸ್ತಾಸಾಂ ಚ ಪರಾಭೂತೋ ನಿರಂತರಂ ॥ ೧೬ ॥**

---

೧೩. ಜನಿವಾರ ತಿಲಕ ಎಲ್ಲವೂ ಲೋಪವಾಗುತ್ತದೆ. ಹಗಲು ಸ್ತ್ರೀಯರೊಡನೆ ವಿಹರಿಸುವುದರಲ್ಲಿ ಆಸಕ್ತರಾಗುತ್ತಾರೆ. ಧರ್ಮಕಾರ್ಯದಲ್ಲಿ ಮನಸ್ಸಿಲ್ಲದವರಾಗುತ್ತಾರೆ.

೧೪. ಯಜ್ಞಗಳಿಗೂ ವ್ರತಗಳಿಗೂ ತಪಸ್ಸುಗಳಿಗೂ ಲೋಪವುಂಟಾಗುತ್ತದೆ. ಕೇದಾರಕನ್ಯೆಯ ಶಾಪದಿಂದ ಮುಖ್ಯವಾಗಿ ಧರ್ಮವು ಇರುವುದೇ ಇಲ್ಲ.

೧೫. ಹೆಂಗಸರು ತಮ್ಮ ಇಷ್ಟಬಂದ ಕಡೆಗೆ ಸ್ವತಂತ್ರರಾಗಿ ಹೋಗುತ್ತಾರೆ. ಗಂಡಂದಿರನ್ನು ಯಾವಾಗಲೂ ತಮ್ಮ ಅಧೀನರನ್ನಾಗಿ ಮಾಡಿಕೊಳ್ಳುತ್ತಾರೆ. ಅವರು ಗಂಡನನ್ನು ಹೊಡೆಯುವವರೂ ಗದರಿಸುವವರೂ ಆಗಿರುತ್ತಾರೆ.

೧೬. ಎಲೈ ನಂದನೇ! ಸ್ತ್ರೀಯರಿಗೂ ಸ್ತ್ರೀಕುಟುಂಬಕ್ಕೂ ಯಾವಾಗಲೂ ಪ್ರಧಾನತೆಯಿರುತ್ತದೆ. ಅವರ ಗಂಡಂದಿರು ಯಾವಾಗಲೂ ಅವರಿಗೆ ಸೋತು ಅವರ ಭಕ್ತರಾಗಿರುತ್ತಾರೆ.

ಕಲೌ ಚ ಯೋಷಿತಃ ಸರ್ವಾ ಜಾರಸೇವಾಸು ತತ್ಪರಾಃ ।
ಶತಪುತ್ರಸಮಸ್ನೇಹಸ್ತಾಸಾಂ ಜಾರೇ ಭವಿಷ್ಯತಿ　　॥ ೧೭ ॥

ದದಾತಿ ತಸ್ಮೈ ಭಕ್ಷ್ಯಂ ಚ ಯಥಾ ಭೃತ್ಯಾಯ ಕೋಪತಃ ।
ಸಸ್ಮಿತಾ ಸಕಟಾಕ್ಷಾ ಸಾಮೃತದೃಷ್ಟ್ಯಾ ನಿರಂತರಂ　　॥ ೧೮ ॥

ಜಾರಂ ಪಶ್ಯತಿ ಕಾಮೇನ ವಿಷದೃಷ್ಟ್ಯಾ ಪತಿಂ ಸದಾ ।
ಸತತಂ ಗೌರವಂ ತಾಸಾಂ ಸ್ನೇಹಂ ಚ ಜಾರಬಾಂಧವೇ　　॥ ೧೯ ॥

ಪತ್ಯೌ ಕರಪ್ರಹಾರಂ ಚ ನಿತ್ಯಂ ನಿತ್ಯಂ ಕರೋತಿ ಚ ।
ಮಿಷ್ಟಾನ್ನಂ ಶ್ರದ್ಧಯಾ ಭಕ್ತ್ಯಾ ಜಾರಾಯ ಪ್ರದದಾತಿ ಚ　　॥ ೨೦ ॥

ವೇಷಯುಕ್ತಾ ಚ ಸತತಂ ಜಾರಸೇವನತತ್ಪರಾ ।
ಪ್ರಾಣಾ ಬಂಧುರ್ಗತಿಶ್ಚಾತ್ಮಾ ಕಲೌ ಜಾರಶ್ಚ ಯೋಷಿತಾಂ　　॥ ೨೧ ॥

---

೧೭. ಕಲಿಯುಗದಲ್ಲಿ ಸ್ತ್ರೀಯರು ಮಿಂಡನನ್ನು ಸೇವಿಸುವುದರಲ್ಲಿ ಆಸಕ್ತರಾಗಿರುತ್ತಾರೆ. ಅವರಿಗೆ ಮಿಂಡನಲ್ಲಿ ನೂರು ಮಕ್ಕಳಲ್ಲಿರುವ ಪ್ರೀತಿಗೆ ಸಮವಾದ ಪ್ರೀತಿಯಿರುತ್ತದೆ.

೧೮-೧೯. ಆ ಜಾರನಿಗೆ ಭಕ್ಷ್ಯಗಳನ್ನು ಕೊಡುತ್ತಾಳೆ. ಪತಿಯನ್ನು ಕೋಪದಿಂದ ಸೇವಕನನ್ನು ಕಂಡಂತೆ ಕಾಣುತ್ತಾಳೆ. ಮಿಂಡನನ್ನು ಮುಗುಳುನಗುತ್ತ ಅಮೃತದಂತಿರುವ ಕಡೆಗಣ್ಣಿನ ನೋಟವನ್ನು ಬೀರುತ್ತ ಯಾವಾಗಲೂ ಕಾಮದಿಂದ ನೋಡುತ್ತಾಳೆ. ತನ್ನ ಗಂಡನನ್ನು ಯಾವಾಗಲೂ ವಿಷದೃಷ್ಟಿಯಿಂದ ನೋಡುತ್ತಾಳೆ. ಆ ಸ್ತ್ರೀಯರಿಗೆ ಯಾವಾಗಲೂ ಮಿಂಡನ ಬಂಧುಗಳಲ್ಲಿಯೇ ಸ್ನೇಹವೂ ಪ್ರೀತಿಯೂ ಇರುತ್ತದೆ.

೨೦. ಪ್ರತಿದಿನವೂ ಗಂಡನಿಗೆ ಕೈಯಿಂದ ಹೊಡೆಯುತ್ತಿರುತ್ತಾರೆ. ಆದರದಿಂದಲೂ ಭಕ್ತಿಯಿಂದಲೂ ರುಚಿಕರವಾದ ಅನ್ನವನ್ನು ಮಿಂಡನಿಗೆ ಕೊಡುತ್ತಾಳೆ.

೨೧. ವೇಷವನ್ನು ಮರೆಸಿಕೊಂಡು ಯಾವಾಗಲೂ ಮಿಂಡನನ್ನು ಸೇವೆ ಮಾಡುವುದರಲ್ಲಿ ನಿರತರಾಗಿರುತ್ತಾಳೆ. ಕಲಿಯುಗದಲ್ಲಿ ಸ್ತ್ರೀಯರಿಗೆ ಮಿಂಡನೇ ಪ್ರಾಣವೂ ಬಂಧುವೂ ಗತಿಯೂ ಆತ್ಮವೂ ಆಗಿರುತ್ತಾನೆ.

ಲುಪ್ತಾ ಚಾತಿಥಿಸೇವಾ ಚ ಪ್ರಲುಪ್ತಂ ವಿಷ್ಣುಸೇವನಂ ।
ಪಿತೃಣಾಮರ್ಚನಂ ಚೈವ ದೇವಾನಾಂ ಚ ತಥೈವ ಚ ॥ ೨೨ ॥

ವಿಷ್ಣುವೈಷ್ಣವಯೋರ್ದ್ವೇಷೀ ಸತತಂ ಚ ನರೋ ಭವೇತ್ ।
ವಾಮಮಂತ್ರೋಪಾಸಕಾಶ್ಚ ಚತುರ್ವರ್ಣಾಶ್ಚ ತತ್ಪರಾಃ ॥ ೨೩ ॥

ಶಾಲಗ್ರಾಮಂ ಚ ತುಲಸೀಂ ಕುಶಂ ಗಂಗೋದಕಂ ತಥಾ ।
ನ ಸ್ಪೃಶೇನ್ಮಾನವೋ ಧೂರ್ತೋ ಮ್ಲೇಚ್ಛಾಚಾರರತಃ ಸದಾ ॥ ೨೪ ॥

ಕಾರಣಂ ಕಾರಣಾನಾಂ ಚ ಸರ್ವೇಷಾಂ ಸರ್ವಬೀಜಕಂ ।
ಸುಖದಂ ಮೋಕ್ಷದಂ ಶಶ್ವದ್ದಾತಾರಂ ಸರ್ವಸಂಪದಾಂ ॥ ೨೫ ॥

ತ್ಯಕ್ತ್ವಾಂ ಮಾಂ ಪರಯಾ ಭಕ್ತ್ಯಾ ಕ್ಷುದ್ರಸಂಪತ್ಪ್ರದಾಯಿನಂ ।
ವೇದನಿಘ್ನಂ ವಾಮಮಂತ್ರಂ ಜಪೇದ್ವಿಪ್ರಶ್ಚ ಮಾಯಯಾ ॥ ೨೬ ॥

---

೨೨. ಅತಿಥಿಸತ್ಕಾರವು ಮಾಯವಾಗುತ್ತದೆ. ಶ್ರೀವಿಷ್ಣುಪೂಜೆಯೂ ಮಾಯವಾಗುತ್ತದೆ. ಪಿತೃಗಳ ಶ್ರಾದ್ಧ ಮುಂತಾದುವುಗಳೂ ದೇವರ ಪೂಜೆಯೂ ಕೂಡ ನಾಶವಾಗುತ್ತದೆ.

೨೩. ಯಾವಾಗಲೂ ಮಾನವನು ವಿಷ್ಣುವನ್ನೂ ವಿಷ್ಣುಭಕ್ತರನ್ನೂ ದ್ವೇಷ ಮಾಡುತ್ತಾನೆ. ವಾಮಾಚಾರ ಮಂತ್ರವನ್ನುಪಾಸನೆ ಮಾಡುತ್ತಾನೆ. ನಾಲ್ಕು ವರ್ಣದವರೂ ಕೂಡ ವಾಮಮಂತ್ರವನ್ನುಪಾಸನೆಮಾಡುವವರಾಗುತ್ತಾರೆ.

೨೪. ಮಾನವನು ಧೂರ್ತನೂ ಮ್ಲೇಂಛರ ನಡತೆಯುಳ್ಳವನೂ ಆಗಿ ಸಾಲಿಗ್ರಾಮವನ್ನಾಗಲೀ ತುಲಸಿಯನ್ನಾಗಲೀ ದರ್ಭೆಯನ್ನಾಗಲೀ ಗಂಗೆಯ ನೀರನ್ನಾಗಲೀ ಕೈಯಲ್ಲಿಯೂ ಮುಟ್ಟುವುದಿಲ್ಲ.

೨೫-೨೬. ಸಕಲ ಕಾರಣಗಳಿಗೂ ಕಾರಣನಾದ ಸಕಲಕ್ಕೂ ಬೀಜರೂಪನಾದ ಸುಖವನ್ನೂ ಸಂಪತ್ತನ್ನೂ ಮೋಕ್ಷವನ್ನೂ ಕೊಡುವ ನನ್ನನ್ನು ಬಿಟ್ಟು ಮಾಯೆಯಿಂದ ಪರಮಭಕ್ತಿಯಿಂದ ಅಲ್ಪಸಂಪತ್ತನ್ನು ಕೊಡುವ ವೇದವನ್ನು ನಾಶಮಾಡುವ ವಾಮಮಂತ್ರವನ್ನು ಬ್ರಾಹ್ಮಣನು ಜಪಮಾಡುವವನಾಗುತ್ತಾನೆ.

ಸನಾತನೀ ವಿಷ್ಣುಮಾಯಾ ವಂಚಿತಂ ತಂ ಕರಿಷ್ಯತಿ ।
ಮಮಾಜ್ಞಯಾ ಭಗವತೀ ಜಗತಾಂ ಚ ಮರತ್ಯಯಾ ॥ ೨೭ ॥

ಕಲೇರ್ದಶಸಹಸ್ರಾಣಿ ಮದರ್ಚಾ ಭುವಿ ತಿಷ್ಠತಿ ।
ತದರ್ಧಾನಿ ಚ ವರ್ಷಾಣಾಂ ಗಂಗಾ ಭುವನಪಾವನೀ ॥ ೨೮ ॥

ತುಲಸೀ ವಿಷ್ಣುಭಕ್ತಾಶ್ಚ ಯಾವದ್ಗಂಗಾ ಚ ಕೀರ್ತನಂ ।
ಪುರಾಣಾನಿ ಚ ಸ್ವಲ್ಪಾನಿ ತಾವದೇವ ಮಹೀತಲೇ ॥ ೨೯ ॥

ಮಮ ಚೋತ್ಕೀರ್ತನಂ ನಾಸ್ತಿ ಏತದಂತೇ ಕಲೌ ವ್ರಜ ।
ಏಕವರ್ಣಾ ಭವಿಷ್ಯಂತಿ ಕಿರಾತಾ ಬಲಿನಃ ಶಠಾಃ ॥ ೩೦ ॥

ಪಿತ್ರೋಃ ಸೇವಾ ಗುರೋಃ ಸೇವಾ ಸೇವಾ ಚ ದೇವವಿಪ್ರಯೋಃ ।
ವಿವರ್ಜಿತಾ ನರಾಃ ಸರ್ವೇ ಚಾತಿಥೀನಾಂ ತಥೈವ ಚ ॥ ೩೧ ॥

---

೨೭. ಸನಾತನಿಯಾದ ವಿಷ್ಣುಮಾಯೆಯು ಪ್ರಪಂಚದಲ್ಲಿ ಯಾರಿಂದಲೂ ಮೀರಲಸಾಧ್ಯಳಾಗಿ ನನ್ನ ಅಪ್ಪಣೆಯಿಂದ ಮಾನವನನ್ನು ವಂಚಿತನನ್ನಾಗಿ ಮಾಡುತ್ತಾಳೆ.

೨೮ ಕಲಿಯುಗದಲ್ಲಿ ಹತ್ತುಸಾವಿರ ವರುಷಗಳ ವರೆಗೆ ಭೂಮಿಯಲ್ಲಿ ನನ್ನ ಪೂಜೆಯು ಇರುತ್ತದೆ ಅದರ ಅರ್ಧ ವರುಷಗಳು (ಐದುಸಾವಿರ ವರುಷಗಳ) ವರೆಗೆ ಪ್ರಪಂಚವನ್ನೇ ಪವಿತ್ರಗೊಳಿಸುವ ಗಂಗೆಯು ಭೂಮಿಯಲ್ಲಿರುತ್ತದೆ.

೨೯- ತುಲಸಿಯೂ ವಿಷ್ಣುಭಕ್ತರೂ ಗಂಗೆಯು ಇರುವವರೆಗೆ ಇರುತ್ತಾರೆ. ಹರಿಕೀರ್ತನೆಯೂ ಪುರಾಣಗಳೂ ಕೂಡ ಅಲ್ಪವಾಗಿ ಗಂಗೆಯಿರುವವರೆಗೆ ಇರುತ್ತವೆ.

೩೦. ಎಲೈ ನಂದನೇ! ಕಲಿಯುಗದಲ್ಲಿ ಇಷ್ಟು ಕಾಲವು ಕಳೆದ ಮೇಲೆ ನನ್ನ ಭಜನೆಯು ಇರುವುದಿಲ್ಲ. ನಾಲ್ಕು ವರ್ಣಗಳೂ ಒಂದೇ ಆಗುತ್ತದೆ. ಕಿರಾತರ ಪ್ರಬಲರೂ ದುಷ್ಟರೂ ಆಗಿರುತ್ತಾರೆ.

೩೧. ಮಾನವರೆಲ್ಲರೂ ತಾಯಿತಂದೆಗಳನ್ನೂ ಗುರುಗಳನ್ನೂ ದೇವರನ್ನೂ ಬ್ರಾಹ್ಮಣರನ್ನೂ ಅತಿಥಿಗಳನ್ನೂ ಸೇವಿಸದವರಾಗಿರುತ್ತಾರೆ.

ಸಸ್ಯಹೀನಾ ಭವೇತ್ಪೃಥ್ವೀ ಸಾಚಾವೃಷ್ಟ್ಯಾ ನಿರಂತರಂ |
ಫಲಹೀನೋಽಪಿ ವೃಕ್ಷಶ್ಚ ಜಲಹೀನಾ ಸರಿತ್ತಥಾ || ೩೨ ||

ವೇದಹೀನೋ ಬ್ರಾಹ್ಮಣಶ್ಚ ಬಲಹೀನಶ್ಚ ಭೂಪತಿಃ |
ಜಾತಿಹೀನಾಃ ಜನಾಃ ಸರ್ವೇ ಮ್ಲೇಂಚ್ಛೋ ಭೂಪೋ ಭವಿಷ್ಯತಿ || ೩೩ ||

ಭೃತ್ಯವತ್ತಾಡಯೇತ್ತಾತಂ ಪುತ್ರಃ ಶಿಷ್ಯಃ ತಥಾ ಗುರುಂ |
ಕಾಂತಂ ಚ ತಾಡಯೇತ್ಕಾಂತಾ ಲುಬ್ಧಕುಕ್ಕುಟವದ್ಗೃಹೀ || ೩೪ ||

ನಶ್ಯಂತಿ ಸಕಲಾ ಲೋಕಾಃ ಕಲೌ ಶೇಷೇ ಚ ಪಾಪಿನಃ |
ಸೂರ್ಯಾಣಾಮಾತಪಾತ್ಕೇಚಿಜ್ಜಲೌಘೇನಾಪಿ ಕೇಚನ || ೩೫ ||

ಹೇ ವೈಶ್ಯೇಂದ್ರ ಸತಿ ಕಲೌ ನ ನಶ್ಯತಿ ವಸುಂಧರಾ |
ಪುನಃ ಸೃಷ್ಟಿರ್ಭವೇತ್ಸತ್ಯಂ ಸತ್ಯಬೀಜಂ ನಿರಂತರಂ || ೩೬ ||

---

೩೨. ಭೂಮಿಯಲ್ಲಿ ಸತ್ಯವೆಂಬುದೇ ಇರುವುದಿಲ್ಲ. ಆ ಭೂಮಿಯು ಯಾನಾಗಲೂ ಮಳೆಯಿಲ್ಲದುದಾಗಿರುತ್ತದೆ. ಮರವು ಹಣ್ಣಿಲ್ಲದುದಾಗಿರುತ್ತದೆ. ನದಿಯು ನೀರಿಲ್ಲದುದಾಗಿರುತ್ತದೆ.

೩೩. ಬ್ರಾಹ್ಮಣನು ವೇದವನ್ನೋದದವನಾಗುತ್ತಾನೆ. ರಾಜನು ಬಲವಿಲ್ಲದವನಾಗುತ್ತಾನೆ. ಸಕಲ ಜನರೂ ಜಾತಿಯಿಲ್ಲದವರಾಗುತ್ತಾರೆ. ಮ್ಲೇಂಛ ಜಾತಿಯವನು ರಾಜನಾಗುತ್ತಾನೆ.

೩೪. ಮಗನು ತಂದೆಯನ್ನು ಜವಾನನಂತೆ ಹೊಡೆಯುತ್ತಾನೆ. ಹಾಗೆಯೇ ಶಿಷ್ಯನು ಗುರುವನ್ನು ಹೊಡೆಯುತ್ತಾನೆ. ಹೆಂಡತಿಯು ಗಂಡನನ್ನು ಹೊಡೆಯುತ್ತಾಳೆ. ಗೃಹಸ್ಥನು ಆಶೆಬಡುಕ ಕೋಳಿಯಂತಿರುತ್ತಾನೆ.

೩೫. ಕಲಿಯುಗದ ಕೊನೆಯಲ್ಲಿ ಪಾಪಿಗಳಾದ ಸಕಲರೂ ಕೆಲವರು ಸೂರನ ಹೆಚ್ಚಾದ ಬಿಸಿಲಿನಿಂದಲೂ ಕೆಲವರು ನೀರಿನ ಪ್ರವಾಹದಿಂದಲೂ ಸಾಯುತ್ತಾರೆ.

೩೬. ಎಲೈ ವೈಶ್ಯಶ್ರೇಷ್ಠನೇ! ಕಲಿಯುಗದಲ್ಲಿ ಭೂಮಿಯು ನಾಶವಾಗುವುದಿಲ್ಲ. ಮತ್ತೆ ಸತ್ಯದ ಸತ್ಯಕಾರಣದ ಸೃಷ್ಟಿಯಾಗುತ್ತದೆ.

ಏತಸ್ಮಿನ್ನಂತರೇ ವಿಪ್ರಾ ರಥಮೇವ ಮನೋಹರಂ ।
ಚತುರ್ಯೋಜನವಿಸ್ತೀರ್ಣಮೂರ್ಧ್ವೇ ಚ ಪಂಚಯೋಜನಂ ॥ ೩೭ ॥

ಶುದ್ಧಸ್ಫಟಿಕಸಂಕಾಶಂ ರತ್ನೇಂದ್ರಸಾರನಿರ್ಮಿತಂ ।
ಅಮ್ಲಾನಪಾರಿಜಾತಾನಾಂ ಮಾಲಾಜಾಲವಿರಾಜಿತಂ ॥ ೩೮ ॥

ಮಣೀನಾಂ ಕೌಸ್ತುಭಾನಾಂ ಚ ಭೂಷಣೇನ ವಿಭೂಷಿತಂ ।
ಅಮೂಲ್ಯರತ್ನಕಲಶಂ ಹೀರಹಾರವಿಲಂಬಿತಂ ॥ ೩೯ ॥

ಮನೋಹರೈಃ ಪರಿಷ್ಕೃತ್ತಂ ಸಹಸ್ರಕೋಟಿಮಂದಿರೈಃ ।
ಸಹಸ್ರದ್ವಯಚಕ್ರಂ ಚ ಸಹಸ್ರದ್ವಯಘೋಟಕಂ ॥ ೪೦ ॥

ಸೂಕ್ಷ್ಮವಸ್ತ್ರಚ್ಛಾದಿತಂ ಚ ಗೋಪೀಕೋಟೀಭಿರಾವೃತಂ ।
ಗೋಲೋಕಾದಾಗತಂ ತೂರ್ಣಂ ದದೃಶುಃ ಸಹಸಾ ವ್ರಜೇ ॥ ೪೧ ॥

ಕೃಷ್ಣಾಜ್ಞಯಾ ತಮಾರುಹ್ಯ ಯಯುರ್ಗೋಲೋಕಮುತ್ತಮಂ ।
ರಾಧಾ ಕಲಾವತೀ ದೇವೀ ಧನ್ಯಾ ಚಾಯೋನಿಸಂಭವಾ ॥ ೪೨ ॥

---

೩೭–೩೮. ಎಲೈ ಬ್ರಾಹ್ಮಣನೇ! ಹೀಗೆ ಹೇಳುತ್ತಿರುವ ಸಮಯದಲ್ಲಿ ಅತ್ಯಂತ ಮನೋಹರವಾದ ನಾಲ್ಕು ಯೋಜನ ವಿಸ್ತಾರವುಳ್ಳ ಮೇಲೆ ಐದು ಯೋಜನವುಳ್ಳ ಶುಭ್ರವಾದ ಸ್ಫಟಿಕದಂತೆ ಕಾಂತಿಯುಳ್ಳ ರತ್ನಶ್ರೇಷ್ಠಗಳ ಸಾರದಿಂದ ಮಾಡಿದ ಬಾಡದಿರುವ ಪಾರಿಜಾತದ ಹೂವಿನ ಮಾಲಿಕೆಗಳ ಸಮೂಹದಿಂದ ಕಂಗೊಳಿಸುತ್ತಿರುವ ರಥವು ಬರುತ್ತಿರುವುದನ್ನು ಕಂಡರು.

೩೯–೪೧. ಮತ್ತು ರತ್ನಮಣಿಗಳ ಕೌಸ್ತುಭಗಳ ಆಭರಣಗಳಿಂದ ಅಲಂಕರಿಸಲ್ಪಟ್ಟಿರುವ ಬೆಲೆಬಾಳುವ ರತ್ನದಿಂದ ಮಾಡಿದ ಕಲಶವುಳ್ಳ, ಹೀರದ ಹಾರಗಳಿಂದ ಜೋಲಾಡುತ್ತಿರುವ ಮನೋಹರಗಳಾದ ಸಾವಿರ ಕೋಟಿ ಮನೆಗಳಿಂದ ಕೂಡಿದ ಎರಡು ಸಾವಿರ ಚಕ್ರಗಳುಳ್ಳ ಎರಡು ಸಾವಿರ ಕುದುರೆಗಳುಳ್ಳ ನವಿರಾದ ಬಟ್ಟೆಗಳನ್ನು ಹೊದಿಸಿರುವ ಕೋಟಿ ಗೋಪಿಯರಿಂದ ತುಂಬಿರುವ ಗೋಕುಲದಿಂದ ಬಂದ ರಥವನ್ನು ಕಂಡರು.

೪೨–೪೪. ಕೃಷ್ಣನ ಅಪ್ಪಣೆಯಂತೆ ರಾಧೆಯೂ ಅಯೋನಿಜಳೂ ಧನ್ಯಳೂ ಆದ ಕಲಾವತೀ ದೇವಿಯೂ ಗೋಲೋಕದಿಂದ ಬಂದಿದ್ದ ಗೋಪಿಯರೆಲ್ಲರೂ

ಗೋಲೋಕಾದಾಗತಾ ಗೋಪ್ಯಶ್ಚಾಯೋನಿಸಂಭವಾಶ್ಚ ತಾಃ ।
ಶ್ರುತಿಪತ್ನ್ಯಶ್ಚ ತಾಃ ಸರ್ವಾಃ ಸ್ವಶರೀರೇಣ ನಾರದ ॥ ೪೩ ॥

ಸರ್ವೇ ತ್ಯಕ್ತ್ವಾ ಶರೀರಾಣಿ ನಶ್ವರಾಣಿ ಸುನಿಶ್ಚಿತಂ ।
ಗೋಲೋಕಂ ಚ ಯಯೌ ರಾಧಾ ಸಾರ್ಧಂ ಗೋಕುಲವಾಸಿಭಿಃ ॥ ೪೪ ॥

ದದರ್ಶ ವಿರಜಾತೀರಂ ನಾನಾರತ್ನವಿಭೂಷಿತಂ ।
ತದುತ್ತೀರ್ಯ ಯಯೌ ವಿಪ್ರ ಶತಶೃಂಗಂ ಚ ಪರ್ವತಂ ॥ ೪೫ ॥

ನಾನಾಮಣಿಗಣಾಕೀರ್ಣಂ ರಾಸಮಂಡಲಮಂಡಿತಂ ।
ತತೋ ಯಯೌ ಕಿಯದ್ದೂರಂ ಪುಣ್ಯಂ ವೃಂದಾವನಂ ವನಂ ॥ ೪೬ ॥

ಸಾ ದದರ್ಶಾಕ್ಷಯವಟಮೂರ್ಧ್ವೇ ತ್ರಿಶತಯೋಜನಂ ।
ಶತಯೋಜನವಿಸ್ತೀರ್ಣಂ ಶಾಖಾಕೋಟಿಸಮಾವೃತಂ ॥ ೪೭ ॥

---

ಅಯೋನಿಜರು. ಅವರೂ ವೇದಪತ್ನಿಯರೂ ಸ್ವಶರೀರದಿಂದ ಆ ರಥವನ್ನು ಹತ್ತಿಕೊಂಡು ಹೊರಟರು. ಉಳಿದವರು ನಾಶವಾಗುವ ಶರೀರವನ್ನು ಬಿಟ್ಟು ಉತ್ತಮ ಶರೀರವನ್ನು ಧರಿಸಿದವರಾಗಿ ಹೊರಟರು. ರಾಧೆಯು ಗೋಕುಲವಾಸಿಗಳೊಡನೆ ಗೋಲೋಕಕ್ಕೆ ಹೊರಟಳು.

೪೫–೪೬. ಮುಂದೆ ನಾನಾ ರತ್ನಗಳಿಂದ ಅಲಂಕೃತವಾದ ವಿರಜಾನದಿಯ ದಡವನ್ನು ನೋಡಿದಳು. ಎಲೈ ನಾರದನೇ! ಆ ನದಿಯನ್ನು ದಾಟಿ ಅನೇಕ ವಿಧವಾದ ಮಣಿಗಳ ಸಮೂಹದಿಂದ ಕೂಡಿದ ರಸಮಂಡಲಗಳಿಂದ ಶೋಭಿಸುತ್ತಿರುವ ಶತಶೃಂಗ ಪರ್ವತಕ್ಕೆ ಹೋದಳು. ಅನಂತರ ಸ್ವಲ್ಪ ದೂರ ಹೋದ ಮೇಲೆ ಪುಣ್ಯಕರವಾದ ವೃಂದಾವನವೆಂಬ ವನವನ್ನು ನೋಡಿದಳು.

೪೭–೪೮. ಆ ರಾಧೆಯು ಮೇಲ್ಭಾಗದಲ್ಲಿ ಮುನ್ನೂರು ಯೋಜನವುಳ್ಳ ನೂರು ಯೋಜನ ವಿಸ್ತಾರವುಳ್ಳ ಕೋಟಿ ರೆಂಬೆಗಳಿಂದ ಕೂಡಿದ ದೊಡ್ಡದಾದ ಕೆಂಪು ಬಣ್ಣದ ಹಣ್ಣುಗಳಿಂದ ಕಂಗೊಳಿಸುತ್ತಿರುವ ಅಕ್ಷಯವಟವನ್ನು ಕಂಡಳು. ಮನೋ

ರಕ್ತವರ್ಣೈಃ ಫಲೌಘೈಶ್ಚ ಸ್ಥೂಲೈರಪಿ ವಿಭೂಷಿತಂ ।
ಗೋಪೀಕೋಟಿಸಹಸ್ರೈಶ್ಚ ಸಾರ್ಧಂ ವೃಂದಾ ಮನೋಹರಾ　|| ೪೮ ||

ಅನುವ್ರಜಂ ಸಾದರಂ ಚ ಸಸ್ಮಿತಾ ಸಾ ಸಮಾಯಯೌ ।
ಅವರುಹ್ಯ ರಥಾತ್ತೂರ್ಣಂ ರಾಧಾಂ ಸಾ ಪ್ರಣನಾಮ ಚ　|| ೪೯ ||

ರಾಸೇಶ್ವರೀಂ ತಾಂ ಸಂಭಾವ್ಯ ಪ್ರವಿವೇಶ ಸ್ವಮಾಲಯಂ ।
ರತ್ನಸಿಂಹಾಸನೇ ರಮ್ಯೇ ಹೀರಹಾರ ಸಮನ್ವಿತಾಂ　|| ೫೦ ||

ವೃಂದಾ ತಾಂ ವಾಸಯಾಮಾಸ ಪಾದಸೇವನತತ್ಪರಾ ।
ಸಪ್ತಭಿಶ್ಚ ಸಖೀಭಿಶ್ಚ ಸೇವಿತಾಂ ಶ್ವೇತಚಾಮರೈಃ　|| ೫೧ ||

ಆಯಯುರ್ಗೋಪಿಕಾಃ ಸರ್ವಾ ದ್ರಷ್ಟುಂ ತಾಂ ಪರಮೇಶ್ವರೀಂ ।
ನಂದಾದಿಕಂ ಪ್ರಕಲ್ಪ್ಯೈತದ್ರಾಧಾ ವಾಸಂ ಪೃಥಕ್ ಪೃಥಕ್　|| ೫೨ ||

---

ಹರಳಾದ ವೃಂದಾದೇವಿಯು ಕೋಟಿ ಗೋಪಿಯರಿಂದೊಡಗೂಡಿದವಳಾಗಿ ಮುಗುಳು ನಗೆಯನ್ನು ನಗುತ್ತ ಬಂದಳು. ಅವಳು ರಥದಿಂದ ಜಾಗ್ರತೆಯಾಗಿ ಇಳಿದು ರಾಧೆಗೆ ನಮಸ್ಕಾರ ಮಾಡಿದಳು.

೫೦–೫೧. ರಾಸೇಶ್ವರಿಯಾದ ರಾಧೆಯನ್ನು ಗೌರವಿಸಿ ತನ್ನ ಮನೆಗೆ ಪ್ರವೇಶ ಮಾಡಿಸಿದಳು. ವೃಂದಾದೇವಿಯು ಹೀರಮಣಿಯ ಹಾರದಿಂದ ಕೂಡಿದ ಏಳು ಜನ ಸಖಿಯರಿಂದ ಬಿಳಿಯ ಚಾಮರವನ್ನು ಹಿಡಿದು ಸೇವಿಸಲ್ಪಡುತ್ತಿರುವ ರಾಧೆಯನ್ನು ರತ್ನಮಯವಾದ ಸಿಂಹಾಸನದಮೇಲೆ ಕುಳ್ಳಿರಿಸಿ ತಾನು ಪಾದಸೇವೆಯನ್ನು ಮಾಡತೊಡಗಿದಳು.

೫೨. ಆ ಪರಮೇಶ್ವರಿಯನ್ನು ನೋಡುವುದಕ್ಕಾಗಿ ಎಲ್ಲ ಗೋಪಿಯರೂ ನಂದನೇ ಮೊದಲಾದವರನ್ನು ಕಂಡುಕೊಂಡು ಪ್ರತ್ಯೇಕಪ್ರತ್ಯೇಕವಾಗಿ ಈ ರಾಧೆಯ ಮನೆಗೆ ಬಂದರು.

ಪರಮಾನಂದರೂಪಾ ಸಾ ಪರಮಾನಂದಪೂರ್ವಕಂ ।
ಸ್ವವೇಶ್ಮನಿ ಮಹಾರಮ್ಯೇ ಪ್ರತಸ್ಥೇ ಗೋಪಿಕಾಸಹ ॥ ೫೩ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ
ಅಷ್ಟಾವಿಂಶತ್ಯಧಿಕಶತತಮೋಽಧ್ಯಾಯಃ ॥

---

೫೩. ಪರಮಾನಂದರೂಪಳಾದ ಆ ರಾಧೆಯು ಬಹಳ ಸಂತೋಷದಿಂದ ಕೂಡಿದವಳಾಗಿ ಅತ್ಯಂತ ಮನೋಹರವಾದ ತನ್ನ ಮನೆಯಲ್ಲಿ ಗೋಪಿಯರಿಂದೊಡಗೂಡಿದವಳಾಗಿ ವಾಸಿಸುತ್ತಿದ್ದಳು.

ಇಲ್ಲಿಗೆ ಬಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ
ನಾರಾಯಣ ನಾರದ ಸಂವಾದದಲ್ಲಿ ನೂರ ಇಪ್ಪತ್ತೆಂಟನೆಯ ಅಧ್ಯಾಯವು
ಸಮಾಪ್ತವಾದುದು.



॥ ಓಂ ॥

॥ ಓಂ ಶ್ರೀ ಗಣೇಶಾಯ ನಮಃ ॥

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

॥ ಅಥ ಏಕೋನತ್ರಿಂಶದಧಿಕಶತತಮೋಽಧ್ಯಾಯಃ ॥

॥ ಶ್ರೀನಾರಾಯಣ ಉವಾಚ ॥

ಶ್ರೀಕೃಷ್ಣೋ ಭಗವಾಂಸ್ತತ್ರ ಪರಿಪೂರ್ಣತಮಃ ಪ್ರಭುಃ ।
ದೃಷ್ಟ್ವಾ ಸಾಲೋಕ್ಯಮೋಕ್ಷಂ ಚ ಸದ್ಯೋ ಗೋಕುಲವಾಸಿನಾಂ ॥ ೧ ॥

ಉವಾಸ ಪಂಚಭಿರ್ಗೋಪೈರ್ಭಾಂಡೀರೇ ವಟಮೂಲಕೇ ।
ದದರ್ಶ ಗೋಕುಲಂ ಸರ್ವಂ ಗೋಕುಲಂ ವ್ಯಾಕುಲಂ ತಥಾ ॥ ೨ ॥

ಅರಕ್ಷಕಂ ಚ ವ್ಯಸ್ತಂ ಚ ಶೂನ್ಯಂ ವೃಂದಾವನಂ ವನಂ ।
ಯೋಗೇನಾಮೃತವೃಷ್ಟ್ಯಾ ಚ ಕೃಪಯಾ ಚ ಕೃಪಾನಿಧಿಃ ॥ ೩ ॥

ಗೋಪೀಭಿಶ್ಚ ತಥಾ ಗೋಪೈಃ ಪರಿಪೂರ್ಣಂ ಚಕಾರ ಸಃ ।
ತಥಾ ವೃಂದಾವನಂ ಚೈವ ಸುರಮ್ಯಂ ಚ ಮನೋಹರಂ ॥ ೪ ॥

---

### ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಶ್ರೀನಾರಾಯಣನು ಹೇಳುತ್ತಾನೆ :— ಅತ್ಯಂತ ಪರಿಪೂರ್ಣನೂ ಷಡ್ಗುಣೈಶ್ವರ್ಯ ಸಂಪನ್ನನೂ ಪ್ರಭುವೂ ಆದ ಶ್ರೀಕೃಷ್ಣನು ಗೋಲೋಕ ನಿವಾಸಿಗಳಿಗುಂಟಾದ ಸಾಲೋಕ್ಯಮೋಕ್ಷವನ್ನು ನೋಡಿದನು.

೨-೪. ತಾನು ಐವರು ಗೋಪರೊಡನೆ ದೊಡ್ಡ ಫಣಿಯಾಲದ ಮರದ ಕೆಳಗೆ ಕುಳಿತನು. ಗೋಕುಲವೆಲ್ಲವೂ ವ್ಯಥೆಗೊಂಡ ಗೋವುಗಳುಳ್ಳದಾಗಿರುವುದನ್ನೂ ವೃಂದಾವನವು ರಕ್ಷಕರಿಲ್ಲದೆ ಶೂನ್ಯವಾಗಿರುವುದನ್ನೂ ಕಂಡನು. ಕೃಪಾನಿಧಿಯಾದ ಹರಿಯು ಯೋಗಶಕ್ತಿಯಿಂದ ಅಮೃತದ ಮಳೆಯನ್ನುಸುರಿಸಿ ಗೋಕುಲವನ್ನು ಗೋಪರಿಂದಲೂ ಗೋಪಿಯರಿಂದಲೂ ತುಂಬಿದುದನ್ನಾಗಿ ಮಾಡಿದನು. ಮತ್ತು ವೃಂದಾವನವನ್ನು ಅತ್ಯಂತ ಸುಂದರವನ್ನಾಗಿಯೂ ಮನೋಹರವನ್ನಾಗಿಯೂ ಮಾಡಿದನು.

ಗೋಕುಲಸ್ಥಾಂಶ್ಚ ಗೋಪಾಂಶ್ಚ ಸಮಾಶ್ವಾಸಂ ಚಕಾರ ಸಃ ।
ಉವಾಚ ಮಧುರಂ ವಾಕ್ಯಂ ಹಿತಂ ನೀತಂ ಚ ದುರ್ಲಭಂ ॥ ೫ ॥

॥ ಶ್ರೀಭಗವಾನುವಾಚ ॥

ಹೇ ಗೋಪಗಣ ಹೇ ಬಂಧೋ ಸುಖಂ ತಿಷ್ಠನ್ಸ್ಥಿರೋ ಭವ ।
ರಮಣಂ ಪ್ರಿಯಯಾ ಸಾರ್ಧಂ ಸುರಮ್ಯಂ ರಾಸಮಂಡಲಂ ॥ ೬ ॥

ತಾವತ್ಪ್ರಭೃತಿ ಕೃಷ್ಣಸ್ಯ ಪುಣ್ಯೇ ವೃಂದಾವನೇ ವನೇ ।
ಅಧಿಷ್ಠಾನಂ ಚ ಸತತಂ ಯಾವಚ್ಚಂದ್ರದಿವಾಕರೌ ॥ ೭ ॥

ತಥಾ ಜಗಾಮ ಭಾಂಡೀರಂ ವಿಧಾತಾ ಜಗತಾಮಪಿ ।
ಸ್ವಯಂ ಶೇಷಶ್ಚ ಧರ್ಮಶ್ಚ ಭವಾನ್ಯಾ ಚ ಭವಃ ಸ್ವಯಂ ॥ ೮ ॥

ಸೂರ್ಯಶ್ಚಾಪಿ ಮಹೇಂದ್ರಶ್ಚ ಚಂದ್ರಶ್ಚಾಪಿ ಹುತಾಶನಃ ।
ಕುಬೇರೋ ವರುಣಶ್ಚೈವ ಪವನಶ್ಚ ಯಮಸ್ತಥಾ ॥ ೯ ॥

---

೫. ಶ್ರೀಕೃಷ್ಣನು ಗೋಕುಲದಲ್ಲಿದ್ದ ಗೋಪರೆಲ್ಲರನ್ನೂ ಕರೆದನು. ಅವರನ್ನು ಕುರಿತು ಮಧುರವೂ ಹಿತವೂ ನೀತಿಯುಕ್ತವೂ ದುರ್ಲಭವೂ ಆದ ಮಾತನ್ನಾಡಿದನು.

೬-೭. ಶ್ರೀಭಗವಂತನು ಹೇಳುತ್ತಾನೆ: ಬಂಧುಗಳಾದ ಗೋಪರೇ! ಸುಖದಿಂದಲೂ ಸಮಾಧಾನದಿಂದಲೂ ಇರುವವರಾಗಿರಿ. ಪ್ರಿಯೆಯೊಡನೆ ವಿಹರಿಸಲು ರಾಸಮಂಡಲವು ಮನೋಹರವಾಗಿರುವುದು. ಸೂರ್ಯಚಂದ್ರರು ಎಲ್ಲಿಯವರೆಗೆ ಇರುವರೋ ಅಲ್ಲಿಯವರೆಗೆ ಪುಣ್ಯಕರವಾದ ವೃಂದಾವನವೆಂಬ ವನದಲ್ಲಿ ಶ್ರೀಕೃಷ್ಣನು ಇರುವನು.

೮. ಹಾಗೆ ಆ ಘಣಿಯಾಲದ ಮರದ ಸಮೀಪಕ್ಕೆ ಜಗತ್ಕರ್ತೃವಾದ ಬ್ರಹ್ಮನೂ ಶೇಷನೂ ಧರ್ಮನೂ ಭವಾನೀಸಮೇತನಾದ ಶಂಕರನೂ ಬಂದರು.

೯. ಸೂರ್ಯನೂ ಮಹೇಂದ್ರನೂ ಚಂದ್ರನೂ ಅಗ್ನಿಯೂ ಕುಬೇರನೂ ವರುಣನೂ ವಾಯುವೂ ಯಮನೂ ಬಂದರು.

ಈಶಾನಶ್ಚಾಪಿ ದೇವಾಶ್ಚ ವಸವೋಽಷ್ಟೌ ತಥೈವ ಚ ।
ಸರ್ವೇ ಗ್ರಹಾಶ್ಚ ರುದ್ರಾಶ್ಚ ಮುನಯೋ ಮನವಸ್ತಥಾ ॥ ೧೦ ॥

ತ್ವರಿತಾಶ್ಚಾಯಯುಃ ಸರ್ವೇ ಯತ್ರಾಸ್ತೇ ಭಗವಾನ್ಪ್ರಭುಃ ।
ಪ್ರಣಮ್ಯ ದಂಡವದ್ಭೂಮೌ ತಮುವಾಚ ವಿಧಿಃ ಸ್ವಯಂ ॥ ೧೧ ॥

॥ ಬ್ರಹ್ಮೋವಾಚ ॥

ಪರಿಪೂರ್ಣತಮ ಬ್ರಹ್ಮಸ್ವರೂಪ ನಿತ್ಯವಿಗ್ರಹ ।
ಜ್ಯೋತಿಃಸ್ವರೂಪ ಪರಮ ನಮೋಽಸ್ತು ಪ್ರಕೃತೇಃ ಪರ ॥ ೧೨ ॥

ಸುನಿರ್ಲಿಪ್ತ ನಿರಾಕಾರ ಸಾಕಾರ ಧ್ಯಾನಹೇತುನಾ ।
ಸ್ವೇಚ್ಛಾಮಯ ಪರಂ ಧಾಮ ಪರಮಾತ್ಮನ್ನಮೋಽಸ್ತು ತೇ ॥ ೧೩ ॥

ಸರ್ವಕಾರ್ಯಸ್ವರೂಪೇಶ ಕಾರಣಾನಾಂ ಚ ಕಾರಣ ।
ಬ್ರಹ್ಮೇಶ ಶೇಷ ದೇವೇಶ ಸರ್ವೇಶ ತೇ ನಮೋನಮಃ ॥ ೧೪ ॥

---

೧೦–೧೧. ಈಶಾನನೂ ಸಕಲದೇವತೆಗಳೂ ಅಷ್ಟವಸುಗಳೂ ಸಕಲ ಗ್ರಹರೂ ರುದ್ರರೂ ಮುನಿಗಳೂ ಮನುಗಳೂ ಕೂಡ ಪೂಜ್ಯನೂ ಪ್ರಭುವೂ ಆದ ಪರಮಾತ್ಮ ನಿರುವ ಸ್ಥಳಕ್ಕೆ ವೇಗವಾಗಿ ಬಂದರು. ಬ್ರಹ್ಮನು ನೆಲದಮೇಲೆ ದಂಡಾಕಾರವಾಗಿ ನಮಸ್ಕಾರಮಾಡಿ ಆ ಪರಮಾತ್ಮನನ್ನು ಕುರಿತು ಇಂತೆಂದನು.

೧೨. ಬ್ರಹ್ಮನು ಹೇಳುತ್ತಾನೆ: ಅತ್ಯಂತ ಪರಿಪೂರ್ಣನೂ ಬ್ರಹ್ಮರೂಪನೂ ನಿತ್ಯಶರೀರವುಳ್ಳವನೂ ಜ್ಯೋತಿರೂಪನೂ ಉತ್ತಮನೂ ಪ್ರಕೃತಿಗಿಂತಲೂ ಮೊದಲಿನವನೂ ಆದ ನಿನಗೆ ನಮಸ್ಕಾರವು.

೧೩. ಯಾವವಿಧವಾದ ಲೇಪವೂ ಇಲ್ಲದ ಆಕಾರವಿಲ್ಲದ ಧ್ಯಾನಕ್ಕಾಗಿ ಆಕಾರವನ್ನು ಪಡೆದಿರುವ ತನ್ನ ಇಚ್ಛಾಸ್ವರೂಪನಾದ ಉತ್ತಮ ಸ್ಥಾನವಾದ ಪರಮಾತ್ಮನೇ! ನಿನಗೆ ನಮಸ್ಕಾರವು.

೧೪. ಸಮಸ್ತ ಕಾರ್ಯಸ್ವರೂಪನೂ ಈಶನೂ ಸಕಲಕಾರಣಗಳಿಗೂ ಕಾರಣನೂ ಬ್ರಹ್ಮ, ಈಶ, ಶೇಷರೆಂಬ ದೇವತೆಗಳಿಗೂ ಈಶ್ವರನೂ ಸರ್ವಕ್ಕೂ ಯಜಮಾನನೂ ಆದ ನಿನಗೆ ನಮಸ್ಕಾರವು.

ಸರಸ್ವತೀಶ ಪದ್ಮೇಶ ಪಾರ್ವತೀಶ ಪರಾತ್ಪರ ।
ಹೇ ಸಾವಿತ್ರೀಶ ರಾಧೇಶ ರಾಸೇಶ್ವರ ನಮೋಽಸ್ತು ತೇ ॥ ೧೫ ॥

ಸರ್ವೇಷಾಮಾದಿಭೂತಸ್ತ್ವಂ ಸರ್ವಃ ಸರ್ವೇಶ್ವರಸ್ತಥಾ ।
ಸರ್ವಪಾತಾ ಚ ಸಂಹರ್ತಾ ಸೃಷ್ಟಿರೂಪ ನಮೋಽಸ್ತು ತೇ ॥ ೧೬ ॥

ತ್ವತ್ಪಾದಪದ್ಮರಜಸಾ ಧನ್ಯಾ ಪೂತಾ ವಸುಂಧರಾ ।
ಶೂನ್ಯರೂಪಾ ತ್ವಯಿ ಗತೇ ಹೇ ನಾಥ ಪರಮಂ ಪದಂ ॥ ೧೭ ॥

ಯತ್ಪಂಚವಿಂಶತ್ಯಧಿಕಂ ವರ್ಷಾಣಾಂ ಶತಕಂ ಗತಂ ।
ತ್ಯಕ್ತ್ವೇಮಾಂ ಸ್ವಪದಂ ಯಾಸಿ ರುದಂತೀಂ ವಿರಹಾತುರಾಂ ॥ ೧೮ ॥

---

೧೫. ಎಲೈ ಸರಸ್ವತಿಗೆ ಒಡೆಯನೇ! ಲಕ್ಷ್ಮೀಪತಿಯೇ! ಪಾರ್ವತೀಶನೇ! ಪರಾತ್ಪರನೇ! ಎಲೈ ಸಾವಿತ್ರೀಶನೇ! ರಾಧೆಯ ಪತಿಯೇ! ರಾಸೇಶ್ವರನೇ! ನಿನಗೆ ನಮಸ್ಕಾರವು

೧೬. ನೀನು ಸಕಲಕ್ಕೂ ಮೊದಲಿನವನಾಗಿರುತ್ತೀಯೆ, ಮತ್ತು ಸಕಲ ರೂಪನೂ ಸಕಲರಿಗೂ ಈಶ್ವರನೂ ಆಗಿರುತ್ತೀಯೆ. ಸಕಲ ಪ್ರಪಂಚವನ್ನು ಕಾಪಾಡುವವನೂ ಸಂಹಾರ ಮಾಡುವವನೂ ಸೃಷ್ಟಿಸ್ವರೂಪನೂ ಆದ ನಿನಗೆ ನಮಸ್ಕಾರವು

೧೭. ಭೂಮಿಯು ನಿನ್ನ ಪಾದಕಮಲಗಳ ಧೂಳಿಯ ಸಂಪರ್ಕದಿಂದ ಪವಿತ್ರ ವಾಗುತ್ತದೆ. ಎಲೈ ನಾಥನೇ! ನೀನು ಹೊರಟುಹೋಗಲು ಮೋಕ್ಷವೆಂಬುದು ಶೂನ್ಯಸ್ವರೂಪವಾಗುತ್ತದೆ.

೧೮. ಈಗ ನೂರ ಇಪ್ಪತ್ತೈದುವರುಷಗಳು ಕಳೆದುವು. ಈಗ ಅಳುತ್ತಿರುವ ವಿರಹದಿಂದ ಬಳಲಿರುವ ಇವಳನ್ನು ಬಿಟ್ಟು ನೀನು ಹೋಗುತ್ತಿರುವೆ.

|| ಶ್ರೀಮಹಾದೇವ ಉವಾಚ ||

ಬ್ರಹ್ಮಣಾಪ್ರಾರ್ಥಿತಸ್ತ್ವಂ ಚ ಸಮಾಗತ್ಯ ವಸುಂಧರಾಂ ।
ಭೂಭಾರಹರಣಂ ಕೃತ್ವಾ ಪ್ರಯೊಸಿ ಸ್ವಪದಂ ವಿಭೋ || ೧೯ ||

ತ್ರೈಲೋಕ್ಯೇ ಪೃಥಿವೀ ಧನ್ಯಾ ಸದ್ಯಃ ಪೂತಾ ಪದಾಂತಿಕಾ ।
ವಯಂ ಚ ಮುನಯೋ ಧನ್ಯಾಃ ಸಾಕ್ಷಾದ್ದೃಷ್ಟ್ವಾ ಪದಾಂಬುಜಂ || ೨೦ ||

ಧ್ಯಾನಾಸಾಧ್ಯೋ ದುರಾರಾಧ್ಯೋ ಮುನೀನಾಮೂರ್ಧ್ವರೇತಸಾಂ ।
ಅಸ್ಮಾಕಮನಘಶ್ಚೇಶಃ ಸೋಽಧುನಾ ಚಾಕ್ಷುಷೋ ಭುವಿ || ೨೧ ||

ವಾಸುಃ ಸರ್ವನಿವಾಸಶ್ಚ ವಿಶ್ವಾನಿ ಯಸ್ಯ ಲೋಮಸು ।
ದೇವಸ್ತಸ್ಯ ಮಹಾವಿಷ್ಣುರ್ವಾಸುದೇವೋ ಮಹೀತಲೇ || ೨೨ ||

---

ಶ್ರೀ ಮಹಾದೇವನು ಹೇಳುತ್ತಾನೆ :

೧೯. ಎಲೈ ವಿಭುವೇ! ನೀನು ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿ ಭೂಮಿಗೆ ಬಂದು ಭೂಮಿಯ ಬಾರವನ್ನು ಹೋಗಲಾಡಿಸಿದವನಾಗಿ ಈಗ ನಿನ್ನ ಸ್ಥಾನಕ್ಕೆ ಹೋಗುತ್ತಿರುವೆ.

೨೦. ಮೂರು ಲೋಕದಲ್ಲಿ ಭೂಮಿಯು ಧನ್ಯಳು. ಯಾಕೆಂದರೆ ನಿನ್ನ ಪಾದದ ಗುರುತನ್ನು ಹೊಂದಿ ಕೂಡಲೆ ಪವಿತ್ರಳಾಗಿರುವಳು. ನಾವೂ ಮುನಿಗಳೂ ಕೂಡ ನಿನ್ನ ಪಾದಕಮಲಗಳನ್ನು ಪ್ರತ್ಯಕ್ಷವಾಗಿ ಕಂಡು ಧನ್ಯರಾದೆವು.

೨೧. ಯಾವನು ನಮಗೂ ಊರ್ಧ್ವರೇತಸ್ಕರಾದ ಮುನಿಗಳಿಗೂ ಕೂಡ ಧ್ಯಾನದಿಂದ ಹೊಂದಲಸಾಧ್ಯನೋ ಕಷ್ಟದಿಂದ ಪೂಜಿಸಲು ಯೋಗ್ಯನೋ ದೋಷ ರಹಿತನೋ ಆ ಪರಮಾತ್ಮನು ಈಗ ಭೂಮಿಯಲ್ಲಿ ಕಣ್ಣಿಗೆ ಕಾಣಿಸುತ್ತಿರುವನು.

೨೨. ಯಾವನ ರೋಮಗಳಲ್ಲಿ ಸಕಲ ಪ್ರಪಂಚಗಳೂ ಅಡಗಿವೆಯೋ ಅಂಥಾ ಸರ್ವಕ್ಕೂ ವಾಸಸ್ಥಾನನಾದವನು ವಾಸುವು. ಅವನಿಗೆ ದೇವನಾದವನು ಮಹಾ ವಿಷ್ಣುವು. ಅವನು ವಾಸುದೇವನೆಂದು ಭೂಮಿಯಲ್ಲವತರಿಸಿರುವನು.

ಸುಚಿರಂ ತಪಸಾ ಲಬ್ಧಂ ಸಿದ್ಧೇಂದ್ರಾಣಾಂ ಸುದುರ್ಲಭಂ ।
ಯತ್ಪಾದಪದ್ಮಮತುಲಂ ಚಾಕ್ಷುಷಂ ಸರ್ವಜೀವಿನಾಂ ॥ ೨೩ ॥

॥ ಅನಂತ ಉವಾಚ ॥

ತ್ವಮನಂತೋ ಹಿ ಭಗವನ್ನಾಹಮೇವ ಕಲಾಂಶಕಃ ।
ವಿಶ್ವೈಕಸ್ಥೇ ಕ್ಷುದ್ರಕೂರ್ಮೇ ಮಶಕೋಹಂ ಗಜೇ ಯಥಾ ॥ ೨೪ ॥

ಅಸಂಖ್ಯಶೇಷಾಃ ಕೂರ್ಮಾಶ್ಚ ಬ್ರಹ್ಮವಿಷ್ಣು ಶಿವಾತ್ಮಕಾಃ ।
ಅಸಂಖ್ಯಾನಿ ಚ ವಿಶ್ವಾನಿ ತೇಷಾಮೀಶಃ ಸ್ವಯಂ ಭವಾನ್ ॥ ೨೫ ॥

ಅಸ್ಮಾಕಮೀದೃಶಂ ನಾಥ ಸುದಿನಂ ಕ್ವ ಭವಿಷ್ಯತಿ ।
ಸ್ವಪ್ನಾದೃಷ್ಟಶ್ಚ ಯಶ್ಚೇಶಃ ಸ ದೃಷ್ಟಃ ಸರ್ವಜೀವಿನಾಂ ॥ ೨೬ ॥

ನಾಥ ಪ್ರಯಾಸಿ ಗೋಲೋಕಂ ಪೂತಾಂ ಕೃತ್ವಾ ವಸುಂಧರಾಂ ।
ತಾಮನಾಥಾಂ ರುದಂತೀಂ ಚ ನಿಮಗ್ನಾಂ ಶೋಕಸಾಗರೇ ॥ ೨೭ ॥

---

೨೩. ಬಹುಕಾಲ ತಪಸ್ಸುಮಾಡಿ ಪಡೆಯಬೇಕಾದ ಸಿದ್ಧಶ್ರೇಷ್ಠರಿಗೂ ಅತಿ ದುರ್ಲಭವಾದ ಯಾವಪರಮಾತ್ಮನ ಎಣೆಯಿಲ್ಲದ ಪಾದಕಮಲವು ಸಕಲ ಪ್ರಾಣಿಗಳ ಕಣ್ಣಿಗೂ ಕಾಣಿಸುವಂತಾಗಿದೆ.

ಅನಂತನು ಹೇಳುತ್ತಾನೆ;

೨೪. ಎಲೈ ಮಹಾಮಹಿಮನೇ! ನೀನೇ ಅನಂತನು. ನಾನಲ್ಲ. ನಾನು ನಿನ್ನ ಕಲೆಯ ಅಂಶಮಾತ್ರದವನು. ಪ್ರಪಂಚದ ಒಂದು ಮೂಲೆಯಲ್ಲಿರುವ ಆಮೆಯಂತೆಯೂ ಆನೆಯ ಮೇಲಿರುವ ಸೊಳ್ಳೆಯಂತೆಯೂ ನಾನಿರುವೆನು.

೨೫. ಲೆಕ್ಕವಿಲ್ಲದಷ್ಟು ಶೇಷರೂ ಕೂರ್ಮಗಳೂ ಬ್ರಹ್ಮವಿಷ್ಣುಶಿವರೂ ಲೆಕ್ಕವಿಲ್ಲದಷ್ಟು ಪ್ರಪಂಚಗಳೂ ಇರುವುವು. ಅವುಗಳಿಗೆಲ್ಲ ನೀನೇ ಸಾಕ್ಷಾತ್ ಪ್ರಭುವು.

೨೬. ಎಲೈ ಸ್ವಾಮಿಯೇ! ನಮಗೆ ಈರೀತಿಯಾದ ಸುದಿನವು ಇನ್ನಾನಾಗ ಬರುವುದು? ಸ್ವಪ್ನದಲ್ಲಿಯೂ ನೋಡಲಸಾಧ್ಯನಾದ ಈಶನಾವನೋ ಅವನು ಸಕಲ ಪ್ರಾಣಿಗಳಿಂದಲೂ ನೋಡಲ್ಪಟ್ಟಿರುವನು.

೨೭. ಎಲೈ ಸ್ವಾಮಿಯೇ! ಭೂಮಿಯನ್ನು ಪವಿತ್ರಳನ್ನಾಗಿಮಾಡಿ ದಿಕ್ಕಿಲ್ಲದವಳಾಗಿ ದುಃಖಸಮುದ್ರದಲ್ಲಿ ಮುಳುಗಿ ಅಳುತ್ತಿರುವ ಆ ಭೂದೇವಿಯನ್ನು ಬಿಟ್ಟು ನೀನು ಗೋಲೋಕಕ್ಕೆ ಹೋಗುತ್ತಿರುವೆ.

॥ ದೇವಾ ಊಚುಃ ॥

ವೇದಾಸ್ತೋತುಂ ನ ಶಕ್ತಾ ಯಂ ಬ್ರಹ್ಮೇಶಾನಾದಯಸ್ತಥಾ ।
ತಮೇವ ಸ್ತವನಂ ಕಿಂ ವಾ ವಯಂ ಕುರ್ಮೋ ನಮೋಸ್ತು ತೇ ॥ ೨೮ ॥

ಇತ್ಯೇವಮುಕ್ತ್ವಾ ದೇವಾಸ್ತೇ ಪ್ರಯಯುರ್ದ್ವಾರಕಾಂ ಪುರೀಂ ।
ತತ್ರಸ್ಥಂ ಭಗವಂತಂ ಚ ದ್ರಷ್ಟುಂ ಶೀಘ್ರಂ ಮುದಾನ್ವಿತಾಃ ॥ ೨೯ ॥

ಅಥ ತೇಷಾಂ ಚ ಗೋಪಾಲಾ ಯಯುರ್ಗೋಲೋಕಮುತ್ತಮಂ ।
ಪೃಥಿವೀ ಕಂಪಿತಾ ಭೀತಾ ಚಲಂತಃ ಸಪ್ತಸಾಗರಾಃ ॥ ೩೦ ॥

ಹತಶ್ರಿಯಂ ದ್ವಾರಕಾಂ ಚ ತ್ಯಕ್ತ್ವಾ ಚ ಬ್ರಹ್ಮಶಾಪತಃ ।
ಮೂರ್ತಿಂ ಕದಂಬಮೂಲಸ್ಥಾಂ ವಿವೇಶ ರಾಧಿಕೇಶ್ವರಃ ॥ ೩೧ ॥

---

ದೇವತೆಗಳು ಹೇಳುತ್ತಾರೆ:

೨೮. ಯಾವನನ್ನು ವೇದಗಳುಕೂಡ ಸ್ತೋತ್ರಮಾಡಲಶಕ್ತಗಳೋ ಬ್ರಹ್ಮ ಈಶಾನ ಮುಂತಾದವರೂ ಕೂಡ ಯಾವನನ್ನು ಸ್ತುತಿಸಲಸಮರ್ಥರೋ ಅಂಥವನನ್ನು ನಾವು ಏನೆಂದು ಸ್ತೋತ್ರಮಾಡೋಣ? ನಿನಗೆ ನಮಸ್ಕಾರವು.

೨೯. ಈ ಪ್ರಕಾರವಾಗಿ ಹೇಳಿ ದೇವತೆಗಳೆಲ್ಲರೂ ಸಂತೋಷದಿಂದ ದ್ವಾರಕಾ ಪಟ್ಟಣದಲ್ಲಿರುವ ಪರಮಾತ್ಮನನ್ನು ನೋಡುವುದಕ್ಕಾಗಿ ಶೀಘ್ರವಾಗಿ ದ್ವಾರಕಾನಗರವನ್ನು ಕುರಿತು ಪ್ರಯಾಣಮಾಡಿದರು.

೩೦. ಅನಂತರ ಅವರ ಮಧ್ಯದಲ್ಲಿದ್ದ ಗೋಪಾಲರು ಉತ್ತಮವಾದ ಗೋಲೋಕವನ್ನು ಕುರಿತು ತೆರಳಿದರು. ಭೂಮಿಯು ಹೆದರಿ ನಡುಗಿತು. ಏಳು ಸಮುದ್ರಗಳೂ ಮೇರೆವಿಾರಿದುವು.

೩೧. ರಾಧೇಶ್ವರನು ಕಾಂತಿಹೀನವಾದ ದ್ವಾರಕಾಪಟ್ಟಣವನ್ನು ಬಿಟ್ಟು ಬ್ರಾಹ್ಮಣಶಾಪಕ್ಕನುಸಾರವಾಗಿ ಕದಂಬವೃಕ್ಷದ ಬುಡದಲ್ಲಿರುವ ವಿಗ್ರಹವನ್ನು ಪ್ರವೇಶಿಸಿದನು.

ತೇ ಸರ್ವೇ ಚೈರಕಾಯುದ್ಧೇ ನಿಪೇತುರ್ಯಾದವಾಸ್ತಥಾ ।
ಚಿಂತಾಮಾರುಹ್ಯ ದೇವ್ಯಶ್ಚ ಪ್ರಯಯೌ ಸ್ವಾಮಿಭಿಃ ಸಹ ॥ ೩೨ ॥

ಅರ್ಜುನಃ ಸ್ವಪುರಂ ಗತ್ವಾ ತಮುವಾಚ ಯುಧಿಷ್ಠಿರಂ ।
ಸ ರಾಜಾ ಭ್ರಾತೃಭಿಃ ಸಾರ್ಧಂ ಯಯೌ ಸ್ವರ್ಗಂ ಚ ಭಾರ್ಯಯಾ ॥ ೩೩ ॥

ದೃಷ್ಟ್ವಾ ಕದಂಬಮೂಲಸ್ಯ ತಿಷ್ಠಂತಂ ಪರಮೇಶ್ವರಂ ।
ದೇವಾ ಬ್ರಹ್ಮಾದಯಸ್ತೇ ಚ ಪ್ರಣೇಮುರ್ಭಕ್ತಿಪೂರ್ವಕಂ ॥ ೩೪ ॥

ತುಷ್ಟುವುಃ ಪರಮಾತ್ಮಾನಂ ದೇವಂ ನಾರಾಯಣಂ ಪ್ರಭುಂ ।
ಶ್ಯಾಮಂ ಕಿಶೋರವಯಸಂ ಭೂಷಿತಂ ರತ್ನಭೂಷಣೈಃ ॥ ೩೫ ॥

ವಹ್ನಿಶುದ್ಧಾಂಶುಕಾಧಾನಂ ಶೋಭಿತಂ ವನಮಾಲಯಾ ।
ಅತೀವ ಸುಂದರಂ ಕಾಂತಂ ಲಕ್ಷ್ಮೀಕಾಂತಂ ಮನೋಹರಂ ॥ ೩೬ ॥

---

೩೨. ಆ ಯಾದವರೆಲ್ಲರೂ ಪರಸ್ಪರ ಹೊಡೆದಾಡಿಕೊಂಡು ಮಡಿದರು. ಅವರ ಪತ್ನಿಯರೆಲ್ಲರೂ ತಮ್ಮ ತಮ್ಮ ಗಂಡಂದಿರೊಡನೆ ಚಿತೆಯನ್ನು ಹತ್ತಿ ಸಹಗಮನ ಮಾಡಿದರು.

೩೩. ಅರ್ಜುನನು ಹಸ್ತಿನಾವತಿಗೆ ಹೋಗಿ ಈ ಸಮಾಚಾರವನ್ನೆಲ್ಲ ಧರ್ಮ ರಾಜನಿಗೆ ತಿಳಿಸಿದನು. ರಾಜನಾದ ಯುಧಿಷ್ಠಿರನು ಅದನ್ನು ಕೇಳಿ ತಮ್ಮಂದಿ ರೊಡನೆಯೂ ಹೆಂಡತಿಯಾದ ದ್ರೌಪದಿಯೊಡನೆಯೂ ಸ್ವರ್ಗಕ್ಕೆಹೋದನು.

೩೪. ಈಚಲಮರದ ಬುಡದಲ್ಲಿರುವ ಪರಮಾತ್ಮನ ಮೂರ್ತಿಯನ್ನು ಬ್ರಹ್ಮನೇ ಮುಂತಾದ ದೇವತೆಗಳು ಬಂದು ನೋಡಿದರು. ಮತ್ತು ಅತ್ಯಂತ ಭಕ್ತಿಪೂರ್ವಕವಾಗಿ ನಮಸ್ಕಾರಮಾಡಿದರು.

೩೫–೩೭. ಪರಮಾತ್ಮನೂ ದೇವನೂ ನಾರಾಯಣನೂ ಸಕಲ ಜಗತ್ತಿಗೂ ಪ್ರಭುವೂ ಶ್ಯಾಮವರ್ಣವುಳ್ಳವನೂ ಬಾಲ್ಯವಯಸ್ಸುಳ್ಳವನೂ ರತ್ನಾಭರಣಗಳಿಂದ ಅಲಂಕರಿಸಿಕೊಂಡವನೂ ಅಗ್ನಿಯಂತೆ ಶುಭ್ರವಾದ ಬಟ್ಟೆಯನ್ನುಧರಿಸಿದವನೂ ವನಮಾಲೆಯಿಂದ ಕಂಗೊಳಿಸುತ್ತಿರುವವನೂ ಅತ್ಯಂತ ಸುಂದರನೂ ಶಾಂತನೂ

ವ್ಯಾಧಾಸ್ತ್ರಸಂಯುತಂ ಪಾದಪದ್ಮಂ ಬ್ರಹ್ಮಾದಿವಂದಿತಂ ।
ದೃಷ್ಟ್ವಾ ಬ್ರಹ್ಮಾದಿದೇವಾಂಸ್ತಾನಭಯಂ ಸಸ್ಮಿತಂ ದದೌ ॥ ೩೭ ॥

ಪೃಥಿವೀಂ ತಾಂ ಸಮಾಶ್ವಾಸ್ಯ ರುದಂತೀಂ ಪ್ರೇಮವಿಹ್ವಲಾಂ ।
ವ್ಯಾಧಂ ಪ್ರಸ್ಥಾಪಯಾಮಾಸ ಪರಂ ಸ್ವಪದಮುತ್ತಮಂ ॥ ೩೮ ॥

ಬಲಸ್ಯ ತೇಜಃ ಶೇಷೇ ಚ ವಿವೇಶ ಪರಮಾದ್ಭುತಂ ।
ಪ್ರದ್ಯುಮ್ನಸ್ಯ ಚ ಕಾಮೈಕೇ ವಾನಿರುದ್ಧಸ್ಯ ಬ್ರಹ್ಮಣಿ ॥ ೩೯ ॥

ಅಯೋನಿಸಂಭವಾ ದೇವೀ ಮಹಾಲಕ್ಷ್ಮೀಶ್ಚ ರುಕ್ಮಿಣೀ ।
ವೈಕುಂಠಂ ಪ್ರಯಯೌ ಸಾಕ್ಷಾತ್ಸ್ವಶರೀರೇಣ ನಾರದ ॥ ೪೦ ॥

---

ಲಕ್ಷ್ಮೀಪ್ರಿಯಪತಿಯೂ ಮನೋಹರನೂ ಬೇಡರವನಬಾಣದಿಂದ ಹೊಡೆಯಲ್ಪಟ್ಟ ಪಾದಕಮಲವುಳ್ಳವನೂ ಬ್ರಹ್ಮನೇ ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟವನೂ ಆದ ದೇವನನ್ನು ದೇವತೆಗಳೆಲ್ಲರೂ ಸ್ತೋತ್ರಮಾಡಿದರು. ಪರಮಾತ್ಮನು ಬ್ರಹ್ಮನೇ ಮುಂತಾದ ದೇವತೆಗಳನ್ನು ನೋಡಿ ಮಂದಹಾಸವನ್ನು ಬೀರುತ್ತ ಅವರಿಗೆ ಅಭಯವನ್ನು ಕೊಟ್ಟನು.

೩೮. ಅಳುತ್ತಲಿರುವ ಪ್ರೇಮದಿಂದ ಕೂಡಿದ ಭೂಮಿದೇವಿಯನ್ನು ಸಮಾಧಾನಪಡಿಸಿದವನಾಗಿ ಬೇಡರವನನ್ನು ಅತ್ಯಂತ ಶ್ರೇಷ್ಠವಾದ ತನ್ನಸ್ಥಾನಕ್ಕೆ ಕಳುಹಿದನು.

೩೯. ಅದ್ಭುತವಾದ ಬಲರಾಮನ ತೇಜಸ್ಸು ಆದಿಶೇಷನಲ್ಲಿ ಪ್ರವೇಶಮಾಡಿತು. ಪ್ರದ್ಯುಮ್ನನ ತೇಜಸ್ಸು ಕಾಮನಲ್ಲಿಯೂ ಅನಿರುದ್ಧನ ತೇಜಸ್ಸು ಬ್ರಹ್ಮನಲ್ಲಿಯೂ ಸೇರಿತು.

೪೦. ನಾರದನೇ! ಅಯೋನಿಜಳಾದ ಮಹಾಲಕ್ಷ್ಮೀಸ್ವರೂಪಳಾದ ರುಕ್ಮಿಣೀದೇವಿಯು ತಾನು ತನ್ನ ಶರೀರದಿಂದಲೇ ವೈಕುಂಠಕ್ಕೆ ಹೋದಳು.

ಸತ್ಯಭಾಮಾ ಪೃಥಿವ್ಯಾಂ ಚ ವಿವೇಶ ಕಮಲಾಲಯಾ ।
ಸ್ವಯಂ ಜಾಂಬವತೀ ದೇವೀ ಪಾರ್ವತ್ಯಾಂ ವಿಶ್ವಮಾತರಿ ॥ ೪೧ ॥

ಯಾ ಯಾ ದೇವ್ಯಶ್ಚ ಯಾಸಾಂ ಚಾಪ್ಯಂಶರೂಪಾಶ್ಚ ಭೂತಲೇ ।
ತಸ್ಯಾಂ ತಸ್ಯಾಂ ಪ್ರವಿವಿಶುಸ್ತಾ ಏವ ಚ ಪೃಥಕ್‌ಪೃಥಕ್ ॥ ೪೨ ॥

ಸಾಂಬಸ್ಯ ತೇಜಃ ಸ್ಕಂದೇ ಚ ವಿವೇಶ ಪರಮಾದ್ಭುತಂ ।
ಕಶ್ಯಪೇ ವಸುದೇವಶ್ಚಾಪ್ಯದಿತ್ಯಾಂ ದೇವಕೀ ತಥಾ ॥ ೪೩ ॥

ರುಕ್ಮಿಣೀ ಮಂದಿರಂ ತ್ಯಕ್ತ್ವಾ ಸಮಸ್ತಾಂ ದ್ವಾರಕಾಂ ಪುರೀಂ ।
ಸ ಜಗ್ರಾಹ ಸಮುದ್ರಶ್ಚ ಪ್ರಪುಲ್ಲವದನೇಕ್ಷಣಃ ॥ ೪೪ ॥

ಲವಣೋದಃ ಸಮಾಗತ್ಯ ತುಷ್ಟಾವ ಪುರುಷೋತ್ತಮಂ ।
ರುರೋದ ತದ್ವಿಯೋಗೇನ ಸಾಶ್ರುನೇತ್ರಶ್ಚ ವಿಹ್ವಲಃ ॥ ೪೫ ॥

---

೪೧. ಲಕ್ಷ್ಮೀರೂಪಳಾದ ಸತ್ಯಭಾಮೆಯು ಭೂಮಿಯಲ್ಲಿ ಸೇರಿದಳು. ಜಾಂಬವತೀದೇವಿಯು ತಾನು ಜಗತ್ತಿಗೆ ತಾಯಿಯಾದ ಪಾರ್ವತಿಯಲ್ಲಿ ಸೇರಿದಳು.

೪೨. ಯಾವಯಾವ ದೇವಿಯರು ಯಾರಯಾರ ಅಂಶದಿಂದ ಭೂಮಿಯಲ್ಲಿ ಅವತಾರಮಾಡಿದ್ದರೋ ಆಯಾಯ ದೇವಿಯರಲ್ಲಿ ಬೇರೆಬೇರೆಯಾಗಿ ತಾವು ತಾವು ಪ್ರವೇಶಮಾಡಿದರು.

೪೩. ಅದ್ಭುತವಾದ ಸಾಂಬನ ತೇಜಸ್ಸು ಷಣ್ಮುಖನಲ್ಲಿ ಸೇರಿತು. ವಸುದೇವನತೇಜಸ್ಸು ಕಶ್ಯಪನಲ್ಲಿಯೂ ದೇವಕಿಯತೇಜಸ್ಸು ಅದಿತಿಯಲ್ಲಿಯೂ ಸೇರಿದವು.

೪೪. ಅರಳಿದ ಕಣ್ಣು ಬಾಯಿಗಳುಳ್ಳವವನಾಗಿ ಸಮುದ್ರನು ರುಕ್ಮಿಣಿಯ ಮನೆಯೊಂದನ್ನು ಬಿಟ್ಟು ಉಳಿದ ದ್ವಾರಕಾಪಟ್ಟಣವನ್ನೆಲ್ಲ ಆವರಿಸಿದನು.

೪೫. ಸಮುದ್ರರಾಜನು ಬಂದು ಪುರುಷೋತ್ತಮನಾದ ಪರಮಾತ್ಮನನ್ನು ಸ್ತೋತ್ರಮಾಡಿದನು. ಅವನ ಅಗಲುವಿಕೆಯಿಂದ ಭಯಗೊಂಡವನಾಗಿ ಕಣ್ಣುಗಳಲ್ಲಿ ನೀರುಸುರಿಸುತ್ತ ಅತ್ತನು.

ಗಂಗಾ ಸರಸ್ವತೀ ಪದ್ಮಾವತೀ ಚ ಯಮುನಾ ತಥಾ ।
ಗೋದಾವರೀ ಸ್ವರ್ಣರೇಖಾ ಕಾವೇರೀ ನರ್ಮದಾ ಮುನೇ　　॥ ೪೬ ॥

ಶರಾವತೀ ಬಾಹುದಾ ಚ ಕೃತಮಾಲಾ ಚ ಪುಣ್ಯದಾ ।
ಸಮಾಯಯುಶ್ಚ ತಾಃ ಸರ್ವಾಃ ಪ್ರಣೇಮುಃ ಪರಮೇಶ್ವರಂ　　॥ ೪೭ ॥

ಉವಾಚ ಜಾಹ್ನವೀ ದೇವೀ ರುದಂತೀ ಪರಮೇಶ್ವರಂ ।
ಸಾಶ್ರುನೇತ್ರಾತಿದೀನಾ ಸಾ ವಿರಹಜ್ವರಕಾತರಾ　　॥ ೪೮ ॥

॥ ಭಾಗೀರಥ್ಯುವಾಚ ॥

ಹೇ ನಾಥ ರಮಣಶ್ರೇಷ್ಠ ಯಾಸಿ ಗೋಲೋಕಮುತ್ತಮಂ ।
ಅಸ್ಮಾಕಂ ಕಾ ಗತಿಶ್ಚಾತ್ರ ಭವಿಷ್ಯತಿ ಕಲೌ ಯುಗೇ　　॥ ೪೯ ॥

॥ ಶ್ರೀ ಭಗವಾನುವಾಚ ॥

ಕಲೇಃ ಪಂಚಸಹಸ್ರಾಣಿ ವರ್ಷಾಣಿ ತಿಷ್ಠ ಭೂತಲೇ ।
ಪಾಪಾನಿ ಪಾಪಿನೋ ಯಾನಿ ತುಭ್ಯಂ ದಾಸ್ಯಂತಿ ಸ್ನಾನತಃ　　॥ ೫೦ ॥

---

೪೬–೪೭. ಎಲೈ ನಾರದ ಮುನಿಯೇ! ಗಂಗಾಸರಸ್ವತೀ ಪದ್ಮಾವತೀ ಯಮುನಾ ಮತ್ತು ಗೋದಾವರೀ ಸ್ವರ್ಣರೇಖಾ ಕಾವೇರಿ ನರ್ಮದಾ ಶರಾವತೀ ಬಾಹುದಾ ಕೃತಮಾಲಾ ಪುಣ್ಯದಾ ಮುಂತಾದ ಮಹಾನದಿಗಳೆಲ್ಲ ಅಲ್ಲಿಗೆ ಬಂದು ಎಲ್ಲರೂ ಪರಮೇಶ್ವರನಿಗೆ ನಮಸ್ಕಾರ ಮಾಡಿದರು.

೪೮ ಜಾಹ್ನವೀದೇವಿಯು ಕಣ್ಣೀರಿಡುತ್ತ ಅಳುತ್ತಿರುವವಳಾಗಿಯೂ ವಿರಹ ಜ್ವರದಿಂದ ಕಾತುರಳಾಗಿಯೂ ಪರಮೇಶ್ವರನನ್ನು ಕುರಿತು ಇಂತೆಂದಳು.

೪೯. ಭಾಗೀರಥೀ :— ಎಲೈ ರಮಣನೇ! ಸ್ವಾಮಿಯೇ! ನೀನು ಉತ್ತಮವಾದ ಗೋಲೋಕವನ್ನು ಕುರಿತು ಹೋಗುವವನಾಗುತ್ತೀಯೆ. ನಮಗೆ ಕಲಿಯುಗದಲ್ಲಿ ಈ ಭೂಲೋಕದಲ್ಲಿ ಗತಿಯಾವುದು ಉಂಟಾಗುತ್ತದೆ?

೫೦–೫೧. ಶ್ರೀ ಭಗವಂತನು ಹೇಳುತ್ತಾನೆ :—ಎಲೈ ಜಾಹ್ನವಿಯೇ! ಕಲಿಯುಗದ ಐದುಸಾವಿರವರುಷಗಳವರೆಗೆ ನೀನು ಭೂಮಿಯಲ್ಲಿರುವವಳಾಗು.

ಮನ್ಮಂತ್ರೋಪಾಸಕಸ್ಪರ್ಶಾದ್ಭಸ್ಮೀಭೂತಾನಿ ತತ್ಕ್ಷಣಾತ್ ।
ಭವಿಷ್ಯಂತಿ ದರ್ಶನಾಚ್ಚ ಸ್ನಾನಾದೇವ ಹಿ ಜಾಹ್ನವಿ ॥ ೫೧ ॥

ಹರೇರ್ನಾಮಾನಿ ಯತ್ರೈವ ಪುರಾಣಾನಿ ಭವಂತಿ ಹಿ ।
ತತ್ರ ಗತ್ವಾ ಸಾವಧಾನಮಾಭಿಃ ಸಾರ್ಧಂ ಚ ಶ್ರೋಷ್ಯಸಿ ॥ ೫೨ ॥

ಪುರಾಣಶ್ರವಣಾಚ್ಚೈವ ಹರೇರ್ನಾಮಾನುಕೀರ್ತನಾತ್ ।
ಭಸ್ಮೀಭೂತಾನಿಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ॥ ೫೩ ॥

ಭಸ್ಮೀಭೂತಾನಿ ತಾನ್ಯೇವ ವೈಷ್ಣವಾಲಿಂಗನೇನ ಚ ।
ತೃಣಾನಿ ಶುಷ್ಕಕಾಷ್ಠಾನಿ ದಹಂತಿ ಪಾವಕೋ ಯಥಾ ॥ ೫೪ ॥

ತಥಾಪಿ ವೈಷ್ಣವಾ ಲೋಕೇ ಪಾಪಾನಿ ಪಾಪಿನಾಮಪಿ ।
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಪಿ ಚ ಜಾಹ್ನವಿ ॥ ೫೫ ॥

---

ಪಾಪಿಗಳಾದವರು ನಿನ್ನಲ್ಲಿ ಸ್ನಾನಮಾಡಿ ಯಾವ ತಮ್ಮ ಪಾಪಗಳನ್ನು ನಿನಗೆ ಕೊಡು ತ್ತಾರೆಯೋ ಅವುಗಳು ನನ್ನ ಮಂತ್ರವನ್ನು ಉಪಾಸನೆಮಾಡುವವರ ಸ್ಪರ್ಶದಿಂದಲೂ ದರ್ಶನದಿಂದಲೂ ಕ್ಷಣಮಾತ್ರದಲ್ಲಿ ಬೂದಿಯಾಗುತ್ತವೆ.

೫೨. ಯಾವಸ್ಥಳದಲ್ಲಿ ಶ್ರೀಹರಿಯ ನಾಮಕೀರ್ತನೆಯಾಗುತ್ತದೆಯೊ ಎಲ್ಲಿ ಪುರಾಣಶ್ರವಣವಾಗುತ್ತದೆಯೊ ಅಲ್ಲಿಗೆ ಈ ನದಿಗಳೊಡನೆ ಹೋಗಿ ಕೇಳುವವಳಾಗು.

೫೩. ಪುರಾಣಗಳನ್ನು ಕೇಳುವುದರಿಂದಲೂ ಶ್ರೀಹರಿಯ ನಾಮಕೀರ್ತನೆ ಯನ್ನು ಯಾವಾಗಲೂ ಮಾಡುವುದರಿಂದಲೂ ಕೂಡ ಬ್ರಹ್ಮಹತ್ಯೆಯೇ ಮೊದಲಾದ ಪಾತಕಗಳು ಬೂದಿಯಾಗಿ ಹೋಗುತ್ತವೆ.

೫೪. ಬ್ರಹ್ಮಹತ್ಯೆಯೇ ಮುಂತಾದ ಪಾಪಗಳು ವಿಷ್ಣುಭಕ್ತರ ಆಲಿಂಗನಮಾತ್ರ ದಿಂದಲೇ ಬೆಂಕಿಯು ಹುಲ್ಲನ್ನು ಮತ್ತು ಒಣಗಿದ ಕಟ್ಟಿಗೆಯನ್ನೂ ಹೇಗೆ ಸುಡುತ್ತದೋ ಹಾಗೆಯೇ ಸುಟ್ಟು ಬೂದಿಯಾಗುತ್ತವೆ.

೫೫–೫೬. ಹಾಗೆಯೇ ವಿಷ್ಣುಭಕ್ತರ ಸಂದರ್ಶನ ಮಾತ್ರದಿಂದ ಪಾಪಿಗಳ ಪಾಪಗಳೆಲ್ಲವೂ ನಾಶವಾಗುತ್ತವೆ. ಎಲೈ ಜಾಹ್ನವಿಯೇ ಭೂಮಿಯಲ್ಲಿ ಪುಣ್ಯತೀರ್ಥ

ಮದ್ಭಕ್ತಾನಾಂ ಶರೀರೇಷು ಸಂತಿ ಪೂತೇಷು ಸಂತತಂ ।
ಮದ್ಭಕ್ತಪಾದರಜಸಾ ಸದ್ಯಃ ಪೂತಾ ವಸುಂಧರಾ ॥ ೫೬ ॥

ಸದ್ಯಃ ಪೂತಾನಿ ತೀರ್ಥಾನಿ ಸದ್ಯಃ ಪೂತಂ ಜಗತ್ತಥಾ ।
ಮನ್ಮಂತ್ರೋಪಾಸಕಾ ವಿಪ್ರಾ ಯೇ ಮದುಚ್ಛಿಷ್ಟಭೋಜಿನಃ ॥ ೫೭ ॥

ಮಾಮೇವ ನಿತ್ಯಂ ಧ್ಯಾಯಂತೇ ತೇ ಮತ್ಪ್ರಾಣಾಧಿಕಾಃ ಪ್ರಿಯಾಃ ।
ತೇಷುಪಸ್ಪರ್ಶಮಾತ್ರೇಣ ಪೂತೋ ವಾಯುಶ್ಚ ಪಾವಕಃ ॥ ೫೮ ॥

ಕಲೇರ್ದಶಸಹಸ್ರಾಣಿ ಮದ್ಭಕ್ತಾಃ ಸಂತಿ ಭೂತಲೇ ।
ಏಕವರ್ಣಾ ಭವಿಷ್ಯಂತಿ ಮದ್ಭಕ್ತೇಷು ಗತೇಷು ಚ ॥ ೫೯ ॥

ಮದ್ಭಕ್ತಶೂನ್ಯಾ ಪೃಥಿವೀ ಕಲಿಗ್ರಸ್ತಾ ಭವಿಷ್ಯತಿ ।
ಏತಸ್ಮಿನ್ನಂತರೇ ತತ್ರ ಕೃಷ್ಣದೇಹಾದ್ವಿನಿರ್ಗತಃ ॥ ೬೦ ॥

---

ಗಳು ಎಷ್ಟು ಇವೆಯೋ ಅವುಗಳೆಲ್ಲವೂ ಪರಿಶುದ್ಧರಾದ ನನ್ನ ಭಕ್ತರ ಶರೀರಗಳಲ್ಲಿ ಯಾವಾಗಲೂ ಇರುತ್ತವೆ. ನನ್ನ ಭಕ್ತರಾದವರ ಕಾಲಿನ ಧೂಳಿನಿಂದ ಭೂಮಿಯು ಕೂಡಲೇ ಪವಿತ್ರವಾಗುತ್ತದೆ.

೫೭–೫೮. ಅವರ ಪಾದಧೂಳಿನಿಂದ ಸಕಲ ತೀರ್ಥಗಳೂ ಕೂಡಲೆ ಪವಿತ್ರಗಳಾಗುತ್ತವೆ. ಮತ್ತು ಸಕಲ ಜಗತ್ತೂ ಪರಿಶುದ್ಧವಾಗುತ್ತದೆ. ಯಾವ ಬ್ರಾಹ್ಮಣರು ನನ್ನ ಮಂತ್ರವನ್ನು ಉಪಾಸನೆ ಮಾಡುತ್ತಾರೆಯೊ ಯಾರು ನನ್ನ ನಿವೇದನವನ್ನು ಊಟಮಾಡುತ್ತಾರೊ ಯಾರು ನಿತ್ಯವೂ ನನ್ನನ್ನೇಧ್ಯಾನ ಮಾಡುತ್ತಾರೆಯೋ ಅವರು ನನಗೆ ಪ್ರಾಣಕ್ಕಿಂತಲೂಪ್ರಿಯರು. ಅವರನ್ನು ಸ್ಪರ್ಶಮಾಡಿದ ಮಾತ್ರದಿಂದಲೇ ಗಾಳಿಯೂ ಬೆಂಕಿಯೂ ಪವಿತ್ರಗಳಾಗುತ್ತವೆ.

೫೯. ಕಲಿಯುಗದ ಹತ್ತುಸಾವಿರ ವರುಷಗಳವರೆಗೆ ಭೂಲೋಕದಲ್ಲಿ ನನ್ನ ಭಕ್ತರು ಇರುತ್ತಾರೆ. ಆ ನನ್ನ ಭಕ್ತರು ಭೂಮಿಯನ್ನು ಬಿಟ್ಟನಂತರ ಭೂಮಿಯಲ್ಲಿ ಒಂದೇಜಾತಿಯಾಗುತ್ತದೆ.

೬೦–೬೧. ನನ್ನ ಭಕ್ತರಿಲ್ಲದೆ ಭೂಮಿಯು ಕಲಿಯಿಂದ ಆವರಿಸಲ್ಪಟ್ಟು ದಾಗುತ್ತದೆ. ಈಮಧ್ಯದಲ್ಲಿ ಅಲ್ಲಿ ಶ್ರೀಕೃಷ್ಣನ ಶರೀರದಿಂದ ನಾಲ್ಕು ತೋಳುಗಳುಳ್ಳ

ಚತುರ್ಭುಜಶ್ಚ ಪುರುಷಃ ಶತಚಂದ್ರಸಮಪ್ರಭಃ ।
ಶಂಖಚಕ್ರಗದಾಪದ್ಮಧರಃ ಶ್ರೀವತ್ಸಲಾಂಛನಃ ॥ ೬೧ ॥

ಸುಂದರಂ ರಥಮಾರುಹ್ಯ ಕ್ಷೀರೋದಂ ಸ ಜಗಾಮ ಹ ।
ಸಿಂಧುಕನ್ಯಾ ಚ ಪ್ರಯಯೌ ಸ್ವಯಂ ಮೂರ್ತಿಮತೀ ಸತೀ ॥ ೬೨ ॥

ಶ್ರೀಕೃಷ್ಣಮನಸಾ ಜಾತಾ ಮರ್ತ್ಯಲಕ್ಷ್ಮೀರ್ಮನೋಹರಾ ।
ಶ್ವೇತದ್ವೀಪಂ ಗತೇ ವಿಷ್ಣೌ ಜಗತ್ಪಾಲನಕರ್ತರಿ ॥ ೬೩ ॥

ಶುದ್ಧಸತ್ತ್ವಸ್ವರೂಪೇ ಚ ದ್ವಿಧಾ ರೂಪೋ ಬಭೂವ ಹ ।
ದಕ್ಷಿಣಾಂಶಶ್ಚ ದ್ವಿಭುಜೋ ಗೋಪಬಾಲಕರೂಪಕಃ ॥ ೬೪ ॥

ನವೀನಜಲದಶ್ಯಾಮಃ ಶೋಭಿತಃ ಪೀತವಾಸಸಾ ।
ಶ್ರೀವಂಶವದನಃ ಶ್ರೀಮಾನ್ಸಸ್ಮಿತಃ ಪದ್ಮಲೋಚನಃ ॥ ೬೫ ॥

---

ನೂರು ಚಂದ್ರರಿಗೆ ಸಮನಾದ ಕಾಂತಿಯುಳ್ಳ ಶಂಖ ಚಕ್ರ ಗದೆ ಪದ್ಮ ಇವುಗಳನ್ನು ಕೈಯಲ್ಲಿ ಹಿಡಿದಿರುವ ಶ್ರೀವತ್ಸವೆಂಬ ಗುರುತಿನಿಂದ ಕೂಡಿದ ಪುರುಷನೊಬ್ಬನು ಹೊರಹೊರಟನು.

೬೨-೬೩. ಅವನು ಸುಂದರವಾದ ರಥವನ್ನು ಹತ್ತಿಕೊಂಡು ಹಾಲಿನ ಸಮುದ್ರವನ್ನು ಕುರಿತು ಹೊರಟು ಹೋದನು. ಮಾನವಲಕ್ಷ್ಮಿಯೂ ಮನೋಹರಳೂ ಶ್ರೀಕೃಷ್ಣನ ಮನಸ್ಸಿನಿಂದ ಹುಟ್ಟಿದವಳೂ ಆದ ಲಕ್ಷ್ಮಿಯು ಜಗತ್ಪಾಲನ ಕಾರಣ ನಾದ ವಿಷ್ಣುವು ಶ್ವೇತದ್ವೀಪನ್ನು ಕುರಿತು ಪ್ರಯಾಣ ಮಾಡಲು ತಾನೂ ಶರೀರ ಸಹಿತಳಾಗಿ ಹೊರಟುಹೋದಳು.

೬೪. ಶುದ್ಧಸತ್ವಸ್ವರೂಪವಾದ ಮೂರ್ತಿಯಲ್ಲಿ ಎರಡು ವಿಧವಾದ ರೂಪ ವುಂಟಾಯಿತು. ಬಲಭಾಗದ ಅಂಶವು ಎರಡುತೋಳುಗಳುಳ್ಳ ಗೋಪಬಾಲಕರ ರೂಪವಾಯಿತು.

೬೫. ಅವನು ಹೊಸ ಮೋಡದಂತೆ ಕಪ್ಪುಬಣ್ಣವುಳ್ಳವನೂ ಪೀತಾಂಬರ ದಿಂದ ಕಂಗೊಳಿಸುವವನೂ ಕಾಂತಿಯಿಂದ ಕೂಡಿದ ಕೊಳಲನ್ನು ಬಾರಿಸುವವನೂ ಕಾಂತಿಯಿಂದ ಕೂಡಿದವನೂ ಮುಗುಳು ನಗೆಯಿಂದ ಕೂಡಿದವನೂ ಕಮಲದಂತೆ ಸುಂದರವಾದ ಕಣ್ಣುಳ್ಳವನೂ ಆಗಿದ್ದನು.

ಶತಕೋಟೀಂದುಸೌಂದರ್ಯಂ ಶತಕೋಟಿಸ್ಮರಪ್ರಭಂ ।
ದಧಾನಃ ಪರಮಾನಂದಃ ಪರಿಪೂರ್ಣತಮಃ ಪ್ರಭುಃ ॥ ೬೬ ॥

ಪರಂ ಧಾಮ ಪರಬ್ರಹ್ಮ ಸ್ವರೂಪೋ ನಿರ್ಗುಣಃ ಸ್ವಯಂ ।
ಪರಮಾತ್ಮಾ ಚ ಸರ್ವೇಷಾಂ ಭಕ್ತಾನುಗ್ರಹವಿಗ್ರಹಃ ॥ ೬೭ ॥

ನಿತ್ಯದೇಹಶ್ಚ ಭಗವಾನೀಶ್ವರಃ ಪ್ರಕೃತೇಃ ಪರಃ ।
ಯೋಗಿನೋ ಯಂ ವದಂತ್ಯೇವಂ ಜ್ಯೋತೀರೂಪಂ ಸನಾತನಂ ॥ ೬೮ ॥

ಜ್ಯೋತಿರಭ್ಯಂತರೇ ನಿತ್ಯರೂಪಂ ಭಕ್ತಾ ವದಂತಿ ಯಂ ।
ವೇದಾ ವದಂತಿ ಸತ್ಯಂ ಯಂ ನಿತ್ಯಮಾದ್ಯಂ ವಿಚಕ್ಷಣಾಃ ॥ ೬೯ ॥

---

೬೬. ಮತ್ತು ನೂರುಕೋಟಿ ಚಂದ್ರರ ಸೌಂದರ್ಯವನ್ನೂ ನೂರುಕೋಟಿ ಮನ್ಮಥರ ಕಾಂತಿಯನ್ನೂ ಹೊಂದಿದವನಾಗಿ ಪರಮಾನಂದ ರೂಪನೂ ಅತ್ಯಂತ ಪರಿಪೂರ್ಣನೂ ಸಕಲರಿಗೂ ಪ್ರಭುವೂ ಆಗಿರುವನು-

೬೭. ಮತ್ತು ಉತ್ತಮಸ್ಥಾನನೂ ಪರಬ್ರಹ್ಮಸ್ವರೂಪನೂ ನಿರ್ಗುಣನೂ ಸಾಕ್ಷಾತ್‌ಪರಮಾತ್ಮನೂ ಸಕಲಭಕ್ತರಿಗೂ ಅನುಗ್ರಹ ಮಾಡುವುದಕ್ಕಾಗಿ ಶರೀರವನ್ನು ಧರಿಸಿದವನೂ ಆಗಿರುವನು.

೬೮. ನಿತ್ಯವಾದ ಶರೀರವುಳ್ಳವನೂ ಷಡ್ಗುಣೈಶ್ವರ್ಯಸಂಪನ್ನನೂ ಈಶ್ವರನೂ ಪ್ರಕೃತಿಗಿಂತಲೂ ಉತ್ತಮನೂ ಯಾವನನ್ನು ಯೋಗಿಗಳು ಜ್ಯೋತಿಸ್ವರೂಪನೆಂದೂ ನಾಶರಹಿತನೆಂದೂ ಹೇಳುತ್ತಾರೋ ಅಂಥಾ ಪರಮಾತ್ಮನಾಗಿರುವನು

೬೯. ಮತ್ತು ಯಾವನನ್ನು ಭಕ್ತರು ತಮ್ಮ ಹೃದಯದ ಒಳಭಾಗದಲ್ಲಿರುವ ಜ್ಯೋತಿಯೆಂದು ಹೇಳುತ್ತಾರೋ ಯಾವನನ್ನು ವೇದಗಳು ಸತ್ಯರೂಪನೆಂದುಹೇಳುತ್ತವೋ ಅಂಥಾ ಪರಮಾತ್ಮನೇ ಅವನಾಗಿರುವನು.

ಯಂ ವದಂತಿ ಸುರಾಃ ಸರ್ವೇ ಪರಂ ಸ್ವೇಚ್ಛಾಮಯಂ ಪ್ರಭುಂ ।
ಸಿದ್ಧೇಂದ್ರಾ ಮುನಯಃ ಸರ್ವೇ ಸರ್ವರೂಪಂ ವದಂತಿ ಯಂ ॥ ೭೦ ॥

ಯಮನಿರ್ವಚನೀಯಂ ಚ ಯೋಗೀಂದ್ರಃ ಶಂಕರೋ ವದೇತ್ ।
ಸ್ವಯಂ ವಿಧಾತಾ ಪ್ರವದೇತ್ಕಾರಣಾನಾಂ ಚ ಕಾರಣಂ ॥ ೭೧ ॥

ಶೇಷೋ ವದೇದನಂತಂ ಯಂ ನವಧಾ ರೂಪಮೀಶ್ವರಂ ।
ತರ್ಕಾಣಾಮೇವ ಷಣ್ಣಾಂ ಚ ಷಡ್ವಿಧಂ ರೂಪಮೀಪ್ಸಿತಂ ॥ ೭೨ ॥

ವೈಷ್ಣವಾನಾಮೇಕರೂಪಂ ವೇದಾನಾಮೇಕಮೇವ ಚ ।
ಪುರಾಣಾನಾಮೇಕರೂಪಂ ತಸ್ಮಾನ್ನವವಿಧಂ ಸ್ಮೃತಂ ॥ ೭೩ ॥

---

೭೦. ಮತ್ತು ದೇವತೆಗಳೆಲ್ಲರೂ ಯಾವನನ್ನು ಉತ್ತಮನೆಂದೂ ಸ್ವೇಚ್ಛಾರೂಪನೆಂದೂ ಹೇಳುವರೊ ಸಿದ್ಧೇಂದ್ರರೂ ಸಕಲಮುನಿಗಳೂ ಯಾವನನ್ನು ಸರ್ವಸ್ವರೂಪನೆಂದು ಹೇಳುವರೋ ಅಂಥಾಪರಮಾತ್ಮನಾಗಿರುವನು.

೭೧. ಯೋಗಿ ಶ್ರೇಷ್ಠನಾದ ಶಂಕರನು ಯಾವನನ್ನು ಹೀಗೆಯೇ ಸರಿಯೆಂದು ನಿರ್ಧಾರದಿಂದ ಹೇಳಲಾಗುವುದಿಲ್ಲವೆಂದಿರುವನೋ ಸಾಕ್ಷಾತ್ ಬ್ರಹ್ಮನು ತಾನು ಯಾವನನ್ನು ಕಾರಣಗಳಿಗೂ ಕಾರಣನೆಂದು ಹೇಳಿರುವನೋ ಅಂಥಾ ಪರಮಾತ್ಮನೇ ಅವನಾಗಿರುವನು.

೭೨–೭೩. ಶೇಷನು ಯಾವನನ್ನು ಅನಂತನೆಂದೂ ಒಂಭತ್ತುವಿಧವಾದ ರೂಪವುಳ್ಳ ಈಶ್ವರನೆಂದೂ ಹೇಳಿರುವನೊ ಅಂಥಾ ಪರಮಾತ್ಮನಾಗಿರುವನು. ಆರು ವಿಧವಾದತರ್ಕಗಳ ಆರು ರೂಪಗಳು. ವಿಷ್ಣುಭಕ್ತರೆಂಬ ಒಂದು ರೂಪವು ವೇದ ಸ್ವರೂಪವೊಂದು ಪುರಾಣಸ್ವರೂಪವೊಂದು ಈ ರೀತಿಯಾಗಿ ಆ ಪರಮಾತ್ಮನಿಗೆ ಒಂಭತ್ತು ರೂಪಗಳೆಂದು ಹೇಳಲ್ಪಟ್ಟಿರುವುದು.

ನ್ಯಾಯೋ ನಿರ್ವಚನೀಯಂ ಚ ಯಂ ಮತಂ ಶಂಕರೋ ವದೇತ್ ।
ನಿತ್ಯಂ ವೈಶೇಷಿಕಾಶ್ಚ ಯಂ ತಂ ವದಂತಿ ವಿಚಕ್ಷಣಾಃ ॥ ೭೪ ॥

ಸಾಂಖ್ಯಾ ವದಂತಿ ತಂ ದೇವಂ ಜ್ಯೋತೀರೂಪಂ ಸನಾತನಂ ।
ಮೀಮಾಂಸಾ ಸರ್ವರೂಪಂ ಚ ವೇದಾಂತಃ ಸರ್ವಕಾರಣಂ ॥ ೭೫ ॥

ಪಾತಂಜಲೋಽಪ್ಯನಂತಂ ಚ ವೇದಾಃ ಸತ್ಯಸ್ವರೂಪಕಂ ।
ಸ್ವೇಚ್ಛಾಮಯಂ ಪುರಾಣಂ ಚ ಭಕ್ತಾಶ್ಚ ನಿತ್ಯವಿಗ್ರಹಂ ॥ ೭೬ ॥

ಸೋಽಯಂ ಗೋಲೋಕನಾಥಶ್ಚ ರಾಧೇಶೋ ನಂದನಂದನಃ ।
ಗೋಕುಲೇ ಗೋಪವೇಷಶ್ಚ ಪುಣ್ಯೇ ವೃಂದಾವನೇ ವನೇ ॥ ೭೭ ॥

---

೭೪. ಯಾವನನ್ನು ಶಂಕರನಮತದಂತೆ ಹೀಗೇಯೆಂದು ನಿರ್ಧರಿಸಿ ಹೇಳಲ ಸಾಧ್ಯವೋ ಅದೇರೀತಿಯಾಗಿ ನ್ಯಾಯಶಾಸ್ತ್ರವೂ ಹೇಳುತ್ತದೆಯೋ ಯಾವನನ್ನು ಜ್ಞಾನಿಗಳಾದ ವೈಶೇಷಿಕರು ನಿತ್ಯರೂಪನೆಂದು ಹೇಳುವರೋ ಅಂಥಾಪರಮಾತ್ಮನಾಗಿರುವನು.

೭೫. ಆ ದೇವನನ್ನು ಸಾಂಖ್ಯರು ಜ್ಯೋತಿಸ್ವರೂಪನೂ ಸನಾತನನೂ ಎಂಬುದಾಗಿ ಹೇಳುತ್ತಾರೆ. ಮೀಮಾಂಸಾಶಾಸ್ತ್ರವು ಸಕಲರೂಪನೆಂದು ಹೇಳುತ್ತದೆ. ವೇದಾಂತವು ಸಕಲ ಕಾರಣನೆಂದು ಹೇಳುತ್ತದೆ.

೭೬. ಪಾತಂಜಲ ಯೋಗಶಾಸ್ತ್ರವು ಅನಂತನೆಂದು ಹೇಳುತ್ತದೆ . ವೇದಗಳು ಸತ್ಯಸ್ವರೂಪನೆಂದು ಹೇಳುತ್ತವೆ. ಪುರಾಣಗಳು ಸೇಚ್ಛಾರೂಪನೆಂದು ಹೇಳುತ್ತವೆ ಭಕ್ತರು ನಿತ್ಯಶರೀರವುಳ್ಳವನೆಂದು ಹೇಳುತ್ತಾರೆ.

೭೭. ಅಂಥಾಪರಮಾತ್ಮನು ಗೋಲೋಕಕ್ಕೆ ಒಡೆಯನೂ ರಾಧಾಪತಿಯೂ ನಂದಗೋಪನ ಮಗನೂ ಗೋಲೋಕದಲ್ಲಿ ಗೋಪವೇಷವನ್ನು ಧರಿಸಿದವನೂ ಆಗಿ ಪುಣ್ಯಾಕರವಾದ ಬೃಂದಾವನದಲ್ಲಿರುವನು.

ಚತುರ್ಭುಜಶ್ಚ ವೈಕುಂಠೇ ಮಹಾಲಕ್ಷ್ಮೀಪತಿಃ ಸ್ವಯಂ ।
ನಾರಾಯಣಶ್ಚ ಭಗವಾನ್ಯನ್ನಾಮ ಮುಕ್ತಿಕಾರಣಂ ॥ ೭೮ ॥

ಸಕೃನ್ನಾರಾಯಣೇತ್ಯುಕ್ತ್ವಾ ಪುಮಾನ್ಕಲ್ಪಶತತ್ರಯಂ ।
ಗಂಗಾದಿಸರ್ವತೀರ್ಥೇಷು ಸ್ನಾತೋ ಭವತಿ ನಾರದ ॥ ೭೯ ॥

ಸುನಂದನಂದಕುಮುದೈಃ ಪಾರ್ಷದೈಃ ಪರಿವಾರಿತಃ ।
ಶಂಖಚಕ್ರಗದಾಪದ್ಮಧರಃ ಶ್ರೀವತ್ಸಲಾಂಛನಃ ॥ ೮೦ ॥

ಕೌಸ್ತುಭೇನ ಮಣೀಂದ್ರೇಣ ಭೂಷಿತೋ ವನಮಾಲಯಾ ।
ವೇದೈಃ ಸ್ತುತಶ್ಚ ಯಾನೇನ ವೈಕುಂಠಂ ಸ್ವಪದಂ ಯಯೌ ॥ ೮೧ ॥

ಗತೇ ವೈಕುಂಠನಾಥೇ ಚ ರಾಧೇಶಶ್ಚ ಸ್ವಯಂ ಪ್ರಭುಃ ।
ಚಕಾರ ವಂಶೀಶಬ್ದಂ ಚ ತ್ರೈಲೋಕ್ಯಮೋಹನಂ ಪರಂ ॥ ೮೨ ॥

---

೭೮. ವೈಕುಂಠದಲ್ಲಿ ನಾಲ್ಕುತೋಳುಳ್ಳವನಾಗಿ ಸಾಕ್ಷಾತ್ ಮಹಾಲಕ್ಷ್ಮಿಯ ಪತಿಯಾಗಿರುವನು. ಯಾವನ ನಾಮವನ್ನು ಭಜಿಸುವುದು ಮುಕ್ತಿಗೆ ಕಾರಣವಾಗಿರುವುದೊ ಅಂಥಾ ಪೂಜ್ಯನಾದ ನಾರಾಯಣನಾಗಿರುವನು.

೭೯. ಎಲೈ ನಾರದನೆ ! ಮಾನವನು ಒಂದುಸಾರಿ ನಾರಾಯಣನೆಂದು ಹೇಳಿದಮಾತ್ರದಿಂದಲೇ ಮುನ್ನೂರು ಕಲ್ಪಗಳವರೆಗೆ ಗಂಗೆಯೇ ಮೊದಲಾದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನಮಾಡಿದವನಾಗುತ್ತಾನೆ.

೮೦–೮೧. ಅಂಥಾ ವೈಕುಂಠನಾಥನು ಸುನಂದ ನಂದ ಕುಮುದರೆಂಬ ಸೇವಕರಿಂದ ಕೂಡಿದವನಾಗಿ ಶಂಖ ಚಕ್ರ ಗದೆ ಪದ್ಮ ಇವುಗಳನ್ನು ಕೈಯಲ್ಲಿ ಹಿಡಿದುಕೊಂಡವನಾಗಿ ಕೌಸ್ತುಭವೆಂಬ ಮಣಿಯಿಂದಲೂ ವನಮಾಲೆಯಿಂದಲೂ ಅಲಂಕರಿಸಿಕೊಂಡವನಾಗಿ ವೇದಗಳಿಂದ ಸ್ತೋತ್ರಮಾಡಲ್ಪಡುತ್ತಿರುವವನಾಗಿ ವಿಮಾನವನ್ನು ಹತ್ತಿಕೊಂಡು ತನ್ನ ಸ್ಥಾನವಾದ ವೈಕುಂಠಕ್ಕೆ ತೆರಳಿದನು

೮೨. ವೈಕುಂಠನಾಥನು ಹೊರಟುಹೋದನಂತರ ರಾಧೇಶ್ವರನಾದ ಪ್ರಭುವು ತಾನು ಮೂರು ಲೋಕಗಳನ್ನೂ ಮೋಹಗೊಳಿಸುವ ರೀತಿಯಲ್ಲಿ ಉತ್ತಮವಾದ ಕೊಳಲಿನ ನಾದವನ್ನು ಮಾಡಿದನು.

ಮೂರ್ಚ್ಛಾಂ ಪ್ರಾಪುರ್ದೇವಗಣಾ ಮುನಯಶ್ಚಾಪಿ ನಾರದ ।
ಅಚೇತಸಾ ಬಭೂವುಶ್ಚ ಮಾಯಯಾ ಪಾರ್ವತೀಂ ವಿನಾ || ೮೩ ||

ಉವಾಚ ಪಾರ್ವತೀ ದೇವೀ ಭಗವಂತಂ ಸನಾತನಂ ।
ವಿಷ್ಣುಮಾಯಾ ಭಗವತೀ ಸರ್ವರೂಪಾ ಸನಾತನೀ || ೮೪ ||

ಪರಬ್ರಹ್ಮಸ್ವರೂಪಾ ಯಾ ಪರಮಾತ್ಮಸ್ವರೂಪಿಣೀ ।
ಸುಗುಣಾ ನಿರ್ಗುಣಾ ಸಾ ಚ ಪರಾ ಸ್ವೇಚ್ಛಾಮಯೀ ಸತೀ || ೮೫ ||

|| ಪಾರ್ವತ್ಯುವಾಚ ||

ಏಕಾಹಂ ರಾಧಿಕಾರೂಪಾ ಗೋಲೋಕೇ ರಾಸಮಂಡಲೇ ।
ರಾಸಶೂನ್ಯಂ ಚ ಗೋಲೋಕಂ ಪರಿಪೂರ್ಣಂ ಕುರು ಪ್ರಭೋ || ೮೬ ||

ಗಚ್ಛ ತ್ವಂ ರಥಮಾರುಹ್ಯ ಮುಕ್ತಾಮಾಣಿಕ್ಯಭೂಷಿತಂ ।
ಪರಿಪೂರ್ಣತಮಾಹಂ ಚ ತವ ವಕ್ಷಃಸ್ಥಲಸ್ಥಿತಾ || ೮೭ ||

---

೮೩. ಎಲೈ ನಾರದನೇ ! ಆ ಧ್ವನಿಯನ್ನು ಕೇಳಿ ದೇವತೆಗಳೆಲ್ಲರೂ ಮೂರ್ಛೆಯನ್ನು ಹೊಂದಿದರು. ಪಾರ್ವತಿಯನ್ನು ಬಿಟ್ಟು ಎಲ್ಲರೂ ಮಾಯೆಯಿಂದ ಮೋಹಿತರಾಗಿ ಜ್ಞಾನವಿಲ್ಲದವರಾದರು.

೮೪–೮೫. ವಿಷ್ಣುಮಾಯೆಯೂ ಷಡ್ಗುಣೈಶ್ವರ್ಯಸಂಪನ್ನಳೂ ಸರ್ವಸ್ವರೂಪಳೂ ನಾಶರಹಿತಳೂ ಪರಬ್ರಹ್ಮರೂಪಳೂ ಪರಮಾತ್ಮಸ್ವರೂಪಳೂ ಸಗುಣಳೂ ನಿರ್ಗುಣಳೂ ಉತ್ತಮಳೂ ಸ್ವೇಚ್ಛಾಮಯಳೂ ಆದ ಪಾರ್ವತೀದೇವಿಯು ಷಡ್ಗುಣೈಶ್ವರ್ಯ ಸಂಪನ್ನನೂ ನಾಶವಿಲ್ಲದವನೂ ಆದ ಪರಮಾತ್ಮನನ್ನು ಕುರಿತು ಇಂತೆಂದಳು.

೮೬. ಪಾರ್ವತಿಯು ಹೇಳುತ್ತಾಳೆ: ಎಲೈ ಪ್ರಭುವೇ ಒಬ್ಬಳೇ ಆದ ನಾನು ಗೋಲೋಕದಲ್ಲಿಯೂ ರಾಸಮಂಡಲದಲ್ಲಿಯೂ ರಾಧೆಯ ರೂಪದಿಂದಿರುವೆನು. ಗೋಲೋಕವು ರಾಸಕ್ರೀಡೆಯಿಂದ ಶೂನ್ಯವಾಗಿರುವುದು. ಅದನ್ನು ಪೂರ್ಣಗೊಳಿಸುವವನಾಗು.

೮೭. ನೀನು ಮುತ್ತು ಮಾಣಿಕ್ಯಗಳಿಂದ ಅಲಂಕರಿಸಲ್ಪಟ್ಟ ರಥವನ್ನು ಹತ್ತಿಕೊಂಡು ಹೊರಡುವವನಾಗು. ಅತ್ಯಂತ ಪರಿಪೂರ್ಣಳಾದ ನಾನು ನಿನ್ನ ವಕ್ಷಸ್ಥಳದಲ್ಲಿರುವೆನು.

ತವಾಜ್ಞಯಾ ಮಹಾಲಕ್ಷ್ಮೀರಹಂ ವೈಕುಂಠಗಾಮಿನೀ ।
ಸರಸ್ವತೀ ಚ ತತ್ರೈವ ವಾಮೇ ಪಾರ್ಶ್ವೇ ಹರೇರಪಿ ॥ ೮೮ ॥

ತವಾಹಂ ಮಾನಸಾ ಜಾತಾ ಸಿಂಧುಕನ್ಯಾ ತವಾಜ್ಞಯಾ ।
ಸಾವಿತ್ರೀ ವೇದಮಾತಾಹಂ ಕಲಯಾ ವಿಧಿಸನ್ನಿಧೌ ॥ ೮೯ ॥

ತೇಜಃಸು ಸರ್ವದೇವಾನಾಂ ಪುರಾ ಸತ್ಯೇತವಾಜ್ಞಯಾ ।
ಅಧಿಷ್ಠಾನಂ ಕೃತಂ ತತ್ರ ಧೃತಂ ದೇವ್ಯಾ ಶರೀರಕಂ ॥ ೯೦ ॥

ಶುಂಭಾದಯಶ್ಚ ದೈತ್ಯಾಶ್ಚ ನಿಹತಾಶ್ಚಾವಲೀಲಯಾ ।
ದುರ್ಗಂ ನಿಹತ್ಯ ದುರ್ಗಾಹಂ ತ್ರಿಪುರಾ ತ್ರಿಪುರೇ ವಧೇ ॥ ೯೧ ॥

ನಿಹತ್ಯ ರಕ್ತಬೀಜಂ ಚ ರಕ್ತಬೀಜವಿನಾಶಿನೀ
ತವಾಜ್ಞಯಾ ದಕ್ಷಕನ್ಯಾ ಸತೀ ಸತ್ಯಸ್ವರೂಪಿಣೀ ॥ ೯೨ ॥

---

೮೮. ನಿನ್ನ ಆಜ್ಞೆಯಿಂದ ನಾನು ಮಹಾಲಕ್ಷ್ಮಿಯಾಗಿ ವೈಕುಂಠಕ್ಕೆ ಹೋಗುವೆನು. ಅಲ್ಲಿಯೇ ಹರಿಯ ಎಡಭಾಗದಲ್ಲಿ ಸರಸ್ವತಿಯಾಗಿಯೂ ಇರುವೆನು.

೮೯. ನಾನು ನಿನ್ನ ಮನಸ್ಸಿನಿಂದ ಹುಟ್ಟಿದ ಸಮುದ್ರಕುಮಾರಿಯಾಗಿರುವೆನು. ನಿನ್ನ ಅಪ್ಪಣೆಯಂತೆ ಕಲಾಂಶದಿಂದ ಬ್ರಹ್ಮನ ಸಮೀಪದಲ್ಲಿ ವೇದಗಳಿಗೆ ತಾಯಿಯಾದ ಸಾವಿತ್ರಿಯಾಗಿರುವೆನು.

೯೦. ಹಿಂದೆ ಸತ್ಯಯುಗದಲ್ಲಿ ನಿನ್ನ ಅಪ್ಪಣೆಯಂತೆ ಸಕಲ ದೇವತೆಗಳ ತೇಜಸ್ಸುಗಳಲ್ಲಿ ವಾಸಮಾಡಿದೆನು. ಅಲ್ಲಿ ದೇವಿಯ ಶರೀರವನ್ನೂ ಧರಿಸಿದೆನು.

೯೧. ಶುಂಭನೇ ಮೊದಲಾದ ರಾಕ್ಷಸರನ್ನು ಆಯಾಸವಿಲ್ಲದೆ ಕೊಂದೆನು. ದುರ್ಗನೆಂಬ ರಾಕ್ಷಸನನ್ನು ಕೊಂದು ನಾನು ದುರ್ಗಾ ಎಂಬ ಹೆಸರನ್ನು ಪಡೆದೆನು. ಹಾಗೆಯೇ ತ್ರಿಪುರಸಂಹಾರ ಮಾಡಿ ತ್ರಿಪುರಾ ಎಂದು ಪ್ರಸಿದ್ಧಳಾದೆನು.

೯೨, ರಕ್ತಬೀಜನನ್ನು ಕೊಂದು ರಕ್ತಬೀಜವಿನಾಶಿನಿಯೆನಿಸಿಕೊಂಡೆನು. ನಿನ್ನ ಅಪ್ಪಣೆಯಂತೆ ಸತ್ಯರೂಪಿಣಿಯೂ ದಕ್ಷಬ್ರಹ್ಮನ ಮಗಳಾದ ಸತೀದೇವಿಯೂ ಆದೆನು.

ಯೋಗೇನ ತ್ಯಕ್ತ್ವಾ ದೇಹಂ ಚ ಶೈಲಜಾತಂ ತವಾಜ್ಞಯಾ ।
ತ್ವಯಾ ದತ್ತ್ವಾ ಶಂಕರಾಯ ಗೋಲೋಕೇ ರಾಸಮಂಡಲೇ ॥ ೯೩ ॥

ವಿಷ್ಣುಭಕ್ತಿರಹಂ ತೇನ ವಿಷ್ಣುಮಾಯಾ ಚ ವೈಷ್ಣವೀ ।
ನಾರಾಯಣಸ್ಯ ಮಾಯಾಹಂ ತೇನ ನಾರಾಯಣೀ ಸ್ಮೃತಾ ॥ ೯೪ ॥

ಕೃಷ್ಣಪ್ರಾಣಾಧಿಕಾಹಂ ಚ ಪ್ರಾಣಾಧಿಷ್ಠಾತೃದೇವತಾ ।
ಮಹಾವಿಷ್ಣೋಶ್ಚ ವಾಸೋಶ್ಚ ಜನನೀ ರಾಧಿಕಾ ಸ್ವಯಂ ॥ ೯೫ ॥

ತವಾಜ್ಞಯಾ ಪಂಚಧಾಹಂ ಪಂಚಪ್ರಕೃತಿರೂಪಿಣೀ ।
ಕಲಾಕಲಾಂಶಯಾಹಂ ಚ ದೇವಪತ್ನ್ಯೋ ಗೃಹೇಗೃಹೇ ॥ ೯೬ ॥

---

೯೩. ನಿನ್ನ ಅಪ್ಪಣೆಯಿಂದ ಯೋಗಮೂಲಕವಾಗಿ ಶರೀರವನ್ನು ಬಿಟ್ಟು ಪರ್ವತರಾಯನ ಮಗಳಾಗಿ ಹುಟ್ಟಿದೆನು. ಗೋಲೋಕದಲ್ಲಿ ರಾಸಮಂಡಲದಲ್ಲಿ ಶಂಕರನಿಗೆ ನಿನ್ನಿಂದಲೇ ಕೊಡಲ್ಪಟ್ಟವಳಾದೆನು.

೯೪. ನಾನು ವಿಷ್ಣುಶಕ್ತಿಯಾಗಿರುವ ಕಾರಣ ವಿಷ್ಣುಮಾಯೆ ವೈಷ್ಣವಿಯೆಂದು ಹೆಸರನ್ನು ಪಡೆದಿರುವೆನು. ನಾನು ನಾರಾಯಣನ ಮಾಯೆಯಾಗಿರುವ ಕಾರಣ ನಾರಾಯಣಿಯೆಂದು ಹೇಳಲ್ಪಟ್ಟಿರುವೆನು.

೯೫. ಶ್ರೀಕೃಷ್ಣನಿಗೆ ಪ್ರಾಣಕ್ಕಿಂತಲೂ ಹೆಚ್ಚಿನವಳಾಗಿರುವೆನಾದ ಕಾರಣ ಕೃಷ್ಣನ ಪ್ರಾಣಗಳಿಗೆ ಆಧಾರದೇವತೆಯೆಂದೆನಿಸಿರುವೆನು. ನಾನು ಮಹಾವಿಷ್ಣುವಾದ ವಾಸುವಿಗೂ ತಾಯಿಯಾದ ರಾಧೆಯಾಗಿರುವೆನು.

೯೬. ನಿನ್ನ ಅಪ್ಪಣೆಯಿಂದ ನಾನು ಐದು ವಿಧವಾಗಿ ಪಂಚಪ್ರಕೃತಿಯಾದ ಈಶ್ವರಿಯೆನಿಸಿರುವೆನು. ಕಲೆಯ ಕಲಾಂಶದಿಂದ ನಾನು ದೇವತೆಗಳ ಮನೆಮನೆಯಲ್ಲಿಯೂ ದೇವಿಯಾಗಿರುವೆನು.

ಶೀಘ್ರಂ ಗಚ್ಛ ಮಹಾಭಾಗ ತತ್ರಾಹಂ ವಿರಹಾತುರಾ ।
ಗೋಪೀಭಿಃ ಸಹಿತಾ ರಾಸಂ ಭ್ರಮಂತೀ ಪರಿತಃ ಸದಾ ॥ ೯೭ ॥

ಪಾರ್ವತೀ ವಚನಂ ಶ್ರುತ್ವಾ ಪ್ರಹಸ್ಯ ರಸಿಕೇಶ್ವರಃ ।
ರತ್ನಯಾನಂ ಸಮಾರುಹ್ಯ ಯಯೌ ಗೋಲೋಕಮುತ್ತಮಂ ॥ ೯೮ ॥

ಪಾರ್ವತೀ ಬೋಧಯಾಮಾಸ ಸ್ವಯಂ ದೇವಗಣಂ ತಥಾ ।
ಮಾಯಾವಂಶೀರವಾಚ್ಛಿನ್ನಂ ವಿಷ್ಣುಮಾಯಾ ಸನಾತನೀ ॥ ೯೯ ॥

ಕೃತ್ವಾ ತೇ ಹರಿಶಬ್ದಂ ಚ ಸ್ವಗೃಹಂ ವಿಸ್ಮಯಂ ಯಯೌ ।
ಶಿವೇನ ಸಾರ್ಧಂ ದುರ್ಗಾ ಸಾ ಪ್ರಹೃಷ್ಟಾ ಸ್ವಪುರಂ ಯಯೌ ॥ ೧೦೦ ॥

ಅಥ ಕೃಷ್ಣಂ ಸಮಾಯಾಂತಂ ರಾಧಾ ಗೋಪೀಗಣೈಃ ಸಹ ।
ಅನುವ್ರಜಂ ಯಯೌ ಹೃಷ್ಟಾ ಸರ್ವಜ್ಞಾ ಪ್ರಾಣವಲ್ಲಭಂ ॥ ೧೦೧ ॥

---

೯೭. ಎಲೈ ಮಹಾತ್ಮನೇ! ಜಾಗ್ರತೆಯಾಗಿ ಗೋಲೋಕಕ್ಕೆ ಹೋಗು. ವಿರಹದಿಂದ ಪೀಡಿತಳಾದ ನಾನು ಗೋಪಿಯರಿಂದೊಡಗೂಡಿದವಳಾಗಿ ಯಾವಾಗಲೂ ನಿನ್ನ ಸುತ್ತಲೂ ರಾಸಮಂಡಲದಲ್ಲಿ ಸುತ್ತುತ್ತಿರುವೆನು.

೯೮. ರಸಿಕರಲ್ಲಿ ಶ್ರೇಷ್ಠನಾದ ಕೃಷ್ಣನು ಪಾರ್ವತಿಯಾಡಿದ ಮಾತನ್ನು ಕೇಳಿ ಗಟ್ಟಿಯಾಗಿ ನಕ್ಕು ರತ್ನಮಯವಾದ ವಿಮಾನವನ್ನು ಹತ್ತಿಕೊಂಡು ಉತ್ತಮವಾದ ಗೋಲೋಕವನ್ನು ಕುರಿತು ತೆರಳಿದನು.

೯೯. ವಿಷ್ಣುಮಾಯೆಯೂ ನಾಶರಹಿತಳೂ ಆದ ಪಾರ್ವತಿಯು ಮಾಯೆಯ ಕೊಳಲಿನ ಧ್ವನಿಯಿಂದ ಮೂರ್ಛೆಗೊಂಡಿದ್ದ ದೇವಸಮೂಹವನ್ನೆಚ್ಚರಗೊಳಿಸಿದಳು.

೧೦೦. ಆ ದೇವತೆಗಳೆಲ್ಲರೂ ಹರಿಯೆಂಬ ಶಬ್ದವನ್ನು ಕೇಳಿ ಆಶ್ಚರ್ಯಗೊಂಡವರಾಗಿ ತಮ್ಮ ಮನೆಗಳಿಗೆ ಹೋದರು. ಆ ದುರ್ಗಿಯು ಶಿವನಿಂದೊಡಗೂಡಿದವಳಾಗಿ ಆನಂದದಿಂದ ತನ್ನ ಪಟ್ಟಣಕ್ಕೆ ತೆರಳಿದಳು.

೧೦೧. ಅನಂತರ ಸರ್ವಜ್ಞಳಾದ ರಾಧೆಯು ಬರುತ್ತಲಿರುವ ಕೃಷ್ಣನನ್ನು ನೋಡಿ ಗೋಪಿಯರ ಗುಂಪಿನಿಂದೊಡಗೂಡಿ ಸಂತೋಷದಿಂದ ತನ್ನ ಪ್ರಾಣಪ್ರಿಯನಾದ ಅವನನ್ನು ಹಿಂಬಾಲಿಸಿ ಹೊರಟಳು.

ದೃಷ್ಟ್ವಾ ಸಮೀಪಮಾಯಾಂತಮವರುಹ್ಯ ರಥಾತ್ಸತೀ ।
ಪ್ರಣನಾಮ ಜಗನ್ನಾಥಂ ಶಿರಸಾ ಸಖಿಭಿಃ ಸಹ ॥ ೧೦೨ ॥

ಗೋಪಾ ಗೋಪ್ಯಶ್ಚ ಮುದಿತಾಃ ಪ್ರಫುಲ್ಲವದನೇಕ್ಷಣಾಃ ।
ದುಂದುಭಿಂ ವಾದಯಾಮಾಸುರೀಶ್ವರಾಗಮನೋತ್ಸುಕಾಃ ॥ ೧೦೩ ॥

ವಿರಜಾಂ ಚ ಸಮುತ್ತೀರ್ಯ ದೃಷ್ಟ್ವಾ ರಾಧಾಂ ಜಗತ್ಪತಿಃ ।
ಅವರುಹ್ಯ ರಥಾತ್ತೂರ್ಣಂ ಗೃಹೀತ್ವಾ ರಾಧಿಕಾಕರಂ ॥ ೧೦೪ ॥

ಶತಶೃಂಗೇ ಚ ಬಭ್ರಾಮ ಸುರಮ್ಯಂ ರಾಸಮಂಡಲಂ ।
ದೃಷ್ಟ್ವಾಕ್ಷಯವಟಂ ಪುಣ್ಯಂ ಪುಣ್ಯಂ ವೃಂದಾವನಂ ವನಂ ॥ ೧೦೫ ॥

ತುಲಸೀಕಾನನಂ ದೃಷ್ಟ್ವಾ ಪ್ರಯಯೌ ಮಾಲತೀವನಂ ।
ವಾಮೇ ಕೃತ್ವಾ ಕುಂದವನಂ ಮಾಧವೀಕಾನನಂ ತಥಾ ॥ ೧೦೬ ॥

---

೧೦೨. ಅವನು ಸಮೀಪಕ್ಕೆ ಬರುತ್ತಿರುವುದನ್ನು ನೋಡಿ ಆ 'ರಾಧೆಯು ರಥದಿಂದಿಳಿದವಳಾಗಿ ಸಖಿಯರಿಂದೊಡಗೂಡಿ ಜಗನ್ನಾಥನಿಗೆ ತಲೆಬಾಗಿ ನಮಸ್ಕಾರ ಮಾಡಿದಳು.

೧೦೩. ಗೋಪರೂ ಗೋಪಿಯರೂ ಕೂಡ ಸಂತೋಷಗೊಂಡವರಾಗಿ ಅರಳಿದ ಮುಖ ಮತ್ತು ಕಣ್ಣುಗಳುಳ್ಳವರಾಗಿ ಈಶ್ವರನ ಬರುವಿಕೆಯಿಂದ ಉತ್ಸಾಹಗೊಂಡವರಾಗಿ ದುಂದುಭಿಯನ್ನು ಬಾರಿಸಿದರು.

೧೦೪-೧೦೬. ಜಗದೊಡೆಯನು ವಿರಜಾನದಿಯನ್ನು ದಾಟಿ ರಾಧೆಯನ್ನು ನೋಡಿದವನಾಗಿ ರಥದಿಂದ ಬೇಗನೆ ಇಳಿದು ಬಂದು ರಾಧೆಯ ಕೈಯನ್ನು ಹಿಡಿದುಕೊಂಡು ಶತಶೃಂಗಪರ್ವತದಲ್ಲಿ ತಿರುಗಾಡಿದನು. ಮನೋಹರವಾದ ರಾಸಮಂಡಲವನ್ನೂ ಅಕ್ಷಯವಟವನ್ನೂ ಪುಣ್ಯಕರವಾದ ವೃಂದಾವನವೆಂಬ ವನವನ್ನೂ ನೋಡಿಕೊಂಡು ತುಲಸೀವನವನ್ನು ನೋಡಿ ಕುಂದವನವನ್ನೂ ಮಾಧವೀವನವನ್ನೂ ತಮ್ಮ ಎಡಭಾಗದಲ್ಲಿ ಬಿಟ್ಟುಕೊಂಟು ಮಾಲತೀವನವನ್ನು ಕುರಿತು ಹೊರಟನು.

ಚಕಾರ ದಕ್ಷಿಣೇ ಕೃಷ್ಣಶ್ಚಂಪಕಾರಣ್ಯಮೀಪ್ಸಿತಂ ।
ಚಕಾರ ಪಶ್ಚಾತ್ತೂರ್ಣಂ ಚ ಚಾರುಚಂದನಕಾನನಂ ॥ ೧೦೭ ॥

ದದರ್ಶ ಪುರತೋ ರಮ್ಯಂ ರಾಧಿಕಾಭವನಂ ಪರಂ ।
ಉವಾಸ ರಾಧಯಾ ಸಾರ್ಧಂ ರತ್ನಸಿಂಹಾಸನೇ ವರೇ ॥ ೧೦೮ ॥

ಸಕರ್ಪೂರಂ ಚ ತಾಂಬೂಲಂ ಬುಭುಜೇ ವಾಸಿತಂ ಜಲಂ ।
ಸುಷ್ವಾಪ ಪುಷ್ಪತಲ್ಪೇ ಚ ಸುಗಂಧಿಚಂದನಾರ್ಚಿತೇ ॥ ೧೦೯ ॥

ಸ ರೇಮೇ ರಾಮಯಾ ಸಾರ್ಧಂ ನಿಮಗ್ನೋ ರಸಸಾಗರೇ ।
ಇತ್ಯೇವಂ ಕಥಿತಂ ಸರ್ವಂ ಧರ್ಮವಕ್ತ್ರಾಚ್ಚ ಯಚ್ಛ್ರುತಂ ॥ ೧೧೦ ॥
ಗೋಲೋಕಾರೋಹಣಂ ರಮ್ಯಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೧೧೧॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ ಉತ್ತರಾರ್ಧೇ ನಾರಾಯಣನಾರದಸಂವಾದೇ ಗೋಲೋಕಾರೋಹಣಂ ನಾಮೈಕೋನತ್ರಿಂಶದಧಿಕಶತತಮೋಧ್ಯಾಯಃ ॥

---

೧೦೭. ಶ್ರೀಕೃಷ್ಣನು ತನಗೆ ಇಷ್ಟವಾದ ಸಂಪಿಗೆಯ ವನವನ್ನು ಬಲಭಾಗಕ್ಕೆ ಬಿಟ್ಟನು. ಗಂಧ ವನವನ್ನು ಶೀಘ್ರವಾಗಿ ಹಿಂದಕ್ಕೆ ಬಿಟ್ಟನು.

೧೦೮. ಮುಂಭಾಗದಲ್ಲಿ ಮನೋಹರವಾದ ರಾಧೆಯ ಮನೆಯನ್ನು ಕಂಡನು. ಅರಮನೆಯಲ್ಲಿ ರತ್ನಸಿಂಹಾಸನದಮೇಲೆ ರಾಧೆಯೊಡನೆ ಕುಳಿತುಕೊಂಡನು.

೧೦೯. ಕರ್ಪೂರದಿಂದ ಮಿಶ್ರಿತವಾದ ತಾಂಬೂಲವನ್ನು ಸವಿದನು. ಸುವಾಸನೆಯಾದ ನೀರನ್ನುಕುಡಿದನು. ಸುವಾಸನೆಯಾದ ಗಂಧದಿಂದಕೂಡಿದ ಹೂವಿನಿಂದ ಮಾಡಿದ ಹಾಸಿಗೆಯಮೇಲೆ ಮಲಗಿಕೊಂಡನು.

೧೧೦–೧೧೧. ಆ ಹರಿಯು ರಸಮಯ ಸಮುದ್ರದಲ್ಲಿ ಮುಳುಗಿದವನಾಗಿ ಸುಂದರಿಯಾದ ರಾಧೆಯೊಡನೆ ವಿಹರಿಸಿದನು. ಈ ಪ್ರಕಾರವಾಗಿ ಧರ್ಮನಮುಖದಿಂದ ನಾನು ಏನನ್ನು ಕೇಳಿದ್ದೆನೋ ಆ ಮನೋಹರವಾದ ಗೋಲೋಕಾರೋಹಣ ವೃತ್ತಾಂತವೆಲ್ಲವನ್ನೂ ಹೇಳಿರುವೆನು. ಇನ್ನೇನನ್ನು ಮತ್ತೆ ಕೇಳಲಿಷ್ಟಪಡುತ್ತೀಯೆ?

ಇಲ್ಲಿಗೆ ಬ್ರಹ್ಮವೈವರ್ತ ಮಹಾ ಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿಗೋಲೋಕಾರೋಹಣವೆಂಬ ನೂರ ಇಪ್ಪತೊಂಭತ್ತನೆಯ ಅಧ್ಯಾಯವು ಸಮಾಪ್ತವು

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ತ್ರಿಂಶದಧಿಕಶತತಮೋಽಧ್ಯಾಯಃ ||

|| ನಾರದ ಉವಾಚ ||

ಸರ್ವಂ ಶ್ರುತಂ ಮಹಾಭಾಗ ನಾವಶೇಷಮಭೀಪ್ಸಿತಂ ।
ಕಿಮಪೂರ್ವಂ ಪುರಾಣಂ ಚ ಬ್ರಹ್ಮವೈವರ್ತಮಿಷ್ಟದಂ ॥ ೧ ॥

ಅಧುನಾ ಕಿಂ ಕರಿಷ್ಯಾಮಿ ತನ್ಮಾಂ ಬ್ರೂಹಿ ಜಗದ್ಗುರೋ ।
ಆಜ್ಞಾಂ ಕುರು ತಪಸ್ಯಾಂ ಚ ಕರ್ತುಂ ಯಾಮಿ ಹಿಮಾಲಯಂ ॥ ೨ ॥

|| ಶ್ರೀ ನಾರಾಯಣ ಉವಾಚ ||

ಉಪಬರ್ಹಣಗಂಧರ್ವಃ ಪಂಚಾಶತ್ಕಾಮಿನೀಪತಿಃ ।
ಜನ್ಮಾಂತರೇ ಭವಾನಾಸೀದಧುನಾ ಬ್ರಹ್ಮಪುತ್ರಕಃ ॥ ೩ ॥

---

### ನೂರ ಮೂವತ್ತನೆಯ ಅಧ್ಯಾಯವು

೧. ನಾರದನು ಹೇಳುತ್ತಾನೆ: ಎಲೈ ಮಹಾತ್ಮನೇ ಸಕಲವೂ ಕೇಳಲ್ಪಟ್ಟಿತು. ನನಗೆ ಅಪೇಕ್ಷೆಯುಳ್ಳದ್ದು ಯಾವುದೂ ಉಳಿದಿರುವುದಿಲ್ಲ ಸಕಲ ಇಷ್ಟಗಳನ್ನೂ ಕೊಡುವುದಾದ ಬ್ರಹ್ಮವೈವರ್ತಪುರಾಣವು ಎಷ್ಟು ಅಪೂರ್ವವಾದುದು!

೨. ಎಲೈ ಜಗತ್ತಿನ ಗುರುವೇ! ಈಗ ನಾನು ಏನನ್ನು ಮಾಡಬೇಕೆಂಬುದನ್ನು ಹೇಳುವವನಾಗು. ತಪಸ್ಸನ್ನು ಮಾಡುವುದಕ್ಕೋಸ್ಕರ ಹಿಮವತ್ ಪರ್ವತಕ್ಕೆ ಹೋಗುತ್ತೇನೆ. ಅದಕ್ಕಾದರೂ ಅಪ್ಪಣೆಯನ್ನು ಕೊಡುವವನಾಗು.

೩. ನಾರಾಯಣನು ಹೇಳುತ್ತಾನೆ—ನೀನು ಹಿಂದಿನ ಜನ್ಮದಲ್ಲಿ ಉಪಬರ್ಹಣನೆಂಬ ಗಂಧರ್ವನಾಗಿ ಐವತ್ತುಮಂದಿ ಸ್ತ್ರೀಯರಿಗೆ ಪತಿಯಾಗಿದ್ದೆ. ಈಗ ಈ ಜನ್ಮದಲ್ಲಿ ಬ್ರಹ್ಮನ ಮಗನಾಗಿರುತ್ತೀಯೆ.

ತಾಸ್ವೇಕಾ ಚ ಸತೀ ರಮ್ಯಾ ತಪಸಾ ಶಂಕರಂ ಪರಂ ।
ಆರಾಧ್ಯ ಚ ವರಂ ಲೇಭೇ ವಾಂಛಿತಂ ನಾರದಂ ಪತಿಂ ॥ ೪ ॥

ಸಾ ಚ ಸೃಂಜಯಕನ್ಯಾ ಚ ಸ್ವರ್ಣಷ್ಠೀವೀಸಹೋದರಾ ।
ತಾಂ ವಿವಾಹಂ ಕುರುಷ್ವೇತಿ ಶಂಕರಾಜ್ಞಾ ಕಥಂ ವೃಥಾ ॥ ೫ ॥

ಸುಂದರೀಂ ಸುಂದರೀಷ್ವೇವ ಕೋಮಲಾಂ ಕಮಲಾಕಲಾಂ ।
ಪತಿವ್ರತಾಂ ಮಹಾಭಾಗಾಂ ರಮ್ಯಾಂ ಸುಪ್ರಿಯವಾದಿನೀಂ ॥ ೬ ॥

ಕಾಮುಕೀಂ ಕಮನೀಯಾಂ ಚ ಶಶ್ವತ್ಸುಸ್ಥಿರಯೌವನಾಂ ।
ವಿಧಾತ್ರಾ ಲಿಖಿತಂ ಕರ್ಮ ಪ್ರಾಕ್ತನಂ ಕೇನ ವಾರ್ಯತೇ ॥ ೭ ॥

ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥ ೮ ॥

---

೪. ಆ ಐವತ್ತು ಮಂದಿ ಹೆಂಡಿರಲ್ಲಿ ಮನೋಹರಳೂ ಪತಿವ್ರತೆಯೂ ಆದ ಒಬ್ಬಳು ಹೆಚ್ಚಾದ ತಪಸ್ಸಿನಿಂದ ಶಂಕರನನ್ನು ಪೂಜೆಮಾಡಿ ನಾರದನು ತನಗೆ ಪತಿಯಾಗಬೇಕೆಂಬ ಇಷ್ಟವಾದ ವರವನ್ನು ಪಡೆದುಕೊಂಡಳು.

೫. ಅವಳು ಈಗ ಸೃಂಜಯನ ಮಗಳಾಗಿಯೂ ಸ್ವರ್ಣಷ್ಠೀವಿಯ ಸಹೋದರಿಯಾಗಿಯೂ ಇರುವಳು. ಅವಳನ್ನು ಮದುವೆಮಾಡಿಕೋ ಎಂಬ ಶಂಕರನ ಅಪ್ಪಣೆಯು ಹೇಗೆ ವ್ಯರ್ಥವಾದೀತು ?

೬.–೭. ಸುಂದರಿಯರಿಗೆಲ್ಲ ಸುಂದರಿಯಾದ ಮೃದುವಾದ ಲಕ್ಷ್ಮಿಯ ಕಲೆಯುಳ್ಳ ಪತಿವ್ರತೆಯಾದ ಮಹಾತ್ಮಳಾದ ಮನೋಹರಳಾದ ಅತ್ಯಂತ ಹಿತವಾಗಿ ಮಾತನಾಡುವ ಕಾಮುಕಿಯಾದ ಅಪೇಕ್ಷಿಸಲು ಯೋಗ್ಯಳಾದ ಯಾವಾಗಲೂ ಸ್ಥಿರವಾಗಿರುವ ಯೌವನವುಳ್ಳ ಆ ಕನ್ಯೆಯನ್ನು ಮದುವೆಮಾಡಿಕೋ. ಬ್ರಹ್ಮನಿಂದ ಬರೆಯಲ್ಪಟ್ಟ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು ಯಾವನಿಂದ ತಡೆಯಲು ಸಾಧ್ಯವಾಗುತ್ತದೆ.

೮. ತಾನು ಮಾಡಿದ ಕರ್ಮವು ನೂರು ಕೋಟಿ ಕಲ್ಪಗಳಾದರೂ ಅನುಭವಿಸದೆ ನಾಶವಾಗುವುದಿಲ್ಲ. ತಾನು ಮಾಡಿದ ಒಳ್ಳೆಯದೋ ಕೆಟ್ಟದೋ ಕರ್ಮವನು ಅವಶ್ಯಕವಾಗಿ ಅನುಭವಿಸಲೇಬೇಕು.

|| ಸೂತ ಉವಾಚ ||

ನಾರಾಯಣವಚಃ ಶ್ರುತ್ವಾ ಹೃದಯೇನ ವಿದೂಯತಾ ।
ಪ್ರಣಮ್ಯ ಪ್ರಯಯೌ ಶೀಘ್ರಂ ನಾರದಃ ಸೃಂಜಯಾಲಯಂ || ೯ ||

|| ಶೌನಕ ಉವಾಚ ||

ಅಹೋ ಸೂತ ಮಹಾಭಾಗ ಶ್ರುತಂ ಕಿಂ ಪರಮಾದ್ಭುತಂ ।
ಕಿಮಪೂರ್ವಂ ರಹಸ್ಯಂ ಚ ಸರಸಂ ಚ ಪುರಾತನಂ || ೧೦ ||

ಅಧುನಾ ಶ್ರೋತುಮಿಚ್ಛಾಮಿ ವಿವಾಹಂ ನಾರದಸ್ಯ ಚ ।
ಅತೀಂದ್ರಿಯಸ್ಯ ಚ ಮುನೇರ್ಬ್ರಹ್ಮಪುತ್ರಸ್ಯ ಸಾಂಪ್ರತಂ || ೧೧ ||

|| ಸೂತ ಉವಾಚ ||

ನಾರದೋ ಮೂಢರೂಪಶ್ಚ ದೃಷ್ಟ್ವಾ ಸೃಂಜಯಕನ್ಯಕಾಂ ।
ತಪಸ್ವಿನೀಂ ಮಹಾಭಾಗಾಂ ವಿಷ್ಣುವ್ರತಪರಾಯಣಾಂ || ೧೨ ||

---

೯. ಸೂತನು ಹೇಳುತ್ತಾನೆ—ನಾರದಮುನಿಯು ನಾರಾಯಣನಾಡಿದುದನ್ನು ಕೇಳಿ ಅವನಿಗೆ ನಮಸ್ಕಾರ ಮಾಡಿದವನಾಗಿ ಖಿನ್ನವಾದ ಮನಸ್ಸಿನಿಂದ ಜಾಗ್ರತೆಯಾಗಿ ಸೃಂಜಯನ ಮನೆಗೆ ಹೋದನು.

೧೦. ಶೌನಕನು ಹೇಳುತ್ತಾನೆ—ಮಹಾತ್ಮನಾದ ಸೂತನೇ! ಆಶ್ಚರ್ಯವು' ಎಂತಹ ಅದ್ಭುತವಾದ ಅಪೂರ್ವವಾದ ರಹಸ್ಯವೂ ರಸಭರಿತವೂ ಹಿಂದಿನದೂ ಆದ ವಿಷಯವನ್ನು ನಾವು ಕೇಳಿದೆವು!!

೧೧. ಈಗ ಇಂದ್ರಿಯಗಳನ್ನು ಜಯಿಸಿದ ಬ್ರಹ್ಮನ ಮಗನಾದ ನಾರದ ಮುನಿಯ ವಿವಾಹದ ಕಥೆಯನ್ನು ಕೇಳಬೇಕೆಂದಪೇಕ್ಷಿಸುತ್ತೇನೆ.

೧೨–೧೩. ಸೂತನು ಹೇಳುತ್ತಾನೆ—ನಾರದನು ತಪಸ್ವಿನಿಯೂ ಮಹಾತ್ಮಳೂ ವಿಷ್ಣುವ್ರತದಲ್ಲಿ ನಿರತಳೂ ಆದ ಸೃಂಜಯನ ಮಗಳನ್ನು ನೋಡಿ ಮೂಢನಾಗಿ

ಯಯೌ ಬ್ರಹ್ಮಸಭಾಂ ರಮ್ಯಾಂ ಸರ್ವದೇವೈಃ ಸಮಾವೃತಾಂ ।
ಪ್ರಣಮ್ಯ ಪಿತರಂ ಶಾಂತಃ ಸರ್ವಂ ತತ್ತ್ವಮುವಾಚ ತಂ ॥ ೧೩ ॥

ಬ್ರಹ್ಮಾ ಪ್ರಹೃಷ್ಟವದನಃ ಶ್ರುತ್ವಾ ವಾರ್ತಾಂ ಶುಭಾವಹಾಂ ।
ತಪಸ್ವಿನಂ ಚ ಪುತ್ರಂ ಚ ಸಂಭಾಷ್ಯ ಜಗತಾಂ ಪತಿಃ ॥ ೧೪ ॥

ರತ್ನನಿರ್ಮಾಣಯಾನೇನ ಸಾರ್ಧಂ ದೇವೈಃ ಶುಭೇ ಕ್ಷಣೇ ।
ಪುತ್ರಂ ಕೃತ್ವಾ ಚ ಪುರತೋ ಯಯೌ ಸೃಂಜಯಮಂದಿರಂ ॥ ೧೫ ॥

ತಚ್ಛ್ರುತ್ವಾ ಸೃಂಜಯೋ ರಾಜಾ ರತ್ನಭೂಷಣಭೂಷಿತಾಂ ।
ಗೃಹೀತ್ವಾ ಕನ್ಯಕಾಂ ರಮ್ಯಾಂ ನಾರದಾಯ ದದೌ ಮುದಾ ॥ ೧೬ ॥

ಸರ್ವಸ್ವಂ ದಕ್ಷಿಣಾಂ ದತ್ತ್ವಾ ಮಣಿಮುಕ್ತಾದಿಕಂ ತಥಾ ।
ಪುಟಾಂಜಲಿಯುತೋ ಭೂತ್ವಾ ಪರಿಹಾರಂ ಚಕಾರ ಸಃ ॥ ೧೭ ॥

---

ಸಕಲ ದೇವತೆಗಳಿಂದ ಕೂಡಿರುವ ಮನೋಹರವಾದ ಬ್ರಹ್ಮಸಭೆಗೆ ಹೋದನು. ತಂದೆಗೆ ನಮಸ್ಕಾರವನ್ನು ಮಾಡಿ ಶಾಂತನಾಗಿ ಸಕಲ ವಿಷಯಗಳನ್ನೂ ಹೇಳಿದನು.

೧೪–೧೫. ಬ್ರಹ್ಮನು ಮಂಗಳಕರವಾದ ಆ ಮಾತನ್ನು ಕೇಳಿ ಅರಳಿದ ಮುಖವುಳ್ಳವನಾಗಿ ತಪಸ್ವಿಯಾದ ಮಗನನ್ನು ಮಾತನಾಡಿಸಿ ಆ ಜಗತ್ಪತಿಯು ರತ್ನಮಯವಾದ ವಿಮಾನದಲ್ಲಿ ದೇವತೆಗಳೊಡಗೂಡಿ ಕುಳಿತುಕೊಂಡು ಶುಭಮುಹೂರ್ತದಲ್ಲಿ ಮಗನಾದ ನಾರದನನ್ನು ಮುಂದಿಟ್ಟುಕೊಂಡು ಸೃಂಜಯನ ಮನೆಗೆ ಹೋದನು.

೧೬. ಅದನ್ನು ಕೇಳಿ ಸೃಂಜಯರಾಜನು ಸಂತೋಷದಿಂದ ರತ್ನಮಯವಾದ ಆಭರಣಗಳಿಂದ ಅಲಂಕೃತಳಾದ ತನ್ನ ಸುಂದರಳಾದ ಕನ್ಯೆಯನ್ನು ಕರೆದುಕೊಂಡು ಬಂದು ನಾರದನಿಗೆ ಕೊಟ್ಟನು.

೧೭. ರತ್ನಮಣಿ ಮುತ್ತು ಮೊದಲಾದ ಸಕಲೈಶ್ವರ್ಯವನ್ನೂ ದಕ್ಷಿಣೆಯಾಗಿ ಕೊಟ್ಟು ಎರಡು ಕೈಗಳನ್ನೂ ಜೋಡಿಸಿಕೊಂಡು ನಮಸ್ಕರಿಸಿದನು.

ಕನ್ಯಾಂ ಸಮರ್ಪ್ಯ ಬ್ರಹ್ಮಾಣಂ ರಾಜಾ ಚ ಯೋಗಿನಾಂ ವರಃ ।
ರುರೋದ ಭೃಶಮುಚ್ಚೈಶ್ಚ ವತ್ಸೇ ವತ್ಸ ಇತೀರಿತಂ ॥ ೧೮ ॥

ಕ್ವ ಯಾಸಿ ತ್ಯಕ್ತ್ವಾ ಮದ್ಗೇಹಂ ಶೂನ್ಯಂ ಕಮಲಲೋಚನೇ ।
ಅಹಂ ಯಾಮಿ ವನಂ ಘೋರಂ ತ್ವಾಂ ತ್ಯಕ್ತ್ವಾ ಜೀವಿತೋ ಮೃತಃ ॥೧೯॥

ಪ್ರಣಮ್ಯ ಪಿತರಂ ಕನ್ಯಾ ರುದಂತಂ ಮಾತರಂ ತಥಾ ।
ರುದಂತೀಂ ತಾಂ ರುದಂತೀ ಸಾಪ್ಯಾರುರೋಹ ರಥಂ ವಿಧೇಃ ॥ ೨೦ ॥

ಗೃಹೀತ್ವಾ ಚ ಸಭಾರ್ಯಂ ಚ ಪುತ್ರಂ ಧಾತಾ ಮುದಾನ್ವಿತಃ ।
ಪ್ರಯಯೌ ಬ್ರಹ್ಮಲೋಕಂ ಚ ದೇವೇಂದ್ರೈರ್ಮುನಿಭಿಃ ಸಹ ॥ ೨೧ ॥

ಬ್ರಾಹ್ಮಣಾನ್ಭೋಜಯಾಮಾಸ ಸಾಂಗೇ ಮಂಗಲಕರ್ಮಣಿ ।
ದೇವಾನಪಿ ಚ ಸಿದ್ಧಾಂಶ್ಚ ವಾದಯಾಮಾಸ ದುಂದುಭಿಂ ॥ ೨೨ ॥

---

೧೮. ಯೋಗಿಗಳಲ್ಲಿ ಶ್ರೇಷ್ಠನಾದ ಸೃಂಜಯ ರಾಜನು ಕನ್ಯೆಯನ್ನು ಬ್ರಹ್ಮನಿಗೆ ಒಪ್ಪಿಸಿ 'ಮಗಳೇ ಮಗಳೇ' ಎಂದು ಹೇಳುತ್ತ ಗಟ್ಟಿಯಾಗಿ ಅತ್ತನು.

೧೯. ಎಲೈ ಕಮಲದಂತೆ ಕಣ್ಣುಗಳುಳ್ಳವಳೇ! ನನ್ನ ಮನೆಯನ್ನು ಬಿಟ್ಟು ನೀನು ಎಲ್ಲಿಗೆ ಹೋಗುವೆ? ನಿನ್ನನ್ನು ಬಿಟ್ಟು ನಾನು ಬದುಕಿದ್ಧರೂ ಸತ್ತಂತೆಯೇಸರಿ. ನಾನು ಭಯಂಕರವಾದ ಕಾಡಿಗೆ ಹೋಗುವೆನು ಎಂದು ಅಳುತ್ತ ಹೇಳಿದನು.

೨೦. ಆ ಕನ್ಯೆಯು ಅಳುತ್ತಿರುವ ತಂದೆಯನ್ನೂ ಅಳುತ್ತಿರುವ ತಾಯಿಯನ್ನೂ ನಮಸ್ಕರಿಸಿ ತಾನೂ ಅಳುತ್ತ ಬ್ರಹ್ಮನ ರಥವನ್ನು ಹತ್ತಿದಳು.

೨೧. ಬ್ರಹ್ಮನು ಸಂತೋಷದಿಂದ ಕೂಡಿದವನಾಗಿ ಹೆಂಡತಿಯಿಂದ ಸಹಿತನಾದ ಮಗನನ್ನು ಕರೆದುಕೊಂಡು ದೇವ ಶ್ರೇಷ್ಠರಿಂದಲೂ ಮುನಿಗಳಿಂದಲೂ ಸಹಿತನಾಗಿ ಬ್ರಹ್ಮಲೋಕಕ್ಕೆ ಪ್ರಯಾಣ ಮಾಡಿದನು.

೨೨. ಅಲ್ಲಿ ಮಂಗಳಕರ್ಮಗಳೆಲ್ಲವೂ ವಿಧಿಪೂರ್ವಕವಾಗಿ ನಡೆದನಂತರ ಬ್ರಾಹ್ಮಣರಿಗೂ ದೇವತೆಗಳಿಗೂ ಸಿದ್ಧಶ್ರೇಷ್ಠರಿಗೂ ಭೋಜನವನ್ನು ಮಾಡಿಸಿದನು. ದುಂದುಭಿಯನ್ನು ಮೊಳಗಿಸಿದನು.

ನಾರದಸ್ತು ಮುನಿಶ್ರೇಷ್ಠೋ ಬಾಧಿತಃ ಪೂರ್ವಕರ್ಮಣಾ ।
ಯಸ್ಯ ಯತ್ಪ್ರಾಕ್ತನಂ ವಿಪ್ರ ದುರ್ಲಂಘ್ಯಂ ಕೇನ ವಾರ್ಯತೇ ॥ ೨೩ ॥

ಸುರಮ್ಯೇ ಪುಷ್ಪತಲ್ಪೇ ಚ ಸುಗಂಧಿಚಂದನಾರ್ಚಿತೇ ।
ಸ ರೇಮೇ ರಾಮಯಾ ಸಾರ್ಧಂ ಬುಬುಧೇ ನ ದಿವಾನಿಶಂ ॥ ೨೪ ॥

ಏವಂ ಕೃತ್ವಾ ವಿವಾಹಂ ಚ ವಿರತೋ ಮುನಿಸತ್ತಮಃ ।
ಉವಾಸ ಬ್ರಹ್ಮಲೋಕೇಷು ವಟಮೂಲೇ ಮನೋಹರೇ ॥ ೨೫ ॥

ತತ್ರಾಜಗಾಮ ನಗ್ನಶ್ಚ ಪ್ರಜ್ವಲನ್ಬ್ರಹ್ಮತೇಜಸಾ ।
ಸನತ್ಕುಮಾರೋ ಭಗವಾನ್ಸಾಕ್ಷಾಚ್ಚ ಬಾಲಕೋ ಯಥಾ ॥ ೨೬ ॥

ಸೃಷ್ಟೇಃ ಪೂರ್ವಶ್ಚ ವಯಸಾ ಯಥೈವ ಪಂಚಹಾಯನಃ ।
ಅಚೂಡೋ ಅನುಪನೀತಶ್ಚ ವೇದಸಂಧ್ಯಾವಿಹೀನತಃ ॥ ೨೭ ॥

---

೨೩–೨೪. ಎಲೈ ಬ್ರಾಹ್ಮಣನಾದ ಶೌನಕನೇ! ಯಾವನಿಗೆ ಯಾವುದು ಪೂರ್ವಜನ್ಮದಕರ್ಮವೋ ಅದನ್ನು ಮೀರುವುದಕ್ಕಾಗುವುದಿಲ್ಲ. ಅದನ್ನು ಯಾವನು ತಾನೇ ಹೋಗಲಾಡಿಸುತ್ತಾನೆ ? ಹಾಗೆಯೇ ಮುನಿಶ್ರೇಷ್ಠನಾದ ನಾರದನು ಪೂರ್ವ ಜನ್ಮದ ಕರ್ಮದಿಂದ ಬಾಧಿಸಲ್ಪಟ್ಟವನಾಗಿ ಅತ್ಯಂತ ಮನೋಹರವಾದ ಸುವಾಸನೆಯುಳ್ಳಗಂಧದಿಂದ ಮಿಶ್ರವಾದ ಹೂವಿನ ಹಾಸಿಗೆಯಲ್ಲಿ ಆ ಸುಂದರಿಯೊಡನೆ ಕ್ರೀಡಿಸಿದನು. ಅವನು ಹಗಲು ರಾತ್ರಿಗಳು ಕಳೆದುದನ್ನೂ ಲೆಕ್ಕಿಸಲಿಲ್ಲ.

೨೫. ಈ ರೀತಿಯಾಗಿ ಮದುವೆಯನ್ನು ಮಾಡಿಕೊಂಡು ವಿಶ್ರಾಂತಿಹೊಂದಿದ ಮುನಿಶ್ರೇಷ್ಠನಾದ ನಾರದನು ಬ್ರಹ್ಮಲೋಕದಲ್ಲಿ ಆಲದ ಮರದ ಕೆಳಭಾಗದಲ್ಲಿ ಕುಳಿತಿದ್ದನು.

೨೬. ಅಲ್ಲಿಗೆ ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಬೆತ್ತಲೆಯಿರುವ ಪೂಜ್ಯನಾದ ಬಾಲಕನಂತೆ ಇರುವ ಸನತ್ಕುಮಾರನು ಬಂದನು.

೨೭–೨೯. ಅವನು ಸೃಷ್ಟಿಗಿಂತಲೂ ಮೊದಲಿನವನೂ ಐದು ವರುಷ ವಯಸ್ಸಿನವನೂ ಚೌಲ ಉಪನಯನ ಇವುಗಳಿಲ್ಲದೆ, ವೇದಾಧ್ಯಯನ ಸಂಧ್ಯಾವಂದನೆಗಳಿಲ್ಲದೆ

ಕೃಷ್ಣೇತಿ ಮಂತ್ರಂ ಜಪತಿ ಯಸ್ಯ ನಾರಾಯಣೋ ಗುರುಃ ।
ಅನಂತಕಾಲಕಲ್ಪಂ ಚ ಭ್ರಾತೃಭಿಶ್ಚ ತ್ರಿಭಿಃ ಸಹ ॥ ೨೮ ॥

ವೈಷ್ಣವಾನಾಮಗ್ರಣೀಶೋ ಜ್ಞಾನಿನಾಂ ಚ ಗುರೋರ್ಗುರುಃ ।
ಆರಾದ್ದೃಷ್ಟ್ವಾ ನಾರದಸ್ತಂ ಭ್ರಾತರಂ ಚ ಸತಾಂ ವರಂ ॥ ೨೯ ॥

ಸಹಸಾ ಶಿರಸಾ ಭೂಮೌ ದಂಡವತ್ಪ್ರಣನಾಮ ತಂ ।
ಉವಾಚ ನಾರದಂ ಬಾಲಃ ಪ್ರಹಸ್ಯ ಪರಮಾರ್ಥಕಂ ॥ ೩೦ ॥

॥ ಸನತ್ಕುಮಾರ ಉವಾಚ ॥

ಅಯೇ ಭ್ರಾತಃ ಕಿಂ ಕರೋಷಿ ಕುಶಲಂ ಯುವತೀಪತೇ ।
ಸ್ತ್ರೀಪುಂಸೋರ್ವರ್ದ್ಧತೇ ಪ್ರೇಮ ನಿತ್ಯಂ ತನ್ನಿತ್ಯನೂತನಂ ॥ ೩೧ ॥

ಅರ್ಗಲಂ ಜ್ಞಾನಮಾರ್ಗಸ್ಯ ಭಕ್ತಿದ್ವಾರಕಪಾಟಕಂ ।
ಮೋಕ್ಷಮಾರ್ಗವ್ಯವಹಿತಂ ಚಿರಂ ಬಂಧನಕಾರಣಂ ॥ ೩೨ ॥

---

ಕೃಷ್ಣ ಎಂಬ ಮಂತ್ರವನ್ನು ಜಪಮಾಡುತ್ತಿರುವನು ಅವನಿಗೆ ನಾರಾಯಣನೇ ಗುರುವು. ಅನೇಕ ಕಲ್ಪಕಾಲಗಳಿಂದಲೂ ಮೂವರು ಸಹೋದರರೊಡಗೂಡಿ ವಿಷ್ಣು ಭಕ್ತರಲ್ಲಿ ಶ್ರೇಷ್ಠನಾಗಿ ಜ್ಞಾನಿಗಳಿಗೂ ಗುರುಗಳಿಗೂ ಗುರುವಾಗಿರುವನು. ನಾರದನು ದೂರದಿಂದಲೇ ಬರುತ್ತಿರುವ ಸತ್ಪುರುಷರಲ್ಲಿ ಶ್ರೇಷ್ಠನೂ ತನ್ನ ಸಹೋದರನೂ ಆದ ಸನತ್ಕುಮಾರನನ್ನು ನೋಡಿದನು.

೩೦. ನಾರದನು ಬೇಗನೆ ತಲೆಬಾಗಿಸಿ ದಂಡದಂತೆ ನೆಲದಮೇಲೆ ನಮಸ್ಕಾರ ಮಾಡಿದನು. ಆ ಬಾಲಕನಾದ ಸನತ್ಕುಮಾರನು ನಗುತ್ತ ನಾರದನನ್ನು ಕುರಿತು ಹೀಗೆ ಹೇಳಿದನು.

೩೧. ಸನತ್ಕುಮಾರನು ಹೇಳುತ್ತಾನೆ:—ಎಲೈ ಸಹೋದರನೇ! ಏನನ್ನು ಮಾಡುತ್ತಿರುವೆ? ಯೌವನವತಿಯಾದ ಸ್ತ್ರೀಗೆ ಪತಿಯಾದ ನಿನಗೆ ಕ್ಷೇಮವೇ? ಸ್ತ್ರೀಯರು ಮತ್ತು ಪುರುಷರು ಇವರುಗಳ ಪ್ರೇಮವು ನಿತ್ಯವೂ ಹೊಸದಾಗಿರುತ್ತ ಯಾವಾಗಲೂ ಬೆಳೆಯುತ್ತದೆ.

೩೨. ಅದು ಜ್ಞಾನಮಾರ್ಗಕ್ಕೆ ಅಗುಳಿಯು. ಭಕ್ತಿಯೆಂಬ ದ್ವಾರಕ್ಕೆ ಬಾಗಿಲು. ಮೋಕ್ಷಮಾರ್ಗಕ್ಕೆ ದೂರವು. ಬಹುಕಾಲ ಸಂಸಾರ ಬಂಧನವನ್ನು ಹೊಂದಲು ಕಾರಣವು.

ಪೀಯೂಷಬುದ್ಧ್ಯಾ ಗರಲಂ ಭುಂಕ್ತೇ ಪಾಪೀ ನರಾಧಮಃ ।
ಪರಂ ನಾರಾಯಣಂ ತ್ಯಕ್ತ್ವಾ ಯಸ್ಯಾಸ್ತೇ ವಿಷಯೇ ಮನಃ || ೩೩ ||

ಸ ವಂಚಿತೋ ಮಾಯಯಾ ಚಾಮೃತಂ ತ್ಯಕ್ತ್ವಾ ವಿಷಂ ಭಜೇತ್ ।
ಸರ್ವೇಷಾಂ ಕಾಮಭೋಗೋಸ್ತಿ ಕರ್ಮಿಣಾಮೀಶ್ವರಂ ವಿನಾ || ೩೪ ||

ವಯಂ ವಿಧಾತುಃ ಪುತ್ರಾಶ್ಚ ಸಾ ಬುದ್ಧಿರಿತಿ ದೇಹಿನಾಂ ।
ಯದಿ ತೇ ನಾಸ್ತಿ ಭೋಗಶ್ಚ ಕಥಂ ಗಂಧರ್ವಜನ್ಮ ಚ || ೩೫ ||

ಕಥಂ ದಾಸೀಸುತಸ್ತ್ವಂ ಚ ಮುಕ್ತಶ್ಚ ಭಕ್ತಸಂಗತಃ ।
ನಿರ್ಗಚ್ಛ ತಪಸೇ ಭ್ರಾತಸ್ತ್ಯಜ ಮಾಯಾಮಯೀಂ ಪ್ರಿಯಾಂ || ೩೬ ||

ಸುಪುಣ್ಯೇ ಭಾರತೇ ವರ್ಷೇ ತಪಸಾ ಭಜ ಮಾಧವಂ ।
ಸ್ಥಿತೇ ನಾರಾಯಣೇ ಸ್ವೇಶೇ ಪರೇ ಸ್ವಪದದಾತರಿ || ೩೭ ||

ವಿಷಯೀ ವಿಷಯಾಂಧಶ್ಚ ವಂಚಿತೋ ಮಾಯಯಾ ಧ್ರುವಂ ।
ಗೃಹಾಣ ಮಮ ಮಂತ್ರಂ ಚ ಕೃಷ್ಣ ಇತ್ಯಕ್ಷರದ್ವಯಂ || ೩೮ ||

---

೩೩. ಯಾವನ ಮನಸ್ಸು ನಾರಾಯಣನನ್ನು ಬಿಟ್ಟು ವಿಷಯಸುಖೋಪಭೋಗಗಳಲ್ಲಿಯೇ ಅತ್ಯಂತವಾಗಿರುತ್ತದೊ ಅಂಥಾ ಪಾಪಿಯಾದ ಹೀನಮನುಷ್ಯನು ಅಮೃತವೆಂದು ತಿಳಿದುಕೊಂಡು ವಿಷವನ್ನು ಸೇವಿಸುತ್ತಾನೆ.

೩೪–೩೬. ಅಂಥವನು ಮಾಯೆಯಿಂದ ವಂಚಿತನಾಗಿ ಅಮೃತವನ್ನು ಬಿಟ್ಟು ವಿಷವನ್ನೇ ಕುಡಿಯುತ್ತಾನೆ. ಕರ್ಮವನ್ನು ಮಾಡುವ ಸಕಲ ಮಾನವರಿಗೂ ಈಶ್ವರನನ್ನು ಬಿಟ್ಟು ಉಳಿದವರೆಲ್ಲರಿಗೂ ಕಾಮಭೋಗವುಂಟು. ನಾವು ಬ್ರಹ್ಮನ ಮಕ್ಕಳು. ನಮಗೆ ಆ ಬುದ್ಧಿಯಿಲ್ಲವೆಂದು ಹೇಳುವುದಾದರೆ ನಿನಗೆ ಕಾಮಭೋಗವಿಲ್ಲದ ಪಕ್ಷದಲ್ಲಿ ಗಂಧರ್ವ ಜನ್ಮವು ಹೇಗೆಬರುತ್ತಿತ್ತು? ಮತ್ತು ದಾಸಿಯಮಗನಾದುದು ಹೇಗೆ? ಭಕ್ತರ ಸಮಾಗಮದಿಂದ ಅವರ ಬಿಡುಗಡೆಯಾಯಿತಲ್ಲವೆ? ಎಲೈ ಸಹೋದರನೇ ಮಾಯಾಸ್ವರೂಪಳಾದ ನಿನ್ನ ಪ್ರಿಯೆಯನ್ನು ಬಿಟ್ಟುಬಿಡು. ತಪಸ್ಸನ್ನು ಮಾಡಲುಹೊರಡು.

೩೭–೩೮. ಅತ್ಯಂತ ಪುಣ್ಯತಮವಾದ ಭಾರತವರ್ಷದಲ್ಲಿ ತಪಸ್ಸನ್ನು ಮಾಡಿ ಮಾಧವನನ್ನು ಸೇವಿಸು. ಆತ್ಮೇಶ್ವರನೂ ಶ್ರೇಷ್ಠನೂ ತನ್ನಸ್ಥಾನವಾದ ವೈಕುಂಠವನ್ನೇ ಕೊಡುವವನಾದ ನಾರಾಯಣನು ಇದ್ದರೂ ಭೋಗಾಪೇಕ್ಷೆಯುಳ್ಳ ವಿಷಯಿಯು ಮಾಯೆಯಿಂದ ವಂಚಿತನಾಗುತ್ತಾನೆ. ಕೃಷ್ಣನೆಂಬ ಎರಡಕ್ಷರವುಳ್ಳ ಮಂತ್ರವನ್ನು ನನ್ನಿಂದ ತೆಗೆದುಕೋ.

ಸರ್ವೇಷಾಮೇವ ಮಂತ್ರಾಣಾಂ ಸಾರಾತ್ಸಾರಂ ಪರಾತ್ಪರಂ ।
ಸರ್ವೇಷು ಚ ಪುರಾಣೇಷು ವೇದೇಷು ಚ ಚತುರ್ಷು ಚ	॥ ೩೯ ॥

ಧರ್ಮಶಾಸ್ತ್ರೇಷು ತಂತ್ರೇಷು ನಾಸ್ತ್ಯೇವಾಸ್ಮಾತ್ಪರೋ ಮನುಃ ।
ನಾರಾಯಣೇನ ದತ್ತೋ ಮೇ ಪುಷ್ಕರೇ ಸೂರ್ಯಪರ್ವಣಿ	॥ ೪೦ ॥

ಅಸಂಖ್ಯಕಲ್ಪಂ ಜಪ್ತ್ವಾsಹಂ ಭ್ರಮಾಮಿ ಸರ್ವಪೂಜಿತಃ ।
ಇತ್ಯುಕ್ತ್ವಾ ಸ್ನಾಪಯಿತ್ವಾ ತಂ ದದೌ ತಸ್ಮೈ ಪರಂ ಮನುಂ	॥ ೪೧ ॥

ದಿವಾನಿಶಂ ಸ ಜಪತಿ ಪೂತಯಾ ಮಣಿಮಾಲಯಾ ।
ತಸ್ಮೈ ಶುಭಾಶಿಷಂ ದತ್ವಾ ಮಂತ್ರಂ ಚ ವೈಷ್ಣವಾಗ್ರಣೀಃ	॥ ೪೨ ॥

ಗೋಲೋಕಂ ಪ್ರಯಯೌ ದ್ರಷ್ಟುಂ ಭಗವಂತಂ ಸನಾತನಂ ।
ನಾರದಸ್ತು ಮನುಂ ಪ್ರಾಪ್ಯ ಸರ್ವಸಿದ್ಧಿಪ್ರದಂ ವರಂ	॥ ೪೩ ॥

ಶ್ರೀಕೃಷ್ಣೇ ನಿಶ್ಚಲಾ ಭಕ್ತಿಃ ಪೂರ್ವಕರ್ಮನಿಕೃಂತನೀ ।
ತ್ಯಕ್ತ್ವಾ ಮಾಯಾಮಯೀಂ ಭಾರ್ಯಾಂ ಭಾರತಂ ತಪಸೇ ಯಯೌ ॥ ೪೪ ॥

---

೩೯–೪೧. ಅದು ಸಕಲಮಂತ್ರಗಳಿಗಿಂತಲೂ ವಜ್ರಕ್ಕಿಂತಲೂ ಅತ್ಯಂತ ಸಾರವಾದುದು. ಸಕಲ ಪುರಾಣಗಳಲ್ಲಿಯೂ ನಾಲ್ಕುವೇದಗಳಲ್ಲಿಯೂ ಧರ್ಮಶಾಸ್ತ್ರಗಳಲ್ಲಿಯೂ ತಂತ್ರಗಳಲ್ಲಿಯೂ ಇದಕ್ಕಿಂತಲೂ ಉತ್ತಮವಾದ ಮಂತ್ರವು ಇಲ್ಲವೇ ಇಲ್ಲ. ಸೂರ್ಯಗ್ರಹಣಕಾಲದಲ್ಲಿ ಪುಷ್ಕರ ಕ್ಷೇತ್ರದಲ್ಲಿ ನಾರಾಯಣಮುನಿಯಿಂದ ಈ ಮಂತ್ರವು ನನಗೆ ಕೊಡಲ್ಪಟ್ಟಿತು. ನಾನು ಅದನ್ನು ಲೆಕ್ಕವಿಲ್ಲದಷ್ಟು ಕಲ್ಪಗಳವರೆಗೆ ಜಪಮಾಡಿ ಸರ್ವರಿಂದಲೂ ಪೂಜಿಸಲ್ಪಡುತ್ತಿರುವವನಾಗಿ ಸುತ್ತುತ್ತಲಿರುವೆನು. ಹೀಗೆಂದು ಹೇಳಿ ಅವನಿಗೆ ಸ್ನಾನಮಾಡಿಸಿ ಉತ್ತಮವಾದ ಮಂತ್ರವನ್ನು ಅವನಿಗೆ ಉಪದೇಶ ಮಾಡಿದನು.

೪೨–೪೪. ನಾರದನು ಹಗಲುರಾತ್ರಿಗಳಲ್ಲಿಯೂ ಆ ಮಂತ್ರವನ್ನು ಪರಿಶುದ್ಧವಾದ ಮಣಿಮಾಲಿಕೆಯಿಂದ ಜಪಮಾಡುತ್ತಾನೆ. ವಿಷ್ಣುಭಕ್ತರಲ್ಲಿ ಶ್ರೇಷ್ಠನಾದ ಸನತ್ಕುಮಾರನು ಆ ನಾರದನಿಗೆ ಮಂಗಳಾಶೀರ್ವಾದವನ್ನು ಮಾಡಿ ಮಂತ್ರವನ್ನುಪದೇಶಿಸಿ ಷಡ್ಗುಣೈಶ್ವರ್ಯಸಂಪನ್ನನೂ ನಾಶರಹಿತನೂ ಆದ ಪರಮಾತ್ಮನನ್ನು ನೋಡುವುದಕ್ಕಾಗಿ ಗೋಲೋಕಕ್ಕೆ ಹೋದನು. ನಾರದಮುನಿಯೂ ಕೂಡ ಸಕಲ ಸಿದ್ಧಿಯನ್ನುಂಟುಮಾಡುವ ಉತ್ತಮವಾದ ಮಂತ್ರವನ್ನು ಪಡೆದು ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳನ್ನು ನಾಶಮಾಡುವ ಶ್ರೀಕೃಷ್ಣನಲ್ಲಿ ದೃಢವಾದ ಭಕ್ತಿಯುಳ್ಳವನಾಗಿ ಮಾಯಾ ರೂಪಳಾದ ಪತ್ನಿಯನ್ನು ಬಿಟ್ಟು ಭಾರತದಲ್ಲಿ ತಪಸ್ಸನ್ನು ಮಾಡಲು ಹೊರಟನು.

ಕೃತಮಾಲಾನದೀತೀರೇ ದದರ್ಶ ಶಂಕರಂ ಪರಂ ।
ದೃಷ್ಟ್ವಾ ಚ ಸಹಸಾ ಮೂರ್ಧ್ನಾ ಪ್ರಣನಾಮ ಶಿವಂ ಮುನಿಃ ॥
ತಮುವಾಚ ಜಗನ್ನಾಥೋ ಭಕ್ತಂ ಚ ಭಕ್ತವತ್ಸಲಃ ॥ ೪೫ ॥

॥ ಶ್ರೀ ಮಹಾದೇವ ಉವಾಚ ॥

ಅಹೋ ನಾರದ ದೃಷ್ಟ್ವಾ ತ್ವಾಂ ಪ್ರಸನ್ನೋಽಹಂ ಸ್ವತೇಜಸಾ ॥ ೪೬ ॥

ಭಕ್ತಾನಾಂ ದರ್ಶನಂ ಯತ್ರ ಸುದಿನಂ ತಚ್ಚ ಶರೀರಿಣಾಂ ।
ಅಯಂ ಹಿ ಪರಮೋ ಲಾಭೋ ದೇಹಿನಾಂ ಭಕ್ತಸಂಗಮಃ ॥ ೪೭ ॥

ಸ ಸ್ನಾತಃ ಸರ್ವತೀರ್ಥೇಷು ಯೋ ದದರ್ಶ ಚ ವೈಷ್ಣವಂ ।
ಅಪಿ ಪ್ರಾಪ್ತೋ ಮಹಾಮಂತ್ರಃ ಸರ್ವತಂತ್ರಸುದುರ್ಲಭಃ ॥ ೪೮ ॥

ಮಯಾ ದತ್ತೋ ಗಣೇಶಾಯ ಸ್ಕಂದಾಯ ಸ್ವಾತ್ಮಜಾಯ ಚ ।
ಮಹ್ಯಂ ದತ್ತಶ್ಚ ಕೃಷ್ಣೇನ ಗೋಲೋಕೇ ರಾಸಮಂಡಲೇ ॥ ೪೯ ॥

---

೪೫. ಕೃತಮಾಲ ಎಂಬ ನದಿಯ ದಡದಲ್ಲಿ ಶ್ರೇಷ್ಠನಾದ ಶಂಕರನನ್ನು ನೋಡಿದನು. ನಾರದಮುನಿಯು ಅವನನ್ನು ನೋಡಿ ಜಾಗ್ರತೆಯಾಗಿ ತನ್ನ ತಲೆ ಬಾಗಿಸಿ ಶಿವನಿಗೆ ನಮಸ್ಕಾರ ಮಾಡಿದನು. ಜಗದೊಡೆಯನೂ ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ಶಂಕರನು ಭಕ್ತನಾದ ನಾರದನನ್ನು ಕುರಿತು ಇಂತೆಂದನು.

೪೬-೪೭. ಶ್ರೀ ಮಹಾದೇವನು ಹೇಳುತ್ತಾನೆ :– ಎಲೈ ನಾರದನೇ ! ನಿನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ನಿನ್ನನ್ನು ನೋಡಿ ನಾನು ಪ್ರಸನ್ನನಾಗಿರುವೆನು. ಮಾನವರಿಗೆ ವಿಷ್ಣುಭಕ್ತರ ದರುಶನವು ಎಲ್ಲಿ ದೊರೆಯುತ್ತದೆಯೊ ಅದು ಸುದಿನವು. ಭಕ್ತರ ಸಮಾಗಮವೆಂಬುದು ಮಾನವನಿಗೆ ಉತ್ತಮವಾದ ಲಾಭವು.

೪೮. ಯಾವನು ವಿಷ್ಣುಭಕ್ತನನ್ನು ದರುಶನ ಮಾಡುವನೋ ಅವನು ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದವನಾಗುತ್ತಾನೆ. ಸಮಸ್ತ ತಂತ್ರಗಳಲ್ಲಿಯೂ ಅತ್ಯಂತ ದುರ್ಲಭವಾದ ಮಹಾಮಂತ್ರವನ್ನೂ ನೀನು ಪಡೆದಿರುವೆ.

೪೯. ಈ ಮಂತ್ರವನ್ನು ನಾನು ನನ್ನ ಮಗನಾದ ಗಣೇಶನಿಗೂ ಷಣ್ಮುಖನಿಗೂ ಉಪದೇಶಮಾಡಿರುವೆನು. ನನಗೆ ಈ ಮಂತ್ರವನ್ನು ಗೋಲೋಕದಲ್ಲಿ ರಾಸಮಂಡಲದಲ್ಲಿ ಶ್ರೀಕೃಷ್ಣನು ಉಪದೇಶಮಾಡಿದನು.

ಬ್ರಹ್ಮಣೇ ಚಾಪಿ ಧರ್ಮಾಯ ಧರ್ಮೋ ನಾರಾಯಣಾಯ ಚ ।
ಬ್ರಹ್ಮಾ ಸನತ್ಕುಮಾರಾಯ ತುಭ್ಯಂ ದತ್ತಶ್ಚ ತೇನ ವೈ ॥ ೫೦ ॥

ಮಂತ್ರಗ್ರಹಣಮಾತ್ರೇಣ ಜನೋ ನಾರಾಯಣೋ ಭವೇತ್ ।
ವಿಚಾರಣಂ ಚ ನಾಸ್ತ್ಯತ್ರ ಕಾಲಾಕಾಲಂ ಶುಭಾಶುಭಂ ॥ ೫೧ ॥

ಪಂಚಲಕ್ಷಜಪೇನೈವ ಪುರಶ್ಚರಣಮಸ್ಯ ಚ ।
ಧ್ಯಾನಂ ಚ ಸಾಮವೇದೋಕ್ತಂ ತೇನ ಧ್ಯಾಯೇಚ್ಚ ವೈಷ್ಣವಃ ॥ ೫೨ ॥

ಧ್ಯಾನಂ ಚ ಪಾಪದಹನಂ ಕರ್ಮಮೂಲನಿಕೃಂತನಂ ।
ಕೃಷ್ಣಂ ನವಘನಶ್ಯಾಮಂ ಕಿಶೋರಂ ಪೀತವಾಸಸಂ ॥ ೫೩ ॥

ಶತಕೋಟೀಂದುಸೌಂದರ್ಯಂ ಪಧಾನಮತುಲಂ ಪರಂ ।
ಭೂಷಿತಂ ಭೂಷಣೌಘೈಸ್ತೈರಮೂಲ್ಯರತ್ನನಿರ್ಮಿತೈಃ ॥ ೫೪ ॥

---

೫೦. ಬ್ರಹ್ಮನಿಗೂ ಧರ್ಮನಿಗೂ ಉಪದೇಶಮಾಡಿದನು. ಧರ್ಮನು ನಾರಾಯಣನಿಗೆ ಉಪದೇಶಮಾಡಿದನು. ಬ್ರಹ್ಮನು ಸನತ್ಕುಮಾರನಿಗೆ ಉಪದೇಶಮಾಡಿದನು. ಆ ಸನತ್ಕುಮಾರನು ನಿನಗೆ ಉಪದೇಶಮಾಡಿದನು.

೫೧. ಮಂತ್ರವನ್ನು ಉಪದೇಶಪಡೆದ ಮಾತ್ರದಿಂದಲೇ ಮಾನವನು ನಾರಾಯಣನಾಗುತ್ತಾನೆ. ಆದಕ್ಕಾಗಿ ಕಾಲವನ್ನಾಗಲಿ ಶುಭ ಅಶುಭಗಳನ್ನಾಗಲಿ ಮಾನವನು ವಿಚಾರ ಮಾಡಬೇಕಾದುದಿಲ್ಲ.

೫೨. ಐದುಲಕ್ಷ ಜಪಮಾಡುವುದರಿಂದ ಈ ಮಂತ್ರಕ್ಕೆ ಪುರಶ್ಚರಣೆಯಾಗುತ್ತದೆ. ಇದರ ಧ್ಯಾನವು ಸಾಮವೇದದಲ್ಲಿ ಹೇಳಲ್ಪಟ್ಟದೆ. ವಿಷ್ಣುಭಕ್ತನಾದವನು ಅದರಿಂದ ಧ್ಯಾನಮಾಡಬೇಕು.

೫೩–೫೪. ಧ್ಯಾನವೆಂಬುದು ಪಾಪಗಳನ್ನು ಸುಡತಕ್ಕದ್ದೂ ಕರ್ಮಗಳ ಬೇರನ್ನು ಸಂಪೂರ್ಣವಾಗಿ ಕತ್ತರಿಸತಕ್ಕುದೂ ಆಗಿರುತ್ತದೆ. ಹೊಸಮೋಡದಂತೆ ಕಪ್ಪಾದವನೂ ಬಾಲಕನೂ ಪೀತಾಂಬರವನ್ನು ಧರಿಸಿದವನೂ ನೂರುಕೋಟಿ ಚಂದ್ರರ ಸೌಂದರ್ಯವುಳ್ಳವನೂ ತನಗೆಣೆಯಿಲ್ಲದವನೂ ಶ್ರೇಷ್ಠನೂ ಬೆಲೆಯಿಲ್ಲದ ರತ್ನಾಭರಣಗಳಿಂದ ಅಲಂಕರಿಸಿಕೊಂಡಿರುವವನೂ ಆದ ಕೃಷ್ಣನನ್ನು ಸೇವಿಸುತ್ತೇನೆ.

ಚಂದನೋಕ್ಷಿತಸರ್ವಾಂಗಂ ಕೌಸ್ತುಭೇನ ವಿರಾಜಿತಂ ।
ಮಯೂರಪಿಚ್ಛಚೂಡಂ ಚ ಮಾಲತೀಮಾಲ್ಯಮಂಡಿತಂ ॥ ೫೫ ॥

ಈಷದ್ಧಾಸ್ಯಪ್ರಸನ್ನಾಸ್ಯಂ ನಿತ್ಯೋಪಾಸ್ಯಂ ಶಿವಾದಿಭಿಃ ।
ಧ್ಯಾನಾಸಾಧ್ಯಂ ದುರಾರಾಧ್ಯಂ ನಿರ್ಗುಣಂ ಪ್ರಕೃತೇಃ ಪರಂ ॥ ೫೬ ॥

ಸರ್ವೇಷಾಂ ಪರಮಾತ್ಮಾನಂ ಭಕ್ತಾನುಗ್ರಹವಿಗ್ರಹಂ ।
ವೇದಾನಿರ್ವಚನೀಯಂ ತಂ ಪರಂ ಸರ್ವೇಶ್ವರಂ ಭಜೇ ॥ ೫೭ ॥

ಧ್ಯಾನೇನಾನೇನ ತಂ ಧ್ಯಾತ್ವಾ ಭಗವಂತಂ ಸನಾತನಂ ।
ಭಜ ತಂ ಪರಮಾನಂದಂ ಸತ್ಯಂ ನಿತ್ಯಂ ಪರಾತ್ಪರಂ ॥ ೫೮ ॥

ಇತ್ಯುಕ್ತ್ವಾ ಸ್ವಪದಂ ಶಂಭುರ್ಜಗಾಮ ಪರಮೇಶ್ವರಃ ।
ತಂ ಪ್ರಣಮ್ಯ ಜಗನ್ನಾಥಂ ನಾರದಸ್ತಪಸೇ ಯಯೌ ॥ ೫೯ ॥

---

೫೫–೫೬. ಮತ್ತು ಚಂದನದಿಂದ ನೆನೆಸಲ್ಪಟ್ಟ ಸಕಲಶರೀರವುಳ್ಳವನೂ ಕೌಸ್ತುಭದಿಂದ ಪ್ರಕಾಶಿಸುತ್ತಿರುವವನೂ ನವಿಲುಗರಿಯನ್ನು ತಲೆಯಲ್ಲಿಧರಿಸಿರುವವನೂ ಮಾಲತೀಹೂವಿನ ಮಾಲಿಕೆಯಿಂದ ಅಲಂಕರಿಸಿಕೊಂಡಿರುವವನೂ ಮಂದಹಾಸದಿಂದ ಗಂಭೀರವಾದ ಮುಖವುಳ್ಳವನೂ ಶಿವನೇ ಮೊದಲಾದವರಿಂದ ಯಾವಾಗಲೂ ಉಪಾಸನೆ ಮಾಡಲ್ಪಡುತ್ತಿರುವವನೂ ಧ್ಯಾನಕ್ಕೂ ಗೋಚರಿಸದವನೂ ಕಷ್ಟದಿಂದ ಆರಾಧಿಸಲು ಯೋಗ್ಯನೂ ಗುಣರಹಿತನೂ ಪ್ರಕೃತಿಗಿಂತಲೂ ಉತ್ತಮನೂ ಆದ ಕೃಷ್ಣನನ್ನು ಸೇವಿಸುತ್ತೇನೆ.

೫೭–೫೮. ಮತ್ತು ಸಕಲರಿಗೂ ಪರಮಾತ್ಮನೂ ಭಕ್ತರಿಗೆ ಅನುಗ್ರಹ ಮಾಡಲು ಶರೀರವನ್ನು ಧರಿಸಿರುವವನೂ ವೇದಗಳಿಂದಲೂ ಹೇಳಲಸಾಧ್ಯನೂ ಉತ್ತಮನೂ ಸರ್ವೇಶ್ವರನೂ ಆದ ಆ ಕೃಷ್ಣನನ್ನು ಸೇವಿಸುತ್ತೇನೆ. ಈ ಧ್ಯಾನದಿಂದ ಪೂಜ್ಯನೂ ನಾಶರಹಿತನೂ ಆದ ಆ ಪರಮಾತ್ಮನನ್ನು ಧ್ಯಾನಮಾಡಿ ಪರಮಾನಂದ ರೂಪನೂ ಸತ್ಯಸ್ವರೂಪನೂ ನಿತ್ಯಸ್ವರೂಪನೂ ಪರಮೇಶ್ವರನೂ ಆದ ಆ ಕೃಷ್ಣನನ್ನು ಭಜಿಸುವವನಾಗು.

೫೯. ಪರಮೇಶ್ವರನಾದ ಶಂಭುವು ಈ ಪ್ರಕಾರವಾಗಿ ಹೇಳಿ ತನ್ನ ಸ್ಥಾನವಾದ ಕೈಲಾಸಕ್ಕೆ ಹೊರಟನು. ನಾರದನು ಜಗತ್ತಿಗೆ ಒಡೆಯನಾದ ಆ ಶಂಭುವಿಗೆ ನಮಸ್ಕಾರವನ್ನು ಮಾಡಿ ತಪಸ್ಸನ್ನು ಮಾಡಲು ಹೊರಟನು.

ನಾರದಃ ಶ್ರೀಹರಿಂ ಸ್ಮೃತ್ವಾ ಯೋಗಾತ್ತ್ಯಕ್ತ್ವಾ ಕಲೇಬರಂ ।
ವಿಲೀನಃ ಪಾದಪದ್ಮೇ ಚ ಪಾದಪದ್ಮಾರ್ಚಿತೇ ಹರೇಃ　　　　॥ ೬೦ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ
ಉತ್ತರಾರ್ಧೇ ನಾರಾಯಣನಾರದಸಂವಾದೇ
ನಾರದವಿವಾಹಾದಿಪ್ರಕರಣಂ ನಾಮ
ತ್ರಿಂಶದಧಿಕಶತತಮೋಽಧ್ಯಾಯಃ ॥

---

೬೦. ನಾರದನು ಶ್ರೀಹರಿಯನ್ನು ಧ್ಯಾನಮಾಡಿ ಯೋಗಶಕ್ತಿಯಿಂದ ಶರೀರವನ್ನು ಬಿಟ್ಟು ದಿವ್ಯಕಮಲಗಳಿಂದ ಪೂಜಿಸಲ್ಪಟ್ಟ ಶ್ರೀಹರಿಯ ಪಾದ ಕಮಲದಲ್ಲಿ ಅಡಗಿದನು.

ಇಲ್ಲಿಗೆ ಬ್ರಹ್ಮವೈವರ್ತ ಮಹಾ ಪುರಾಣದ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿ ನಾರದ ವಿವಾಹ ಮುಂತಾದ
ವಿಷಯಗಳನ್ನೊಳಗೊಂಡ ನೂರ ಮೂವತ್ತನೆಯ ಅಧ್ಯಾಯವು ಸಮಾಪ್ತವು

---

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

### || ಅಥ ಏಕತ್ರಿಂಶದಧಿಕಶತತಮೋಽಧ್ಯಾಯಃ ||

|| ಶೌನಕ ಉವಾಚ ||

ಅತ್ಯಪೂರ್ವಮುಪಾಖ್ಯಾನಂ ಶ್ರುತಂ ಪರಮುಮುದ್ಭುತಂ ।
ಸುಗೋಪ್ಯಂ ಚ ಸುಗೋಪ್ಯಂ ಚ ರಮ್ಯಂರಮ್ಯಂ ನವಂನವಂ ॥ ೧ ॥

ಕಿಮನಿರ್ವಚನೀಯಂ ಚ ಕಮನೀಯಂ ಮನೋಹರಂ ।
ಸುದುರ್ಲಭಾ ತಥಾ ಪ್ರೋಕ್ತಾ ಪುರಾಣೇಷು ಪುರಾತನೀ ॥ ೨ ॥

ಏವಂಭೂತಂ ಚ ಸುದಿನಂ ಕದಾಸ್ಮಾಕಂ ಭವಿಷ್ಯತಿ ।
ತಜ್ಜನ್ಮ ಸಫಲಂ ಧನ್ಯಂ ಯತ್ರ ವೈಷ್ಣವಸಂಗಮಃ ॥ ೩ ॥

---

### ನೂರ ಮೂವತ್ತೊಂದನೆಯ ಅಧ್ಯಾಯವು

೧. ಶೌನಕನು ಹೇಳುತ್ತಾನೆ:—ಅತ್ಯಂತ ಅಪೂರ್ವವಾದ ಈ ಆಖ್ಯಾನವನ್ನು ಕೇಳಿದೆವು. ಇದು ಅತ್ಯಂತ ರಹಸ್ಯವೂ ಆಶ್ಚರ್ಯಕರವೂ ಮನೋಹರವೂ ಹೊಸದೂ ಆಗಿರುವುದು.

೨. ಈ ಕಥೆಯು ಹೀಗೆಯೆಂದು ಹೇಳಲಸಾಧ್ಯವೂ ಅಪೇಕ್ಷೆಯನ್ನುಂಟು ಮಾಡುವುದೂ ಆಗಿರುವುದು. ಪುರಾಣಗಳಲ್ಲಿಯೂ ದೊರಕದಾದ ಅತ್ಯಂತ ಹಿಂದಿನ ಕಥೆಯನ್ನು ನಮಗೆ ಹೇಳಿರುವೆ.

೩. ಈ ರೀತಿಯಾದ ಉತ್ತಮದಿನವು ನಮಗೆ ಮತ್ತೆಯಾವಾಗ ದೊರೆಯುತ್ತದೆ? ಎಲ್ಲಿ ವಿಷ್ಣುಭಕ್ತನ ಸಮಾಗಮವಾಗುತ್ತದೊ ಅವನ ಜನ್ಮವು ಸಫಲವೂ ಧನ್ಯವೂ ಆದುದು.

ಗರ್ಭವಾಸೋಚ್ಛೇದನಂ ಚ ಕರ್ಮಮೂಲನಿಕೃಂತನಂ ।
ಹರಿದಾಸ್ಯಪ್ರದಂ ಶುದ್ಧಂ ಭಕ್ತಾನಾಂ ಭಕ್ತಿವರ್ಧನಂ ॥ ೪ ॥

ಅಸಾಧುಸಂಘದುರ್ಬುದ್ಧಿಪಾಪೋನ್ಮೂಲನಕಾರಣಂ ।
ಗಣೇಶಜನ್ಮೋಪಾಖ್ಯಾನಂ ಪುರಾಣೇಷು ಸುದುರ್ಲಭಂ ॥ ೫ ॥

ತುಲಸೀರಾಧಿಕಾಖ್ಯಾನಂ ಕಿಮಪೂರ್ವಂ ಶ್ರುತಂ ಪರಂ ।
ನವಂ ಯದ್ಯದ್ಗೋಪನೀಯಂ ವ್ಯಕ್ತಮವ್ಯಕ್ತಮೀಪ್ಸಿತಂ ॥
ಸರ್ವಂ ಶ್ರುತಂ ಮಹಾಭಾಗ ಪರಿಪೂರ್ಣಂ ಮನೋಹರಂ ॥ ೬ ॥

ಅಧುನಾ ಶ್ರೋತುಮಿಚ್ಛಾಮಿ ವಹ್ನೇರುತ್ಪತ್ತಿಮೀಪ್ಸಿತಾಂ ।
ಸ್ವರ್ಣಸ್ಯ ಚ ಮಹಾಭಾಗ ತನ್ಮೇ ವ್ಯಾಖ್ಯಾತುಮರ್ಹಸಿ ॥ ೭ ॥

॥ ಸೂತ ಉವಾಚ ॥

ಸಾಮಗ್ರೀಕರಣಂ ಸೃಷ್ಟೇರ್ಜಲಮೇವ ಹುತಾಶನಃ ।
ತಥೈವ ಪ್ರಕೃತಿರ್ನಿತ್ಯಾ ಮಹಾನೇವ ತಥೈವ ಚ ॥ ೮ ॥

---

೪–೫. ಗರ್ಭವಾಸವನ್ನು ನಾಶಮಾಡಿ ಕರ್ಮಗಳ ಬೇರನ್ನು ಕತ್ತರಿಸಿ ಹರಿಯ ಸೇವಕತನವನ್ನು ಕೊಟ್ಟು ಭಕ್ತರ ಭಕ್ತಿಯನ್ನು ಹೆಚ್ಚಿಸಿ ದುಷ್ಟರ ಸಹವಾಸದಿಂದಲೂ ದುರ್ಬುದ್ಧಿಯಿಂದಲೂ ಮಾಡಿದ ಪಾಪಗಳನ್ನು ನಾಶಪಡಿಸಲು ಕಾರಣವಾದ ಪವಿತ್ರವೂ ಪುರಾಣಗಳಲ್ಲಿ ದೊರಕಲಾರದುದೂ ಆದ ಗಣೇಶನ ಜನ್ಮಕಥೆಯನ್ನು ಕೇಳಿದೆನು.

೬. ತುಲಸೀ ಮತ್ತು ರಾಧೆ ಇವರ ಕಥೆಯು ಎಷ್ಟು ಅಪೂರ್ವವಾದುದು ! ಅದನ್ನೂ ಕೇಳಿದುದಾಯಿತು. ಹೊಸದೂ ರಹಸ್ಯವಾಗಿಡಬೇಕಾದುದೂ ಸ್ಪಷ್ಟವಾದುದೂ ಅಸ್ಪಷ್ಟವಾದುದೂ ಇವುಗಳೆಲ್ಲವೂ ನನ್ನಿಂದ ಕೇಳಲ್ಪಟ್ಟಿತು. ಎಲೈ ಮಹಾತ್ಮನೇ ! ಮನೋಹರವೂ ಪರಿಪೂರ್ಣವೂ ಆದ ಸಕಲವನ್ನೂ ಕೇಳಿದೆನು.

೭. ಎಲೈ ಮಹಾತ್ಮನೇ ! ಈಗ ಅತ್ಯಂತ ಇಷ್ಟವಾದ ವಹ್ನಿಯ ಉತ್ಪತ್ತಿಯನ್ನೂ ಹಾಗೆಯೇ ಚಿನ್ನದ ಉತ್ಪತ್ತಿಯನ್ನೂ ಕೇಳಲಪೇಕ್ಷಿಸುತ್ತೇನೆ. ಆ ಕಥೆಯನ್ನು ನನಗೆ ವಿವರವಾಗಿ ತಿಳಿಸುವವನಾಗು.

೮. ಸೂತನು ಹೇಳುತ್ತಾನೆ :—ಸೃಷ್ಟಿಗೆ ನೀರು ಬೆಂಕಿ ಪ್ರಕೃತಿ ಮಹತ್ತು ಮುಂತಾದ ಸಾಮಗ್ರಿಗಳು ಸಾಧನಗಳು. ಹಾಗೆಯೇ ಮೂಲಪ್ರಕೃತಿಯೂ ಮಹತ್ತತ್ವವೂ ಸಾಧನಗಳು.

ಯಥಾ ದಿಶೋ ಮಹಾಕಾಶೋ ಯಥೈವ ಸೃಷ್ಟಿಗೋಲಕಂ ।
ಪ್ರಕೃತೇರ್ಮಹತಶ್ಚ ಸ್ಯಾದಹಂಕಾರಸ್ತಥೈವ ಚ ॥ ೯ ॥

ಯಥೈವ ಶಬ್ದಸ್ತನ್ಮಾತ್ರಂ ತಥೈವ ಚ ಹುತಾಶನಃ ।
ತಥಾಪಿ ತತ್ಸಮುತ್ಪತ್ತಿಂ ಕಥಯಾಮಿ ನಿಶಾಮಯ ॥ ೧೦ ॥

ಏಕದಾ ಸೃಷ್ಟಿಕಾಲೇ ಚ ಬ್ರಹ್ಮಾನಂತಮಹೇಶ್ವರಾಃ ।
ಶ್ವೇತದ್ವೀಪಂ ಯಯುಃ ಸರ್ವೇ ದ್ರಷ್ಟುಂ ವಿಷ್ಣುಂ ಜಗತ್ಪತಿಂ ॥ ೧೧ ॥

ಪರಸ್ಪರಂ ಚ ಸಂಭಾಷಾಂ ಕೃತ್ವಾ ಸಿಂಹಾಸನೇಷು ಚ ।
ಊಚುಃ ಸರ್ವೇ ಸಭಾಮಧ್ಯೇ ಸುರಮ್ಯೇ ಪುರತೋ ವಿಭೋಃ ॥ ೧೨ ॥

ವಿಷ್ಣುಗಾತ್ರೋದ್ಭವಾಸ್ತತ್ರ ಕಾಮಿನ್ಯಃ ಕಮಲಾಕಲಾಃ ।
ತತ್ರ ನೃತ್ಯಂತಿ ಗಾಯಂತಿ ವಿಷ್ಣುಗಾಥಾಶ್ಚ ಸುಸ್ವರಂ ॥ ೧೩ ॥

---

೯. ಯಾವರೀತಿ ದಿಕ್ಕುಗಳೂ ಮಹಾಕಾಶವೂ ಸೃಷ್ಟಿಗೋಳಕವೂ ಉಂಟಾದುವೋ ಹಾಗೆಯೇ ಪ್ರಕೃತಿ ಮಹತ್ತು ಇವುಗಳಿಂದ ಅಹಂಕಾರವು ಹುಟ್ಟಿತು.

೧೦. ಅನಂತರ ಹೇಗೆ ಶಬ್ದತನ್ಮಾತ್ರವು ಹುಟ್ಟಿತೋ ಹಾಗೆಯೇ ಅಗ್ನಿಯೂ ಹುಟ್ಟಿತು. ಆದರೂ ಆ ಅಗ್ನಿಯ ಹುಟ್ಟನ್ನು ಹೇಳುತ್ತೇನೆ, ಕೇಳುವವನಾಗು.

೧೧. ಒಂದಾನೊಂದು ಸಮಯದಲ್ಲಿ ಸೃಷ್ಟಿಕಾಲದಲ್ಲಿ ಬ್ರಹ್ಮ ಅನಂತ ಮಹೇಶ್ವರ ಇವರುಗಳು ಒಟ್ಟಾಗಿ ಜಗದೊಡೆಯನಾದ ವಿಷ್ಣುವನ್ನು ನೋಡುವುದಕ್ಕಾಗಿ ಶ್ವೇತದ್ವೀಪಕ್ಕೆ ಹೋದರು.

೧೨. ಒಬ್ಬರಿಗೊಬ್ಬರು ಕುಶಲಪ್ರಶ್ನೆಗಳನ್ನು ಮಾಡಿದನಂತರ ಮನೋಹರವಾದ ಸಭೆಯ ಮಧ್ಯದಲ್ಲಿ ಪ್ರಭುವಾದ ಶ್ರೀವಿಷ್ಣುವಿನ ಮುಂಭಾಗದಲ್ಲಿ ಎಲ್ಲರೂ ಕುಳಿತುಕೊಂಡರು.

೧೩. ಆ ಸಭೆಯಲ್ಲಿ ವಿಷ್ಣುವಿನ ಶರೀರದಿಂದ ಹುಟ್ಟಿದವರಾದ ಲಕ್ಷ್ಮಿಯ ಕಲಾಂಶದವರಾದ ಸ್ತ್ರೀಯರು ಶ್ರೀವಿಷ್ಣುವಿನ ಕಥೆಯನ್ನು ಇಂಪಾದ ಧ್ವನಿಯಿಂದ ಹಾಡುತ್ತ ಕುಣಿಯುತ್ತಿದ್ದರು.

ತಾಸಾಂ ಚ ಕಠಿನಾಂ ಶ್ರೋಣಿಂ ಕಠಿಣಂ ಸ್ತನಮಂಡಲಂ ।
ಸಸ್ಮಿತಂ ಮುಖಪದ್ಮಂ ಚ ದೃಷ್ಟ್ವಾ ಬ್ರಹ್ಮಾ ಸುಕಾಮುಕಃ ॥ ೧೪ ॥

ಮನೋನಿವಾರಣಂ ಕರ್ತುಂ ನ ಶಶಾಕ ಪಿತಾಮಹಃ ।
ವೀರ್ಯಂ ಪಪಾತ ಚಚ್ಛಾದ ಲಜ್ಜಯಾ ವಾಸಸಾ ವಿಭುಃ ॥ ೧೫ ॥

ತದ್ವೀರ್ಯಂ ವಸ್ತ್ರಸಹಿತಂ ಪ್ರತಪ್ತಂ ಕಾಮತಾಪತಃ ।
ಕ್ಷೀರೋದೇ ಪ್ರೇರಯಾಮಾಸ ಸಂಗೀತೇ ವಿರತೇ ದ್ವಿಜ ॥ ೧೬ ॥

ಜಲಾದುತ್ಥಾಯ ಪುರುಷಃ ಪ್ರಜ್ವಲನ್ಬ್ರಹ್ಮತೇಜಸಾ ।
ಉವಾಸ ಬ್ರಹ್ಮಣಃ ಕ್ರೋಡೇ ಲಜ್ಜಿತಸ್ಯ ಚ ಸಂಸದಿ ॥ ೧೭ ॥

ಏತಸ್ಮಿನ್ನಂತರೇ ರುಷ್ಟೋ ಜಲಾದುತ್ಥಾಯ ಸತ್ವರಃ ।
ಪ್ರಣಮ್ಯ ವರುಣೋ ದೇವೋ ಬಾಲಂ ನೇತುಂ ಸಮುದ್ಯತಃ ॥ ೧೮ ॥

---

೧೪. ಬ್ರಹ್ಮನು ಆಸ್ತ್ರೀಯರ ಗಟ್ಟಿಯಾದ ಕಟಿಪಶ್ಚಾದ್ಭಾಗವನ್ನೂ ಸ್ತನಗಳ ಸಮೂಹವನ್ನೂ ಮುಗುಳು ನಗೆಯಿಂದ ಕೂಡಿದ ಮುಖಕಮಲವನ್ನೂ ನೋಡಿ ಬಹಳ ಕಾಮುಕನಾದನು.

೧೫. ಬ್ರಹ್ಮನು ಮನಸ್ಸನ್ನು ಕಾಮದಕಡೆಯಿಂದ ತಡೆಯಲು ಸಮರ್ಥನಾಗ ಲಿಲ್ಲ. ಅವನ ವೀರ್ಯವು ಕೆಳಕ್ಕೆಬಿದ್ದಿತು. ವಿಭುವಾದ ಬ್ರಹ್ಮನು ನಾಚಿಕೆಯಿಂದ ಅದನ್ನು ಬಟ್ಟೆಯಿಂದ ಮುಚ್ಚಿದನು.

೧೬. ಸಂಗೀತವು ಮುಗಿದನಂತರ ಬ್ರಹ್ಮನು ಕಾಮತಾಪದಿಂದ ಕಾದು ಹೋದ ಆ ವೀರ್ಯವನ್ನು ಬಟ್ಟೆಸಹಿತವಾಗಿ ಕ್ಷೀರಸಮುದ್ರಕ್ಕೆ ಕಳುಹಿಸಿದನು.

೧೭. ಆ ಸಮುದ್ರದ ನೀರಿನಿಂದ ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿರುವ ಪುರುಷನೊಬ್ಬನು ಮೇಲಕ್ಕೆದ್ದು ಲಜ್ಜೆಗೊಂಡಿರುವ ಬ್ರಹ್ಮನ ಪಕ್ಕದಲ್ಲಿ ನಿಂತನು.

೧೮. ಈ ಸಮಯದಲ್ಲಿ ಕೋಪಗೊಂಡ ವರುಣದೇವನು ನೀರಿನಿಂದ ಬೇಗನೆ ಮೇಲಕ್ಕೆದ್ದು ಬಂದು ಬ್ರಹ್ಮ ದೇವನಿಗೆ ನಮಸ್ಕಾರ ಮಾಡಿ ಬಾಲಕನನ್ನು ಕರೆದು ಕೊಂಡು ಹೋಗಲು ಪ್ರಯತ್ನ ಮಾಡಿದನು.

ಬಾಲೋ ದಧಾರ ಬ್ರಹ್ಮಾಣಂ ಬಾಹುಭ್ಯಾಂ ಚ ಭಯಾದ್ರುದನ್ ।
ಕಿಂಚಿನ್ನೋವಾಚ ಜಗತಾಂ ವಿಧಾತಾ ಲಜ್ಜಯಾ ದ್ವಿಜ ॥ ೧೯ ॥

ಬಾಲಕಸ್ಯ ಕರೇ ಧೃತ್ವಾ ಚಕಾರಾಕರ್ಷಣಂ ರುಷಾ ।
ವರುಣಶ್ಚ ಸಭಾಮಧ್ಯೇ ತಂ ಚಿಕ್ಷೇಪ ಪ್ರಜಾಪತಿಃ ॥ ೨೦ ॥

ಪಪಾತ ದೂರತೋ ದೇವೋ ವರುಣೋ ದುರ್ಬಲಸ್ತತಃ ।
ಮೂರ್ಚ್ಛಾಂ ಸಂಪ್ರಾಪ ಮೃತವತ್ಕೋಪದೃಷ್ಟ್ಯಾ ವಿಧೇರಹೋ ॥ ೨೧ ॥

ಚೇತನಂ ಕಾರಯಾಮಾಸಾಮೃತದೃಷ್ಟ್ಯಾ ಚ ಶಂಕರಃ ।
ಸಂಪ್ರಾಪ್ಯ ಚೇತನಂ ತತ್ರ ತಮುವಾಚ ಜಲೇಶ್ವರಃ ॥ ೨೨ ॥

॥ ವರುಣ ಉವಾಚ ॥

ಬಾಲೇ ಜಲೇ ಸಮುದ್ಭೂತೋ ಮಮ ಪುತ್ರೋಽಯಮೀಪ್ಸಿತಃ ।
ಅಹಂ ಗೃಹೀತ್ವಾ ಯಾಸ್ಯಾಮಿ ಬ್ರಹ್ಮಾ ಮಾಂ ತಾಡಯೇತ್ಕಥಂ ॥ ೨೩ ॥

---

೧೯. ಬಾಲಕನು ಹೆದರಿಕೆಯಿಂದ ಅಳುತ್ತ ಬ್ರಹ್ಮನನ್ನು ಬಲವಾಗಿ ತನ್ನೆರಡು ತೋಳುಗಳಿಂದ ಹಿಡಿದುಕೊಂಡನು. ಜಗತ್ತನ್ನು ಸೃಷ್ಟಿಮಾಡುವವನಾದ ಬ್ರಹ್ಮನು ನಾಚಿಕೆಯಿಂದ ಏನೊಂದು ಮಾತನ್ನೂ ಆಡಲಿಲ್ಲ.

೨೦. ವರುಣನು ಕೋಪದಿಂದ ಸಭೆಯ ಮಧ್ಯದಲ್ಲಿ ಬಾಲಕನ ಕೈಯನ್ನು ಹಿಡಿದೆಳೆದನು. ಆಗ ಬ್ರಹ್ಮನು ಅವನನ್ನು ನೂಕಿದನು.

೨೧. ವರುಣದೇವನು ಬಲವಿಲ್ಲದವನಾಗಿ ಬಹಳ ದೂರ ಹೋಗಿ ಬಿದ್ದನು. ಆಶ್ಚರ್ಯವನ್ನೇನು ಹೇಳಲಿ? ಬ್ರಹ್ಮನ ಕೋಪದ ನೋಟದಿಂದ ಅವನು ಸತ್ತವನಂತೆ ಮೂರ್ಛೆಯನ್ನು ಹೊಂದಿದನು.

೨೨. ಶಂಕರನು ತನ್ನ ಅಮೃತಮಯವಾದ ನೋಟದಿಂದ ಅವನಿಗೆ ಜ್ಞಾನ ಬರುವಂತೆ ಮಾಡಿದನು. ವರುಣನು ಜ್ಞಾನವನ್ನು ಪಡೆದುಕೊಂಡು ಆ ಈಶ್ವರನನ್ನು ಕುರಿತು ಹೇಳಿದನು.

೨೩. ವರುಣನು ಹೇಳುತ್ತಾನೆ:—ಈ ಬಾಲಕನು ನೀರಿನಲ್ಲಿ ಹುಟ್ಟಿದವನು. ಇವನು ನನ್ನ ಮಗನು. ಮತ್ತು ನನ್ನ ಪ್ರೀತಿಪಾತ್ರನಾದನು. ಈ ಮಗನನ್ನು ನಾನು ಕರೆದುಕೊಂಡು ಹೋಗುತ್ತೇನೆಂದರೆ ಬ್ರಹ್ಮನು ನನ್ನನ್ನೇತಕ್ಕೆ ಹೊಡೆಯುತ್ತಾನೆ ?

|| ಬ್ರಹ್ಮೋವಾಚ ||

ಬಾಲಕಃ ಶರಣಾಪನ್ನೋ ಮಯಿ ವಿಷ್ಣೋ ಮಹೇಶ್ವರ ।
ಕಥಂ ದಾಸ್ಯಾಮಿ ಭೀತಂ ಚ ರುದಂತಂ ಶರಣಾಗತಂ || ೨೪ ||

ಶರಣಾಗತದೀನಾರ್ತಂ ಯೋ ನ ರಕ್ಷೇದಪಂಡಿತಃ ।
ಪಚ್ಯತೇ ನಿರಯೇ ತಾವದ್ಯಾವಚ್ಚಂದ್ರದಿವಾಕರೌ || ೨೫ ||

ಉಭಯೋರ್ವಚನಂ ಶ್ರುತ್ವಾ ಪ್ರಹಸ್ಯ ಮಧುಸೂದನಃ ।
ಉವಾಚ ತತ್ರ ಸರ್ವಜ್ಞಃ ಸರ್ವೇಶಶ್ಚ ಯಥೋಚಿತಂ || ೨೬ ||

|| ಶ್ರೀ ಭಗವಾನುವಾಚ ||

ದೃಷ್ಟ್ವಾ ಕಾಮಿನೀಶ್ರೋಣಿಂ ವೀರ್ಯಂ ಧಾತುಃ ಪಪಾತ ತತ್ ।
ಲಜ್ಜಯಾ ಪ್ರೇರಯಾಮಾಸ ಕ್ಷೀರೋದೇ ನಿರ್ಮಲೇ ಜಲೇ || ೨೭ ||

---

೨೪. ಬ್ರಹ್ಮನು ಹೇಳುತ್ತಾನೆ :—ಎಲೈ ವಿಷ್ಣುವೇ ! ಮಹೇಶ್ವರನೇ ! ಈ ಬಾಲಕನು ನನ್ನನ್ನು ಮರೆಹೊಕ್ಕಿರುವನು. ಇಂಥಾ ಹೆದರಿಕೆಯಿಂದ ಅಳುತ್ತಿರುವ ಮರೆಹೊಕ್ಕಿರುವ ಹುಡುಗನನ್ನು ನಾನು ಹೇಗೆ ಇವನಿಗೆ ಕೊಡಲಿ?

೨೫. ಶರಣುಬಂದವನನ್ನೂ ದೀನನನ್ನೂ ದುಃಖಗೊಂಡವನನ್ನೂ ಯಾವ ಮೂಢನು ಕಾಪಾಡುವುದಿಲ್ಲವೋ ಅವನು ಸೂರ್ಯ ಚಂದ್ರರಿರುವ ವರೆಗೂ ಭಯಂಕರವಾದ ನರಕದಲ್ಲಿ ಯಾತನೆಯನ್ನನುಭವಿಸುತ್ತಾನೆ.

೨೬. ಇವರಿಬ್ಬರ ಮಾತನ್ನೂ ಕೇಳಿ ಸರ್ವಜ್ಞನೂ ಸರ್ವೇಶ್ವರನೂ ಆದ ಮಧುಸೂದನನು ಗಟ್ಟಿಯಾಗಿ ನಕ್ಕು ಆ ಸಭೆಯಲ್ಲಿ ಸಮಯೋಚಿತವಾಗಿ ಮಾತನಾಡಿದನು.

೨೭. ಶ್ರೀ ಭಗವಂತನು ಹೇಳುತ್ತಾನೆ :—ಕಾಮಿನಿಯ ಕಟಪಶ್ಚಾದ್ಭಾಗವನ್ನು ನೋಡಿ ಬ್ರಹ್ಮನ ವೀರ್ಯವು ಬಿದ್ದಿತು. ಅದನ್ನು ಬ್ರಹ್ಮನು ನಾಚಿಕೆಯಿಂದ ಹಾಲಿನ ಸಮುದ್ರದ ಶುದ್ಧವಾದ ನೀರಿನಲ್ಲಿ ಹಾಕುವಂತೆ ಕಳುಹಿಸಿದನು.

ತತೋ ಬಭೂವ ಬಾಲಶ್ಚ ಧರ್ಮತೋ ವಿಧಿಪುತ್ರಕಃ ।
ಕ್ಷೇತ್ರಜಶ್ಚ ಸುತಃ ಶಾಸ್ತ್ರೇ ವರುಣಸ್ಯಾಪಿ ಗೌಣತಃ ॥ ೨೮ ॥

॥ ಶ್ರೀ ಮಹಾದೇವ ಉವಾಚ ॥

ಯೋ ವಿದ್ಯಾಯೋನಿಸಂಬಂಧೋ ವೇದೇಷು ಚ ನಿರೂಪಿತಃ ।
ಶಿಷ್ಯೇ ಪುತ್ರೇ ಚ ಸಮತಾ ಚೇತಿ ವೇದವಿದೋ ವಿದುಃ ॥ ೨೯ ॥

ಮಂತ್ರಂ ದದಾತು ವರುಣೋ ವಿದ್ಯಾಂ ಚ ಬಾಲಕಾಯ ಚ ।
ಪುತ್ರೋ ವಿಧಾತುರ್ವಹ್ನಿಶ್ಚ ಶಿಷ್ಯಶ್ಚ ವರುಣಸ್ಯ ಚ ॥ ೩೦ ॥

ವಿಷ್ಣುರ್ದದಾತು ಬಾಲಾಯ ದಾಹಿಕಾಂ ಶಕ್ತಿಮುಜ್ವಲಾಂ ।
ಸರ್ವದಗ್ಧೋ ಹುತಾಶಶ್ಚ ನಿರ್ವಾಣೋ ವರುಣೇನ ಚ ॥ ೩೧ ॥

ವಿಷ್ಣುಶ್ಚ ದಾಹಿಕಾಂ ಶಕ್ತಿಂ ದದೌ ತಸ್ಮೈ ಶಿವಾಜ್ಞಯಾ ।
ಮಂತ್ರಂ ವಿದ್ಯಾಂ ಚ ವರುಣೋ ರತ್ನಮಾಲಾಂ ಮನೋಹರಾಂ ॥ ೩೨ ॥

---

೨೮. ಆ ವೀರ್ಯದಿಂದ ಬಾಲಕನು ಹುಟ್ಟಿದನು. ಧರ್ಮಶಾಸ್ತ್ರದಂತೆ ಇವನು ಬ್ರಹ್ಮನ ಮಗನಾಗಿರುತ್ತಾನೆ. ಕ್ಷೇತ್ರದಲ್ಲಿ ಹುಟ್ಟಿದುದರಿಂದ ವರುಣನ ಮಗನೆಂಬುದು ಗೌಣವು.

೨೯. ಶ್ರೀಮಹಾದೇವನು ಹೇಳುತ್ತಾನೆ:—ಯಾವನು ವಿದ್ಯೆಯ ಮೂಲಕ ಸಂಬಂಧಿಯೋ ಯಾವನು ಯೋನಿಮೂಲಕ ಸಂಬಂಧಿಯೋ (ಮಗನೋ) ಅಂಥಾ ಶಿಷ್ಯನಲ್ಲಿಯೂ ಮಗನಲ್ಲಿಯೂ ಸಮತಾಭಾವನೆಯುಂಟೆಂದು ವೇದಗಳಲ್ಲಿ ಹೇಳಿರುತ್ತದೆ ಎಂದು ವೇದಗಳನ್ನು ತಿಳಿದಿರುವವರು ಹೇಳುತ್ತಾರೆ.

೩೦. ವರುಣನು ಈ ಬಾಲಕನಿಗೆ ಮಂತ್ರವಿದ್ಯೆಯನ್ನುಪದೇಶಿಸಲಿ. ಈ ಅಗ್ನಿಯು ಬ್ರಹ್ಮನ ಮಗನೂ ವರುಣನ ಶಿಷ್ಯನೂ ಆಗುತ್ತಾನೆ.

೩೧. ವಿಷ್ಣುವು ಬಾಲಕನಿಗೆ ಸುಡುವ ಶಕ್ತಿಯನ್ನು ಕೊಡಲಿ. ಅಗ್ನಿಯು ಸರ್ವವನ್ನೂ ಸುಡುತ್ತಿದ್ದ ವರುಣನಿಂದ ತಣ್ಣಗಾಗಿರುವನು.

೩೨. ವಿಷ್ಣುವು ಈಶ್ವರನ ಅಪ್ಪಣೆಯಂತೆ ಅಗ್ನಿಗೆ ಸುಡುವ ಶಕ್ತಿಯನ್ನು ಕೊಟ್ಟನು. ವರುಣನು ಮಂತ್ರವನ್ನೂ ವಿದ್ಯೆಯನ್ನೂ ಮನೋಹರವಾದ ರತ್ನ ಮಾಲಿಕೆಯನ್ನೂ ಅಗ್ನಿಗೆ ಕೊಟ್ಟನು.

ಕ್ರೋಡೇ ಕೃತ್ವಾ ಚ ತಂ ಬಾಲಂ ಚುಚುಂಬ ಮಾಯಯಾ ಸುರಃ ।
ಬ್ರಹ್ಮಣೇ ಚ ದದೌ ಸಾಕ್ಷಾದ್ವಿಷ್ಣುಶಂಕರಯೋರಪಿ ॥ ೩೩ ॥

ಪ್ರಣಮ್ಯ ವಿಷ್ಣುಂ ಬ್ರಹ್ಮಾ ಚ ಯಯೌ ಶಂಭುಃ ಸ್ವಮಂದಿರಂ ।
ಅಗ್ನ್ಯುತ್ಪತ್ತಿಶ್ಚ ಕಥಿತಾ ಸ್ವರ್ಣೋತ್ಪತ್ತಿಂ ನಿಶಾಮಯ ॥ ೩೪ ॥

ಏಕದಾ ಸರ್ವದೇವಾಶ್ಚ ಸಮೂಷುಃ ಸ್ವರ್ಗಸಂಸದಿ ।
ತತ್ರ ಕೃತ್ವಾ ಚ ನೃತ್ಯಂ ಚ ಗಾಯಂತ್ಯಪ್ಸರಸಾಂ ಗಣಾಃ ॥ ೩೫ ॥

ವಿಲೋಕ್ಯ ರಂಭಾಂ ಸುಶ್ರೋಣೀಂ ಸಕಾಮೋ ವಹ್ನಿರೇವ ಚ ।
ಪಪಾತ ವೀರ್ಯಂ ಚಚ್ಛಾದ ಲಜ್ಜಯಾ ವಾಸಸಾ ತಥಾ ॥ ೩೬ ॥

ಉತ್ತಸ್ಥೌ ಸ್ವರ್ಣಪುಂಜಶ್ಚ ವಸ್ತ್ರಂ ಕ್ಷಿಪ್ತ್ವಾ ಜ್ವಲತ್ಪ್ರಭಂ ।
ಕ್ಷಣೇನ ವರ್ಧಯಾಮಾಸ ಸ ಸುಮೇರುರ್ಬಭೂವ ಹ ॥ ೩೭ ॥

---

೩೩. ದೇವನಾದ ವರುಣನು ಆ ಬಾಲಕನನ್ನು ಅಪ್ಪಿಕೊಂಡು ಮಾಯೆಯಿಂದ ಮೋಹಿತನಾಗಿ ಅವನನ್ನು ಚುಂಬಿಸಿದನು. ಮತ್ತು ಬ್ರಹ್ಮನಿಗೂ ಸಾಕ್ಷಾತ್ ವಿಷ್ಣು ಮತ್ತು ಶಂಕರ ಇವರಿಗೂ ಒಪ್ಪಿಸಿದನು.

೩೪. ಬ್ರಹ್ಮನೂ ಈಶ್ವರನೂ ವಿಷ್ಣುವಿಗೆ ನಮಸ್ಕಾರಮಾಡಿ ತಮ್ಮತಮ್ಮ ಮನೆಗಳಿಗೆ ಹೋದರು. ಹೀಗೆ ಅಗ್ನಿಯ ಹುಟ್ಟನ್ನು ಹೇಳಿರುವೆನು. ಚಿನ್ನದ ಉತ್ಪತ್ತಿಯನ್ನು ಹೇಳುತ್ತೇನೆ. ಕೇಳುವವನಾಗು.

೩೫. ಒಂದಾನೊಂದು ಸಮಯದಲ್ಲಿ ಸಮಸ್ತ ದೇವತೆಗಳೂ ಸ್ವರ್ಗಲೋಕದಲ್ಲಿ ಸಭೆ ಸೇರಿದ್ದರು. ಆಗ ಅಪ್ಸರಸ್ತ್ರೀಯರ ಗುಂಪುಗಳು ನರ್ತನವನ್ನು ಮಾಡುತ್ತ ಹಾಡುತ್ತಲಿದ್ದುವು.

೩೬. ಅಗ್ನಿಯು ಮನೋಹರನಾದ ಕಟಿಪಶ್ಚಾದ್ಭಾಗವುಳ್ಳ ರಂಭೆಯನ್ನು ನೋಡಿ ಕಾಮಾಧೀನನಾದನು. ಅವನ ವೀರ್ಯವು ಕೆಳಕ್ಕೆ ಬಿದ್ದಿತು. ಅದನು ಅವನು ನಾಚಿಕೆಯಿಂದ ಬಟ್ಟೆಯಲ್ಲಿ ಮುಚ್ಚಿದನು.

೩೭. ಆ ವಸ್ತ್ರವನ್ನು ಭೇದಿಸಿಕೊಂಡು ಹೊಳೆಯುತ್ತಿರುವ ಕಾಂತಿಯುಳ್ಳ ಚಿನ್ನದಗುಂಪು ಮೇಲಕ್ಕೆದ್ದಿತು. ಅದು ಕ್ಷಣಕಾಲದಲ್ಲಿಯೇ ದೊಡ್ಡದಾಗಿ ಬೆಳೆಯಿತು. ಅದೇ ಸುಮೇರುವೆಂಬ ಬೆಟ್ಟವಾಯಿತು.

**ಹಿರಣ್ಯರೇತಸಂ ವಹ್ನಿಂ ಪ್ರವದಂತಿ ಮನೀಷಿಣಃ ।**
**ಇತಿ ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೩೮ ॥**

**ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ**
**ಉತ್ತರಾರ್ಧೇ ನಾರಾಯಣನಾರದಸಂವಾದೇ**
**ವಹ್ನಿಸುವರ್ಣೋತ್ಪತ್ತಿರ್ನಾಮೈಕತ್ರಿಂಶದಧಿಕಶತತಮೋಽಧ್ಯಾಯಃ ॥**

---

೩೮. ಅದರಿಂದ ಅಗ್ನಿಯನ್ನು ಹಿರಣ್ಯರೇತಸ ಎಂದು ವಿದ್ವಾಂಸರು ಹೇಳುತ್ತಾರೆ. ಈ ಪ್ರಕಾರ ಸಕಲ ವಿಚಾರಗಳನ್ನೂ ನಿನಗೆ ತಿಳಿಸಿರುವೆನು. ಇನ್ನೇನನ್ನು ನೀನು ಕೇಳಲು ಅಪೇಕ್ಷಿಸುತ್ತಿರುವೆ ? ಹೇಳು.

ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಶ್ರೀಕೃಷ್ಣಜನ್ಮಖಂಡದ
ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿ
ವಹ್ನಿ ಸುವರ್ಣ ಇವುಗಳ ಉತ್ಪತ್ತಿಯೆಂಬ
ನೂರಮೂವತ್ತೊಂದನೆಯ ಅಧ್ಯಾಯವು ಸಮಾಪ್ತವಾದುದು.



|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ದ್ವಾತ್ರಿಂಶದಧಿಕಶತತಮೋಽಧ್ಯಾಯಃ ||

|| ಶೌನಕ ಉವಾಚ ||

ಶ್ರುತಂ ಸರ್ವಂ ನಾವಶೇಷಂ ಧರ್ಮೇಶ ಬ್ರಾಹ್ಮಣಂ ಚ ಮಾಂ |
ಕಥಯಸ್ವ ಮಹಾಭಾಗ ಪುರಾಣಂ ಪುನರೇವ ಹಿ || ೧ ||

ಏವಂ ವಿಧಂ ಪುರಾಣಂ ಚ ಜನ್ಮನ್ಯೇವ ನ ಹಿ ಶ್ರುತಂ |
ನ ದೃಷ್ಟಂ ನ ಶ್ರುತಂ ತಾತ ತಾದೃಶಂ ವಾಚಕಂ ತಥಾ || ೨ ||

|| ಸೂತ ಉವಾಚ ||

ಶ್ರೂಯತಾಂ ಭೋ ಮಹಾಭಾಗ ಸಾವಧಾನಂ ಚ ಸಂಯತಂ |
ಅಧ್ಯಾಯಶ್ರವಣೇನೈವ ಪುರಾಣಫಲಮಾಲಭೇತ್ || ೩ ||

---

### ನೂರ ಮೂವತ್ತೆರಡನೆಯ ಅಧ್ಯಾಯವು

ಶೌನಕನು ಹೇಳುತ್ತಾನೆ:

೧. ಎಲೈ ಧರ್ಮೇಶ್ವರನೇ! ಸಮಸ್ತವನ್ನೂ ಕೇಳಿದುದಾಯಿತು. ಇನ್ನೇನೂ ಉಳಿದಿರುವುದಿಲ್ಲ. ಎಲೈ ಮಹಾತ್ಮನೇ! ಬ್ರಾಹ್ಮಣನಾದ ನನಗೆ ಮತ್ತೊಮ್ಮೆ ಪುರಾಣಕಥೆಯನ್ನು ಹೇಳುವವನಾಗು.

೨. ಈ ರೀತಿಯಾದ ಪುರಾಣವನ್ನು ಹುಟ್ಟಿದಂದಿನಿಂದಲೂ ಕೇಳಿಯೇ ಇರಲಿಲ್ಲ. ಎಲೈ ತಂದೆಯೇ ಈ ರೀತಿಯಲ್ಲಿ ಪುರಾಣವನ್ನು ಹೇಳುವವರನ್ನು ನೋಡಿಯೂ ಇರಲಿಲ್ಲ. ಕೇಳಿಯೂ ಇರಲಿಲ್ಲ.

ಸೂತನು ಹೇಳುತ್ತಾನೆ:

೩. ಎಲೈ ಮಹಾತ್ಮನೇ! ಸಾವಧಾನದಿಂದ ನೆಟ್ಟ ಮನಸ್ಸುಳ್ಳವನಾಗಿ ಕೇಳು. ಈ ಅಧ್ಯಾಯವೊಂದನ್ನು ಕೇಳಿದಮಾತ್ರದಿಂದಲೇ ಪುರಾಣವನ್ನು ಕೇಳಿದುದರ ಫಲವನ್ನು ಮಾನವನು ಹೊಂದುತ್ತಾನೆ.

ಬ್ರಹ್ಮಖಂಡೇ ಚ ಕಥಿತಂ ಪರಂ ಬ್ರಹ್ಮನಿರೂಪಣಂ ।
ತದನಿರ್ವಚನೀಯಂ ಚ ಯೇಷಾಮಪಿ ಯಥಾಗತಂ ॥ ೪ ॥

ಸಾಕಾರಂ ಚ ನಿರಾಕಾರಂ ಸಗುಣಂ ನಿರ್ಗುಣಂ ಪೃಥಕ್ ।
ಯೇಷಾಮಪಿ ಯಥಾಶಕ್ತಿಸ್ತಥೈವ ಧ್ಯಾನಮೇವ ಚ ॥ ೫ ॥

ಗೋಲೋಕಾದೇರ್ವರ್ಣನಂ ಚ ಕ್ರಮೇಣ ಚ ಪೃಥಕ್‌ಪೃಥಕ್ ।
ತತ್ರೋಪಯುಕ್ತೋಪಾಖ್ಯಾನಂ ಯದ್ಯತ್ಪ್ರಾಸಂಗಿಕಂ ವಿಭೋ ॥ ೬ ॥

ಜಾತೀನಾಂ ನಿರ್ಣಯಶ್ಚೈವ ಸಂಕರಾಣಾಂ ತಥೈವ ಚ ।
ಯದ್ಯದ್ವಿಶಿಷ್ಟೋಪಾಖ್ಯಾನಂ ತತ್ತತ್ಪ್ರಶ್ನಾನುರೋಧತಃ ॥ ೭ ॥

ರಾಧಾಮಾಧವಯೋಃ ಕ್ರೀಡಾ ಮಹಾವಿಷ್ಣೋಃ ಸಮುದ್ಭವಃ ।
ನಿರೂಪಣಂ ಚ ವಿಶ್ವೇಷಾಂ ಸಮಾಸೇನ ದ್ವಿಜೋತ್ತಮ ॥ ೮ ॥

---

೪. ಬ್ರಹ್ಮಖಂಡದಲ್ಲಿ ಇಂತಹುದೇ ಎಂದು ನಿರ್ದಿಷ್ಟವಾಗಿ ಹೇಳಲಸಾಧ್ಯವಾದ ಪರಬ್ರಹ್ಮ ನಿರೂಪಣೆಯು ಅವರವರ ಯೋಗ್ಯತೆಗೆ ತಕ್ಕಂತೆ ಹೇಳಲ್ಪಟ್ಟಿದೆ.

೫. ಆ ಬ್ರಹ್ಮನ ಸಾಕಾರ ನಿರಾಕಾರ ಸಗುಣ ನಿರ್ಗುಣ ಧ್ಯಾನರೀತಿಯನ್ನು ಯಾರುಯಾರಿಗೆ ಎಷ್ಟೆಷ್ಟು ಶಕ್ತಿಯಿದೆಯೋ ಅದಕ್ಕನುಗುಣವಾಗಿ ಹೇಳಿರುವೆನು.

೬. ಗೋಲೋಕ ಮೊದಲಾದುವುಗಳ ವರ್ಣನೆಯನ್ನೂ ಕ್ರಮಕ್ರಮವಾಗಿಯೂ ಬೇರೆಬೇರೆಯಾಗಿಯೂ ಪ್ರಸಂಗವಶದಿಂದ ಬರುವ ಪರಮಾತ್ಮನ ಉಪಯುಕ್ತವಾದ ಉಪಾಖ್ಯಾನಗಳನ್ನೂ ಹೇಳಿರುವೆನು.

೭. ಜಾತಿಗಳು ಮತ್ತು ಸಂಕರಜಾತಿಗಳು ಇವುಗಳನ್ನು ವಿವರವಾಗಿ ತಿಳಿಸಿರುವೆನು. ಯಾವಯಾವುದು ಶ್ರೇಷ್ಠವಾದ ಉಪಾಖ್ಯಾನಗಳೋ ಅವುಗಳನ್ನು ಪ್ರಶ್ನೆಗೆ ತಕ್ಕಂತೆ ತಿಳಿಸಿರುವೆನು.

೮. ಎಲೈ ಬ್ರಾಹ್ಮಣಶ್ರೇಷ್ಠನೇ ! ರಾಧಾಮಾಧವರ ಕ್ರೀಡೆಯನ್ನೂ ಮಹಾವಿಷ್ಣುವಿನ ಉತ್ಪತ್ತಿಯನ್ನೂ ಇವುಗಳನ್ನೆಲ್ಲ ಒಟ್ಟಾಗಿ ತಿಳಿಸಿರುವೆನು.

ಬ್ರಹ್ಮನಾರದಯೋಶ್ಚೈವ ಸಂವಾದಃ ಪರಮಾರ್ಥತಃ ।
ವಿವೇಕೋ ನಾರದಸ್ಯೈವ ಮುನೀಂದ್ರಸ್ಯ ತಥೈವ ಚ ॥ ೯ ॥

ಆಜ್ಞಯಾ ಬ್ರಹ್ಮಣಶ್ಚೈವ ನರನಾರಾಯಣಾಶ್ರಮಂ ।
ಗಮನಂ ನಾರದಸ್ಯೈವ ತೇನ ಸಾರ್ಧಂ ಚ ದರ್ಶನಂ ॥ ೧೦ ॥

ತಯೋಃ ಸಂಭಾಷಣಂ ಚೈವ ನಾರದಾದ್ಯನಿವೇದನಂ ।
ತತ್ರ ದೇವಬ್ರಹ್ಮಖಂಡಕ್ರಮೇಣೋಕ್ತಂ ದ್ವಿಜೋತ್ತಮ ॥ ೧೧ ॥

ಶ್ರೂಯತಾಂ ಪ್ರಕೃತೇಃ ಖಂಡಂ ಸುಧಾಖಂಡಸಮಂ ಮುನೇ ।
ಪ್ರಕೃತೇರ್ಲಕ್ಷಣಂ ಪ್ರೋಕ್ತಂ ಪ್ರಕೃತೀನಾಂ ಚ ವರ್ಣನಂ ॥ ೧೨ ॥

ಉಪಾಖ್ಯಾನಂ ಚ ತಾಸಾಂ ಚ ವರ್ಣನಂ ಪೂಜನಾದಿಕಂ ।
ಲಕ್ಷ್ಮ್ಯಾಃ ಸರಸ್ವತೀ ದುರ್ಗಾ ಸಾವಿತ್ರೀ ರಾಧಿಕಾ ತಥಾ ॥ ೧೩ ॥

ಏತಾಸಾಂ ಚರಿತಂ ಚೈವಮನ್ಯಾಸಾಂ ಚ ಪೃಥಕ್ ಪೃಥಕ್ ।
ಉಪಾಖ್ಯಾನಂ ಮಹಾಲಕ್ಷ್ಮ್ಯಾಃ ಸರಸ್ವತ್ಯಾಸ್ತಥೈವ ಚ ॥ ೧೪ ॥

---

೯. ಬ್ರಹ್ಮ ಮತ್ತು ನಾರದ ಇವರುಗಳ ಪಾರಮಾರ್ಥಿಕವಾದ ಸಂವಾದವನ್ನೂ ಮುನಿಶ್ರೇಷ್ಠನಾದ ನಾರದನಿಗೆ ವಿವೇಕವುಂಟಾದುದನ್ನೂ ಹೇಳಿರುವೆನು.

೧೦–೧೧. ಬ್ರಹ್ಮನ ಅಪ್ಪಣೆಯಿಂದ ನಾರದನು ನರನಾರಾಯಣಾಶ್ರಮಕ್ಕೆ ಹೋದುದನ್ನೂ ಅಲ್ಲಿ ಆ ನರನಾರಾಯಣ ಮುನಿಗಳನ್ನು ನೋಡಿ ಅವರೊಡನೆ ಮಾತುಕಥೆಗಳನ್ನಾಡಿದುದನ್ನೂ ನಾರದನು ಮೊದಲು ವಿಜ್ಞಾಪಿಸಿಕೊಂಡುದನ್ನೂ ಕೂಡ ಬ್ರಹ್ಮಖಂಡದಲ್ಲಿ ಕ್ರಮದಿಂದ ಹೇಳಿರುವೆನು.

೧೨. ಎಲೈ ಮುನಿಯೇ! ಅಮೃತಖಂಡಕ್ಕೆ ಸಮನಾದ ಪ್ರಕೃತಿಖಂಡದ ವಿಷಯವನ್ನು ಕೇಳುವವನಾಗು. ಅದರಲ್ಲಿ ಪ್ರಕೃತಿಯಲಕ್ಷಣವೂ ಪ್ರಕೃತಿಗಳ ವರ್ಣನೆಯೂ ವಿವರಿಸಲ್ಪಟ್ಟಿರುವುದು.

೧೩–೧೪. ಆ ಪ್ರಕೃತಿಗಳ ಉಪಾಖ್ಯಾನವೂ ಅವುಗಳ ವರ್ಣನೆಯೂ ಮತ್ತು ಪೂಜಾ ಕ್ರಮವೂ ಲಕ್ಷ್ಮಿ, ಸರಸ್ವತಿ ದುರ್ಗಿ ಸಾವಿತ್ರಿ ಮತ್ತು ರಾಧೆ ಇವರುಗಳ ಮತ್ತು ಇನ್ನೂ ಇತರರ ಚರಿತ್ರೆಯೂ ಮಹಾಲಕ್ಷ್ಮಿಯ ಸರಸ್ವತಿಯ ಉಪಾಖ್ಯಾನಗಳೂ ಬೇರೆಬೇರೆಯಾಗಿ ಹೇಳಲ್ಪಟ್ಟಿರುವುವು.

ಅಪೂರ್ವಂ ರಾಧಿಕಾಖ್ಯಾನಂ ಸಾವಿತ್ರ್ಯಾಶ್ಚ ತಥೈವ ಚ ।
ಸಂವಾದೋ ಯಮಸಾವಿತ್ರ್ಯೋಃ ಸತ್ಯವಜ್ಜೀವದಾನಕಂ ॥ ೧೫ ॥

ಕುಂಡಾನಾಂ ವರ್ಣನಂ ಪ್ರೋಕ್ತಂ ತೇಷಾಂ ಚ ಲಕ್ಷಣಂ ತಥಾ ।
ಜೀವಿಕರ್ಮವಿಪಾಕಶ್ಚ ಭೋಗನಿರ್ಣಯ ಏವ ಚ ॥ ೧೬ ॥

ಅಪೂರ್ವಂ ರಾಧಿಕಾಖ್ಯಾನಂ ಪುರಾಣೇಷು ಸುಗೋಪ್ಯಕಂ ।
ಸುಯಜ್ಞಸ್ಯ ನೃಪೇಂದ್ರಸ್ಯ ಚರಿತಂ ಪರಮಾದ್ಭುತಂ ॥ ೧೭ ॥

ಪ್ರೋಕ್ತಂ ತುಲಸ್ಯುಪಾಖ್ಯಾನಂ ಪರಮಾದ್ಭುತಮೇವ ಚ ।
ಮಹಾಯುದ್ಧಂ ಚ ಸಂವಾದೇ ಮಹೇಶಶಂಖಚೂಡಯೋಃ ॥ ೧೮ ॥

ತುಲಸೀಕೃಷ್ಣಸಂವಾದಸ್ತಯೋಃ ಸಂಭೋಗ ಏವ ಚ ।
ನಿಧನಂ ಶಂಖಚೂಡಸ್ಯ ಶ್ರೀದಾಮ್ನಃ ಶಾಪಮೋಕ್ಷಣಂ ॥ ೧೯ ॥

---

೧೫. ಅಪೂರ್ವವಾದ ರಾಧೆಯ ಚರಿತ್ರೆ ಮತ್ತು ಸಾವಿತ್ರಿಯ ಚರಿತ್ರೆ ಯಮ ಮತ್ತು ಸಾವಿತ್ರಿ ಇವರುಗಳ ಸಂವಾದ ಸತ್ಯವಾನನಿಗೆ ಜೀವದಾನ ಮುಂತಾದುವುಗಳು ಹೇಳಲ್ಪಟ್ಟಿರುವುವು.

೧೬. ಕುಂಡಗಳ ವರ್ಣನೆಯೂ ಅವುಗಳ ಲಕ್ಷಣಗಳೂ ಪ್ರಾಣಿಗಳ ಕರ್ಮ ಪರಿಪಾಕವೂ ಯಾವಯಾವ ಕರ್ಮಗಳಿಂದ ಯಾವ ಯಾವ ರೀತಿಯಾದ ಸುಖ ದುಃಖಗಳನ್ನನುಭವಿಸಬೇಕೆಂಬ ನಿರ್ಣಯವೂ ಹೇಳಲ್ಪಟ್ಟಿರುವುದು.

೧೭. ಅಪೂರ್ವವಾಗಿಯೂ ಪುರಾಣಗಳಲ್ಲಿ ಅತ್ಯಂತ ರಹಸ್ಯವಾಗಿಯೂ ಇರುವ ರಾಧೆಯ ಚರಿತ್ರೆಯೂ ಮತ್ತು ಸುಯಜ್ಞನೆಂಬ ರಾಜಶ್ರೇಷ್ಠನ ಅತ್ಯಂತ ಆಶ್ಚರ್ಯಕರವಾದ ಉಪಾಖ್ಯಾನವು ಹೇಳಲ್ಪಟ್ಟಿರುವುದು.

೧೮. ಅತ್ಯಂತ ಆಶ್ಚರ್ಯಕರವಾದ ತುಲಸಿಯ ಉಪಾಖ್ಯಾನವು ಹೇಳಲ್ಪಟ್ಟಿರುವುದು ಮಹೇಶ ಶಂಖಚೂಡರಿಗಾದ ಸಂವಾದ ಮತ್ತು ಮಹಾಯುದ್ಧ ಇವುಗಳು ಹೇಳಲ್ಪಟ್ಟಿರುವುವು.

೧೯. ತುಲಸಿ ಮತ್ತು ಕೃಷ್ಣ ಇವರಿಗಾದ ಸಂವಾದ ಮತ್ತು ಅವರುಗಳ ಸಂಭೋಗ ಇವುಗಳೂ ಶಂಖಚೂಡನನಿಧನವೂ ಶ್ರೀದಾಮನ ಶಾಪವಿಮೋಚನೆಯೂ ಹೇಳಲ್ಪಟ್ಟಿರುವುದು.

ಪದಪ್ರಾಪ್ತಿಃ ಸುರಾಣಾಂ ಚ ವಿಪದಾಂ ಖಂಡನಂ ತಥಾ ।
ಜೀವಿನಾಂ ಮೋಕ್ಷಬೀಜಂ ಚ ಗಂಗೋಪಾಖ್ಯಾನಮೀಪ್ಸಿತಂ ॥ ೨೦ ॥

ತಥೈವ ಮನಸಾಖ್ಯಾನಂ ಪರಂ ಹರ್ಷವಿವರ್ಧನಂ ।
ಸ್ವಾಹಾಸ್ವಧಾಖ್ಯಾನಮೇವ ಮನ್ಯಾಸಾಂ ಚ ನಿರೂಪಣಂ ॥ ೨೧ ॥

ಯದ್ಯತ್ಪ್ರಾಸಂಗಿಕಾಖ್ಯಾನಂ ವಕ್ತುಃ ಪ್ರಶ್ನಾನುರೋಧತಃ ।
ಪ್ರೋಕ್ತಂ ತತ್ಪ್ರಕೃತೇಃ ಖಂಡಂ ಖಂಡಂ ಗಣಪತೇಃ ಶೃಣು ॥ ೨೨ ॥

ಅತೀವ ಮಧುರಂ ರಮ್ಯಂ ಸ್ವಾದುಸ್ವಾದು ಪದೇಪದೇ ।
ಸುಗೋಪ್ಯಂ ತತ್ಪುರಾಣೇಷು ರಮ್ಯಂರಮ್ಯಂ ನವಂನವಂ ॥ ೨೩ ॥

ಸುದುರ್ಲಭಮುಪಾಖ್ಯಾನಂ ಶ್ರೋತೃಪ್ರೀತಿಕರಂ ಪರಂ ।
ಪ್ರೋಕ್ತಾ ಕ್ರೀಡಾ ಚ ಪರಮಾ ಪಾರ್ವತೀಪರಮೇಶಯೋಃ ॥ ೨೪ ॥

---

೨೦. ದೇವತೆಗಳಿಗೆ ಉತ್ತಮಪದವು ದೊರಕಿದುದು ಅವರುಗಳಿಗೆ ಬಂದಿದ್ದ ಆಪತ್ತಿನನಿವಾರಣೆ ಮತ್ತು ಪ್ರಾಣಿಗಳು ಮೋಕ್ಷಪಡೆಯಲು ಕಾರಣವಾದ ಅತ್ಯಂತ ಇಷ್ಟವಾದ ಗಂಗೋಪಾಖ್ಯಾನ ಇವುಗಳು ಹೇಳಲ್ಪಟ್ಟಿರುವುವು.

೨೧. ಹಾಗೆಯೇ ಅತ್ಯಂತ ಸಂತೋಷವನ್ನುಂಟುಮಾಡುವ ಮನಸಾಖ್ಯಾನವೂ ಸ್ವಾಹಾ ಸ್ವಧಾ ಇವರುಗಳ ಮತ್ತು ಇನ್ನಿತರರುಗಳ ಉಪಾಖ್ಯಾನಗಳೂ ಕೂಡ ಹೇಳಲ್ಪಟ್ಟಿರುವುವು.

೨೨. ಪ್ರಸಂಗ ವಶದಿಂದ ಪ್ರಶ್ನೆಗೆ ತಕ್ಕಂತೆ ಯಾವಯಾವ ಉಪಾಖ್ಯಾನಗಳು ಬರುವುವೋ ಅವುಗಳೆಲ್ಲವನ್ನೂ ಪ್ರಕೃತಿಖಂಡದಲ್ಲಿ ಹೇಳಿರುವೆನು. ಈಗ ಗಣಪತಿ ಖಂಡದ ವಿವರವನ್ನು ಕೇಳುವವನಾಗು.

೨೩. ಅದು ಅತ್ಯಂತ ಮಧುರವೂ ಮನೋಹರವೂ ಮಾತುಮಾತಿಗೂ ರುಚಿಕರವೂ ಪುರಾಣಗಳಲ್ಲಿ ಅತಿರಹಸ್ಯವೂ ಮನೋಹರವಾದವುಗಳಿಗೆಲ್ಲ ಮನೋಹರವೂ ಹೊಸದಾದುವುಗಳಿಗೆಲ್ಲ ಹೊಸದೂ ಆಗಿರುವುದು.

೨೪. ಈ ಉಪಾಖ್ಯಾನವು ಅತ್ಯಂತ ದುರ್ಲಭವಾದುದು ಮತ್ತು ಕೇಳುವವರಿಗೆ ಅತ್ಯಂತ ಸಂತೋಷವನ್ನುಂಟು ಮಾಡತಕ್ಕುದೂ ಆಗಿರುವುದು. ಪಾರ್ವತೀ ಪರಮೇಶ್ವರರ ರತಿಕ್ರೀಡೆಯು ಇಲ್ಲಿ ಹೇಳಲ್ಪಟ್ಟಿರುವುದು.

ಸ್ಕಂದೋತ್ಪತ್ತಿಃ ಪ್ರಥಮತಃ ಕ್ರೀಡಾಭಂಗಸ್ತಯೋಸ್ತಥಾ ।
ಪಾರ್ವತೀತೋಷಣಂ ಚೈವಮಭಿಮಾನವಿಮೋಕ್ಷಣಂ ॥ ೨೫ ॥

ಪುಣ್ಯಕಂ ಚ ವ್ರತಂ ವಿಷ್ಣೋರ್ದೇವ್ಯಾಶ್ಚರಿತಮುತ್ತಮಂ ।
ವರದಾನಂ ಹರೇರೇವ ಸುವ್ರತಾಂ ಪಾರ್ವತೀಂ ಪ್ರತಿ ॥ ೨೬ ॥

ಹರೇಶ್ಚ ದರ್ಶನಂ ಚೈವ ಬ್ರಾಹ್ಮಣಾತಿಥಿರೂಪಿಣಃ ।
ಆವಿರ್ಭಾವೋ ಗಣೇಶಸ್ಯ ಕೃಪಯಾ ಶಿವಮಂದಿರೇ ॥ ೨೭ ॥

ದರ್ಶನಂ ಪುತ್ರವಕ್ತ್ರಸ್ಯ ಪಾರ್ವತೀಪರಮೇಶಯೋಃ ।
ಪರಮಾನಂದರೂಪಂ ಚ ಶಿವಗೇಹೇ ಮಹೋತ್ಸವಂ ॥ ೨೮ ॥

ದೇವಾದ್ಯಾ ದದೃಶುಃ ಸರ್ವೇ ಬಾಲಂ ನಿತ್ಯಮಜಂ ವಿಭುಂ ।
ಸತ್ಯಸ್ವರೂಪಂ ಪರಮಂ ಪರಬ್ರಹ್ಮಸ್ವರೂಪಿಣಂ ॥ ೨೯ ॥

---

೨೫. ಮೊದಲನೆಯದಾಗಿ ಸ್ಕಂದನ ಉತ್ಪತ್ತಿಯೂ ಪಾರ್ವತೀಪರಮೇಶ್ವರರ ರತಿಕ್ರೀಡೆಯ ಭಂಗವೂ ಪಾರ್ವತಿಯ ಸಂತೋಷವೂ ಅಭಿಮಾನದನಾಶವೂ ಹೇಳಲ್ಪಟ್ಟಿರುವುವು.

೨೬. ದೇವಿಯಿಂದ ಮಾಡಲ್ಪಟ್ಟ ಪುಣ್ಯಕರವಾದ ವಿಷ್ಣುವ್ರತವೂ ಉತ್ತಮ ವ್ರತವನ್ನು ಮಾಡಿದ ಪಾರ್ವತಿಯನ್ನು ಕುರಿತು ಶ್ರೀಹರಿಯ ವರದಾನವೂ ಇವುಗಳೆಲ್ಲ ಹೇಳಲ್ಪಟ್ಟಿರುವುವು.

೨೭–೨೮. ಹರಿಯು ಬ್ರಾಹ್ಮಣರೂಪದಿಂದ ಅತಿಥಿಯಾಗಿ ಕಾಣಿಸಿಕೊಂಡುದು. ಈಶ್ವರನ ಮನೆಯಲ್ಲಿ ಕೃಪೆಯಿಂದ ಗಣೇಶನು ಹುಟ್ಟಿದುದು. ಪಾರ್ವತೀಪರಮೇಶ್ವರರು ಮಗನ ಮುಖವನ್ನು ನೋಡಿದುದು ಈಶ್ವರನ ಮನೆಯಲ್ಲಿ ಅತ್ಯಂತ ಸಂತೋಷಕರವಾದ ಮಹೋತ್ಸವವು ನೆರವೇರಿದುದು ಮುಂತಾದುವುಗಳೆಲ್ಲ ಹೇಳಲ್ಪಟ್ಟಿರುವುವು.

೨೯. ನಿತ್ಯನೂ ಹುಟ್ಟಿಲ್ಲದವನೂ ಜಗತ್ಪ್ರಭುವೂ ಸತ್ಯಸ್ವರೂಪನೂ ಶ್ರೇಷ್ಠನೂ ಪರಬ್ರಹ್ಮಸ್ವರೂಪನೂ ಆದ ಬಾಲಕನನ್ನು ದೇವತೆಗಳೇ ಮುಂತಾದ ಸಕಲರೂ ನೋಡಿದರು.

ಸರ್ವವಿಘ್ನಹರಂ ಶಾಂತಂ ದಾತಾರಂ ಸರ್ವಸಂಪದಾಂ ।
ತಪಸಾಂ ಜಪಯಜ್ಞಾನಾಂ ವ್ರತಾನಾಂ ಫಲದಂ ವಿಭುಂ　　॥ ೩೦ ॥

ಅತೀವ ಕಮನೀಯಂ ಚ ರಮಣೀಯಂ ಚ ಯೋಷಿತಾಂ ।
ಪ್ರಾಣಾಧಿಕಂ ಪ್ರಿಯತಮಂ ಪಾರ್ವತೀಪರಮೇಶಯೋಃ　　॥ ೩೧ ॥

ಪರಮಾತ್ಮಸ್ವರೂಪಂ ಚ ಭಗವಂತಂ ಸನಾತನಂ ।
ಸರ್ವೇಶಂ ಸರ್ವಬೀಜಂ ಚ ಸಾಕ್ಷಾನ್ನಾರಾಯಣಾತ್ಮಕಂ　　॥ ೩೨ ॥

ಯದ್ದರ್ಶನಾಚ್ಚ ಸ್ತವನಾತ್ಪ್ರಣಾಮಾತ್ಪೂಜನಾತ್ತಥಾ ।
ಧ್ಯಾನಾಸಾಧ್ಯಂ ದುರಾರಾಧ್ಯಂ ಜನ್ಮಕೋಟ್ಯಘನಾಶನಂ　　॥ ೩೩ ॥

ಕಾರ್ತಿಕೋದ್ಧರಣಂ ಪ್ರೋಕ್ತಂ ತಸ್ಯಾಭಿಷೇಕ ಏವ ಚ ।
ಗಣೇಶ ಪೂಜನಂ ಚೈವ ಸರ್ವವಿಘ್ನವಿನಾಶನಂ　　॥ ೩೪ ॥

---

೩೦. ಮತ್ತು ಸಕಲ ವಿಘ್ನಗಳನ್ನೂ ಹೋಗಲಾಡಿಸುವವನೂ ಶಾಂತ ಸ್ವರೂಪನೂ ಸಕಲ ಸಂಪತ್ತುಗಳನ್ನೂ ಕೊಡುವವನೂ ತಪಸ್ಸುಗಳು ಜಪಗಳು ವ್ರತಗಳು ಇವುಗಳಿಗೆ ಫಲವನ್ನು ಕೊಡುವವನೂ ವಿಭುವೂ ಆದ ಆ ಬಾಲಕನನ್ನು ದೇವತೆಗಳೇ ಮುಂತಾಗಿ ಎಲ್ಲರೂ ನೋಡಿದರು.

೩೧. ಅತ್ಯಂತವಾಗಿ ಕಮನೀಯನೂ ಸ್ತ್ರೀಯರಿಗೆ ಮನೋಹರನೂ ಪಾರ್ವತೀ ಪರಮೇಶ್ವರರಿಗೆ ತಮ್ಮ ಪ್ರಾಣಕ್ಕಿಂತಲೂ ಹೆಚ್ಚು ಇಷ್ಟನಾದ ಆ ಬಾಲಕನನ್ನು ದೇವತೆಗಳೇ ಮುಂತಾಗಿ ಸರ್ವರೂ ನೋಡಿದರು.

೩೨–೩೩. ಮತ್ತು ಪರಮಾತ್ಮಸ್ವರೂಪನೂ ಷಡ್ಗುಣೈಶ್ವರ್ಯವಂತನೂ ನಾಶರಹಿತನೂ ಸಕಲಕ್ಕೂ ಈಶ್ವರನೂ ಸಕಲಕ್ಕೂ ಕಾರಣನೂ ಸಾಕ್ಷಾತ್ ನಾರಾಯಣ ಸ್ವರೂಪನೂ ಯಾವನನ್ನು ನೋಡುವುದರಿಂದಲೂ ಸ್ತೋತ್ರಮಾಡುವುದರಿಂದಲೂ ನಮಸ್ಕರಿಸುವುದರಿಂದಲೂ ಪೂಜೆಮಾಡುವುದರಿಂದಲೂ ಕೂಡ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳು ನಾಶವಾಗುತ್ತವೆಯೋ ಅಂಥಾ ಧ್ಯಾನಕ್ಕೆ ಸಿಲುಕದವನೂ ಕಷ್ಟದಿಂದ ಪೂಜಿಸಲ್ಪಡುವವನೂ ಆದ ಬಾಲಕನನ್ನು ದೇವತೆಗಳೇ ಮುಂತಾಗಿ ಸರ್ವರೂ ನೋಡಿದರು

೩೪–೩೫. ಕಾರ್ತಿಕಸ್ವಾಮಿಯ ಉದ್ಧಾರವೂ ಅವನ ಪಟ್ಟಾಭಿಷೇಕವೂ ಗಣೇಶನ ಪೂಜೆಯೂ ಸಮಸ್ತವಾದ ವಿಘ್ನಗಳ ನಿವಾರಣೆಯೂ ಕಾರ್ತವೀರ್ಯಾ

ಜಮದಗ್ನೇಶ್ಚ ಯುದ್ಧಂ ಚ ಕಾರ್ತವೀರ್ಯಾರ್ಜುನೇನ ಚ ।
ಸುರಭೀಹರಣಂ ಚೈವ ನಿಧನಂ ಚ ಮುನೇಸ್ತಥಾ ॥ ೩೫ ॥

ಪತಿವ್ರತಾರೇಣುಕಾಯಾಶ್ಚಿತಾರೋಹಣಮೇವ ಚ ।
ಪ್ರತಿಜ್ಞಾ ತಂ ಭೃಗೋಶ್ಚೈವ ದಾರುಣಂ ಚ ಸುದಾರುಣಂ ॥ ೩೬ ॥

ನಿಃಕ್ಷತ್ರೀಕರಣಂ ಚೈವಮೇಕವಿಂಶತಿಕಂ ದ್ವಿಜ ।
ಸಂವಾದೋ ಜ್ಞಾನಲಾಭಶ್ಚ ಗಣೇಶಪರ್ಶುರಾಮಯೋಃ ॥ ೩೭ ॥

ತಯೋರ್ಯುದ್ಧಂ ದಾರುಣಂ ಚ ಹೇರಂಬದಂತಭಂಜನಂ ।
ದುರ್ಗಾಯಾಶ್ಚ ವಿಲಾಪಶ್ಚಾಭಿಶಾಪೋ ಭಾರ್ಗವಂ ಪ್ರತಿ ॥ ೩೮ ॥

ಸ್ಮರಣೇ ಪರುಶುರಾಮಸ್ಯಾವಿರ್ಭಾವೋ ಹರೇರಪಿ ।
ಪಾರ್ವತೀಂ ಬೋಧಯಾಮಾಸ ಸ್ವಯಂ ನಾರಾಯಣಃ ಪ್ರಭುಃ ॥ ೩೯ ॥

ವರ್ಣನಂ ಶಿವಲೋಕಸ್ಯ ಪರಮಾಶ್ಚರ್ಯಮೀಪ್ಸಿತಂ ।
ಪ್ರದತ್ತಂ ಪರ್ಶುರಾಮಾಯ ಮಹಾಸ್ತ್ರಂ ಶಂಕರೇಣ ಚ ॥ ೪೦ ॥

ಮಂತ್ರಂ ಚ ಕವಚಂ ಚೈವ ಕೃಷ್ಣಸ್ಯ ಪರಮಾತ್ಮನಃ ।
ವರದಾನಂ ಚಾಭಯಂ ಚ ಪ್ರದಾನಂ ಸರ್ವಸಂಪದಾಂ ॥ ೪೧ ॥

---

ರ್ಜುನನೊಡನೆ ಜಮದಗ್ನಿಯ ಯುದ್ಧವೂ ಸುರಭಿಯ ಅಪಹಾರವೂ ಜಮದಗ್ನಿ ಮುನಿಯ ಮರಣವೂ ಹೇಳಲ್ಪಟ್ಟಿರುವುವು.

೩೬–೩೮. ಪತಿವ್ರತೆಯಾದ ರೇಣುಕಾದೇವಿಯು ಚಿತಿಯನ್ನೇರುವುದು, ಅತ್ಯಂತ ಭಯಂಕರವಾದ ಪ್ರತಿಜ್ಞೆಯನ್ನು ಪರಶುರಾಮನು ಕೈಕೊಳ್ಳುವುದು ಇಪ್ಪತ್ತೊಂದು ಸಾರಿ ಭೂಮಿಯನ್ನು ಸುತ್ತಿ ಕ್ಷತ್ರಿಯರಿಲ್ಲದಂತೆ ಮಾಡುವುದು. ಗಣೇಶ ಮತ್ತು ಪರಶುರಾಮ ಇವರ ಸಂವಾದವೂ ಜ್ಞಾನವನ್ನು ಪಡೆಯುವಿಕೆಯೂ ಪರಶುರಾಮ ಮತ್ತು ಗಣೇಶ ಇವರುಗಳ ಯುದ್ಧವೂ ಗಣೇಶನ ಹಲ್ಲು ಮುರಿಯುವಿಕೆಯೂ ದುರ್ಗಾದೇವಿಯ ದುಃಖವೂ ಪರಶುರಾಮನನ್ನು ಶಪಿಸುವುದೂ ಮುಂತಾದುವುಗಳು ಹೇಳಲ್ಪಟ್ಟಿರುವುವು.

೩೯–೪೧. ಪರಶುರಾಮನು ಸ್ಮರಣೆ ಮಾಡಿದೊಡನೆ ಹರಿಯು ಪ್ರತ್ಯಕ್ಷನಾಗಿ ಬರುವುದು, ಪ್ರಭುವಾದ ಸಾಕ್ಷಾತ್ ನಾರಾಯಣನು ಪಾರ್ವತಿಗೆ ಉಪದೇಶ

ತ್ರಿಃಸಪ್ತಕೃತ್ವೋ ಭೂಪಾನಾಂ ನಿಧನಂ ಚ ಚಕಾರ ಸಃ ।
ಬಭೂವ ಭೃಗುಣಾ ವಿಪ್ರ ಭುವಶ್ಚ ಭಾರಹಾರಣಂ　　॥ ೪೨ ॥

ಪ್ರಶ್ನಾನುರೋಧಕ್ರಮತಃ ಪೂರ್ವೋಪಾಖ್ಯಾನಮೇವ ಚ ।
ಪ್ರೋಕ್ತಂ ಗಣಪತೇಃ ಖಂಡಂ ಸಮಾಸೇನ ದ್ವಿಜೋತ್ತಮ　　॥ ೪೩ ॥

ಶ್ರೀಕೃಷ್ಣಜನ್ಮಖಂಡಂ ಚ ಶ್ರೂಯತಾಂ ಸಾವಧಾನತಃ ।
ಜನ್ಮಮೃತ್ಯುಜರಾವ್ಯಾಧಿಹರಂ ಮೋಕ್ಷಕರಂ ಪರಂ　　॥ ೪೪ ॥

ಹರಿದಾಸ್ಯಪ್ರದಂ ಶುದ್ಧಂ ಸುಶ್ರಾವ್ಯಂ ಚ ಸುಧೋಪಮಂ ।
ಅತ್ಯಪೂರ್ವಮುಪಾಖ್ಯಾನಂ ರಮ್ಯಂರಮ್ಯಂ ನವಂನವಂ　　॥ ೪೫ ॥

---

ಮಾಡುವುದು, ಅತ್ಯಂತ ಆಶ್ಚರ್ಯಕರವೂ ಇಷ್ಟವೂ ಆದ ಶಿವಲೋಕದ ವರ್ಣನೆಯು ಪರಮೇಶ್ವರನು ಪರಶುರಾಮನಿಗೆ ಮಹಾಸ್ತ್ರವನ್ನೂ ಶ್ರೀಕೃಷ್ಣಪರಮಾತ್ಮನ ಮಂತ್ರವನ್ನೂ ಕವಚವನ್ನೂ ಕೊಡುವುದು ಮತ್ತು ವರವನ್ನೂ ಅಭಯವನ್ನೂ ಸಕಲ ಸಂಪತ್ತುಗಳನ್ನೂ ಕೊಡುವುದು, ಮುಂತಾದುವುಗಳು ಹೇಳಲ್ಪಟ್ಟಿರುವುವು.

೪೨. ಆ ಪರಶುರಾಮನು ಇಪ್ಪತ್ತೊಂದು ಸಾರಿ ತಿರುಗಿ ರಾಜರನ್ನು ನಾಶ ಮಾಡಿದನು. ಎಲೈ ಬ್ರಾಹ್ಮಣನೇ! ಪರಶುರಾಮನಿಂದ ಭೂಮಿಯ ಭಾರವು ನಾಶವಾಯಿತು.

೪೩. ಪ್ರಶ್ನೆಗೆ ತಕ್ಕಂತೆ ಕ್ರಮವಾಗಿ ಹಿಂದಿನ ಉಪಾಖ್ಯಾನವನ್ನೂ ಹೇಳಿದುದಾಯಿತು. ಎಲೈ ಬ್ರಾಹ್ಮಣ ಶ್ರೇಷ್ಠನೇ! ಈ ಪ್ರಕಾರವಾಗಿ ಒಟ್ಟಾಗಿ ಗಣಪತಿ ಖಂಡವನ್ನು ಹೇಳಿರುವೆನು.

೪೪. ಇನ್ನು ಶ್ರೀಕೃಷ್ಣಜನ್ಮಖಂಡವನ್ನು ಸಾವಧಾನಮನಸ್ಕನಾಗಿ ಕೇಳುವವನಾಗು. ಅದು ಹುಟ್ಟು ಸಾವು ಮುಪ್ಪು ರೋಗಗಳನ್ನು ನಾಶಮಾಡಿ ಮೋಕ್ಷವನ್ನು ಕೊಡತಕ್ಕುದೂ ಅತ್ಯಂತ ಶ್ರೇಷ್ಠವಾದುದೂ ಆಗಿರುತ್ತದೆ.

೪೫. ಮತ್ತು ಶ್ರೀಹರಿಯ ದಾಸತನವನ್ನು ಕೊಡತಕ್ಕುದೂ ಪರಿಶುದ್ಧವೂ ಕೇಳಲು ಹಿತವೂ ಅಮೃತಕ್ಕೆ ಸಮಾನವೂ ಬಹಳ ಅಪೂರ್ವವಾದ ಉಪಾಖ್ಯಾನಸಹಿತವೂ ಅತ್ಯಂತ ಮನೋಹರವೂ ಅತ್ಯಂತ ಹೊಸದೂ ಆಗಿರುವುದು.

ನ ಶ್ರುತಂ ಜನ್ಮನಾ ಯದ್ಯತ್ಸ್ವಾದು ಸ್ವಾದು ಪದೇಪದೇ ।
ಪ್ರದೀಪಂ ಸರ್ವಸತ್ತ್ವಾನಾಂ ಭವಾಬ್ಧಿತಾರಣಂ ಪರಂ ॥ ೪೬ ॥

ಕರ್ಮೋಪಭೋಗರೋಗಾಣಾಂ ಮರ್ದನಂ ಚ ರಸಾಯನಂ ।
ಶ್ರೀಕೃಷ್ಣ ಚರಣಾಂಭೋಜಪ್ರಾಪ್ತಿಸೋಪಾನಕಾರಣಂ ॥ ೪೭ ॥

ಶ್ರೀದಾಮರಾಧಾಕಲಹವರ್ಣನಂ ದಾರುಣಂ ದ್ವಿಜ ।
ತಯೋಃ ಶಾಪಪ್ರಕಥನಂ ತತಸ್ತೇಷಾಂ ವಿಸರ್ಜನಂ ॥ ೪೮ ॥

ಬ್ರಹ್ಮಣಾ ಪ್ರಾರ್ಥಿತಸ್ಯೈವ ಹರೇರ್ಜನ್ಮ ಮಹೀತಲೇ ।
ಪ್ರೋಕ್ತಂ ಚ ಜನ್ಮಖಂಡಂ ಚ ಪರಮಾದ್ಭುತಮೇವ ಚ ॥ ೪೯ ॥

ಆವಿರ್ಭಾವೋ ಹರೇರೇವ ವಸುದೇವಸ್ಯ ಮಂದಿರೇ ।
ಕಂಸಾಸುರಭಯೇನೈವ ಗೋಕುಲೇ ಗಮನಂ ಹರೇಃ ॥ ೫೦ ॥

---

೪೬. ಹುಟ್ಟಿದಂದಿನಿಂದ ಕೇಳದುದೂ ಯಾವಯಾವದು ರುಚಿಕರವಾದುದೊ ಆದಕ್ಕಿಂತ ರುಚಿಕರವೂ ಸಕಲ ಪ್ರಾಣಿಗಳಿಗೂ ದೀಪದಂತಿರುವುದೂ ಸಂಸಾರವೆಂಬ ಸಮುದ್ರವನ್ನು ದಾಟಿಸತಕ್ಕುದೂ ಆಗಿರುತ್ತದೆ.

೪೭. ಕರ್ಮಗಳನ್ನು ಅನುಭವಿಕೆಯೆಂಬ ರೋಗಗಳನ್ನು ನಾಶಮಾಡತಕ್ಕ ದಿವ್ಯರಸಾಯನವೂ ಶ್ರೀಕೃಷ್ಣನ ಪಾದಕಮಲಗಳನ್ನು ಹೊಂದಲು ಹೋಗಬೇಕಾದ ಮೆಟ್ಟಲುಗಳಿಗೆ ಕಾರಣವೂ ಆಗಿರುವುದು.

೪೮. ಎಲೈ ಬ್ರಾಹ್ಮಣನೇ ಶ್ರೀದಾಮ ಮತ್ತು ರಾಧೆ ಇವರ ಜಗಳವು ಅತ್ಯಂತ ಭಯಂಕರವಾಗಿರುವುದು. ಇದೂ ಹೇಳಲ್ಪಟ್ಟಿರುವುದು. ಅವರಿಬ್ಬರ ಶಾಪವೂ ಹೇಳಲ್ಪಟ್ಟಿರುವುದು. ಅನಂತರ ಅವರುಗಳ ಬಿಡುಗಡೆಯು ಹೇಳಲ್ಪಟ್ಟಿರುವುದು.

೪೯. ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟವನಾಗಿ ಶ್ರೀಹರಿಯು ಭೂಮಿಯಲ್ಲಿ ಅವತಾರ ಮಾಡಿದ ವಿಷಯವು ಹೇಳಲ್ಪಟ್ಟಿರುವುದು ಜನ್ಮಖಂಡವು ಈ ಕಥೆಗಳಿಂದ ಅತ್ಯಂತ ಆಶ್ಚರ್ಯಕರವಾಗಿರುವುದು.

೫೦. ವಸುದೇವನ ಮನೆಯಲ್ಲಿ ಶ್ರೀಹರಿಯು ಹುಟ್ಟುವುದು ಕಂಸಾಸುರನ ಹೆದರಿಕೆಯಿಂದ ಶ್ರೀಹರಿಯು ಗೋಕುಲಕ್ಕೆಹೋಗುವಿಕೆ ಇವುಗಳು ಹೇಳಲ್ಪಟ್ಟಿರುವುವು.

ವೃಷಭಾನುಸುತಾ ರಾಧಾ ಶ್ರೀದಾಮ್ನಃ ಶಾಪಹೇತುನಾ ।
ಬಾಲಕ್ರೀಡಾವರ್ಣನಂ ಚ ಗೋಕುಲೇ ಪರಮಾತ್ಮನಃ ॥ ೫೦ ॥

ದೈತ್ಯಾದಿನಿಧನಂ ಚೈವ ಕೀರ್ತಿತಂ ಹರಿಣಾ ತಥಾ ।
ಗರ್ಗಸ್ಯಾಗಮನಂ ಪ್ರೋಕ್ತಂ ಶುಭಾನ್ನಪ್ರಾಶನಂ ಹರೇಃ ॥ ೫೧ ॥

ನಿಧನಂ ಪೂತನಾಯಾಶ್ಚ ಸಪ್ಯಃ ಶಕಟಭಂಜನಂ ।
ಶ್ರೀಕೃಷ್ಣಬಂಧನೋಕ್ಷಂ ಚ ಯಮಲಾರ್ಜುನಭಂಜನಂ ॥ ೫೨ ॥

ತ್ರೈಲೋಕ್ಯದರ್ಶನಂ ವಕ್ತ್ರೇ ಗೋವತ್ಸಾಹರಣಂ ತಥಾ ।
ಕೃತ್ವಾ ಗೋವತ್ಸನಿರ್ಮಾಣಂ ಬ್ರಹ್ಮಣಃ ಸ್ತವನಂ ಹರೇಃ ॥ ೫೪ ॥

ಸಹಸಾ ಗೋಕುಲಂ ತ್ಯಕ್ತ್ವಾ ಪುಣ್ಯಂ ವೃಂದಾವನಂ ವನಂ ।
ಭಯಾಜ್ಜಗಾಮ ನಂದಶ್ಚ ಸಾರ್ಧಂ ಚ ನಂದನೇನ ಚ ॥ ೫೫ ॥

---

೫೦. ಶ್ರೀದಾಮನ ಶಾಪದ ಕಾರಣದಿಂದ ರಾಧೆಯು ವೃಷಭಾನು ಪುತ್ರಿಯಾಗಿ ಹುಟ್ಟಿದುದು. ಗೋಕುಲದಲ್ಲಿ ಪರಮಾತ್ಮನ ಬಾಲ್ಯದ ಆಟಗಳ ವರ್ಣನೆ ಇವುಗಳು ಹೇಳಲ್ಪಟ್ಟಿರುವುವು.

೫೧. ಶ್ರೀಹರಿಯಿಂದ ದೈತ್ಯರೇ ಮೊದಲಾದವರ ನಾಶವು ಹೇಳಲ್ಪಟ್ಟಿರುವುದು. ಗರ್ಗಮುನಿಯು ಗೋಕುಲಕ್ಕೆ ಬಂದುದು ಶ್ರೀಹರಿಗೆ ಶುಭಮುಹೂರ್ತದಲ್ಲಿ ಅನ್ನಪ್ರಾಶನವನ್ನು ಮಾಡಿಸಿದುದು ಇವುಗಳು ಹೇಳಲ್ಪಟ್ಟಿರುವುವು.

೫೨. ಪೂತನಿಯ ವಧೆಯೂ ಕೂಡಲೆ ಶಕಟಾಸುರ ಭಂಗವೂ ಶ್ರೀಕೃಷ್ಣನು ತನ್ನ ಕಟ್ಟನ್ನು ಬಿಡಿಸಿಕೊಂಡುದೂ ಯಮಲಾರ್ಜುನ ಮರಗಳನ್ನು ಮುರಿದುದೂ ಇವುಗಳು ಹೇಳಲ್ಪಟ್ಟಿರುವುವು.

೫೪. ತಾಯಿಗೆ ಬಾಯಿಯಲ್ಲಿ ಮೂರು ಲೋಕಗಳನ್ನೂ ತೋರಿದುದು ಮತ್ತು ಹಸುಗಳ ಕರುಗಳನ್ನು ಅಪಹರಿಸುವಿಕೆಯು ಬ್ರಹ್ಮನು ಗೋವಿನ ಕರುಗಳನ್ನು ಸೃಷ್ಟಿ ಮಾಡಿ ಶ್ರೀಹರಿಯನ್ನು ಸ್ತೋತ್ರಮಾಡುವುದು ಇವುಗಳು ಹೇಳಲ್ಪಟ್ಟಿರುವುವು.

೫೫. ನಂದನು ಭಯದಿಂದ ಬೇಗನೆ ಗೋಕುಲವನ್ನುಬಿಟ್ಟು ಪುಣ್ಯಕರವಾದ ವೃಂದಾವನಕ್ಕೆ ಮಗನಾದ ಕೃಷ್ಣನೊಡನೆ ಹೊರಟುಹೋದುದು ಹೇಳಲ್ಪಟ್ಟಿರುವುದು.

ವೃಂದಾವನಸ್ಯ ನಿರ್ಮಾಣಂ ಪ್ರೋಕ್ತಂ ಚ ಪರಮಾದ್ಭುತಂ ।
ಸಾರ್ಧಂ ಚ ಬಾಲಕೈಃ ಸಾರ್ಧಂ ತತ್ರ ಸಂಕ್ರೀಡನಂ ಹರೇಃ ॥ ೫೬ ॥

ಸದನ್ನಂ ಬ್ರಾಹ್ಮಣೀನಾಂ ಚ ಭೋಜನಂ ಕಥಿತಂ ಹರೇಃ ।
ವರದಾನಂ ಚ ತಾಸಾಂ ಚ ಪ್ರಾಕ್ತನೇನ ನಿರೂಪಣಂ ॥ ೫೭ ॥

ಕ್ರತೂನಾಂ ವರ್ಣನಂ ಚೈವ ವಸ್ತ್ರಾಪಹರಣಂ ತಥಾ ।
ವರದಾನಂ ಚ ಗೋಪೀನಾಂ ಕೃಷ್ಣೇನೈವ ಕೃತಂ ದ್ವಿಜ ॥ ೫೮ ॥

ಕಾತ್ಯಾಯನೀವ್ರತಂ ಪ್ರೋಕ್ತಂ ಶ್ರೀದುರ್ಗಾಪೂಜನಂ ತಥಾ ।
ಪಾರ್ವತ್ಯಾ ಚ ವರೋ ದತ್ತೋ ಗೋಪೀಭ್ಯೋ ಯಮುನಾತಟೇ ॥ ೫೯ ॥

ತಾಲಾನಾಂ ಭಕ್ಷಣಂ ಪ್ರೋಕ್ತಂ ಶಕ್ರಯಾಗವಿಮರ್ದನಂ ।
ರಾಧಯಾ ಸಹ ಕೃಷ್ಣಸ್ಯ ವಿರಹೋ ಮೇಲನಂ ತಥಾ ॥ ೬೦ ॥

---

೫೬. ಬಹಳ ಆಶ್ಚರ್ಯಕರವಾದ ವೃಂದಾವನದ ನಿರ್ಮಾಣವೂ ಅಲ್ಲಿ ಶ್ರೀಹರಿಯು ಬಾಲಕರೊಡನೆ ಆಟವಾಡಿದುದೂ ಹೇಳಲ್ಪಟ್ಟಿರುವುದು.

೫೭. ಬ್ರಾಹ್ಮಣ ಸ್ತ್ರೀಯರು ಕೊಟ್ಟ ಉತ್ತಮವಾದ ಅನ್ನವನ್ನು ಶ್ರೀಹರಿಯು ಊಟಮಾಡಿದುದನ್ನೂ ಅವರಿಗೆಲ್ಲ ವರವನ್ನು ಕೊಟ್ಟುದನ್ನೂ ಹೇಳಿದುದಾಯಿತು.

೫೮. ಯಾಗಗಳ ವರ್ಣನೆಯೂ ಕೃಷ್ಣನಿಂದ ಮಾಡಲ್ಪಟ್ಟ ವಸ್ತ್ರಾಪಹರಣ ಕಥೆಯೂ ಗೋಪಿಯರಿಗೆ ವರದಾನಮಾಡಿದುದೂ ಹೇಳಲ್ಪಟ್ಟಿರುವುದು.

೫೯. ಮತ್ತು ಕಾತ್ಯಾಯನಿಯ ವ್ರತವೂ ಶ್ರೀ ದುರ್ಗಿಯ ಪೂಜೆಯೂ ಯಮುನಾ ನದಿಯ ದಡದಲ್ಲಿ ಗೋಪಿಯರಿಗೆ ಪಾರ್ವತೀದೇವಿಯು ವರವನ್ನು ಕೊಟ್ಟ ವಿಚಾರವೂ ಹೇಳಲ್ಪಟ್ಟಿರುವುದು.

೬೦. ತಾಳೇ ಹಣ್ಣುಗಳನ್ನು ತಿಂದುದು ಶ್ರೀಕೃಷ್ಣನು ಇಂದ್ರಯಾಗವನ್ನು ಮುರಿದುದು ಶ್ರೀಕೃಷ್ಣನಿಗೆ ರಾಧೆಯು ಅಗಲುವಿಕೆ ಮತ್ತು ಸೇರುವಿಕೆ ಇವುಗಳೆಲ್ಲವೂ ಹೇಳಲ್ಪಟ್ಟಿರುವುವು.

ಗೋಪೀಕ್ರೀಡಾ ಚ ಸಂಪ್ರೋಕ್ತಾ ಕೃಷ್ಣಕ್ರೋಡೇ ಚ ರಾಧಿಕಾ ।
ಛಾಯಾ ರಾಪಾಣಗೇಹೇ ಚ ಸಂಪ್ರೋಕ್ತಾ ಮಾಯಯಾ ಹರೇಃ ॥ ೬೧ ॥

ಶೃಂಗಾರಂ ಷೋಡಶವಿಧಂ ಕೃತ್ವಾ ತಂ ರಾಸಮಂಡಲೇ ।
ಅಂತರ್ಧಾನಂ ಹರೇರೇವ ರಾಧಯಾ ಸಹ ಕಾನನೇ ॥ ೬೨ ॥

ಮಲಯಾಗಮನಂ ಚೈವ ತಯಾ ಸಾರ್ಧಂ ದ್ವಿಜೋತ್ತಮ ।
ರಾಧಾ ಮಾಧವಯೋಶ್ಚೈವ ಸಂವಾದಸ್ತತ್ರ ನಿರ್ಜನೇ ॥ ೬೩ ॥

ಕೈವಲ್ಯಮಪಿ ಗೋಪೀನಾಂ ಪ್ರೋಕ್ತಂ ನಾನಾವಿಧಂ ಮುನೇ ।
ಪುನರಾಗಮನಂ ಚೈವ ಪುಣ್ಯಂ ವೃಂದಾವನಂ ವನಂ ॥ ೬೪ ॥

ಶ್ರೀಕೃಷ್ಣದರ್ಶನಂ ಚೈವ ಗೋಪೀನಾಂ ಹರ್ಷವರ್ಧನಂ ।
ನಾನಾಪ್ರಕಾರಕ್ರೀಡಾ ಚ ಪ್ರೋಕ್ತಾ ತಸ್ಯ ಜಲೇ ಸ್ಥಲೇ ॥ ೬೫ ॥

---

೬೧. ಗೋಪಿಯರ ಕ್ರೀಡೆಯೂ ರಾಧೆಯು ಶ್ರೀಕೃಷ್ಣನ ಭುಜಮಧ್ಯದಲ್ಲಿದ್ದುದು ಮಾಯೆಯಿಂದ ಶ್ರೀಹರಿಯು ಛಾಯಾರೂಪನಾಗಿ ರಾಪಾಣನ ಮನೆಯಲ್ಲಿದ್ದುದೂ ಹೇಳಲ್ಪಟ್ಟಿದೆ.

೬೨. ರಾಸಮಂಡಲದಲ್ಲಿ ಹದಿನಾರು ವಿಧವಾದ ಶೃಂಗಾರವನ್ನು ಹೊಂದಿಕೊಂಡು ಕೊನೆಗೆ ಶ್ರೀಹರಿಯು ರಾಧೆಯೊಡನೆ ಕಾಡಿನಲ್ಲಿ ಮಾಯವಾದುದೂ ಹೇಳಲ್ಪಟ್ಟಿದೆ.

೬೩. ಎಲೈ ಬ್ರಾಹ್ಮಣ ಶ್ರೇಷ್ಠನೇ! ಶ್ರೀಹರಿಯು ರಾಧೆಯೊಡನೆ ಮಲಯ ಪರ್ವತಕ್ಕೆ ಬಂದುದು ಅಲ್ಲಿ ನಿರ್ಜನವಾದ ಕಾಡಿನಲ್ಲಿ ರಾಧಾ ಮಾಧವರ ಸಂವಾದ ಇವುಗಳು ಹೇಳಲ್ಪಟ್ಟಿರುವುವು.

೬೪. ಎಲೈ ನಾರದಮುನಿಯೇ! ಗೋಪಿಯರ ಅನೇಕ ವಿಧವಾದ ಮುಕ್ತಿಯೂ ಪುಣ್ಯಕರವಾದ ವೃಂದಾವನಕ್ಕೆ ಮತ್ತೆ ಬರುವಿಕೆಯೂ ಹೇಳಲ್ಪಟ್ಟಿರುವುದು.

೬೫. ಗೋಪಿಯರೆಲ್ಲರೂ ಶ್ರೀಕೃಷ್ಣನನ್ನು ಕಂಡುದು ಮತ್ತು ಅವರೆಲ್ಲರ ಸಂತೋಷಾಧಿಕ್ಯವೂ ಶ್ರೀಕೃಷ್ಣನು ನೀರಿನಲ್ಲಿಯೂ ನೆಲದಮೇಲೂ ನಾನಾ ವಿಧವಾಗಿ ಕ್ರೀಡಿಸಿದುದೂ ಹೇಳಲ್ಪಟ್ಟಿದೆ.

ಗೋಪೀನಾಮಪಿ ಸೌಭಾಗ್ಯಂ ರಾಧಾಯಾಶ್ಚ ವಿಶೇಷತಃ ।
ಪ್ರೋಕ್ತಂ ವ್ಯಾಸೇನ ಸೌಂದರ್ಯಂ ರಮ್ಯಂರಮ್ಯಂ ನವಂನವಂ ॥ ೬೬ ॥

ನಭಃಸ್ಥಿತಾನಾಂ ದೇವಾನಾಂ ದರ್ಶನಂ ಪ್ರೋಕ್ತಮೇವ ಚ ।
ಮನಸಃ ಸ್ಖಲನಂ ಚೈವ ದೇವೀನಾಂ ರಾಸಮಂಡಲೇ ॥ ೬೭ ॥

ಅಂಶೇನ ಲೇಭಿರೇ ಜನ್ಮ ದೇವ್ಯಶ್ಚೋಕ್ತಮಿದಂ ದ್ವಿಜ ।
ಅಕ್ರೂರಾಗಮನಂ ಚೈವ ಗೋಪೀನಾಂ ಚ ವಿಲಾಪನಂ ॥ ೬೮ ॥

ಪ್ರೋಕ್ತಂ ಸರ್ವಕ್ರಮೇಣೈವ ಚಾಕ್ರೂರಭರ್ತ್ಸನಂ ತಥಾ ।
ಮಥುರಾಗಮನಂ ವಿಷ್ಣೋಃ ಶೋಕಂ ಗೋಕುಲವಾಸಿನಾಂ ॥ ೬೯ ॥

ರಾಧಿಕಾವಿರಹಜ್ವಾಲಾಜಾಲಂ ಪ್ರೋಕ್ತಂ ಯಥೋಚಿತಂ ।
ಸ್ವಮೂರ್ತಿದರ್ಶನಂ ಚೈವಮಕ್ರೂರಂ ಯಮುನಾತಟೇ ॥ ೭೦ ॥

---

೬೬. ಗೋಪಿಯರ ಮತ್ತು ರಾಧೆಯ ವಿಶೇಷವಾದ ಸೌಭಾಗ್ಯವೂ ಹೊಸ ಹೊಸದೂ ಅತಿ ಮನೋಹರವೂ ಆದ ಸೌಂದರ್ಯವೂ ವಿವರಿಸಲ್ಪಟ್ಟಿರುವುದು.

೬೭. ಆಕಾಶದಲ್ಲಿ ನಿಂತು ದೇವತೆಗಳೆಲ್ಲರೂ ರಾಧಾ ಮಾಧವರ ದರುಶನವನ್ನು ಪಡೆದ ಅಂಶವೂ ದೇವಿಯರು ರಾಸಮಂಡಲದಲ್ಲಿ ಮನಸೋತುದೂಹೇಳಲ್ಪಟ್ಟಿರುವುದು.

೬೮. ಎಲೈ ಬ್ರಾಹ್ಮಣನೇ! ದೇವಿಯರೆಲ್ಲರೂ ತಮ್ಮ ತಮ್ಮ ಅಂಶದಿಂದ ಜನ್ಮವನ್ನು ಪಡೆದರೆಂಬುದು ಹೇಳಲ್ಪಟ್ಟಿರುವುದು.

೬೯. ಅಕ್ರೂರನನ್ನು ಗದರಿಸುವುದು ಮತ್ತು ಶ್ರೀಕೃಷ್ಣನು ಮಥುರೆಗೆ ಬಂದುದು ಗೋಕುಲವಾಸಿಗಳೆಲ್ಲರೂ ದುಃಖಗೊಂಡುದು ಇವೆಲ್ಲವೂ ಹೇಳಲ್ಪಟ್ಟಿದೆ.

೭೦. ರಾಧಿಕೆಯು ವಿರಹಜ್ವಾಲೆಯಿಂದ ಬಳಲಿದ ವಿಷಯವು ಯಥೋಚಿತವಾಗಿ ಹೇಳಲ್ಪಟ್ಟಿರುವುದು. ಯಮುನಾನದಿಯ ದಡದಲ್ಲಿ ಅಕ್ರೂರನಿಗೆ ತನ್ನನ್ನು ತೋರಿಸಿದುದು ಕೂಡ ಹೇಳಲ್ಪಟ್ಟಿರುವುದು.

ಮಥುರಾವೇಶನಂ ಪ್ರೋಕ್ತಂ ನಿಧನಂ ರಜಕಸ್ಯ ಚ ।
ಕುಬ್ಜಯಾ ಸಹ ಸಂಭೋಗಸ್ತಸ್ಯಾ ಮೋಕ್ಷಣಮೇವ ಚ ॥ ೭೧ ॥

ಪ್ರಸಾದನಂ ಕುವಿಂದಸ್ಯ ಮಾಲಾಕಾರಸ್ಯ ಮೋಕ್ಷಣಂ ।
ಧನುಷೋ ಭಂಜನಂ ಶಂಭೋರ್ಹಸ್ತಿನೋ ನಿಧನಂ ತಥಾ ॥ ೭೨ ॥

ಸಭಾಪ್ರವೇಶನಂ ಪ್ರೋಕ್ತಂ ನಾನಾರೂಪಪ್ರದರ್ಶನಂ ।
ಕಂಸಸ್ಯ ನಿಧನಂ ಪ್ರೋಕ್ತಂ ತದ್ಬಂಧೂನಾಂ ವಿಲಾಪನಂ ॥ ೭೩ ॥

ಸತ್ಕಾರಂ ತಸ್ಯ ವಿಧಿವದ್ರಾಜತ್ವಂ ತತ್ಪಿತುಸ್ತಥಾ ।
ವಿಲಾಪನಂ ಚ ನಂದಸ್ಯ ಸ್ತವನಂ ಪರಮಾದ್ಭುತಂ ॥ ೭೪ ॥

ಪ್ರೋಕ್ತಸ್ತಯೋಶ್ಚ ಸಂವಾದೋ ನಿರ್ಜನೇ ತಾತಪುತ್ರಯೋಃ ।
ಪರಮಾಧ್ಯಾತ್ಮಿಕಂ ಜ್ಞಾನಂ ನಂದಾಯ ಚ ದದೌ ವಿಭುಃ ॥ ೭೫ ॥

---

೭೧. ಮಥುರಾಪ್ರವೇಶದ ಕಥೆಯೂ ಅಗಸರವನನ್ನು ನಾಶಮಾಡಿದುದೂ ಕುಬ್ಜೆಯೊಡನೆ ಸಂಭೋಗಿಸಿದುದೂ ಮತ್ತು ಅವಳ ಮೋಕ್ಷ ಇವೆಲ್ಲವೂ ಹೇಳಲ್ಪಟ್ಟಿರುವುವು.

೭೨. ನೆಯ್ಗೆಯವನನ್ನು ಸಮಾಧಾನಪಡಿಸಿದುದು ಹೂವಾಡಿಗನ ಮೋಕ್ಷಣವು ಧನುರ್ಭಂಗವು, ಆನೆಯನ್ನು ಕೊಂದುದು ಈ ಎಲ್ಲ ಕಥೆಯೂ ವಿವರಿಸಲ್ಪಟ್ಟಿರುವುದು.

೭೩. ಶ್ರೀಕೃಷ್ಣನು ರಾಜಸಭೆಯನ್ನು ಪ್ರವೇಶಿಸಿದುದು, ಅಲ್ಲಿ ತಾನು ನಾನಾ ರೂಪವನ್ನು ತೋರಿಸಿದುದು, ಕಂಸನನ್ನು ಸಂಹಾರಮಾಡಿದುದು, ಕಂಸನ ಬಂಧುಗಳೆಲ್ಲರೂ ದುಃಖದಿಂದ ಅತ್ತುದು ಇವೆಲ್ಲವು ಹೇಳಲ್ಪಟ್ಟಿರುವುವು.

೭೪. ಶ್ರೀಕೃಷ್ಣನಿಗೆ ವಿಧಿಪೂರ್ವಕವಾದ ಸತ್ಕಾರ ಮಾಡಿದುದು, ಕಂಸನ ತಂದೆಗೆ ರಾಜತನವನ್ನು ಕೊಟ್ಟುದು ನಂದನ ಅದ್ಭುತವಾದ ವಿಲಾಪನೆಯು ಇವೆಲ್ಲ ಹೇಳಲ್ಪಟ್ಟಿರುವುದು.

೭೫. ನಿರ್ಜನ ಪ್ರದೇಶದಲ್ಲಿ ತಂದೆ ಮಕ್ಕಳಾದ ನಂದಕೃಷ್ಣರ ಸಂವಾದವು, ಪರಮಾತ್ಮನು ನಂದನಿಗೆ ಉತ್ತಮ ಆಧ್ಯಾತ್ಮಿಕ ಜ್ಞಾನವನ್ನುಪದೇಶಿಸಿದುದೂ ಹೇಳಲ್ಪಟ್ಟಿರುವುದು.

ಮುನೀನಾಂ ಗಮನೇ ಚೈವ ಧನ್ಯೋಪಾಖ್ಯಾನಮೇವ ಚ ।
ಕಥಿತಂ ಚ ಕುಮಾರೇಣ ಪ್ರೋಕ್ತಮೇವ ಸುದುರ್ಲಭಮ್ ॥ ೭೬ ॥

ಉದ್ಧವಾಗಮನಂ ಪ್ರೋಕ್ತಂ ರಾಧಾಸ್ಥಾನಂ ಚ ನಿರ್ಜನಂ ।
ಜ್ಞಾನಂ ತಯೋಶ್ಚ ಸಂವಾದೇ ಪ್ರೋಕ್ತಮೇವ ಶುಭಾವಹಂ ॥ ೭೭ ॥

ಯಜ್ಞೋಪವೀತಂ ಕೃಷ್ಣಸ್ಯ ವಿದ್ಯಾದಾನಂ ಗುರೋರ್ಗೃಹೇ ।
ಮೃತಪುತ್ರಪ್ರದಾನಂ ಚ ಪ್ರೋಕ್ತಂತದ್ಗುರವೇ ಪುರಾ ॥ ೭೮ ॥

ಜರಾಸಂಧಸ್ಯ ದಮನಂ ನಿಧನಂ ಯವನಸ್ಯ ಚ ।
ದ್ವಾರಕಾಯಾಶ್ಚ ನಿರ್ಮಾಣಂ ವಿಶ್ವಕಾರೋದ್ಯಮಂ ತಥಾ ॥ ೭೯ ॥

ದ್ವಾರಕಾವೇಶನಂ ಪ್ರೋಕ್ತಮುಗ್ರಸೇನವಿಲಾಪನಂ ।
ರುಕ್ಮಿಣೀಹರಣಂ ಚೈವ ನೃಪಾಣಾಂ ದಮನಂ ತಥಾ ॥ ೮೦ ॥

---

೭೬. ಮುನಿಗಳು ಹೋಗುವ ಸಮಯದಲ್ಲಿ ಕುಮಾರನಿಂದ ಹೇಳಲ್ಪಟ್ಟ ಅತ್ಯಂತ ದುರ್ಲಭವಾದ ಧನ್ಯೋಪಾಖ್ಯಾನವು ಹೇಳಲ್ಪಟ್ಟಿರುವುದು.

೭೭. ರಾಧೆಯಿದ್ದ ನಿರ್ಜನ ಪ್ರದೇಶಕ್ಕೆ ಉದ್ಧವನು ಬಂದುದು ಅವರೀರ್ವರ ಸಂವಾದದಿಂದ ಹೊರಬಿದ್ದ ಶುಭಕರವಾದ ಜ್ಞಾನವಿಷಯವು ಹೇಳಲ್ಪಟ್ಟಿರುವುದು.

೭೮. ಶ್ರೀಕೃಷ್ಣನ ಉಪನಯನವು ಗುರುವಿನ ಮನೆಯಲ್ಲಿ ವಿದ್ಯೋಪದೇಶವು ಆ ಗುರುವಿನ ಮಗನು ಮೃತನಾಗಿರಲು ಅವನನ್ನು ಬದುಕಿಸಿ ಮತ್ತೆ ಗುರುವಿಗೆ ತಂದೊಪ್ಪಿಸಿದುದು ಇವೆಲ್ಲ ಹೇಳಲ್ಪಟ್ಟಿರುವುದು.

೭೯. ಜರಾಸಂಧನನ್ನು ದಮನಮಾಡಿದುದು, ಯವನನನ್ನು ಕೊಂದುದು, ದ್ವಾರಕಾಪಟ್ಟಣವನ್ನು ನಿರ್ಮಾಣಮಾಡಿದುದು, ವಿಶ್ವಕರ್ಮನ ಸಾಹಸವು ಇವೆಲ್ಲವು ಹೇಳಲ್ಪಟ್ಟಿರುವುದು.

೮೦. ದ್ವಾರಕಾನಗರದ ಪ್ರವೇಶ ಉಗ್ರಸೇನನ ವಿಲಾಪ ರುಕ್ಮಿಣಿಯ ಅಪಹರಣ ಮತ್ತು ರಾಜರುಗಳನ್ನು ಜಯಿಸಿದುದು ಇವೆಲ್ಲವು ಹೇಳಲ್ಪಟ್ಟಿರುವುವು.

ಸರ್ವಾಸಾಂ ಕಾಮಿನೀನಾಂ ಚ ಪ್ರೋಕ್ತಮುದ್ವಾಹನಂ ತಥಾ ।
ಮಾಯಾವತೀವಿಮೋಕ್ಷಣಂ ಚ ನಿಧನಂ ಶಂಬರಸ್ಯ ಚ ॥ ೮೧ ॥

ಧರ್ಮಪುತ್ರರಾಜಸೂಯೇ ಶಿಶುಪಾಲಸ್ಯ ಮೋಕ್ಷಣಂ ।
ದಂತವಕ್ರಸ್ಯ ಚ ಮುನೇ ಶಾಲ್ವಸ್ಯ ನಿಧನಂ ತಥಾ ॥ ೮೨ ॥

ಮಣೇಶ್ಚ ಹರಣಂ ಚೈವ ಪಾರಿಜಾತಸ್ಯ ಸ್ವರ್ಗತಃ ।
ಕುರುಪಾಂಡವಯುದ್ಧೇ ಚ ಭುವಶ್ಚ ಭಾರಮೋಕ್ಷಣಂ ॥ ೮೩ ॥

ಉಷಾಯಾಹರಣಂ ಪ್ರೋಕ್ತಂ ಬಾಣಸ್ಯ ಭುಜಕೃಂತನಂ ।
ಬಲೇಶ್ಚ ಸ್ತವನಂ ಪ್ರೋಕ್ತಮನಿರುದ್ಧಸ್ಯ ವಿಕ್ರಮಃ ॥ ೮೪ ॥

ರಾಧಾಯಶೋದಾಸಂವಾದಃ ಪ್ರೋಕ್ತಃ ಪರಮದುರ್ಲಭಃ ।
ಮೋಕ್ಷಣಂ ಚ ಸೃಗಾಲಸ್ಯ ಪ್ರೋಕ್ತಂ ಚ ಪರಮಾದ್ಭುತಂ ॥ ೮೫ ॥

---

೮೧. ಎಲ್ಲ ಕಾಮಿನಿಯರನ್ನು ಮದುವೆಯಾದುದು ಮಾಯಾವತಿಯ ವಿಮೋಚನೆ ಮತ್ತು ಶಂಬರನ ಮರಣ ಮುಂತಾದುವು ಹೇಳಲ್ಪಟ್ಟಿರುವುವು.

೮೨. ಧರ್ಮಪುತ್ರನಾದ ಯುಧಿಷ್ಠಿರನ ರಾಜಸೂಯಯಾಗದಲ್ಲಿ ಶಿಶುಪಾಲ ದಂತವಕ್ತ್ರ ಮತ್ತು ಶಾಲ್ವ ಇವರುಗಳ ಮರಣವು ಹೇಳಲ್ಪಟ್ಟಿರುವುವು.

೮೩. ಸ್ಯಮಂತಕಮಣಿಯ ಅಪಹಾರ, ಪಾರಿಜಾತವೃಕ್ಷವನ್ನು ಸ್ವರ್ಗದಿಂದ ಅಪಹರಿಸಿದುದು ಕೌರವ ಪಾಂಡವರ ಯುದ್ಧದಲ್ಲಿ ಭೂಮಿಯ ಭಾರವನ್ನು ಹೋಗಲಾಡಿಸಿದುದು ಇವುಗಳೆಲ್ಲ ಹೇಳಲ್ಪಟ್ಟಿರುವುವು.

೮೪. ಉಷಾಪಹರಣವೂ ಬಾಣನ ಭುಜವನ್ನು ಕತ್ತರಿಸುವಿಕೆಯೂ ಬಲಿಯ ಸ್ತೋತ್ರವೂ ಅನಿರುದ್ಧನ ಪರಾಕ್ರಮವೂ ವಿವರಿಸಲ್ಪಟ್ಟಿರುವುವು.

೮೫. ಅತಿದುರ್ಲಭವಾದ ರಾಧೆ ಮತ್ತು ಯಶೋದೆಯರ ಸಂವಾದವು ಅತ್ಯಂತ ಆಶ್ಚರ್ಯಕರವಾದ ಸೃಗಾಲ ಮೋಕ್ಷವು ವಿವರಿಸಲ್ಪಟ್ಟಿರುವುವು.

ತೀರ್ಥಯಾತ್ರಾಪ್ರಸಂಗೇನ ಗಣೇಶಪೂಜನಂ ತಥಾ ।
ದರ್ಶನಂ ರಾಧಿಕಾಸಾರ್ಧಂ ಕೃಷ್ಣಸ್ಯ ಪರಮಾತ್ಮನಃ ॥ ೮೬ ॥

ರಾಧಾಯಾ ದರ್ಶನಂ ದೇವ್ಯಾ ರಾಧಾತೇಜಃ ಪ್ರಕಾಶನಂ ।
ರಾಧಯಾ ರಮಣಂ ತೀರ್ಥೇ ಭ್ರಮಣಂ ರಹಸಿ ಸ್ಮೃತಂ ॥ ೮೭ ॥

ನಿಧನಂ ಯದುವಂಶಾನಾಂ ಬ್ರಹ್ಮಶಾಪೇನ ಶೌನಕ ।
ಮೋಕ್ಷಣಂ ಪಾಂಡವಾನಾಂ ಚ ಸ್ವಪದೇ ಗಮನಂ ಹರೇಃ ॥ ೮೮ ॥

ವಿವಾಹೋ ನಾರದಸ್ಯೈವೋತ್ಪತ್ತಿರ್ವಹ್ನಿಸುವರ್ಣಯೋಃ ।
ಪ್ರೋಕ್ತಂ ಸರ್ವಂ ಮಹಾಭಾಗಾ ಪುನರೇವ ಸಮಾಸತಃ ॥ ೮೯ ॥

---

೮೬. ತೀರ್ಥಯಾತ್ರೆಯ ಪ್ರಸಂಗದಿಂದ ಗಣೇಶ ಪೂಜೆಯ ವಿವರವು ರಾಧಿಕೆಯೊಡನೆ ಪರಮಾತ್ಮನಾದ ಶ್ರೀಕೃಷ್ಣನ ದರ್ಶನವು ನಿರೂಪಿಸಲ್ಪಟ್ಟಿರುವುದು.

೮೭. ರಾಧಾದೇವಿಯ ದರ್ಶನವು ರಾಧೆಯ ತೇಜಃಪ್ರಕಾಶನವು ರಾಧೆಯೊಡನೆ ರಹಸ್ಯ ಕೇಳಿಯೂ ತೀರ್ಥಾಟನೆಯೂ ಹೇಳಲ್ಪಟ್ಟಿರುವುವು.

೮೮. ಎಲೈ ಶೌನಕನೇ! ಬ್ರಾಹ್ಮಣ ಶಾಪದಿಂದ ಯದುವಂಶದ ನಾಶವು ಪಾಂಡವರ ಮೋಕ್ಷವು ಶ್ರೀಹರಿಯ ಸ್ವಸ್ಥಾನಗಮನವು ಹೇಳಲ್ಪಟ್ಟಿರುವುವು.

೮೯. ನಾರದ ಮುನಿಯ ವಿವಾಹವು ಅಗ್ನಿ ಮತ್ತು ಚಿನ್ನಗಳ ಉತ್ಪತ್ತಿಯೂ ಇವೆಲ್ಲವು ಸಮಗ್ರವಾಗಿ ಹೇಳಲ್ಪಟ್ಟಿರುವುವು.

ಚತುಃಖಂಡೈಃ ಪುರಾಣಂ ಚ ಬ್ರಹ್ಮವೈವರ್ತಮೇವ ಚ ।
ಅತಃ ಪರಂ ಮುನಿಶ್ರೇಷ್ಠ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೯೦ ॥

ಇತಿ ಶ್ರೀಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡ ಉತ್ತರಾರ್ಧೇ ನಾರಾಯಣನಾರದಸಂವಾದೇ ಚಾನುಕ್ರಮಣಿಕಂ ನಾಮ ದ್ವಾತ್ರಿಂಶದಧಿಕಶತತಮೋಽಧ್ಯಾಯಃ ॥

---

೯೦. ಎಲೈ ಮುನಿಶ್ರೇಷ್ಠನೇ! ಈ ಪ್ರಕಾರವಾಗಿ ನಾಲ್ಕುಖಂಡಗಳಿಂದ ಬ್ರಹ್ಮವೈವರ್ತವೆಂಬ ಪುರಾಣವು ಹೇಳಲ್ಪಟ್ಟಿರುವುದು. ಇನ್ನು ಮುಂದೆ ಮತ್ತಾವ ವಿಷಯವನ್ನು ಕೇಳಲಪೇಕ್ಷಿಸುವೆಯೋ ಹೇಳು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣಜನ್ಮ ಖಂಡದ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಅನುಕ್ರಮಣಿಕೆಯೆಂಬ ನೂರ ಮೂವತ್ತೆರಡನೆಯ ಅಧ್ಯಾಯವು ಸಮಾಪ್ತವಾದುದು.

|| ಓಂ ||

|| ಓಂ ಶ್ರೀ ಗಣೇಶಾಯ ನಮಃ ||

# ಅಥ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ

## ಶ್ರೀ ಕೃಷ್ಣಜನ್ಮಖಂಡೇ

|| ಅಥ ತ್ರಯಸ್ತ್ರಿಂಶದಧಿಕಶತತಮೋಽಧ್ಯಾಯಃ ||

|| ಶೌನಕ ಉವಾಚ ||

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ |
ಯತ್ಫಲಂ ಬ್ರಹ್ಮವೈವರ್ತೇ ನಿರ್ವಿಘ್ನಂ ಮೋಕ್ಷಕಾರಣಂ || ೧ ||

ಅಭಯಂ ದೇಹಿ ಹೇ ವತ್ಸ ಹೇ ತಾತ ಮಹ್ಯಮೇವ ಚ |
ತದಾ ನಿವೇದನಂ ಕಿಂಚಿದಸ್ತೀತಿ ಚ ಕರೋಮ್ಯಹಂ || ೨ ||

|| ಸೂತ ಉವಾಚ ||

ತ್ಯಜ ಭೀತಿಂ ಮಹಾಭಾಗ ಪ್ರಶ್ನಂ ಕುರು ಯದಿಚ್ಛಸಿ |
ಸರ್ವಂ ತೇ ಕಥಯಿಷ್ಯಾಮಿ ಯದ್ಯದ್ಗೋಪ್ಯಂ ಮನೋಹರಂ || ೩ ||

---

### ನೂರ ಮೂವತ್ತ ಮೂರನೆಯ ಅಧ್ಯಾಯವು

೧. ಶೌನಕ ಮುನಿಯು ಹೇಳುತ್ತಾನೆ—ಇಂದು ನಾನು ಹುಟ್ಟಿದುದು ಸಫಲವಾಯಿತು. ನನ್ನ ಜೀವನವು ಕೂಡ ಉತ್ತಮವಾಯಿತು. ಯಾಕೆಂದರೆ ಮೋಕ್ಷಕ್ಕೆ ಕಾರಣವಾದ ಬ್ರಹ್ಮವೈವರ್ತ ಪುರಾಣವನ್ನು ನಿರ್ವಿಘ್ನವಾಗಿ ಕೇಳಿ ಅದರ ಫಲವನ್ನು ಹೊಂದಿದೆನು.

೨. ಎಲೈ ತಂದೆಯೇ! ನನಗೆ ನೀನು ಅಭಯವನ್ನು ಕೊಡುವವನಾಗು; ಆಗ ನಾನು ಕೇಳಬೇಕಾದ ಮತ್ತೆ ಕೆಲವಂಶಗಳನ್ನು ಕೇಳುವೆನು.

೩. ಸೂತಮುನಿಯು ಹೇಳುತ್ತಾನೆ—ಎಲೈ ಮಹಾತ್ಮನೇ! ಭಯವನ್ನು ಬಿಡು, ಯಾವುದನ್ನು ಕೇಳಲಿಚ್ಛಿಸುವೆಯೋ ಅದನ್ನು ಕೇಳು; ಅದು ಯಾವುದು? ಎಷ್ಟೇ ರಹಸ್ಯವಾಗಿದ್ದರೂ ಕೂಡ ಎಲ್ಲವನ್ನೂ ನಿನಗೆ ಹೇಳುವೆನು.

|| ಶೌನಕ ಉವಾಚ ||

ಅಧುನಾ ಶ್ರೋತುಮಿಚ್ಛಾಮಿ ಪುರಾಣಾನಾಂ ಚ ಲಕ್ಷಣಂ ।
ಸಂಖ್ಯಾನಮಪಿ ತೇಷಾಂ ಚ ಫಲಮಸ್ಯೈವ ಪುತ್ರಕ　　|| ೪ ||

|| ಸೂತ ಉವಾಚ ||

ವಿಸ್ತರಾಣಿ ಪುರಾಣಾನಿ ಚೇತಿಹಾಸಶ್ಚ ಶೌನಕ ।
ಸಂಹಿತಾಂ ಪಂಚರಾತ್ರಾಣಿ ಕಥಯಾಮಿ ಯಥಾಗತಂ　　|| ೫ ||

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ವಿಪ್ರ ಪುರಾಣಂ ಪಂಚಲಕ್ಷಣಂ　　|| ೬ ||

ಏತೆದುಪಪುರಾಣಾನಾಂ ಲಕ್ಷಣಂ ಚ ವಿದುರ್ಬುಧಾಃ ।
ಮಹತಾಂ ಚ ಪುರಾಣಾನಾಂ ಲಕ್ಷಣಂ ಕಥಯಾಮಿ ತೇ　　|| ೭ ||

---

೪. ಶೌನಕ ಮುನಿಯು ಹೇಳುತ್ತಾನೆ—ಈಗ ನಾನು ಪುರಾಣಗಳ ಲಕ್ಷಣವನ್ನೂ ಅವುಗಳ ಸಂಖ್ಯೆಯನ್ನೂ ಮತ್ತು ಫಲಗಳನ್ನೂ ಕೇಳಲಪೇಕ್ಷಿಸುತ್ತೇನೆ.

೫. ಸೂತಮುನಿಯು ಹೇಳುತ್ತಾನೆ—ಎಲೈ ಶೌನಕನೇ! ಪುರಾಣಗಳೂ ಇತಿಹಾಸಗಳೂ ವಿಸ್ತಾರವಾಗಿರುವುವು. ಐದು ದಿನಗಳಲ್ಲಿ ಸಂಕ್ಷೇಪವಾಗಿ ಹೇಳುವೆನು ಕೇಳುವವನಾಗು.

೬. ಎಲೈ ಬ್ರಾಹ್ಮಣನೇ! ಸೃಷ್ಟಿ ಪ್ರತಿಸೃಷ್ಟಿ ವಂಶಗಳು ಮನ್ವಂತರಗಳು ವಂಶಸಂಬಂಧವಾದ ಚರಿತೆ ಎಂಬುದಾಗಿ ಪುರಾಣವು ಐದುಲಕ್ಷಣವುಳ್ಳದ್ದು.

೭. ವಿದ್ವಾಂಸರು ಇದನ್ನು ಉಪಪುರಾಣಗಳ ಲಕ್ಷಣಗಳೆಂದು ಹೇಳುವರು. ಮಹಾಪುರಾಣಗಳ ಲಕ್ಷಣಗಳನ್ನು ನಿನಗೆ ಹೇಳುವೆನು.

ಸೃಷ್ಟಿಶ್ಚಾಪಿ ವಿಸೃಷ್ಟಿಶ್ಚ ಸ್ಥಿತಿಸ್ತೇಷಾಂ ಚ ಪಾಲನಂ ।
ಕರ್ಮಣಾಂ ವಾಸನಾ ವಾರ್ತಾ ಮನೂನಾಂ ಚಾಕ್ರಮೇಣ ಚ ॥ ೮ ॥

ವರ್ಣನಂ ಪ್ರಲಯಾನಾಂ ಚ ಮೋಕ್ಷಸ್ಯ ಚ ನಿರೂಪಣಂ ।
ತತ್ಕೀರ್ತನಂ ಹರೇರೇವ ವೇದಾನಾಂ ಚ ಪೃಥಕ್‌ಪೃಥಕ್ ॥ ೯ ॥

ದಶಾಧಿಕಂ ಲಕ್ಷಣಂ ಚ ಮಹತಾಂ ಪರಿಕೀರ್ತಿತಂ ।
ಸಂಖ್ಯಾನಂ ಚ ಪುರಾಣಾನಾಂ ನಿಬೋಧ ಕಥಯಾಮಿ ತೇ ॥ ೧೦ ॥

ಪರಂ ಬ್ರಹ್ಮಪುರಾಣಂ ಚ ಸಹಸ್ರಾಣಾಂ ದಶೈವ ತು ।
ಪಂಚೋನಷಷ್ಟಿಸಾಹಸ್ರಂ ಪಾದ್ಮಮೇವ ಪ್ರಕೀರ್ತಿತಂ ॥ ೧೧ ॥

ತ್ರಯೋವಿಂಶತಿಸಾಹಸ್ರಂ ವೈಷ್ಣವಂ ಚ ವಿದುರ್ಬುಧಾಃ ।
ಚತುರ್ವಿಂಶತಿಸಾಹಸ್ರಂ ಶೈವಂ ಚೈವ ನಿರೂಪಿತಂ ॥ ೧೨ ॥

---

೮–೯. ಸೃಷ್ಟಿ ವಿಸೃಷ್ಟಿ ಅವುಗಳ ಸ್ಥಿತಿ ಮತ್ತು ಪಾಲನೆ ಕರ್ಮಗಳ ವಾಸನಾ ವೃತ್ತಾಂತ ಮತ್ತು ಕ್ರಮವಾಗಿ ಮನುಗಳ ವರ್ಣನೆ ಪ್ರಳಯ ಮತ್ತು ಮೋಕ್ಷಗಳ ನಿರೂಪಣೆ ಶ್ರೀಹರಿಯ ಕೀರ್ತನೆ ವೇದಗಳನ್ನು ಬೇರೆಬೇರೆಯಾಗಿ ಹೇಳುವಿಕೆ.

೧೦. ಹೀಗೆ ಹೆಚ್ಚಾಗಿ ಹತ್ತು ಲಕ್ಷಣಗಳಿಂದ ಕೂಡಿದುವು ಮಹಾಪುರಾಣಗಳು. ಈಗ ಪುರಾಣಗಳ ಸಂಖ್ಯೆಯನ್ನು ಹೇಳುತ್ತೇನೆ. ಕೇಳು.

೧೧. ಉತ್ತಮವಾದ ಬ್ರಹ್ಮಪುರಾಣವು ಹತ್ತುಸಾವಿರ ಸಂಖ್ಯೆಯುಳ್ಳದ್ದು. ಪಾದ್ಮಪುರಾಣವು ಐವತ್ತೊಂಬತ್ತುಸಾವಿರದ ಮಂಬೈನೂರು ತೊಂಬತ್ತೈದು ಗ್ರಂಥ ಗಳಿಂದ ಕೂಡಿರುವುದು.

೧೨. ವೈಷ್ಣವಪುರಾಣವು ಇಪ್ಪತ್ತಮೂರು ಸಾವಿರ ಗ್ರಂಥಪರಿಮಿತವಾದು ದೆಂದು ವಿದ್ವಾಂಸರು ಹೇಳುತ್ತಾರೆ. ಶೈವಪುರಾಣವು ಇಪ್ಪತ್ತನಾಲ್ಕುಸಾವಿರ ಗ್ರಂಥ ವುಳ್ಳದೆಂದು ಹೇಳಲ್ಪಟ್ಟಿರುವುದು.

ಗ್ರಂಥೋಽಷ್ಟಾದಶಸಾಹಸ್ರಂ ಶ್ರೀಮದ್ಭಾಗವತಂ ವಿದುಃ ।
ಪಂಚವಿಂಶತಿಸಾಹಸ್ರಂ ನಾರದೀಯಂ ಪ್ರಕೀರ್ತಿತಂ　　॥ ೧೩ ॥

ಮಾರ್ಕಂಡಂ ನವಸಾಹಸ್ರಂ ಪುರಾಣಂ ಪಂಡಿತಾ ವಿದುಃ ।
ಚತುಃಶತಾಧಿಕಂ ಪಂಚದಶಸಾಹಸ್ರಮೇವ ಚ　　॥ ೧೪ ॥

ಪರಮಗ್ನಿಪುರಾಣಂ ಚ ರುಚಿರಂ ಪರಿಕೀರ್ತಿತಂ ।
ಚತುರ್ದಶಸಹಸ್ರಾಣಿ ಪರಂ ಪಂಚಶತಾಧಿಕಂ　　॥ ೧೫ ॥

ಪುರಾಣಪ್ರವರಂ ಚೈವ ಭವಿಷ್ಯಂ ಪರಿಕೀರ್ತಿತಂ ।
ಅಷ್ಟಾದಶಸಹಸ್ರಂ ಚ ಬ್ರಹ್ಮವೈವರ್ತಮೀಪ್ಸಿತಂ　　॥ ೧೬ ॥

ಸರ್ವೇಷಾಂ ಚ ಪುರಾಣಾನಾಂ ಸಾರಮೇವಂ ವಿದುರ್ಬುಧಾಃ ।
ಏಕಾದಶಸಹಸ್ರಂ ತು ಪರಂ ಲಿಂಗಪುರಾಣಕಂ　　॥ ೧೭ ॥

---

೧೩. ಶ್ರೀಮದ್ಭಾಗವತವು ಹದಿನೆಂಟುಸಾವಿರ ಗ್ರಂಥವುಳ್ಳದು. ನಾರದೀಯ ಪುರಾಣವು ಇಪ್ಪತ್ತೈದುಸಾವಿರ ಗ್ರಂಥಗಳಿಂದ ಕೂಡಿರುವುದು.

೧೪-೧೬. ಮಾರ್ಕಂಡ ಪುರಾಣವು ಒಂಭತ್ತು ಸಾವಿರ ಗ್ರಂಥ ಪರಿಮಿತವಾದುದೆಂದು ವಿದ್ವಾಂಸರು ಹೇಳುತ್ತಾರೆ. ಮನೋಹರವೂ ಉತ್ತಮವೂ ಆದ ಅಗ್ನಿ ಪುರಾಣವು ಹದಿನೈದುಸಾವಿರದ ನಾನೂರು ಗ್ರಂಥಗಳಿಂದ ಕೂಡಿರುವುದು. ಪುರಾಣಗಳಲ್ಲಿ ಶ್ರೇಷ್ಠವಾದ ಭವಿಷ್ಯಪುರಾಣವು ಹದಿನಾಲ್ಕುಸಾವಿರದ ಐನೂರು ಗ್ರಂಥಪರಿಮಿತವಾದುದು. ಬ್ರಹ್ಮವೈವರ್ತ ಪುರಾಣವು ಹದಿನೆಂಟುಸಾವಿರ ಗ್ರಂಥ ಪರಿಮಿತವಾದುದು.

೧೭. ಈ ಬ್ರಹ್ಮವೈವರ್ತ ಪುರಾಣವನ್ನು ಸಕಲ ಪುರಾಣಗಳ ಸಾರವೆಂದು ವಿದ್ವಾಂಸರು ಹೇಳುವರು. ಶ್ರೇಷ್ಠವಾದ ಲಿಂಗಪುರಾಣವು ಹನ್ನೊಂದುಸಾವಿರ ಗ್ರಂಥ ಪರಿಮಿತವಾದುದು.

ಚತುರ್ವಿಂಶತಿಸಾಹಸ್ರಂ ವಾರಾಹಂ ಪರಿಕೀರ್ತಿತಂ ।
ಏಕಾಶೀತಿಸಹಸ್ರಂ ಚ ಪರನ್ಯೇವ ಶತಾಧಿಕಂ ॥ ೧೮ ॥

ವರಂ ಸ್ಕಂದಪುರಾಣಂ ಚ ಸದ್ಭಿರೇವ ನಿರೂಪಿತಂ ।
ವಾಮನಂ ದಶಸಾಹಸ್ರಂ ಕೌರ್ಮಂ ಸಪ್ತದಶೈವ ತು ॥ ೧೯ ॥

ಮಾತ್ಸ್ಯಂ ಚತುರ್ದಶಪ್ರೋಕ್ತಂ ಪುರಾಣಂ ಪಂಡಿತೈಸ್ತಥಾ ।
ಊನವಿಂಶತಿಸಾಹಸ್ರಂ ಗಾರುಡಂ ಪರಿಕೀರ್ತಿತಂ ॥ ೨೦ ॥

ಪರಂ ದ್ವಾದಶಸಾಹಸ್ರಂ ಬ್ರಹ್ಮಾಂಡಂ ಪರಿಕೀರ್ತಿತಂ ।
ಏವಂ ಪುರಾಣಸಂಖ್ಯಾನಂ ಚತುರ್ಲಕ್ಷಮುದಾಹೃತಂ ॥ ೨೧ ॥

ಅಷ್ಟಾದಶಪುರಾಣಾನಾಮೇವಮೇವ ವಿದುರ್ಬುಧಾಃ ।
ಏವಂ ಚೋಪಪುರಾಣಾನಾಮಷ್ಟಾದಶ ಪ್ರಕೀರ್ತಿತಾಃ ॥ ೨೨ ॥

---

೧೮–೧೯. ವರಾಹ ಪುರಾಣವು ಇಪ್ಪತ್ತುನಾಲ್ಕುಸಾವಿರ ಗ್ರಂಥವುಳ್ಳದ್ದು. ಸ್ಕಂದಪುರಾಣವು ಎಂಬತ್ತೊಂದು ಸಾವಿರದ ನೂರು ಗ್ರಂಥಗಳುಳ್ಳದೆಂದು ಸತ್ಪುರುಷರು ಹೇಳುತ್ತಾರೆ. ವಾಮನ ಪುರಾಣವು ಹತ್ತುಸಾವಿರ ಗ್ರಂಥಪರಿಮಿತವಾದುದು. ಕೌರ್ಮಪುರಾಣವು ಹದಿನೇಳು ಸಾವಿರ ಗ್ರಂಥಪರಿಮಿತವಾದುದು.

೨೦. ಮಾತ್ಸ್ಯಪುರಾಣವು ಹದಿನಾಲ್ಕುಸಾವಿರ ಗ್ರಂಥ ಪರಿಮಿತವಾದುದೆಂದು ಪಂಡಿತರು ಹೇಳುತ್ತಾರೆ. ಗಾರುಡಪುರಾಣವು ಹಂಬೈನೂರ ಯಂಬತ್ತು ಗ್ರಂಥಗಳಿಂದ ಕೂಡಿದುದಾಗಿದೆ.

೨೧. ಬ್ರಹ್ಮಾಂಡ ಪುರಾಣವು ಹನ್ನೆರಡುಸಾವಿರ ಗ್ರಂಥಪರಿಮಿತವಾದುದು. ಈ ಪ್ರಕಾರವಾಗಿ ಪುರಾಣಗಳ ಗ್ರಂಥಸಂಖ್ಯೆಯು ನಾಲ್ಕುಲಕ್ಷವೆಂಬುದಾಗಿ ಹೇಳಲ್ಪಟ್ಟಿರುವುದು.

೨೨. ವಿದ್ವಾಂಸರು ಈ ಪ್ರಕಾರವಾಗಿ ಹದಿನೆಂಟು ಮಹಾಪುರಾಣಗಳೆಂಬುದಾಗಿ ಹೇಳುತ್ತಾರೆ. ಇದೇ ರೀತಿಯಾಗಿ ಹದಿನೆಂಟು ಉಪಪುರಾಣಗಳೂ ಹೇಳಲ್ಪಟ್ಟಿರುವುವು.

ಇತಿಹಾಸೋ ಭಾರತಂ ಚ ವಾಲ್ಮೀಕಂ ಕಾವ್ಯಮೇವ ಚ ।
ಪಂಚಕಂ ಪಂಚರಾತ್ರಾಣಾಂ ಕೃಷ್ಣಮಾಹಾತ್ಮ್ಯಪೂರ್ವಕಂ ॥ ೨೩ ॥

ವಾಸಿಷ್ಠಂ ನಾರದೀಯಂ ಚ ಕಾಪಿಲಂ ಗೌತಮೀಯಕಂ ।
ಪರಂ ಸನತ್ಕುಮಾರೀಯಂ ಪಂಚರಾತ್ರಂ ಚ ಪಂಚಕಂ ॥ ೨೪ ॥

ಪಂಚಕಂ ಸಂಹಿತಾನಾಂ ಚ ಕೃಷ್ಣಭಕ್ತಿಸಮನ್ವಿತಂ ।
ಬ್ರಹ್ಮಣಶ್ಚ ಶಿವಸ್ಯಾಪಿ ಪ್ರಹ್ಲಾದಸ್ಯ ತಥೈವ ಚ ॥ ೨೫ ॥

ಗೌತಮಸ್ಯ ಕುಮಾರಸ್ಯ ಸಂಹಿತಾಃ ಪರಿಕೀರ್ತಿತಾಃ ।
ಇತಿ ತೇ ಕಥಿತಂ ಸರ್ವಂ ಕ್ರಮೇಣ ಚ ಪೃಥಕ್‌ಪೃಥಕ್ ॥ ೨೬ ॥

ಇತ್ಯೇವಂ ವಿಪುಲಂ ಶಾಸ್ತ್ರಂ ಮಮಾಪಿ ಚ ಯಥಾಗತಂ ।
ಉವಾಚೇದಂ ಪುರಾಣಂ ಚ ಗೋಲೋಕೇ ರಾಸಮಂಡಲೇ ॥ ೨೭ ॥

---

೨೩. ಭಾರತವೆಂಬುದು ಇತಿಹಾಸವು. ವಾಲ್ಮೀಕಿರಚಿತವಾದುದು ಕಾವ್ಯವು. ಪಂಚರಾತ್ರ ಪಂಚಕವು ಶ್ರೀಕೃಷ್ಣ ಮಹಾತ್ಮ್ಯೆಯಿಂದ ತುಂಬಿರುವುದು.

೨೪. ಆ ಪಂಚರಾತ್ರಪಂಚಕವಾವುವೆಂದರೆ ವಾಸಿಷ್ಠ ನಾರದೀಯ ಕಾಪಿಲ ಗೌತಮೀಯ ಸನತ್ಕುಮಾರೀಯ ಎಂಬುವುಗಳು.

೨೫–೨೬. ಕೃಷ್ಣಭಕ್ತಿಯುಕ್ತವಾದ ಬ್ರಹ್ಮಸಂಹಿತೆ ಶಿವಸಂಹಿತೆ ಪ್ರಹ್ಲಾದ ಸಂಹಿತೆ ಗೌತಮಸಂಹಿತೆ ಕುಮಾರಸಂಹಿತೆ ಎಂದು ಐದು ಸಂಹಿತೆಗಳು ಹೇಳಲ್ಪಟ್ಟಿರುವುವು. ಈ ಪ್ರಕಾರವಾಗಿ ನಿನಗೆ ಎಲ್ಲವನ್ನೂ ಬೇರೆಬೇರೆಯಾಗಿ ಹೇಳಿರುವೆನು.

೨೭–೨೮. ಈ ರೀತಿಯಾಗಿ ಶಾಸ್ತ್ರವು ವಿಪುಲವಾಗಿರುವುದು. ನನಗೂ ಕೂಡ ಅದು ತಿಳಿದುದು ಹೇಗೆಂದರೆ ಈ ಪುರಾಣವನ್ನು ಭಗವಂತನಾದ ಸಾಕ್ಷಾದ್ವಿಷ್ಣುವು ಗೋಲೋಕದಲ್ಲಿ ರಾಸಮಂಡಲದಲ್ಲಿ ತನ್ನ ಭಕ್ತನಾದ ಬ್ರಹ್ಮನಿಗೆ ಹೇಳಿದನು.

ಶ್ರೀವಿಷ್ಣುರ್ಭಗವಾನ್ಸಾಕ್ಷಾದ್ಬ್ರಹ್ಮಾಣಂ ಚ ಸ್ವಭಕ್ತಕಂ ।
ಬ್ರಹ್ಮಾ ಧರ್ಮಂ ಚ ಧರ್ಮಿಷ್ಠಂ ಧರ್ಮೋ ನಾರಾಯಣಂ ಮುನಿಂ ॥ ೨೮ ॥

ನಾರಾಯಣೋ ನಾರದಂ ಚ ನಾರದೋ ಮಾಂ ಚ ಭಕ್ತಕಂ ।
ಅಹಂ ತ್ವಾಂ ಚ ಮುನಿಶ್ರೇಷ್ಠ ವರಿಷ್ಠಂ ಕಥಯಾಮಿ ತತ್ ॥ ೨೯ ॥

ಸುದುರ್ಲಭಂ ಪುರಾಣಂ ಚ ಬ್ರಹ್ಮವೈವರ್ತಮೀಪ್ಸಿತಂ ।
ಯದ್ವೃಣೋತ್ಯೇವ ವಿಶ್ವಾಘಂ ಜೀವಿನಾಂ ಪರಮಾತ್ಮಕಂ ॥ ೩೦ ॥

ತದ್ಬ್ರಹ್ಮ ಸಾಕ್ಷಿರೂಪಂ ಚ ಕರ್ಮಣಾಮೇವ ಕರ್ಮಿಣಾಂ ।
ತದ್ಬ್ರಹ್ಮ ವಿವೃತಂ ಯತ್ರ ತದ್ವಿಭೂತಿಮನುತ್ತಮಾಂ ॥ ೩೧ ॥

ತೇನೇದಂ ಬ್ರಹ್ಮವೈವರ್ತಮಿತ್ಯೇವಂ ಚ ವಿದುರ್ಬುಧಾಃ ।
ಪುಣ್ಯಪ್ರದಂ ಪುರಾಣಂ ಚ ಮಂಗಲಂ ಮಂಗಲಪ್ರದಂ ॥ ೩೨ ॥

---

ಬ್ರಹ್ಮನು ಧರ್ಮನಿರತನಾದ ಧರ್ಮನಿಗೆ ಹೇಳಿದನು. ಧರ್ಮನು ನಾರಾಯಣ ಮುನಿಗೆ ಹೇಳಿದನು.

೨೯. ನಾರಾಯಣನು ನಾರದನಿಗೆ ಹೇಳಿದನು. ನಾರದನು ಭಕ್ತನಾದ ನನಗೆ ಹೇಳಿದನು. ಎಲೈ ಮುನಿಶ್ರೇಷ್ಠನೇ! ನಾನು ಶ್ರೇಷ್ಠನಾದ ನಿನಗೆ ಅದನ್ನು ಹೇಳಿರುವೆನು.

೩೦. ಈ ಬ್ರಹ್ಮವೈವರ್ತ ಪುರಾಣವು ಅತಿ ದುರ್ಲಭವಾದುದು. ಯಾವುದು ಪ್ರಪಂಚದಲ್ಲಿ ಪರಮಾತ್ಮವಿಷಯಕವಾದ ಅಭಿಲಾಷೆಯನ್ನುಂಟುಮಾಡುತ್ತದೆಯೋ ಅದು ಬ್ರಹ್ಮ.

೩೧-೩೨. ಅದು ಕರ್ಮಮಾಡುವವರಿಗೂ ಕರ್ಮಗಳಿಗೂ ಸಾಕ್ಷಿಯಾಗಿರುವುದು. ಯಾವ ಪುರಾಣದಲ್ಲಿ ಆ ಬ್ರಹ್ಮದ ಮತ್ತು ಅದರ ಮಹಿಮೆಯು ವಿವರಿಸಲ್ಪಟ್ಟಿರುವುದೋ ಅದು ಬ್ರಹ್ಮವೈವರ್ತವೆಂದು ವಿದ್ವಾಂಸರು ಹೇಳುತ್ತಾರೆ. ಈ ಪುರಾಣವು. ಪುಣ್ಯವನ್ನುಂಟುಮಾಡುತ್ತದೆ ಸ್ವಯಂ ಮಂಗಲ ರೂಪವಾಗಿದ್ದು ಮಂಗಲವನ್ನುಂಟುಮಾಡುತ್ತದೆ.

ಸುಗೋಪ್ಯಂ ಚ ರಹಸ್ಯಂ ಚ ಯತ್ರ ರಮ್ಯಂ ನವಂನವಂ ।
ಹರಿಭಕ್ತಿಪ್ರದಂ ಚೈವ ದುರ್ಲಭಂ ಹರಿದಾಸ್ಯದಂ ॥ ೩೩ ॥

ಸುಖದಂ ಬ್ರಹ್ಮದಂ ಸಾರಂ ಶೋಕಸಂತಾಪನಾಶನಂ ।
ಸರಿತಾಂ ಚ ಯಥಾ ಗಂಗಾ ಸದ್ಯೋ ಮುಕ್ತಿಪ್ರದಾ ಶುಭಾ ॥ ೩೪ ॥

ತೀರ್ಥಾನಾಂ ಪುಷ್ಕರಂ ಶುದ್ಧಂ ಯಥಾ ಕಾಶೀ ಪುರೀಷು ಚ ।
ಸರ್ವೇಷು ಭಾರತಂ ವರ್ಷಂ ಸದ್ಯೋ ಮುಕ್ತಿಪ್ರದಂ ಶುಭಂ ॥ ೩೫ ॥

ಯಥಾ ಸುಮೇರುಃ ಶೈಲೇಷು ಪಾರಿಜಾತಂ ಚ ಪುಷ್ಪತಃ ।
ಪತ್ರೇಷು ತುಲಸೀಪತ್ರಂ ವ್ರತೇಷ್ವೇಕಾದಶೀವ್ರತಂ ॥ ೩೬ ॥

ವೃಕ್ಷೇಷು ಕಲ್ಪವೃಕ್ಷಶ್ಚ ಶ್ರೀಕೃಷ್ಣಶ್ಚ ಸುರೇಷು ಚ ।
ಜ್ಞಾನೀಂದ್ರೇಷು ಮಹಾದೇವೋ ಯೋಗೀಂದ್ರೇಷು ಗಣೇಶ್ವರಃ ॥ ೩೭ ॥

---

೩೩. ಅತಿ ರಹಸ್ಯವೂ ಅತಿ ಗೋಪ್ಯವೂ ಮನೋಹರವೂ ಯಾವಾಗಲೂ ಹೊಸಹೊಸದೂ ಆಗಿರುತ್ತದೆ. ಹರಿಭಕ್ತಿಯನ್ನೂ ಹರಿದಾಸ್ಯವನ್ನೂ ಕೊಡುತ್ತದೆ.

೩೪. ಸುಖವನ್ನೂ ಬ್ರಹ್ಮಜ್ಞಾನವನ್ನೂ ಉಂಟುಮಾಡುತ್ತದೆ. ಸಕಲ ಪುರಾಣಗಳ ಸಾರಭೂತವಾದುದು. ದುಃಖಸಂಕಟಗಳನ್ನು ನಾಶಮಾಡುತ್ತದೆ. ನದಿಗಳಲ್ಲೆಲ್ಲಾ ಗಂಗಾ ನದಿಯು ಹೇಗೆ ಆಕ್ಷಣದಲ್ಲಿಯೇ ಮುಕ್ತಿಯನ್ನು ಕೊಡುತ್ತದೆಯೋ ಅಂತೆಯೇ ಇದು.

೩೫. ತೀರ್ಥಗಳಲ್ಲೆಲ್ಲ ಪುಷ್ಕರತೀರ್ಥವು ಹೇಗೆ ಶುದ್ಧವಾದುದೋ ಪುರಗಳಲ್ಲಿ ಕಾಶೀಪುರಿಯು ಹೇಗೆ ಉತ್ತಮವೋ ಸಕಲ ವರ್ಷಗಳಲ್ಲಿಯೂ ಭಾರತವರ್ಷವು ಹೇಗೆ ಕೂಡಲೆ ಮುಕ್ತಿಯನ್ನು ಕೊಡುತ್ತದೆಯೋ ಹಾಗೆಯೇ ಈ ಪುರಾಣವು.

೩೬. ಪರ್ವತಗಳಲ್ಲಿ ಸುಮೇರುವು ಹೇಗೆ ಶ್ರೇಷ್ಠವೋ ಹೂವುಗಳಲ್ಲಿ ಪಾರಿಜಾತ ಹೇಗೆ ಉತ್ತಮವೋ ಪತ್ರೆಗಳಲ್ಲೆಲ್ಲ ತುಲಸೀಪತ್ರೆಯು ಹೇಗೆ ಶ್ರೇಷ್ಠವೋ ವ್ರತಗಳಲ್ಲೆಲ್ಲ ಏಕಾದಶೀವ್ರತವು ಹೇಗೆ ಉತ್ತಮವೋ ಹಾಗೆ ಈ ಪುರಾಣವು.

೩೭. ಮರಗಳಲ್ಲೆಲ್ಲ ಕಲ್ಪವೃಕ್ಷವು ಹೇಗೋ ದೇವರಲ್ಲಿ ಶ್ರೀಕೃಷ್ಣನು ಹೇಗೊ ಜ್ಞಾನಿಶ್ರೇಷ್ಠರಲ್ಲಿ ಮಹಾದೇವನು ಹೇಗೋ ಯೋಗಿಶ್ರೇಷ್ಠರಲ್ಲಿ ಗಣೇಶ್ವರನು ಹೇಗೋ ಹಾಗೆ ಈ ಪುರಾಣವು ಶ್ರೇಷ್ಠವಾದುದು.

ಸಿದ್ಧೇಂದ್ರೇಷ್ವೇವ ಕಪಿಲಃ ಸೂರ್ಯಸ್ತೇಜಸ್ವಿನಾಂ ಯಥಾ ।
ಸನತ್ಕುಮಾರೋ ಭಗವಾನ್ವೈಷ್ಣವೇಷು ಯಥಾಗ್ರಣೀಃ ॥ ೩೮ ॥

ಭೂಪೇಷು ಚ ಯಥಾ ರಾಮೋ ಲಕ್ಷ್ಮಣಶ್ಚ ಧನುಷ್ಮತಾಂ ।
ದೇವೀಷು ಚ ಯಥಾ ದುರ್ಗಾ ಮಹಾಪುಣ್ಯವತೀ ಸತೀ ॥ ೩೯ ॥

ಪ್ರಾಣಾಧಿಕಾ ಯಥಾ ರಾಧಾ ಕೃಷ್ಣಸ್ಯ ಪ್ರೇಯಸೀಷು ಚ ।
ಈಶ್ವರೀಷು ಯಥಾ ಲಕ್ಷ್ಮೀಃ ಪಂಡಿತೇಷು ಸರಸ್ವತೀ ॥ ೪೦ ॥

ತಥಾ ಸರ್ವಪುರಾಣೇಷು ಬ್ರಹ್ಮವೈವರ್ತಮೇವ ಚ ।
ನಾತೋ ವಿಶಿಷ್ಟಂ ಸುಖದಂ ಮಧುರಂ ಚ ಸುಪುಣ್ಯದಂ ॥ ೪೧ ॥

ಸಂದೇಹಭಂಜನಂ ಚೈವ ಪುರಾಣಂ ಪರಿಕೀರ್ತಿತಂ ।
ಇಹಲೋಕೇ ಚ ಸುಖದಂ ಸುಪ್ರದಂ ಸರ್ವಸಂಪದಾಂ ॥ ೪೨ ॥

ಶುಭದಂ ಪುಣ್ಯದಂ ಚೈವ ವಿಘ್ನನಿಘ್ನಕರಂ ಪರಂ ।
ಹರಿದಾಸ್ಯಪ್ರದಂ ಚೈವ ಪರಲೋಕೇ ಪ್ರಹರ್ಷದಂ ॥ ೪೩ ॥

---

೩೮. ಸಿದ್ಧಶ್ರೇಷ್ಠರಲ್ಲಿ ಕಪಿಲನು ಹೇಗೋ ತೇಜಸ್ವಿಗಳಲ್ಲಿ ಸೂರ್ಯನು ಹೇಗೋ ವಿಷ್ಣುಭಕ್ತರಲ್ಲಿ ಪೂಜ್ಯನಾದ ಸನತ್ಕುಮಾರನು ಹೇಗೆ ಮುಂದಾಳುವೋ ಹಾಗೆ ಈ ಪುರಾಣವು ಸರ್ವಶ್ರೇಷ್ಠವೆನಿಸಿರುವುದು.

೩೯. ರಾಜರುಗಳೆಲ್ಲೆಲ್ಲ ರಾಮನು ಹೇಗೋ ದೇವಿಯರಲ್ಲೆಲ್ಲ ದುರ್ಗಿಯು ಹೇಗೆ ಮಹಾ ಪುಣ್ಯವಂತಳೋ ಹಾಗೆ ಈ ಪುರಾಣವು ಶ್ರೇಷ್ಠವಾದುದು.

೪೦–೪೧. ಶ್ರೀಕೃಷ್ಣನ ಪ್ರೇಯಸಿಯರಲ್ಲಿ ರಾಧೆಯು ಹೇಗೆ ಕೃಷ್ಣನಿಗೆ ತನ್ನ ಪ್ರಾಣಕ್ಕಿಂತಲೂ ಹೆಚ್ಚಿನವಳೋ ಈಶ್ವರಿಯರಲ್ಲಿ ಲಕ್ಷ್ಮಿಯು ಹೇಗೋ ಪಂಡಿತರಲ್ಲಿ ಸರಸ್ವತಿಯು ಹೇಗೋ ಹಾಗೆ ಈ ಪುರಾಣವು ಸಕಲ ಪುರಾಣಗಳಲ್ಲಿಯೂ ಶ್ರೇಷ್ಠವಾದುದು. ಇದಕ್ಕಿಂತಲೂ ಸುಖವನ್ನು ಕೊಡುವ ಮನೋಹರವಾದ ಮಧುರವಾದ ಪುಣ್ಯವನ್ನುಂಟುಮಾಡುವ ಪುರಾಣವು ಬೇರೊಂದಿಲ್ಲ.

೪೨–೪೩. ಈ ಪುರಾಣವು ಸಕಲಸಂದೇಹಗಳನ್ನೂ ನಾಶಮಾಡುತ್ತದೆ. ಮತ್ತು ಇಹಲೋಕದಲ್ಲಿ ಸುಖವನ್ನೂ ಸಕಲ ಸಂಪತ್ತನ್ನೂ ಕೊಡತಕ್ಕುದಾಗಿದೆ. ಶುಭದಾಯಕವೂ, ಪುಣ್ಯದಾಯಕವೂ, ವಿಘ್ನಪರಿಹಾರಕವೂ, ಹರಿದಾಸ್ಯಪ್ರದವೂ, ಪರಲೋಕದಲ್ಲಿ ಹರ್ಷದಾಯಕವೂ ಆಗಿರುತ್ತದೆ.

ಯಜ್ಞಾನಾಮಪಿ ತೀರ್ಥಾನಾಂ ವ್ರತಾನಾಂ ತಪಸಾಂ ತಥಾ ।
ಭುವಃ ಪ್ರದಕ್ಷಿಣಸ್ಯಾಪಿ ಫಲಂ ನಾಸ್ಯ ಸಮಾನಕಂ ॥ ೪೪ ॥

ಚತುರ್ಣಾಮಪಿ ವೇದಾನಾಂ ಪಾಠಾದಪಿ ವರಂ ಫಲಂ ।
ಶೃಣೋತೀದಂ ಪುರಾಣಂ ಚ ಸಂಯತಶ್ಚೇಹ ಪುತ್ರಕ ॥ ೪೫ ॥

ಗುಣವಂತಂ ಚ ವಿದ್ವಾಂಸಂ ವೈಷ್ಣವಂ ಪುತ್ರಮಾಲಭೇತ್ ।
ಶೃಣೋತಿ ದುರ್ಭಗಾ ಚೇತ್ತು ಸೌಭಾಗ್ಯಂ ಸ್ವಾಮಿನೋ ಲಭೇತ್ ॥ ೪೬ ॥

ಮೃತವತ್ಸಾ ಕಾಕವಂಧ್ಯಾ ಮಹಾವಂಧ್ಯಾ ಚ ಪಾಪಿನೀ ।
ಪುರಾಣಶ್ರವಣಾಲ್ಲೇಭೇ ಪುತ್ರಂ ಚ ಚಿರಜೀವಿನಂ ॥ ೪೭ ॥

ಅಪುತ್ರೋ ಲಭತೇ ಪುತ್ರಮಭಾರ್ಯೋ ಲಭತೇ ಪ್ರಿಯಾಂ ।
ಅಸ್ಪಷ್ಟಕೀರ್ತಿಃ ಸುಯಶಾ ಮೂರ್ಖೋ ಭವತಿ ಪಂಡಿತಃ ॥ ೪೮ ॥

---

೪೪. ಯಜ್ಞಗಳನ್ನುಮಾಡುವುದು ತೀರ್ಥಯಾತ್ರೆಮಾಡುವುದು ವ್ರತಗಳನ್ನು ಮಾಡುವುದು ತಪಸ್ಸನ್ನಾಚರಿಸುವುದು ಭೂಪ್ರದಕ್ಷಿಣೆ ಮಾಡುವುದು ಇವುಗಳೆಲ್ಲದರ ಫಲವೂ ಈ ಪುರಾಣಕ್ಕೆ ಸಮನಾದುದಲ್ಲ.

೪೫–೪೬. ನಾಲ್ಕು ವೇದಗಳನ್ನು ಪಠನ ಮಾಡುವುದರಿಂದುಂಟಾಗುವ ಫಲಕ್ಕಿಂತಲೂ ಹೆಚ್ಚು ಫಲವನ್ನುಂಟುಮಾಡತಕ್ಕುದು. ಈ ಲೋಕದಲ್ಲಿ ಯಾವನು ನಟ್ಟಮನಸ್ಸುಳ್ಳವನಾಗಿ ಈ ಪುರಾಣವನ್ನು ಕೇಳುತ್ತಾನೋ ಅವನು ಗುಣವಂತನೂ ವಿದ್ವಾಂಸನೂ ವಿಷ್ಣುಪರನೂ ಆದ ಮಗನನ್ನು ಪಡೆಯುತ್ತಾನೆ. ದೌರ್ಭಾಗ್ಯ ಯುಕ್ತಳಾದವಳು ಈ ಪುರಾಣವನ್ನು ಕೇಳಿದರೆ ಪತಿಸೌಭಾಗ್ಯವನ್ನೂ ಹೊಂದುತ್ತಾಳೆ.

೪೭. ಮಕ್ಕಳು ಸಾಯುತ್ತಿರುವವಳು ಕಾಕವಂಧ್ಯೆ ಮಹಾಬಂಜೆ ಮಹಾ ಪಾಪಿ ಇವರೆಲ್ಲರೂ ಪುರಾಣಶ್ರವಣ ಮಾತ್ರದಿಂದ ಬಹುಕಾಲ ಜೀವಿಸುವ ಪುತ್ರರನ್ನು ಪಡೆದಿರುವರು.

೪೮. ಮಕ್ಕಳಿಲ್ಲದವನು ಮಕ್ಕಳನ್ನೂ ಹೆಂಡತಿಯಿಲ್ಲದವನು ಹೆಂಡತಿಯನ್ನೂ ಅಪ್ರಸಿದ್ಧವಾದ ಕೀರ್ತಿಯುಳ್ಳವನು ಉತ್ತಮ ಕೀರ್ತಿಯನ್ನೂ ಪಡೆಯುತ್ತಾನಲ್ಲದೆ ಮೂರ್ಖನು ಪಂಡಿತನಾಗುತ್ತಾನೆ.

ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।
ಭಯಾನ್ಮುಚ್ಯೇತ ಭೀತಸ್ತು ಮುಚ್ಯೇದಾಪನ್ನ ಆಪದಃ ॥ ೪೯ ॥

ಅರಣ್ಯೇ ಪ್ರಾಂತರೇ ಭೀತೋ ದಾವಾಗ್ನೌ ಮುಚ್ಯತೇ ಧ್ರುವಂ ।
ಅಘಂ ಕುಷ್ಠಂ ಚ ದಾರಿದ್ರ್ಯಂ ರೋಗಂ ಶೋಕಂ ಚ ದಾರುಣಂ ॥ ೫೦ ॥

ಪುರಾಣಶ್ರವಣಾದೇವ ನೈವ ಜಾನಾತ್ಯಪುಣ್ಯವಾನ್ ।
ಶ್ಲೋಕಾರ್ಧಂ ಶ್ಲೋಕಪಾದಂ ವಾ ಯಃ ಶೃಣೋತಿ ಸುಸಂಯುತಃ ॥ ೫೧ ॥

ಗೋಲಕ್ಷದಾನಪುಣ್ಯಂ ಚ ಲಭತೇ ನಾತ್ರ ಸಂಶಯಃ ।
ಚತುಃಖಂಡಂ ಪುರಾಣಂ ಚ ಶುದ್ಧಕಾಲೇ ಜಿತೇಂದ್ರಿಯಃ ॥ ೫೨ ॥

ಸಂಕಲ್ಪತೋ ಯಃ ಶೃಣೋತಿ ಭಕ್ತ್ಯಾ ದತ್ತ್ವಾ ಚ ದಕ್ಷಿಣಾಮ್ ।
ಯದ್ಬಾಲ್ಯೇ ಯಚ್ಚ ಕೌಮಾರೇ ವಾರ್ಧಕೇ ಯಚ್ಚ ಯೌವನೇ ॥ ೫೩ ॥

---

೪೯. ರೋಗಿಯಾದವನು ಗುಣಹೊಂದುತ್ತಾನೆ. ಕಾರಾಗಾರದಲ್ಲಿರುವವನು ಬಿಡುಗಡೆಹೊಂದುತ್ತಾನೆ. ಭಯಗೊಂಡವನು ಭಯದಿಂದ ಪಾರಾಗುತ್ತಾನೆ. ಆಪತ್ತಿಗೆ ಸಿಕ್ಕಿದವನು ಅದರಿಂದ ಬಿಡುಗಡೆಹೊಂದುತ್ತಾನೆ.

೫೦–೫೧. ಕಾಡಿನಲ್ಲಿ ಸಂಚರಿಸುವವನು ಪೊದೆಗಳಲ್ಲಿ ಸಂಚರಿಸುವವನು ಕಾಡುಕಿಚ್ಚಿನಿಂದ ಬೆದರಿದವನು ಇವರೆಲ್ಲರೂ ಬಿಡುಗಡೆಹೊಂದುತ್ತಾರೆ. ಶ್ಲೋಕಾರ್ಧವನ್ನಾಗಲಿ ಶ್ಲೋಕಪಾದವನ್ನಾಗಲಿ ಯಾವನು ಸ್ಥಿರಮನಸ್ಸಿನಿಂದ ಕೇಳುತ್ತಾನೋ ಅವನು ಪುಣ್ಯವಂತನಲ್ಲದಿದ್ದರೂ ಪುರಾಣಶ್ರವಣ ಮಾತ್ರದಿಂದಲೇ ಪಾಪವನ್ನಾಗಲಿ ಕುಷ್ಠರೋಗವನ್ನಾಗಲಿ ದಾರಿದ್ರ್ಯವನ್ನಾಗಲಿ ರೋಗವನ್ನಾಗಲಿ ಭಯಂಕರವಾದ ದುಃಖವನ್ನಾಗಲಿ ನೋಡಲಾರನು.

೫೨. ನಾಲ್ಕು ಖಂಡಗಳುಳ್ಳ ಈ ಪುರಾಣವನ್ನು ಶುದ್ಧಕಾಲದಲ್ಲಿ ಜಿತೇಂದ್ರಿಯನಾಗಿ ಯಾವನು ಹೇಳುತ್ತಾನೋ ಅವನು ಲಕ್ಷ ಗೋದಾನಮಾಡಿದ ಪುಣ್ಯವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೫೩–೫೫. ಯಾವನು ಸಂಕಲ್ಪಪೂರ್ವಕವಾಗಿ ಭಕ್ತಿಯಿಂದ ದಕ್ಷಿಣೆಯನ್ನು ಕೊಟ್ಟು ಈ ಪುರಾಣವನ್ನು ಕೇಳುತ್ತಾನೋ ಅವನು ಒಂದು ಕೋಟಿ ಜನ್ಮಗಳಲ್ಲಿ

ಕೋಟಿಜನ್ಮಾರ್ಜಿತಾತ್ಪಾದಾನ್ಮುಚ್ಯತೇ ನಾತ್ರ ಸಂಶಯಃ ।
ರತ್ನ ನಿರ್ಮಾಣಯಾನೇನ ಧೃತ್ವಾ ಶ್ರೀಕೃಷ್ಣರೂಪಕಮ್ ॥ ೫೪ ॥

ನಿತ್ಯಂ ಗತ್ವಾ ಚ ಗೋಲೋಕಂ ಕೃಷ್ಣದಾಸ್ಯೇ ಲಭೇದ್ಧ್ರುವಂ ।
ಅಸಂಖ್ಯಂ ಬ್ರಹ್ಮಣಾಂ ಪಾತೇ ನ ಭವೇತ್ತಸ್ಯ ಪಾತನಮ್ ॥ ೫೫ ॥

ಸಮೀಪೇ ಪಾರ್ಷದೋ ಭೂತ್ವಾ ಸೇವಾಂ ಚ ಕುರುತೇ ಚಿರಮ್ ।
ಶ್ರುತ್ವಾ ಚ ಬ್ರಹ್ಮಖಂಡಂ ಸುಸ್ನಾತಃ ಸಂಯತಃ ಶುಚಿಃ ॥ ೫೬ ॥

ಪಾಯಸಂ ಪಿಷ್ಟಕಂ ಚೈವ ಫಲಂ ತಾಂಬೂಲಮೇವ ಚ ।
ಭೋಜಯಿತ್ವಾ ವಾಚಕಂಚ ತಸ್ಮೈ ದದ್ಯಾತ್ಸುವರ್ಣಕಮ್ ॥ ೫೭ ॥

ಚಂದನಂ ಶುಕ್ಲಮಾಲ್ಯಂ ಚ ಸೂಕ್ಷ್ಮವಸ್ತ್ರಂ ಮನೋಹರಂ ।
ನಿವೇದ್ಯ ವಾಸುದೇವಂ ಚ ವಾಚಕಾಯ ಪ್ರದೀಯತೇ ॥ ೫೮ ॥

---

ಬಾಲ್ಯಕೌಮಾರ ಯೌವನ ವಾರ್ಧಕಗಳಲ್ಲಿ ಗಳಿಸಿದ ಪಾಪಗಳಿಂದ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ ಮತ್ತು ಶ್ರೀಕೃಷ್ಣನ ರೂಪವನ್ನು ಧರಿಸಿ ರತ್ನಮಯವಾದ ವಿಮಾನದಲ್ಲಿ ಕುಳಿತುಕೊಂಡು ಗೋಲೋಕಕ್ಕೆ ಹೋಗಿ ಅಲ್ಲಿ ಶ್ರೀಕೃಷ್ಣನ ಸೇವೆಯನ್ನು ಯಾವಾಗಲೂ ಮಾಡುತ್ತಿರುತ್ತಾನೆ. ಲೆಕ್ಕವಿಲ್ಲದಷ್ಟು ಬ್ರಹ್ಮರ ಲಯವಾದರೂ ಇವನಿಗೆ ಅಲ್ಲಿಂದ ಪತನವಾಗುವುದಿಲ್ಲ.

೫೬–೫೮. ಶ್ರೀಕೃಷ್ಣನ ಸಮೀಪದಲ್ಲಿ ಅವನ ಸೇವಕನಾಗಿದ್ದು ಯಾವಾಗಲೂ ಅವನ ಸೇವೆಯನ್ನು ಮಾಡುತ್ತಿರುತ್ತಾನೆ. ಸ್ನಾನಮಾಡಿ ಸಮಾಧಾನಮನಸ್ಸಿನಿಂದ ಶುದ್ಧನಾಗಿ ಈ ಪುರಾಣದ ಬ್ರಹ್ಮಖಂಡವನ್ನು ಕೇಳಿ ಪಾಯಸ ಎರಿಯಪ್ಪ ಮುಂತಾದುವುಗಳಿಂದ ವಾಚಕನಿಗೆ ಭೋಜನವನ್ನು ಮಾಡಿಸಿ ಫಲ ತಾಂಬೂಲಗಳನ್ನು ಕೊಟ್ಟು ಆ ವಾಚಕನಿಗೆ ಸುವರ್ಣವನ್ನು ಕೊಡಬೇಕು ಮತ್ತು ಗಂಧವನ್ನೂ ಬಿಳಿಯ ಹೂಮಾಲೆಯನ್ನೂ ಮನೋಹರವಾದ ಸೂಕ್ಷ್ಮವಸ್ತ್ರವನ್ನೂ ಶ್ರೀ ವಾಸುದೇವನಿಗೆ ನಿವೇದನಮಾಡಿ ವಾಚಕನಿಗೆ ಕೊಡಬೇಕು.

ಶ್ರುತ್ವಾ ಚ ಪ್ರಕೃತೇಃ ಖಂಡಂ ಸುಶ್ರಾವ್ಯಂ ಚ ಸುಧೋಪಮಂ ।
ಭೋಜಯಿತ್ವಾ ಚ ದಧ್ಯನ್ನಂ ತಸ್ಮೈ ದದ್ಯಾಚ್ಚ ಕಾಂಚನಂ ॥ ೫೯ ॥

ಸವತ್ಸಾಂ ಸುರಭಿಂ ರಮ್ಯಾಂ ದದ್ಯಾದ್ವೈ ಭಕ್ತಿಪೂರ್ವಕಮ್ ।
ಶ್ರುತ್ವಾ ಗಣಪತೇಃ ಖಂಡಂ ವಿಘ್ನನಾಶಾಯ ಸಂಯತಃ ॥ ೬೦ ॥

ಸ್ವರ್ಣಯಜ್ಞೋಪವೀತಂ ಚ ಶ್ವೇತಾಶ್ವಚ್ಛತ್ರಮಾಲ್ಯಕಂ ।
ಪ್ರದೀಯತೇ ವಾಚಕಾಯ ಸ್ವಸ್ತಿಕಂ ತಿಲಲಡ್ಡುಕಂ ॥ ೬೧ ॥

ಪರಿಪಕ್ವಫಲಾನ್ಯೇವ ಕಾಲದೇಶೋದ್ಭವಾನಿ ಚ ।
ಶ್ರೀಕೃಷ್ಣಜನ್ಮಖಂಡಂ ಚ ಶ್ರುತಾ ಭಕ್ತಶ್ಚ ಭಕ್ತಿತಃ ॥ ೬೨ ॥

ವಾಚಕಾಯ ಪ್ರದದ್ಯಾಚ್ಚ ಪರಂ ರತ್ನಾಂಗುಲೀಯಕಂ ।
ಸೂಕ್ಷ್ಮವಸ್ತ್ರಂ ಚ ಮಾಲ್ಯಂ ಚ ಸ್ವರ್ಣಕುಂಡಲಮುತ್ತಮಮ್ ॥ ೬೩ ॥

ಮಾಲ್ಯಂ ಚ ವರದೋಲಾಂ ಚ ಸುಪಕ್ವಂ ಕ್ಷೀರಮೇವ ಚ ।
ಸರ್ವಸ್ವಂ ದಕ್ಷಿಣಾಂ ದದ್ಯಾಸ್ತ ವನಂ ಕುರುತೇ ಧ್ರುವಂ ॥ ೬೪ ॥

---

೫೯. ಅಮೃತಕ್ಕೆ ಸಮಾನವಾಗಿ ಕೇಳಲು ಇಂಪಾಗಿರುವ ಪ್ರಕೃತಿಖಂಡವನ್ನು ಕೇಳಿ ವಾಚಕನಿಗೆ ಮೊಸರನ್ನವನ್ನು ಭೋಜನಮಾಡಿಸಿ ಅವನಿಗೆ ಸುವರ್ಣವನ್ನು ಕೊಡಬೇಕು.

೬೦–೬೧. ಗಣಪತಿಖಂಡವನ್ನು ವಿಘ್ನನಾಶಕ್ಕಾಗಿ ಕೇಳಿ ಜಿತೇಂದ್ರಿಯನಾಗಿ ಕರುವಿನಿಂದ ಕೂಡಿದ ಗೋವನ್ನು ಭಕ್ತಿಪೂರ್ವಕವಾಗಿ ವಾಚಕನಿಗೆ ಕೊಡಬೇಕು ಮತ್ತು ಚಿನ್ನದ ಜನಿವಾರವನ್ನೂ ಬಿಳಿಯ ಕುದುರೆಯನ್ನೂ ಬಿಳಿಯ ಕೊಡೆಯನ್ನೂ ಬಿಳಿಯ ಹೂಮಾಲೆಯನ್ನೂ ಹೋಳಿಗೆಯನ್ನೂ ಎಳ್ಳುಂಡೆಯನ್ನೂ ಭಕ್ತಿಪೂರ್ವಕವಾಗಿ ಕೊಡಬೇಕು.

೬೨–೬೪. ಭಕ್ತನಾದವನು ಭಕ್ತಿಯಿಂದ ಶ್ರೀಕೃಷ್ಣಜನ್ಮಖಂಡವನ್ನು ಕೇಳಿದವನಾಗಿ ಆ ಕಾಲದಲ್ಲಿ ಆ ದೇಶದಲ್ಲಿ ದೊರೆಯುವ ಮಾಗಿದ ಹಣ್ಣುಗಳನ್ನೂ ಉತ್ತಮವಾದ ರತ್ನದುಂಗುರವನ್ನೂ ಸೂಕ್ಷ್ಮವಾದ ವಸ್ತ್ರಗಳನ್ನೂ ಹೂಮಾಲಿಕೆಗಳನ್ನೂ

ಶತಕಂ ಬ್ರಾಹ್ಮಣಾನಾಂಚ ಭೋಜಯೇತ್ಪರಮಾದರಾತ್ ।
ಬ್ರಾಹ್ಮಣಂ ವೈಷ್ಣವಂ ಶಾಸ್ತ್ರನಿಷ್ಣಾತಂ ಪಂಡಿತಂ ವರಮ್ || ೬೫ ||

ಕುರುತೇ ವಾಚಕಂ ಶುದ್ಧ ಮನ್ಯಥಾ ನಿಷ್ಫಲಂ ಭವೇತ್ ।
ಶ್ರೀಕೃಷ್ಣವಿಮುಖಾದ್ದುಷ್ಟಾನ್ನೋಪದೇಷ್ಟುಶ್ಚ ಬ್ರಾಹ್ಮಣಾತ್ || ೬೬ ||

ಶ್ರೀಕೃಷ್ಣಭಕ್ತಿಯುಕ್ತಂ ಚ ಪುರಾಣಂ ನ ಶೃಣೋತಿ ಯಃ ।
ಭಕ್ತಿಂ ಪುಣ್ಯಂ ನ ಲಭತೇ ಹಂತಿ ಪುಣ್ಯಂ ಪುರಾಕೃತಂ || ೬೭ ||

ಶ್ರೀಕೃಷ್ಣಭಕ್ತಿಯುಕ್ತಾಶ್ಚ ಪುರಾಣಂ ಯಃ ಶೃಣೋತಿ ಚ ।
ಭಕ್ತಿಂ ಪುಣ್ಯಂ ಚ ಲಭತೇ ಯಾತ್ಯಂತೇ ಶ್ರೀಹರೇಃ ಪದಂ || ೬೮ ||

ಏತತ್ತೇ ಕಥಿತಂ ಸರ್ವಂ ಯಚ್ಛ್ರುತಂ ಗುರುವಕ್ತ್ರತಃ ।
ಬಿದಾಯಂ ದೇಹಿ ವಿಪ್ರೇಂದ್ರ ಯಾಮಿ ನಾರಾಯಣಾಶ್ರಮಮ್ || ೬೯ ||

---

ಉತ್ತಮವಾದ ಚಿನ್ನದ ಕುಂಡಲಗಳನ್ನೂ ಉತ್ತಮವಾದ ಉಯ್ಯಾಲೆಯನ್ನೂ ಕಾದ ಹಾಲನ್ನೂ ವಾಚಕನಿಗೆ ಕೊಡಬೇಕು. ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟು ಸ್ತೋತ್ರಮಾಡಬೇಕು.

೬೫-೬೬. ಅತ್ಯಂತ ಭಕ್ತಿಯಿಂದ ನೂರು ಮಂದಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ವಿಷ್ಣುಭಕ್ತನೂ ಶಾಸ್ತ್ರನಿಪುಣನೂ ಜ್ಞಾನಿಯೂ ಶ್ರೇಷ್ಠನೂ ಆದ ಬ್ರಾಹ್ಮಣನನ್ನು ವಾಚಕನನ್ನಾಗಿ ಮಾಡಬೇಕು. ಹಾಗಲ್ಲದಿದ್ದರೆ ನಿಷ್ಫಲವಾಗುವುದು. ಶ್ರೀಕೃಷ್ಣಭಕ್ತಿಯಿಲ್ಲದ ದುಷ್ಟನಾದ ಬ್ರಾಹ್ಮಣನು ಉಪದೇಶ ಮಾಡಲನರ್ಹನು.

೬೭. ಶ್ರೀಕೃಷ್ಣಭಕ್ತಿಯಿಂದ ಕೂಡಿದ ಪುರಾಣವನ್ನು ಯಾವನು ಕೇಳುವುದಿಲ್ಲವೋ ಅವನು ಭಕ್ತಿಯನ್ನಾಗಲೀ ಪುಣ್ಯವನ್ನಾಗಲೀ ಹೊಂದುವುದಿಲ್ಲ ಮತ್ತು ಹಿಂದಿನ ಜನ್ಮಗಳಲ್ಲಿ ಮಾಡಿದ ಪುಣ್ಯವನ್ನು ಕಳೆದುಕೊಳ್ಳುತ್ತಾನೆ.

೬೮. ಶ್ರೀಕೃಷ್ಣನಲ್ಲಿ ಭಕ್ತಿಯುಕ್ತನಾಗಿ ಯಾವನು ಪುರಾಣವನ್ನು ಕೇಳುತ್ತಾನೋ ಅವನು ಭಕ್ತಿಯನ್ನೂ ಪುಣ್ಯವನ್ನೂ ಹೊಂದುತ್ತಾನಲ್ಲದೆ ಈ ಶರೀರವನ್ನು ಬಿಟ್ಟನಂತರ ಶ್ರೀಹರಿಯ ಪಾದವನ್ನು ಹೊಂದುತ್ತಾನೆ.

೬೯. ಈ ಪ್ರಕಾರವಾಗಿ ನಾನು ಗುರುಮುಖದಿಂದ ಕೇಳಿದ ಸಕಲ ವಿಷಯ

**ದೃಷ್ಟ್ವಾ ವಿಪ್ರಸಮೂಹಂ ಚ ನಮಸ್ಕರ್ತುಂ ಸಮಾಗತಃ ।**
**ಕಥಿತಂ ಬ್ರಹ್ಮವೈವರ್ತಂ ಭವತಾಮಾಜ್ಞಯಾ ಪರಂ ॥ ೭೦ ॥**

**ನಮೋಽಸ್ತು ಬ್ರಾಹ್ಮಣೇಭ್ಯಶ್ಚ ಕೃಷ್ಣಾಯ ಪರಮಾತ್ಮನೇ ।**
**ಶಿವಾಯ ಬ್ರಹ್ಮಣೇ ನಿತ್ಯಂ ಗಣೇಶಾಯ ನಮೋನಮಃ ॥ ೭೧ ॥**

**ಕಾಯೇನ ಮನಸಾ ವಾಚಾ ಪರಂ ಭಕ್ತ್ಯಾ ದಿವಾನಿಶಂ ।**
**ಭಜ ಸತ್ಯಂ ಪರಂ ಬ್ರಹ್ಮ ರಾಧೇಶಂ ತ್ರಿಗುಣಾತ್ಪರಮ್ ॥ ೭೨ ॥**

**ನಮೋ ದೇವ್ಯೈ ಸರಸ್ವತ್ಯೈ ಪುರಾಣಗುರವೇ ನಮಃ ।**
**ಸರ್ವವಿಘ್ನವಿನಾಶಿನ್ಯೈ ದುರ್ಗಾದೇವ್ಯೈ ನಮೋನಮಃ ॥ ೭೩ ॥**

---

ಗಳನ್ನೂ ನಿನಗೆ ತಿಳಿಸಿರುವೆನ. ಎಲೈ ಬ್ರಾಹ್ಮಣನೇ! ನನಗೆ ಅನುಜ್ಞೆಯನ್ನ ಕೊಡು. ನಾನು ನಾರಾಯಣಾಶ್ರಮಕ್ಕೆ ಹೋಗುವೆನು.

೭೦. ಇಂದು ಬ್ರಾಹ್ಮಣ ಸಮೂಹವನ್ನು ನೋಡಿ ನಮಸ್ಕಾರವಮಾಡಿ ಹೋಗ ಬೇಕೆಂದು ಬಂದೆನು. ನಿಮ್ಮ ಅಪ್ಪಣೆಯ ಪ್ರಕಾರ ಉತ್ತಮವಾದ ಬ್ರಹ್ಮವೈವರ್ತ ಪುರಾಣವನ್ನು ಹೇಳಿದೆನು.

೭೧. ಬ್ರಾಹ್ಮಣರಿಗೆ ನಮಸ್ಕಾರವು. ಪರಮಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರವು. ಶಿವನಿಗೆ ನಮಸ್ಕಾರವು. ಬ್ರಹ್ಮನಿಗೆ ನಮಸ್ಕಾರವು. ಗಣೇಶನಿಗೆ ನಮಸ್ಕಾರವು.

೭೨. ಶರೀರದಿಂದಲೂ ಮನಸ್ಸಿನಿಂದಲೂ ಮಾತಿನಿಂದಲೂ ಅತ್ಯಂತ ಭಕ್ತಿ ಯಿಂದ ಹಗಲುರಾತ್ರಿಯೂ ಸತ್ಯಸ್ವರೂಪನೂ ಪರಬ್ರಹ್ಮನೂ ಮೂರು ಗುಣಗಳ ಸ್ವರೂಪನೂ ಆದ ರಾಧೇಶನನ್ನು ಭಜಿಸುವವನಾಗು.

೭೩. ಸರಸ್ವತೀ ದೇವಿಗೆ ನಮಸ್ಕಾರವು. ಪುರಾಣ ಗುರುವಾದ ವ್ಯಾಸ ಮುನಿಗೆ ನಮಸ್ಕಾರವು. ಸಕಲವಿಘ್ನಗಳನ್ನೂ ನಾಶಮಾಡುವವಳಾದ ದುರ್ಗಾ ದೇವಿಗೆ ನಮಸ್ಕಾರವು.

ಯುಷ್ಮಾಕಂ ಪಾದಪದ್ಮಾನಿ ದೃಷ್ಟ್ವಾ ಪುಣ್ಯಾನಿ ಶೌನಕ ।
ಅದ್ಯ ಸಿದ್ಧಾಶ್ರಮಂ ಯಾಮಿ ಯತ್ರ ದೇವೋ ಗಣೇಶ್ವರಃ ॥ ೭೪ ॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣ ಜನ್ಮಖಂಡ
ಉತ್ತರಾರ್ಧೇ ನಾರಾಯಣ ನಾರದಸಂವಾದೇ ಸೂತಶೌನಕ
ಸಂವಾದೇ ತ್ರಯಸ್ತ್ರಿಂಶದಧಿಕಶತತಮೋಧ್ಯಾಯಃ
ಇತಿ ಸಂಪೂರ್ಣಂ

---

೭೪. ಎಲೈ ಶೌನಕಮುನಿಯೇ! ಪುಣ್ಯಕರವಾದ ನಿಮ್ಮೆಲ್ಲರ ಪಾದಕಮಲಗಳನ್ನೂ ನೋಡಿ ಇಂದು ನಾನು ಎಲ್ಲಿ ಗಣೇಶ್ವರನೇ ದೇವತೆಯಾಗಿರುವನೋ ಅಂಥಾ ಸಿದ್ಧಾಶ್ರಮವನ್ನು ಕುರಿತು ಪ್ರಯಾಣಮಾಡುತ್ತೇನೆ.

ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದ ಉತ್ತರಾರ್ಧದಲ್ಲಿ
ನಾರಾಯಣನಾರದ ಸಂವಾದದಲ್ಲಿ ಸೂತಶೌನಕ ಸಂವಾದವೆಂಬ
ನೂರಮೂವತ್ತಮೂರನೆಯ ಅಧ್ಯಾಯವು ಸಮಾಪ್ತವಾದುದು



---

